ಪ್ರತಿಭಾವಂತ ಸಂಸದೀಯ ಪಟು ಪುಸ್ತಕ ಮಾಲಿಕೆ

# ಕರ್ನಾಟಕ ರೈತ ಚಳವಳಿ-ಸತ್ಯಾಗ್ರಹಗಳು

(ಸಹಸ್ರಮಾನ ಸಂಪುಟ -4)

## ರೈತ ಚಳವಳಿಯ ಆಧುನಿಕ ಮಜಲುಗಳು ಮತ್ತು ರೈತರ ಸಮಸ್ಯೆಗಳು



ಡಾ. ಎಂ.ಜಿ. ನಾಗರಾಜ್

ಪ್ರತಿಭಾವಂತ ಸಂಸದೀಯ ಪಟು ಪುಸ್ತಕ ಮಾಲಿಕೆ

# ಕರ್ನಾಟಕ ರೈತ ಚಳವಳಿ - ಸತ್ಯಾಗ್ರಹಗಳು

## ಸಹಸ್ರಮಾನ ಸಂಪುಟ – ೪

## ರೈತ ಚಳವಳಿಯ ಆಧುನಿಕ ಮಜಲುಗಳು ಮತ್ತು ರೈತರ ಸಮಸ್ಯೆಗಳು

ಡಾ: ಎಂ.ಜಿ. ನಾಗರಾಜ್

ಪ್ರಕಟಣೆ
ಕರ್ನಾಟಕ ವಿಧಾನ ಮಂಡಲದ ಗ್ರಂಥಾಲಯ ಸಮಿತಿ,
ವಿಧಾನಸೌಧ, ಬೆಂಗಳೂರು – ೫೬೦ ೦೦೧

**KARNATAKA RAITHA CHALUVALI-SATYAGRAHAGALU, Volume-IV** in the background of MRA, Legislative Assembly and Council proceedings and pertained references till about 2010 AD first quarter dealing with historical Evolution of Raitha movement and their effects on the society and the solutions - written by **Dr: M.G. Nagaraj** M.Sc., M.Ed., M.A., D.Litt., principal (Rtd). Rajajinagar, Bangalore-10. Ph: 080-23106004

**Published by :**
Library Committee,
Karnataka Vidhana Mandala,
Vidhana Soudha, Bangalore-560 001.

ಕರ್ನಾಟಕ ರೈತ ಚಳವಳಿ–ಸತ್ಯಾಗ್ರಹಗಳು
ಸಂಪುಟ–4
ಲೇಖಕರು: ಡಾ: ಎಂ.ಜಿ. ನಾಗರಾಜ್



First Impression: 2010
Pages : 434 + lv
Price : Rs. 25/-
Copies : 2000

ಮೊದಲ ಮುದ್ರಣ : 2010
ಪ್ರತಿಗಳು : 2000
ಬೆಲೆ : 25/–
ಪುಟಗಳು : 434 + lv

ಮುಖಪುಟ ವಿನ್ಯಾಸ: ಕೃಷ್ಣ ರಾಯಚೂರ್
ಮುದ್ರಣ: ಸರ್ಕಾರಿ ಮುದ್ರಣಾಲಯ, ಬೆಂಗಳೂರು

ಪ್ರಕಟಣೆ
ಗ್ರಂಥಾಲಯ ಸಮಿತಿ, ಕರ್ನಾಟಕ ವಿಧಾನ ಮಂಡಲ
ಬೆಂಗಳೂರು – ೫೬೦ ೦೦೧

# ವಿಧಾನ ಮಂಡಲ ಗ್ರಂಥಾಲಯ ಸಮಿತಿ
# 2009–2010

ಅಧ್ಯಕ್ಷರು

**ಶ್ರೀ ವೀರಣ್ಣ ಮತ್ತಿಕಟ್ಟಿ**

ಸಭಾಪತಿಗಳು, ಕರ್ನಾಟಕ ವಿಧಾನ ಪರಿಷತ್ತು

ಸದಸ್ಯರು

**ಶ್ರೀ ಕೆ.ಜಿ. ಬೋಪಯ್ಯ**

ಸಭಾಧ್ಯಕ್ಷರು, ಕರ್ನಾಟಕ ವಿಧಾನ ಸಭೆ

**ಶ್ರೀ ಎಂ. ನಾರಾಯಣಸ್ವಾಮಿ**

ವಿಧಾನಸಭಾ ಸದಸ್ಯರು

**ಶ್ರೀ ಹೆಚ್.ಎಸ್. ಪ್ರಕಾಶ್**

ವಿಧಾನಸಭಾ ಸದಸ್ಯರು

**ಶ್ರೀ ಜಿ. ಸೋಮಶೇಖರ ರೆಡ್ಡಿ**

ವಿಧಾನಸಭಾ ಸದಸ್ಯರು

**ಶ್ರೀ ಸುರೇಶ್‌ಗೌಡ**

ವಿಧಾನಸಭಾ ಸದಸ್ಯರು

**ಶ್ರೀ ಸಾ.ರಾ. ಮಹೇಶ್**

ವಿಧಾನಸಭಾ ಸದಸ್ಯರು

**ಶ್ರೀ ಮುಖ್ಯಮಂತ್ರಿ ಚಂದ್ರು**

ವಿಧಾನ ಪರಿಷತ್ ಸದಸ್ಯರು

**ಡಾ॥ ಶ್ರೀನಾಥ್**

ವಿಧಾನ ಪರಿಷತ್ ಸದಸ್ಯರು

**ಪ್ರೊ॥ ಪಿ.ವಿ. ಕೃಷ್ಣಭಟ್ಟ**

ವಿಧಾನ ಪರಿಷತ್ ಸದಸ್ಯರು

# ಪ್ರತಿಭಾವಂತ ಸಂಸದೀಯ ಪಟು ಪುಸ್ತಕ ಮಾಲಿಕೆ

## ಅಧಿಕಾರಿ – ಸಂಪಾದಕ ವರ್ಗ

### ಕರ್ನಾಟಕ ವಿಧಾನ ಮಂಡಲ

ಹೆಚ್.ಎಂ. ಭಾರತೇಶ್ ಪ್ರಧಾನ ಕಾರ್ಯದರ್ಶಿ

### ಕರ್ನಾಟಕ ವಿಧಾನಸಭೆ ಸಚಿವಾಲಯ

| | |
|---|---|
| ಎಸ್.ಬಿ. ಪಾಟೀಲ್ | ಕಾರ್ಯದರ್ಶಿ |
| ಟಿ.ಎನ್. ಧ್ರುವಕುಮಾರ್ | ಅಪರ ಕಾರ್ಯದರ್ಶಿ |
| ಎಂ. ಮಂಜುನಾಥ | ಜಂಟಿ ಕಾರ್ಯದರ್ಶಿ |
| ಎಂ. ಗುರುರಾಜ | ಉಪ ಕಾರ್ಯದರ್ಶಿ |
| ಅನಸೂಯ ಎನ್.ದೇವಗಿರಿ | ಮುಖ್ಯ ಗ್ರಂಥಪಾಲಕಿ (ಪ್ರ) |
| ಎಂ. ಮೋಹನ್ | ಶಾಖಾಧಿಕಾರಿ |

### ಕರ್ನಾಟಕ ವಿಧಾನ ಪರಿಷತ್ತಿನ ಸಚಿವಾಲಯ

| | |
|---|---|
| ವಿ. ಶ್ರೀಶ್ | ಕಾರ್ಯದರ್ಶಿ |
| ಟಿ. ಕೃಷ್ಣೇಗೌಡ | ಅಪರ ಕಾರ್ಯದರ್ಶಿ |

### ಸಂಪಾದಕರು

ಡಾ. ಮಲ್ಲಿಕಾರ್ಜುನ ಎಂ.ಸಿ.

# ಮುನ್ನುಡಿ

12 ಏಪ್ರಿಲ್ 2010

ಸುವರ್ಣ ಮಹೋತ್ಸವದ ಆಚರಣೆಯ ಅಂಗವಾಗಿ ಈ ದೇಶಕ್ಕಾಗಿ ದುಡಿದ, ಅಗ್ರಮಾನ್ಯ ಸಂಸದೀಯ ಪಟುಗಳಾಗಿ ಕೊಡುಗೆಯನ್ನು ನೀಡಿದ ಮಹನೀಯರನ್ನು ಸ್ಮರಿಸುವುದು ನಮ್ಮ ಆದ್ಯ ಕರ್ತವ್ಯವಾಗಿದೆ. ಈಗಾಗಲೇ ಲೋಕಸಭಾ ಕಾರ್ಯಾಲಯದವರು ಇಂತಹ ಪ್ರತಿಭಾವಂತ ಸಂಸದೀಯ ಪಟುಗಳ ಬಗ್ಗೆ ಅನೇಕ ಹೊತ್ತಿಗೆಗಳನ್ನು ಹಿಂದಿ ಹಾಗೂ ಆಂಗ್ಲ ಭಾಷೆಯಲ್ಲಿ ಹೊರತಂದಿರುತ್ತಾರೆ. ಅವುಗಳಲ್ಲಿ ಡಾ॥ ರಾಮಮನೋಹರ ಲೋಹಿಯಾ, ಡಾ॥ ಬಿ.ಆರ್. ಅಂಬೇಡ್ಕರ್, ಡಾ॥ ಶಾಂಪ್ರಸಾದ್ ಮುಖರ್ಜಿ, ಡಾ॥ ರಾಜೇಂದ್ರ ಪ್ರಸಾದ್ ಮೊದಲಾದ ಗಣ್ಯರ ಪುಸ್ತಕಗಳನ್ನು ನಾವು ಕನ್ನಡದಲ್ಲಿ ಭಾಷಾಂತರಿಸಿ ಹೊರತಂದಿರುವ ಸಂತೋಷಕರ ವಿಷಯವನ್ನು ಉಲ್ಲೇಖಿಸಬಯಸುತ್ತೇವೆ.

ರಾಜ್ಯದ ಸಂಸದೀಯ ಪಟುಗಳಾದ ಅನೇಕ ಮಹನೀಯರನ್ನು ಕುರಿತು ಹೊತ್ತಿಗೆಗಳನ್ನು ಸಿದ್ಧಪಡಿಸಿ ಪ್ರಕಟಿಸುವ ಯೋಜನೆಯನ್ನು ಕರ್ನಾಟಕ ವಿಧಾನ ಮಂಡಲವು ಹಮ್ಮಿಕೊಂಡಿದ್ದು, ವಿಧಾನ ಮಂಡಲದ ಗ್ರಂಥಾಲಯ ಸಮಿತಿಯು ಈಗಾಗಲೇ ಪ್ರಕಟಿಸುತ್ತಿದೆ. ಈ ಉಪ ಸಮಿತಿಯು ಕಾರ್ಯಪ್ರವೃತ್ತವಾಗಿ ರಾಜ್ಯದ ಲೇಖಕರ, ವಿದ್ವಾಂಸರ ಸಹಕಾರದಿಂದ ಈ ಯೋಜನೆಯನ್ನು ಕಾರ್ಯಗತಗೊಳಿಸುತ್ತಿದೆ. ನಮ್ಮ ನಾಡಿನ ಪ್ರಗತಿಪರ ಚಿಂತಕರು, ರಾಜಕೀಯ ಮುತ್ಸದ್ದಿಗಳ ಆಶಯಗಳನ್ನು ದಾಖಲಿಸಿ ಈ ಮೂಲಕ ಅವರ ಜೀವನ ಚಿತ್ರಣವನ್ನು ಪುಸ್ತಕ ರೂಪದಲ್ಲಿ ತರುತ್ತಿದೆ.

ಪ್ರತಿಭಾವಂತ ಸಂಸದೀಯ ಪಟುಗಳ ಮಾಲಿಕೆಯಲ್ಲಿ ಈಗಾಗಲೇ ಶ್ರೀ ಕೆಂಗಲ್ ಹನುಮಂತಯ್ಯ, ಶ್ರೀ ಶಾಂತವೇರಿ ಗೋಪಾಲಗೌಡ, ಶ್ರೀ ಎಸ್. ನಿಜಲಿಂಗಪ್ಪ, ಶ್ರೀ ಕೆ.ಸಿ. ರೆಡ್ಡಿ, ಶ್ರೀ ಡಿ. ದೇವರಾಜ ಅರಸು, ಶ್ರೀ ಜೆ.ಹೆಚ್. ಪಟೇಲ್, ಶ್ರೀ ಟಿ.ಆರ್. ಶಾಮಣ್ಣ, ಶ್ರೀ ಎಸ್.ಡಿ. ಗಾಂವಕರ್, ಶ್ರೀಮತಿ ಬಿ.ಎಲ್. ಸುಬ್ಬಮ್ಮ, ಡಾ॥ ಲಂಕಾ ಸುಂದರಂ, ಸರದಾರ ಶರಣಗೌಡ ಇನಾಂದಾರ್, ಕೆ.ಹೆಚ್. ರಂಗನಾಥ್ ಮತ್ತಿತರ ಹಲವು ಗಣ್ಯರ ಬಗೆಗಿನ ಪುಸ್ತಕಗಳನ್ನು ಹೊರತರಲಾಗಿದೆ.

**ಡಾ. ಎಂ.ಜಿ. ನಾಗರಾಜ್** ಅವರು ರಚಿಸಿರುವ ರಾಜ್ಯದ ಹಿರಿಯ ಸಂಸದೀಯ ಪಟು ಕೃತಿ ಮಾಲಿಕೆಯಲ್ಲಿ ಶ್ರೀ **ಕರ್ನಾಟಕ ರೈತ ಚಳವಳಿ–ಸತ್ಯಾಗ್ರಹಗಳು ಸಹಸ್ರಮಾನ ಸಂಪುಟ–೪** ಬಗೆಗಿನ ಈ ಪುಸ್ತಕವನ್ನು ತಮ್ಮ ಮುಂದಿಡಲು ಹೆಮ್ಮೆಯೆನಿಸುತ್ತದೆ. ಇಲ್ಲಿ ದಾಖಲಿತ ಸದನದ ಭಾಷಣಗಳು ಸಾಮಾಜಿಕ ಸಮಸ್ಯೆಗಳ ಮೇಲೆ ಬೆಳಕು ಚೆಲ್ಲುತ್ತವೆ. ಈ ನಾಡಿನ ರಾಜಕೀಯ, ಸಾಮಾಜಿಕ, ಸಾಂಸ್ಕೃತಿಕ ಆಶಯಗಳನ್ನು ಬಿಂಬಿಸುತ್ತವೆ.

ಈ ಪುಸ್ತಕವನ್ನು ರಚಿಸಿದ ಲೇಖಕರಿಗೆ ಹಾಗೂ ಪುಸ್ತಕವನ್ನು ಅಂದವಾಗಿ ಮುದ್ರಿಸಿಕೊಟ್ಟ ಸರ್ಕಾರಿ ಮುದ್ರಣಾಲಯದ ನಿರ್ದೇಶಕರಿಗೆ ಹಾಗೂ ಉಪ ಸಮಿತಿಯ ಅಧ್ಯಕ್ಷರಿಗೆ ಹಾಗೂ ಸದಸ್ಯರಿಗೆ ಧನ್ಯವಾದಗಳನ್ನು ಅರ್ಪಿಸುತ್ತೇವೆ.

ರಾಜ್ಯದ ಪ್ರತಿಭಾವಂತ ಸಂಸದೀಯ ಪಟುಗಳ ಬಗೆಗಿನ ಈ ಪುಸ್ತಕವು ಮಾನ್ಯ ಸದಸ್ಯರುಗಳಿಗೆ, ಸಂಶೋಧಕರಿಗೆ ಹಾಗೂ ಸಾಮಾನ್ಯ ಓದುಗರಿಗೆ ಸಂಸದೀಯ ವಿಷಯಗಳಲ್ಲಿ ಹೆಚ್ಚಿನ ಅನುಭವ ನೀಡುತ್ತದೆ ಮತ್ತು ಉಪಯುಕ್ತವಾಗುತ್ತದೆಂದು ಭಾವಿಸುತ್ತೇವೆ.

**ವೀರಣ್ಣ ಮತ್ತಿಕಟ್ಟಿ**
ಸಭಾಪತಿ
ಕರ್ನಾಟಕ ವಿಧಾನ ಪರಿಷತ್ತು

**ಕೆ.ಜಿ. ಬೋಪಯ್ಯ**
ಸಭಾಧ್ಯಕ್ಷರು
ಕರ್ನಾಟಕ ವಿಧಾನ ಸಭೆ

# ಲೇಖಕರ ನುಡಿ

ನಮ್ಮ ನಾಡಿನ ಪರಂಪರೆ ಬೇಸಾಯದ್ದು. ಅಂತೇ ಮಣ್ಣಿನೊಡನೆಯ ಬಾಳುವೆ ಮಾಡಿಬಂದವರು ರೈತರು. ಆ ಕಾಯಕದಲ್ಲಿ ಮುದಕಂಡವರು ನಮ್ಮ ರೈತರು. ಈ ಕಾರಣವೆ ಮಣ್ಣಿನ ವಾಸನೆ ಅವರ ಕಾಯಕದ ಸಹಜ ಸೌರಭ. ಮಣ್ಣಿನ ಹಾಡು ಅವರ ಸಹಜ ಜನಪದ ಧ್ವನಿ.

ಹೀಗೆ ಕೃಷಿಯನ್ನು ತನ್ನ ಬದುಕಿನ ಸಂಗಾತಿಯಾಗಿ ಕಂಡವರು ರೈತರು. ಹೊಟ್ಟೆಯ ತುತ್ತಿಗಾಗಿ, ಸೂರಿನ ನೆಳಲಿಗಾಗಿ, ನೆಮ್ಮದಿಯ ನಿದ್ದೆಗಾಗಿ ಅವರು ಅದನ್ನೇ ನೆಚ್ಚಿಕೊಂಡು ಸಹಸ್ರಾರು ವರ್ಷಗಳಿಂದ ಸಾಗಿ ಬಂದಿದ್ದಾರೆ. ಆ ಬಾಳಿನಲ್ಲಿ ಹೆರವರ ಹೊಟ್ಟೆ ತುಂಬಿಸಿದ್ದಾರೆ. ನಾಡಿಗೆ ತುತ್ತು ಕೊಡಲು ದುಡಿದಿದ್ದಾರೆ. ಹೀಗೆ ಸಾಗಿ ಬರುವಲ್ಲಿ ತನ್ನ ಬದುಕಿನ ಕಷ್ಟನಿಷ್ಠುರಗಳನ್ನು ಸಹಿಸಿಕೊಂಡು ತ್ಯಾಗದ ನಿಸ್ಸೀಮ ಜೀವಿಯಾಗಿಯೂ ಕಾಣಿಸಿಕೊಂಡಿದ್ದಾರೆ. ರೈತ ಬದುಕು ಕೇವಲ ಗಂಡಿಗೇ ಸೀಮಿತವಾಗದೆ ಹೆಣ್ಣು ಅದರ ಸಮಸಮ ಪಾಲುದಾರಳಾಗಿ ರೈತ ಮಹಿಳೆ ಎನಿಸಿ ಬಂದವಳಾಗಿದ್ದಾಳೆ. ಕೃಷಿಯನ್ನು ಅವಳೇ ಮೊತ್ತ ಮೊದಲಿಗೆ ಕಂಡು ಹಿಡಿದಿದ್ದರೂ, ಗಂಡಿಗೆ ಸಿಕ್ಕ ಪ್ರಚಾರ ಅವಳಿಗೆ ಸಿಗಲಿಲ್ಲ. ವಿಶೇಷತಃ ದಲಿತ ವರ್ಗವೂ ಶತಶತಮಾನಗಳಿಂದ ಬೇಸಾಯದ ಮಕ್ಕಳಾಗಿ ಬಂದಿದೆ.

ಕೃಷಿಯ ಪ್ರಾಚೀನತೆ ಎಷ್ಟೇ ಸಹಸ್ರಮಾನಗಳಿಂದ ಬಂದಿರಲಿ ಅದರ ವಿಕಸನ ಆಧುನಿಕ ದಿನಗಳವರೆಗೂ ವಿಸ್ತರಿಸಿಕೊಂಡು ಬಂದಿದೆ. ಈ ಹಾದಿಯಲ್ಲಿ ರೈತರ ನೋವು ನಲಿವುಗಳಿಗೆ ಎಷ್ಟೋ ಮೈಲಿಗಲ್ಲುಗಳು ನಿಂತಿವೆ. ಮೊದಲಿಗೆ ರೈತ ತನ್ನ ನೋವನ್ನು, ಪ್ರಾರ್ಥಿಸಿ ಹೇಳಿಕೊಂಡ; ಮನವಿ ಮಾಡಿ ನುಡಿದ; ಆಗ್ರಹಿಸಿದ; ದೂರು ದುಮ್ಮಾನಗಳ ಮೂಲಕ ದನಿ ಆಡಿದ. ಇವೆಲ್ಲ ಸಾತ್ವಿಕ ಬಗೆ ಎನಿಸಿದುವು. ಅದಕ್ಕೆ ಸಂಬಂಧಪಟ್ಟ ಆಡಳಿತ ಅಥವಾ ಯಜಮಾನ ಸ್ಪಂದಿಸದಿದ್ದಾಗ, ಸಾತ್ವಿಕ ರೋಷ ತೋರಲಾರಂಭಿಸಿದ. ಅವನ ಶೋಷಣೆ ಹೆಚ್ಚಾದಾಗಲೂ, ಸಂಘಟನೆಯ ಬಲವಿಲ್ಲದಿದ್ದಾಗ ಅಸಹಾಯಕನಾಗಿ ಶೋಷಣೆ, ನೋವು, ಅವಮಾನ, ಅತ್ಯಾಚಾರ, ದೌರ್ಜನ್ಯ, ಸಿಟ್ಟು, ಹತಾಶೆ, ಹಿಂಸೆ, ದಬ್ಬಾಳಿಕೆ ಎಲ್ಲವನ್ನು ತಡೆದುಕೊಳ್ಳುತ್ತ ಬಂದ. ಅದುಮಿಟ್ಟ ಅವೆಲ್ಲವೂ ಸಮಯ ಪಕ್ವವಾದಾಗ, ಸಂಘಟನಾ ಪ್ರಜ್ಞೆ ಜಾಗೃತವಾದಾಗ ಸ್ಫೋಟಿಸಿದುವು. ಆದರೂ ಅವನು ತನ್ನ ಸಾಂಸ್ಕೃತಿಕ ಜಾಯಮಾನದ ಗೆರೆಯನ್ನು ಎಷ್ಟೆಲ್ಲ ಪಕ್ಷ ಪಂಥ ಸಿದ್ಧಾಂತಗಳ ಪ್ರಭಾವದಲ್ಲಿಯೂ ದಾಟಲಿಲ್ಲ.

ಆರಂಭದ ದಿನಗಳಲ್ಲಿ ದೂರು ದುಮ್ಮಾನವಿದ್ದರೆ, ನಂತರ, ಮೆರವಣಿಗೆ, ಧರಣಿ, ಸತ್ಯಾಗ್ರಹ, ಪ್ರದರ್ಶನ-ಈ ಮೇರೆಗೆ ಸಾಗಿ ಹಿಂಸೆ ತಾಳಲಾರದಾಗ ಉಗ್ರವಾಗಿ ಪ್ರತಿಭಟಿಸತೊಡಗಿದ ರೈತ, ತನ್ನ ಸಂಘಟನಾ ಬಲದ ಶಕ್ತಿ ಕಂಡುಕೊಂಡ, ತನ್ನ ಬೇಡಿಕೆಗಳನ್ನು ಹಕ್ಕೊತ್ತಾಯವೆಂದ. ಇಂದು ಅದರ ಫಲವಾಗಿ ವಿದೇಶೀಯ ಬಹುರಾಷ್ಟ್ರೀಯ ಕಂಪೆನಿಗಳ ಹುನ್ನಾರಗಳು ಅವನ ಸಂಘಟನೆಯ ಶಕ್ತಿಯ ಮುಂದೆ ಪೇಲವಗೊಳುತ್ತಿವೆ.

ಈ ದಿಸೆಯಲ್ಲಿ ನಮ್ಮ ಉಭಯ ಸದನಗಳ ಶಾಸಕರ ಚಿಂತಕರ – ಚಿಂತನ ಕ್ರಮ, ಚರ್ಚೆ, ಕಾಳಜಿ, ಅಧ್ಯಯನ ತನ್ಮಯತೆ ಹಾಗು ಅನ್ಯಾಯವೆನಿಸಿದಾಗ ಪ್ರತಿಭಟನೆ, ಅವರನ್ನು ಕೇವಲ ರಾಜಕಾರಣಿಗಳನ್ನಷ್ಟೆ ಆಗಿಸದೆ, ಈ ನಾಡಿನ ರೈತ ಬದುಕಿನ ಆಗು ಹೋಗಿನ ಬಗ್ಗೆ ತಮ್ಮ ನಿಷ್ಠೆಯನ್ನು ಸಾಕಷ್ಟು ಪ್ರದರ್ಶಿಸಿರುವ ಮಾನವೀಯ ಪ್ರಜ್ಞೆಯ ವ್ಯಕ್ತಿಗಳನ್ನಾಗಿಯೂ ತೋರಿವೆ. ಆದರೆ ಅಧಿಕಾರ ವರ್ಗವನ್ನು ಸಾಕಷ್ಟು ದೂರಿದರೂ ಅವರಲ್ಲಿಯೂ ಮಾನವೀಯತೆ, ರೈತ ಕಾಳಜಿ ಇಲ್ಲವೆನ್ನುವಂತಿಲ್ಲ. ಅಧಿಕಾರಿ ವರ್ಗದಲ್ಲಿ ಈ ಸಂಖ್ಯೆ ಜಾಸ್ತಿಯಾದಂತೆ ಸಮಸ್ಯೆಗಳೂ ಪರಿಹಾರಗೊಳ್ಳುತ್ತ ನಡೆದಿವೆ. ಶಾಸಕರು ಬಹುತೇಕ ರೈತ ಪ್ರತಿನಿಧಿಗಳಾಗಿ ಕಾಲಕ್ರಮೇಣ ಆಯ್ಕೆಗೊಂಡು ಬಂದಕಾರಣ ರೈತರ ಬಗೆಗಿನ ಅವರ ಆಸಕ್ತಿ ಅರ್ಥಪೂರ್ಣ. ಅಂತಾಗಿ ಉಭಯ ಸದನಗಳಲ್ಲಿ ಅವರೆಲ್ಲರ ಚಿಂತನೆ ಚರ್ಚೆಗಳ ಸಾರವನ್ನೂ ಇಲ್ಲಿ ಸಾಧ್ಯವಾದಷ್ಟು ನೀಡಿದೆ. ಕಾರಣ ತಮ್ಮ ತಮ್ಮ ಕ್ಷೇತ್ರಗಳಲ್ಲಿ ಪ್ರತ್ಯಕ್ಷ ದರ್ಶನ ಮಾಡಿ ಅಂದರೆ ಕ್ಷೇತ್ರಕಾರ್ಯಮಾಡಿ ವಸ್ತುಸ್ಥಿತಿಯನ್ನು ಮುಂದಿಡುವ ಅವರ ಮಾತುಗಳಿಗೆ ಅಷ್ಟೇ ಮೌಲ್ಯವಿದೆ.

ಸಾಮಾನ್ಯವಾಗಿ ಸ್ಥಳೀಯವಾಗಿ, ಪ್ರಾದೇಶಿಕವಾಗಿ ನಡೆಯುವ ರೈತಾಪಿ ಪ್ರತಿಭಟನೆಗಳು, ಹೋರಾಟಗಳು, ಅನೇಕ ಸಂದರ್ಭಗಳಲ್ಲಿ ಅವು ಪ್ರಸಿದ್ಧಿಗೊಳ್ಳದಿರಬಹುದು. ಅಂಥ ಸಂದರ್ಭಗಳ ಪ್ರತ್ಯಕ್ಷ ಸಾಕ್ಷಿಗಳಾಗಿಯೋ, ಘಟನಾವಳಿಗಳ ಮುಖವಾಣಿಯೋ ಆಗಿ ಚರ್ಚೆ, ಪರಿಹಾರಗಳಿಗೆ ಕಾರಣರಾದವರು, ಕಾರಣವಾಗಬೇಕಾದವರು ನಮ್ಮ ಮಾನ್ಯ ಶಾಸಕ ವರ್ಗವೇ ಆಗಿದೆ. ಇಂಥ ಹೋರಾಟಗಳ ಬಗ್ಗೆ, ಲೇಖನಗಳಾಗಲಿ, ಕೃತಿಗಳಾಗಲಿ ಕ್ವಚಿತ್ತಾಗಿ ಒಂದೆರಡು ಕಡೆ ಕಾಣಿಸಿಕೊಂಡಿವೆಯಷ್ಟೆ. ಈ ಬಗ್ಗೆ ರಾಜ್ಯ ಹಾಗೂ ಜಿಲ್ಲಾ ತಾಲ್ಲೂಕು ಮಟ್ಟದ ಸಾಹಿತ್ಯ ಅಥವಾ ಸಾಹಿತ್ಯೇತರ ಸಮ್ಮೇಳನಗಳು ತರುವ ಸ್ಮರಣ ಸಂಚಿಕೆಗಳಲ್ಲಿ ಆಯಾ ಪ್ರದೇಶದ ರೈತ ಸಮಸ್ಯೆಗಳು, ಹೋರಾಟಗಳನ್ನು ಪಠ್ಯ ಪುಸ್ತಕಗಳಲ್ಲಿಯೂ ದಾಖಲಿಸಬೇಕಿದೆ. ಅಲ್ಲದೆ ರೈತರ ಸಮಸ್ಯೆಗಳ ಪರಿಹಾರಕ್ಕಾಗಿ ಹೋಗಾಡುವ ಸಮಂಜಸ ಸಮರ್ಥ ಹೋರಾಟಗಾರರಿಗೆ ಪ್ರಶಸ್ತಿ, ಸನ್ಮಾನಗಳು ಒದಗಬೇಕಾದ ಅಗತ್ಯವೂ ಇದೆ.

ಕರ್ನಾಟಕ ಸಂಬಂಧ ಪ್ರಮುಖ ರೈತ ಚಳುವಳಿ ಹಾಗು ಒಟ್ಟಾರೆ ರೈತ ಸತ್ಯಾಗ್ರಹ ಕುರಿತು ಬರೆಯಲು ನನಗೆ ವಿಧಾನಸಭಾ ಸಚಿವಾಲಯದ ಗ್ರಂಥಾಲಯ ಸಮಿತಿಯ ಶಾಸಕವರೇಣ್ಯದಿರಂದ  ಕರೆ ಬಂದಾಗ ನನಗೆ ಬಹಳ ಸಂತೋಷವೇ ಆಗಿತ್ತು. ಹೆಚ್ಚು ಕಡಿಮೆ ನನ್ನ ಸೇವಾ ಕ್ಷೇತ್ರದ ನೆಲೆಗಳೆಲ್ಲ ಗ್ರಾಮೀಣ ಪ್ರದೇಶವೇ ಆಗಿದ್ದುದರಿಂದ ಅಲ್ಲಿನ ರೈತರ ದಿನನಿತ್ಯದ ಹೊಲ, ಗದ್ದೆ, ತೋಟಗಳ ದುಡಿಮೆ, ಸಂಕಷ್ಟಗಳೆಲ್ಲ ನನ್ನ ಕಣ್ಣಳತೆಯಲ್ಲಿಯೆ; ಮನೆಯ ಬದಿಗೇ ಇದ್ದುವು  ಹೀಗಾಗಿ ಈ ಬರಹದ ಕಾರ್ಯ ನನ್ನ ಒಲವಿನದಾಗಿತ್ತು.

ಈ ಕೃತಿಯಲ್ಲಿ ಭಾರತೀಯ ರೈತ ಹೋರಾಟಗಳ ಹಿನ್ನೆಲೆಯನ್ನು ನೀಡಿದೆ. ಕರ್ನಾಟಕದ ರೈತ ಹೋರಾಟಗಳಿಗೆ ಒದಗಿಸಿದ ಪ್ರೇರಕ ಶಕ್ತಿಯನ್ನು ಗುರುತಿಸುವ, ಹಾಗು ರೈತ ಚಳುವಳಿಯನ್ನು ಅರ್ಥೈಸಿಕೊಳ್ಳುವ ದೃಷ್ಟಿಯಿಂದ ಅದನ್ನು ನೀಡಲಾಗಿದೆ. ಸ್ವಾತಂತ್ರ್ಯ ಪೂರ್ವ, ಸ್ವಾತಂತ್ರ್ಯೋತ್ತರ, ಕರ್ನಾಟಕ ಏಕೀಕರಣಪೂರ್ವ-ಏಕೀಕರಣೋತ್ತರ ಚಳುವಳಿ, ಸಹಸ್ರಮಾನ ಪೂರಕ ವಿವಿಧ ರೈತ ಚಳುವಳಿಗಳ ಮಾದರಿಗಳಲ್ಲಿ ಹಾಗು ರೈತ ಚಳುವಳಿಗಳ ಆಧುನಿಕ ಮಜಲುಗಳಲ್ಲಿ ವಿಕಸನ ಕಾಣುವುದರಿಂದ ಹಾಗೆಯೇ ವಿಭಾಗಿಸಿ ಬರೆಯಲಾಗಿದೆ; ವಿಧಾನಸಭೆ ಹಾಗೂ ವಿಧಾನಪರಿಷತ್ತಿನ ನಡವಳಿಕೆಗಳ ಹಿನ್ನೆಲೆ ಸಹಿತ ತೌಲನಿಕ ಅಧ್ಯಯನ ಮಾಡಿ ಬರೆಯಲಾಗಿದೆ. ಇದಕ್ಕೆ ಅನುಗುಣವಾಗಿ 'ಮಂಥನ' ಭಾಗಗಳಲ್ಲಿ ತೌಲನಿಕ ವಿಮರ್ಶೆ ಮಾಡಿ ಮಾಹಿತಿಯಿಂದ ಪುಷ್ಟೀಕರಿಸಿದೆ. 'ಮಂಥನ' ಭಾಗ ಒಂದು ವಿವೇಚನಾತ್ಮಕ ಪೋಷಕ ಚಿಂತನವಾಗಿದೆ.

31.12.2000ರಲ್ಲಿಯೆ ಕೃತಿಯನ್ನು ಗ್ರಂಥಾಲಯ ಉಪಸಮಿತಿಗೆ ಸಲ್ಲಿಸಲಾಯಿತು. ಆದರೆ ಬರಹದ ವ್ಯಾಪಕ ಮಾಹಿತಿಯನ್ನು ಗಮನಿಸಲಾಗಿ 2003ರ ವರೆಗಿನ ಮಾಹಿತಿಯನ್ನು ಸೇರಿಸಬೇಕೆಂದು ಅಂದಿನ ಉಪಸಮಿತಿಯ ಅಭಿಪ್ರಾಯವಾಗಿತ್ತು. ಕೊನೆಗೆ ಗ್ರಂಥಾಲಯ ಉಪಸಮಿತಿಯು 2006ರ ಜನವರಿ 30ರ ಪತ್ರದಲ್ಲಿ ಅಧೀನ ಕಾರ್ಯದರ್ಶಿಯವರ (ಪತ್ರ ಸಂಖ್ಯೆ ಆರ್‌ಆರ್:656:ಗರುಪ:99.00) ಮೂಲಕ 2005ರ ವರೆಗಿನ ರೈತ ಚಳುವಳಿಗಳ ಬಗ್ಗೆ ನಡೆದಿರುವ ಚರ್ಚೆಗಳ ವಿಷಯವನ್ನೂ ಅಳವಡಿಸಲು ಸೂಚಿಸಿತು. ಹೀಗಾಗಿ 2005ರ ವರೆಗಿನ ಲಭ್ಯ ಮಾಹಿತಿಗಳನ್ನು ಸಾಧ್ಯವಾದಷ್ಟನ್ನು ಸೇರಿಸಿ ವಿವಿಧ ಕಾಲಾವಧಿಗಳ ನಾಲ್ಕು ಪ್ರತ್ಯೇಕ ಸಂಪುಟಗಳಾಗಿ ಮೇಲ್ಸೂಚಿಸಿದಂತೆ ವಿಂಗಡಿಸಿ ಬರೆಯಬೇಕಾಯಿತು. ಈಗ 2005ರ ನಂತರದ ವಿಷಯಗಳನ್ನು ಸಾಧ್ಯವಾದಷ್ಟು ಅಡಕಗೊಳಿಸಲಾಗಿದೆ.

ಈಗಾಗಲೇ **'ಪ್ರಾಚೀನ ಮತ್ತು ಕರ್ನಾಟಕ' 'ಏಕೀಕರಣ ಪೂರ್ವ ರೈತ ಚಳುವಳಿಗಳು'** (1955 ರವರೆಗೆ) ಹಾಗೂ ಏಕೀಕರಣೋತ್ತರ ಸಹಸ್ರಮಾನ ಪೂರ್ವ ರೈತ ಚಳುವಳಿಗಳು' ಎಂಬ ಶೀರ್ಷಿಕೆಯಡಿ ಅನುಕ್ರಮವಾಗಿ ಸಹಸ್ರಮಾನ ಸುವರ್ಣಕರ್ನಾಟಕ ರೈತರ ಸಂಪುಟ 1 ಮತ್ತು 2ನ್ನು 2.3.2006 ರಂದು ವಿಧಾನಸೌಧದಲ್ಲಿ ಗ್ರಂಥಾಲಯ ಸಮಿತಿಯು ಬಿಡುಗಡೆ ಮಾಡಿದೆ. ಈಗ **'ಸಹಸ್ರಮಾನ ಪೂರಕ ವಿವಿಧ ರೈತ ಚಳುವಳಿಯ'** ವಿಷಯಗಳು ಎಂಬ ಶೀರ್ಷಿಕೆಯಡಿ ಸುವರ್ಣ ಕರ್ನಾಟಕ ರೈತ ಚಳುವಳಿ ಸಂಪುಟ 3ನ್ನು ಹೊರತರಲಾಗುತ್ತಿದೆ.

2006ರಲ್ಲಿ **'ಸಹಸ್ರಮಾನ ಪೂರಕ ವಿವಿಧ ರೈತ ಚಳುವಳಿಯ ವಿಷಯಗಳು'** ಎಂಬ ಶೀರ್ಷಿಕೆಯಡಿ ಸುವರ್ಣ ಕರ್ನಾಟಕ ರೈತ ಚಳುವಳಿ ಸಂಪುಟ 3ನ್ನು ಹೊರತರಲಾಯಿತು. ಆ ಸಂಪುಟದಲ್ಲಿ ರೈತ ಚಳುವಳಿಯ ಹಿನ್ನೋಟ ಮುನ್ನೋಟಗಳು, ರೈತ ಚಳವಳಿಯ ಹಾಡುಗಳ ವಿಶ್ಲೇಷಣೆ, ಭೂ ಸುಧಾರಣೆ, ಬೆಳೆಹಾನಿ, ರೈತರ ಮೇಲಿನ ಗೋಲಿಬಾರ್ ಲಾಠಿಪ್ರಹಾರ, ಬಾಗೂರು ನವಿಲೆ ಪ್ರದೇಶದ ರೈತರ ಸಮಸ್ಯೆಗಳು, ಬೆಳೆ ಬೆಲೆ ಕುಸಿತ ಬೆಳೆಗಾರರ ಪ್ರತಿಭಟನೆ, ಕಾಲ್ನಡಿಗೆ ಜಾಥಾ, ವಿಶೇಷತಃ ರೈತರ ಸರಣಿ ಆತ್ಮಹತ್ಯೆ, ಪರಿಹಾರಗಳು, ಸುದ್ದಿಮಾಧ್ಯಮದ ಸಂವೇದನೆಗಳು ಇತ್ಯಾದಿ ಕುರಿತೆಲ್ಲ ವಿವರವಾಗಿ ವಿವೇಚಿಸಲಾಗಿದೆ. ಹಾಗೂ ಉಭಯ ಸದನಗಳಲ್ಲಿ ಈ ಬಗೆಗೆಲ್ಲ ನಡೆದ ಚರ್ಚೆ ಧರಣಿ, ಒದಗಿದ ಪರಿಹಾರ ಕುರಿತು ವಿಷಯಗಳ ಮಂಡನೆ ಆಗಿದೆ. ರೈತರ ಸರಿ ಆತ್ಮಹತ್ಯೆಯ ಕುರಿತು. ನಮ್ಮ ಸಾರ್ವಜನಿಕರು, ಧಾರ್ಮಿಕ – ಸಾಂಸ್ಕೃತಿಕ ವಲಯದ ಮುಂದಾಳುಗಳು, ಬುದ್ಧಿಜೀವಿಗಳು, ಸುದ್ದಿಮಾಧ್ಯಮಗಳು ಮತ್ತು ಶಾಸಕರು ತೋರಿಸಿರುವ ಸಂವೇದನೆಯು ಮಾನವೀಯ ಪರಿಹಾರಗಳ ಪಾಲುದಾರಿಕೆ ಎನಿಸುವಂತಿದೆ. ಬಾಗೂರು – ನವಿಲೆ ಸುರಂಗದ ಸಂಬಂಧದ ಅಂತರ್ಜಲ ಕುಸಿತ ಕಾರಣ ರೈತರ ಪ್ರತಿಭಟನೆ ಹಾಗೂ ನಡೆದ ದೌರ್ಜನ್ಯದ ಕುರಿತಾದ ಸದನ ಚರ್ಚೆಯಂತು ನಮ್ಮ ಶಾಸಕರ ಮಾನವೀಯ ಮಿಡಿತದ ಶೃಂಗದ್ಯೋತಕವೆನಿಸುವಂತಿದೆ. ಈ ಎಲ್ಲ ಸಂದರ್ಭಗಳನ್ನು, ಹಿನ್ನೆಲೆಗಳನ್ನು ಗಮನಿಸಿ, ಐತಿಹಾಸಿಕ ಫಲಿತಗಳನ್ನು ಮಂಡಿಸಿರುವ ಬಹುಶಃ ಮೊದಲ ಬಗೆಯ ಕೃತಿ ಇದಾಗಿದೆ. 2006ರ ನಂತರ ಸದ್ಯ ಸುವರ್ಣ ಕರ್ನಾಟಕ ರೈತ ಚಳವಳಿ–ಸತ್ಯಾಗ್ರಹಗಳು ಕೃತಿಯ ನಾಲ್ಕನೆಯ ಸಂಪುಟವಾಗಿ 'ರೈತ ಚಳವಳಿಯ ಆಧುನಿಕ ಮಜಲುಗಳು ಮತ್ತು ರೈತರ ವಿವಿಧ ಸಮಸ್ಯೆಗಳು' ಎಂಬ ಶೀರ್ಷಿಕೆಯಡಿ ಈ ವಿಭಾಗ ಸಂಪುಟವನ್ನು ಹೊರತರಲಾಗುತ್ತಿದೆ. ಈ ಸಂಪುಟದಲ್ಲಿ ವಿಶ್ವವ್ಯಾಪಾರ ಸಂಘಟನೆ ಹಾಗೂ ಪೂರಕ ವಿಷಯಗಳು, ಜಾಗತಿಕ ತಾಪಮಾನ ಕುಲಾಂತರಿ ಬೆಳೆಗಳು (ಬಿಟಿ ಹತ್ತಿ, ಬದನೆ) ಬಿಟಿ ವಿರೋಧ ಪ್ರತಿಭಟನೆ

ನೀರಾ ಚಳವಳಿ, ಹಾಗೂ ಆ ಸಂಬಂಧದ ಸದನದ ಚರ್ಚೆಗಳು, ರೈತರ ಜಲ ಹಾಗೂ ಆರ್ಥಿಕ ಸಮಸ್ಯೆಗಳು, ಬೆಳೆಹಾನಿ–ಬೆಲೆ ಕುಸಿತ ಸಮಸ್ಯೆಗಳು ಕುರಿತಂತೆ ಮಾಹಿತಿಗಳನ್ನು ವಿಶ್ಲೇಷಣೆ ಮಾಡಿ ಬರೆಯಲಾಗಿದೆ. ಸಕ್ಕರೆ ಕಾರ್ಖಾನೆಗಳಿಂದ ಕಬ್ಬಿನ ಹಣ ಬಾಕಿ. ಕೊಬ್ಬರಿ ಮಾರುಕಟ್ಟೆ ಬರಪರಿಸ್ಥಿತಿ,–ಪರಿಹಾರ, ವಿದ್ಯುತ್ ಅಭಾವ, ಬೆಳೆವಿಮೆ, ಇತ್ಯಾದಿಗಳನ್ನು ರೈತಾಪಿ ಬದುಕಿನ ಹಿನ್ನೆಲೆಯಲ್ಲಿ ವಿಶ್ಲೇಷಿಸಿ, ಸದನದ ಚರ್ಚೆಗಳ ಆಧಾರಗಳನ್ನು ಮಂಡಿಸಿ ಇಲ್ಲಿ ಮುಂದಿಡಲಾಗಿದೆ. ವಿದ್ಯುತ್ ಸಂಕಷ್ಟಗಳು, ಬೆಳೆ ಹಾನಿ ಸಮಸ್ಯೆಗಳು, ಆರ್ಥಿಕ ಸಮಸ್ಯೆಗಳು ಚಳವಳಿಗೆ ಪ್ರೇರಕವಾಗುವ ಸೂಕ್ಷ್ಮಗಳ ಬಗ್ಗೆಯೂ ಇಲ್ಲಿ ಸೂಚಿಸಲಾಗಿದೆ.

ಕಳೆದ ಮೂರು ಸಂಪುಟಗಳಿಗೆ ಪ್ರಕಟಣೆಯ ಸಂದರ್ಭದಲ್ಲಿ ಕಾಳಜಿ ತೋರಿ ಅವುಗಳನ್ನು ಪ್ರಕಟಿಸಲು ಅನುವು ಮಾಡಿದ ಅಂದಿನ ವಿಧಾನ ಸಭಾಧ್ಯಕ್ಷರಾದ ಶ್ರೀ ಕೃಷ್ಣ, ವಿಧಾನ ಪರಿಷತ್ತಿನ ಸಭಾಪತಿಗಳಾಗಿದ್ದ ಶ್ರೀ ವಿ.ಆರ್. ಸುದರ್ಶನ್ ಅವರುಗಳನ್ನು ಈ ಸಂದರ್ಭದಲ್ಲಿ ಸ್ಮರಿಸುತ್ತೇನೆ. ಸದ್ಯ ಉಳಿದ ಸಂಪುಟಗಳ ಪ್ರಕಟಣೆಗೆ ಅನುವು ಮಾಡಿಕೊಟ್ಟಿರುವ ವಿಧಾನ ಪರಿಷತ್ ಸಭಾಪತಿಗಳಾದ ಮಾನ್ಯ ಶ್ರೀ ವೀರಣ್ಣ ಮತ್ತಿಕಟ್ಟಿ, ವಿಧಾನ ಸಭಾಧ್ಯಕ್ಷರಾದ ಮಾನ್ಯ ಶ್ರೀ ಕೆ.ಜಿ. ಬೋಪಯ್ಯ ಅವರುಗಳಿಗೆ ನಾನು ಆಭಾರಿ.

ರೈತ ಚಳವಳಿ–ಸತ್ಯಾಗ್ರಹಗಳು ಕುರಿತ ನನ್ನ ಬರಹಕ್ಕೆ ತುಂಬ ಉತ್ತೇಜನ ನೀಡಿದ 2000 ದಲ್ಲಿ ಅಂದಿನ ಗ್ರಂಥಾಲಯ ಉಪ ಸಮಿತಿಯ ಅಧ್ಯಕ್ಷರಾಗಿದ್ದ–ಮಾನ್ಯ ಶ್ರೀ ಬಿ.ಬಿ. ಶಿವಪ್ಪ, ಸಮಿತಿ ಸದಸ್ಯರಾಗಿದ್ದ ಸರ್ವಶ್ರೀ ಜಿ. ಮಧುಸೂದನ್ ಎಂ. ರಂಗನಾಥ್, ಎಂ. ಸಂಪಂಗಿ, ಸಿರಾಜ್ ಷೇಕ್ ಕಾಕಾ ಸಾಹೇಬ್ ಪಾ.ಪಾಟೀಲ್, ಡಾ. ವಿ.ಎಸ್. ಆಚಾರ್ಯ (ಈಗ ಮಾನ್ಯ ಗೃಹ ಸಚಿವರು) ದಿ॥ ಡಾ. ಎಚ್.ಎಲ್. ನಾಗೇಗೌಡರನ್ನು ಈ ಸಂದರ್ಭದಲ್ಲಿ ನೆನೆಯುವೆ. ಇಂದಿನ ಗ್ರಂಥಾಲಯ ಉಪಸಮಿತಿ ಮಾನ್ಯ ಅಧ್ಯಕ್ಷರಾದ ಶ್ರೀ ಎಂ. ನಾರಾಯಣಸ್ವಾಮಿ ಹಾಗೂ ಶ್ರೀ 'ಮುಖ್ಯಮಂತ್ರಿ' ಚಂದ್ರು, ಡಾ. ಚಂದ್ರಶೇಖರ ಕಂಬಾರ, ಶ್ರೀ ಜಿ.ಎಸ್. ಗಡ್ಡದೇವರ ಮಠ ಅವರೆಲ್ಲರಿಗೂ ನಾನು ಋಣಿ.

2000ದಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿದ್ದ ಪ್ರೊ॥ ಎನ್. ಬಸವಾರಾಧ್ಯ ಅವರು ಮೊದಲಿಗೆ ನನ್ನನ್ನು ಈ ಕಾರ್ಯಕ್ಕೆ ತೊಡಗಿಸುವಲ್ಲಿ ನೆರವಾದುದಕ್ಕೆ ಅವರಿಗೆ ನಾನು ಆಭಾರಿ.

ಕರ್ನಾಟಕ ವಿಧಾನ ಸಭಾ ಸಚಿವಾಲಯದ ಕಾರ್ಯದರ್ಶಿಗಳಾದ ಶ್ರೀ ಎಸ್.ಬಿ. ಪಾಟೀಲ್, ಅಪರ ಕಾರ್ಯದರ್ಶಿಗಳಾದ ಶ್ರೀ ಟಿ.ಎನ್. ಧ್ರುವಕುಮಾರ್, ಉಪ ಕಾರ್ಯದರ್ಶಿಗಳಾದ ಶ್ರೀ ಎಂ. ಗುರುರಾಜ ಹಾಗೂ ಹಿಂದಿನ ಗ್ರಂಥಾಲಯ ಉಪ

ಸಮಿತಿಗೆ ಕೃತಿಯ ವೈಶಿಷ್ಟ್ಯವನ್ನು ತಿಳಿಸಿ ಹಿಂದಿನ ಸಂಪುಟಗಳ ಪ್ರಕಟಣೆಗೆ ನೆರವಾದ ಅಧೀನ ಕಾರ್ಯದರ್ಶಿ ಶ್ರೀ ಎಚ್.ಎಸ್. ಜಗನ್ನಾಥ್ ಅವರಿಗೆ, ಸರ್ಕಾರಿ ಮುದ್ರಣ, ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳ ಇಲಾಖೆ ನಿರ್ದೇಶಕರಾದ ಶ್ರೀ ಎಂ. ರವಿಶಂಕರ್ ಅವರಿಗೆ, ವಿಧಾನ ಸಭಾ ಸಚಿವಾಲಯದ ಮುಖ್ಯ ಗ್ರಂಥಪಾಲಕಿ ಶ್ರೀಮತಿ ಅನುಸೂಯ ಎನ್. ದೇವಗಿರಿ, ಶಾಖಾಧಿಕಾರಿ ಶ್ರೀ ಎಂ. ಮೋಹನ್ ಅವರಿಗೆ, ಶ್ರೀ ವಿ. ಮಂಜುನಾಥ್,. ಶ್ರೀ ಮಹದೇವ್, ವಿಧಾನ ಮಂಡಲ ಗ್ರಂಥಾಲಯ ಸಿಬ್ಬಂದಿ ವರ್ಗದವರಿಗೆ ಸರ್ಕಾರಿ ಮುದ್ರಣಾಲಯದ ಡಿ.ಟಿ.ಪಿ. ಸಿಬ್ಬಂದಿ ವರ್ಗದ ವಿನ್ಯಾಸಕಾರ ಶ್ರೀ ಬಿ.ಎಂ. ರವಿಕುಮಾರ್ ಮತ್ತು ಶ್ರೀ ಬಿ. ನಾಗರಾಜ್ ಅವರಿಗೆ, ನನ್ನ ಕೃತಜ್ಞತೆಗಳು, ಸಂಸದೀಯ ಪಟು ಕೃತಿ ಮಾಲಿಕೆಯ ಸಂಪಾದಕರಾಗಿ ಬಹಳ ಶ್ರದ್ಧೆಯಿಂದ ಕೃತಿಯ ಕರಡನ್ನು ಗಮನಿಸಿ ಸಮಿತಿಯ ಸಮ್ಮತಿಗೆ ಅನುವು ಮಾಡಿರುವ ಡಾ॥ ಮಲ್ಲಿಕಾರ್ಜುನ ಕೂಡ್ಲಿಗೆರೆ ಅವರಿಗೆ, ಕಳೆದ ಮೂರು ಸಂಪುಟಗಳ ಸಂಪಾದಕರಾಗಿದ್ದ ಶ್ರೀ ಎಲ್.ಎನ್. ಮುಕುಂದರಾಜ್ ಹಾಗೂ ಆಗ ಡಿಟಿಪಿ ಮಾಡಿದ ಶ್ರೀ ಶಿವಕುಮಾರ್ ಅವರಿಗೆ ನನ್ನ ಅಭಿಮಾನಗಳಿವೆ. ನನ್ನ ಬರಹದಲ್ಲಿ ನೆರವಾದ ಶ್ರೀಮತಿ ಸುಲೋಚನಾ ನಾಗರಾಜ್, ಶ್ರೀಮತಿ ಎಂ.ಜಿ. ಪದ್ಮವಿರೂಪಾಕ್ಷಯ್ಯ, ಶ್ರೀಮತಿ ಎಂ. ಶಾಮಲದೇವಿ ಡಾ. ಎಂ.ಜಿ. ಚಂದ್ರಕಾಂತ್ ಅವರಿಗೆಲ್ಲ ನನ್ನ ಅಭಿಮಾನಗಳು.

**ಡಾ. ಎಂ.ಜಿ. ನಾಗರಾಜ್**

ರಾಜಾಜಿನಗರ, ಬೆಂಗಳೂರು
22.3.2010
ವಿಕೃತಿ ಸಂವತ್ಸರ, ಚೈತ್ರ ಶುದ್ಧ ಸಪ್ತಮಿ
ರೋಹಿಣಿ ನಕ್ಷತ್ರ, ಸೋಮವಾರ

# ಪರಿವಿಡಿ



## ವಿಷಯ ಸೂಚಿ

## ಸಂಪುಟ–೪

## I : ರೈತ ಚಳವಳಿಯ ಆಧುನಿಕ ಮಜಲುಗಳು–ರೈತ ಸಮಸ್ಯೆಗಳು

### ಅಧ್ಯಾಯ ೧೦ : ವಿಶ್ವವ್ಯಾಪಾರ ಸಂಘಟನೆ : ಪೂರಕ ವಿಷಯಗಳು

## ಅಧ್ಯಾಯ ೧೫ : ಬೆಳೆ ಹಾನಿ ಸಮಸ್ಯೆಗಳು

## ಅಧ್ಯಾಯ ೧೬: ಬೆಳೆಯ ಬೆಲೆ ಕುಸಿತದ ಸಮಸ್ಯೆಗಳು

# ವಿಶ್ವ ವ್ಯಾಪಾರ ಸಂಘಟನೆ : ಪೂರಕ ವಿಷಯಗಳು

## ಅಧ್ಯಾಯ–10

### ವಿಷಯ 1 : ಡಬ್ಲ್ಯು.ಟಿ.ಓ. (WTO) ಮತ್ತು ಕೃಷಿ ಆಹಾರ ಸಮಸ್ಯೆಗಳ ಕುರಿತು ರಾಜ್ಯ ಸರ್ಕಾರ ರೂಪಿತ ಡಬ್ಲ್ಯುಟಿಓ ಸೆಲ್‌ನ ವರದಿ (2000–2001)*[1]

ಭಾರತ ಪ್ರಮುಖ ಬೇಸಾಯ ರಾಷ್ಟ್ರವಾಗಿ ಅಭಿವೃದ್ಧಿಶೀಲರಾಷ್ಟ್ರಗಳ ಪೈಕಿ ವಿಶೇಷ ಸ್ಥಾನ ಹೊಂದಿದೆ. ಅಂಥ ರಾಷ್ಟ್ರಗಳ ನೇತೃತ್ವವನ್ನು ಅದು ವಹಿಸಬೇಕಿದೆ. ವಿಶ್ವವ್ಯಾಪಾರ ಸಂಘಟನೆಯಲ್ಲಿ ಅದು ಪರಸ್ಪರ ನಿಯೋಗಿಯಾಗಿ ಕೆಲಸ ಮಾಡಬೇಕಿದೆ. ಈ ದೆಸೆಯಲ್ಲಿ ಕರ್ನಾಟಕವು ತನ್ನ ಸಂಪನ್ಮೂಲದ ಹೆಚ್ಚಳಿಕೆಯಿಂದಾಗಿ ವಿಶಿಷ್ಟ ಸ್ಥಾನದಲ್ಲಿದ್ದು ರಾಜ್ಯ ಹಾಗೂ ರಾಷ್ಟ್ರದ ಪ್ರಗತಿಗೆ ದೇಣಿಗೆ ಕೊಡಬಲ್ಲದ್ದಾಗಿದೆ. 1994–2000ದ ಅವಧಿಯಲ್ಲಿ ಕೃಷಿ ವಲಯದಲ್ಲಿ ಅದರ ರಫ್ತಿನ ಪ್ರಮಾಣ ನಾಲ್ಕು ಸಾವಿರದಿಂದ ಏಳುಸಾವಿರದ ಇನ್ನೂರು ಕೋಟಿ ರೂಗಳಷ್ಟಿದೆ. ಕೃಷಿ ವಾಣಿಜ್ಯ ವ್ಯವಹಾರದಲ್ಲಿ ಅಂತೇ ಕರ್ನಾಟಕಕ್ಕೆ ಒಂದು ಪ್ರಮುಖ ಪಾತ್ರ ಇದೆ. ಈ ಸಂದರ್ಭದಲ್ಲಿ ಡಬ್ಲ್ಯು.ಟಿ.ಓ.ನ ಅನ್ವಯ ಕ್ರಮಗಳು ರಾಷ್ಟ್ರ ಹಾಗು ರಾಜ್ಯದ ಕೃಷಿ ವ್ಯವಹಾರಕ್ಕೆ ಹೇಗೆ ಪರಿಣಾಮಕಾರಿಯಾಗುತ್ತವೆ? ಲಭ್ಯವಾಗುವ ರಿಯಾಯಿತಿ ಹಾಗೂ ಹಕ್ಕುಗಳು ವಿಶ್ವವ್ಯಾಪಾರ ಸಂಘಟನೆಯ ಚೌಕಟ್ಟಿನಲ್ಲಿ ಯಾವ ಪ್ರಮಾಣದಲ್ಲಿ ಪ್ರಯೋಜನಕಾರಿ? ಇಂಥ ಅನ್ವಯಕ್ರಮಕ್ಕೆ ಬೇಕಾದ ಅನುಬಂಧೀ ಅಥವಾ ಮೂಲ ಸೌಕರ್ಯಗಳ (Infrastructure) ಒದಗಣೆ ಎಷ್ಟು ಮಟ್ಟಿಗೆ ಬೆಳಸುಗೊಂಡಿದೆ ಎಂಬ ಬಗೆಗೆಲ್ಲ ಅರಿಯಬೇಕಾಗುತ್ತದೆ. ಜಗತ್ತಿನ ಜಾಗತೀಕರಣದ ಲಾಭ ಪಡೆಯಬೇಕೆಂದರೆ ಬದಲಾಗುವ ದೀರ್ಘಕಾಲೀನ ರಚನಾ ಮಾದರಿಯೊಡನೆ ಮುಖಾಮುಖಿಯಾಗಬೇಕಾಗುತ್ತದೆ. ಅದಕ್ಕಾಗಿ ಅಭಿವೃದ್ಧಿಶೀಲ ರಾಷ್ಟ್ರಗಳು ಆರ್ಥಿಕ ಸುಧಾರಣೆಯೊಡನೆ ಬದಲಾದ ಜಗತ್ತಿನೊಡನೆ ಸೆಣಸಬೇಕಾಗುತ್ತದೆ. ಇದಕ್ಕೆ ನಮ್ಮ ರಾಷ್ಟ್ರವಷ್ಟೇ ಅಲ್ಲ, ರಾಜ್ಯದ ರೈತರೂ ಅರಿವುಗೊಳ್ಳಬೇಕಾಗುತ್ತದೆ. ತಮ್ಮ ಬದುಕನ್ನು ಹಸನುಗೊಳಿಸಿಕೊಳ್ಳಬೇಕಾಗುತ್ತದೆ.

---

*1. A Report by the Cell on WTO and related issues in Agriculture and food: Chairman of the cell: Dr. Prema Nath, Govt. of Karnataka, Bangalore, January 2001

ಈ ಸಂಗತಿಗಳನ್ನೆಲ್ಲ ದೃಷ್ಟಿಯಲ್ಲಿಟ್ಟುಕೊಂಡ ಸರ್ಕಾರ ತನ್ನ ಅಜ್ಞಾ ಸಂಖ್ಯೆ AHD 389 HGM 2000 Bangalore, ದಿನಾಂಕ 25.8.2000 ರೀತ್ಯಾ ಡಾ. ಪ್ರೇಮನಾಥ್ (ಮಾಜಿ ಉಪ ನಿರ್ದೇಶಕರು ಎಫ್.ಎ.ಓ. ವಿಶ್ವ ಸಂಸ್ಥೆ) ಅವರ ಛೇರ್‌ಮನ್ ಗಿರಿಯಲ್ಲಿ "WTO Cell" ಅನ್ನು ಸ್ಥಾಪಿಸಿತು. ಅದರ ಗುರಿ ಕರ್ನಾಟಕದ ಕೃಷಿ ಹಾಗು ತೋಟಗಾರಿಕೆಯ ಅನುಕೂಲಕ್ಕಾಗಿ WTO ನಿಂದ ಪಡೆದುಕೊಳ್ಳಬಹುದಾದ ಪ್ರಯೋಜನಗಳು; ಈ ಸಂಬಂಧದಲ್ಲಿ ಒದಗುವ ಇಕ್ಕಟ್ಟುಗಳು ಹಾಗು ಅದರ ಪರಿಹಾರಗಳು, ರೈತರು ಹಾಗು ಅನ್ವಯ ಸಿಬ್ಬಂದಿಗೆ ಕೊಡಬೇಕಾದ ತರಬೇತಿ, ಇತ್ಯಾದಿಗಳನ್ನು ಗಮನದಲ್ಲಿರಿಸಿಕೊಳ್ಳಲಾಗಿತ್ತು.

ಸಮಿತಿ ಈ ಕಾರ್ಯಾನ್ವಯ 11.2.2000 ರಂದು ಡಾ.ಪ್ರೇಂನಾಥ್ ಅವರ ಅಧ್ಯಕ್ಷತೆಯಲ್ಲಿ ಸೇರಿತು. ಮೊದಲು ಮಧ್ಯಂತರ ವರದಿ ಸಲ್ಲಿಸಲು ತೀರ್ಮಾನಿಸಿತು. ಅದರಲ್ಲಿ ಕೃಷಿ ಸಂಬಂಧದ WTO ಒಪ್ಪಂದಗಳು, ರಾಜ್ಯ ಹಾಗು ರಾಷ್ಟ್ರೀಯ ಪರಿಣಾಮಗಳು, ಒದಗುವ ನಿಧಿನೆರವು, **ಹಸಿರುಪೆಟ್ಟಿಗೆ** ಕಾರ್ಯಕ್ರಮಗಳಡಿ ಪಡೆಯಬೇಕಾದ ಪ್ರಯೋಜನಗಳು, ಈ ಬಗೆಗೆಲ್ಲ ಪರಿಶೀಲಿಸಿ ಕೊನೆಗೆ ತನ್ನ ಮಧ್ಯಂತರ ವರದಿಯನ್ನು ಹೀಗೆ ಸೂಚಿಸಿದೆ.

ಕೃಷಿ ಮೇಲಿನ ಒಪ್ಪಂದ (AOA-Agreement on Agriculture) ವಿಭಾಗದಲ್ಲಿ, ಮಾರುಕಟ್ಟೆಯ ಸೌಲಭ್ಯ, ಸ್ಥಳೀಯ ಬೆಂಬಲ ಹಾಗು ರಫ್ತು ಸ್ಪರ್ಧೆ, ವಾಣಿಜ್ಯ ಸಂಬಂಧೀ ಹೂಡಿಕೆ ಕ್ರಮಗಳು (TRIMS) ವಾಣಿಜ್ಯ ಸಂಬಂಧೀ ಬೌದ್ಧಿಕ ಆಸ್ತಿಯ ಹಕ್ಕು (TRIPS) ಇತ್ಯಾದಿ ವಿಷಯ ವಿವೇಚನೆ ಇದೆ. ಅಭಿವೃದ್ಧಿಗೊಂಡ ದೇಶಗಳ ಮಾರಾಟದರಗಳ ಕುರಿತು ಹೇಳಲಾಗಿದೆ. **ಗ್ರೀನ್ ಬಾಕ್ಸ್** (ಹಸಿರು ಪೆಟ್ಟಿಗೆ); **ಬ್ಲೂ ಬಾಕ್ಸ್** (ನೇರ ನಿಧಿ ನೆರವಿನ ವ್ಯವಸ್ಥೆಯ **ನೀಲಿಪೆಟ್ಟಿಗೆ**) ಅನ್ವಯ ಕ್ರಮಗಳಿಂದ ಒಟ್ಟಾರೆ ಬೆಂಬಲ ಕ್ರಮ (Aggregate measure of support-AMS) ವನ್ನು ವಿನಾಯಿಸಿ ಪಡೆಯಬಹುದಾದ ಸಬ್ಸಿಡಿಗಳು; ಯಾವುದೇ ದೇಶಗಳು ತಮ್ಮ ಉತ್ಪನ್ನಗಳನ್ನು ಇನ್ನೊಂದು ದೇಶದಲ್ಲಿ ರಾಶಿ ಸುರಿದು (dumping) ಕೃತಕ ಬೆಲೆಯಿಂದ ಏರುಪೇರು ಉಂಟುಮಾಡುವಂತಿಲ್ಲದಿರುವುದು, ಎಂಬ ಬಗ್ಗೆ ಅರಿವು ಮೂಡಿಸುವುದು ಸಮಿತಿಯ ಗಮನದಲ್ಲಿದೆ. ಕರ್ನಾಟಕದ ರಫ್ತುದಾರಿಕೆಯ ಹೆಚ್ಚಳ ಸಾಧಿಸಲು ಬೇಕಾದ ಕ್ರಮಗಳು (ರಫ್ತು ಹೆಚ್ಚಳ ಸಾಧನೆ export performance), ತಾಂತ್ರಿಕ ಕೌಶಲ್ಯಗಳ ಆಮದು ಮಾಡಿಕೊಳ್ಳುವಿಕೆ, ಗ್ರೀನ್‌ಬಾಕ್ಸ್ ಅನ್ವಯ ಕ್ರಮಗಳ ಮೂಲಕ ರೈತರ ರಫ್ತು ಸಂಘಟನೆಯನ್ನು ತಕ್ಷಣ ವ್ಯವಸ್ಥೆಗೊಳಿಸುವುದು, ಬಿಜಾಪುರ,

ಗುಲ್ಬರ್ಗ, ಬೀದರ್ ಇತ್ಯಾದಿ (Environmental fragile zone) ಪ್ರಾಕೃತಿಕ ಏರುಪೇರಿನ ಪ್ರದೇಶಗಳಲ್ಲಿ ಡಬ್ಲ್ಯು.ಟಿ.2 ಮೂಲಕ ದೊರಕುವ ಹಸಿರುಪೆಟ್ಟಿಗೆ (ರೈತರಿಗೆ ಲಭ್ಯವಾಗುವ ಪರೋಕ್ಷ ರಿಯಾಯಿತಿ ವ್ಯವಸ್ಥೆ) ಅನುಕೂಲಗಳನ್ನು ಪಡೆಯುವುದು, ನೋಡಲ್ ಏಜೆನ್ಸಿಗಳ (ಸಂಪರ್ಕ ಮಧ್ಯಸ್ಥ ನೆಲೆಗಳು) ಸ್ಥಾಪನೆ, ಪರಿಸರ ಸಂರಕ್ಷಣೆ, ಗುಣಮಟ್ಟದ ಬೀಜ ಹಾಗೂ ಇತರೆ ಕೃಷಿ ಪರಿಕರಗಳನ್ನು ಒದಗಿಸಿ ಸಹಕಾರಿ ಕೃಷಿಗಾರಿಕೆಯನ್ನು ಭೂಹಿಡುವಳಿಗಳಲ್ಲಿ ಉತ್ತೇಜಿಸುವುದು ಇತ್ಯಾದಿಗಳನ್ನೆಲ್ಲ ಸಮಿತಿ ಸಲಹೆ ಮಾಡಿದೆ. ನಂತರ ವಿಶ್ವವ್ಯಾಪಾರ ಸಂಘಟನೆಯ (WTO) ಇತಿಹಾಸ, ವಿಕಾಸ, ಮಾರ್ಪಾಟು ರೂಪ, ಪ್ರಯೋಜನ ಹಾಗು ನಮ್ಮ ಪ್ರಾದೇಶಿಕ ಅನ್ವಯ ನೆಲೆಯನ್ನು ವಿವರಿಸಿ ಸಾಂದರ್ಭಿಕ ಸಲಹೆಗಳನ್ನಿಟ್ಟಿದೆ.

1947ರಲ್ಲಿ ಜನ್ಮತಳೆದ ಗ್ಯಾಟ್ (GATT-General Agreement on Trade and Tariff) ಆರ್ಥರ್ ಡಂಕೆಲ್ ಅವರು ರೂಪಿಸಿದ ಯೋಜನೆಯ ವಿಕಸನ ರೂಪವಾದ ವಿಶ್ವ ವಾಣಿಜ್ಯ ಸಂಸ್ಥೆ (WTO) ಯಲ್ಲಿ ಆರಂಭದಿಂದಲೂ ಭಾರತವು ಗ್ಯಾಟ್‌ನ ಮಾತುಕತೆಯಲ್ಲಿ ಪಾಲ್ಗೊಂಡು ಪಾತ್ರವೊಂದಿದೆ. ವಿಶ್ವ ವ್ಯಾಪಾರ ಸಂಘಟನೆ ರಾಷ್ಟ್ರೀಯ ಸೀಮೆಗಳನ್ನು ದಾಟಿ ಸಂಕೀರ್ಣ ವ್ಯವಹಾರಗಳನ್ನು ಹೊಂದಿದೆ. ಈ ಅಂತರಾಷ್ಟ್ರೀಯ ಸಂಸ್ಥೆ ರಾಷ್ಟ್ರಗಳ ನಡುವಣ ವಾಣಿಜ್ಯ ನಿಯಮಾವಳಿಗಳ ಮೂಲಕ ವ್ಯವಹರಿಸುತ್ತದೆ. ವಿಶೇಷತಃ 2000ರಲ್ಲಿ ಜಿನೀವಾದಲ್ಲಿ ಸಮಾವೇಶಗೊಂಡ ಸಭೆಯಲ್ಲಿ ಕೃಷಿ ವ್ಯವಹಾರಗಳನ್ನು ರಕ್ಷಿಸಲು ಬೆಂಬಲಿಸಲು ಸಾಕಷ್ಟು ರಿಯಾಯಿತಿಯ ಬೆಳಸುಗಳ ಕುರಿತು ಸಮಾಲೋಚನೆ ನಡೆಯಿತು. ಈ ವ್ಯವಸ್ಥೆಯಲ್ಲಿ ಸದಸ್ಯ ರಾಷ್ಟ್ರಗಳು ವಾಣಿಜ್ಯ ಪಾಲುದಾರರಾಗಿರುತ್ತಾರೆ. ಪರಸ್ಪರ ನಿರ್ಭೇದವಾಗಿ ಪಾಲ್ಗೊಳ್ಳುತ್ತಾರೆ. ವಾಣಿಜ್ಯ ವ್ಯಾಪಾರಕ್ಕೆ ಒದಗುವ ಅಡಚಣೆಗಳನ್ನು ಅಂದರೆ ವಿಶೇಷತಃ ಆಮದು ರಫ್ತು ಸುಂಕದ (customs duties-tariffs) ದರವನ್ನು ತಗ್ಗಿಸಿ, ವ್ಯವಹಾರ ಉತ್ತೇಜಿಸುವುದಾಗಿದೆ. ಇದು ಸಮಾಲೋಚನೆಯ ಮೂಲಕ ನಡೆಯಬೇಕಾದ ಕಾರ್ಯ. ಇದು ರಾಷ್ಟ್ರಗಳ ಉತ್ಪನ್ನಗಳ ಗುಣವರ್ಧನೆಗಾಗಿ ಮುಕ್ತ ಹಾಗು ಸೂಕ್ತ ಸ್ಪರ್ಧಾ ವಾತಾವರಣವನ್ನು ಉತ್ತೇಜಿಸುತ್ತದೆ. ಗ್ಯಾಟ್ ಹಾಗು ಡಬ್ಲ್ಯು.ಟಿ.ಓ. ವಿಗೂ ಮುಖ್ಯ ವ್ಯತ್ಯಾಸವೆಂದರೆ, **ಗ್ಯಾಟ್‌ನ ಒಪ್ಪಂದಗಳು ಅಡ್‌ಹಾಕ್ ಮಾದರಿಯ ಸದ್ಯಕಾಲೀನದವು; ಡಬ್ಲ್ಯು.ಟಿ.ಓ. ನದು ಶಾಶ್ವತ ನಿಯಮ ಸ್ವರೂಪದ್ದು. ಗ್ಯಾಟ್‌ನದು ಉತ್ಪನ್ನಗಳ ಸಂಬಂಧದ ವಾಣಿಜ್ಯ ವ್ಯವಸ್ಥೆ; ಡಬ್ಲ್ಯು.ಟಿ.ಓ. ನದು ಬೌದ್ಧಿಕ ಆಸ್ತಿ ಹಾಗೂ ಸೇವಾ ಸಂಬಂಧದ ವ್ಯವಸ್ಥೆ ಹಾಗೂ ಶೀಘ್ರ ನಿರ್ಧಾರದ್ದು.** ಅದು ಗ್ಯಾಟ್‌ನದಂತೆ

ಬಹು ಸಂಖ್ಯಾತರ ಒತ್ತಾಯದಿಂದ ರೂಪುಗೊಳ್ಳುವ ಸಂದರ್ಭ ಹೊಂದಿಲ್ಲ. ಗ್ಯಾಟ್‌ನ ಸಮಾಲೋಚನಾ ಸುತ್ತಿನ ಮಾತುಕತೆಗಳು ಒಟ್ಟಾರೆ ಡಬ್ಲ್ಯು.ಟಿ.ಓ.ನ ಸಂಸ್ಥಾಪನೆಗೆ ಕಾರಣವಾದುವು. ವ್ಯಾಪಾರ ವಲಯದಲ್ಲಿ ಉದಾರೀಕರಣ ಪ್ರಕ್ರಿಯೆಯನ್ನು ವಾಸ್ತವ ನೆಲೆಗಟ್ಟಿನಲ್ಲಿ ನಿಲ್ಲಿಸಿದವು. ಕೃಷಿ ನೀತಿ ಸಂಬಂಧದಲ್ಲಿ ಹಸಿರು ಮತ್ತು ನೀಲಿಪೆಟ್ಟಿಗೆ ಸವಲತ್ತುಗಳು, ಆಮದು ರಫ್ತು ಸುಂಕುಗಳು, ಕೆಲವು ರಾಷ್ಟ್ರಗಳಿಗೆ ರಿಯಾಯಿತಿಗಳ ವಿಸ್ತರಣೆ ಇವುಗಳ ಮೂಲಕ ಹೊಂದಾಣಿಕೆಗೆ ಅನುಕೂಲ ಮಾಡಿದೆ.

ಈ ನಿಟ್ಟಿನಲ್ಲಿ ಭಾರತ ಹಾಗೂ ಕರ್ನಾಟಕದ ಕೃಷಿ ವಾಣಿಜ್ಯ ವ್ಯಾಪಾರ ಸಾಧನೆಯನ್ನು ಗಮನಿಸಬೇಕು. ಭಾರತದ್ದು 1990ರ ಮುನ್ನ ಬದ್ಧಗೊಂಡ ವಾಣಿಜ್ಯ ಯುಗವೆನ್ನಬೇಕು; ಆ ಚೌಕಟ್ಟಿನಾಚೆಗಿಲ್ಲದೆ ವ್ಯವಹಾರವದು. ಸುಮಾರು 31 ಪರ್ಸೆಂಟ್‌ನಷ್ಟು ಕೃಷಿ ಉತ್ಪನ್ನಗಳನ್ನು ರಫ್ತು ಮಾಡುವಂತಿರಲಿಲ್ಲ. ಹೀಗಾಗಿ ಕೃಷಿ ಉತ್ಪನ್ನಗಳ ಆಮದು ಮತ್ತು ರಫ್ತುಗಳು ಪ್ರಭಾವಯುತವಾಗಿ ಪ್ರಗತಿಗೊಳ್ಳಲಿಲ್ಲ. 1970–76ರ ಅವಧಿಯಲ್ಲಿ ಸುಮಾರು ಶೇ. 30ರಷ್ಟು ಬೆಳೆ ಉತ್ಪನ್ನಗಳ ಆಮದು ಇದ್ದರೆ, ಅನಂತರ ಪರಿಸ್ಥಿತಿ ಬದಲಾಗಿ ಕಾಳುಗಳ ರಫ್ತಿಗೆ ನಮ್ಮ ದೇಶ ಮುಖ್ಯ ಪಾತ್ರಧಾರಿ ಆಯಿತು. 1980ರ ದಶಕದಲ್ಲಿ ಖಾದ್ಯ ತೈಲಗಳ ಆಮದಿನ ಹೆಚ್ಚಳವಾಯಿತು. 1990–1995ರ ಅವಧಿಯಲ್ಲಷ್ಟೇ ಅಲ್ಲ, 1998ರ ವೇಳೆಗೆ ಆಮದು ಪ್ರಮಾಣ 34, 356 ಡಾಲರುಗಳಷ್ಟಿದ್ದರೆ, ರಫ್ತು ಪ್ರಮಾಣ 58, 822 ಡಾಲರುಗಳಷ್ಟಕ್ಕೇರಿತ್ತು. ಅಂದರೆ 1980ರ ದಶಕದ ಪ್ರಗತಿಯ ದುಪ್ಪಟ್ಟಿಗೂ ಮೀರಿದ ಬೆಳೆಸು ಇಲ್ಲಿ ಕಾಣಬರುತ್ತವೆ. 1999–2000ದ ವೇಳೆಗೆ ಭಾರತದ ಅಕ್ಕಿಯು ಒಟ್ಟು ರಫ್ತಿನಲ್ಲಿ ಶೇ. 44 ರಷ್ಟು ರಫ್ತಾಗುತ್ತಿತ್ತು. ಎಣ್ಣೆ ಕಾಳುಗಳು ಶೇ. 35ರಷ್ಟಿತ್ತು. 2000ದ ವೇಳೆಗೆ ರಾಜ್ಯಗಳಿಗೆ ಮೊಟ್ಟ ಮೊದಲಿಗೆ ರಫ್ತು ಬೆಳಸಿನ ಚಟುವಟಿಕೆಗಳಲ್ಲಿ ಪ್ರಮುಖಪಾತ್ರ ವಹಿಸಲು ಅವಕಾಶವಾಯಿತು. ಇದು ದೇಶದ ರಫ್ತುಗಾರಿಕೆಯ ಸಾಧನೆಯಲ್ಲಿ ಸಾಮರ್ಥ್ಯದಲ್ಲಿ (EXport performances) ಪ್ರಗತಿಯ ಪಾಲುದಾರರಾಗಲು ರಾಜ್ಯಗಳಿಗೆ ಅವಕಾಶ ನೀಡಿದಂತಾಯಿತು.

ಕರ್ನಾಟಕ ರಾಜ್ಯವು ಬೇಸಾಯ ಸೂಕ್ತ ಹವಾವಲಯಗಳನ್ನು, ವಿವಿಧ ಮಣ್ಣು ಮಾದರಿಗಳನ್ನು ಎರಡು ಮಳೆ ಹಂಗಾಮುಗಳನ್ನು ಹೊಂದಿದೆ; ನೀರಾವರಿ ಸಂಪನ್ಮೂಲವನ್ನು ಹೊಂದಿದೆ. ಈ ಕಾರಣ ಅದಕ್ಕೆ ವಿವಿಧ ಮಾದರಿ ಬೆಳೆಗಳನ್ನು ಮಳೆ ಆಧಾರಿತ ಹಾಗು ನೀರಾವರಿ ಪ್ರದೇಶಗಳಲ್ಲಿ ಬೆಳೆಯುವ ದಟ್ಟ ಪ್ರವೃತ್ತಿ ಇದೆ.

ಹೀಗಾಗಿ ರಾಜ್ಯವು ಆಹಾರಧಾನ್ಯ, ಹತ್ತಿ ಹಾಗೂ ಸಕ್ಕರೆ ಉತ್ಪನ್ನಗಳಲ್ಲಿ ಸ್ವಯಗತ ಸಾಮರ್ಥ್ಯ ಹೊಂದಿ ಸ್ವಾವಲಂಬಿ ಆಗಿದೆ. ಎಣ್ಣೆ ಬೀಜಗಳ ಉತ್ಪಾದನೆ ಮಾತ್ರ ನಮ್ಮ ಅಗತ್ಯದ ಶೇ. 50ರಷ್ಟು ಮಾತ್ರ ಸಾಧಿತವಾಗಿದೆ. ನಮ್ಮ ರಾಜ್ಯವು ಶೇ. 4.6 ರಷ್ಟು ಪ್ರಮಾಣದ ಆಹಾರ ಧಾನ್ಯಗಳನ್ನು ರಾಷ್ಟ್ರೀಯ ಆಹಾರ ಬುಟ್ಟಿಗೆ ತನ್ನ ಪಾಲು ನೀಡುತ್ತಿದೆ; ಕಾಳು, ಎಣ್ಣೆಬೀಜ, ಹತ್ತಿ, ಕಬ್ಬು, ತಂಬಾಕುಗಳನ್ನು ರಾಷ್ಟ್ರೀಯ ಉತ್ಪನ್ನ ಪ್ರಮಾಣಕ್ಕೆ ಈಚಿನ ವರ್ಷಗಳಲ್ಲಿ ಶೇ. 9.7 ರಷ್ಟು ತನ್ನ ಕೊಡುಗೆಯಾಗಿ ನೀಡುತ್ತಿದೆ. ಜೋಳ, ಅಕ್ಕಿಯ ಇಳುವರಿ ರಾಷ್ಟ್ರೀಯ ಸರಾಸರಿಗಿಂತ ಹೆಚ್ಚಿದೆ. ನಮ್ಮ ರಾಜ್ಯದ ಮುಸುಕಿನ ಜೋಳದ ಬೆಳೆ ಪ್ರಮಾಣ ಇಡಿ ದೇಶದಲ್ಲಿ ಪ್ರಥಮ ಸ್ಥಾನದಲ್ಲಿದೆ. ನಮ್ಮ ಉತ್ಪನ್ನದ ಪ್ರಚ್ಛನ್ನ ಶಕ್ತಿ ಹುಲುಸಾಗಿದ್ದರೂ, ತಾಂತ್ರಿಕಜ್ಞಾನದ ಹಾಗು ಇಳುವರಿಯ ಅನುಭವಗಳಲ್ಲಿ ಬಹಳಷ್ಟು ಅಂತರ ಅಥವಾ ತೆರಪುಗಳು ಕಾಣಬರುತ್ತವೆ. ವರ್ಗೀಕರಣ ಅಥವಾ ಮಟ್ಟವಾರು ವಿಂಗಡಣೆ, ಭಾಂಗಿತೆ (packing), ಸಂಗ್ರಹಣೆ, ಸಂಸ್ಕರಣೆ, ನಿರ್ದಿಷ್ಟ ಸ್ಥಳಬೆಲೆ, ಕಟಾವಿನಂತರ ಅಂತರ್ ಸಾಗಾಣಿಕೆ ವ್ಯವಸ್ಥೆ ವಿನ್ಯಾಸ, (ಮೂಲಸೌಕರ್ಯ ವ್ಯವಸ್ಥೆ) ಭೂ ಉತ್ಪನ್ನಗಳ ಅವ್ಯವಸ್ಥಿತ ಮಾರುಕಟ್ಟೆ, ಮಾರುಕಟ್ಟೆ ವ್ಯವಹಾರಗಳ ದುರ್ಬಲ ಮಾಹಿತಿ ಇವುಗಳ ಬಗ್ಗೆ ಲಕ್ಷ್ಯವು ಅಸಮರ್ಪಕವಾಗಿರುವ ಕಾರಣ, ರಾಜ್ಯದ ಉತ್ಪನ್ನಬಾಹುಳ್ಯ ಹಾಗೂ ರಫ್ತು ಸಾಮರ್ಥ್ಯದ ಬಳಕೆ ಆಗದಿರುವಂಥ ಪರಿಸ್ಥಿತಿ ಉಂಟಾಗಿದೆ.

ರಾಜ್ಯದ ಕೃಷಿ ವಲಯವು, ರಾಷ್ಟ್ರ ಹಾಗು ಜಗತ್ತಿನ ಆರ್ಥಿಕ ಶಕ್ತಿಯೊಡನೆ ಬಲವಾಗಿ ಬೆರಸುಗೊಳ್ಳದಿದ್ದರೆ, ವಿಸ್ತಾರಗೊಳ್ಳಲು ಸಾಧ್ಯವಾಗುವುದಿಲ್ಲ. ಉದಾರೀಕರಣ ಹಾಗು ಜಾಗತೀಕರಣದ ಸಂದರ್ಭಗಳು ಇಲ್ಲಿ ಮಾನಿತಗೊಳ್ಳಬೇಕು. ಕರ್ನಾಟಕದ ಕೃಷಿ ಉತ್ಪನ್ನಗಳ ರಫ್ತಿನ ಪ್ರಮಾಣ 1994–2000ದ ಅವಧಿಯಲ್ಲಿ 4 ಸಾವಿರ ಕೋಟಿಯಿಂದ ಸುಮಾರು 7200 ಕೋಟಿಗೆ ಏರಿರುವುದು, ಕಾಫಿಯು ಅದರ ಮುಖ್ಯ ರಫ್ತು ಸರಕಾಗಿ, ಗೇರುಬೀಜವೂ, ಸಂಸ್ಕರಿತ ವಸ್ತುಗಳೂ ರಫ್ತಾಗುತ್ತಿರುವುದು ಈ ಪ್ರಗತಿಗೆ ಕಾರಣವಾಗಿದೆ. ಹೀಗಾಗಿ ಕರ್ನಾಟಕ, ಭಾರತದ ಕೃಷಿ ಬೆಳೆಯ ವಾಣಿಜ್ಯ ವ್ಯವಹಾರದಲ್ಲಿ ಪಾಲ್ಗೊಳ್ಳುವ ಪ್ರಮುಖ ರಾಜ್ಯಗಳಲ್ಲಿ ಒಂದಾಗಿದೆ.

ವಿಶ್ವವಾಣಿಜ್ಯ ಸಂಸ್ಥೆ (ವಿಶ್ವ ವ್ಯಾಪಾರ ಸಂಘಟನೆ WTO) ಯು ಗ್ಯಾಟ್‌ನ ರಚನಾ ಸ್ವರೂಪವನ್ನು ಒಳಗೊಂಡಿದೆ. ಕೃಷಿ ಸಂಬಂಧದಲ್ಲಿ, ಮಾರುಕಟ್ಟೆ ಸಾನ್ನಿಧ್ಯ, ಸ್ಥಳೀಯ ಬೆಂಬಲ ಹಾಗು ರಫ್ತು ಸಬ್ಸಿಡಿಗಳು ಹಾಗು ಕೃಷಿ ಉತ್ಪನ್ನಗಳ ಮೇಲಿನ

ಆಮದು ರಫ್ತು ಸುಂಕದರಗಳು (Tariffs) ಹಾಗೂ ಇಳಿಸಿದ ಆ ದರಗಳು ಇತ್ಯಾದಿಗಳನ್ನು ಲಕ್ಷ್ಯಕ್ಕೆ ತೆಗೆದುಕೊಳ್ಳಬೇಕು. ಅದರಿಂದ ವ್ಯಾಪಾರದ ಅವಕಾಶಗಳ ಹೆಚ್ಚಳಕ್ಕೆ ಕಾರಣವಾಗುತ್ತದೆ. ಸ್ಥಳೀಯ ಬೆಂಬಲಗಳಂತು **'ಹಸಿರುಪೆಟ್ಟಿಗೆ'** (green box) ನೀತಿಗಳ ಮೇಲೆ ವಾಣಿಜ್ಯ ವಿಷಯಗಳ ಮೇಲೆ ಪ್ರಭಾವ ಬೀರಬಲ್ಲವು. ಈ 'ಹಸಿರುಪೆಟ್ಟಿಗೆ' ನೀತಿ ಯೋಜನೆಯಲ್ಲಿ ಅಭಿವೃದ್ಧಿಶೀಲ ರಾಷ್ಟ್ರಗಳ ಸಂಬಂಧದಲ್ಲಿ ಜಾರಿಗೊಳಿಸುವ ವಿಷಯಗಳು ಇಂತಿವೆ; ಸಂಶೋಧನೆಗೆ ಅವಕಾಶ, ಕೀಟ ಹಾಗು ರೋಗಬಾಧೆಗಳ ನಿಯಂತ್ರಣ, ತರಬೇತಿ, ಆಹಾರ ಸಂರಕ್ಷಣೆಗೆ ವ್ಯವಸ್ಥೆ, ಬೆಳೆಗಾರರಿಗೆ ನೇರ ಹಣಪಾವತಿ, ಬೆಳೆ ವಿಮಾಯೋಜನೆ, ಹಾನಿನಷ್ಟಗಳನ್ನು ಭರಿಸಿ ಪರಿಹಾರ ನೀಡುವುದು. ಇನ್‌ಕಮ್ ಸೇಫ್ಟಿನೆಟ್ (ಆದಾಯ ಸಂರಕ್ಷಣಾವ್ಯೂಹ) ಚಟುವಟಿಕೆಗಳು, ಮಾರುಕಟ್ಟೆ ಹಾಗು ಅಂತರ್ ಅಗತ್ಯಗಳ, ಪರಿಕರಗಳ ವ್ಯವಸ್ಥೆ, ಸಬ್ಸಿಡಿ ಹೂಡಿಕೆ ಹಾಗು ಸಾಗುವಳಿ ಮಗ್ನತೆಗೆ ಬಡರೈತರಿಗೆ ನೆರವು ಇತ್ಯಾದಿಗಳ ಮೇಲಿನ ಖರ್ಚುವೆಚ್ಚಗಳನ್ನು ನೇರ್ಪುಗೊಳಿಸುವುದಾಗಿದೆ. **'ನೀಲಿ ಪೆಟ್ಟಿಗೆ'**(Blue box) ನೀತಿ ನಿಯೋಜನೆಯು ಇಂತಿದೆ: ಮಿತಿ ಉತ್ಪನ್ನ ಕಾರ್ಯಗಳಿಗೆ ನೇರ ಹಣ ಪಾವತಿ, ಅಭಿವೃದ್ಧಿಶೀಲ ದೇಶಗಳಲ್ಲಿ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿಗಳ ಉತ್ತೇಜನಕ್ಕಾಗಿ ಸರ್ಕಾರಿ ನೆರವಿನ ಕಾರ್ಯಗಳನ್ನು ಹಮ್ಮಿಕೊಳ್ಳುವುದು, ಆದಾಯ ಬೆಂಬಲ, ಪರಿಹಾರ ಹಾಗು ಪ್ರಾದೇಶಿಕ ಗ್ರಾಮೀಣ ಕಾರ್ಯಕ್ರಮಗಳಿಗೆ ನಿಧಿ ನೆರವು, ಹಾಗು ಒಟ್ಟಾರೆ ಕೃಷಿ ಉತ್ಪನ್ನಗಳಿಗೆ ಒಂದು ನಿರ್ದಿಷ್ಟ ಪ್ರಮಾಣದಲ್ಲಿ ಬೆಂಬಲ ಇತ್ಯಾದಿಗಳು ಇಲ್ಲಿ ಕಾಣಬರುತ್ತದೆ. ಇದೂ ಸಬ್ಸಿಡಿ ನೀಡಿಕೆಯ ಒಂದು ರೂಪ. ಸಬ್ಸಿಡಿ ನೀಡುವಲ್ಲಿ ಅದು ಅನ್ಯಪರಿಣಾಮಗಳಿಗೆ ಎಡೆಯಾಗಬಾರದು. ಬೆಂಬಲ ಹಾಗೂ ರಕ್ಷಣೆ ನೀಡಿಕೆ ಕ್ರಮಾನುಗತವಾಗಿ ಕಡಿಮೆಗೊಳ್ಳುತ್ತ ಬರಲು ಪ್ರಯತ್ನಿಸಬೇಕು. ಈ ಬಗ್ಗೆ ಸಮಾಲೋಚನೆಗಳು ನಡೆಯಬೇಕು. ಡಬ್ಲ್ಯೂಟಿಓ ದ ಅಡಿ ಕೃಷಿ ಸಂಬಂಧದ ಒಪ್ಪಂದಗಳ ಮೂರು ಪ್ರಮುಖ ಘಟಕಗಳು ಅಂದರೆ ಮಾರುಕಟ್ಟೆ ಸುಲಭ ಸಾನ್ನಿಧ್ಯ (Market Access) ರಫ್ತು ಸ್ಪರ್ಧೆ ಹಾಗೂ ಪ್ರಾದೇಶಿಕ ಬೆಂಬಲ ನೀತಿಯೇ ಆಗಿವೆ. ಅಭಿವೃದ್ಧಿಶೀಲ ರಾಷ್ಟ್ರಗಳಿಗೆ ಅಭಿವೃದ್ಧಿಗೊಂಡ ರಾಷ್ಟ್ರಗಳಿಗಿಂತ ಈ ಸೂಚನಾ ಘಟಕಗಳನ್ನು ಸಮನ್ವಯಗೊಳಿಸಿಕೊಳ್ಳಲು ಹೆಚ್ಚು ಕಾಲಾವಕಾಶ ಇದೆ. ಸಬ್ಸಿಡಿಗಳನ್ನು ಸದಾ ಅವಲಂಬಿಸುವ ಪ್ರವೃತ್ತಿಯನ್ನು ಕಡಿಮೆಗೊಳಿಸಬೇಕೆಂಬ ಪ್ರಯತ್ನಕ್ಕೆ ಅಭಿವೃದ್ಧಿಗೊಂಡ ರಾಷ್ಟ್ರಗಳಿಗೆ 1995 ರಿಂದ 2000 ದವರೆಗೆ, ಅಭಿವೃದ್ಧಿಗೊಳ್ಳುತ್ತಿರುವ ರಾಷ್ಟ್ರಗಳಿಗೆ 1995 ರಿಂದ 2004 ರವರೆಗೆ ಅವಕಾಶವನ್ನು ನೀಡಿದೆ. ಆಹಾರ ಸಂರಕ್ಷಣೆ, ಪ್ರಾಣಿ ಹಾಗು ಸಸ್ಯಾರೋಗ್ಯ ಕುರಿತ ನಿಯಮಾವಳಿಗಳ ಬಗ್ಗೆಯೂ

ಇಲ್ಲಿ ಗಮನ ಹರಿಸಿದೆ. ಟೋಕಿಯೋ ಸುತ್ತಿನ ಮಾತುಕತೆಗಳಲ್ಲಿ, ಯಾವುದೇ ಒಪ್ಪಂದಗಳ ಮೇಲಿನ ಅಡ್ಡಿ ಆತಂಕಗಳ ಬಗ್ಗೆ ಸ್ಪಷ್ಟನೆ ನಿಡಲಾಗಿದೆ. ಹಾಗು ಅಂತಾರಾಷ್ಟ್ರೀಯ ಮಟ್ಟವನಾದರಿಯನ್ನು ಸಾಧ್ಯವಾಗುವ ಕಡೆ ಅನ್ವಯಿಸಿಕೊಳ್ಳಬೇಕೆಂದಾಗಿದೆ. ಆದರೆ ಈ ಪ್ರಯತ್ನದಲ್ಲಿ ಆಯಾ ದೇಶದಮಟ್ಟ ಮಾದರಿಯ ರಕ್ಷಣೆಗೆ ಬಾಧಕವಾಗದಂತೆ ನೋಡಿಕೊಳ್ಳಲವಕಾಶವಿದೆ. ಹೀಗೆಯೇ ಹೂಡಿಕೆಗಳು, ಆಮದು, ರಫ್ತು ಸರಕುಗಳ ರಾಶಿ ಸುರಿತ (ಡಂಪಿಂಗ್) ಹಾಗೂ ಅವುಗಳ ಮೇಲಿನ ಸುಂಕ, ರಕ್ಷಣೆ ಪಾರದರ್ಶಕತೆ, ಬೌದ್ಧಿಕ ಆಸ್ತಿಯ ಹಕ್ಕುಗಳು, ವಿವಾದಗಳ ಪರಿಹಾರಗಳಿಗೆ ಅನುವುಗೊಂಡ ನೀತಿ ನಿಯಮಗಳು, ವ್ಯಾಪಾರ ವಾಣಿಜ್ಯ ನೀತಿಯ ಪುನರ್ ವಿಮರ್ಶೆ, ಕೃಷಿ ಮಾರುಕಟ್ಟೆಯತ್ತ ಒಲವು, ರೈತರ ರಕ್ಷಣೆಯಲ್ಲಿ ದೇಶದ ಪಾತ್ರ ಇತ್ಯಾದಿಗಳು ಅಡಕವಾಗಿವೆ. ವಿಶೇಷತಃ ಕೃಷಿ ಒಪ್ಪಂದಗಳ ಸಂದರ್ಭದಲ್ಲಿ, ಉತ್ಪನ್ನವನ್ನು ಉತ್ತೇಜಿಸುವ ಬೆಂಬಲಿತ ಕಾರ್ಯಕ್ರಮಗಳು ಹಾಗು ಅವುಗಳ ನೇರ ಪರಿಣಾಮವಿಲ್ಲದ ಕಾರ್ಯಕ್ರಮಗಳ ನಡುವೆ ವಿಭಿನ್ನತೆಯನ್ನು ಗುರುತಿಸಿ ಡಬ್ಲ್ಯುಟಿಓನ ಸದಸ್ಯ ರಾಷ್ಟ್ರಗಳು ಬೆಂಬಲದ ಪ್ರಮಾಣವನ್ನು ಲೆಕ್ಕಾಚಾರ ಮಾಡಿವೆ. ಕೃಷಿ ಸಂಬಂಧದ ಒಪ್ಪಂದದಲ್ಲಿ (AOA) ಮೂರು ಬಗೆಯ ಸಬ್ಸಿಡಿಗಳನ್ನು ವಿವರಿಸಲಾಗಿದೆ. ವಾಣಿಜ್ಯ ವ್ಯವಹಾರಗಳ ಮೇಲೆ ನೇರ ಪರಿಣಾಮ ಉಂಟುಮಾಡುವ ಪ್ರಾಹಿಬಿಟೆಡ್ ಸಬ್ಸಿಡಿಗಳು (ನಿಷೇಧಿತ ಸಬ್ಸಿಡಿಗಳು); ಒಪ್ಪಂದಕ್ಕೆ ಸಹಿಗೈದಿರುವ ರಾಷ್ಟ್ರಗಳ ವ್ಯವಹಾರಗಳ ಮೇಲೆ ಪ್ರತಿಕೂಲ ಪರಿಣಾಮವನ್ನುಂಟುಮಾಡುವ ಆಕ್ಷನಬಲ್ ಸಬ್ಸಿಡಿಗಳು (Actionable subsidies ಪ್ರತಿಕ್ರಿಯಾತ್ಮಕ!); ಔದ್ಯೋಗಿಕ ಸಂಶೋಧನೆ ಹಾಗು ಸ್ಪರ್ಧಾಪೂರ್ವ ಪ್ರಗತಿಪರ ಸಬ್ಸಿಡಿಗಳಿಗೆ ನೆರವಾಗುವ ನಿರ್ದಿಷ್ಟ ಅಥವಾ ಅನಿರ್ದಿಷ್ಟ ಸಬ್ಸಿಡಿಗಳೆನಿಸುವ ನಾನ್ ಆಕ್ಷನಬಲ್ ಸಬ್ಸಿಡಿಗಳು (ನಿಗದಿತ ಸಬ್ಸಿಡಿ ಅಥವಾ ಸ್ಥಿರಸಬ್ಸಿಡಿ!) ಇತ್ಯಾದಿಗಳು ಇವಾಗಿದೆ. ಇದ್ದಕ್ಕಿದ್ದಂತೆ ಬೆಳೆ ಧಾರಣೆ ಕುಸಿತ ಅಥವಾ ಏರಿಕೆ, ಆಮದು ಸಂದರ್ಭದಲ್ಲಿ ಆದಾಗ ರೈತರ ಹಿತ ಕಾಪಾಡಲು ವಿಶೇಷ ರಕ್ಷಣಾತ್ಮಕ ಅವಕಾಶಗಳನ್ನು ಕಲ್ಪಿಸಲಾಗುವುದು.

ಕರ್ನಾಟಕದ ಸಂದರ್ಭದಲ್ಲಿ ಕೃಷಿ ವಾಣಿಜ್ಯ ವ್ಯವಹಾರಗಳ ಮುಕ್ತತೆಯಲ್ಲಿ! (Liberalising) ಅಂತರ್ ಪ್ರಾದೇಶಿಕ ಹಾಗೂ ಒಳಪ್ರಾದೇಶಿಕ ಪರಿಣಾಮಗಳು ದಟ್ಟವಾಗಿರುತ್ತವೆ. ಅಂತಾಗಿ ಕಚ್ಚಾವಸ್ತುವಿನ ಬೆಳಸಿನ ಕೇಂದ್ರಗಳನ್ನು, ಕಚ್ಚಾವಸ್ತುವಿನ ಸರಬರಾಜನ್ನು ಸಂಸ್ಕರಣೆಗೆ ಒದಗಿಸಲೋಸುಗ ಸ್ಥಾಪಿಸಬೇಕು. ಇದು ಸೂಕ್ತ ಪ್ರಮಾಣ ಹಾಗೂ ಗುಣಮಟ್ಟ ಹೊಂದಿರುವಂಥದ್ದು. ನೀರಿನ ಅಲಭ್ಯತೆ, ಅನಿಯತ

ವಿದ್ಯುತ್ ಸರಬರಾಜು, ಒಳ್ಳೆಯ ರಸ್ತೆಯ ಸೌಕರ್ಯದ ಅಭಾವ, ಸುಗ್ಗಿಕಾಲದ ಸೌಕರ್ಯ ರಾಹಿತ್ಯತೆ, ವಂಚಿತ ಶೀಥಲಾಗಾರ ಇತ್ಯಾದಿ (ಮೂಲಸೌಕರ್ಯಗಳ) ವ್ಯವಸ್ಥಾರಚನೆಗಿರುವ ಅಡಚಣೆಗಳನ್ನು ನಿವಾರಿಸಬೇಕು. ಎ.ಪಿ.ಎಂ.ಸಿ. ಸೆಸ್ ಅನ್ನು ಇತರೇ ಸೆಸ್‌ಗಳೊಡನೆ ವಸೂಲಿ ಮಾಡುತ್ತಿರುವುದನ್ನು ನಿಲ್ಲಿಸಿದರೆ ರಫ್ತು ಸಂದರ್ಭಕ್ಕೆ ಉತ್ತೇಜನ ನೀಡಿದಂತಾಗುತ್ತದೆ. ಅಲ್ಲದೆ ಜಗತ್ತಿನ ಮಾರುಕಟ್ಟೆ ಹಾಗು ಸ್ಥಳೀಯ ರಫ್ತುದಾರರ ನಡುವೆ, ಮಾಹಿತಿ ಸಂವಹನದ ಕೊರತೆಯ ಕಾರಣ, ಬಹಳ ಕಂದರ ಕಾಣುತ್ತದೆ. ಈ ಲೋಪವನ್ನು ಸರಿಪಡಿಸಬೇಕು. ರಫ್ತುದಾರಿಕೆ ಸಾಮರ್ಥ್ಯವನ್ನು (Export performance) ಹೆಚ್ಚಿಸಲು, ಲಘುಕಾಲೀನ, ಮಧ್ಯಾವಧಿ ಹಾಗು ದೀರ್ಘಕಾಲೀನ ಯೋಜನೆಗಳನ್ನು ರೂಪಿಸಿಕೊಳ್ಳಬೇಕು. ಕರ್ನಾಟಕದ ಭರವಸೆದಾಯಕ ರಫ್ತು ಸರಕಾದ ಪ್ರಮುಖ ಬೆಳೆ ಈರುಳ್ಳಿಯಂಥ ಇತರೆ ಬೆಳೆಯನ್ನು (ಮಾವು, ದಾಳಿಂಬೆ) ಇತರ ಈ ಸಂದರ್ಭಕ್ಕೆ ಬಳಸಿಕೊಳ್ಳಬಹುದು.

ಕೊನೆಯದಾಗಿ WTO Cell ನೀಡಿರುವ ಸಲಹೆಗಳು ಸಾರಾಂಶದಲ್ಲಿ ಇಂತಿವೆ; ಕೃಷಿಗಾರಿಕೆ ರಾಜ್ಯಗಳ ಜೀವನಾಧಾರಿತ ವಿಷಯ. ಕೇಂದ್ರ ಸರ್ಕಾರವು ಕೃಷಿ ವಲಯದ ನೀತಿ ನಿರೂಪಣೆ, ಯೋಜನೆಗಳನ್ನು ರೂಪಿಸುವಲ್ಲಿ ರಾಜ್ಯಗಳ ಪ್ರತಿನಿಧಿಗಳನ್ನು ಕರೆಸಿಕೊಂಡು ಸಮಾಲೋಚಿಸಬೇಕು. ಅದರಿಂದ ಆಯಾ ರಾಜ್ಯಗಳ ಕೃಷಿ ಪರಿಸ್ಥಿತಿಗಳನ್ನು ವಿವರಿಸಲು ಹಾಗೂ ಅವುಗಳ ಹಿತಾಸಕ್ತಿಗಳನ್ನು ರಾಷ್ಟ್ರೀಯ ಕರ್ತವ್ಯಗಳ ಜೊತೆ ಸಮನ್ವಯಗೊಳಿಸಲನುಕೂಲವಾಗುತ್ತದೆ. ರಾಜ್ಯ ಸರ್ಕಾರಗಳು ಜಿಲ್ಲಾಮಟ್ಟದಿಂದ ತಮ್ಮ ಕೃಷಿ ಯೋಜನೆಗಳನ್ನು ಸಿದ್ಧಗೊಳಿಸಬೇಕು. ರಫ್ತು ಸಾಮರ್ಥ್ಯದ ಅಭಿವೃದ್ಧಿ ಹಾಗೂ ತತ್ಸಂಬಂಧೀ ಅಂತರ್ ಸಾಧನಗಳ ಸ್ವರೂಪ ನಿರ್ಮಿತಿಗಳ ನಿರೂಪಣೆಗೆ ಪ್ರಾಕೃತಿಕ ಹಾಗೂ ಮಾನವ ಸಂಪನ್ಮೂಲಗಳ ಬಳಕೆಯ ಸೂಕ್ತ ನಿರ್ವಹಣೆ ಆಗಬೇಕು. ಕರ್ನಾಟಕವು ವಿಶೇಷತಃ ತೋಟಗಾರಿಕಾ ಉತ್ಪನ್ನಗಳ ಹಾಗೂ ಸಂಸ್ಕರಿತ ಉತ್ಪನ್ನಗಳಲ್ಲಿ ಮಾಡಿದ ರಫ್ತು (ಬಾಹುಳ್ಯ) ವಿಪುಲತೆಗೆ ಕಾರಣ ಕಳೆದ ಮೂರು ವರ್ಷಗಳಲ್ಲಿ ಅದು ಗಮನಾರ್ಹ ಪ್ರಗತಿ ತೋರಿರುವುದಾಗಿದೆ. ಈ ಬಗ್ಗೆ ವಿಶೇಷ ಗಮನ ಹರಿಸಬೇಕಾಗಿದೆ. ವಿಶೇಷತಃ ಮುಸುಕಿನ ಜೋಳ, ಶೇಂಗಾ, ಮೆಣಸಿನಕಾಯಿ, ಮಾವು, ದಾಳಿಂಬೆ, ದ್ರಾಕ್ಷಿ, ಗೇರುಬೀಜ, ಕಾಫಿ, ಈರುಳ್ಳಿ, ಆಲೂಗೆಡ್ಡೆ ಇತ್ಯಾದಿ ಬೆಳೆ ಸರಕುಗಳಿಗೆ (ಕಮೋಡಿಟಿ ಬೋರ್ಡ್) ಸರಕು ಮಂಡಳಿಯನ್ನು ರೂಪಿಸಿ ಮಾರುಕಟ್ಟೆಯ ವಾತಾವರಣವನ್ನು ಘೋಷಿಸಬೇಕು. ಇದಕ್ಕಿದ್ದಂತೆಯೆ ಬೆಲೆ ಕುಸಿತದ ಸಂದರ್ಭದಲ್ಲಿ ಸುಂಕ ರಿಯಾಯಿತಿಗಳ ಉಪಯೋಗ

ಪಡೆಯಬೇಕು. ಆಮದು ಸುಂಕ ನಿರ್ಧಾರದ ಸಂದರ್ಭದಲ್ಲಿ ಭಾರತ ಸರ್ಕಾರವು ಬೆಳೆಗಳ ಸ್ಥಳೀಯ ಉತ್ಪನ್ನ ವೆಚ್ಚವನ್ನು ಗಮನದಲ್ಲಿರಿಸಿಕೊಳ್ಳಬೇಕು; ಬೆಳೆಗಾರರ ಜೀವನ ಮಟ್ಟವನ್ನು ಲಕ್ಷದಲ್ಲಿರಿಸಿಕೊಳ್ಳಬೇಕು. WTO ನ ಸದಸ್ಯ ರಾಷ್ಟ್ರವಾಗಿ, ವಾಣಿಜ್ಯ ವಾತಾವರಣ ನಿರ್ಮಿಸಿ ಅದರ ಉಪಯೋಗ ಪಡೆಯಬೇಕು. ಅದಕ್ಕಾಗಿ (ರಾಷ್ಟ್ರ) ಮೇಲ್ಮಟ್ಟದಲ್ಲಿ ಕೇಂದ್ರ ಕೃಷಿಸಚಿವಾಲಯ, ರಾಜ್ಯಮಟ್ಟದಲ್ಲಿ ರಾಜ್ಯ ಕೃಷಿಸಚಿವಾಲಯ ಹೀಗೆ ರಫ್ತು ಸಂಪರ್ಕಗಳಿಗೆ ಅನುಕೂಲಿಸಲು ಎರಡು ಸಂಪರ್ಕ ಶಾಖೆಗಳಿರಬೇಕು. ಇದರ ಸಂಪರ್ಕ ನಿರ್ವಹಣೆಗೆ ಕರ್ನಾಟಕ ಸರ್ಕಾರ ರೂಪಿಸಿರುವ 'WTO cell' ನಂತಹ ತಜ್ಞ ಮಧ್ಯಸ್ಥ ಸಮಿತಿ ಇರಬೇಕು. ಇದು ಮಾಹಿತಿ ಸಂಗ್ರಹ ಹಾಗು ಪ್ರಸಾರ ಕಾರ್ಯವನ್ನು ಸಂಬಂಧಿಸಿದವರಿಗೆ ಅನ್ವಯವಾಗಿರುವಂತೆ ಮಾಡಬೇಕು. ಕೋಳಿಸಾಕಾಣಿಕೆ, ಹೈನುಗಾರಿಕೆ, ಜೇನು ಸಾಕಾಣಿಕೆ, ಪರ್ಯಾಯ ಬೆಳೆಗಳು, ಜೈವಿಕ ತಂತ್ರಜ್ಞಾನ, ಸುಗ್ಗಿಯ ನಂತರದ ತಾಂತ್ರಿಕ ಕೈಂಕರ್ಯ, ಪರಿಸರ, ಪ್ರಾದೇಶಿಕ ವಾಣಿಜ್ಯ ಒಪ್ಪಂದಗಳು ಹಾಗೂ ಪದ್ಧತಿಗಳು, ಬೌದ್ಧಿಕ ಆಸ್ತಿಗಳ ಹಕ್ಕು ಇತ್ಯಾದಿಗಳ ಕುರಿತೆಲ್ಲ ವಿಶೇಷ ಅಧ್ಯಯನವನ್ನು, ಮಾರುಕಟ್ಟೆ ಹಾಗು ರಫ್ತುಗಾರಿಕೆಯ ಪ್ರಗತಿಯ ಸಾಧನವಾಗಿ ಈ ಸೆಲ್ ಕೈಗೊಳ್ಳಬೇಕು. ಕೃಷಿ ಹಾಗೂ ವ್ಯಾಪಾರೋದ್ಯಮಿಗಳಿಗೆ ಅಗತ್ಯವಾದ ಮಾಹಿತಿಯನ್ನು ಲಘು ಪ್ರಕಟಣೆಗಳ ಮೂಲಕ ಈ ಸೆಲ್ ನೀಡಬೇಕು, ಎಂದೂ ಹೇಳಿದೆ.

ಸಾರಾಂಶವಾಗಿ ಈ ವರದಿಯ ಕುರಿತು ಹೇಳುವುದಾದರೆ ವಿಶ್ವ ವ್ಯಾಪಾರ ಸಂಘಟನೆಯ (WTO) ಧನಾತ್ಮಕ ಅಂಶಗಳನ್ನು ದಟ್ಟವಾಗಿ ಗಮನದಲ್ಲಿಟ್ಟುಕೊಂಡು ಪ್ರಯೋಜನಗಳನ್ನು ಪ್ರತಿಪಾದಿಸಿದೆ. ಕೃಷಿ ಮಾರುಕಟ್ಟೆಯ ತಾಂತ್ರಿಕ ಬಾಹುಳ್ಯವನ್ನು ವಿಸ್ತಾರವಾಗಿ ಚರ್ಚಿಸಿದೆ. ಅನ್ವಯಿಕ ಪರಿಣಾಮಗಳನ್ನು ಸೂಚಿಸಿದೆ. ದೇಶೀಯ ನಿಲುಮೆಯು ಜಾಗತೀಕರಣ ಸಂದರ್ಭಕ್ಕೆ ತಾಗಿಕೊಳ್ಳಬೇಕೆಂಬುದೂ ಇಲ್ಲಿನ ಪ್ರತಿಪಾದನೆಯಲ್ಲಿದೆ. ಕರ್ನಾಟಕವೂ WTO ಸೆಲ್ ನಂಥ ಸಮಿತಿಯನ್ನು ರೂಪಿಸಿರುವ ಬಗ್ಗೆ ಹಾಗು ಅದರ ಪ್ರಭಾವ ಪೂರ್ಣ ಪಾತ್ರವನ್ನು ವಿವರಿಸಿದೆ. ರೈತರು ಜಾಗತೀಕರಣದ ಜಾಗೃತಿಗೆ ಸಜ್ಜಾಗಬೇಕೆಂದು WTO ನ ಸಂದರ್ಭದೊತ್ತಡವನ್ನೂ ತಿಳಿಸಿದೆ. ಈ ಬಗೆಗೆ ಇನ್ನೊಂದು ಆಯಾಮ ಮುಂದಿನಂತಿದೆ.

**ವಿಭಿನ್ನ ಚಿಂತನೆಗಳು:** ಅಭಿವೃದ್ಧಿಗೊಂಡ ಸದಸ್ಯ ರಾಷ್ಟ್ರಗಳು, ಅಭಿವೃದ್ಧಿ ಶೀಲ ರಾಷ್ಟ್ರಗಳ ನಿರ್ಧಾರಗಳ ಮೇಲೆ ಸ್ಥಳೀಯ ಇತಿಮಿತಿಗಳನ್ನು ಗಮನಿಸದೆ

ಹಾಕುತ್ತಿರುವ ಪ್ರಭಾವವನ್ನು ಇಂದು ಗಮನಿಸಿದರೆ, ಅವುಗಳ ಪಾರದರ್ಶಕತೆಯ ಬಗ್ಗೆ ಅಸಹಾಯಕವಾಗಿ ಅನುಮಾನಿಸುವಂತಾಗಿದೆ. ಸ್ಪರ್ಧೆ, ಸಮಾನಶಕ್ತರಲ್ಲಿ ನಡೆಯಬೇಕು. ಬದಲು ಬೆಂಬಲಿತ ಶಕ್ತಿ ಹಾಗೂ ನಿರ್ಬೆಂಬಲಿತ ಶಕ್ತಿಗಳ ನಡುವೆ ಮಾರುಕಟ್ಟೆ ಹಾಗೂ ಸಬ್ಸಿಡಿ ಪ್ರೇರಕ ಸ್ಪರ್ಧೆಗಳು ನಡೆಯುವಂತೆ ತೋರುತ್ತವೆ. ಈ ಸ್ಥಿತಿಯಲ್ಲಿ ಪ್ರಭಾವಶಾಲಿ ರಾಷ್ಟ್ರಗಳು (ಹಣವಂತ) ಹೆಚ್ಚು ಪ್ರಯೋಜನ ಪಡೆದುಕೊಳ್ಳುತ್ತಲೇ ಹೋಗಿ ತಮ್ಮಲ್ಲಿನ ರೈತರ ಹಿತಾಸಕ್ತಿಗಳತ್ತ ಹೆಚ್ಚು ಮೃದು ಧೋರಣೆ ಅನುಸರಿಸಿರುವುದು ಇಂದಿಗೆ ಎದ್ದು ಕಾಣುವ ದೃಶ್ಯವಾಗಿದೆ. ಎಷ್ಟೇ ಮಟ್ಟಿಗೆ ರಾಷ್ಟ್ರ ಹಾಗೂ ರಾಜ್ಯಗಳ ಸ್ಥಳೀಯ ರೈತರ ಬಗ್ಗೆ ಆಕರ್ಷಕ ಸವಲತ್ತುಗಳ ಉದಾಹರಣೆ, ಅವಕಾಶಗಳನ್ನು ಉದ್ಧೃತ ಮಾಡಿರಬಹುದು. ಆದರೆ ಅವುಗಳು ಕೇವಲ ತಾಂತ್ರಿಕ ಆರ್ಥಿಕ ಮಾಹಿತಿಗಳು, ಯಾಂತ್ರಿಕ ನಡವಳಿಕೆಗಳಾಗಬಾರದು. ಮುಗ್ಧ ರೈತರ ಪ್ರಗತಿಗಾಗಿ ಕಾಳಜಿಗಳಷ್ಟೇ ಮುಖ್ಯವಲ್ಲ; ಆರ್ಥಿಕ ಜ್ಞಾನವಷ್ಟೇ ಮುಖ್ಯವಲ್ಲ. ಅವರು ಬದುಕಿ ಬಂದ ಬಾಳಿದ ಬಾಳುತ್ತಿರುವ ಬಾಳಿನ ಅರ್ಥೈಸುವಿಕೆಯೂ ಮುಖ್ಯ. ಭವಿಷ್ಯತ್ತಿಗೆ ಜಾಗತೀಕರಣವನ್ನು ನೆಲದ ಸಂಸ್ಕೃತಿಗೆ ಅನ್ವಯವಾಗಿಸುವುದೂ ಮುಖ್ಯ. ಈ ಜಾಗತೀಕರಣದಲ್ಲಿ ವಿಶ್ವವೇ ಒಂದು ಹಳ್ಳಿ ಎಂಬ ಪರಿಕಲ್ಪನೆಯನ್ನು ಹೊಂದಿರುವರುಂಟು. ಅದಕ್ಕೆ ತಾಗಿದಂತೆ ಉದಾರೀಕರಣ, ಖಾಸಗೀಕರಣ ನೆಲೆಗಳುಂಟು. WTO ಸಂಘಟನೆ ಕೃಷಿಗಿಂತ, ಔದ್ಯಮಿಕ ಸಂದರ್ಭಗಳಿಗೆ (ಕೈಗಾರಿಕೀಕರಣ) ಹೆಚ್ಚು ಪ್ರಸ್ತುತ ಎಂದಿರುವುದುಂಟು. ದೇಶೀಯವಾದದಲ್ಲಿ; ಹಳ್ಳಿಯೇ ಜಗತ್ತೆನಿಸಲಿ. ಕೃಷಿ ಸಂಪನ್ಮೂಲಗಳನ್ನು ಹೊಂದಿರುವವರು ಬೆಳೆಗಾರರು. ಅವರ ಸಂಪನ್ಮೂಲಗಳನ್ನು ಕಸಿದುಕೊಂಡು ಇರುವವರು ಸಂಪತ್ತುಗಾರರಾಗಿದ್ದಾರೆ. ಆದ್ದರಿಂದ ಅವರೇ ಹಳ್ಳಿಗೆ ಬಂದು ಹಳ್ಳಿಯ ಪ್ರಗತಿಗೆ ದೇಣಿಗೆ ಕೊಡಬೇಕು ಎಂಬ ವಾದವೂ ಇದೆ.

ಪ್ರೊ.ಎಂ.ಡಿ. ನಂಜುಂಡಸ್ವಾಮಿಯವರು ಗ್ಯಾಟ್ ಸೂಚನಾವಳಿ ಕುರಿತಂತೆ, ಹೊಸ ಪರಂಗಿ ಕಾನೂನುಗಳು, ನಮ್ಮನ್ನು ವಂಚಿಸಿ ತಾವು ಲಾಭ ಮಾಡಿಕೊಳ್ಳಲು ಜಾರಿಗೆ ಬಂದಿವೆ. ಮೋಸದ ಮಾರುಕಟ್ಟೆಯ ಮೂಲಕ ರೈತರನ್ನು ವಂಚಿಸುತ್ತಿವೆ, ನಮ್ಮನ್ನು ಲೂಟಿ ಮಾಡುತ್ತವೆ. ಹೀಗಾಗಿ ಹಳ್ಳಿಯ ಕೃಷಿ ದುಬಾರಿ ಆಗಿದೆ. ಅನಗತ್ಯವಾದ ಪರಂಗಿಗಳ ಯಂತ್ರಗಳು ನಮ್ಮಲ್ಲಿಗೆ ಬರುತ್ತಿವೆ. ಇದರಿಂದ ಮೊದಲು ನಾಶವಾಗುವುದು ಹಳ್ಳಿಗಳ ಕೃಷಿ ಸಂಸ್ಕೃತಿ, ಎಂದೆಲ್ಲ ಕಾಸೆಟ್ ಭಾಷಣಗಳಲ್ಲೂ, ವಿವಿಧ ವೇದಿಕೆಗಳಲ್ಲೂ ಅವರು ತಮ್ಮ ಅಭಿಪ್ರಾಯಗಳನ್ನು ವ್ಯಕ್ತಮಾಡಿದ್ದಾರೆ;

ಹಿಂದೆ ಬ್ರಿಟಿಷರು ನಮ್ಮ ದೇಶವನ್ನು ಕೊಳ್ಳೆ ಹೊಡೆದಂತೆ, ಅವರೆ ಇಂದು ಗ್ಯಾಟ್ ವರದಿ ರೂಪದಲ್ಲಿ ನಮ್ಮನ್ನು ಆಳುವ ತಂತ್ರಹೂಡಿದ್ದಾರೆ ಎಂಬ ಭಾವನೆಗಳೂ ವ್ಯಕ್ತವಾಗಿವೆ. ಡಬ್ಲ್ಯುಟಿಓ ನಲ್ಲಿ ಆಮದು ಸುಂಕವನ್ನು ಶೇ 300 ರವರೆಗೆ ಹೆಚ್ಚಿಸಲು ಅವಕಾಶವಿದ್ದರೂ ಕೇಂದ್ರವು ಮೀನಮೇಷ ಎಣಿಸುತ್ತಿದೆ ಎಂಬ ಅಭಿಪ್ರಾಯಗಳೂ ವ್ಯಕ್ತವಾಗಿದೆ.

ನಮ್ಮ ದೇಶದ ಕೃಷಿಯ ಮೇಲೆ ನಿಯಂತ್ರಣವಿಟ್ಟುಕೊಂಡು ನಮ್ಮನ್ನು ಸುಲಿಯುವ ಹುನ್ನಾರ ಹೊಂದಿರುವ ಬಂಡವಾಳಶಾಹಿ ರಾಷ್ಟ್ರಗಳಿವೆ. ಈ ಅಭಿವೃದ್ಧಿಸಿದ್ಧಿ ರಾಷ್ಟ್ರಗಳ ಹಿಡಿತದಲ್ಲೇ ಇರುವ ಐ.ಎಂ.ಎಫ್, ವಿಶ್ವಬ್ಯಾಂಕ್, ಹಾಗು ಡಬ್ಲ್ಯುಟಿಓಗಳ ಸಾಲಕ್ಕೆ ಕೈ ಚಾಚಿ, ಸಲ್ಲದ ಷರತ್ತುಗಳಿಗೆ ನಮ್ಮ ಸರ್ಕಾರಗಳು ಬಲಿಯಾಗಿವೆ. ಇದು ನಮ್ಮ ಕೃಷಿಯನ್ನು ಬಹಳ ಅಪಾಯಕ್ಕೊಡ್ಡಿದೆ. ಡಬ್ಲ್ಯುಟಿಓ ನೀತಿಗಳು ನಮ್ಮನ್ನು ತೀವ್ರವಾಗಿ ಆವರಿಸಿವೆ. ಅದರಿಂದ ಆಮದು ಸುಂಕ ಬಹಳ ಕಡಿಮೆಯಾಗಿ ವಿದೇಶಿ ಉತ್ಪನ್ನಗಳಿಗೆ ಮುಕ್ತದ್ವಾರ ತೆರೆದಂತಾಗಿದೆ. ಜಾಗತೀಕರಣದಿಂದಾಗಿ ಅಂತರಾಷ್ಟ್ರೀಯ ಮಾರುಕಟ್ಟೆ ಬಹುರಾಷ್ಟ್ರೀಯ ಕಂಪೆನಿ ಹಾಗು ಬಂಡವಾಳಶಾಹಿ ರಾಷ್ಟ್ರಗಳ ಕೈಯಲ್ಲಿದ್ದು ಬೆಲೆ ಏರಿಳಿತಗಳು ಸಿಕ್ಕಾಬಟ್ಟೆ ಆಗಿದೆ. ನಮ್ಮ ಹಿತಾಸಕ್ತಿಗೆ ಬರೆ ಎಳೆದು ಬೆಳೆ ಮಾದರಿಗಳನ್ನು ಬಳಕೆಗೆ ಬಿಟ್ಟು ಸ್ವಾವಲಂಬನೆಯನ್ನು ಹದಗೆಡಿಸಿವೆ. ಬ್ರೆಜಿಲ್, ಇಂಡೋನೇಶಿಯಾ, ಮಲೇಶಿಯಗಳಿಂದ ಎಣ್ಣೆ, ತೊಗರಿ; ಫ್ರಾನ್ಸ್ ಬ್ರಿಟನ್‌ನಿಂದ ಹಾಲಿನಪುಡಿ ಆಸ್ಟ್ರೇಲಿಯ ಸೇಬು, ಬರ್ಮಾದ ಅಡಿಕೆ ಇವೆಲ್ಲ ಅಗ್ಗದ ದರದಲ್ಲಿ ನಮ್ಮಲ್ಲಿ ನುಗ್ಗಿವೆ. ಭತ್ತ, ಮೆಕ್ಕೇಜೋಳ, ಜೋಳ, ತೊಗರಿ, ಅಡಿಕೆ ಇತ್ಯಾದಿಗಳ ಬೆಲೆಗಳು ಕುಸಿದಿವೆ. ನಮ್ಮ ರೈತನ ಕೃಷಿ ಪರಿಕರಗಳ ಬೆಲೆ ಏರಿ, ಉತ್ಪನ್ನಗಳ ವೆಚ್ಚವೂ ಏರಿದೆ. ಡಬ್ಲ್ಯುಟಿಓ ಒಪ್ಪಂದವು ಭಾರತದ ಹಿತಾಸಕ್ತಿಯನ್ನು ಕಾಪಾಡುತ್ತಿಲ್ಲ. ನಮ್ಮ ರೈತರಿಗೆ ಒದಗುತ್ತಿರುವ ಸಬ್ಸಿಡಿ ಶೇ. 3ರಷ್ಟಿದ್ದರೆ ಅಮೇರಿಕದ ರೈತ ಶೇ.78, ಜಪಾನ್ ರೈತ 72.5 ಪರ್‌ಸೆಂಟ್, ದಕ್ಷಿಣ ಕೊರಿಯಾ ರೈತ ಶೇ.61, ಯೂರೋಪ್ ರಾಷ್ಟ್ರಗಳ ರೈತರಿಗೆ ಶೇ.54 ರಷ್ಟು ಸಬ್ಸಿಡಿ ಒದಗುತ್ತಿದೆ. ಜೊತೆಗೆ ನಮ್ಮ ರೈತರಿಗಿರುವ ಈ ಸಾಂಕೇತಿಕ ಸಬ್ಸಿಡಿಯನ್ನು ತೆಗೆದುಹಾಕಬೇಕೆಂದು ಡಬ್ಲ್ಯುಟಿಓ ಮೂಲಕ ಒತ್ತಾಯವಾಗಿದೆ. ಸಬ್ಸಿಡಿಯ ರೈತರಿಗೆ ರಕ್ಷಿಸುವ ಸಲುವಾಗಿ ಪರೋಕ್ಷ ರಿಯಾಯಿತಿ ವ್ಯವಸ್ಥೆಯಾಗಿ ಹಾಗು ನೇರವಾಗಿ ರೈತರಿಗೆ ಹಣ ಸಹಾಯ ನೀಡುವ ವ್ಯವಸ್ಥೆಯಾಗಿ ಅಭಿವೃದ್ಧಿಸಿದ್ಧಿ ದೇಶಗಳಿಲ್ಲಿದೆ. ಯಾವುದೇ ಬೆಳೆ ಅಗತ್ಯವಿಲ್ಲ ಎಂದಾಗುತ್ತದೆ ಎನ್ನಿ. ಆಗ ಅದನ್ನು ಬೆಳೆಯದಂತೆ

ರೈತರಿಗೆ ಹೇಳಿ ಅನುಗುಣವಾದ ಹಣವನ್ನು ನೀಡಲಾಗುತ್ತದೆ. ನಮಗಾದರೋ ವಾಣಿಜ್ಯ ಬ್ಯಾಂಕು, ಗ್ರಾಮೀಣ ಬ್ಯಾಂಕು, ಸಹಕಾರಿ ಬ್ಯಾಂಕುಗಳಿಂದ ಸಾಂಸ್ಥಿಕ ರೂಪದ ಕೃಷಿ ಸಾಲಗಳನ್ನು ಕಡಿತಗೋಳಿಸಬೇಕೆಂದು ವಿಶ್ವಬ್ಯಾಂಕ್ ಒತ್ತಡ ಹಾಕಿದೆ. ನಬಾರ್ಡ್ ಸಹ ಕೃಷಿಗೆ ರಿಯಾಯಿತಿ ಬಡ್ಡಿದರದಲ್ಲಿ ನೀಡುವ ಸಾಲವನ್ನು ಕಡಿಮೆಗೊಳಿಸಿದೆ. ಇದರಿಂದ ಮಧ್ಯಮ ಹಾಗು ಸಣ್ಣ ರೈತರು ಪ್ರತಿಕೂಲ ಸಾಲದ ಷರತ್ತುಗಳಿಗೀಡಾಗಿ ಬೆಲೆ ಕುಸಿತದ ಸಂದರ್ಭಗಳಲ್ಲಿ ಹತಾಶೆಗೊಂಡು ಆತ್ಮಹತ್ಯೆಗೆ ಒಡ್ಡಿಕೊಳ್ಳುವ ಸಂದರ್ಭವಾಗಿದೆ. ಬೆಂಬಲಬೆಲೆ ವ್ಯವಸ್ಥೆ, ಖರೀದಿ ಕೇಂದ್ರಗಳಲ್ಲಿ ವೈಜ್ಞಾನಿಕ ಗ್ರೇಡಿಂಗ್ ಮತ್ತು ಬೆಲೆ ನಿಗದಿ ವ್ಯವಸ್ಥೆ, ಖರೀದಿ ಕೇಂದ್ರ, ಶೀತಲ ಸಂಗ್ರಹಣಾ ಕೇಂದ್ರ ಇತ್ಯಾದಿಗಳ ಬೆಲೆ ಕುಸಿತದಿಂದಾಗದೆ ಉದಾರೀಕರಣ, ಜಾಗತೀಕರಣ ನೀತಿಗಳ ಮೊತ್ತದ ಫಲದಿಂದಾಗಿ ಸಂಭವಿಸುತ್ತಿವೆ. ಇದಕ್ಕೆ ಆತ್ಮಹತ್ಯೆ ಪರಿಹಾರವೆನಿಸದೆ ರೈತರು ಆತ್ಮವಿಶ್ವಾಸದಿಂದ ಸಮಸ್ಯೆಗೆ ಪರ್ಯಾಯ ಮಾರ್ಗ ಹುಡುಕುವುದರಲ್ಲಿದೆ ಎಂದು ಶ್ರೀ ಕೆ.ಪ್ರಕಾಶ್ ಅವರು ತಮ್ಮ ಪತ್ರಿಕಾ ಲೇಖನವೊಂದರಲ್ಲಿ ಅಭಿಪ್ರಾಯವಿಟ್ಟಿದ್ದಾರೆ. ದಿಟ. ಇದು ನಮ್ಮ ಸಾಂಸ್ಕೃತಿಕ ಚಲನೆಯ ಒಂದು ರೂಪ ಸರಿ. ಅಲ್ಲದೆ ಬೆಲೆ ಕುಸಿತದಿಂದಾದ ಅನ್ವಯಿಕ ಪರಿಣಾಮಗಳು ರೈತರನ್ನು ಹತಾಶೆಗೀಡುಮಾಡಿ ದುರಂತಕ್ಕೆ ಕಾರಣವಾಗುತ್ತವೆ. ಅಂತಾಗಿ ಬೆಲೆಕುಸಿತ ತಡೆಯಲು ಎಲ್ಲರ ಪ್ರಯತ್ನವೂ ಬೇಕು.

ಮಾಜಿ ಮುಖ್ಯಮಂತ್ರಿ ಶ್ರೀ ಎಂ. ವೀರಪ್ಪ ಮೊಯಿಲಿಯವರು ಡಬ್ಲ್ಯುಟಿಓ ಒಪ್ಪಂದವನ್ನು ಅನಿವಾರ್ಯವಾಗಿ ಅಳವಡಿಸಿಕೊಳ್ಳಲೇಬೇಕಾಗಿರುವ ಈ ಸಂದರ್ಭದಲ್ಲಿ ಹೊಸ ಸವಾಲುಗಳನ್ನು ನಾವು ಎದುರಿಸಬೇಕಿದೆ. ಅದಕ್ಕಾಗಿ ಸಮರ್ಥ ದೇಶೀಯ ಮಾರುಕಟ್ಟೆ ಸ್ಥಾಪಿಸಬೇಕು. ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಈ ನಿಟ್ಟಿನಲ್ಲಿ ಪ್ರಯತ್ನ ಮಾಡುತ್ತಿದ್ದು, ಅದು ಇನ್ನು ವೇಗಗೊಳ್ಳಬೇಕು ಎಂದು ಹೇಳಿದ್ದಾರೆ. (ಪ್ರ.ವಾರ್ತೆ.1.5.2001)

ಕೃಷಿ ಕ್ಷೇತ್ರದ ಇಂದಿನ ದುಸ್ಥಿತಿಗೆ ಪಾಶ್ಚಾತ್ಯ ಸಿದ್ಧಾಂತಗಳನ್ನು ಕುರುಡಾಗಿ ಅನುಸರಿಸಿದ್ದೇ ಕಾರಣ ಎಂದು ವಿಧಾನ ಪರಿಷತ್ತು ಸದಸ್ಯ ಶ್ರೀ ಎಂ.ಪಿ.ಪ್ರಕಾಶ್ ಅವರು ಅಭಿಪ್ರಾಯ ಪಟ್ಟಿದ್ದಾರೆ. ಹಣ್ಣು ಮತ್ತು ತರಕಾರಿ ಉತ್ಪಾದನೆ ವಿಪುಲವಾಗಿದ್ದರೂ ಸಂಸ್ಕರಣೆ ಮತ್ತು ಸಂಗ್ರಹಣಾ ವ್ಯವಸ್ಥೆ ಇಲ್ಲದೆ ನಷ್ಟ ಅನುಭವಿಸುತ್ತಿದ್ದೇವೆ ಎಂದಿದ್ದಾರೆ. ರಾಜ್ಯ ಬಿ.ಜೆ.ಪಿ. ಅಧ್ಯಕ್ಷ ಶ್ರೀ ಬಸವರಾಜ ಪಾಟೀಲ್ ಸೇಡಂ ಅವರು ಮಾತನಾಡಿ ರೈತರು ಸಾವಯವ ಕೃಷಿ ಬಗ್ಗೆ ಒತ್ತು

ನೀಡುವ ಕಾಲಬಂದಿದೆ. ರೈತರ ಉತ್ಪನ್ನಗಳಿಗೆ ಯೋಗ್ಯ ಬೆಲೆ ಸಿಗಬೇಕು. ಜಗತ್ತಿನ ಮಾರುಕಟ್ಟೆ ಒಂದಾಗಿರುವಲ್ಲಿ ಸ್ಪರ್ಧಾತ್ಮಕ ಜಗತ್ತಿನಲ್ಲಿ ರೈತರನ್ನು ಕಾಪಾಡುವುದೇ ಕಷ್ಟವಾಗಿದೆ ಎಂದಿದ್ದಾರೆ. (ಕ.ಪ್ರ.ವಾ.2.12.2001)

ರಾಜ್ಯ ರೈತ ಸಂಘದ ಅಧ್ಯಕ್ಷ ಪ್ರೊ.ಎಂ.ಡಿ. ನಂಜುಂಡಸ್ವಾಮಿಯವರು: ಡಬ್ಲ್ಯುಟಿಓ ದ ರೀತ್ಯಾ ಅಭಿವೃದ್ಧಿಗೊಂಡ ದೇಶದ ರೈತರಿಗೆ ಹೆಚ್ಚು ಸಬ್ಸಿಡಿ ಇದೆ. ನಮ್ಮಂಥ ದೇಶಗಳು ಅದರಿಂದ ವಂಚಿತವಾಗಿವೆ. ಅಂತಾಗಿ ಆಮದು ವಸ್ತು ಪ್ರಮಾಣವನ್ನು ನಿಗದಿಗೊಳಿಸಬೇಕು. ಇಲ್ಲವಾದರೆ ನಮ್ಮ ದೊಡ್ಡ ರೈತರು ಬೆಳೆದ ಬೆಳೆಗೂ ಬೆಲೆ ಕುಸಿದು ಆತ್ಮಹತ್ಯೆಯ ಸರದಿ ಅವರಿಗೂ ಒದಗುವಂತಾಗುತ್ತದೆ. ಚೈನಾದ ಅಕ್ಕಿ ಕೆ.ಜಿ.ಗೆ 5 ರೂ. ನಂತೆ ದೊರಕುವುದಾದರೆ ಇಲ್ಲಿನ ರೈತರ ಬೆಳೆಯ ಗತಿ ಏನು? ಅಂತಾಗಿ ಆಮದು ವಸ್ತುಗಳನ್ನು ಪ್ರಮಾಣ ಹಾಗು ಸುಲಭ ಸುಂಕ, ನಮ್ಮ ದೇಶೀಯ ಮಾರುಕಟ್ಟೆಯನ್ನು ಅನಾಹುತಕ್ಕೆ ದೂಡುವಂತಾಗಬಾರದು. ಬಹುರಾಷ್ಟ್ರೀಯ ಕಂಪೆನಿಗಳ ಜಾಲಕ್ಕೆ, ಶ್ರೀಮಂತರಾಷ್ಟ್ರಗಳ ಕುಣಿಕೆಗೆ ಸಿಗದಂತೆ ಅಭಿವೃದ್ಧಿಶೀಲ ರಾಷ್ಟ್ರಗಳು ಸಂಘಟಿತವಾಗುತ್ತಿವೆ. ಇದಾದರೆ ಭಾರತಕ್ಕೂ ವರದಾನವೆ. ದೋಹಾಶೃಂಗ ಸಮ್ಮೇಳನದಲ್ಲಿ ಭಾರತದ್ದೂ ಸೇರಿದಂತೆ ಈ ನಿಲುವು ಗಟ್ಟಿಗೊಳ್ಳಬೇಕು, ಎಂದಿದ್ದಾರೆ.

**ವಿಷಯ–2 : ದೋಹಾದ ಡಬ್ಲ್ಯುಟಿಓ ಅಧಿವೇಶನ ಮತ್ತು ಅನ್ವಯಿಕ ಪ್ರತಿಕ್ರಿಯೆಗಳು**

ದೋಹಾದಲ್ಲಿ ನವೆಂಬರ್ 9 ರಿಂದ ಆರಂಭಗೊಳ್ಳುವ ಡಬ್ಲ್ಯುಟಿ.ಓ. ಅಧಿವೇಶನದಲ್ಲಿ ಹೊಸ ಸುತ್ತಿನ ಮಾತುಕತೆಗಳು ಜರುಗಲಿದ್ದು ಅಲ್ಲಿ ಕೈಗೊಳ್ಳುವ ನಿರ್ಣಯಗಳು ಅಭಿವೃದ್ಧಿಸಿದ್ಧಿ ದೇಶಗಳ ಪರವಾಗಿ ಇರುತ್ತದೆ. ಇದರಿಂದ ನಮ್ಮ ದೇಶದ ಹಿತಾಸಕ್ತಿಯನ್ನು ಕಡೆಗಣಿಸಿದಂತಾಗುತ್ತದೆ. ಆರ್ಥಿಕ ಉದಾರೀಕರಣ ನೀತಿಯಿಂದ ರೈತ ಸಮುದಾಯ ಹಾಗು ಬಡವರ್ಗ ಭಾರೀ ತೊಂದರೆಗೀಡಾಗಿದೆ. ವಿಶ್ವ ವಾಣಿಜ್ಯ ಒಪ್ಪಂದವು ದೇಶವನ್ನು ದಾಸ್ಯಕ್ಕೆ ತಳ್ಳುತ್ತಿದೆ. ಆರ್ಥಿಕ ಪರಿಷ್ಕರಣೆಯಿಂದಾಗಿ ವಿಶ್ವ ಮಾರುಕಟ್ಟೆಯಲ್ಲಿ ಈಗ ಕಂಪನವುಂಟಾಗಿದೆ. ವಿಶ್ವ ವಾಣಿಜ್ಯ ಒಪ್ಪಂದದ ಅನುಸಾರ ಇಲ್ಲಿ ಅಭಿವೃದ್ಧಿಸಿದ್ಧಿ ದೇಶಗಳು ನಮ್ಮ ವ್ಯವಹಾರವನ್ನು ಹೂಡಿ ಲಾಭ ಪಡೆಯುತ್ತವೆ. ಇದಕ್ಕೆ ನಾವು ಬಲಿಪಶುಗಳಾಗಬಾರದು ಎಂದು ನವದೆಹಲಿಯಲ್ಲಿ ನಡೆದ ವಿರೋಧಪಕ್ಷಗಳ ರ್‍ಯಾಲಿಯಲ್ಲಿ ನಾಯಕರು ಅಭಿಪ್ರಾಯವನ್ನು ವ್ಯಕ್ತಮಾಡಿದ್ದಾರೆ. (5.11.2001 ಪಿ.ಟಿ.ಐ)

1999 ರ ಡಿಸೆಂಬರ್ 3 ರಂದು ಸಿಯಾಟಲ್‌ನಲ್ಲಿ ವಿಶ್ವ ವ್ಯಾಪಾರ ಸಂಘಟನೆಯ ಜಾಗತಿಕ ಶೃಂಗಸಭೆ ಕೊನೆಯಾದ ನಂತರ 3 ವರ್ಷಗಳ ಮೇಲೆ ಕತಾರ್‌ನ ದೋಹಾದಲ್ಲಿ ಹೊಸ ಸುತ್ತಿನ ಮಾತುಕತೆಗಳು ಪ್ರಾರಂಭವಾಗುತ್ತಿವೆ. ಬಡರಾಷ್ಟ್ರಗಳ ಮಾರುಕಟ್ಟೆಗೆ ಪಶ್ಚಿಮ ರಾಷ್ಟ್ರಗಳಿಂದ ತೋಟಗಾರಿಕಾ ಉತ್ಪನ್ನಗಳು ಹೇರಳವಾಗಿ ಹರಿದು ಬರುತ್ತಿವೆ. ಈ ಬಗ್ಗೆ ಅಮೇರಿಕ ಮತ್ತು ಐರೋಪ್ಯ ರಾಷ್ಟ್ರಗಳ ಮಧ್ಯೆ ತೀವ್ರ ಹಣಾಹಣಿ ಇದೆ. ಜಾಗತಿಕ ಅರ್ಥವ್ಯವಸ್ಥೆಯ ಹಿನ್ನಡೆಯು ಹೊಸ ಸವಾಲುಗಳಿಗೆ ಎಡೆ ಮಾಡಿದೆ.

ವಿಶ್ವವ್ಯಾಪಾರ ತೇಜಿಯಾಗಿ ವೃದ್ಧಿಗೊಂಡರೂ ಈಗ ಅದು ನಿಂತನೀರಿನಂತೆ ಆಗುವ ಸೂಚನೆ ಇದೆ. ಮುಂದುವರೆದ ರಾಷ್ಟ್ರಗಳು ಮೂರನೇ ಜಗತ್ತಿನ ರಾಷ್ಟ್ರಗಳ ಉತ್ಪನ್ನಗಳು ತಮ್ಮ ಮಾರುಕಟ್ಟೆಗೆ ಲಗ್ಗೆ ಹಾಕುವುದನ್ನು ತಡೆಗಟ್ಟಲು ಪ್ರಯತ್ನ ಮಾಡುತ್ತಿವೆ. ಭಾರತದ ಬೀಡಿ ಮತ್ತು ರೇಷ್ಮೆಗೆ ಅಮೆರಿಕ ಮತ್ತು ಯೂರೋಪಿಯನ್ ರಾಷ್ಟ್ರಗಳಲ್ಲಿ ಬಹಳ ಬೇಡಿಕೆ ಇದೆ. ಇದು ರಾಷ್ಟ್ರಕ್ಕೆ ಹೇರಳ ವಿದೇಶಿ ವಿನಿಮಯ ತರುತ್ತಿದೆ. ಇದನ್ನು ತಡೆಯಬೇಕೆಂದು ಬಾಲಕಾರ್ಮಿಕರನ್ನು ಬಳಸುತ್ತಿದ್ದೀರಿ, ಕಾರ್ಮಿಕರಿಗೆ ಸಂಬಳ ಸವಲತ್ತು ಸರಿಯಾಗಿ ನೀಡುತ್ತಿಲ್ಲ ಎಂದೆಲ್ಲ ನಮ್ಮ ಮೇಲೆ ಆರೋಪಿಸುತ್ತಿವೆ. ಹಾಗೆ ಆರೋಪಿಸಿ ನಮ್ಮ ಮಾರುಕಟ್ಟೆಗೆ ನಿಮ್ಮ ಪ್ರವೇಶವಿಲ್ಲವೆಂದು ಅಮೆರಿಕ ನಮ್ಮ ಗಣೇಶ ಬೀಡಿಗಳನ್ನು ನಿಷೇಧಿಸಿತು. ಆದರೆ ಮುಂದುವರೆದ ಈ ರಾಷ್ಟ್ರಗಳ ದ್ವಿಮುಖ ನೀತಿಯನ್ನು ಭಾರತ್ ಬ್ರೆಜಿಲ್ ದಕ್ಷಿಣ ಆಫ್ರಿಕ, ಥೈಲ್ಯಾಂಡ್ ಮತ್ತಿತರ ರಾಷ್ಟ್ರಗಳು ವಿರೋಧಿಸುತ್ತಿವೆ. (ವಿ.ಕ.9.11.2001)

ದೋಹಾದಲ್ಲಿ ನಡೆದ ವಿಶ್ವವಾಣಿಜ್ಯ ಸಂಘಟನೆಯ ಸಚಿವರುಗಳ ಮಟ್ಟದ ಸಭೆಯಲ್ಲಿ ನಮ್ಮ ಮನಸ್ಸಿಗೆ ವಿರುದ್ಧವಾಗಿ ಡಬ್ಲ್ಯುಟಿಓನಲ್ಲಿ ತಾವು ರೂಪಿಸಿದ ಹೊಸ ನೀತಿಯನ್ನು ಒಪ್ಪಿಕೊಳ್ಳುವಂತೆ ಮುಂದುವರೆದ ರಾಷ್ಟ್ರಗಳು ಬಲಾತ್ಕಾರ ಪಡಿಸುತ್ತಿವೆ ಎಂದು ಭಾರತದ ವಾಣಿಜ್ಯ ಸಚಿವ ಶ್ರೀ ಮುರುಸೋಳಿ ಮಾರನ್ ಕಿಡಿ ಕಾರಿದರು. ಈ ನೀತಿ ನಿರೂಪಣೆಯಿಂದ ಅಭಿವೃದ್ಧಿಸಾಧಕ ರಾಷ್ಟ್ರಗಳಿಗೆ ಯಾವ ಪಾತ್ರವೂ ಸಿಗುತ್ತಿಲ್ಲ. ಸಮಾವೇಶ ಕೇವಲ ಸಾಂಪ್ರದಾಯಿಕ ಮಿಲನ ಎಂದಾಗುತ್ತಿದೆ. ಸೆಪ್ಟೆಂಬರ್ 11ರ ಉಗ್ರರ ಧಾಳಿಯ ನಂತರ ಮೂಡಿದ ಜಾಗತಿಕ ಭಾವೈಕ್ಯತೆಯು ಡಬ್ಲ್ಯುಟಿಓನ ಪಕ್ಷಪಾತ ನೀತಿಯಿಂದ ಹಾಳಾಗಬಹುದು. ಅಲ್ಲದೆ ಭಾರತದಂತಹ ಅಭಿವೃದ್ಧಿಸಾಧಕ ಕೃಷಿರಾಷ್ಟ್ರಗಳ ಗ್ರಾಮವಾಸಿಗಳಿಗೆ ಆಹಾರ ಮತ್ತು ಆದಾಯ ಸಂಗ್ರಹಣೆಗೆ ಭದ್ರತೆ ಒದಗಿಸಬೇಕಿದೆ. ಅಂತಹ ವಿಷಯಗಳ ಮೇಲೆ

ಚರ್ಚೆಯಾಗಬೇಕು. ಜಾಗತೀಕರಣ ಮತ್ತು ಮುಕ್ತ ಆರ್ಥಿಕತೆಯನ್ನು ಬೇರೆ ಬೇರೆ ದೃಷ್ಟಿ ಕೋನದಲ್ಲಿ ನೋಡಬೇಕೇ ವಿನಹ: ಕೇವಲ ಬಹುರಾಷ್ಟ್ರೀಯ ಉನ್ನತಿಯ ಹಿನ್ನಲೆಯಲ್ಲಿ ನೋಡಬಾರದು. ಡಬ್ಲ್ಯುಟಿಓ, ಜಾಗತಿಕ ಸರ್ಕಾರವಲ್ಲ. ಬೇರೆ ರಾಷ್ಟ್ರಗಳ ಆರ್ಥಿಕ ನೀತಿ ನಿರೂಪಣೆಯ ಉಸ್ತುವಾರಿ ನಡೆಸುವ ಸಂಸ್ಥೆಯಲ್ಲ. ಎಲ್ಲ ಸರ್ಕಾರಗಳಿಗೂ ತಮ್ಮದೇ ಆದ ರಾಷ್ಟ್ರೀಯ ಹಿತಾಸಕ್ತಿಗಳಿರುತ್ತವೆ. ಮುಂದುವರೆಯುತ್ತಿರುವ ರಾಷ್ಟ್ರಗಳ ಅವಶ್ಯಕತೆ ಮತ್ತು ಹಿತಾಸಕ್ತಿಯ ಕುರಿತು ಡಬ್ಲ್ಯುಟಿಓ ಗಮನಹರಿಸಬೇಕು. ಉರುಗ್ವೆ ನಿರ್ಣಯವನ್ನು ಎಲ್ಲ ಕೈಗಾರಿಕಾ ದೇಶಗಳು ಜಾರಿಗೊಳಿಸಿ ವಸ್ತುಗಳ ಬೆಲೆಯನ್ನು ನಿಗದಿತ ಮಟ್ಟದಲ್ಲಿರುವಂತೆ ನೋಡಿಕೊಂಡಿರುವುದಾಗಿ ಹೇಳಲಾಗಿದೆ. ಆದರೆ ಅಭಿವೃದ್ಧಿಸಾಧಕ ರಾಷ್ಟ್ರಗಳು ತಮ್ಮ ಉತ್ಪನ್ನಗಳನ್ನು ರಫ್ತು ಮಾಡಲು ಈವರೆಗೂ ಸಾಧ್ಯವಾಗುತ್ತಿಲ್ಲ ಏಕೆ? ಎಂದು ಪ್ರಶ್ನಿಸಿದರು. (ಕ.ಪ್ರ.11.11.2001). ದೋಹಾ ಸಮಾವೇಶದಲ್ಲಿ ಕೃಷಿಗೆ ಸಂಬಂಧಿಸಿದಂತೆ ಭಾರತವೂ ಸೇರಿದಂತೆ ಕೆಲವು ಅಭಿವೃದ್ಧಿಶೀಲ ದೇಶಗಳು ತಮಗೆ ಅನುಕೂಲವಾಗುವ ನಿರ್ಣಯವನ್ನು ಕೈಗೊಳ್ಳುವಂತೆ ಮಾಡಲು ಯಶಸ್ವಿಯಾದವು. ಬಂಡವಾಳ ಹೂಡಿಕೆ, ಜಾಗತಿಕ ಪೈಪೋಟಿ ಮತ್ತು ಕೃಷಿ ಕ್ಷೇತ್ರಗಳಲ್ಲಿ ತನ್ನ ವಿಚಾರಗಳನ್ನು ಬಲವಾಗಿ ಪ್ರತಿಪಾದಿಸಿ ಅಭಿವೃದ್ಧಿಶೀಲ ದೇಶಗಳ ಹಿತರಕ್ಷಿಸಿಕೊಳ್ಳುವಲ್ಲಿ ಯಶಸ್ವಿಯಾದುವೆಂಬ ಅಭಿಪ್ರಾಯವು ವ್ಯಕ್ತವಾಗಿದೆ. (ಪ್ರವಾರ್ತೆ 16.11.2001)

ವಿಶ್ವವ್ಯಾಪಾರ ಸಂಘಟನೆಯೊಡನೆ ಒಪ್ಪಂದವಾದ ನಂತರ ಖಾಸಗೀಕರಣ ಗೊಳಿಸುವ ಭಾರತದ ಪ್ರಕ್ರಿಯೆ ಅದರ ಆರ್ಥಿಕ ವಲಯದ ಮೇಲೆ ತೀವ್ರ ಪರಿಣಾಮವನ್ನು ಉಂಟುಮಾಡಿದೆ. ಉದಾರೀಕರಣದ ಇಂದಿನ ದಿನಗಳಲ್ಲಿ ಸರ್ಕಾರಗಳೇ ಖಾಸಗೀ ಬಂಡವಾಳಗಾರರ ಮನವೊಲಿಸಿ ತಮ್ಮಲ್ಲಿ ಬಂಡವಾಳ ಹೂಡಿಸಲು ಪೈಪೋಟಿಯಲ್ಲಿವೆ. ರೈತರು ಆತ್ಮಹತ್ಯೆಯಂತಹ ನಿರ್ಧಾರಕ್ಕೆ ಬರಲು ಅವರು ಬೆಳೆದ ಬೆಳೆಗೆ ಸೂಕ್ತ ಬೆಲೆ ಸಿಗದಿರುವ ಆರ್ಥಿಕ ವ್ಯವಸ್ಥೆಯೂ ಕಾರಣವಾಗಿದೆ. ಆದರೆ ಉದಾರೀಕರಣ ಪರವಾದಿಗಳು, ದೇಶೀಯ ಮಟ್ಟಕ್ಕೆ ಸೀಮಿತವಾಗಿದ್ದ ಪೈಪೋಟಿ ಹಾಗು ಕೌಶಲ್ಯ ಅಂತರಾಷ್ಟ್ರೀಯ ಮಟ್ಟಕ್ಕೆ ತಲುಪಿದೆ; ಆದ್ದರಿಂದ ಆ ಬಂಡವಾಳ ನಮ್ಮ ದೇಶಕ್ಕೆ ಹರಿದು ಬರುತ್ತದೆ ಎಂದು ವಾದಿಸುತ್ತಾರೆ. ಹೀಗಿದ್ದರೆ ನಮ್ಮ ರಾಷ್ಟ್ರೀಯ ಆದಾಯದ ಪ್ರಗತಿ ಏಕೆ ಹಿಂಜರಿತವಾಗುತ್ತಿದೆ? ನಿರೀಕ್ಷಿತ ವಿದೇಶಿ ಬಂಡವಾಳ ಏಕೆ ಹರಿದು ಬರಲಿಲ್ಲ? ಎಂಬ ಪ್ರಶ್ನೆಗೆ ಇನ್ನೂ ಉತ್ತರಸಿಕ್ಕಿಲ್ಲ, ಎಂಬೆಲ್ಲ ಅಭಿಪ್ರಾಯಗಳು ಈಚೆಗೆ ವ್ಯಕ್ತವಾಗಿವೆ.

ವಿಶ್ವ ವಾಣಿಜ್ಯ ಸಂಸ್ಥೆಯ ಸಿದ್ಧಾಂತದ ರೀತ್ಯ ಮುಕ್ತ ವ್ಯಾಪಾರ ವ್ಯವಸ್ಥೆಯನ್ನು ಸೃಷ್ಟಿಸುವುದರಿಂದ ದೇಶಗಳ ಸಂಪನ್ಮೂಲಗಳ ಸೂಕ್ತ ಬಳಕೆ ಆಗುತ್ತದೆ. ಆರ್ಥಿಕತೆ ಬಲಗೊಳ್ಳುತ್ತದೆ. ಬಡತನ ನಿವಾರಣೆ ಆಗುತ್ತದೆ. ವ್ಯಾಪಾರ ಬೆಳೆದು ಅಂತರಾಷ್ಟ್ರೀಯ ಸೌಹಾರ್ದತೆ ಬಲಗೊಳ್ಳುತ್ತದೆ, ಎಂದೆಲ್ಲ ಇದೆ. ಆದರೆ ಗ್ಯಾಟ್ ಅಥವಾ ಡಬ್ಲ್ಯುಟಿಓ. ನಿಬಂಧನೆಗಳು ಬಡ ರಾಷ್ಟ್ರಗಳ ವಿರೋಧಿ ಎಂಬ ಅಭಿಪ್ರಾಯ 1986 ಉರುಗ್ವೆ ಸಮಾವೇಶದ ನಂತರ ತೀವ್ರವಾಯಿತು. ಹೀಗಾಗಿ ತಿದ್ದುಪಡಿಗಳನ್ನು ಮಾಡಬೇಕಾಗಿ ಬಂತು. ಶ್ರೀಮಂತ ರಾಷ್ಟ್ರಗಳಲ್ಲಿ ಸಂಶೋಧನೆ ನಡೆಸಲು ಸಾಕಷ್ಟು ಹಣ ಇರುವುದರಿಂದ ಬೌದ್ಧಿಕ ಹಕ್ಕು ಸ್ವಾಮ್ಯ ಪಡೆಯುವುದು ಅವುಗಳಿಗೆ ಸುಲಭ. ಆಗ ಪೇಟೆಂಟ್ ಉತ್ಪನ್ನಗಳಿಗೆ ಸಂಭಾವನೆ ಕೊಟ್ಟು ಖರೀದಿಸುವುದು ಬಡರಾಷ್ಟ್ರಗಳಿಗೆ ಸುಲಭವಲ್ಲ. ಅಂತಾಗಿ ಹಿಂದುಳಿದ ರಾಷ್ಟ್ರಗಳು ವಿರೋಧವನ್ನು ವ್ಯಕ್ತಪಡಿಸಿವೆ. ನಂತರ ಡಬ್ಲ್ಯುಟಿಓ ದ ನಿರ್ಣಯಗಳಲ್ಲಿ ಅಭಿವೃದ್ಧಿಶೀಲ ರಾಷ್ಟ್ರಗಳ ಅಭಿಪ್ರಾಯಕ್ಕೂ ಬೆಲೆ ಸಿಗಬೇಕೆಂದಾಗಿ ದೋಹಾದಲ್ಲಿ ನಡೆದ 4ನೇ ಡಬ್ಲ್ಯುಟಿಓ ಸದಸ್ಯ ರಾಷ್ಟ್ರಗಳ ಸಚಿವರ ಸಮಾವೇಶದಲ್ಲಿ ತಮ್ಮ ಕಸುವನ್ನು ತೋರಿದವು. ಯೂರೋಪಿಯನ್ ಯೂನಿಯನ್ ದೇಶಗಳು ಅಧಿಕ ಸಬ್ಸಿಡಿಯನ್ನು ನೀಡುತ್ತವೆ ಎಂಬ ಕಾರಣದಿಂದ ಈ ಸಬ್ಸಿಡಿಗಳನ್ನು ಹಂತ ಹಂತವಾಗಿ ತೆಗೆದುಹಾಕುವ ನಿರ್ಣಯವನ್ನು ಕೈಗೊಳ್ಳಲಾಯಿತು. ಭಾರತದಂತಹ ಬೇಸಾಯ ಪ್ರಧಾನ ದೇಶಗಳ ರಫ್ತುಗಳು ಹೆಚ್ಚುವ ಸಾಧ್ಯತೆಯು ಅದರಿಂದ ಸಾಧ್ಯವಾಗಬಹುದೆಂದು ಎಂದು ಶ್ರೀ ಶ್ರೀಕಾರ ಅವರು ತಮ್ಮ ಪತ್ರಿಕಾಲೇಖನದಲ್ಲಿ ವ್ಯಕ್ತಪಡಿಸಿದ್ದಾರೆ. (4.2.2002)

ಭಾರತವು ಜಾಗತಿಕ ವ್ಯಾಪಾರಕ್ಕೆ ತೆಗೆದುಕೊಂಡ ಮೇಲೆ ಹಸಿರು ಕ್ರಾಂತಿಯ ಕಾರಣ ಒದಗಿದ ಆಹಾರ ಉತ್ಪಾದನೆಯ ವಿಪುಲತೆಯನ್ನು ಕೃಷಿ ರಫ್ತುವಲಯದಲ್ಲಿ ಹೆಚ್ಚಾಗಿ ಬಳಸಿಕೊಳ್ಳಬಹುದೇ? ಎಂಬ ಪ್ರಶ್ನೆಯಿದೆ. ರೈತನಿಗೆ ಲಾಭದಾಯಕ ಮಾರುಕಟ್ಟೆ ಸೌಲಭ್ಯ ದೊರೆತರೆ ಕೃಷಿ ಉತ್ಪಾದನೆಗೆ ಉತ್ತೇಜನ ಹೆಚ್ಚುವಂತಾಗುತ್ತದೆ. ಬೆಂಬಲ ಬೆಲೆಯನ್ನು ಹೆಚ್ಚಿಸುವತ್ತಲೇ ಹೋದರೆ ಉತ್ಪಾದಕತೆ ಹಾಗೂ ದಕ್ಷತೆ ಏನಾಗಬಹುದು? ನೂತನ ತಂತ್ರಜ್ಞಾನ ಮತ್ತು ಕಾರ್ಯ ವಿಧಾನಗಳಿಂದ ಶೇಕಡ 30 ರಿಂದ 40 ರಷ್ಟು ಇರುವ ಸರಬರಾಜು ನಷ್ಟವನ್ನು ಶೇಕಡ 20ಕ್ಕೆ ಇಳಿಸಬಹುದು. ಭಾರತ ಕೃಷಿ ಉತ್ಪನ್ನಗಳ ಮುಖ್ಯ ಉತ್ಪಾದಕ ರಾಷ್ಟ್ರವಾದರೂ ಅಸಂಘಟಿತ ಕಾರ್ಯಾಚರಣೆಗಳ ಫಲವಾಗಿ ಸಂಸ್ಕರಣೆ ಮತ್ತು ಮಾರಾಟ ಇನ್ನೂ ಸಾಂಪ್ರದಾಯಿಕವಾಗಿಯೇ ಇದೆ. ಈಗ ಹೊಸ ಮಾರ್ಗಗಳನ್ನು ಹುಡುಕಬೇಕಾಗಿದೆ.

ಜಮೀನು, ಕ್ರೋಢೀಕರಣ, ದೊಡ್ಡ ಪ್ರಮಾಣದ ವ್ಯಾಪಾರ ಸಂಸ್ಥೆಗಳ ಪ್ರವೇಶ, ಗ್ರಾಹಕ, ಮಾರಾಟ ವ್ಯವಸ್ಥೆಯನ್ನು ಬಲಗೊಳಿಸುವಿಕೆ, ಈ ಮಾರ್ಗಗಳಿಂದ ಆಹಾರ ಸರಪಳಿಯಲ್ಲಿ ಸಂಪತ್ತನ್ನು ಗುಣಿತ ಮಾಡಬಹುದು, ಗ್ರಾಹಕ ಮಾರಾಟ ವ್ಯವಸ್ಥೆಯನ್ನು ಉತ್ತಮ ಪಡಿಸಿದರೆ ಕೃಷಿ ಉತ್ಪನ್ನದ ಶೇಕಡ 50 ಭಾಗ ಸಂಸ್ಕರಣಗೊಳ್ಳುತ್ತದೆ. ಉತ್ಪನ್ನಗಳ ಮಾರಾಟ ವ್ಯವಸ್ಥೆ ರೈತರಿಗೆ ಪುಷ್ಠಿ ತಂದಿದೆ. ಗುತ್ತಿಗೆ ವ್ಯವಸಾಯ, ಸೂಕ್ತ ಕೃಷಿ ಪರಿಕರಗಳ ಸೌಲಭ್ಯ ಜಮೀನು ಕ್ರೋಡಿಕರಣಗಳ ಮೂಲಕ ಈ ಪ್ರಕ್ರಿಯೆ ನಡೆದು ಪ್ರಗತಿಯ ಸಾಧ್ಯತೆಯನ್ನು ತೋರಿವೆ. ಭಾರತವು ಇಂಥ ಪರ್ಯಾಯಗಳನ್ನು ಅಳವಡಿಸಿಕೊಂಡರೆ ಜಾಗತಿಕ ಕೃಷಿಶಕ್ತಿಯಾಗಿ ಹೊರ ಹೊಮ್ಮಬಹುದೆಂದು ಶ್ರೀ ಶಿವಕುಮಾರ್ ಕೆಂದರ್ಬೆಗಟ್ಟ ಅವರು ಕೆಲವು ಆಕರಗಳ ಆಧಾರದ ಮೇಲೆ ಇತ್ತೀಚಿನ ಲೇಖನವೊಂದರಲ್ಲಿ ಮಂಡಿಸಿದ್ದಾರೆ.

ಭಾರತದ ಕೃಷಿ ಮಾರುಕಟ್ಟೆಯಲ್ಲಿ **ಉತ್ಪಾದನಾ** ವೆಚ್ಚ ಮತ್ತು **ಮಾರಾಟದ** ಬೆಲೆ ನಡುವೆ ಬಹಳ ವ್ಯತ್ಯಾಸವಿದೆ. ಇದರಿಂದ ರೈತರು ತಾವು ಬೆಳೆದಿದ್ದನ್ನು ಬೀದಿಗೆ ಚೆಲ್ಲಿ ಪ್ರತಿಭಟನೆ ಮಾಡುತ್ತಿರುವುದು ನಮ್ಮಲ್ಲಿ ಅನೇಕ ಕಡೆ ಕಂಡುಬಂದಿದೆ. ವಿಶ್ವವ್ಯಾಪಾರ ಸಂಘಟನೆಯ ಸದಸ್ಯ ರಾಷ್ಟ್ರವಾಗಿರುವ ಭಾರತ ಜಾಗತಿಕ ವ್ಯಾಪಾರದಲ್ಲಿ ತನ್ನ ಅಸ್ತಿತ್ವವನ್ನು ತೋರಿಕೊಳ್ಳಬೇಕಾದರೆ ಕೃಷಿ ಉತ್ಪನ್ನಗಳ ವೆಚ್ಚವನ್ನು ಅಂದಾಜು ಮಾಡುವುದು ಅವಶ್ಯಕ. ಅಕ್ಕಿ, ಗೋಧಿ, ಮುಸುಕಿನಜೋಳ, ಎಳ್ಳು, ಶೇಂಗಾ, ತೊಗರಿ, ಹತ್ತಿ, ಕಬ್ಬು, ಈರುಳ್ಳಿ, ಆಲೂಗೆಡ್ಡೆ, ಅಡಿಕೆ, ತಂಬಾಕು. ಇತ್ಯಾದಿ ಉತ್ಪನ್ನಗಳಿಗೆ ಕನಿಷ್ಠ ಪ್ರತಿಫಲ ಮೊತ್ತವನ್ನು ಗೊತ್ತುಪಡಿಸಲಾಗಿದೆ. ಅಂದರೆ ಈ ಬೆಳೆಗಳ ಉತ್ಪಾದನಾ ವೆಚ್ಚವನ್ನು ಕೃಷಿ ಮಂತ್ರಾಲಯದ ಶಾಖೆಗಳು, ಕೃಷಿವೆಚ್ಚ ಬೆಲೆ ಆಯೋಗ, ಒಟ್ಟಾಗಿ ನಿರ್ಧರಿಸುತ್ತವೆ. ಬೆಳೆ ಮಾದರಿಗಳನ್ನು ತಾಲ್ಲೂಕು, ಗ್ರಾಮಗಳಿಂದ ಪಡೆದು ಬೆಳೆಪದ್ಧತಿ, ಮಣ್ಣಿನ ವಿಧ ಮತ್ತು ಮಳೆಪ್ರಮಾಣದ ವಿಧಗಳನ್ನು ತೆಗೆದುಕೊಂಡು ಇಡೀ ರಾಜ್ಯವನ್ನು ದೃಷ್ಟಿಯಲ್ಲಿಟ್ಟುಕೊಂಡು ವಿಂಗಡಿಸಿ ವೆಚ್ಚದ ಅಂದಾಜುಮಾಡಲಾಗುತ್ತದೆ. ಇದರಿಂದ ಹಿಂದೆ ಇದ್ದ ವೆಚ್ಚ ನಿರ್ಣಯಕ್ಕೂ ಹಾಗು ಇಂದಿನ ವೆಚ್ಚ ನಿರ್ಣಯ ಸ್ವರೂಪವು ಬೇರೆಯಾಗಿದೆ. ಕಬ್ಬು ಬೆಲೆ ನಿರ್ಧಾರವಾಗಲಿ ಬೆಂಬಲಬೆಲೆ ನಿಗದಿಯಾಗಲಿ, ಒಂದು ರೂಪವನ್ನು ತಳೆಯಲು ಅನುಕೂಲವಾಗುತ್ತವೆ. ಅಕ್ಕಿ ಮತ್ತು ಗೋಧಿಯ ಬೆಲೆಯನ್ನು ಇತ್ತೀಚೆಗೆ ಪ್ರಜ್ಞಾಪೂರ್ವಕವಾಗಿ ಬೆಲೆ ಆಯೋಗವು ಹೆಚ್ಚಿಸಿದ ಕಾರಣ ಎಲ್ಲಾ ರೈತರು ಈ ಬೆಳೆಗಳನ್ನು ಬೆಳೆದರು. ಉತ್ಪಾದನೆ ಗಣನೀಯವಾಗಿ ಹೆಚ್ಚಿ ಜಾಗತಿಕ ಮಾರುಕಟ್ಟೆಯಲ್ಲಿ ಸ್ಪರ್ಧೆ ತಗ್ಗಿ ಬೆಲೆ ಕುಸಿಯಿತು.

ರೈತರ ಆಕ್ರೋಶ ಅಸಹಾಯಕತೆಯನ್ನು ಕಡಿಮೆ ಮಾಡಲು ಗೋಧಿ ಮತ್ತು ಅಕ್ಕಿಯನ್ನು ಬೆಂಬಲಬೆಲೆಗೆ ಖರೀದಿಸಿತು. ದಾಸ್ತಾನು ಮಳಿಗೆಗಳ ಜಾಗ ಅದಕ್ಕೆ ಸಾಲದಂತಾಯಿತು. ಈ ಕಾರಣ ಬೆಳೆಯ ವೈವಿಧ್ಯತೆಯೇ ಪರಿಹಾರ ಎನಿಸುತ್ತದೆ. ಯಾವುದೇ ಒಂದು ಉತ್ಪನ್ನದ ಪೂರೈಕೆ ಕಡಿಮೆಯಾದಾಗ ಸರ್ಕಾರ ತಕ್ಷಣ ಬೆಂಬಲಬೆಲೆಯನ್ನು ಹೆಚ್ಚುಮಾಡಬೇಕು. ಎಣ್ಣೆಬೀಜ, ಬೇಳೆಕಾಳು ಬೆಳೆಯುವ ರೈತರಿಗೆ ಬೆಂಬಲಬೆಲೆ ಹೆಚ್ಚಿಸಿದರೆ ಅವರಿಗೆ ಅನುಕೂಲವಾಗುತ್ತದೆ. ಹೀಗೆ ಉತ್ಪನ್ನಗಳ ವೆಚ್ಚ ಮತ್ತು ಬೆಲೆ ನಿಗದಿಕಾರ್ಯ ನಿರಂತರವಾಗಿ ನಡೆದರೆ ರೈತರಿಗೆ ಮತ್ತು ನೀತಿ ನಿರ್ಮಾಪಕರಿಗೆ ಸಹಕಾರಿಯಾಗುತ್ತದೆ. ಮಾರುಕಟ್ಟೆಯಲ್ಲಿ ಬೆಲೆ ತೀವ್ರ ಕುಸಿದಾಗ ರೈತರು ಹತಾಶರಾಗಿ ಉತ್ಪನ್ನಗಳನ್ನು ಚಿಲ್ಲರೆಗೆ ಮಾರುವಂತಾಗಬಹುದು. ಆಗ ಅಂಥ ಹತಾಶ ಮಾರಾಟವನ್ನು ತಡೆಯುವಲ್ಲಿ ಬೆಲೆ ಆಯೋಗದ ಪಾತ್ರ ಮುಖ್ಯವಾಗುತ್ತದೆ. ಜಾಗತಿಕ ವ್ಯಾಪಾರ ವ್ಯವಸ್ಥೆಯ ಅವಿಭಾಜ್ಯಭಾಗವಾಗಿರುವ ನಾವು ಉತ್ಪಾದನಾ ವೆಚ್ಚವನ್ನು ಕುಗ್ಗಿಸಿಕೊಂಡು ಜಾಗತಿಕ ಮಾರುಕಟ್ಟೆಯಲ್ಲಿ ಪೈಪೋಟಿ ಮಾಡಬಹುದಾಗಿದೆ. ಹಾಗೂ ಅಲ್ಲಿನ ಬೆಲೆಗಳಿಗೆ ನಮ್ಮದು ಸಮರ್ಥ ಪ್ರತಿಕ್ರಿಯೆಯೂ ಆಗಬಹುದು ಎಂದೆಲ್ಲ ಶ್ರೀ ಕೆ.ವೆಂಕಟೇಶ್ ಅವರು ತಮ್ಮ ಪತ್ರಿಕಾ ಲೇಖನದಲ್ಲಿ ಆಧಾರಗಳನ್ನು ಅನುಸರಿಸಿ ಹೇಳಿದ್ದಾರೆ.

ಅಂತರಾಷ್ಟ್ರೀಯ ಮಾರುಕಟ್ಟೆಯಲ್ಲಿ ಭಾರತವು ಅಮೆರಿಕಾದ ಭದ್ರಕೋಟೆಯಾದ ಗೋಧಿ ಮಾರುಕಟ್ಟೆಗೆ ಲಗ್ಗೆ ಹಾಕಿ ಅದು ಕಂಗಾಲಾಗುವಂತೆ ಮಾಡಿದೆ. ಇಂಡೋನೇಷ್ಯ, ಮಲೇಷ್ಯ, ಫಿಲಿಫೈನ್ಸ್, ದಕ್ಷಿಣ ಕೊರಿಯಾ ಶ್ರೀಲಂಕಾ, ಇತ್ಯಾದಿ ದೇಶಗಳಲ್ಲಿ ಭಾರತದಿಂದ ಗೋಧಿಯ, ಆಮದಿಗಾಗಿ ವ್ಯವಸ್ಥೆ ಮಾಡಿಕೊಂಡಿವೆ. ಇಲ್ಲಿ ಭಾರತ ಮಾಡಿದ ಉಪಾಯವೆಂದರೆ, ತನ್ನ ಉಗ್ರಾಣದಲ್ಲಿದ್ದ, ಸುಮ್ಮನೆ ಕೊಳೆಯುತ್ತಿದ್ದ ಗೋಧಿಯನ್ನು ಭಾರತ ಅತ್ಯಂತ ಅಗ್ಗದ ದರದಲ್ಲಿ ಮಾರುಕಟ್ಟೆಗೆ ತಂದಾಗ ಸಸ್ತಾ ಬೆಲೆಯಲ್ಲಿ ಸಿಗುವ ಈ ಮಾಲನ್ನು ಕೊಳ್ಳುವ ಯೋಜನೆ ಹಾಕಿಕೊಂಡರು. ವಿಯಟ್ನಾಂನಲ್ಲಿ ಬಡವರಿಗೆ ಸುಲಭದರದಲ್ಲಿ ವಿತರಿಸಲು, ಕೊರಿಯಾದಲ್ಲಿ ಪಶು ಆಹಾರಕ್ಕೆ ಇದನ್ನು ಬಳಸಲಾಗುತ್ತಿದೆ ಎಂದು ಶ್ರೀ ಬಿ.ಎ. ಶಿವಶಂಕರ್ ಅವರ ಪತ್ರಿಕಾ ಲೇಖನದಲ್ಲಿ ಇತ್ತೀಚೆಗೆ ಬರೆದಿದ್ದಾರೆ. ಅಲ್ಲದೆ ಗೋಧಿಯು ಹಾಗೆ ಉಗ್ರಾಣದಲ್ಲಿ ಬಹಳಷ್ಟು ಕಾಲ ಉಳಿಯುವಂತೆ ಮಾಡುವ ಬದಲು ಆಹಾರ ಖರೀದಿ ಮತ್ತು ಸಂಗ್ರಹಣೆಯಲ್ಲಿ ಸುಧಾರಣೆ ತರಬೇಕೆಂದು ತಮ್ಮ ಅಭಿಪ್ರಾಯವನ್ನು ವ್ಯಕ್ತಮಾಡಿದ್ದಾರೆ.

ಭಾರತದ ಯಾವುದೇ ಪ್ರಾಂತ್ಯವಾಗಲಿ, ಜಾಗತಿಕ ಪ್ರಭಾವದಿಂದ ತಪ್ಪಿಸಿಕೊಳ್ಳಲು ಸಾಧ್ಯವಾಗದಿರಬಹುದು. ಆದರೆ ಸ್ಥಳೀಕರಣ ಅಥವ ದೇಶೀಕರಣಗಳ ಸಂಯುಕ್ತತೆಯಲ್ಲಿ ಜಾಗತೀಕರಣ ಸಹಕರಿಸಿದರೆ ಕೃಷಿ ಪ್ರಗತಿಯ ಎಲ್ಲ ಆಯಾಮಗಳಿಗೆ ಸಮತೋಲನ ಒದಗೀತು. ಕರ್ನಾಟಕದ ಕೃಷಿವಲಯದ ದೃಷ್ಟಿಯಿಂದ ಈ ಮುಂದಿನ ಅಂಶಗಳನ್ನು ಗಮನಿಸಬೇಕು; ವಿಮರ್ಶಿಸಬೇಕು.

ನಮ್ಮಲ್ಲಿ ಕೃಷಿ ಅಥವಾ ಬೇಸಾಯ ಪ್ರಮುಖವಾಗಿ ತುತ್ತಿಗೆ ಆಸರೆ. ಅದೇ ಯೂರೋಪು, ಅಮೇರಿಕ, ಕೆನಡಾ, ಆಸ್ಟ್ರೇಲಿಯಾ ಇತ್ಯಾದಿ ಮುಂದುವರಿದ ದೇಶಗಳಲ್ಲಿ ಕೃಷಿಗಾರಿಕೆ ಒಂದು ವಾಣಿಜ್ಯ ಚಟುವಟಿಕೆ. ಅಂತಾಗಿ ಆರ್ಥಿಕ ಲಾಭದೃಷ್ಟಿಯಿಂದಲೇ ತಮ್ಮ ಮಾರುಕಟ್ಟೆಯನ್ನು ವೃದ್ಧಿಗೊಳಿಸಿಕೊಳ್ಳುವ ಉಪಾಯಗಳನ್ನು ಅವು ಕಂಡುಕೊಳ್ಳುತ್ತಲೇ ಇರುತ್ತವೆ. ಹೀಗಾಗಿ ಡಬ್ಲ್ಯುಟಿಓ ಮುಖ್ಯವಾಗಿ ಆಮದು, ರಫ್ತುಗಳ ವಲಯದಲ್ಲಿಯೇ ಈ ದೇಶಗಳ ಪ್ರಭಾವವನ್ನು ಸಾದರಪಡಿಸುತ್ತದೆ.

ನಮ್ಮ ರಫ್ತುಗಾರಿಕೆಯ ಸಾಮರ್ಥ್ಯಕ್ಕೆ, ಅಭಿವೃದ್ಧಿಸಿದ್ಧಿ ದೇಶಗಳು ವಿಧಿಸಿರುವ ಆಮದುಸುಂಕ, ಅಂತರಾಷ್ಟ್ರೀಯ ಸುಲಭ ಧಾರಣೆಗಳು ಸ್ವದೇಶೀಯರಿಗೆ ಅವರು ನೀಡುವ ರಫ್ತು ಸಬ್ಸಿಡಿಯ ಪ್ರಮಾಣ, ನಮ್ಮಲ್ಲಿಯ ದುಬಾರಿ ಸಾಗುವಳಿ ವೆಚ್ಚ, ನಿರ್ವಹಿಸಬೇಕಾದ ಧಾನ್ಯ ನಿರೋಗ ಮಾದರಿಮಟ್ಟ ಇವೆಲ್ಲ ಸವಾಲಾಗಿವೆ. ನಮ್ಮಲ್ಲಿ ಕೃಷಿ ವ್ಯವಹಾರಕ್ಕೆ ಮೂಲಸೌಲಭ್ಯ ವ್ಯವಸ್ಥೆ ಅಥವಾ ಮೂಲ ಸೌಕರ್ಯಗಳೆನಿಸುವ ರಸ್ತೆ ಸೌಲಭ್ಯ, ಸತತ ಸೂಕ್ತ ವಿದ್ಯುತ್ ಸರಬರಾಜು, ಶೈತ್ಯೀಕರಣ ವ್ಯವಸ್ಥೆ ಹಾಗು ಆ ಸರಪಳಿ ನಿರಂತರತೆ, ಸಂಸ್ಕರಣ, ಸಂಗ್ರಹಣ, ಸಂವಹನಸಂಪರ್ಕ, ಸಾಗಾಣಿಕೆ, ಪ್ರಚಾರ, ನೀರೊದಗಣೆ, ಪ್ಯಾಕಿಂಗ್ ವ್ಯವಸ್ಥೆ ಮಾರಾಟ ಮಳಿಗೆ, ಉತ್ಪನ್ನಗಳ ಗುಣಮಟ್ಟ ನಿರ್ಧಾರಕ ಪ್ರಯೋಗಶಾಲೆ, ವ್ಯಾಪಾರ ವ್ಯೂಹ ಇತ್ಯಾದಿಗಳು ಸುವ್ಯವಸ್ಥಿತವಾಗದ ಹೊರತು ರಫ್ತುಗಾರಿಕೆಯಲ್ಲಿ ಜಾಗತಿಕ ಮಟ್ಟದಲ್ಲಿ ಸ್ಪರ್ಧಿಸಲು ಸಾಧ್ಯವಾಗುವುದು ಕಷ್ಟ.

ಪ್ರಮುಖವಾಗಿ ಉತ್ಪನ್ನವೆಚ್ಚ ಕಡಿತಕ್ಕೆ ರಸಗೊಬ್ಬರ ಮತ್ತು ಸಾವಯವ ಗೊಬ್ಬರ ಸೇರಿಸಿ ಮಾಡುವ ಸಂಯುಕ್ತ ಪೌಷ್ಟಿಕ ಪೋಷಣೆ, ರಸ್ತೆ ಸಾಗಾಣಿಕೆ ಬದಲು ರೈಲು ಮೂಲಕ ಸಾಗಾಣಿಕೆ ಇತ್ಯಾದಿಗಳೂ ನೆರವಾಗುತ್ತವೆ. ನಮ್ಮಲ್ಲಿಯ ಕನಿಷ್ಠ ಬೆಂಬಲ ಬೆಲೆಗಿಂತ ಅಂತರಾಷ್ಟ್ರೀಯ ಬೆಲೆಗಳು ಕೆಲವು ಬೆಳೆಸರಕುಗಳಿಗೆ ಕಡಿಮೆ ಇರುವುದು; ಅಭಿವೃದ್ಧಿಸಿದ್ಧಿ ರಾಷ್ಟ್ರಗಳು **ಕೆಂಪುಪೆಟ್ಟಿಗೆ, ಹಸಿರುಪೆಟ್ಟಿಗೆ,**

**ನೀಲಿಪೆಟ್ಟಿಗೆ** ಎಂಬ ಯೋಜನೆಯಡಿ ಬೆಳೆಗಾರರಿಗೆ ಕೊಡುತ್ತಿರುವ ನಿಧಿನೆರವು ಅಥವಾ ರಿಯಾಯಿತಿಗಳು ಅವು ನೀಡುತ್ತಿರುವ ಸಬ್ಸಿಡಿಗಳನ್ನು ಮರೆಮಾಚುವ ಉಪಾಯವಾಗಿದೆ. ಇದು ತಮ್ಮ ಬೆಳೆಗಾರರಿಗೆ ಅಭಿವೃದ್ಧಿಶೀಲ ರಾಷ್ಟ್ರಗಳಿಗೆ ಕೊಡಲು ಸಾಧ್ಯವಾಗದಿರುವುದರಿಂದ ಅವುಗಳ ಹಿತಾಸಕ್ತಿಗೆ ಮುಂದುವರಿದ ರಾಷ್ಟ್ರಗಳಿಂದಾದ ವಂಚನೆಯೆ ಆಗಿದೆ. ನಮ್ಮಲ್ಲಿ ಉತ್ಪನ್ನ ತಂತ್ರಜ್ಞಾನ. ಕೃಷಿ ಉತ್ಪನ್ನಗಳ ಸಂಸ್ಕರಣೆ, ಜಗತ್ತಿನೊಡನೆ ಕುಶಲ ವಾಣಿಜ್ಯ ವ್ಯವಹಾರ ಇತ್ಯಾದಿಗಳ ಕುರಿತು ಆದ್ಯತಾ ಸಂಶೋಧನೆ ಆಗಬೇಕಿದೆ. ವಿಶ್ವವ್ಯಾಪಾರ ಸಂಘಟನೆ (WTO)ಯ ಪ್ರಭಾವವು ಪ್ರಮುಖವಾಗಿ ಕೃಷಿ ಉತ್ಪನ್ನಗಳ ಮೇಲಿನ ಸಬ್ಸಿಡಿ, ಮಾರುಕಟ್ಟೆ ಸಾನ್ನಿಧ್ಯ, ಆಹಾರ ಸಂರಕ್ಷಣೆ, ಬೌದ್ಧಿಕ ಆಸ್ತಿಸ್ವಾಮ್ಯ, ಬೆಳೆ ಪರಿಕರಗಳು, ಹಾಗೂ ವಾಣಿಜ್ಯ ಸಂಬಂಧೀ ಹೂಡಿಕೆಗಳ ಮೇಲೆ ಆಗುತ್ತದೆ. ಅಂತಾಗಿ ಭಾರತದ ಖಾಸಗೀ ವಲಯವು ಅಂತರ್‌ರಾಷ್ಟ್ರೀಯ ಮಟ್ಟಕ್ಕೆ ಸರಿದೂಗುವ ಹೊಸ ಬೀಜ ಮಾದರಿಗಳನ್ನು ಉತ್ಪಾದಿಸಿದರೆ ಬಹು ಲಾಭಕರ. ಇಂದಿನ ಜಾಗತೀಕರಣ, ಉದಾರೀಕರಣ ಯುಗದಲ್ಲಿಯೂ ಭಾರತದ ಕೃಷ್ಯುತ್ಪನ್ನಗಳ ರಫ್ತು ಧನಾತ್ಮಕವಾಗಿ ಹೆಚ್ಚಳಗೊಂಡಿಲ್ಲ. ಬದಲು ಕಾಳುಗಳು, ಬೇಳೆಗಳು ಹಾಗೂ ಸಸ್ಯಜನಿತ ತೈಲಗಳನ್ನು ಆಮದು ಮಾಡಿಕೊಂಡಿದೆ. ರಫ್ತಾಗಬೇಕಾದ ಸಕ್ಕರೆ ಪ್ರಮಾಣ ನಮ್ಮಲ್ಲಿದ್ದರೂ ಸಕ್ಕರೆಯನ್ನು ಆಮದು ಮಾಡಿಕೊಳ್ಳಲಾಗಿದೆ. ಅದಕ್ಕೆ ಕಾರಣಗಳು ಬೇರೆ. ಇಂದು ಭಾರತದಲ್ಲಿ General subsidy box ಅಂದರೆ ರಿಯಾಯಿತಿ ಹಾಗೂ ರಿಯಾಯಿತಿ ರಹಿತ ನೆರವಿನ ಸಂದರ್ಭಗಳನ್ನು ಬೆಳೆಸಬೇಕಾದ ಅಗತ್ಯವಿದೆ. ಕೃಷಿ ಸಂಬಂಧದ ಒಪ್ಪಂದದಲ್ಲಿ ಮಾರುಕಟ್ಟೆ ಸಾಮೀಪ್ಯ, ದೇಶೀಯ ಬೆಂಬಲ, ಹಾಗೂ ರಫ್ತು ಸಬ್ಸಿಡಿಗಳನ್ನು ಸದಸ್ಯರಾಷ್ಟ್ರಗಳು ಮಾನ್ಯ ಮಾಡಬೇಕಿದೆ. ಇದರ ಜೊತೆಗೆ ಸಣ್ಣ ರೈತರ ಮೇಲೆ ಕೃಷಿ ಪರಿಕರಗಳ ಧಾರಣೆ ಹೆಚ್ಚಳ, WTO ದಿಂದಾದ ಪ್ರತಿಕೂಲ ಪರಿಣಾಮ, ಸಂಪನ್ಮೂಲಗಳ ಕ್ಷೀಣಿಸುವಿಕೆ, ಕೃಷಿ ಭೂಮಿಗಳನ್ನೂ, ಕೃಷಿಯೇತರ ಬಳಕೆಗಾಗಿಸಿರುವುದು–ಇವೆಲ್ಲ ನಮ್ಮ ಬೇಸಾಯದ ಬೆಳವಣಿಗೆಗೆ ಸವಾಲಾಗಿದೆ. ಇದಲ್ಲದೆ ಇಂದಿನ ಉದಾರೀಕರಣದಿಂದ ನಮ್ಮ ಕೃಷ್ಯುತ್ಪನ್ನಗಳು ಅಸಂಪ್ರದಾಯಿಕ ಬೆಳೆಗಳಾಗಿ ಮೀಸಲಾಗತೊಡಗಿವೆ ಅಥವಾ ಅಸಂಪ್ರದಾಯಿಕ ಬೆಳೆಗಳಾಗುವ ಒಲವು ತೋರಿವೆ. ಅಂದರೆ ತರಕಾರಿಗಳು, ಸಂಸ್ಕರಿತ ಹಣ್ಣುಗಳು ಹಾಗು ಪ್ರಾಣಿ ಜನ್ಯ ಉತ್ಪನ್ನಗಳ ರಫ್ತು ಪ್ರಮಾಣವು 2000–2001ರ ಅವಧಿಯಲ್ಲಿ ಶೇ 24.2ರಷ್ಟು ಗಮನಾರ್ಹ ಹೆಚ್ಚಳವಾಗಿದೆ. ಇದು ಸಣ್ಣ ರೈತರಿಗೆ ಹಿತಕರವಾಗಿದೆ. ಕಾರಣ ಕುಟುಂಬದ ಸದಸ್ಯರೆಲ್ಲರ ದುಡಿಮೆ ಇಲ್ಲಿ ದೊಡ್ಡ ರೈತರದಕ್ಕಿಂತ ಹೆಚ್ಚು ತೊಡಗಿಕೊಂಡಿರುತ್ತದೆ. ಹಾಕುವ ಬಂಡವಾಳ ಬದಲಾಗುವ ಮಾದರಿಗಳಾಗಬಲ್ಲವು.

ಬದಲಾವಣೆಗೊಳ್ಳುವಂಥ ಆರ್ಥಿಕ ಪರಿಸರಕ್ಕೂ ಶೀಘ್ರವಾಗಿ ಇವು ಹೊಂದಿಕೊಳ್ಳಬಲ್ಲವು. ಆದರೆ ಈ ಸಣ್ಣ ರೈತರ ಬಣಕ್ಕೆ ಕೆಲವು ಮಿತಿಗಳಿವೆ; ಹೊಸ ಕೃಷಿ ಸಂದರ್ಭಗಳಲ್ಲಿ ಹೂಡಿಕೆಗೆ ಬಂಡವಾಳದ ಕೊರತೆ ಇದೆ. ಪ್ರತಿ ರೈತನ ಮಾರುವ ಉತ್ಪನ್ನಗಳ ಮಿಗಿತೆ ಕಡಿಮೆ ಪ್ರಮಾಣದಲ್ಲಿದ್ದು ದೊಡ್ಡ ರೈತರದಕ್ಕಿಂತ ಕಡಿಮೆ ಹಣ ಲಭ್ಯವಾಗುತ್ತಿದೆ. ಆರ್ಥಿಕ ಅನಾನುಕೂಲಗಳಿಂದ ಉತ್ಪನ್ನಗಳ ಪ್ರಮಾಣವು ನಿರ್ಬಂಧಗೊಳ್ಳುತ್ತಿದೆ; ಸ್ಥಿರಾಸ್ತಿಯ ಪ್ರಮಾಣ ಬಹಳ ಕಡಿಮೆ ಇರುವ ಕಾರಣ ಸಾಮಯಿಕ ಸೂಕ್ತ ಸಾಲದ ಹಣ ದೊರೆಯಲು ಒದಗುವ ಕಷ್ಟ, ಹೊಸ ತಂತ್ರಜ್ಞಾನ ಹಾಗು ಮಾಹಿತಿ ಸೂಕ್ತವಾಗಿ ಲಭ್ಯವಿಲ್ಲದಿರುವುದು, ಉತ್ಪನ್ನಗಳ ಅಸ್ಥಿರ ಬೆಲೆ, ಹವಾಮಾನಗಳ ಏರುಪೇರು ಇತ್ಯಾದಿಗಳಿವೆ ದಿಟ. ಇಷ್ಟೆಲ್ಲ ಮಿತಿಗಳ ನಡುವೆಯೂ, ಸಣ್ಣ ಹಿಡುವಳಿದಾರರ ಸಹಕಾರಿ ಪ್ರಯತ್ನವಾದಷ್ಟೂ ಅವರಿಗೆ ವಿಪುಲ ಅವಕಾಶಗಳು ಹೊಸ ಆರ್ಥಿಕ ವಲಯದಲ್ಲಿ ಲಭ್ಯವಾಗುತ್ತವೆ ಎಂಬ ಅಭಿಪ್ರಾಯಗಳೂ ವ್ಯಕ್ತವಾಗಿವೆ. ಸುಮಾರು ಶೇ.40 ರಷ್ಟು ಜನಸಂಖ್ಯೆ ಖುಷ್ಕಿ ಸಾಗುವಳಿಯನ್ನವಲಂಬಿಸಿರುವಲ್ಲಿ, ಸಣ್ಣ ಮತ್ತು ಅತಿಸಣ್ಣ ರೈತರೇ ಇದರಲ್ಲಿ ಹೆಚ್ಚು ಸಂಖ್ಯೆಯಲ್ಲಿದ್ದು, ಕೃಷಿಯಲ್ಲಿ ಪ್ರಮುಖ ಪಾತ್ರಧಾರಿಗಳಾಗಿದ್ದಾರೆ. ಅವರನ್ನೂ ವಿಶ್ವವ್ಯಾಪಾರ ಸಂಘಟನೆಯ ಸವಾಲುಗಳಿಗೆ ಖುಷ್ಕಿ ಬೆಳೆಗೆ ಸಂಬಂಧಿಸಿದಂತೆ ಸಿದ್ಧಪಡಿಸಬೇಕಾಗಿದೆ.

ವಿಶ್ವ ವ್ಯಾಪಾರ ಸಂಘಟನೆಯ ಒಪ್ಪಂದಗಳು ಭಾರತದ ಕೃಷಿ ವಲಯಕ್ಕೆ ಆಂತರಿಕ ಹಾಗೂ ಬಾಹ್ಯ ಸವಾಲುಗಳನ್ನಿಟ್ಟು ಅವಕಾಶಗಳನ್ನು ಒದಗಿಸಿದೆ ಎನ್ನಲಾಗಿದೆ. ತಾಂತ್ರಿಕತೆ, ಪರಿಸರ ಹಾಗು ಕೃಷಿ ಉತ್ಪನ್ನಗಳ ಸಂದರ್ಭಗಳಲ್ಲಿ ಸಾಧಕ ಬಾಧಕಗಳ ಬಗ್ಗೆಯೂ ಶಂಕೆಯು ವ್ಯಕ್ತಗೊಂಡಿದೆ. ರಫ್ತು ಸಬ್ಸಿಡಿಯನ್ನು ಡಬ್ಲ್ಯುಟಿಓ ಒಪ್ಪಂದದಲ್ಲಿರುವಂತೆ ಅಭಿವೃದ್ಧಿಸಿದ್ಧಿ ದೇಶಗಳು ಕಡಿಮೆಗೊಳಿಸದಿರುವ ಕಾರಣವಾಗಿ ಬೆಲೆಕುಸಿತ ಒದಗಿ, ಅಭಿವೃದ್ಧಿಶೀಲ ರಾಷ್ಟ್ರಗಳ ಕೃಷಿ ಉತ್ಪನ್ನಗಳ ಬೆಲೆ ಹೆಚ್ಚಳವಾಗಲಿ, ಅಭಿವೃದ್ಧಿಸಿದ್ಧಿ ದೇಶಗಳ ಮಾರುಕಟ್ಟೆಗಳ ಸುಧಾರಿತ ಸಂಪರ್ಕವಾಗಲಿ ಸಾಧ್ಯವಾಗಿಲ್ಲ. ಬದಲು ಮುಂದುವರಿದ ಆ ರಾಷ್ಟ್ರಗಳು ಹಸಿರುಪೆಟ್ಟಿಗೆ, ನೀಲಿಪೆಟ್ಟಿಗೆ ಹೆಸರಿನಲ್ಲಿ ಪರಿಸರ ರಕ್ಷಣೆಯ ನೆಪದಲ್ಲಿ ತಮ್ಮಲ್ಲಿನ ಕೃಷಿವಲಯಕ್ಕೆ ಭಾರಿ ಸಂರಕ್ಷಣೆಯನ್ನು ಒದಗಿಸಿವೆ. ಇದು ಅಭಿವೃದ್ಧಿಶೀಲ ರಾಷ್ಟ್ರಗಳಿಗೆ ಮಾರಕವಾದಂಥ ಅಗ್ಗದ ಆಮದಿಗೆ ಅವಕಾಶವಾಗಿ, ದೇಶೀಯ ಉದ್ಯಮಗಳ ಬೆಳವಣಿಗೆಗೆ ಧಕ್ಕೆ ತರುತ್ತದೆ. ಭಾರತ ಇಂಥ ಪೆಟ್ಟಿಗೆ ರಕ್ಷಣೆಗಳ ನಿಷೇಧಕ್ಕೆ ತೀವ್ರ ಒತ್ತಡ ತರಬೇಕು. ಏಕರೀತಿಯ ಬೆಂಬಲದ ಒಟ್ಟಾರೆಯ ಕಾರ್ಯಕ್ರಮ (Single aggregate measure of support) ಜಾರಿಗೆ ಆಗ್ರಹಿಸಬೇಕು.

## ವಿಷಯ–3: ಭಾರತೀಯ ಕೃಷಿ, ಮುಕ್ತ ವಾಣಿಜ್ಯ, ವಿಶ್ವವ್ಯಾಪಾರ ಸಂಘಟನೆ (WTO) ಇತ್ತೀಚಿನ ಒಂದು ವ್ಯಾಖ್ಯೆ*2

ಶ್ರೀ ರಮೇಶ್‌ಚಂದ್ ಅವರ ಕೃತಿಯಲ್ಲಿ ಹೀಗಿದೆ: ಕೃಷಿ ಭಾರತೀಯ ಆರ್ಥಿಕ ಸಾಮರ್ಥ್ಯದ ಒಂದು ಪಾರಂಪರಿಕ ಮಹಾಶಕ್ತಿ. ವಿದೇಶಿ ವಿನಿಮಯಕ್ಕೆ ತಂಬಾಕು, ಚಹಾ, ಟೀ, ಗೇರುಬೀಜ, ಹತ್ತಿ, ಬಸುಮತಿ ಅಕ್ಕಿ, ಸಾಂಬಾರ ಜಿನಿಸಿನ ಮೂಲಕ ರಫ್ತಿನ ಸಂಪ್ರದಾಯದಲ್ಲಿ ಅದು ನೆರವಾಗಿದೆ. ಆದರೆ 1990ರ ದಶಕದಲ್ಲಿ ಕೃಷಿ ಉತ್ಪನ್ನಗಳ ಹಾಗೂ, ಕೃಷಿ ಉತ್ಪನ್ನೇತರ ವಸ್ತುಗಳ ರಫ್ತಿನಿಂದ ಕುಂಠಿತಗೊಂಡರೂ ತನ್ನ ಮಹತ್ವದ ಪಾತ್ರವನ್ನು ವಿದೇಶವಿನಿಮಯದಲ್ಲಿ ತೀರ ಕಡಿದುಕೊಳ್ಳಲಿಲ್ಲ. ಆರ್ಥಿಕ ಸುಧಾರಣೆಗಳು 1996–97ರ ವೇಳೆಗೆ ಅಂತರ್‌ರಾಷ್ಟ್ರೀಯ ಕೃಷಿ ವಸ್ತುಗಳ ಬೆಲೆಗಳಿಗೆ ಹೋಲಿಸಿದರೆ ದೇಶಿಯ ಮಾರುಕಟ್ಟೆಬೆಲೆ ಸುಲಭದರದಲ್ಲಿ ಮುಂದುವರಿದು ಬಂದಕಾರಣ, ಭಾರತದ ರಫ್ತಿನ ಪ್ರಮಾಣ ಬೆಳೆಯಿತು. ಆದರೆ ಕೆಲವು ತಜ್ಞರು, ಕೃಷ್ಯುತ್ಪನ್ನ ರಫ್ತುಗಳ ಬಗ್ಗೆ ವಿವೇಚನಾರಾಹಿತ್ಯ ಒಲವು ಹೆಚ್ಚುವುದು ಸರಿಯಲ್ಲವೆಂದು ಎಚ್ಚರಿಸಿದರು. ಉದಾರೀಕರಣ ಚಿಂತನೆಯ ಪ್ರಭಾವದಲ್ಲಿ ಆ ಎಚ್ಚರಗಳು ನಿರ್ಲಕ್ಷಿತವಾದುವು. ಕೃಷ್ಯುತ್ಪನ್ನ ರಫ್ತಿನ ಆವೇಗ (momentum) ಹೀಗೆ ಹೆಚ್ಚಿದ್ದುದು, ಡಬ್ಲ್ಯುಟಿಓ ವ್ಯವಸ್ಥೋತ್ತರ ಕಾಲದಲ್ಲಿ ತಿರುಗುಮುರುಗಾಗಿ ಆಮದಿನ ಪ್ರಮಾಣ ಏರುಗತಿ ಕಂಡಿತು. 1996–97ರ ಅವಧಿಯಲ್ಲಿ ಭಾರತದ ಕೃಷ್ಯುತ್ಪನ್ನಗಳ ಹಾಗು ತತ್ಸಂಬಂಧೀ ಉತ್ಪನ್ನಗಳ ರಫ್ತು ಪ್ರಮಾಣವು ಹೆಚ್ಚಳದ ತುದಿಮುಟ್ಟಿತ್ತು. 1995–98 ರಿಂದ 2000 ದ ಅವಧಿಯಲ್ಲಿ ಅದು ಇಳಿತಗೊಳ್ಳುತ್ತಲೇ ಬಂದಿತು. ಈ ಹಿನ್ನಡೆಗಳು ಡಬ್ಲ್ಯುಟಿಓ ದೊಡನಾದ ಭಾರತದ ಬದ್ಧತೆ ಹಾಗು ಉದಾರೀಕರಣದ ಪರಿಣಾಮವೇ? ಎಂಬೆಲ್ಲ ಪ್ರಶ್ನೆಗಳಿಗೆ ಕಾರಣವಾಗುತ್ತಿವೆ. ರೈತ ವರ್ಗವು ತಮ್ಮ ಕೃಷಿ ಬದುಕಿನ ಭವಿಷ್ಯದ ಬಗ್ಗೆ ಆತಂಕಗೊಂಡು ಕೆಲವೇಳೆ ಆ ವ್ಯವಸ್ಥೆ ವಿರುದ್ಧ ಪ್ರತಿಭಟನೆ ಸೂಚಿಸತೊಡಗಿತು. ಈ ದೃಷ್ಟಿಯಿಂದ ಡಬ್ಲ್ಯುಟಿಓ ಜೊತೆಗಿನ ಬದ್ಧತೆ ಭಾರತದ ಕೃಷಿಗೆ ಪ್ರತಿಕೂಲವಾಗುತ್ತಿದೆಯೆ? ನಮ್ಮ ಕೃಷಿಗಾರಿಕೆಯಲ್ಲಿ ಕಡಿಮೆ ಸಾಮರ್ಥ್ಯವೆ? ಅಥವಾ ಸೂಕ್ತವಾದ ವಾಣಿಜ್ಯ ವ್ಯಾಪಾರ ನೀತಿ ಮತ್ತು ತಂತ್ರದ ಅಭಾವವೇ? ಎಂಬ ಬಗೆಗೆಲ್ಲ ಪರ್ಯಾಲೋಚಿಸಬೇಕಾಗುತ್ತದೆ.

---

*2. Ramesh chand, 2002, *Trade Liberalisation, WTO and Indian Agriculture,* Mittal publications, New Delhi-pp. 2,33,52,83,97,110,137-38

1991 ರಿಂದಲೇ ಭಾರತವು ಕೃಷ್ಯುತ್ಪನ್ನಗಳ ರಫ್ತಿನ ಸಂದರ್ಭದಲ್ಲಿ ಉದಾರೀಕರಣಕ್ಕೆ ಮುಕ್ತವಾಗಿ ತೆರೆದುಕೊಂಡಿತು. ಇದು ಈಗಾಗಲೇ ತಿಳಿಸಿದಂತೆ ಡಬ್ಲ್ಯುಟಿಓ ವ್ಯವಸ್ಥೆಯೋತ್ತರ ಕಾಲದಲ್ಲಿ ಆಮದಿಗೆ ತೆರೆದ ಸ್ವಾಗತ ಬಾಹುಳ್ಯ, ರಫ್ತಿಗೆ ಒದಗಲಿಲ್ಲ. ವಿಶೇಷತಃ ಅಕ್ಕಿ ಮತ್ತು ಗೋದಿಗೆ ಬೆಂಬಲ ಬೆಲೆ ಹೆಚ್ಚಾಗಿ, ಸ್ಥಳೀಯ ಮಾರುಕಟ್ಟೆಯ ಬೆಲೆ ಏರಿದ ಕಾರಣ ಹೀಗೆ ಪ್ರತಿಕೂಲ ಪರಿಣಾಮವಾಯಿತು. ಆದರೆ ಭಾರತ ಇಂಥ ಸನ್ನಿವೇಶವನ್ನೂ ನಿರ್ವಹಿಸಿತು. ಸೌದಿ ಅರೇಬಿಯ, ಬಾಂಗ್ಲಾ, ಕೆನ್ಯಾ, ಸೋಮಾಲಿಯ, ದಕ್ಷಿಣ ಆಫ್ರಿಕ, ರಷ್ಯಾ ಇವುಗಳು ನಮ್ಮ ಅಕ್ಕಿಯನ್ನು ಕೊಳ್ಳುವ ಪ್ರಮುಖ ದೇಶಗಳಾಗಿದ್ದುದೂ ಇಂಥ ನಿರ್ವಹಣೆಗೆ ಅನುಕೂಲವಾಗಿತ್ತು. ಆಮದು ಸರಕುಗಳ ಪೈಕಿ ಖಾದ್ಯತೈಲದ ಆಮದು ಶೇ.40 ರಷ್ಟು ಈ ಅವಧಿಯಲ್ಲಿ ಹೆಚ್ಚಿತು. ಅಂತರಾಷ್ಟ್ರೀಯ ಮಾರುಕಟ್ಟೆಯಲ್ಲಿ, ಭಾರತ ತನ್ನ ವಿಪುಲ ಮಿಗಿತೆಯ ಆಹಾರ ಧಾನ್ಯಗಳನ್ನು ಮಾರಲಾಗದಿದ್ದುದು, ಒಂದು ಕಡೆ; ಇನ್ನೊಂದು ಕಡೆ, ಖಾದ್ಯ ತೈಲಗಳ ಕೊರತೆ, ಮೂರೈಕೆ ಇವೆರಡರ ನಡುವೆ ಸಮತೋಲನ ಸಾಧಿಸಲು ನಮ್ಮ ದೇಶೀಯ ನೀತಿಯ ಪುನರ್ವಿಮರ್ಶೆಯಾಗಬೇಕಾಯಿತು. ಅಂತರ್ ರಾಷ್ಟ್ರೀಯ ಬೆಲೆಗಳ ವರ್ತನೆಯ ಬಗೆಯನ್ನು ಅರಿತು ಕೃಷಿಯುತ್ಪನ್ನಗಳ ಕಾಳುಗಳ ಪ್ರಾಬಲ್ಯವಿರುವ ಭಾರತದಂಥ ಅಭಿವೃದ್ಧಿಸಾಧಕ ರಾಷ್ಟ್ರಗಳು ವ್ಯಾಪಾರ ವ್ಯವಹಾರವನ್ನು ರೂಪುಗೊಳಿಸಬೇಕು. ಇಲ್ಲಿ ಸರ್ಕಾರಗಳ ಪಾತ್ರವೂ ಸ್ಥಳೀಯ ಬೆಲೆಯನ್ನು, ಅಂತರಾಷ್ಟ್ರೀಯ ಬೆಲೆ ಏರುಪೇರುಗಳ ನಡುವೆಯೂ ನಿಯಂತ್ರಿಸಬಲ್ಲಂಥದ್ದಾಗಿದೆ. ಡಬ್ಲ್ಯುಟಿಓ ರೂಪುಗೊಂಡ ನಂತರದ ಕೃಷಿ ಸರಕುಗಳ ಬೆಲೆ ಇಳಿತವು, ಬೆಲೆಗಳ ಸ್ವಾಭಾವಿಕ ಏರಿಳಿತದ ವೃತ್ತೀಯ ಪ್ರವೃತ್ತಿಯು ಕಾರಣವೆನ್ನಬೇಕು; ಆದರೂ ವ್ಯಾಪಾರ ಬದ್ಧತೆಯ ಕಾರಣ ಸ್ಥಳೀಯ ಉತ್ಪನ್ನಗಳಿಗೆ ಕೊಟ್ಟಂಥ ಬೆಲೆ ಅಘಾತಕರವೂ ಆಗಿತ್ತು. ಬೇಸಾಯದ ಸಂದರ್ಭಕ್ಕೆ ಅದು ತಾಗಿದರಂತು. ಬೆಳೆಯ ಮಾದರಿಯ ಮೇಲೆ ತೀವ್ರ ಪರಿಣಾಮ ಮಾಡುವಂಥದ್ದಾಗಿತ್ತು. ಭಾರತೀಯ ರೈತರಲ್ಲಿ ಸಣ್ಣ ಹಾಗು ಅತಿ ಸಣ್ಣ ರೈತರುಗಳು, ಬಹಳಷ್ಟಿದ್ದು ಆಗಾಗಿನ ಬೆಳೆ ಪರ್ಯಾಯಗಳಿಗೆ ಒಗ್ಗಿಕೊಳ್ಳಲು ಸಾಧ್ಯವಾಗದಂಥ ಸ್ಥಿತಿ ಅವರಿಗಿದೆ. ಹೀಗಾಗಿ ಬೆಲೆಯ ವಾತಾವರಣವನ್ನು ಸ್ಥಿರಗೊಳಿಸಲು, ಅಗತ್ಯ ಹಾಗು ಅನಗತ್ಯ ಆಮದು ರಫ್ತು ಬೆಳೆಗಳ ಮೇಲಿನ ನಿಯಂತ್ರಣ ಹಾಗು ಆಮದು ರಫ್ತು ಸುಂಕಗಳನ್ನು ಹಾಕಿ, ಬೆಲೆ ಸಮತೋಲನಕ್ಕೆ ನಿಷ್ಪಕ್ಷಪಾತವಾಗಿ ನಿರ್ಧರಿಸುವ ವ್ಯವಸ್ಥೆ ಬೇಕು.

1990 ದಶಕಗಳಲ್ಲಿ ಸರಕುಗಳ ರಫ್ತು ಸ್ಪರ್ಧೆಯು ಅಂತರಾಷ್ಟ್ರೀಯ ಹಾಗು ದೇಶೀಯ ಬೆಲೆಗಳ ಸ್ಥಿತ್ಯಂತರಗಳ ಹಿನ್ನೆಲೆಯಲ್ಲಿ ಬಹಳಷ್ಟು ಮಾರ್ಪಾಟುಗಳೊಡನೆ ಕ್ರಿಯಾಶೀಲ ಚೈತನ್ಯದೊಂದಿಗೆ ಹೊರಹೊಮ್ಮಿತಷ್ಟೆ. ಆದರೂ ಅದರಲ್ಲಿ ಏರಿಳಿತವು 1995 ರಲ್ಲಿ ತೀವ್ರವಾಗಿ ಕಾಣಿಸಿಕೊಂಡಿತು. ಅಂದರೆ ರಫ್ತು ಸ್ಪರ್ಧೆಯ ಮೇಲೆ ಅದು ಪರಿಣಾಮನ್ನುಂಟುಮಾಡಿತು. ಭಾರತೀಯ ಸಂದರ್ಭದಲ್ಲಿ ಗೋಧಿ ಮತ್ತು ಮುಸುಕಿನ ಜೋಳದ ರಫ್ತುಗಾರಿಕೆ, ಸೋಯಾಬೀನ್ಸ್ ಸಾಸಿವೆ ಇತ್ಯಾದಿಗಳ ಆಮದುಗಾರಿಕೆಯನ್ನು ಸಮತೋಲನಿಸಬಲ್ಲದು. ಅದೊಂದು ರೀತಿ ವಿನಿಮಯ ಸರಬರಾಜು ಎನ್ನಬಹುದು. ಈ ಸಂದರ್ಭಗಳಲ್ಲಿ ನಮ್ಮ ಸ್ಪರ್ಧಾಶಕ್ತಿಯನ್ನು ದೇಶೀಯ ದರಗಳನ್ನು ಡಾಲರುಗಳು ರೂಪಕ್ಕೆ ಪರಿವರ್ತಿಸಿದರೆ ಅನುಕೂಲ. ಇದಕ್ಕಾಗಿ ಕೃಷ್ಯುತ್ಪನ್ನಗಳ ವೆಚ್ಚ ತಗ್ಗಿಸುವುದು, ತಂತ್ರಜ್ಞಾನದ ಆವಿಷ್ಕಾರಗಳಿಂದ ಉತ್ಪನ್ನಗಳನ್ನೂ ಅಭಿವೃದ್ಧಿಗೊಳಿಸುವುದು, ಈ ಬಗ್ಗೆ ಕ್ರಿಯೆ ಮತ್ತು ಅಧ್ಯಯನ ಎರಡೂ ಬೇಕು.

ಸಬ್ಸಿಡಿಗಳನ್ನು ಅಗ್ರಿಗೇಟ್ ಮೆಷರ್ ಸಪೋರ್ಟ್ (Amber box: ರಸಗೊಬ್ಬರ, ನೀರು ಪೂರೈಕೆ, ವಿದ್ಯುತ್ ಸಾಲ ಹಾಗು ಮಾರುಕಟ್ಟೆ ಬೆಂಬಲ ಬೆಲೆಗಳ ಮೂಲಕ ನೀಡುವ ಸಬ್ಸಿಡಿಯ ಪರ್ಯಾಯ ರೂಪ); ಹಸಿರುಪೆಟ್ಟಿಗೆ ಬೆಂಬಲ, (ಗ್ರೀನ್‌ಬಾಕ್ಸ್ ಸಪೋರ್ಟ್: ಅಮೇರಿಕೆಯಲ್ಲಿ ಇದು ಬಹಳ ಹೆಚ್ಚು, ಸಂಶೋಧನ ವೆಚ್ಚ, ಕೀಟಹಾವಳಿ ನಿಯಂತ್ರಣ ವೆಚ್ಚ, ತರಬೇತಿ, ಪರಿವೀಕ್ಷಣೆ, ಮಾರುಕಟ್ಟೆ ಸೌಲಭ್ಯ, ಮೂಲ ಸೌಕರ್ಯ ಅನುಬಂಧೀ ವೆಚ್ಚ! ಪರೋಕ್ಷ ರಿಯಾಯಿತಿಗಳನ್ನು ಒಳಗೊಂಡ ಸಹಾಯ ಇತ್ಯಾದಿ ವೆಚ್ಚಗಳನ್ನು ಭರಿಸುವಿಕೆ), ಹೀಗೆ ಟೋಟಲ್ ಡೊಮೆಸ್ಟಿಕ್ ಸಪೋರ್ಟ್, ರಫ್ತು ಸಬ್ಸಿಡಿ ಇತ್ಯಾದಿ ರೂಪುಗಳಲ್ಲಿ ಅಭಿವೃದ್ಧಿಸಿದ್ಧಿಯ ಯೂರೋಪಿಯನ್ ರಾಷ್ಟ್ರಗಳು ತಮ್ಮಲ್ಲಿನ ವ್ಯವಸಾಯಗಾರರಿಗೆ ನೀಡುತ್ತಿದ್ದು, ಅಭಿವೃದ್ಧಿಸಾಧಕ ದೇಶಗಳಿಗೆ ಸಮದರ್ಶಿ ನ್ಯಾಯ ದೊರೆತಿಲ್ಲ. ಹೀಗಾಗಿ ಭಾರತದಂಥ ಅಭಿವೃದ್ಧಿಸಾಧಕ ರಾಷ್ಟ್ರಗಳ ಈ ಎಲ್ಲ ಬಗೆಯ ಸಬ್ಸಿಡಿಗಳನ್ನು ಒಂದು ಚೌಕಟ್ಟಿನಡಿಯಲ್ಲಿ (one box) ತಂದು ಟೋಟಲ್ ಸಪೋರ್ಟ್ ಟು ಅಗ್ರಿಕಲ್ಚರ್ (TSA) ಎಂದು ನಾಮ ನಿರ್ದೇಶಿಸಲು ಒತ್ತಾಯ ಮಾಡಬೇಕಿದೆ. ಯೂರೋಪ್, ಯುಎಸ್‌ಎ ಹಾಗು ಕೆನಡಾ ದೇಶಗಳು ತಮ್ಮವರಿಗೆ ನೀಡುತ್ತಿರುವ ರಫ್ತು ಸಬ್ಸಿಡಿಗಳು ವಾಣಿಜ್ಯ ವ್ಯವಹಾರಗಳನ್ನು ಒಟ್ಟಾರೆ ವಿರೂಪಗೊಳಿಸುತ್ತಿರುವ ಅಥವಾ ತಿರುಚುತ್ತಿರುವ ಕಾರಣ ಅಂಥ ಸಬ್ಸಿಡಿಗಳನ್ನು ನಿಷೇಧಿಸಬೇಕು. ಕೃಷಿ ಸಂಬಂಧದ ಮುಂದಿನ ಒಪ್ಪಂದಗಳು, ಮಾರುಕಟ್ಟೆಯ ಸಾನಿಧ್ಯ (ಸನಿಹತೆ), ಸ್ಥಳೀಯ ಬೆಂಬಲ, ರಫ್ತು ಸಬ್ಸಿಡಿ ಹಾಗು ವಾಣಿಜ್ಯೇತರ

ಕಾಳಜಿಗಳ ಸಂದರ್ಭಗಳನ್ನೂ ಒಳಗೊಳ್ಳಬೇಕು. ರಫ್ತು ಸಬ್ಸಿಡಿಗೆ ಅವಕಾಶವಾಗದಂಥ ಭಾರತದಂಥ ರಾಷ್ಟ್ರಗಳಿಗೆ, ಬೆಲೆ ಕುಸಿತವಾದಾಗ ಅಲ್ಲಿನ ಬೆಳೆಗಾರರಿಗೆ, ಆಮದು., ರಫ್ತು ಸುಂಕ (Tariff) ವೊಂದು ಮಾತ್ರ ವಾಣಿಜ್ಯ ವ್ಯವಹಾರಗಳನ್ನು ನಿಯಂತ್ರಿಸಲು ಇರುವ ಮಾರ್ಗವಾಗಿದೆ ಹಾಗು ಅಂತರಾಷ್ಟ್ರೀಯ ಬೆಲೆಗಳ ಚಂಚಲತೆ ಎದುರು ರಕ್ಷಿಸಿಕೊಳ್ಳಲು ಅವಶ್ಯಕವಾಗಿದೆ. ಆಹಾರಧಾನ್ಯ ಸಂರಕ್ಷಕ ಪೆಟ್ಟಿಗೆ (Food Security box) ಅರ್ಥಾತ್ ಆಹಾರಧಾನ್ಯ ಸಂರಕ್ಷಣ (ಖಾತರಿ) ಬಂಧದಲ್ಲಿ; ಅಭಿವೃದ್ಧಿಸಾಧಕ ರಾಷ್ಟ್ರಗಳಿಗೆ, ಕೃಷಿಯ ಪಾತ್ರವು ಸುಲಭ ಹಾಗು ಮುಕ್ತ ನಿರ್ವಹಣೆಗೆ ಒದಗಬೇಕೆಂಬ ಪರಿಭಾವನೆಗಳೂ ಇವೆ. ಅಚ್ಚರಿ ಎಂದರೆ ಯುರೋಪಿಯನ್ ರಾಷ್ಟ್ರಗಳು, ಜಪಾನ್ ಹಾಗು ಕೇಲವು ಅಭಿವೃದ್ಧಿಸಿದ್ಧಿ ರಾಷ್ಟ್ರಗಳೂ ಬಹುಮುಖಿ ಔಪಚಾರಿಕ ಉಪಯೋಗದ ನೆಪದಲ್ಲಿ ಕೃಷಿಗೆ ಈ ಬಗೆಯ ವಿಶೇಷ ಸ್ಥಾನಮಾನಕ್ಕೆ ಒತ್ತಾಯಿಸುತ್ತಿವೆ. ಆದರೆ ಇದೊಂದು (ಬಹುರಾಷ್ಟ್ರೀಯ) ಔಪಚಾರಿಕ ಮಸಲತ್ತಿಗೆ ಅವಕಾಶವಾಗುವುದರಿಂದ ಇಂಥ ಆಹಾರ ಬಂಧದ ಜಾಲಕ್ಕೆ ಅಭಿವೃದ್ಧಿಸಾಧಕ ದೇಶಗಳು ಬಲಿ ಬೀಳಬಾರದು.

ಭಾರತವು ಖಾದ್ಯ ತೈಲ ಹಾಗು ಬೇಳೆಗಳ ಕೊರತೆಯನ್ನು ಆಮದಿನ ಮೂಲಕ ತುಂಬಿಕೊಳ್ಳುತ್ತಿದೆ. ಆದರೆ ಅದರ ಆಹಾರೋತ್ಪನ್ನಗಳ ಮಿಗುತೆಯು ರಫ್ತು, ಆಮದಿನ ಜೊತೆಗೆ ಸರಿ ಪ್ರಮಾಣದಲ್ಲಿ ಸ್ಪರ್ಧಿಸಲು ಈಗ ಕಷ್ಟವಾಗುತ್ತಿದೆ. ಈ ದಿಸೆಯಲ್ಲಿ ಬೆಳೆ ಪರ್ಯಾಯಗಳು ಒಂದು ಉತ್ತರವಾಗಬಹುದು. ಬೆಳೆ ತಂತ್ರಜ್ಞಾನದ ಪಾತ್ರ, ಕೃಷ್ಯುತ್ಪನ್ನಗಳ ವೆಚ್ಚ ಕಡಿತಕ್ಕೆ ಪೋಷಕವಾದ ಅನುಬಂಧ ವ್ಯವಸ್ಥೆಯ ಹಾಗು ಪ್ರಕ್ರಿಯೆಯ ಪಾತ್ರವೂ ಇಲ್ಲಿ ಮುಖ್ಯವಾಗುತ್ತವೆ. ಆಮದು ಸುಂಕದ ಹೆಚ್ಚಳವು, ಆಮದು ಪ್ರಮಾಣವನ್ನು ನಿಯಂತ್ರಿಸಿದರೂ, ಸ್ಪರ್ಧಾತ್ಮಕ ಗುಣಮಟ್ಟದಲ್ಲಿ ರಫ್ತನ್ನು ಹೆಚ್ಚಿಸುತ್ತವೆ ಎನ್ನುವಂತಿಲ್ಲ. ಜೈವಿಕ ತಂತ್ರಜ್ಞಾನದಲ್ಲಿ ಜಗತ್ತು ಅನ್ವಯಿಕವಾಗಿ ಮುಂದೆ ಹೋಗುತ್ತಿರುವಲ್ಲಿ ಭಾರತ ಅಂಥ ವಿಷಯದಲ್ಲಿ ಜಡವಾಗಿ, ಮಡಿವಂತಿಕೆಯಿಂದಿರುವಂತಿಲ್ಲ. ಮೂಲಸೌಕರ್ಯಗಳ ಅನುಬಂಧ ವ್ಯವಸ್ಥೆಯನ್ನು ಒದಗಿಸಿ ಸ್ಥಳೀಯ ಕೃಷ್ಯುತ್ಪನ್ನಗಳ ಗುಣಮಟ್ಟವನ್ನು ಏರಿಸಿ ಖಾಸಗಿ ಹಾಗು ಸಾರ್ವಜನಿಕ ವಲಯ (ಮಾಧ್ಯಮ)ಗಳಲ್ಲಿ ಆರೋಗ್ಯಕರ ಸ್ಪರ್ಧೆಗೆ ಅವಕಾಶ ನೀಡಬೇಕು. ಸ್ಥಳೀಯ ಬೆಳೆಗಳ ಉತ್ಪನ್ನ ವೆಚ್ಚವನ್ನು ಕಡಿಮೆಗೊಳಿಸಬೇಕು.

ಬೆಳೆ ತಂತ್ರಜ್ಞಾನದ ಅನ್ವಯಕ್ರಮಗಳು, ಪರಿಸರ ಹಾಗು ಆರೋಗ್ಯಹಾನಿಯಂಥ ಗಂಡಾಂತರ ತಂದೊಡ್ಡುತ್ತಿವೆ ಎಂಬ ಆರೋಪ ಕೇಳಿಬರುತ್ತಿದೆ. ಹೀಗಾಗಿ ಕೇಂದ್ರ ಸರ್ಕಾರವು, ಬೆಳೆಗಳ ಮೇಲೆ ತಂತ್ರಜ್ಞಾನದ ಪ್ರಯೋಗವನ್ನು ಮತ್ತಷ್ಟು ಕಾಲ

ಮುಂದುವರಿಸಿ ಅದರ ಅನ್ವಯ ಸಾರ್ಥಕತೆಯನ್ನು ಪರೀಕ್ಷಿಸಲು ತಜ್ಞರಿಗೆ ಹೇಳಿದೆ. ಇಲ್ಲಿ ಭಾರತದ ಬೆಳೆ ಉತ್ಪನ್ನಗಳ ಹಿತಾಸಕ್ತಿ, ತಂತ್ರಜ್ಞಾನ ಅಥವಾ ಜೈವಿಕ ತಳಿತಂತ್ರಜ್ಞಾನಾಧಾರಿತ ಆಮದು ಬೆಳೆಗಳೆಂದು ಮುಖ್ಯವಾಗುತ್ತವೆ. ಅಂತಾಗಿ ಅನುಗುಣ ಸಂರಕ್ಷಣಾ ತಂತ್ರಕೌಶಲ್ಯವನ್ನು ರೂಪಿಸಬೇಕು. ಸಾರ್ವಜನಿಕ ವಲಯದಿಂದ ಗುಣಮಟ್ಟದ ಬೀಜಗಳ ಬೇಡಿಕೆಗೆ ಪೂರೈಕೆಯ ಸಾಮರ್ಥ್ಯ ಕಡಿಮೆ ಇರುವ ಕಾರಣ ರೈತಾಪಿ ವರ್ಗವು ತಮ್ಮ ಅಗತ್ಯಗಳಿಗೆ ಖಾಸಗಿ ವಲಯಕ್ಕೆ ಶರಣಾಗುತ್ತಿವೆ. ಇಲ್ಲಿ ದುರಾಶಾ ಪೀಡಿತ ಬೀಜ ಸಂಸ್ಥೆಗಳು ಕಳಪೆ (ಕೃತಕ) ಮಟ್ಟದ ಬೀಜಗಳನ್ನು ಅವರಿಗೆ ಮಾರಿರುವುದುಂಟು. ಇದು ಬೀಜದ ಬೆಲೆ, ಕೃಷಿ ಕೂಲಿ, ಇತರೆ ಕೃಷಿ ಅನ್ವಯ ಪರಿಕರ ಹೂಡಿಕೆ (input) ಹಾಗು ಬೆಳೆ ಇಳುವರಿ ಇತ್ಯಾದಿಗಳಲ್ಲಿ ತೊಡಗಿಸಿದ ಪರಿಶ್ರಮವನ್ನೆಲ್ಲ ಹಾಳುಗೆಡವುತ್ತದೆ. ಅಂತಾಗಿ ಗುಣಮಟ್ಟದ ಬೀಜ ವ್ಯವಹಾರಗಳನ್ನು ಉತ್ತೇಜಿಸಬೇಕು. ಡಬ್ಲ್ಯುಟಿಓ ರೂಪುಗೊಂಡ ನಂತರ ಜಾಗತಿಕ ಕೃಷ್ಯುತ್ಪನ್ನಗಳ ರಫ್ತಿನ ಮೊತ್ತದ ಪರಿಮಾಣವು ಹೆಚ್ಚಳಗೊಂಡು ಅದು ಗ್ರಾಹಕರಿಗೆ ಅನುಕೂಲವಾಯಿತು. ಉತ್ಪನ್ನದಾರರಿಗೆ ಪ್ರತಿಕೂಲವಾಯಿತು. ಅಭಿವೃದ್ಧಿಸಾಧಕ ದೇಶಗಳದಕ್ಕೆ ಹೋಲಿಸಿದರೆ, ವ್ಯವಸಾಯೋತ್ಪನ್ನಗಳ ರಫ್ತುಗಳ ಮೌಲ್ಯವು ಅಭಿವೃದ್ಧಿಸಿದ್ಧಿದೇಶಗಳಲ್ಲಿ ಹೆಚ್ಚು ಇಳಿಮುಗೊಂಡದ್ದು ಕಾಣಬರುತ್ತದೆ. ಇಂದು ಸಂಸ್ಕರಿತ ವ್ಯವಸಾಯೋತ್ಪನ್ನಗಳು, ಹೈನುಗಾರಿಕೆ ಉತ್ಪನ್ನಗಳು, ತೋಟಗಾರಿಕೆ ಉತ್ಪನ್ನಗಳಿಗೆ ದೇಶಿಯವಾಗಿ (ಅಂತರಿಕ) ಹಾಗು ಅಂತರಾಷ್ಟ್ರೀಯವಾಗಿ ಬೇಡಿಕೆಗಳು ಹೆಚ್ಚಿವೆ. ಇಂಥ ಬದಲಾದ ಬೇಡಿಕೆಯ ಸನ್ನಿವೇಶದ ಲಾಭ ಪಡೆಯುವ ನಾವು ಕೃಷಿ ವೈವಿಧ್ಯತೆಯ (ಬಹುಮುಖಿ ಕೃಷಿ ಸಾಧ್ಯತೆಗಳತ್ತ) ಪೂರಣದತ್ತ ವೇಗವಾಗಿ ಸಾಗಬೇಕಾಗಿದೆ. ನವೆಂಬರ್ 2001ರ ದೋಹಾದಲ್ಲಿ ನಡೆದ ನಾಲ್ಕನೇ ಮಂತ್ರಾಲೋಚನ ಸಭೆಯ ವಾಣಿಜ್ಯ ಸುತ್ತಿನ ಮಾತುಕತೆಗಳಲ್ಲಿ, ಅಭಿವೃದ್ಧಿಸಾಧಕ ದೇಶಗಳಿಗೆ ಆಹಾರ ಧಾನ್ಯ ಸಂರಕ್ಷಕ ಪೆಟ್ಟಿಗೆ, (Food security box), ಅಭಿವೃದ್ಧಿ ಸಿದ್ಧಿದೇಶಗಳಿಂದ ಹಂತ ಹಂತವಾಗಿ ರಫ್ತು ಸಬ್ಸಿಡಿಗಳ ಕಡಿತ ಈ ಬೇಡಿಕೆಗಳನ್ನು ಒಪ್ಪಿಕೊಳ್ಳುವ ಸೂಚನೆ ದೊರಕಿದೆ. ಹೀಗಾಗಿ ಜಾಗತೀಕರಣ ವಾಣಿಜ್ಯ ವ್ಯವಹಾರಗಳು ಇನ್ನು ಮುಂದೆ ಹೆಚ್ಚು ಸ್ಪರ್ಧಾತ್ಮಕವಾಗುತ್ತವೆ. ನಾವು ಈ ದಿಸೆಯಲ್ಲಿ ಹಿಂದೆ ಬೀಳುವಂತಿಲ್ಲ.

***ಮಂಥನ :*** *ಇಲ್ಲಿನ ಡಬ್ಲ್ಯುಟಿಓದ ಕುರಿತ ವ್ಯಾಖ್ಯೆಯಲ್ಲಿ ಬೇಸಾಯ ಪರಂಪರೆಯ ಭಾರತದ ರೈತ ಶಕ್ತಿ ಹಾಗು ಇತಿಮಿತಿಗಳನ್ನು ಗಮನಾರ್ಹವಾಗಿ*

ಮಂಡಿಸಲಾಗಿದೆ. ಡಬ್ಲ್ಯುಟಿಓದ ವಾಣಿಜ್ಯ ವ್ಯವಹಾರಗಳ ದೃಷ್ಟಿಯಿಂದ ಅಭಿವೃದ್ಧಿಸಿದ್ಧಿ ರಾಷ್ಟ್ರಗಳ ಆಕ್ರಮಣಶೀಲತೆ, ಅಭಿವೃದ್ಧಿಸಾಧಕ ರಾಷ್ಟ್ರಗಳ ಪ್ರತಿಕ್ರಿಯೆಯನ್ನು ಅಚ್ಚುಕಟ್ಟಾಗಿ ಪ್ರತಿಪಾದಿಸಲಾಗಿದೆ. ಕೃಷ್ಯುತ್ಪನ್ನಗಳ ಸ್ಪರ್ಧಾಮೌಲ್ಯವನ್ನು ಹೆಚ್ಚಿಸಲು, ವ್ಯವಹಾರವನ್ನು ಚುರುಕುಗೊಳಿಸಲು ತೆಗೆದುಕೊಳ್ಳಬೇಕಾದ ಕಾರ್ಯಕ್ರಮಗಳನ್ನು ಅಂಕಿಅಂಶಗಳ ಆಧಾರದ ಮೇಲೆ ಅರಿವಿಗೆ ತರಲಾಗಿದೆ. ಬೆಲೆ ಕುಸಿತದ ಪರಿಣಾಮಗಳನ್ನು ಅಂತರ್‌ರಾಷ್ಟ್ರೀಯ ಸಂದರ್ಭಗಳಿಗೂ ಹೋಲಿಸಿ ಹೇಳಲಾಗಿದೆ. ಅಭಿವೃದ್ಧಿಸಿದ್ಧಿ ದೇಶಗಳಿಗೆ ತಮ್ಮ ಬೇಸಾಯೋತ್ಪನ್ನಗಳ ರಫ್ತಿನ ಸಂದರ್ಭಗಳಲ್ಲಿ ಕೊಟ್ಟ ಅನುಕೂಲಗಳು, ಸಮದರ್ಶಿಯಾಗಿ, ಸಮಸ್ಪಂದಿಯಾಗಿ ಅಭಿವೃದ್ಧಿಸಾಧಕ ದೇಶಗಳಿಗೆ ಅನ್ವಯವಾಗದಿರುವ ಬಗ್ಗೆಯೂ ಹೇಳಲಾಗಿದೆ. ಜಾಗತಿಕ ಜೈವಿಕ ತಂತ್ರಜ್ಞಾನ, ಬೇಸಾಯ ತಂತ್ರಜ್ಞಾನದ ಆವಿಷ್ಕಾರಗಳನ್ನು ನಮ್ಮ ಅನುಕೂಲಗಳಿಗೆ ತಕ್ಕಂಥ ಅನ್ವಯ ಸ್ವೀಕರಣವಾಗುವಾಗ ನಮಗೆ ಅಪಾಯವಾಗದಿರುವಂತೆ ಎಚ್ಚರಿಕೆ ತೆಗೆದುಕೊಂಡು ಬಳಸಿಕೊಳ್ಳಬೇಕು; ಜಾಗತಿಕ ಸ್ಪರ್ಧೆಯಲ್ಲಿ ಭಾರತದ ಕೃಷಿಸಾಮರ್ಥ್ಯ ಸಮಸಮವಾಗಿ ಸ್ಪಂದಿಸಬೇಕೆಂದು ಹೇಳಲಾಗಿದೆ. ಇಂತೆಲ್ಲ ಉತ್ತಮ ವ್ಯಾಖ್ಯೆಗಳ ನಡುವೆಯೂ, ಬೆಲೆಕುಸಿತದ ಬೆಳೆ ಹಾನಿಯ ಸಂದರ್ಭಗಳಲ್ಲಿ ಭಾರತದ ವಿವಿಧ ರಾಜ್ಯಗಳಲ್ಲಿ ರೈತರು ಸಂಕಷ್ಟಕ್ಕೀಡಾಗಿ ಆತ್ಮಹತ್ಯೆ ಮಾಡಿಕೊಂಡ ಸಂದರ್ಭವನ್ನೇ ವಿಶ್ಲೇಷಿಸದಿರುವುದು ಈ ಕೃತಿಯ ಒಂದು ಮಿತಿಯಾಗಿದೆ. 'ಡಬ್ಲ್ಯುಟಿಓ' ರೂಪುಗೊಂಡ ನಂತರದ ಸಂದರ್ಭಗಳ ಪರಿಣಾಮಗಳನ್ನು, ಪರಿಣಾಮಕಾರಿಯಾಗಿ ಚಿತ್ರಿಸಿದ ಸಂದರ್ಭಗಳನ್ನು ಹೇಳುವಲ್ಲಿ ಬಹುಶಃ ಅಸಮತೋಲನ ಜಾಗತೀಕರಣದ ಪರಿಣಾಮಗಳು ರೈತರ ಆತ್ಮಹತ್ಯೆಗಳಲ್ಲಿ ಒಳಸುಳಿಯಾಗಿ ತೋರಿಕೊಂಡಿರಬಹುದಲ್ಲವೆ! ಅಂತೇ (survival of the fittest) 'ಸಮರ್ಥರ ಅಸ್ತಿತ್ವ' ತತ್ತ್ವಾನ್ವಯವು ಮರುವಿವೇಚನಾರ್ಹ.

## ವಿಷಯ–4 : ಕೃಷಿ ಮಾರುಕಟ್ಟೆ ಸೌಲಭ್ಯದ ಕೊರತೆಗಳು ಒಂದು ವಿವೇಚನೆ

ಭಾರತದಲ್ಲಿ ಉತ್ಪಾದನೆ ಆಗುವ ಸುಮಾರು 200 ಮಿಲಿಯನ್ ಟನ್ ಆಹಾರಧಾನ್ಯ, 124 ಮಿಲಿಯನ್ ಟನ್ ಹಣ್ಣು ತರಕಾರಿಗಳಿಗೆ ಸೂಕ್ತ ಮಾರುಕಟ್ಟೆಗೆ ಮೂಲಸೌಲಭ್ಯಗಳ ಕೊರತೆ ಇದೆ. ಕರ್ನಾಟಕದಲ್ಲಿ ರಾಜ್ಯ ಉಗ್ರಾಣನಿಗಮವು ಸುಮಾರು 105 ಶಾಖೆಗಳು ಹಾಗು 31 ಕೇಂದ್ರಗಳನ್ನು ಹೊಂದಿದೆ. ಎಫ್.ಸಿ.ಡಿ.ಐ. ನಲ್ಲಿ ದಾಸ್ತಾನು ಸಾಮರ್ಥ್ಯ ಸಾಲದ ಬೆಳೆ ಇಳಿಸಿ ದಾಸ್ತಾನು ಕಡಿಮೆ ಮಾಡುವ ಪ್ರಯತ್ನವಾಗಿದೆ. ಸಂರಕ್ಷಣೆ ಸೂಕ್ತವಾಗಿಲ್ಲ. ಧಾನ್ಯಗಳು ಮುಗ್ಗಿದ ಪ್ರಕರಣಗಳೂ

ಇವೆ. ತರಕಾರಿ, ಹಣ್ಣುಗಳ ದಾಸ್ತಾನು ರಕ್ಷಣೆಗೆ ಶೀತಲ ಗೃಹಗಳು ಸರ್ಕಾರಿ ಹಾಗು ಖಾಸಗಿ ಕ್ಷೇತ್ರಗಳಲ್ಲಿವೆ. ರೆಗ್ಯುಲೇಟೆಡ್ ಮಾರ್ಕೆಟ್‌ಗಳಿದ್ದರೂ ಬಹುತೇಕ ವ್ಯವಹಾರಗಳು ಸಂತೆಗಳಲ್ಲೇ ನಡೆಯುತ್ತವೆ. ಕಾರಣ ರೈತ ತನ್ನ ಉತ್ಪನ್ನವನ್ನು ಮಾರುಕಟ್ಟೆಗೆ ತಲುಪಿಸಲು ಸರಿಯಾದ ರಸ್ತೆಗಳಿಲ್ಲ. ನಮ್ಮ ಶೇಕಡಾ 50ರಷ್ಟು ಹಳ್ಳಿಗಳಿಗೆ ಮಾತ್ರ ಸರ್ವಋತು ರಸ್ತೆಗಳ ಸಂಪರ್ಕ ಇದೆ. ಕೆಲವು ಮಳೆಗಾಲವಿಲ್ಲದಾಗ ಸಂಪರ್ಕಗೊಳ್ಳುತ್ತವೆ. ಬಹಳಷ್ಟು ಹಳ್ಳಿಗಳು ಮಾರುಕಟ್ಟೆಯ, ನೇರ ಸಂಪರ್ಕ ಹೊಂದಿಲ್ಲ. ಕೃಷಿ ಸಂಸ್ಕರಣೆ ಕ್ಷೇತ್ರ ತೀರ ಹಿಂದುಳಿದಿದೆ. ರೈತ ಬಜಾರ್‌ಗಳು ಸೂಕ್ತವಾಗಿ ನಿರ್ವಹಣೆಗೊಳ್ಳಬೇಕಿವೆ. ಕರ್ನಾಟಕ ರಾಜ್ಯ ಮಾರುಕಟ್ಟೆ ಮಂಡಳಿ (ಕೆ.ಎಸ್.ಎ.ಎಂ.ಬಿ)ಯು ಮುಖ್ಯ ಹಾಗು ಉಪ ಮಾರುಕಟ್ಟೆಗಳನ್ನು, ಕೃಷಿ ಉತ್ಪನ್ನಗಳ ಮಾರಾಟಕ್ಕೆ ರೈತರಿಗೆ ಅನುಕೂಲವಾಗುವಂತೆ ನಿರ್ಮಿಸಲು ಯೋಜನೆ ಹೊಂದಿರುವ ಬಗ್ಗೆ ಸುದ್ದಿ ಪ್ರಕಟವಾಗಿದೆ. ಆದರೆ ಆಲೂಗೆಡ್ಡೆ ಖರೀದಿ ವ್ಯವಹಾರದಲ್ಲಿ ಧಾರವಾಡ ಜಿಲ್ಲೆಯಲ್ಲಿ ಸರಕಾರಕ್ಕೆ 3.5ಕೋಟಿ ನಷ್ಟವಾಗಿರುವ ಬಗ್ಗೆ ವರದಿಯೊಂದು ತಿಳಿಸುತ್ತದೆ. 1995–96 ರಿಂದ 2001ರ ವರೆಗೆ ನಬಾರ್ಡ್‌ನಿಂದ ರಾಜ್ಯಕ್ಕೆ ಗ್ರಾಮೀಣ ಅಧೋಸಂರಚನಾ ಅಭಿವೃದ್ಧಿ ನಿಧಿಯಡಿ ಬಂದಿರುವ 1007.75 ಕೋಟಿ ಹಣದಲ್ಲಿ ಸಾಕಷ್ಟು ಮೊತ್ತವನ್ನು ರಸ್ತೆಗಳಿಗಾಗಿ ನೀಡಿದೆ. ಇದರ ಫಲ ಒಳನಾಡಿನ ಭಾಗಗಳಿಗೆ ಒದಗಿಲ್ಲ. ನಮ್ಮ ಬೆಲೆ ನಿರ್ಧಾರ, ತೆರಿಗೆ ನೀತಿಗಳಲ್ಲಿ ಲೋಪದೋಷಗಳಿದ್ದು, ಒದಗಿರುವ ಸಮಸ್ಯೆಗಳಿಗೆ ವಿಶ್ವ ಮಾರುಕಟ್ಟೆಯ ಒತ್ತಡವೆ ಕಾರಣವೆಂಬ ಹೇಳುವುದುಂಟು. 'ಸುಗ್ಗಿನಂತರದ ನಿರ್ವಹಣಾ ತಂತ್ರಜ್ಞಾನ'ವು ನಮ್ಮಲ್ಲಿ ಸೂಕ್ತವಾಗಿಲ್ಲದೆ ಕೃಷಿ ಉತ್ಪಾದನೆಯು ಶೇಕಡ 30 ರಷ್ಟು ನಷ್ಟವಾಗುತ್ತಿದೆ. ಆಹಾರ ಸಂಸ್ಕರಣ ಉದ್ಯಮ ಕಳೆದ 2 ವರ್ಷಗಳಲ್ಲಿ ಋಣಾತ್ಮಕ ಬೆಳವಣಿಗೆ (–5%) ಕಂಡಿದೆ. ಕರ್ನಾಟಕದಲ್ಲಿ ತಲಾ 60 ಎಕರೆ ಪ್ರದೇಶದಲ್ಲಿ 4 ಕೋಟಿ ರೂ. ಖರ್ಚಿನಲ್ಲಿ ಮಾಲೂರು, ಬಾಗಲಕೋಟೆ, ಚಿತ್ರದುರ್ಗ, ಮದ್ದೂರು, ಬೆಳಗಾವಿಗಳಲ್ಲಿ 'ಫುಡ್ ಪಾರ್ಕ್'ಗಳು ಸ್ಥಾಪನೆಯಾಗಲಿದೆ. ಕೇಂದ್ರೀಕೃತ ಸಂಸ್ಕರಣ ಪ್ಯಾಕೇಜಿಂಗ್ ಸೇವೆ, ಕೋಲ್ಡ್ ಸ್ಟೋರೇಜ್, ಗೋದಾಮು ಇತ್ಯಾದಿಗಳನ್ನು ಇವು ಹೊಂದಿದ್ದು ಬೆಳೆಗಾರರೊಡನೆ ಸೂಕ್ತ ಸಂಪರ್ಕ ಸಾಧಿಸಿ ಯಶಸ್ವಿಯಾಗಬೇಕು. 1991–2000 ಅವಧಿಯಲ್ಲಿ ಕೃಷಿ ಸಂಸ್ಕರಣ ಕ್ಷೇತ್ರದಲ್ಲಿ ಖಾಸಗಿ ಬಂಡವಾಳ ಶೇಕಡ 85 ರಷ್ಟು ಹೆಚ್ಚಿದರೂ ರೈತರ ಕಷ್ಟಗಳು ಕಡಿಮೆಯಾಗಲಿಲ್ಲ. ವೃತ್ತಿಪರ ಏಜನ್ಸಿಗಳು, ಸಗಟು ವ್ಯಾಪಾರಿಗಳು. ವ್ಯಾಪಾರ ಸಂಘಗಳು, ನಿಯಂತ್ರಿಸುವ ನೇರ ಮಾರುಕಟ್ಟೆಗಳಲ್ಲಿ ರೈತನಿಗೆ ಸೂಕ್ತ ಬೆಲೆ ಸಿಕ್ಕೀತೆ? ಎಂದು ಕಾದು ನೋಡಬೇಕಾಗಿದೆ. ಉಗ್ರಾಣ

ನಿಗಮದ ಗೋದಾಮುಗಳನ್ನು ಸ್ಥಾಪಿಸುವಾಗ ಪ್ರಾದೇಶಿಕ ಸಂತೃಪ್ತಿಗೆ ಸಾಲ ನೀಡಿಕೆಯ ಸರಳತೆ ಇತ್ಯಾದಿಗಳನ್ನು ಗಮನಿಸಬೇಕು. ಒಟ್ಟಾರೆ ಮೂಲ ಸೌಲಭ್ಯ ಒದಗಣೆಯಲ್ಲಿ ಮಾರುಕಟ್ಟೆ ರಸ್ತೆ ಸೌಕರ್ಯ ದಾಸ್ತಾನು ಮಳಿಗೆ ಶೈತ್ಯಾಗಾರ ಇತ್ಯಾದಿಗಳು ಸಣ್ಣ ರೈತರ ಅರಿವಿನಲ್ಲಿರಬೇಕು. ಆಗ ಮಾತ್ರ ವಿಶ್ವ ಮಾರುಕಟ್ಟೆಯೊಡನೆ ಸ್ಪರ್ಧೆಯ ಬಗೆಗೆ ಗಮನ ಹರಿಸಬಹುದು ಎಂಬ ಅಭಿಪ್ರಾಯಗಳೂ ವ್ಯಕ್ತವಾಗಿವೆ.*[4]

## ವಿಷಯ–5 : ಕ್ಯಾನ್‌ಕುನ್ ಡಬ್ಲ್ಯುಟಿಓ ಸಮ್ಮೇಳನ

ಮೆಕ್ಸಿಕೋದ ಕ್ಯಾನ್‌ಕುನ್‌ನಲ್ಲಿ 147 ವಿಶ್ವವಾಣಿಜ್ಯ ಸಂಘಟನೆಗಳ ಸದಸ್ಯ ರಾಷ್ಟ್ರಗಳ ಸಚಿವಮಟ್ಟದ ಶೃಂಗಮೇಳವು 2003 ರ ಸೆಪ್ಟೆಂಬರ್ 14ರ ವರೆಗೆ ಐದು ದಿನಗಳ ಕಾಲ ನಡೆಯಿತು. ಸಿಂಗಾಪೂರ್ ವಿಷಯಗಳಾದ ಬಂಡವಾಳ ಹೂಡಿಕೆ, ಸ್ಪರ್ಧಾನೀತಿಗಳು, ಸರ್ಕಾರಿ ಖರೀದಿಯಲ್ಲಿ ಪಾರದರ್ಶಕತೆ, ವ್ಯಾಪಾರ ಅನುಕೂಲತೆ ಬಗ್ಗೆ ಅಂದರೆ ಕೃಷಿ ವಿಷಯವನ್ನು ಬಿಟ್ಟು ವಾಣಿಜ್ಯ ಮತ್ತು ಹೂಡಿಕೆ ವಿಷಯಗಳನ್ನು ಚರ್ಚೆಗೆ ಎತ್ತಿಕೊಳ್ಳುವ ಅಭಿವೃದ್ಧಿಸಿದ್ಧಿ ಶ್ರೀಮಂತ ರಾಷ್ಟ್ರಗಳ ಪ್ರಯತ್ನದ ಧಾಷ್ಟ್ಯವನ್ನು ಅಭಿವೃದ್ಧಿಸಾಧಕ (ಅಭಿವೃದ್ಧಿಶೀಲ) ರಾಷ್ಟ್ರಗಳು ಪ್ರತಿಭಟಿಸಿದುವು. ಭಾರತದ ನೇತೃತ್ವದಲ್ಲಿ ನೂರಕ್ಕೆ ಮೀರಿದ ಹೆಚ್ಚು ಅಭಿವೃದ್ಧಿ ಸಾಧಕ ರಾಷ್ಟ್ರಗಳು ಈ ಹುನ್ನಾರವನ್ನು ಪ್ರತಿಭಟಿಸಿದ ಕಾರಣ ಶೃಂಗಮೇಳದಲ್ಲಿ ಬಿಕ್ಕಟ್ಟು ತಲೆದೋರಿತು. ಭಾರತದೊಡನೆ, ಅಭಿವೃದ್ಧಿಸಾಧಕ ರಾಷ್ಟ್ರಗಳು ಸೇರಿ ಜಿ.22 ಗುಂಪನ್ನೂ ರಚಿಸಿಕೊಂಡಿವೆ (ಚೀನಾ, ಈಜಿಪ್ಟ್, ಬಾಂಗ್ಲಾ, ಇಂಡೋನೇಷಿಯ, ಜಾಂಬಿಯ, ಫಿಲಿಫೈನ್ಸ್ ಇವುಗಳು ಸೇರಿದಂತೆ). ಇವುಗಳ ಪ್ರತಿಭಟನೆ ಡಬ್ಲ್ಯುಟಿಓ ಕರಡು ಘೋಷಣೆ ವಿರುದ್ಧವಿತ್ತು, ಕೃಷಿಗೆ ನೀಡುವ ರಿಯಾಯಿತಿಗಳನ್ನು (ಶ್ರೀಮಂತ ರಾಷ್ಟ್ರಗಳು ತಮ್ಮ ರೈತರಿಗೆ ಮಾತ್ರ) ತೆಗೆದುಹಾಕದಿರುವಲ್ಲಿ, ಅದು ಅಸಮರ್ಪಕ ಎಂದು ಜಿ.22 ದೇಶಗಳ ಅತೃಪ್ತಿಗೆ ಕಾರಣವಾಗಿತ್ತು. ಭಾರತ ಚೀನಾ, ಹಾಗೂ ಬ್ರೆಜಿಲ್ ನೇತೃತ್ವದ ಈ ಅಭಿವೃದ್ಧಿ ಸಾಧಕ ರಾಷ್ಟ್ರಗಳ ತಂಡವು ರಫ್ತು ವಸ್ತುಗಳ ಮೇಲಿನ ರಿಯಾಯಿತಿ ತೆಗೆದು, ದೇಶೀಯ ಕೃಷಿ ಉತ್ಪನ್ನಗಳಿಗೆ ನೀಡುವ ಸಬ್ಸಿಡಿ ಕಡಿತಗೊಳಿಸಬೇಕು ಎಂದು ಅಭಿವೃದ್ಧಿಸಿದ್ಧಿ ದೇಶಗಳನ್ನು ಒತ್ತಾಯಪೂರ್ವಕವಾಗಿ ಆಗ್ರಹಿಸಿದುವು.

---

*4. ಎಚ್. ಎಸ್. ಮಂಜುನಾಥ್ ಅವರ ಲೇಖನ: 'ಕೃಷಿ ಮೂಲ ಸೌಕರ್ಯವೇ ಇಲ್ಲ.' ಕನ್ನಡ ಪ್ರಭ (ವಾಣಿಜ್ಯ ಪುರವಣಿ), 21.10.2001, ನೋಡಿ.

ಭಾರತದ ವಾಣಿಜ್ಯ ಮಂತ್ರಿ ಶ್ರೀ ಅರುಣ್ ಜೇಟ್ಲಿ ಅವರು ರಫ್ತು ಸಬ್ಸಿಡಿ, ಕೃಷಿ ಸಬ್ಸಿಡಿಯನ್ನು ಕೈಬಿಡಲು ಒತ್ತಾಯಿಸುವ ಕಾರಣ ತಿಳಿಸುತ್ತ; ಅಭಿವೃದ್ಧಿಸಿದ್ಧಿ ರಾಷ್ಟ್ರಗಳು ತಮ್ಮಲ್ಲಿ ನೀಡುತ್ತಿರುವ ಈ ಸಬ್ಸಿಡಿಗಳಿಂದಾಗಿ ನಮ್ಮಂತಹ ದೇಶಗಳ ಕೃಷಿ ಉತ್ಪನ್ನಗಳು ಜಾಗತಿಕ ಮಾರುಕಟ್ಟೆಗಳಲ್ಲಿ ಮಾರಾಟವಾಗುವುದಿಲ್ಲ. ಇದು ಕೃಷಿಯೇ ಜೀವಾಳವಾಗಿರುವ 65 ಕೋಟಿ ರೈತರ ಸ್ಥಿತಿಯನ್ನು ಅಭಿವೃದ್ಧಿಗೊಳಿಸುವ ಬದಲು ಬದುಕಿಗೆ ತುಂಬುವ ಬೆದರಿಕೆಯಾಗುತ್ತದೆ, ಎಂದು ಪ್ರತಿಪಾದಿಸಿದರು. ಕರಡು ಘೋಷಣೆಯು ಜಿ.22 ರಾಷ್ಟ್ರಗಳ ಹಿತಾಸಕ್ತಿಯನ್ನೂ ಕಾಪಾಡದೆ ಕೆಲವೇ ರಾಷ್ಟ್ರಗಳಿಗೇ ಆ ಕರಡು ಅನುಕೂಲವಾದರೆ, ಒಮ್ಮತ ಸಾಧ್ಯವಾಗುವುದಿಲ್ಲ ಎಂಬುದೂ ಅಲ್ಲಿ ಸ್ಪಷ್ಟವಾಗಿತ್ತು. ಕೇಂದ್ರ ಹಣಕಾಸು ಸಚಿವ ಶ್ರೀ ಜಸ್ವಂತ್‌ಸಿಂಗ್ ಅವರು ದೂರದರ್ಶನದಲ್ಲಿ ಕ್ಯಾನ್‌ಕುನ್ ಸಮಾವೇಶ ಸಂಬಂಧವಾಗಿ ಪ್ರತಿಕ್ರಿಯಿಸುತ್ತ, ಶ್ರೀಮಂತ ರಾಷ್ಟ್ರಗಳು ತಮ್ಮ ರೈತರಿಗೆ 320 ಶತಕೋಟಿ ಡಾಲರುಗಳಿಗೂ ಮೀರಿ ಸಬ್ಸಿಡಿ ನೀಡುತ್ತಿವೆ. ನಮ್ಮ ಮಾರುಕಟ್ಟೆಗಳನ್ನೂ ಆಕ್ರಮಿಸಿ ನಮ್ಮ ರೈತರನ್ನು ಬೀದಿಪಾಲು ಮಾಡಲು ಸಬ್ಸಿಡಿ ಕಡಿತ, ಮುಕ್ತ ಮಾರುಕಟ್ಟೆಯ ಬೇಡಿಕೆಯನ್ನಿಟ್ಟು ಒತ್ತಾಯಿಸುತ್ತಿವೆ. ಅದಕ್ಕೆ ಮಣಿದು ಭಾರತದಲ್ಲಿ ಕೃಷಿ ಸೌಲಭ್ಯ ಮತ್ತು ಸಬ್ಸಿಡಿ ಕಡಿತವನ್ನು ನಮ್ಮ ರೈತರಿಗೆ ಮಾಡುವುದಿಲ್ಲ ಎಂದು 13.9.03 ರಂದು ನುಡಿದರು. ಅಭಿವೃದ್ಧಿಸಾಧಕ ದೇಶಗಳ ಒಕ್ಕೂಟ ರೂಪುಗೊಂಡಿರುವುದೇ ಈ ದೇಶಗಳ ಅಸಂಖ್ಯಾತ ಬಡರೈತ ಹಿತರಕ್ಷಣೆಗಾಗಿದೆ. ಈ ರೈತರ ಕೃಷಿ ಉತ್ಪನ್ನಗಳಿಗೆ ಜಾಗತಿಕ ಮಾರುಕಟ್ಟೆಯಲ್ಲಿ ಜಾಗವಿಲ್ಲ ಎಂದರೆ ಪ್ರಯೋಜನವೇನು? ಶ್ರೀಮಂತ ರಾಷ್ಟ್ರಗಳ ರೈತರು ಮಾತ್ರ ಭಾರಿ ನೆರವು, ಸಬ್ಸಿಡಿಗಳಿಂದಾಗಿ ಮಾರುಕಟ್ಟೆಯಲ್ಲಿ ಅವರಿಗೇ ವೈಭೋಗ ಎಂದರೆ ಉಳಿದವರ ಪಾಡೇನು? ಎಂಬ ಆಕ್ರೋಶ ಜಿ. 22 ರಾಷ್ಟ್ರಗಳಲ್ಲಿತ್ತು.

ಭಾರತವು ಕ್ಯಾನ್‌ಕುನ್ ಸಮಾವೇಶದಲ್ಲಿ ತನ್ನ ನಿಲುವನ್ನು ಸ್ಪಷ್ಟಗೊಳಿಸಿದ ಬಗೆ ಎಂದರೆ; ಅಭಿವೃದ್ಧಿಸಿದ್ಧಿ ರಾಷ್ಟ್ರಗಳು ಅಂತರಿಕ ಸಬ್ಸಿಡಿ ಕಡಿತ, ರಫ್ತು ಉತ್ತೇಜಿತ ಸಬ್ಸಿಡಿಗಳ ಹಂತಹಂತದ ಕಡಿತ, ರಫ್ತು ಸಾಲಗಳ ಮೇಲೆ ನಿಯಂತ್ರಣ, ಕೃಷಿ ದರ ಕುರಿತ ಪ್ರಸ್ತಾವನೆ ಮಂಡನೆ, ಹೈಬ್ರಿಡ್‌ದರ ಕಡಿತ ಸೂತ್ರ, ಕುರಿತು ಉರುಗ್ವೆ ಸುತ್ತಿನ ಮಾತುಕತೆಗಳಿಂದಾದ ಅಂಗೀಕೃತ ಸೂತ್ರ ಪಾಲನೆ ಅಭಿವೃದ್ಧಿಸಾಧಕ ದೇಶಗಳಿಂದ ಆಗಬೇಕು ಹಾಗು ಅವುಗಳಿಗೆ ವಿಶೇಷ ಉತ್ಪನ್ನ ಮತ್ತು ಸಂರಕ್ಷಣೆಯ ತಂತ್ರಗಳು ರೂಪುಗೊಳ್ಳಬೇಕು. ಅಭಿವೃದ್ಧಿಸಿದ್ಧಿ ದೇಶಗಳಲ್ಲಿ ಸಂರಕ್ಷಣಾ ತಂತ್ರವನ್ನೂ ದೂರ ಮಾಡಬೇಕು. ಸಿಂಗಪೂರ ವಿಷಯವಾಗಿ ವ್ಯಾಪಾರ ಮತ್ತು ಹೂಡಿಕೆ ಬಗ್ಗೆ ಚರ್ಚೆ

ಸ್ಥಗಿತ ಆಗಬೇಕು. ಸ್ಪರ್ಧಾ ನೀತಿ ಸ್ಪಷ್ಟಗೊಂಡು ಪ್ರಕ್ರಿಯೆ ಮುಂದುವರೆಯಬೇಕು. ಅಭಿವೃದ್ಧಿಸಿದ್ಧಿ ದೇಶಗಳು ಕೃಷಿ ಸಬ್ಸಿಡಿ ಕಡಿತಕ್ಕೆ ಸಮ್ಮತಿಸಿದರೆ ಸರ್ಕಾರದ ಹಂತದಲ್ಲಿ ಪಾರದರ್ಶಕತೆ ಹಾಗು ವ್ಯಾಪಾರಾನುಕೂಲದ ಬಗ್ಗೆ ಚರ್ಚೆಗೆ ಒಪ್ಪಬಹುದು. ಈ ನಿಲುವನ್ನು ಜಿ.22 ರಾಷ್ಟ್ರಗಳು ತಳೆದ ಕಾರಣ ಶ್ರೀಮಂತ ರಾಷ್ಟ್ರಗಳ ಪರವಾಗಿ ಸಮ್ಮೇಳನ ಫಲ ಕಾಣಲಿಲ್ಲ. ಅಭಿವೃದ್ಧಿಸಾಧಕ ರಾಷ್ಟ್ರಗಳಿಗೆ, ಅಭಿವೃದ್ಧಿಸಿದ್ಧಿ ದೇಶಗಳೆದುರು ಇದು ಮಹತ್ವದ ಗೆಲುವಾಗಿತ್ತು. ತಮ್ಮ ಹಿತಾಸಕ್ತಿಯತ್ತ ಮಾತ್ರ ಗಮನವಿಡುವ ಈ ಶ್ರೀಮಂತ ರಾಷ್ಟ್ರಗಳು ಅಭಿವೃದ್ಧಿಸಾಧಕ ದೇಶಗಳಿಗೆ ಯಾವ ರೀತಿಯ ಲಾಭವಾಗಲೂ ಬಿಡದಿದ್ದರೆ ಆಗುವ ಪರಿಣಾಮ ಇದೇ ಎಂದು ಕೆಲವು ಆಂದೋಲನ ಸಂಘಟನೆಗಳೂ ಹೇಳಿವೆ. ಡಬ್ಲ್ಯುಟಿಓ 6 ನೇ ಸಚಿವ ಮಟ್ಟದ ಸಮ್ಮೇಳನ ಹಾಂಕಾಂಗ್‌ನಲ್ಲಿ ನಡೆಯುವ ಬಗ್ಗೆ ಆಹ್ವಾನವೂ ಬಂದಿತು. ವಿಶ್ವಸಂಸ್ಥೆಯಂತು ಮೂರನೇ ವಿಶ್ವರಾಷ್ಟ್ರಗಳ ಬಹುಸ್ತರದ ವಾಣಿಜ್ಯೋದ್ದೇಶಗಳಿಗೆ ಗೌರವವನ್ನು ವಿಶ್ವ ವಾಣಿಜ್ಯ ಸಂಘದ ಈ ಸಮಾವೇಶದ ಫಲಶ್ರುತಿ ತಂದಿತು ಎಂದು ಹೇಳಿತು. ಇನ್ನೊಂದು ಅಭಿಪ್ರಾಯದ ರೀತ್ಯಾ, ಕ್ಯಾನುಕುನ್ ಸಮಾವೇಶ ವಿಫಲವಾಗಲು, ಕೃಷಿ ಉತ್ಪನ್ನ ಮಾರಾಟ ಕುರಿತ ವಿವಾದ ಕಾರಣವಲ್ಲ. ಸಿಂಗಪುರ ವಿಷಯಗಳ ಪ್ರಸ್ತಾಪದ ಮುಂದುವರಿದ ಮಾತುಕತೆಯೆ ವಿವಾದ ಕಾರಣವಾಯಿತು. ಭಾರತದಲ್ಲಿ ಕೃಷಿಉತ್ಪನ್ನಗಳ ಮೇಲೆ ಆಮದು ಸುಂಕದ ದರಗಳು ಜಗತ್ತಿನಲ್ಲಿಯೇ ಹೆಚ್ಚಿಗಿದ್ದು, ಲಾಭ ದೊಡ್ಡ ಭೂ ಮಾಲೀಕ ವರ್ಗಕ್ಕಾಗುತ್ತದೆ. ಮುಕ್ತ ವ್ಯವಸ್ಥೆಯಲ್ಲಿಯೇ ದುಡಿಮೆ ಇದ್ದಾಗ ಮಾತ್ರ ಗಳಿಕೆ ಆಗುತ್ತದೆ. ಇಂದು ಆ ತತ್ವಕ್ಕೆ ಏಟು ಬಿದ್ದಂತಾಗಿದೆ. ಸರ್ಕಾರಗಳು ಇಲ್ಲಿ ಮರೆದಂತಾಗಿ ಬಡರಾಷ್ಟ್ರಗಳ ಜನರ ಸಮಸ್ಯೆ ಹಿಂದಕ್ಕೆ ಬಿತ್ತು, ಎಂದಿದೆ. ಆದರೆ ಬಡ ರೈತರ ಹಿತಾಸಕ್ತಿ ಭಾರತದಂಥ ರಾಷ್ಟ್ರಗಳಿಗೆ ಮುಖ್ಯ. ಅದನ್ನು ಕಾಪಾಡುವುದಾದರೆ ಯಾವ ಸೂಕ್ತ ನೀತಿಗೂ ಅವಕಾಶವೇ ಇದೆ. ನಮ್ಮ ಕೃಷಿಕರಿಗೆ ನ್ಯಾಯವಾಗಿ ಸಲ್ಲಬೇಕಾದ ಕನಿಷ್ಠ ಸಬ್ಸಿಡಿಯೂ ಸಿಗದಿರುವಾಗ ರಫ್ತು ಸಬ್ಸಿಡಿಯ ಮಾತೇ ಇಲ್ಲ. ಆಮದು ವಸ್ತುಗಳ ಮೇಲಿನ ಸುಂಕ ಹೆಚ್ಚಳದಿಂದ ಗ್ರಾಹಕರಿಗೂ ಪ್ರಯೋಜನವಾಗಿಲ್ಲ, ರೈತರಿಗೂ ಲಾಭ ದಕ್ಕಿಲ್ಲ. ಜಾಗತೀಕರಣದ ಹಿನ್ನೆಲೆಯಲ್ಲಿ, ಅಮೇರಿಕ ಐರೋಪ್ಯ ಒಕ್ಕೂಟ ಹಾಗು ಜಪಾನ್ ತಮ್ಮ ರೈತರಿಗೆ ಕೊಡುವ ಅಧಿಕ ಸಬ್ಸಿಡಿ ನಿಲ್ಲಿಸಲು ಒಪ್ಪದ ಕಾರಣ, ಅಭಿವೃದ್ಧಿಸಿದ್ಧಿ ಹಾಗು ಅಭಿವೃದ್ಧಿ ಸಾಧಕದೇಶಗಳು ತಮ್ಮ ತಮ್ಮ ಹಿತಾಸಕ್ತಿಗಾಗಿ ಮುಖಾಮುಖಿ ಆಗಿವೆ, ಎಂಬ ಚಿಂತನೆಗಳೂ ವ್ಯಕ್ತವಾಗಿವೆ.

ಭಾರತದ ವಾಣಿಜ್ಯ ಸಚಿವರಾದ ಶ್ರೀ ಕಮಲನಾಥ್ ಅವರು ಕೃಷಿಗೆ ಸಂಬಂಧಿಸಿದಂತೆ ಅಭಿವೃದ್ಧಿಶೀಲ ರಾಷ್ಟ್ರಗಳ ಹಿತಾಸಕ್ತಿಗೆ ವಿರುದ್ಧವಾಗಿ ಒತ್ತುಕೊಡುವ ಯಾವುದೇ ಒಪ್ಪಂದಕ್ಕೆ ಭಾರತ ಸಹಿ ಹಾಕದು; ಲಕ್ಷಾಂತರ ಭಾರತೀಯ ರೈತರ ಹಿತರಕ್ಷಣೆ ನಮ್ಮ ಹೊಣೆ, ದೋಹಾ ಸಮಾವೇಶದಲ್ಲಿ ನೀಡಲಾದ ವಾಗ್ದಾನವನ್ನು ಈಗ ಈಡೇರಿಸಲೇ ಬೇಕು, ಎಂದು ಈಚೆಗಿನ ಜಿನೇವಾದಲ್ಲಿ ನಡೆದ ಡಬ್ಲ್ಯುಟಿಒ ಮಹಾಮಂಡಲಿ ಸಭೆಯ ಸಂದರ್ಭದಲ್ಲಿ ಹೇಳಿದ್ದಾರೆ. ಏಷಿಯಾದ ಒಂದು ಬಲಿಷ್ಠ ಆರ್ಥಿಕ ಒಕ್ಕೂಟವಾಗಿ 1976ರಲ್ಲಿ ಪರಿವರ್ತಿತವಾದ ಅಸಿಯಾನ್ (Association of South East Nations) 1967 ರಲ್ಲಿ ರಾಜಕೀಯ ಸಂಘಟನೆಯಾಗಿ, ರಚಿತವಾಗಿತ್ತು. ಹೀಗಾಗಿ 1992 ರಲ್ಲಿ ಆಫ್ಟಾ (Asean Free trade Area) ಆಗಿ ನಾಫ್ಟಾಗೆ (North Americal Free trade area) ತೀವ್ರಸ್ಪರ್ಧೆ ಒಡ್ಡಿದೆ. ಏಷಿಯಾ ಸಮುದಾಯವಾಗಿ 'ಅಸಿಯಾನ್ ಪ್ಲಸ್ ತ್ರಿ' ಎಂದು ಚೀನಾ, ಜಪಾನ್ ದಕ್ಷಿಣ ಕೊರಿಯಾ ಮಾತ್ರ ಒಳಗೊಂಡು ಪ್ರಾಬಲ್ಯ ಮೆರೆವ ಬದಲು ಭಾರತವನ್ನೂ ಸೇರಿಸಿಕೊಂಡು 'ಅಸಿಯಾನ್ ಪ್ಲಸ್ ಫೋರ್' ರಚನೆಯಾಗಬೇಕು. ಭಾರತದೊಡನೆ ದ್ವಿಪಕ್ಷೀಯ ವ್ಯಾಪಾರ ಒಪ್ಪಂದವಾಗಬೇಕು. ಅಂದರೆ ಅಸಿಯಾನ್ ಮಾತುಕತೆಯಲ್ಲಿ ಭಾರತದ ಪಾತ್ರವೂ ಪ್ರಮುಖವಾಗಬೇಕು. ಆದರೆ ಈ ದಿಸೆಯಲ್ಲಿ ಅಸಿಯಾನ್ ಕೂಟದ ಥೈಲಾಂಡಿನಿಂದ ಆಮದಿನ 84 ಸರಕುಗಳು ಮೇಲೆ 2004 ರಿಂದ ಶೇ. 50 ರಷ್ಟು ಆಮದು ಸುಂಕ ಕಡಿತಗೊಳಿಸುವ ಭಾರತದ ನಿರ್ಧಾರವಿದೆ. ಆದರೆ ಅದು ಭಾರತದ ಉದ್ಯಮಗಳಿಗೆ ಆತಂಕ ತರುವಂತಾಗಬಾರದು. ಆಮದು ಸುಂಕವನ್ನು (ಅಸಿಯಾನ ಮಟ್ಟಕ್ಕೆ) ಇಳಿಸದಿದ್ದರೆ ಥೈಲ್ಯಾಂಡಿನೊಡನೆ ಸ್ಪರ್ಧೆ ಸಾಧ್ಯವಾಗುವುದಿಲ್ಲ ಎಂದು ಡಾ. ಕೆ. ಕೃಷ್ಣಮೂರ್ತಿ ಅಭಿಪ್ರಾಯ ಪಡುತ್ತಾರೆ (**ತರಂಗ:** 27.11.2003). ಈ ಅಭಿಪ್ರಾಯದಲ್ಲಿ ಗಮನಾರ್ಹ ಅಂಶವೂ ಇದೆ.

ಇನ್ನು ಕೃಷಿಯನ್ನೂ ನಿರ್ಲಕ್ಷಿಸುವಂತಿಲ್ಲ. ಆಹಾರ ಉತ್ಪನ್ನಗಳಿಗೆ ಕೃತಕ ಬೆಲೆಯನ್ನು ನಿಗದಿ ಪಡಿಸುವ ಶ್ರೀಮಂತ ರಾಷ್ಟ್ರಗಳ ನೀತಿಯನ್ನು ಭಾರತ ಒಪ್ಪುವುದಿಲ್ಲ. ಕಾರಣ ಅಮೇರಿಕ ಹಾಗೂ ಯೂರೋಪ್ ರಾಷ್ಟ್ರಗಳ ನೀತಿ ಭಾರತದ ಕೃಷಿ ಪದ್ಧತಿಗೆ ಹೊಂದಿಕೊಳ್ಳುತ್ತಿಲ್ಲ. ಭಾರತದ ಸೂಕ್ಷ್ಮ ಆಹಾರೋತ್ಪನ್ನಗಳಿಗೆ ರಕ್ಷಣೆ ಒದಗಿಸದಿರುವಲ್ಲಿ ಆ ನೀತಿ ನಮಗೆ ಹೇಗೆ ಒಪ್ಪಿಗೆ ಆದೀತು? ತಮ್ಮ ರೈತರಿಗೆ ಮಾತ್ರ ರಕ್ಷಣೆಯನ್ನು ಶ್ರೀಮಂತರಾಷ್ಟ್ರಗಳು ಒದಗಿಸುವಂಥ ಆಹಾರ ಉತ್ಪನ್ನ ರಕ್ಷಣಾ ನೀತಿಯನ್ನು ಹೊಂದಿರುವಲ್ಲಿ ವಿಶ್ವ ವಾಣಿಜ್ಯ ಸಂಘಟನೆಯ (WTO)

ಪರಿಷ್ಕೃತ ಕರಡು ಪ್ರತಿಯನ್ನು ಭಾರತವೂ ತಿರಸ್ಕರಿಸಿರುವ ಬಗ್ಗೆ ಬ್ಯಾಂಕಾಕ್‌ನಿಂದ ಜುಲೈ 2004 ರಲ್ಲಿ ವರದಿಯಾಗಿದೆ. ಸೆಪ್ಟೆಂಬರ್‌ನಲ್ಲಿ ನಡೆಯಲಿರುವ ಡಬ್ಲ್ಯುಟಿಓ ಸಮಾವೇಶಕ್ಕೆ ಪೂರ್ವಭಾವಿಯಾಗಿ ಜನೀವಾದಲ್ಲಿ ನಡೆದ ವಾಣಿಜ್ಯ ಸಚಿವರ ಸಭೆಯಲ್ಲಿ ಕೃಷಿ ಉತ್ಪನ್ನಗಳ ಮೇಲಿನ ಸಬ್ಸಿಡಿ ತೆಗೆದು ಹಾಕಲು ಅಭಿವೃದ್ಧಿಸಿದ್ಧಿಯ ಶ್ರೀಮಂತ ರಾಷ್ಟ್ರಗಳು ಸಮ್ಮತಿ ಸೂಚಿಸಿವೆ. ಇದು ಅಭಿವೃದ್ಧಿಶೀಲ ರಾಷ್ಟ್ರಗಳಾದ ಭಾರತ ಮತ್ತು ಬ್ರೆಜಿಲ್ ಇತ್ಯಾದಿ ದೇಶಗಳ ಪಟ್ಟು ಹಿಡಿದ ಹೋರಾಟಕ್ಕೆ ಸಂದ ಜಯವಾಗಿದೆ. ಅಮೇರಿಕವು ತನ್ನಲ್ಲಿಯ ಕೃಷಿ ಉತ್ಪನ್ನಗಳ ರಫ್ತಿಗೆ ಗರಿಷ್ಠ ಸಬ್ಸಿಡಿ ಒದಗಿಸುತ್ತಿದ್ದ ಕಾರಣ ಅಭಿವೃದ್ಧಿಸಾಧಕ ದೇಶಗಳ ಆರ್ಥಿಕ ವ್ಯವಸ್ಥೆಯೆ ಏರುಪೇರಾಗಿತ್ತು. ಆಫ್ರಿಕಾದ ಹತ್ತಿ ಬೆಳೆಗಾರರು ಬಹಳ ಹಾನಿಗೀಡಾಗಿದ್ದುದು ಈ ಕಾರಣದಿಂದಲೇ ಆಗಿತ್ತು.

ಗ್ಯಾಟ್ ಒಪ್ಪಂದದ ಶರತ್ತುಗಳು ಜನವರಿ, 1, 2005 ರಿಂದ ಸಂಪೂರ್ಣವಾಗಿ ಜಾರಿಯಾಗುವ ಕಾರಣ, ಒಪ್ಪಂದದ 6ನೇ ಅನುಚ್ಛೇದದ ಪ್ರಕಾರ ಸರ್ಕಾರದಿಂದ ರೈತರಿಗೆ ದೊರೆಯುವ ಎಲ್ಲ ಬಗೆಯ ಅನುದಾನಗಳ ನಿಲುಗಡೆ ಆಗುತ್ತದೆ. ಭಾರತದ ಕೃಷಿ ಉತ್ಪಾದನೆಗಳು ವಿದೇಶಿ ಕೃಷಿ ಉತ್ಪನ್ನಗಳಿಗಿಂತಲೂ ಹೆಚ್ಚು ದುಬಾರಿ ಆಗುತ್ತದೆ. ತನ್ನಲ್ಲಿ ಕೃಷಿ ಉತ್ಪನ್ನವು ಹೆಚ್ಚಿಗೆ ಆಗಿದ್ದರೂ (ಉದಾ: ಗೋಧಿ) ಶರತ್ತಿನ ಪ್ರಕಾರ ಗೋಧಿಯನ್ನು ಆಮದು ಮಾಡಿಕೊಳ್ಳಬೇಕು. ಕೃಷಿ ಉತ್ಪಾದನೆಗಳ ಆಮದು ಹೆಚ್ಚಿಸುವ ಮುಕ್ತ ವ್ಯಾಪಾರದ ನೆಪದಲ್ಲಿ ವಿದೇಶಿ ಕಂಪೆನಿಗಳ ವಸ್ತುಗಳನ್ನು ಸೀಮಾಶುಲ್ಕ, ಆಮದು ಶುಲ್ಕವನ್ನು, ಕಾನೂನು ರಿಯಾಯಿತಿ ಮಾಡಿ ಕಡಿಮೆ ಬೆಲೆಯಲ್ಲಿ ಮಾರುವ ವ್ಯವಸ್ಥೆಯಾಗುವ ಕಾರಣ ನಮ್ಮ ರೈತರ ಉತ್ಪನ್ನ ವಸ್ತುಗಳ ಬೆಲೆ ಕುಸಿಯುತ್ತದೆ. ಈ ಎಲ್ಲ ಕಾರಣಗಳಿಂದ ಡಬ್ಲ್ಯುಟಿಓನಿಂದ ಹೊರಬರುವುದು ಸೂಕ್ತ ಎಂಬ ಶ್ರೀ ಹೀರಾಲಾಲ್ ಶರ್ಮ ಅವರ ಅಭಿಪ್ರಾಯಗಳೂ ಈಚೆಗೆ ಪ್ರಕಟವಾಗಿದೆ. ಆದರೆ ಇದಕ್ಕೆ ಸವಾಲಾಗಿ ಅಸಿಯಾನ ಒಕ್ಕೂಟದಿಂದ ಹೋರಾಟವು ಭಾರತವನ್ನು ಅವಿಭಾಜ್ಯವಾಗಿಸಿಕೊಂಡು ನಡೆದರೆ ಮೇಲಿನಂಥ ಆಕ್ರಮಣಶೀಲ ಲೋಪಗಳಿಗೆ ತಿದ್ದುಪಡಿಗಳನ್ನು ತರುವುದು ಕಷ್ಟವಾಗಲಾರದು. ಸಂಘಟಿತ ಹೋರಾಟ ನಿರಂತರವಿರಬೇಕಷ್ಟೆ. ಇಟ್ಟ ಹೆಜ್ಜೆ ಧಾಷ್ಟಿಕದ ದನಿ ಎಬ್ಬಿಸಿದರೆ ಮಣಿಯಬೇಕಾದವರು ಮಣಿಯುತ್ತಾರೆ. ಅಂತೇ ಜಾಗತಿಕ ವರ್ತಮಾನಕ್ಕೆ ಬೆನ್ನು ತೋರಿಸದೆ ಜಾಗತಿಕ ಸವಾಲುಗಳನ್ನಿಟ್ಟು ಅಭಿವೃದ್ಧಿಸಾಧಕ ರಾಷ್ಟ್ರಗಳು ಸಾಗಬೇಕು. ಭಾರತವು ಡಬ್ಲ್ಯುಟಿಓ ಸಂದರ್ಭದಲ್ಲಿಯಾಗಲಿ, ಅಸಿಯಾನ ಸಂದರ್ಭದಲ್ಲಿಯಾಗಲಿ ತನ್ನ ರೈತರ ಹಿತಾಸಕ್ತಿಯನ್ನು ರಕ್ಷಿಸಲು ಐಡೆಂಟಿಟಿಯನ್ನು ದಟ್ಟವಾಗಿ ಮನನಮಾಡಿಸಬೇಕು.

**ಮಂಥನ :** ಜಗತ್ತಿನ ಜೊತೆ ಸಾಗಬೇಕು, ದಿಟ. ಆದರೆ ಜಾಗರೂಕತೆಯಿಂದ ಸಾಗಬೇಕು. ನಮ್ಮ ಕೃಷಿ ಹಾಗೂ ಕೃಷಿ ಉದ್ಯಮ ಜಾಗತೀಕರಣದ ನೆಪದಲ್ಲಿ ವಿದೇಶೀಯ ಉತ್ಪನ್ನಗಳಿಗೆ ಮಾರಾಟದ ವಸಾಹತು ಆಗಬಾರದು. ಭಾರತ ಪೇಲವ ಆಗಬಾರದು. ದೇಶೀಯ ವಸ್ತು ಉತ್ಪನ್ನಗಳಿಗೆ ಭಾವನೆಗಳನ್ನು ಬೆಳೆಸಿಕೊಳ್ಳದಿದ್ದರೆ ನಮ್ಮತನವನ್ನು ಕಳೆದುಕೊಳ್ಳುತ್ತೇವೆ. ಸ್ಪರ್ಧೆ ಜಾಗತೀಕರಣದಲ್ಲಿ ಅವಿಭಾಜ್ಯವಿರಬಹುದು. ಅದಕ್ಕೆ ಸಾವಯವ ಶಕ್ತಿಯೇ ಮುಖ್ಯ. ಅಂಗವೊಂದೇ ಮುಖ್ಯವಾಗದೆ ಅಂಗದೊಳಗಿನ ಜೀವ ಮುಖ್ಯವಾದರೆ ಅದಕ್ಕೆ ಬೆಳಸಿನ ಬೆಳಕು. ವಿಶ್ವವ್ಯಾಪಾರ ಸಂಘಟನೆ ಜಗತ್ತಿನ ರೈತರೆಲ್ಲರ ಹಿತಕಾಯದೆ ಹೋದರೆ ಸವಲತ್ತಿನ ವರ್ಗಗಳನ್ನು ತನ್ನೊಳಗೇ ಸಾಧಿಸಿಕೊಳ್ಳುತ್ತ ಹೊರಟರೆ, ಇಡೀ ವಿಶ್ವವೇ ಒಂದು ಗ್ರಾಮ ಎಂಬ ಪ್ರತಿಪಾದನೆಗೆ ಮುಂಚೂಣಿ ಇರುವುದಿಲ್ಲ. ಜಾಗತೀಕರಣ ಆಗೊಂದು ಕಾಗದದ ಗಾಳಿಪಟವಷ್ಟೆ. ಪಾಶ್ಚಾತ್ಯರಾಷ್ಟ್ರಗಳು ಆರ್ಥಿಕ ಅಡಿಗಲ್ಲಿನ ಮೇಲೆ ನಿಂತಿದ್ದರೆ, ನಾವು ಸಾಮಾಜಿಕ ಹಾಗೂ ನೈತಿಕ, ಸಾಂಸ್ಕೃತಿಕ ಸವಾಲುಗಳೊಡನೆ ಅಚ್ಚುಗಟ್ಟಾಗಿನಿಂತು ಅವರೊಡನೆ ಸಮವಾಗಿ ಸೆಡ್ಡು ಹಾಕುತ್ತಿದ್ದೇವೆ. ಹಾಗೆಂದು ಒಪ್ಪಂದದಿಂದಾಚೆ ನಿಂತು ಇಂದಿನ ಸ್ಥಿತಿಯಲ್ಲಿ ಹೋರಾಡಲು ಸೂಕ್ತವಾಗುವುದಿಲ್ಲ. ಒಪ್ಪಂದದೊಳಗಿದ್ದುಕೊಂಡೇ ಸಾಧಿಸುವ ಛಲ ನಮ್ಮದು. ಕ್ಯಾನ್‌ಕುನ್ ಸಮಾವೇಶದಲ್ಲಿ ರೈತರ ಪರವಾಗಿ ಎತ್ತಿದ ನಮ್ಮ ದನಿ ಅಂತೇ ಪ್ರಬಲವಾಗಿ ಕೇಳಿಸಿತು. ಅಸಿಯಾನ್ (ಬ್ಯಾಂಕಾಕ್) ಸಮಾವೇಶದಲ್ಲಿ ಮಣಿಸಬೇಕಾದವರನ್ನು ಮಣಿಸಿತು. ಪಾಶ್ಚಾತ್ಯ ರಾಷ್ಟ್ರಗಳಲ್ಲೂ ಜಾಗತೀಕರಣದ ಇತಿಮಿತಿಗಳಿಂದ, ಆರ್ಥಿಕ ಉದಾರೀಕರಣದಲ್ಲಿ ಎಚ್ಚರವಿಲ್ಲದ ತಪ್ಪು ಹೆಜ್ಜೆಗಳಿಂದ, ಹಳ್ಳಿಗಳ ಅಸ್ತಿತ್ವ ಮಾಯವಾಗುತ್ತ ಬಂದಿದೆ. ಕೆನಡಾದಂಥ ದೇಶದಲ್ಲಿ ಹಳ್ಳಿಗಳು ಕುಸಿದು ಸಣ್ಣ ಭೂಹಿಡುವಳಿದಾರರು ದೊಡ್ಡ ಜಮೀನುದಾರರ ಮುಂದೆ ಕರಗಿಹೋಗಿದ್ದಾರೆ. ರೈತರು ಕೃಷಿಯಿಂದ ದೂರವಾಗಿ ಜಮೀನು ಮಾರಿ ಪಟ್ಟಣಗಳಿಗೆ ವಲಸೆ ಹೋಗಿ ಗ್ರಾಮಸಂಸ್ಕೃತಿಯನ್ನೂ ಮರೆತಿದ್ದಾರೆ. ರೈತರ ಬದುಕು ಹೀಗೆ ಮಾರಿಹೋಗಬಾರದು. ವಿಶ್ವಬೇಕು. ವಿಶಾಲತೆಯೂ ಬೇಕು. ಆದರೆ ಮುಕ್ತತೆ ಹೆಸರಿನಲ್ಲಿ ನಮ್ಮ ರೈತರ ಹಿತಾಸಕ್ತಿ ಹದಗೆಡಬಾರದು. ತಮ್ಮತನ ಊರ್ಜಿತಗೊಳ್ಳಲು ದೇಶೀಕರಣ, ರಾಷ್ಟ್ರೀಕರಣವು ಮೂಲಭೂತವಾದದ ಸೋಂಕಿಲ್ಲದೆ, ಜಾಗತೀಕರಣದ ದೋಷಗಳಿಗೆ ಎದುರು ನಿಲ್ಲಬೇಕು. ಜೊತೆಗೆ ಗ್ರಾಮೀಣಕರಣವೂ ಅದಕ್ಕೆ ಉತ್ತರ ನೀಡಬಲ್ಲದು. ಈ ದೃಷ್ಟಿಯಿಂದ ಡಬ್ಲ್ಯುಟಿಓ ಸಮಾವೇಶಗಳು ನೆಲದ ಸಂಸ್ಕೃತಿಗೆ ಜಾಗತಿಕ ಚೆಲುವನ್ನು ಆರ್ಥಿಕ ಸೌಹಾರ್ದದಲ್ಲಿ ಎಲ್ಲರಿಗೂ ತಂದರೆ ಮಾತ್ರ ಫಲಕಾರಿ ಆದಾವು. ಕೃಷಿಯನ್ನು ಲಾಭದಾಯಕ

ಉದ್ಯಮವನ್ನಾಗಿ ರೂಪಿಸುವ ಉಪಾಯಗಳನ್ನು ನಾವು ಕಂಡುಕೊಂಡರೆ ಕೃಷಿ ಸಬ್ಸಿಡಿಯನ್ನು ರೈತರಿಗೆ ಹಾನಿಯಾಗದಂತೆ ಕಡಿತಗೊಳಿಸಬಹುದು ಅಥವಾ ರದ್ದು ಮಾಡುವ ಪ್ರಯತ್ನ ಮಾಡಬಹುದು, ಎಂಬ ಸಲಹೆಗಳೂ ಗಮನಾರ್ಹ. ಆಗ ಅಂತರಾಷ್ಟ್ರೀಯ ಸಾಲ ನೀಡುವ ಸಂಸ್ಥೆಗಳ ಈ ನಿಟ್ಟಿನ ಒತ್ತಡಗಳನ್ನು ಸಮರ್ಥವಾಗಿ ಎದುರಿಸಬಹುದು. ಕೃಷಿಗೆ ಭಾರಿ ಸಬ್ಸಿಡಿ ನೀಡಿ ತನ್ನ ಕೃಷಿ ಉತ್ಪನ್ನಗಳಿಗೆ ಅಂತರಾಷ್ಟ್ರೀಯ ಮಾರುಕಟ್ಟೆಯನ್ನು ಸುಲಭವಾಗಿ ಒತ್ತೆ ಇಟ್ಟುಕೊಳ್ಳಬೇಕೆಂಬ ಅಮೇರಿಕಯಂಥ ಶ್ರೀಮಂತ ರಾಷ್ಟ್ರಗಳ ಅಂತರುದ್ದೇಶಗಳನ್ನು ಎತ್ತಿ ತೋರಿಸಬಹುದು. ಸಬ್ಸಿಡಿಯನ್ನು ತಡೆದುಕೊಳ್ಳುವ ತ್ರಾಣವನ್ನು ನಮ್ಮ ಕೃಷಿಕ್ಷೇತ್ರವು ಸಾಧಿಸುವಂಥ ಪ್ರಯತ್ನಗಳು ರಾಜಕೀಯ, ಸಾಮಾಜಿಕ, ಸಾಂಸ್ಕೃತಿಕ ನೆಲೆಯಲ್ಲಿ ಸಾಗಬೇಕು. ಹಾಗು ಏಷಿಯನ್ ಒಕ್ಕೂಟಗಳು ಪರಸ್ಪರ ವಿಶ್ವಾಸಾರ್ಹತೆಯನ್ನು ಉಳಿಸಿಕೊಳ್ಳಬೇಕು.

ಇನ್ನು ಅಭಿವೃದ್ಧಿಸಿದ್ಧಿ ದೇಶಗಳಲ್ಲಿ ಉತ್ಪಾದನೆ ವಿಪುಲವಾಗಿ ಬೇಡಿಕೆ ಕಡಿಮೆಗೊಂಡಾಗ ಆರ್ಥಿಕ ಪ್ರಗತಿ ಜಡಗೊಳ್ಳಲಾರಂಭಿಸಿತು. ಸರಕುಗಳು ದಂಡವಾಗ ತೊಡಗಿದುವು. ಹೀಗಾಗಿ ಬಡರಾಷ್ಟ್ರಗಳ ಮೇಲೆ ಕಣ್ಣು ಬಿದ್ದು, ಸರಕುಗಳನ್ನು ಡಂಪ್ ಮಾಡಲು ಜಾಗತೀಕರಣ ಒಂದು ರಾಜಕೀಯ ಕಾರ್ಯಸೂಚಿಯಾಗಿ, ಶುದ್ಧ ಆರ್ಥಿಕ ಸೂಚಿಯಾಗಿ ಬರಲಿಲ್ಲ. ಅದು ಆಧುನಿಕ ಪ್ರಗತಿ ಎಂಬ ಹೆಸರಿನಲ್ಲಿ ಚಲಾವಣೆಗೊಂಡಿತು ಎಂಬ ಅಭಿಪ್ರಾಯವೂ ಈಚೆಗೆ ಗಟ್ಟಿಗೊಂಡಿದೆ. ಹಾಗೆಂದು ಜಾಗತೀಕರಣವನ್ನು ತೀರ ತಿರಸ್ಕಾರ ಮಾಡುವಂತಿಲ್ಲ. ಶ್ರೀಮಂತ ರಾಷ್ಟ್ರಗಳು ತಂದು ಸುರಿಯಲೆತ್ನಿಸುವ ಸರಕುಗಳಿಗೆ ಸವಾಲಾಗಿ ಅವರಲ್ಲಿಲ್ಲದ ನಮ್ಮ ಸರಕುಗಳನ್ನು ಗುಣಮಟ್ಟದಲ್ಲಿಟ್ಟು ಅವರ ಮಾರುಕಟ್ಟೆಗೆ ಒಯ್ಯುವ ಧಾಷ್ಟಿಕ ತೋರಬೇಕು. ಅಲ್ಲಿಯೇ ನಮ್ಮ ಕೃಷಿ ಉತ್ಪನ್ನಗಳ, ಅಂದರೆ ಹೊಸ ಶೋಧದ 'ಬೀಜ ಬ್ಯಾಂಕ್'ನ ಸಂಸ್ಕರಿತ ಬೀಜಗಳ ಬಳಕೆಯಿಂದ ಒದಗಿದ ಉತ್ಪನ್ನಗಳನ್ನು ರಫ್ತು ಮಾಡುವಷ್ಟು ಸಾಮರ್ಥ್ಯ ನಮ್ಮದಾಗಬೇಕು. ಕರ್ನಾಟಕದಿಂದ ರಫ್ತಾಗುತ್ತಿರುವ ಕಾಫಿ, ರೇಷ್ಮೆ, ಗೋಡಂಬಿ, ಗೆರ್ಕಿನ್ ಸಂಸ್ಕರಿಸಿದ ಕೃಷಿ ಉತ್ಪನ್ನ ಹಾಗು ಸಾಂಬಾರು ಬೆಳೆಗಳ ಪ್ರಮಾಣ ಸುಮಾರು ಮೂರು ಸಾವಿರ ಕೋಟಿ ಇದೆ. ಕೃಷಿ ಉತ್ಪನ್ನಗಳ ಸಂಸ್ಕರಣೆ ಹಾಗು ರಫ್ತು ನಿಗಮ (ಕಪ್ಪೆಕ್) ಮತ್ತು ಅಪೇಡಾ ಸಂಸ್ಥೆಗಳ ಸಹಯೋಗದೊಂದಿಗೆ 10.95 ಕೋಟಿ ರೂ. ವೆಚ್ಚದಲ್ಲಿ ಕೃಷಿ ರಫ್ತುವಲಯವನ್ನು ಸ್ಥಾಪಿಸಲಾಗಿದೆ. ಈ ಕೃಷಿ ರಫ್ತು ವಲಯವನ್ನು ಗೆರ್ಕಿನ್, ಗುಲಾಬಿ, ಈರುಳ್ಳಿ, ಪುಷ್ಪಕೃಷಿಗೂ ಸ್ಥಾಪಿಸಿರುವಂತೆ [illegible]. ಮಾವು, ದ್ರಾಕ್ಷಿ, ನಿಂಬೆ, ದಾಳಿಂಬೆ ಔಷಧಿ ಹಾಗು ಸುಗಂಧ ಬೆಳೆಗಳಿಗೂ

*ವಿಸ್ತರಿಸುವ ಉದ್ದೇಶವನ್ನು ಕರ್ನಾಟಕದ ಕೃಷಿ ನೀತಿ 2006 ಹೊಂದಿರುವುದನ್ನು ಪ್ರಕಟಿಸಲಾಗಿದೆ. ಇದು ದೇಶೀಕರಣದ ಒಂದು ರೂಪವಾಗಿದೆ. ಅಲ್ಲದೆ, 73 ನೆಯ ಅಖಿಲಭಾರತ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ (ಶಿವಮೊಗ್ಗ 2006) ಕೃಷಿ ಮತ್ತು ಜಾಗತೀಕರಣದ ಸವಾಲುಗಳ ಕುರಿತ ಚಿಂತನಗಳಿಗೆ ಅವಕಾಶವಾಗಿರುವುದು ಒಂದು ಗಮನಾರ್ಹ ಸಾಹಿತ್ಯಕ ಸಾಂಸ್ಕೃತಿಕ ಪ್ರಯತ್ನವೆನಿಸುತ್ತದೆ. ಇದು ರೈತರ ಬದುಕನ್ನು, ಕೊಡುಗೆಯನ್ನು ಕುರಿತ ನೆಲದ ಚಿಂತನೆಗೆ ಒದಗಿದ ಸಾಹಿತ್ಯಕ ಸಾಂಸ್ಕೃತಿಕ ಗೌರವಪ್ರಾಪ್ತಿ ಆಗಿದೆ. ಇಂಥ ಚಿಂತನೆಗೆ: ಅವಕಾಶವಾಗ ಬೇಕೆಂದು 'ಕರ್ನಾಟಕದ ರೈತ ಚಳುವಳಿ ಸತ್ಯಾಗ್ರಹಗಳು' ಕೃತಿಯ ಪ್ರಕಟಿತ ಮೂರು ಸಂಪುಟಗಳ ಲೇಖಕರ ನುಡಿಯಲ್ಲಿ ಪ್ರಸ್ತಾಪಿಸಿದ್ದುದು ಸದ್ಯ ಕಾರ್ಯಗತವಾಗಿರುವುದಕ್ಕೆ ಸಾಹಿತ್ಯಕ ಸಂತೋಷವೂ ಆಗುತ್ತದೆ.*

**ವಿಷಯ 6: ಡಬ್ಲ್ಯುಟಿಓ ಸಂಬಂಧದ ಈಚಿನ ಕೆಲವು ಬೆಳವಣಿಗೆಗಳು**

ಇತ್ತೀಚೆಗೆ 2009ರ ಜುಲೈ ತಿಂಗಳ ಅಂತ್ಯದಲ್ಲಿ ನಡೆದ ಕೇಂದ್ರ ಸಚಿವ ಸಂಪುಟ ಸಭೆಯಲ್ಲಿ ಆಗ್ನೇಯ ಏಷ್ಯಾ ರಾಷ್ಟ್ರಗಳೊಡನೆಯ (ಅಸಿಯಾನ್ ಕರಾರು) ಮುಕ್ತ ವ್ಯಾಪಾರ ಒಪ್ಪಂದ ಕುರಿತ ಚರ್ಚೆ ಆಯಿತು. ಕೃಷಿ, ತೋಟಗಾರಿಕೆ ಮತ್ತು ಹೈನು ಉತ್ಪನ್ನಗಳೂ ಸೇರಿದಂತೆ 4 ಸಾವಿರಕ್ಕೂ ಹೆಚ್ಚು ಸರಕುಗಳ ಮುಕ್ತ ರಫ್ತು ಮತ್ತು ಆಮದಿಗೆ ಈ ಒಪ್ಪಂದ ಅವಕಾಶ ಮಾಡಿಕೊಡುತ್ತದೆ. ಇದು ದೇಶದ ಎಲ್ಲ ಜನರ ಮೇಲೆ ಪ್ರಭಾವ ಬೀರುವಂಥದ್ದು. ಈ ಒಪ್ಪಂದ ಜನವರಿ 2010 ರಿಂದ ಜಾರಿಗೆ ಬರುವ ಸಾಧ್ಯತೆ ಇದೆ. ವಾಣಿಜ್ಯ ಸಚಿವ ಕಮಲನಾಥ್ ಹಾಗೂ ವಿದೇಶಾಂಗ ಸಚಿವ ಎಸ್.ಎಂ. ಕೃಷ್ಣ ಅವರು ಒಪ್ಪಂದದ ಜಾರಿಗೆ ಬೆಂಬಲ ಸೂಚಿಸಿದ ಬಗ್ಗೆ ವರದಿ ಆಗಿದೆ. ಆದರೆ ರಕ್ಷಣಾ ಸಚಿವ ಎ.ಕೆ. ಆ್ಯಂಟನಿ, ಸಚಿವ ವೈಯಲಾರ್ ರವಿ ಈ ಒಪ್ಪಂದ ಜಾರಿಗೆ ಬಂದರೆ ಕೇರಳದ ತೆಂಗು, ರಬ್ಬರ್, ಚಹಾ, ಏಲಕ್ಕಿ, ಕಾಫಿ, ಗೇರು ಬೆಳೆಗಾರರು ಹಾಗೂ ಮೀನುಗಾರರು ತೀವ್ರ ಕಷ್ಟಕ್ಕೀಡಾಗುತ್ತಾರೆ; ರಾಜ್ಯದ 30 ಲಕ್ಷ ರೈತರು 20 ಲಕ್ಷ ಮೀನುಗಾರರು ನಿರುದ್ಯೋಗಿಗಳಾಗುತ್ತಾರೆ. ಆದ್ದರಿಂದ ಈ ಒಪ್ಪಂದ ಸೂಕ್ತವಲ್ಲ ಎಂದು ವಿರೋಧಿಸಿದರು. ಥಾಯ್ಲೆಂಡ್, ಮಲೇಷಿಯಾ, ಸಿಂಗಾಪುರ, ಇಂಡೋನೇಷ್ಯಾ, ಫಿಲಿಪ್ಪೈನ್ಸ್, ಬ್ರೂನೈ, ವಿಯೆಟ್ನಾಂ, ಲಾವೋಸ್, ಕಾಂಬೋಡಿಯಾ, ಬರ್ಮಾ ಸೇರಿದಂತೆ ಅಸಿಯಾನ್ ಒಕ್ಕೂಟದ 10 ರಾಷ್ಟ್ರಗಳಲ್ಲಿ ಭಾರತದಲ್ಲಿ ಬೆಳೆಯುವ ಬಹುತೇಕ ಬೆಳೆಗಳು ಬೆಳೆಯಲ್ಪಡುತ್ತವೆ. ಅಲ್ಪ ಇಳುವರಿ

ಹೆಚ್ಚು. ಕೃಷಿ ಉತ್ಪನ್ನಗಳ ಬೆಲೆ ತೀರಾ ಅಗ್ಗ. ವ್ಯಾಪಾರಿಗಳು ಕಳ್ಳಮಾರ್ಗದಿಂದ ಕೃಷಿ ಉತ್ಪನ್ನಗಳನ್ನು ಆಮದು ಮಾಡಿಕೊಳ್ಳುತ್ತಿದ್ದಾರೆ. ಒಪ್ಪಂದ ಜಾರಿಯಾದರೆ ಆಮದಿಗೆ ರಾಜ ಮಾರ್ಗ ಒದಗಿ ನಮ್ಮ ಮಾರುಕಟ್ಟೆಗಳ ಮಾಲ್‌ಗಳಲ್ಲಿ ಅವೇ ಕಂಗೊಳಿಸುತ್ತವೆ. ಆಗ ಕರ್ನಾಟಕದಲ್ಲಿಯೂ ಕೇರಳದಂಥ ಸ್ಥಿತಿಯೇ ಒದಗಿ ಹೈನುಗಾರಿಕೆಯ ರೈತರು, ಧಾನ್ಯಾದಿಗಳನ್ನು ಬೆಳೆಯುವ ರೈತರು ಅಸ್ತಿತ್ವವನ್ನು ಕಳೆದುಕೊಳ್ಳಬೇಕಾಗುತ್ತದೆ. ನಮ್ಮ ಕೋಟಿಗಟ್ಟಲೆ ರೈತರ ಭವಿಷ್ಯಕ್ಕೆ ಅಸಿಯಾನ್ ಒಪ್ಪಂದ ಮಾರಕವಾಗಬಾರದು. ಕೇರಳದ ಸಂಸದರಂತೆ, ಪಕ್ಷಭೇದ ಮರೆತು ಕರ್ನಾಟಕದ ಅಹವಾಲು ರೈತರ ಪರವಾಗಿ ದಿಲ್ಲಿಯಲ್ಲಿ ದಾಖಲಾಗಬೇಕು. ಎಂಬುದು ಲೋಕೇಶ್ ಕಾರ್ಯಗತ ಅವರ ಮಾತಿದೆ (4.8.2009 ವಿ.ಕ)

ವಿಶ್ವ ವ್ಯಾಪಾರ ಸಂಘಟನೆ (WTO)ಯೂ ಒಂದು ಸಂದಿಗ್ಧ ಸಮಯಾವಸರದಲ್ಲಿದೆ. ದೋಹಾ ಎಂಬ ಸ್ಥಳದಲ್ಲಿ ಮೊದಲ ಬಾರಿಗೆ 2001ರಲ್ಲಿ ಮುಕ್ತ ವ್ಯಾಪಾರ ಕುರಿತ ಒಪ್ಪಂದದ ಮಾತು ಆರಂಭವಾಯಿತು. ಆದರೆ 2008 ರ ಜುಲೈನಲ್ಲಿ ನಡೆದ ದೋಹಾ ಸುತ್ತಿನ ಮಾತುಕತೆಗಳಲ್ಲಿ ಕಗ್ಗಂಟು ಸೃಷ್ಟಿಯಾಗಿ ಅದು ಸ್ಥಗಿತಗೊಂಡಿತ್ತು. ಅಮೆರಿಕದಲ್ಲಿ ಕೃಷಿ ಉತ್ಪನ್ನಗಳಿಗೆ ರೈತರಿಗೆ ಭಾರಿ ಸಬ್ಸಿಡಿ ಇರುವುದು ತಿಳಿದ ವಿಷಯ. ಆ ರೈತರು ವಿಶ್ವ ಮಾರುಕಟ್ಟೆಯಲ್ಲಿ ಅಗ್ಗದ ದರದಲ್ಲಿ ಹತ್ತಿಯನ್ನು ರಾಶಿ ಹಾಕಿದರು. ಅದರಿಂದ ಹತ್ತಿ ಕೃಷಿಯೇ ಮುಖ್ಯವಾಗಿದ್ದ ಆಫ್ರಿಕ ಖಂಡದಲ್ಲಿ ಆ ಉತ್ಪನ್ನ ನಾಶಗೊಂಡು ಅಲ್ಲಿನ ಲಕ್ಷಾಂತರ ರೈತರು ನಿರುದ್ಯೋಗಿಗಳಾಗಿದ್ದಾರೆ. ಇದು ಹೀಗೆಯೇ ಮುಂದುವರಿದರೆ ಅಭಿವೃದ್ಧಿ ಸಾಧಕ ರಾಷ್ಟ್ರಗಳಿಗೆ ಕುತ್ತು ಒದಗುತ್ತದೆ. ಈ ಹಿನ್ನೆಲೆಗಳಲ್ಲಿ 2009ರ ಸೆಪ್ಟೆಂಬರ್ ಮೊದಲವಾರದಲ್ಲಿ ದೆಹಲಿಯಲ್ಲಿ ನಡೆದ ದೋಹಾಸುತ್ತಿನ ಮಾತುಕತೆಗಳಲ್ಲಿ 100 ದೇಶಗಳ ವಾಣಿಜ್ಯ ಸಚಿವರು ಪಾಲ್ಗೊಂಡಿದ್ದರು. ಈ ಸಭೆಯ ಕಾರಣ ಅಭಿವೃದ್ಧಿ ಸಾಧಕ ರಾಷ್ಟ್ರಗಳ ನಾಯಕತ್ವ ಭಾರತದ ಪಾಲಿಗೇ ಬಂದಿತ್ತು. ಜಾಗತೀಕರಣದ ಹಿನ್ನೆಲೆಯಲ್ಲಿ ದೋಹಾಸುತ್ತಿನ ಮಾತುಕತೆಗಳನ್ನೂ, ವಿಶ್ವವ್ಯಾಪಾರ ವ್ಯವಸ್ಥೆಯನ್ನು ನಿರ್ಲಕ್ಷಿಸಬಾರದು ಎಂಬುದು ಜಿ.ಕೆ. ಮಧ್ಯಸ್ಥರ ವಾದ (23.9.2009; ಪ್ರ.ಸು) ಈ ನಿಟ್ಟಿನಲ್ಲಿ ನಮ್ಮ ಕೃಷಿ ಉತ್ಪನ್ನಗಳ ಉತ್ಪಾದನಾ ವೆಚ್ಚವನ್ನು ಕಡಿಮೆಗೊಳಿಸಿ ಅಗ್ಗದ ದರಕ್ಕೆ ಉತ್ಪನ್ನಗಳನ್ನು ಒದಗಿಸುವ ಪ್ರಯತ್ನವಾಗಬೇಕು. ಆಗ ಒಪ್ಪಂದಗಳಲ್ಲಿಯ

ಸವಾಲುಗಳನ್ನು ಎದುರಿಸಲು ಸಾಧ್ಯವಾದೀತು. ನಮ್ಮಲ್ಲಿ ಅಂಥ ಪ್ರತಿಭೆಗೇನೂ ಕೊರತೆ ಇಲ್ಲ. ರೈತರಿಗೆ ಸಬ್ಸಿಡಿ, ಸಾಲಮನ್ನಾ ಬದಲು ಉತ್ಪನ್ನಗಳಿಗೆ ವೈಜ್ಞಾನಿಕ ಬೆಲೆ ನಿಗದಿಯಾದರೆ ಸಮಸ್ಯೆ ತಾನಾಗಿ ಪರಿಹಾರವಾಗುತ್ತದೆ. ಎಂಬುದು ರೈತ ನಾಯಕರ ಅಂಬೋಣ. ದಿಟ ಈಗ ಸರ್ಕಾರವಷ್ಟೇ ಅಲ್ಲ. ಗ್ರಾಹಕರೂ ದೇಶೀಯ ತನವನ್ನು ಮೌಲಿಕವಾಗಿ ಕಾಪಾಡಿಕೊಳ್ಳಬೇಕು. ವ್ಯವಹಾರದ ಸಾಮರಸ್ಯವನ್ನೂ ಸಾಧಿಸಬೇಕು. ಅಂತರಾಷ್ಟ್ರೀಯ ಮಾರುಕಟ್ಟೆಯಲ್ಲಿ ವಿಯಟ್ನಾಂ ಕಾಫಿ ಬೆಳೆಯ ಸವಾಲಿನೆದುರೂ ಭಾರತದ ರುಚಿ ಕಟ್ಟಾದ ಕಾಫಿಗೆ ಉತ್ತಮ ಭವಿಷ್ಯನಿರುವಲ್ಲಿ ಅದರ ಗುಣಮಟ್ಟ ಹೆಚ್ಚಿಸುವ ಕಡೆ ನಮ್ಮ ಗಮನ ಹರಿಯಬೇಕಿದೆ.

# ಅಧ್ಯಾಯ-11

## ಕುಲಾಂತರಿ ಬೆಳೆಗಳು (ಬಿಟಿ ತಳಿಗಳು)

### ವಿಷಯ 1: ಬಿ.ಟಿ. ಹತ್ತಿ ಪರ ಮತ್ತು ವಿರೋಧ ಪ್ರತಿಕ್ರಿಯೆಗಳು, ಪ್ರತಿಭಟನೆಗಳು

ಹಿನ್ನೆಲೆ: ಮಣ್ಣಿನಲ್ಲಿ ಕಾಣಬರುವ ಬ್ಯಾಸಿಲಸ್ ತುರಿಂಜ ಎನ್ಸಿಸ್ (Bt) ಎಂಬ ಬ್ಯಾಕ್ಟೀರಿಯವು ಹೊಂದಿರುವ ಪ್ರೋಟೀನ್ ಕೆಲವು ನಿರ್ದಿಷ್ಟ ಕೀಟಗಳನ್ನು ಕೊಲ್ಲುವಂಥ ನಂಜು (toxin) ಆಗಿದೆ. ಇಂಥ ಬಿಟಿಯ ವಂಶವಾಹಿ ಕಣವನ್ನು ಹತ್ತಿ ಬೀಜ (ಸಸ್ಯ)ಕ್ಕೆ ಸೇರಿಸಿ ಅದನ್ನು ಕೀಟಬಾಧೆ ರಕ್ಷಿತ ಮಾದರಿ ಹತ್ತಿಬೀಜವನ್ನಾಗಿ ರೂಪಿಸಲಾಗುತ್ತದೆ. ಈ ಜೈವಿಕ ಮಾರ್ಪಾಟಿನ ಹತ್ತಿಯಲ್ಲಿರುವ ಬಿ.ಟಿ. ಟಾಕ್ಸಿನ್, ತಂಬಾಕಿನ ಬಡ್‌ವರ್ಮ್, ಅಮೇರಿಕನ್ ಬೋಲ್‌ವರ್ಮ್ (ಕಾಯಿಕೊರಕ ಹುಳು) ಹಾಗು ನೇರಳೆವರ್ಣದ ಬೋಲ್‌ವರ್ಮ್‌ಗಳ ಮೇಲೆ ಪರಿಣಾಮಕಾರಿಯಾದ ಕೀಟನಾಶಕವಾಗಿ ಕೆಲಸ ಮಾಡಬಲ್ಲುದು. *[1]ಈ ಬಿಟಿ ಹತ್ತಿಗಿಡವು ಪೀಡೆನಾಶಕ ರಾಸಾಯನಿಕವನ್ನು ತಾನೆ ತಯಾರಿಸಿಕೊಳ್ಳಬಲ್ಲಂಥ ಶಕ್ತಿ ಪಡೆದಿರುತ್ತದೆ. ಬಿಟಿ ಬ್ಯಾಕ್ಟೀರಿಯ ವಂಶವಾಹಿ ಪ್ರೇರಿತ; ಸ್ವಯಂ ರೋಗನಿರೋಧಕ ಶಕ್ತಿ ಅರ್ಜಿತ ಈ ಸಸ್ಯ ಜೈವಿಕ ಮಾರ್ಪಾಟಾದ ಸಸ್ಯವೇ ವಿನಹ: ನಿಸರ್ಗ ಸೃಷ್ಟಿಸಿದ್ದಲ್ಲ. ಒಂದು ರೀತಿಯಲ್ಲಿ ಜೈವಿಕ ತಂತ್ರಜ್ಞಾನ ರೂಪಿತ ಸಸ್ಯವಾಗಿದೆ. 1950ರ ದಶಕಗಳಲ್ಲಿ ಆಕಾಶ ಸಿಂಪರಣೆಯ ಕೀಟನಾಶಕ (aerial insecticidal spray) ವಾಗಿ ವ್ಯಾಪಕವಾಗಿ ಬಿಟಿ (Bt) ಯು ಬಳಕೆಯಲ್ಲಿತ್ತು. 1990 ರ ದಶಕದಲ್ಲಿ ಇದನ್ನು ಬೀಜಗಳಲ್ಲಿ ಸಂಯುಕ್ತಗೊಳಿಸಿ ಕೀಟಬಾಧೆಯನ್ನು ನಿಯಂತ್ರಿಸಲಾಗುತ್ತಿತ್ತು. ಬಿಟಿ ತಂತ್ರಜ್ಞಾನವನ್ನು ಧಾನ್ಯಗಳು, ಆಲೂಗೆಡ್ಡೆಯಲ್ಲೂ ಬಳಸಲಾಯಿತು. ಭಾರತೀಯ ಕೃಷಿ ಸಂಶೋಧನಾ ಸಂಸ್ಥೆ (IARI) ಹಾಗು ಖಾಸಗಿ ಸಂಸ್ಥೆಗಳು, ಬದನೆ, ಕೋಸು, ಭತ್ತಗಳ ಮೇಲೆ ಈ ತಂತ್ರಜ್ಞಾನದ ಪ್ರಯೋಗ ಮಾಡುತ್ತವೆ. ಈ ಬಗೆಯ ತಳಿಗಳನ್ನು ಕುಲಾಂತರಿ ತಳಿಗಳೆಂದು, ಅಂತರ್‌ಕುಲ ತಳಿಗಳೆಂದೂ ಕರೆಯುವುದುಂಟು. ಬಿಟಿ ಹತ್ತಿ ಇಂಥ ಒಂದು ಕುಲಾಂತರಿ ತಳಿಯಾಗಿ ಕಾಯಿಕೊರಕ ಕೀಟಕ್ಕೆ ನಿರೋಧಕ ಶಕ್ತಿ ಹೊಂದಿದೆ.

ಈ ಹಿಂದೆ ರೈತರು ಡೈಕ್ಲೋರೈಡ್‌ಡೈಫಿನೈಲ್ ಟ್ರೈಕ್ಲೋರೋಈಥೇನ್ (ಡಿಡಿಟಿ) ಟಾಕ್ಸೋಫೇನ್ ಇತ್ಯಾದಿ ರಾಸಾಯನಿಕ ಕೀಟನಾಶಕಗಳನ್ನು ಬಳಸುತ್ತಿದ್ದರು. ಈಚೆಗೆ

*[1]. vide:Behind All the Fluff-clearing 'The Air on BT cotton', *Economic survey 2001,* Liberty Institute, Delhi, India.

ಕುಲಾಂತರಿ ತಳಿಗಳ ಕಡೆಗೆ ತಿರುಗಿ, ಅಮೇರಿಕೆಯ ರೈತರು ಬಂಡವಾಳ ಹೂಡಿ ಜಾಗತಿಕ ಸ್ಪರ್ಧೆಗೆ ಸಿದ್ಧವಾಗುವ ಪ್ರಯತ್ನ ಮಾಡಿದರು. 1980ರ ದಶಕಗಳಲ್ಲಿ ಉದ್ಯಮ ಕಂಪೆನಿಗಳು ಬಿಟಿ ವಂಶವಾಹಿ ತಳಿಗಳಿಂದಾದ ಅರ್ಜಿತ ಕೀಟ ನಿರೋಧಕ ಮಾದರಿಗಳನ್ನು ತಯಾರಿಸಲು ಶುರುಮಾಡಿದುವು. ಈ ತಂತ್ರಜ್ಞಾನದಿಂದ ಹತ್ತಿಯೇ ಮೊಟ್ಟ ಮೊದಲಿಗೆ ಪ್ರಯೋಜನ ಪಡೆದ ಬೆಳೆಗಳಲ್ಲಿ ಒಂದಾಯಿತು. ಅಂತಾಗಿ ಬಿಟಿ ಹತ್ತಿಯು ಅಮೇರಿಕ, ಚೈನಾ, ಆಸ್ಟ್ರೇಲಿಯ ಹಾಗು ಭಾರತದಲ್ಲಿ ಬೆಳೆಯುತ್ತಿರುವ ಬೆಳೆಯಾಗಿದೆ. 1996ರಲ್ಲಿ ವಾಣಿಜ್ಯ ವಹಿವಾಟಿನ ಮಾದರಿಯಾಗಿ ಬಿಟಿ ಹತ್ತಿ ಬಳಕೆಗೆ ಬಂದುಬಿಟ್ಟಿತ್ತು. ಬಿಟಿ ಟಾಕ್ಸಿನ್, ಹತ್ತಿ ಗಿಡದ ಇಡೀ ಕಾಲಾವಧಿಯಲ್ಲಿ ಇಡೀ ಭಾಗದಲ್ಲಿ ಅಡಕಗೊಂಡಿರುತ್ತದೆ ಎಂದು ಹೇಳಲಾಗಿದೆ. ಆದರೆ ಮುಂದಿನ ತಲೆಮಾರಿನ ಬಿಟಿ ಹತ್ತಿಯನ್ನು ಎರಡು ವಂಶವಾಹಿ ಕಣಗಳನ್ನು ಸೇರಿಸಿ ಕುಲಾಂತರಿ ತಳಿಯನ್ನು ನಿರ್ಮಿಸಿ 2003ರ ವೇಳೆಗೆ ವಾಣಿಜ್ಯೋದ್ದೇಶಗಳಿಂದ ಬಿಡುಗಡೆ ಮಾಡಲು ಪ್ರಯೋಗ ನಡೆಸಲಾಗುವುದು ಎಂದು ಅಡಂಸಿಜ್ಯಕ್ ಅವರ ಹೇಳಿಕೆ ಆಗಿತ್ತು. ಅದರ ಜೊತೆಗೆ ಶೇಕಡ 80 ಹಾಗು ಅದನ್ನು ಮೀರಿದ ಶೇಕಡಾವಾರಿನಲ್ಲಿ ಬಿಟಿ ಹತ್ತಿ ಬೆಳೆಯುವ ಜೊತೆಯಲ್ಲಿಯೆ ಆ ಪ್ರದೇಶದಲ್ಲಿ ಬಿಟಿ ಹತ್ತಿಯೇತರ ಹತ್ತಿಯನ್ನು ಬೆಳೆಯಬೇಕು, ಇಂತಾಗಿ ಅನುಗುಣ ಉಳಿಕೆ ಶೇಕಡಾವಾರು ಪ್ರದೇಶದಲ್ಲಿ ಬಿಟಿಗೆ ನಿರೋಧಕ ಬೆಳಸಿಕೊಳ್ಳುವ ಕೀಟಶಕ್ತಿಯನ್ನು ತಡೆಯಲು ಅಥವಾ ವಿಳಂಬಗೊಳಿಸಲು, ಬೆಳೆಗಾರರಿಗೆ ಸೂಚಿಸಲಾಗಿದೆ. *[2]ಹೀಗಾದರೆ ಒಂದನೇ ತಲೆಮಾರಿನ ಬಿಟಿ ಹತ್ತಿಯ ಸಂಪೂರ್ಣ ನಿರೋಧಕ ಶಕ್ತಿಯ ಬಗ್ಗೆ ಪ್ರಯೋಗಗಳಿಂದ ಮತ್ತಷ್ಟು ಸಾಬೀತಾಗಬೇಕೆಂದಾಗುತ್ತದೆ. ಈ ದೃಷ್ಟಿಯಿಂದ ಭಾರತದ ತಳಿ ತಾಂತ್ರಿಕ ಸಮ್ಮತಿ ಸಮಿತಿಯ (Genetic Engineering Approval committee-GEAC) ಚೇರ್ ಪರ್ಸನ್ ಶ್ರೀ ಎ.ಎಂ. ಗೋಖಲೆ ಯವರು, ಈ ಜೈವಿಕ ಮಾರ್ಪಾಟು ತಂತ್ರಜ್ಞಾನ ನಮಗೆ ಹೊಸದಾಗಿರುವುದರಿಂದ ಆ ಬಗ್ಗೆ ಈಗಲೇ ತೀರ್ಮಾನ ತೆಗೆದುಕೊಳ್ಳುವುದು ಸಾಧ್ಯವಿಲ್ಲ *[3]ಎಂಬ ಅಭಿಪ್ರಾಯ ವ್ಯಕ್ತಪಡಿಸಿದ್ದುದನ್ನು ಗಮನಿಸಬೇಕು.

ಭಾರತದ ಬಳಕೆ : 1998 ರ ಸಮಯ. ಬಹುರಾಷ್ಟ್ರೀಯ ಕಂಪೆನಿ ಮಾನ್ಸಂಟೊದೊಡನೆ ಸಂಪರ್ಕವನ್ನು ಮಹಾರಾಷ್ಟ್ರ ಹೈಬ್ರಿಡ್ ಸೀಡ್ಸ್ ಕಂಪೆನಿ

*2. vide, 'Protecting Farmers Investment in Bt cottons.' *USDA, ARS* News Information.

*3. The Hindu Editorial: should India say yes to Bt crops?., *THE HINDU* 6.9.2001

(Mahyco ಮಾಯ್ಕೋ) ಹೊಂದಿರುವಂಥದ್ದು ಐಸಿ ಎ ಆರ್ ಮೇಲ್ವಿಚಾರಣೆಯಲ್ಲಿ ಹಾಗು ಜೈವಿಕ ತಂತ್ರಜ್ಞಾನ ಇಲಾಖೆ (ಡಿಬಿಟಿ)ಯ ಸಹಮತದಲ್ಲಿ ಬಿಟಿ ಹತ್ತಿ ಸಂಬಂಧದ ಕ್ಷೇತ್ರ ಪ್ರಯೋಗ ನಡೆಸಿತು. ಆದರೆ ಆಂಧ್ರ ಹಾಗು ಕರ್ನಾಟಕದ ಪರಿಸರವಾದಿಗಳು ಪ್ರಯೋಗಕ್ಷೇತ್ರಗಳನ್ನು ಸುಟ್ಟರು. 1ಎಕರೆ ಪ್ರದೇಶದಲ್ಲಿ ಮಾಡಿದ ಕ್ಷೇತ್ರಪ್ರಯೋಗ ಬಿ.ಟಿ. ಹತ್ತಿ ಬೆಳೆ ಕುರಿತದ್ದು ತೀರ ಸಣ್ಣ ಪ್ರಮಾಣದ್ದಾಗಿತ್ತು. ಹಾಗು ಬಿತ್ತನೆ ಕೂಡ ತೀರ ತಡವಾಗಿದ್ದರಿಂದ ಹುಳುಪೀಡೆಯು ಅನುಭವಕ್ಕೆ ನಿಕಟವಾಗಿ ಒದಗಲಿಲ್ಲ. 2001ರ ವೇಳೆಗೆ, ಆಂಧ್ರದ 480 ಎಕರೆಗಳಲ್ಲಿ, ಗುಜರಾತಿನ ರೈತರು 11 ಸಾವಿರ ಎಕರೆಗಳಲ್ಲಿ ಇನ್ನೂ ಒಪ್ಪಿಗೆ ಮುದ್ರೆ ಪಡೆಯದಿದ್ದ ಅನಧಿಕೃತ ಬಿಟಿ ತಳಿ ಹತ್ತಿಯನ್ನು ಬಿತ್ತಿಬಿಟ್ಟಿದ್ದರು. ಮಾಮೂಲು ತಳಿಯ ಹತ್ತಿ ಬೆಳೆದ ಪ್ರದೇಶದಲ್ಲಿ ಕಾಯಿಕೊರಕ (ಬೋಲ್ ವರ್ಮ್) ಕೀಟದ ಹಾವಳಿಯಿಂದ ಬೆಳೆ ಹಾಳಾಯಿತು. ಅದರೆ ಬಿಟಿ ತಳಿಯ ಅನಧಿಕೃತ ಮಾದರಿಯನ್ನು ಬಿತ್ತಿದ ಪ್ರದೇಶದ ಬೆಳೆ ಈ ಹಾವಳಿಯನ್ನು ತಡೆದುಕೊಂಡಿತ್ತು. ಇದು ರೈತರನ್ನು ಆಕರ್ಷಿಸಿದ್ದು ಸಹಜವಾಗಿತ್ತು. ಈ ಬಿಟಿ ತಳಿಯ ಬೀಜ ಕೆಜಿಗೆ 50 ರೂನಷ್ಟು ದುಬಾರಿ ಆಗಿದ್ದರೂ, ಮಾಮೂಲು ತಳಿ ಕೆಜಿಗೆ 7–8 ರೂ.ಗಳಿದ್ದರೂ, ರೈತರು ಬಿಟಿ ತಳಿಯತ್ತವೇ ಗಮನಕೊಟ್ಟರು. ಎಕರೆಗೆ 1.20 ಕ್ವಿಂಟಾಲ್ ಬದಲು 10 ಕ್ವಿಂಟಾಲ್ ಬಂದಾಗ ಅವರಿಗೆ ಪುಳಕವಾಯಿತು. ಈ ಅನಧಿಕೃತ ಮಾದರಿ ಬಳಕೆಯನ್ನು ಅನೇಕ ಹತ್ತಿ ಗಿರಣಿಗಳೂ ಬಳಸತೊಡಗಿದ್ದುವು. ನವಭಾರತ್ ಬೀಜಕಂಪೆನಿ (ನವಭಾರತ್ 151 ಎಂಬ ಕುಲಾಂತರಿ ತಳಿ ಬಿಟಿ ಹತ್ತಿ) ಸರಬರಾಜು ಮಾಡಿದ ಈ ಅನಧಿಕೃತ ಬೀಜದಿಂದ ಬೆಳೆದ 105 ಕೋಟಿ ಮೌಲ್ಯದ ಹತ್ತಿಬೆಳೆಯನ್ನು ಕೇಂದ್ರ ಸರ್ಕಾರದ ವತಿಯಿಂದ ಸುಡಿಸಿದ್ದು ರೈತರಲ್ಲಿ ಅಸಮಾಧಾನ ಹೊಗೆಗೆ ಕಾರಣವಾಯಿತು. ಆ ಕಂಪೆನಿ ಕಾನೂನು ಭಂಗ ಮಾಡಿ ಬೀಜ ಸರಬರಾಜು ಮಾಡಿತ್ತು. ಆದರೆ ಆ ಬೀಜವೇ ಮಿಡತೆ ಹಾವಳಿ ಎದುರು ನಿರೋಧಕ ಶಕ್ತಿ ತೋರಿತ್ತು. ಹೀಗಾಗಿ ಸರ್ಕಾರದ ನಡೆಗೆ ರೈತವರ್ಗ ಆಕ್ರೋಶಗೊಂಡಿತು. ಅಲ್ಲದೆ ನವಭಾರತ ಕಂಪೆನಿ ಕಾನೂನು ಉಲ್ಲಂಘನೆಗಾಗಿ ಮೊಕದ್ದಮೆ ಎದುರಿಸಬೇಕಾಯಿತು. ಅದು ರೈತರಿಗೆ 2.2 ಕೋಟಿ ರೂ. ಪರಿಹಾರವನ್ನು, ನಷ್ಟದ ಕಾರಣ ಕೊಡಬೇಕಾಗಿತ್ತು.

ಭಾರತದಲ್ಲಿ ಹತ್ತಿಯೊಂದು ಮುಖ್ಯ ಆರ್ಥಿಕ ಬೆಳೆ. 9 ಮಿಲಿಯನ್ ಹೆಕ್ಟೇರುಗಳಲ್ಲಿ ಸಾಗುವಳಿ ಆಗುವ ಈ ಬೆಳೆ ಒಂದು ಮಿಲಿಯನ್ ರೈತರಿಗೆ ಆವಲಂಬನ ಒದಗಿಸಿತ್ತು. 60 ಮಿಲಿಯನ್ ಜನರು ಹತ್ತಿ ಉದ್ಯಮದಲ್ಲಿ ಅಂದರೆ

ನೇಯ್ಗೆ, ಟೆಕ್ಸ್‌ಟೈಲ್, ರಫ್ತು ಈ ಮೂಲಕ ತೊಡಗಿದರು. ಶೇ.3.3 ವಿದೇಶಿ ವಿನಿಮಯ ದೊರೆಯುವಂತಾಗಿತ್ತು. ಜಾಗತಿಕ ಹತ್ತಿ ಬೆಳೆಯ ಸರಾಸರಿ ಇಳುವರಿಯಲ್ಲಿ ತೀರ ಕಡಿಮೆಯಾಗಿದ್ದ ನಮ್ಮ ಬೆಳೆ ಇದರಿಂದ ಹೆಚ್ಚುಗೊಳ್ಳುವಂತಿತ್ತು. ಆದರೆ 2000–2001 ರ ಖಾರಿಫ್ ಸೀಸನ್‌ನಲ್ಲಿ ದೇಶದಲ್ಲಿ ಶೇ. 13 ರಷ್ಟು ರೂ ಹತ್ತಿ ಬೆಳೆಗೆ ಹಾನಿ ಒದಗಿದಾಗ ಹೆಚ್ಚು ಬೆಳೆದಿದ್ದ ಆಂಧ್ರ, ಪಂಜಾಬ್, ಹರಿಯಾನ ಪ್ರದೇಶಗಳಲ್ಲಿ ರೈತರಿಗೆ ಭಾರಿ ಹಾನಿ ಆಯಿತು. ಅದರಿಂದ ಆಂಧ್ರ ಮತ್ತು ಪಂಜಾಬಿನ ಅನೇಕ ರೈತರು ಆತ್ಮಹತ್ಯೆ ಮಾಡಿಕೊಂಡರು. ಉತ್ಪನ್ನದ ವೆಚ್ಚ ದುಬಾರಿ ಆಗಿತ್ತು. ಇಳುವರಿ ಕುಸಿದಿತ್ತು. ಬೋಲ್‌ವರ್ಮ್‌ನ (ಕಾಯಿಕೊರಕ) ಪುನಃಪುನಃ ಆದ ಹಾವಳಿ, ಬೆಳೆ ವಿಮಾ ಯೋಜನೆಯಡಿ ವಿಮಾ ಹಣ ಲಭ್ಯತೆಯ ಕೊರತೆ, ಈ ಕಾರಣಗಳಿಂದ ಈ ಹತ್ತಿ ರೈತರು ವಿಪರೀತ ಸಾಲಕ್ಕೀಡಾಗಿದ್ದರು. ಕೀಟನಾಶಕಗಳೂ ದುಬಾರಿ ಹಾಗು ನಕಲಿ ಆಗಿದ್ದುವು. ಶೇ 80 ರಷ್ಟು ಬಳಕೆಯು ರೈತರಲ್ಲಿ ಇದ್ದಾಗ ಅನಧಿಕೃತ ಮಾದರಿಯ ಸರಬರಾಜು ಮಾರಾಟದ ಕಡೆಗೆ ಸಮರ್ಪಕ ವ್ಯವಸ್ಥೆ ಇಲ್ಲದಿದ್ದುದು ಒಂದು ಕೊರತೆಯಾಗಿತ್ತು. ಇದು ಭಾರತದ ಸ್ಥಿತಿಯಾದರೆ, ಜಾಗತಿಕ ಮಾರುಕಟ್ಟೆಯಲ್ಲಿ ಸುಲಭ ಬೆಲೆಗೆ ಗುಣಮಟ್ಟದ ಈ ಹತ್ತಿ ದೊರೆತಾಗ ಭಾರತದ ಹತ್ತಿ ಗಿರಣಿಗಳು ಅದರತ್ತ ವಾಲಿದವು. ಭಾರತದ ರೈತ ದೇಶೀಯ ಹತ್ತಿ ಹಾಗು ಜಾಗತಿಕ ಮಾರುಕಟ್ಟೆಯಲ್ಲಿ ತನ್ನ ಮಾಮೂಲು ಹತ್ತಿಗೆ ಬೆಲೆ ಕಳೆದುಕೊಂಡ. ಬಿ.ಟಿ. ಹತ್ತಿಯ ರೋಗ ನಿರೋಧಕ ಶಕ್ತಿ ಸಂಚಿತ ತಳಿ ಸುಧಾರಿತ ಬೀಜಗಳಿಂದಾಗಿ ಅಧಿಕ ಇಳುವರಿಯ ಕಾರಣ ಪಶ್ಚಿಮ ದೇಶಗಳಲ್ಲಿ ಅದರ ಬಳಕೆಯಾಯಿತು. ಆದರೆ ಪರ ಹಾಗು ವಿರೋಧ ಪ್ರತಿಕ್ರಿಯೆಗಳೂ ವ್ಯಕ್ತವಾದವು. ಈ ನಡುವೆ ಭಾರತದಲ್ಲೂ ಪ್ರಚಲಿತಗೊಂಡ ಈ ಸುಧಾರಿತ ತಳಿಗಳ ಬಗ್ಗೆ ರೈತರು ಹೆಚ್ಚು ತಿಳಿದುಕೊಳ್ಳಲಾಶಿಸಿದರೂ ಸರಬರಾಜು ಮಾಡುವ ಕೃಷಿ ಕಂಪೆನಿಗಳ ಸಂಪರ್ಕವಿಲ್ಲದೆ ಆ ನಿಟ್ಟಿನಲ್ಲಿ ಒಂದು ಕೊರತೆಯಾಯಿತು. ಅಧಿಕ ಇಳುವರಿ ಕಂಡು ಆಸೆ ಚಿಗುರಿದ್ದು ಒಂದು ಕಡೆ; ನಮ್ಮ ಆರ್ಥಿಕ ಸ್ಥಿತಿ, ಸಂಸ್ಕೃತಿ, ಪರಿಸರಕ್ಕೆ ಕುಲಾಂತರಿ ತಳಿಗಳು ಹೊಂದುವುದಿಲ್ಲ ಎಂಬ ವಾದ ಇನ್ನೊಂದೆಡೆ. ಇವೆರಡರ ನಡುವೆ ನಮ್ಮ ರೈತರು ಅಸಹಾಯಕರಾದರು. ಬೀಜ ಕಂಪೆನಿಗಳು ಒದಗಿಸಿದ ಬೀಜಗಳು ಮೊದಲ ಸರದಿಯಲ್ಲಿ ಅಧಿಕ ಇಳುವರಿ ಕೊಡಬಹುದು. ಆದರೆ ಮರುಬಳಕೆ ಸಾಧ್ಯವಿಲ್ಲವಾಗಿ ಮುಂದಿನ ಇಳುವರಿಯ ಆಸೆಯೆ ಇಲ್ಲ ಎಂಬ ವದಂತಿಗಳೂ ರೈತರನ್ನು ಕಂಗೆಡಿಸಿದುವು. ಹೀಗಾಗಿ ಆಂಧ್ರ ಹಾಗು ಕರ್ನಾಟಕದಲ್ಲಿ ಆತ್ಮಹತ್ಯಾ ಪ್ರಕರಣಗಳು ಜರುಗಲು ಕಾರಣವಾಯಿತು. ಜೊತೆಗೆ ಬೆಳೆ ಹಾನಿಯೂ ಆಯಿತು. ಇದಕ್ಕೆ ಕಳಪೆ

ಬೀಜ ವಸ್ತು ಕಂಪೆನಿಗಳು ಮಾರಿವೆ ಎಂದು ರೈತ ಸಂಘಗಳು ಆಕ್ರೋಶಗೊಂಡು ಕಂಪೆನಿ ಕಛೇರಿಗಳಿಗೆ ನುಗ್ಗಿ ಹಾವಳಿ ಎಸಗಿದುವು. ಬಿಟಿ ಹತ್ತಿ ಹೊಲಗಳಿಗೂ ಬೆಂಕಿ ಇಟ್ಟವು. ಕೊನೆಗೆ ಸರ್ಕಾರ ಈ ಬೆಳೆಯ ಸಾಧಕ ಬಾಧಕವನ್ನು ಹಾಗು ಇಲ್ಲಿನ ಪರಿಸರಕ್ಕೆ ಹೊಂದುವ ಬಗ್ಗೆ ತೀರ್ಮಾನ ಪ್ರಕಟಿಸಿದ ನಂತರ ಬಳಕೆಗೆ ಅವಕಾಶ ನೀಡಲಾಗುವುದು ಎಂದಿತು. ಈ ದೃಷ್ಟಿಯಿಂದ ಬಿಟಿ ಹತ್ತಿ ಬಗೆಗಿನ ಪರ ಹಾಗು ವಿರೋಧ ವಾದಗಳನ್ನು ತೀವ್ರವಾಗಿ ಗಮನಿಸಬೇಕಾಗುತ್ತದೆ.

**ಬಿಟಿ ಹತ್ತಿ–ಬೆಂಬಲಿಸಿದ ನಿಲುವುಗಳು:** ಪಾರಂಪರಿಕ ಕೀಟನಾಶಕಗಳ ಬಳಕೆಯನ್ನು ಕಡಿತಗೊಳಿಸಿ, ಪರಿಸರ ನಿರ್ವಹಣೆಗೆ ಹಾಗು ಉತ್ಪನ್ನ ವೆಚ್ಚದ ಭಾರಿ ಮಿಗಿತಾಯಕ್ಕೆ ಅವಕಾಶವಾಗುತ್ತದೆ; ಇದನ್ನು ಬಳಸುತ್ತಿರುವ ದೇಶಗಳು ಹಳೆಯ ಕೀಟನಾಶಕ ಸಿಂಪರಣಾ ಪದ್ಧತಿಯನ್ನು ಶೇ. 60–80 ರಷ್ಟು ಕೈ ಬಿಟ್ಟಿವೆ. ಗುಜರಾತಿನ ಕೆಲ ರೈತರಿಗೆ ಎಕರೆಗೆ 5 ಸಾವಿರ ರೂ. ನಷ್ಟು ಕೀಟನಾಶಕ ಬಳಕೆಯ ವೆಚ್ಚ ಕಡಿಮೆ ಆಗಿದೆ; ಹಿಂದಿನ ಕೀಟನಾಶಕ ಔಷಧಿಗಳು ಬಹಳ ದುಬಾರಿ ಇದ್ದು, ಬಿಟಿ ಬೀಜ ಬಳಕೆಗೆ ತೊಡಗಿದಾಗ ಅದೆಲ್ಲ ತಪ್ಪಿ ಇಳುವರಿ ಸುಧಾರಿಸಿದೆ, ಚೈನಾದಲ್ಲಿ ಶೇ. 15 ರಷ್ಟು ಇಳುವರಿ, ಸ್ಪೇನ್ ನಲ್ಲಿ ಶೇ. 12 ರಷ್ಟು, ಭಾರತದ ಕ್ಷೇತ್ರ ಪ್ರಯೋಗಗಳಲ್ಲಿ ಶೇ. 14 ರಿಂದ 38 ರಷ್ಟು ಇಳುವರಿ ಸಾಂಪ್ರದಾಯಿಕ ವಿಧಾನದಲ್ಲಿ ಬರುತ್ತಿದ್ದುದಕ್ಕಿಂತ ಹೆಚ್ಚಾಗಿ ಬಂದಿದೆ; ರಾಸಾಯನಿಕ ಕೀಟನಾಶಕಗಳ ಸಿಂಪರಣೆಯಿಂದಾಗಿ ರೈತರ ಆರೋಗ್ಯ ಹಾಗು ಇಳುವರಿ ಮೇಲಿನ ಪರಿಣಾಮಗಳಿಗೆ ಹಾನಿ ಕಡಿಮೆಯಾಗುತ್ತದೆ; ಭಾರತದಂತೆ ಸಣ್ಣ ಹಿಡುವಳಿಗಳಿರುವ ಚೈನಾದ ರೈತರಿಗೆ ಆರೋಗ್ಯ ಸುಧಾರಣೆ ಆಗಿದ್ದು ಕೃಷಿ ಕಾರ್ಮಿಕರ ಬಳಕೆ ಕಡಿಮೆ ಆಗಿದೆ. ಮುಖ್ಯವಾಗಿ ಅಗ್ಗದ ಉತ್ಪನ್ನವೆಚ್ಚ ಹಾಗು ಅಧಿಕ ಇಳುವರಿಗಳು ರೈತರಿಗೆ ಲಾಭ ಸುಧಾರಣೆಯನ್ನು ತರುವ ತರ್ಜುಮೆಕಾರಕಗಳಾಗಿವೆ. ಇವೆಲ್ಲ ನೇರ ಪ್ರಯೋಜನಗಳಾದರೆ, ಉಪಯೋಗಕಾರಿ ಅನ್ಯ ಕೀಟಗಳಿಗೆ ಅಪಾಯವಿಲ್ಲದಿರುವುದು ಸಿಂಪರಣೆ ಕೀಟನಾಶಕಗಳ ಕಡಿತದಿಂದ, ಗಾಳಿ, ನೀರು, ಮಣ್ಣಿಗೆ ಸೇರುವ ಅವುಗಳ ಪ್ರಮಾಣ ಕುಸಿಯುವುದು, ಹೊಲಗಳಲ್ಲಿ ದುಡಿಯುವವರ ಆರೋಗ್ಯ, ಸ್ಥಳೀಯರ ಆರೋಗ್ಯ ಹದಗೊಳ್ಳುವುದು ಇವೆಲ್ಲ ಪರೋಕ್ಷ ಪ್ರಯೋಜನಗಳೆನಿಸುತ್ತವೆ. ಇನ್ನು ಇದರ ವ್ಯಾಪಕತೆ ಎಂದರೆ 1996 ರಲ್ಲಿ ಬಿಟಿಹತ್ತಿಯನ್ನು ವಾಣಿಜ್ಯೀಕರಣಗೊಳಿಸುವ ಅಮೇರಿಕವಲ್ಲದೆ ಮೆಕ್ಸಿಕೋ, ಅರ್ಜೆಂಟೈನ, ಆಸ್ಟ್ರೇಲಿಯ, ದಕ್ಷಿಣ ಆಫ್ರಿಕ, ಚೈನ ಇತ್ಯಾದಿ ದೇಶಗಳು 1998ರ ವೇಳೆಗೆ ಹೆಚ್ಚು ಬೆಳೆಯಲಾರಂಭಿಸಿದುವು. ಚೈನಾದಲ್ಲಿ 60 ಸಾವಿರ ಹೆಕ್ಟೇರಿನಷ್ಟು

ಆ ಹೊತ್ತಿಗೆ ಬೆಳೆದರೆ, ಜಾಗತಿಕ ಹತ್ತಿ ಮಾರುಕಟ್ಟೆಯಲ್ಲಿ ಗೌಣಪಾತ್ರ ಹೊಂದಿರುವ ಇಂಡೋನೇಷಿಯವು 2001ರಲ್ಲಿ ವಾಣಿಜ್ಯೀಕರಣ ಬಿಟಿ ಹತ್ತಿಯನ್ನು 4 ಸಾವಿರ ಹೆಕ್ಟೇರಿನಲ್ಲಿ ಬೆಳೆಯಲಾರಂಭಿಸಿತು. ಅಂದರೆ ಈ ಪ್ರಯತ್ನಗಳಿಂದ ನಷ್ಟವಾದದ್ದು ಆತಂಕ ತರುತ್ತಿದ್ದ ಕಾಯಿಕೊರಕ ಹುಳುವಿಗೆ; ಲಾಭವಾದದ್ದು ರೈತರಿಗೆ. ಕೃಷಿ ಪರಿಕರವೆಚ್ಚದ ಕಡಿತ, ಅಧಿಕ ಹಾಗೂ ಉತ್ತಮ ಗುಣಮಟ್ಟದ ಇಳುವರಿ, ಕೀಟನಾಶಕ ಸಿಂಪರಣೆಯ ಹೆಚ್ಚಿನ ಹಾನಿಕಾರಕ ಪರಿಣಾಮದಿಂದ ಕೃಷಿ ಕಾರ್ಮಿಕರಿಗೆ ಮುಕ್ತತೆ; ಗ್ರಾಹಕರಿಗೆ ಸುಲಭ ಬೆಲೆಗೆ ಉತ್ತಮ ಉತ್ಪನ್ನ ಲಭ್ಯತೆ; ದೇಶೀಯ ಒಳ್ಳೆಹತ್ತಿ ಬೆಳೆ ಬಯಸುವ ಭಾರತದ ಹತ್ತಿ ಉದ್ಯಮಕ್ಕೆ; ಪರಿಸರ ಹಾನಿ ತೀವ್ರತೆ ಕಡಿತ; ಹೀಗೆ ಕ್ರೋಢೀಕರಿಸಿದ ಬೆಂಬಲದ ವಾದಗಳಿವೆ.*4

ಡಿ.ಡಿ. ಹಾರ್ಡಿ ಅವರು ಹೇಳುವ ರೀತ್ಯಾ ಈ ಬಿಟಿ ತಳಿ ಜೈವಿಕ ಮಾರ್ಪಾಟು ತಂತ್ರಜ್ಞಾನದಿಂದ ಗಮನಾರ್ಹವಾಗಿ ಕೀಟನಾಶಕಗಳ ಬಳಕೆಯು ಕಡಿತಗೊಳ್ಳುತ್ತದೆ. ಬಿಟಿ ವಂಶವಾಹಿ ಕಣವು ಇಡೀ ಆ ಹತ್ತಿ ತಳಿಯ ಶರೀರದಲ್ಲಿ ಅದರ ಜೀವಾವಧಿ ಪೂರ್ಣ ಇರುತ್ತದೆ. ಅದು ಕಾರಣ ಉಪಯೋಗಕಾರಿ ಕೀಟಗಳನ್ನು ಬಿಟ್ಟು ಹತ್ತಿಗೆ ಹಾನಿ ಮಾಡುವ ನಿರ್ದಿಷ್ಟ ಕೀಟ ಬಾಧೆಗೆ ನಿರೋಧಕ ಶಕ್ತಿಯಾಗಿ ಕೆಲಸ ಮಾಡುತ್ತದೆ.*5 ಸದ್ಯಕ್ಕೆ ಇಡೀ ಜಗತ್ತಿನಲ್ಲಿ ಈ ಜೈವಿಕ ಮಾರ್ಪಾಡು ತಂತ್ರಜ್ಞಾನದಿಂದ ಕೀಟ ನಿಯಂತ್ರಣ ಮಾಡುವ ಒಂದೇ ಲಭ್ಯ ತಂತ್ರಜ್ಞಾನವಾಗಿದೆ. ಅಲ್ಲದೆ ವಂಶವಾಹಿಕಣದ r DNA ತಂತ್ರಜ್ಞಾನವು ಬಹುಶಃ ಏಕೈಕ ಅಧಿಕತಮ ವಾಣಿಜ್ಯೀಕರಣ ಬಳಕೆಯಾಗಿ ಈವರೆಗೆ ಜಗತ್ತಿನಲ್ಲಿ ರೂಢಿಗೆ ನಿಂತಿದೆ. ಬೀಜಕಂಪೆನಿಗಳು ಹಾನಿಕಾರಕ ಕೀಟನಾಶಕಗಳ ಮೇಲೆ ಅವಲಂಬಿತವಾಗುವುದನ್ನು ತಪ್ಪಿಸಲು ಈ ಮಾದರಿ ಬೀಜಗಳನ್ನು ತಯಾರಿಸುತ್ತಿವೆ. ಸರಿ. ಆದರೆ ಕಳೆದ 5 ವರ್ಷಗಳ ಈ ಕುರಿತ ಅನುಭವವು ಕೀಟ ಬಾಧೆಯ ನಿಯಂತ್ರಣದಲ್ಲಿ ಕೆಲವು ಸಮಸ್ಯೆಗಳನ್ನು ತೋರಿ ಪ್ರಶ್ನೆಗಳನ್ನೆತ್ತಿದೆ.*6

ಭಾರತವು ಜಗತ್ತಿನಲ್ಲಿ ದೊಡ್ಡ ಪ್ರಮಾಣದಲ್ಲಿ ಹತ್ತಿ ಬೆಳೆಯುವ ರಾಷ್ಟ್ರಗಳ ಪೈಕಿ ಮೂರನೆಯ ಸ್ಥಾನದಲ್ಲಿದೆ. ಶೇ. 50ರಷ್ಟು ಕೀಟನಾಶಕಗಳನ್ನು ಭಾರತದಲ್ಲಿ ಬೆಳೆಯ ಮೇಲೆ ಬಳಸಲಾಗುತ್ತಿದೆ. ಇಂಥ ಸಂದರ್ಭದಲ್ಲಿ ಬಿ.ಟಿ. ಹತ್ತಿ ಪ್ರಯೋಜನಕಾರಿ ಎನಿಸುತ್ತದೆ. ಪರಿಸರದ ದೃಷ್ಟಿಯಿಂದ ಸುಮಾರು 200 ಬಗೆ

*4. 'Behind All, The Fluff,' vide the ref, opp.cit.,

*5. vide: Protecting Farmers' Investment in Bt cotton, opp. cit.,

*6. vide: why Bt cotton should be Banned? *The Hindu* 6.9.2001

ಕೀಟಗಳ ವಿರುದ್ಧವಾಗಿ ಈ ತಳಿಯ ಜ್ಞಾನ ಕೆಲಸ ಮಾಡಬಲ್ಲದ್ದಾದರೂ, ಪಕ್ಷಿ, ದುಂಬಿ, ಮೀನು, ಇತ್ಯಾದಿ ಪ್ರಯೋಜನಕಾರಿ ಜೀವವರ್ಗಕ್ಕೆ, ಪ್ರಾಣಿ ಹಾಗು ಮನುಷ್ಯರಿಗೆ ಅಪಾಯ ತರುವುದಿಲ್ಲ. ಸಾಮಾಜಿಕ ಸಂದರ್ಭದಲ್ಲಿ ಹೇಳಿದರೆ ಮಾಮೂಲು ಹತ್ತಿ ಬೆಳೆದು ಕಳಪೆ ಕೀಟನಾಶಕಗಳನ್ನು ಬಳಸಿ ಹಾನಿಗೊಂಡಾಗ ಆತ್ಮಹತ್ಯೆ ಮಾಡಿಕೊಳ್ಳುತ್ತಿರುವ ಸನ್ನಿವೇಶವನ್ನು ಉತ್ತಮ ಇಳುವರಿ ಕೊಡುವ ನಿರೋಧಕ ಶಕ್ತಿಯ ಈ ತಳಿಯ ಬಳಕೆಯಿಂದ ಆರ್ಥಿಕಲಾಭ ತರಿಸಿಕೊಟ್ಟು, ನಿವಾರಿಸಬಹುದು, ಎಂದೆಲ್ಲ ವಾದವಿದೆ. ಈ ಹತ್ತಿ ಬೆಳೆಯಿಂದ ಯಾವುದೇ ದುಷ್ಪರಿಣಾಮವಿಲ್ಲ. ಇದು ಉತ್ಪಾದಿಸುವ ಪ್ರೋಟೀನ್‌ಗಳು ಲಿಪಟೋಪ್ಟರಸ್ ಜಾತಿಗೆ ಸೇರಿದ ಕೀಟಗಳಿಗೆ ಮಾತ್ರ ಹಾನಿಕರಕವಾಗಿದೆ. ಇನ್ನು ಮುಂದೆ ಶೇ. 50 ರಷ್ಟು ಕೀಟನಾಶಕಗಳ ಬಳಕೆಯಿಂದಾಗುವ ಪರಿಸರ ಮಾಲಿನ್ಯವನ್ನು ತಪ್ಪಿಸಲು ಇದರಿಂದ ಸಾಧ್ಯವಾಗುತ್ತದೆ ಎಂದು ಜಂಟಿ ಕೃಷಿ ನಿರ್ದೇಶಕ ಡಾ. ಪುರುಷೋತ್ತಮಪ್ಪ ಅವರು ಹೇಳಿದ ಬಗ್ಗೆ ವರದಿಯಾಗಿದೆ.

**ಬಿಟಿ ಹತ್ತಿ ಕುರಿತ ಮಧ್ಯಸ್ಥ ನಿಲುವುಗಳು:** ವಾಷಿಂಗ್‌ಟನ್ನಿನ ಆಹಾರ ಸಂಶೋಧನಾ ಸಂಸ್ಥೆಯ ನಿರ್ದೇಶಕ ಪರ್‌ಪಿನ್‌ಸ್ಟಪ್ ಅಂಡರ್‌ಸನ್ ಅವರು: ರೈತರಿಗೆ ಈ ಬೆಳೆ ಬೆಳೆಯುವುದು ಅನುಕೂಲವೆನಿಸಿದರೆ ಅದನ್ನು ಬೆಳೆಸಲು ಅಭ್ಯಂತರವಿಲ್ಲ ಎಂದಿದ್ದಾರೆ. ಪುಣೆಯ ಗ್ರಾಮೀಣ ಸಂಸ್ಥೆಯ ಶ್ರೀ ಎ.ಡಿ. ಕರ್ವೆ ಅವರು ಗುಜರಾತಿನಲ್ಲಿ ಈ ತಳಿಯ ಬಳಕೆ ಸ್ವಯಂ ಇಚ್ಚೆಯ ಬಳಕೆಯಾಗಿರುವಲ್ಲಿ ಇದರ ಬಗೆಗೆ ವಿರೋಧವೇಕೆ? ಎನ್ನುತ್ತಾರೆ. ಗುಜರಾತಿನ ರೈತರಿಗೆ ಇದು ಪ್ರಯೋಜನಕಾರಿ ಎನಿಸಿರುವಾಗ ಬೇರೇನು ಹೇಳಿದರೂ., ಅಪಾಯವೆಂದರೂ ಬಳಕೆ ಬಿಡಲು ತಯಾರಿಲ್ಲ. ಹೀಗಿರುವಾಗ ಸಂಘರ್ಷದ ಹಾದಿಯ ಬದಲು ಮುಂದಿನ ಅನುಭವ ಅವರಿಗೆ ಹಾದಿ ತೋರಲು ಅನುವಾಗುವಂತೆ ನೋಡಿಕೊಳ್ಳುವುದು ಉತ್ತಮ ಎನ್ನುವವರುಂಟು. ಆದರೆ ಅಕಸ್ಮಾತ್ ಹಾನಿಯಾಗಿ ರೈತರು ಸಂಕಷ್ಟಕ್ಕೆ ಸಿಲುಕಿದರೆ ಪರಿಹಾರಕ್ಕೆ ಸರ್ಕಾರವೇ ಮುಂದಾಗಬೇಕಾಗಿ ಬರುತ್ತದೆ. ವಾಷಿಂಗ್‌ಟನ್‌ನ ವಿಜ್ಞಾನಿ ಜೇನ್ ರಿಸ್ಲರ್ ಅವರು, ಈ ಜೈವಿಕ ತಳಿಯ ಪ್ರತಿರೋಧ ಶಕ್ತಿ ರಾಸಾಯನಿಕ ಕೀಟನಾಶಕಗಳಿಗಿಂತ ಹೆಚ್ಚೇನೂ ಇಲ್ಲ. ಅದೊಂದು ತಾತ್ಕಾಲಿಕ ಫಲವಾಗಿದೆ ಎಂದಿದ್ದಾರೆ. ತಮಿಳುನಾಡಿನ ಸ್ವಾಮಿನಾಥನ್ ಸಂಶೋಧನ ಸಂಸ್ಥೆಯ ಶ್ರೀ ಎಂ.ಎಸ್. ಸ್ವಾಮಿನಾಥನ್ ಅವರು, ಸಣ್ಣ ಹಿಡುವಳಿದಾರರ ದೇಶವಾದ ಭಾರತದಲ್ಲಿ ಕೇವಲ ಶ್ರೀಮಂತ ರೈತರಿಗೆ ಮಾತ್ರ

ಇಂಥ ಬೆಳೆ ಬೆಳೆಯಲು ಸಾಧ್ಯ ಎಂಬ ಅಭಿಪ್ರಾಯಪಟ್ಟಿದ್ದಾರೆ. ದ್ವಯ ಬಿಟಿ ವಂಶವಾಹಿಕಣಗಳನ್ನು ಹೊಂದಿರುವಂಥ ಪ್ರಾಯೋಗಿಕ ಮಾದರಿಯ 2ನೇ ತಲೆಮಾರಿನ ಬಿಟಿ ಹತ್ತಿಯನ್ನು 2003 ರ ವೇಳೆಗೆ ವಾಣಿಜ್ಯ ಸರಬರಾಜಿಗೆ ದಕ್ಕಿಸುವ ಪ್ರಯತ್ನವನ್ನು ಪರಿಶೀಲಿಸಲಾಗುತ್ತಿದೆ, ಎಂದಿದ್ದಾರೆ ಆದಂಸಿಜ್ಯಕ್.*[7] ಇದೊಂದು ರೀತಿ ಕೀಟಬಾಧೆಗೆ ನಿರೋಧ ಧಾರಣಶಕ್ತಿಯ ಹತ್ತಿತಳಿಯನ್ನು ಉತ್ಪಾದಿಸುವ ಪ್ರಯತ್ನದಂತಿದೆ. ಆದರೆ ಅದಕ್ಕೆ ಬೇರೆ ಆಯಾಮವೂ ಇದೆ.

**ಬಿಟಿ ಹತ್ತಿ ಕುರಿತ ವಿರೋಧಿ ನಿಲುವುಗಳು:** ಜೈವಿಕ ಮಾರ್ಪಾಟು ಬೆಳೆ ಬಿಟಿ ಹತ್ತಿಯ ಟಾಕ್ಸಿನ್ (Toxin)ಗಳು ಗಿಡದ ಭಾಗಗಳಲ್ಲಿ ಅಸಮವಾಗಿ ಹರಡಿಕೊಳ್ಳುತ್ತವೆ. ಶೇ. 90–95ರಷ್ಟು ಈ ಪ್ರೋಟೀನ್ ವಿಶೇಷವು ಗಿಡದ ಮೇಲ್ಭಾಗದಲ್ಲಿ ಕಾಣಿಸಿಕೊಂಡರೆ ಕೆಳಭಾಗದಲ್ಲಿ ಶೇಕಡ 20–25ರಷ್ಟು ಕಾಣಿಸಿಕೊಳ್ಳುವುದು, ಕ್ಷೇತ್ರ ಪರೀಕ್ಷಾ ವರದಿಯಿಂದ ತಿಳಿಯುತ್ತದೆ. ಸಾಮಾನ್ಯ ಗಿಡದ ಉತ್ತಮ ಗುಣಮಟ್ಟದ ಹತ್ತಿ ಒದಗುವುದು ಈ ಭಾಗದಿಂದಲೇ ಆಗುವ ಕಾರಣ ಸಮರ್ಥ ನಿರೋಧಕ ಶಕ್ತಿ ಇಲ್ಲದೆ ಗುಣಹಾನಿಯಾಗುವ ಸಂಭವ ಹೆಚ್ಚು; ಭಾರತದಲ್ಲಿಯ ಒಣಹವೆಯ ವಾತಾವರಣ ವಿವಿಧ ಕೃಷಿ ಪರಿಸರದಲ್ಲಿ ಲಕ್ಷಾಂತರ ಬಡರೈತರ ಬಳಕೆಗೆ ಇದು ಅಸೂಕ್ತವಾಗುತ್ತದೆ; ಅಸಮ ಶಕ್ತಿಯ ವಿತರಣಾ ಭಾಗದಿಂದ ಹತ್ತಿಯ ಕೀಟ ರೋಗ ನಿರೋಧಕಾ ಶಕ್ತಿ ಬೇಗ ಕುಂಠಿತಗೊಳ್ಳಬಹುದು; ಅಲರ್ಜಿಕಾರಕವಾಗಿ ತತ್ಸಂಬಂಧೀ ಖಾದ್ಯ ತೈಲದೊಡನೆ ಮಿಶ್ರವಾದರೆ, ಚರ್ಮದ ಮೇಲೆ ಗಂಧೆಗಳು, ಉಸಿರಾಟದ ತೊಂದರೆಗಳು, ಜಠರ ಸಂಬಂಧೀ ವ್ಯತ್ಯಾಸಗಳಿಗೆ ಈ ಸಸ್ಯ ಮೂಲವು ಕಾರಣವಾಗುವ ಸಂದರ್ಭಗಳಿವೆ. ಜಪಾನ್ ಕೃಷಿ ಸಚಿವಾಲಯವು, ಬಿಟಿ ಜೈವಿಕ ತಂತ್ರಜ್ಞಾನ ನಿರೂಪಿತ ಅಮೇರಿಕೆಯ ಸ್ಟಾರ್ ಲಿಂಕ್ ಹತ್ತಿ ಬೀಜದ ಆಮದಿಗೆ ಈ ಕಾರಣಗಳಿಂದಾಗಿಯೆ ಅವಕಾಶ ನೀಡಿಲ್ಲ. *[8] ಕಾಯಿಕೊರಕ ಕೀಟವು ಜೈವಿಕ ರೂಪಾಂತರಿತ ಹತ್ತಿಯಲ್ಲಿನ ಬಿಟಿ ಟಾಕ್ಸಿನ್‌ನ ನಂಜು ವಿಶೇಷಕ್ಕೆ ಪ್ರತಿರೋಧಕ ಗುಣವನ್ನು ಬೆಳೆಸಿಕೊಳ್ಳಬಲ್ಲುದು. ಸುಮಾರು 26 ಬಗೆಯ ಕೀಟಗಳು ಬಿಟಿ ಪ್ರೋಟೀನ್ (ನಂಜು)ಗೆ ಸಾಕಷ್ಟು ಧಾರಣ ಸಾಮರ್ಥ್ಯವನ್ನು ಬೆಳೆಸಿಕೊಂಡಿರುವ ಬಗ್ಗೆ ಯುರೋಪಿನ ಜೈವಿಕ ತಾಂತ್ರಿಕ ಜ್ಞಾನದ ಕಾರ್ಯವ್ಯೂಹ (NGO) ವೊಂದು ಹೇಳಿಕೊಂಡಿದೆ. ಅಂದರೆ ಬಿಟಿ ಟಾಕ್ಸಿನ್, ಕೀಟಗಳ ಹಾವಳಿಯನ್ನು ತಾತ್ಕಾಲಿಕವಾಗಿ ಹತೋಟಿಯಲ್ಲಿಡಬಹುದಷ್ಟೆ ಎಂದಾಗುತ್ತದೆ. ಕಾಯಿಕೊರಕ ಕೀಟವನ್ನು ಬಿಟ್ಟು

*7. vide: Protecting Farmers' Investment in Bt cotton, opp. cit.,

*8. vide: why Bt cotton should be baned? THE HINDU opp.cit.,

ಉಳಿದ ಕೀಟಗಳ ಮೇಲೆ ಇದರ ಹತೋಟಿ ಇಲ್ಲದ ಕಾರಣ ರೈತರು ಮತ್ತೆ ಬೇರೆ ಕೀಟನಾಶಕ ಔಷಧಿಗಳನ್ನು ಸಿಂಪಡಿಸುವ ಸಂದರ್ಭ ಒದಗುತ್ತದೆ. ಮಾಮೂಲು ಹತ್ತಿ ಗಿಡವು ಪರಾಗಸ್ಪರ್ಶಿ. ಆದರೆ ಈ ಬಿಟಿ ತಳಿಯ ಬಳಕೆಯಿಂದ ಪರಾಗರೇಣುಗಳ ಸಂಪರ್ಕದಲ್ಲಿ ಉಂಟಾಗುವ ಪರಿಣಾಮಗಳ ಬಗ್ಗೆ ಸಂಶೋಧನೆಗಳು ಸಾಕಷ್ಟು ನಡೆದಿಲ್ಲ. ಸ್ಥಳೀಯ ಜೈವಿಕ ವೈವಿಧ್ಯತೆಯ ಮೇಲೆ ಇದು ಹಾನಿಕಾರಕ ಪರಿಣಾಮವನ್ನು ಉಂಟುಮಾಡಬಹುದು. ಬಿಟಿ ಹತ್ತಿಯ ಬೆಳೆ ಆಕಸ್ಮಿಕವಾಗಿ ನಷ್ಟವಾದರೆ, ಸಾಂಪ್ರದಾಯಿಕ ಹತ್ತಿ ಬೆಳೆಯ ಇಳುವರಿಗಿಂತಲೂ ಹೆಚ್ಚು ನಷ್ಟ ಉಂಟಾಗಿ ರೈತರಿಗೆ ಅದು ಮತ್ತಷ್ಟು ಹಾನಿ ತರಬಹುದು. *[9] ಈ ತಳಿಯ ವಿಪರೀತ ಬಳಕೆಯಿಂದಾಗಿ ಬಹು ರಾಷ್ಟ್ರೀಯ ಬೀಜ ಕಂಪೆನಿಗಳು ಹಾಗು ಕೃಷಿ ಸಂಶೋಧನ ಸಂಸ್ಥೆಗಳ ನಡುವೆ ಲಾಬಿ ಏರ್ಪಡಬಹುದು. ಇದು ಕೃಷಿಯ ಮೇಲೆ ಕೈಗಾರಿಕೋದ್ಯಮವು ಸವಾರಿ ಮಾಡಲು ಅನುಕೂಲವಾಗಬಹುದು.

ಬಿಟಿ ಪ್ರೋಟೀನ್ ವಿಷಕಾರಿಯಲ್ಲ. ಹತ್ತಿ ಆಹಾರಧಾನ್ಯವಲ್ಲ. ಮನುಷ್ಯರ ಆರೋಗ್ಯಕ್ಕೆ ಹೀಗಾಗಿ ಧಕ್ಕೆ ಇಲ್ಲ. ಜೈವಿಕತಂತ್ರದ ಪೀಡೆನಾಶಕ ಬಿ.ಟಿ. ನಂಜು ಗಿಡದಲ್ಲಿಯೇ ಉತ್ಪನ್ನವಾಗಿ ಉತ್ಪಾದಿಸಲ್ಪಟ್ಟರೆ ತಪ್ಪೇನಿದೆ? ಎಂದೆಲ್ಲ ವಾದಗಳಿಗೆ ಎದುರಾಗಿ ಅವಶ್ಯಕತೆ ಇಲ್ಲದಿದ್ದಾಗಲೂ ವಿಷಸ್ರಾವವಾಗುತ್ತದೆ. ಇದಕ್ಕೆ ಕೀಟಗಳು ಬೆಳೆಸಿಕೊಳ್ಳುವ ಪ್ರತಿರೋಧ ಶಕ್ತಿ, ಪೀಡೆಗಳನ್ನು ನಿಯಂತ್ರಿಸಿ ಪರಾಗಸ್ಪರ್ಶಕ್ಕೆ ನೆರವಾಗುವ ಕೀಟಗಳ ನಾಶ ಈ ಬಿಟಿ ಫಸಲಿನದಾಗಿದೆ. ಅದು ಉಪಯೋಗಕಾರಿ ಕೀಟಗಳನ್ನು, ಮಣ್ಣಿನ ಪ್ರಯೋಜನಕಾರಿ ಸೂಕ್ಷ್ಮಾಣು ಜೀವಿಗಳನ್ನು ಕೊಲ್ಲುತ್ತದೆ. ಬೇರುಗಳು ಮಣ್ಣಿನಲ್ಲಿ ಬಹಳ ಕಾಲ ಏಳದಿರುತ್ತವೆ; ಖಾದ್ಯತೈಲವಾಗಿ, ಹಸುವಿಗೆ ಹಿಂಡಿಯಾಗಿ ನಮ್ಮಲ್ಲಿ ಬಳಸುತ್ತಿರುವುದರಿಂದ, ತೈಲ ಮತ್ತು ಹಾಲನ್ನು ಇದು ವಿಷಪೂರಿತವಾಗಿಸುತ್ತದೆ. ಬ್ಯಾಕ್ಟೀರಿಯಾವನ್ನು ಕೊಲ್ಲಲು ನಮ್ಮ ದೇಹದಲ್ಲಿ ಪೆನ್ಸಿಲಿನ್ ವಂಶವಾಹಿ ಕಣಗಳನ್ನು ದೇಹದಲ್ಲಿ ನಾವೇನು ಸೇರಿಸುವುದಿಲ್ಲ? ಹಾಗೆಯೇ ಇದು ಎಂಬ ವಾದಗಳಿವೆ. ಆದರೆ ನಿಖರ ಪ್ರಯೋಗಗಳ ಕೊರತೆಗಳಲ್ಲಿ ಪರ ಮತ್ತು ವಿರೋಧಿ ವಾದಗಳಲ್ಲಿ ತುಸುಗೊಂದಲವೂ ಕಾಣುತ್ತದೆ. ವಿಶ್ವದ ಇತರೆಡೆ ಗಮನಿಸುವಾಗ, ಇಂಡೋನೇಷಿಯಾದಲ್ಲಿ ಮಾನ್ಸಾಂಟೋ ಬೀಜ ಕಂಪೆನಿ ಹೇಳಿದಂಥ ಮಟ್ಟಕ್ಕಿಂತ ಇಳುವರಿ ಕಡಿಮೆಯಾದದ್ದು; ಹತ್ತಿ ಪೀಡೆ ಹಾಗೂ ರೋಗ ನಿರೋಧಕ ಎಂದಿದ್ದ ಹೇಳಿಕೆ ಸುಳ್ಳಾದದ್ದು; ಫಸಲಿನ ನಡುವೆ ಕೆಲಸ ಮಾಡಿದವರಲ್ಲಿ ಅಂಗಾಂಗಗಳ

*9. Indira Khurana., Cotton Conundrum; *Down to Earth,* New Delhi December 15, 2001 pp.20-21

ತುರಿಕೆ ಆರಂಭವಾದದ್ದು ಈ ಕಾರಣಗಳಿಂದ ಅಲ್ಲಿನ ರೈತರು ಬಿ.ಟಿ. ಹತ್ತಿಗೆ ಬೆಂಕಿ ಇಟ್ಟರು. ಮೆಕ್ಸಿಕೋದಲ್ಲಿ ಅಮೇರಿಕದಿಂದ ಆಮದಾದ ಕುಲಾಂತರಿ ತಳಿಗಳು, ಅಲ್ಲಿನ ಭೂಮಿ ಮೂಲ ತಳಿಗಳನ್ನು ಅಪಾಯಕ್ಕೀಡುಮಾಡಿದೆ. ಕೆನಡಾದಲ್ಲಿ ಜೈವಿಕ ಮಾರ್ಪಾಟಾದ ಫಸಲು (ಬಿ.ಟಿ) ರಕ್ಷಣೆ ದಾಟಿ ರಾಕ್ಷಸ ಕಳೆಗಳು ಬೆಳೆದಂತ ಅಪಾಯವನ್ನು ಸಂಶೋಧಿಸಲಾಗಿದೆ. ನ್ಯೂಸಿಲೆಂಡ್‌ನಲ್ಲಿ ಈ ಫಸಲನ್ನು ಅಲ್ಲಿನ ಪರಿಸರಕ್ಕೆ ಬರದಂತೆ ಎರಡು ವರ್ಷಗಳ ನಿಷೇಧವೊಡ್ಡಿದೆ. ಆಸ್ಟ್ರೇಲಿಯ ವಿಮಾಕಂಪೆನಿಗಳು ಈ ಬಗೆ ಜೈವಿಕ ತಂತ್ರಜ್ಞಾನದ ಕೈಗಾರಿಕೆಗಳನ್ನು ತನ್ನ ವ್ಯಾಪ್ತಿಗೆ ತಂದುಕೊಳ್ಳಲು ಹಿಂಜರಿಯುತ್ತಿವೆ. ಚೈನಾ ಕೂಡ ಜೈವಿಕ ಮಾರ್ಪಾಟು ಫಸಲನ್ನು ತರಲು ನಿಯಂತ್ರಣ ಹೇರಿದೆ. ಅಮೇರಿಕದ ಶೇ. 70 ರಷ್ಟು ಸೋಯಬೀನ್ ಬೆಳೆ ಇಂಥ ಬಗೆಯ ಫಸಲಾಗಿದೆ. ಅದಕ್ಕೆ ಚೀನಾ ಪ್ರಮುಖ ಮಾರುಕಟ್ಟೆಯಾಗಿತ್ತು. ಈಗಿನ ನಿಯಂತ್ರಣದಿಂದಾಗಿ ಅಮೇರಿಕದ ರಫ್ತುದಾರರಿಗೆ ಈಗ ಚಿಂತೆಯಾಗಿದೆ. ಇದಲ್ಲದೆ, ಈ ಜೈವಿಕ ರೂಪಾಂತರಿತ ಫಸಲಿನ ಕಾರಣವೆ 1995–96 ರಲ್ಲಿ 8 ಮಿಲಿಯನ್‌ಟನ್‌ವರೆಗೆ ಧಾನ್ಯಗಳ ರಫ್ತು ಇದ್ದದ್ದು 2000–2001ರಲ್ಲಿ 6300 ಮೆಟ್ರಿಕ್ ಟನ್‌ಗೆ ಇಳಿದಿರುವುದು ಜೈವಿಕ ಮಾರ್ಪಾಟು ಫಸಲು ಮಾರುಕಟ್ಟೆಗೆ ಮಾರಕವೆನಿಸಿದೆ. ಕ್ರೋಷಿಯಾ ಕೂಡ ನೈಸರ್ಗಿಕ ಬೇಸಾಯದ ಹಿರಿಮೆಗೆ ಒತ್ತುಕೊಟ್ಟು ಜೈವಿಕ ರೂಪಾಂತರಿತ ಫಸಲುಗಳಿಗೆ ನಿಷೇಧ ಹೇರಲು ಕಾನೂನು ರೂಪಿಸುತ್ತದೆ.

ಜೈವಿಕ ಬಿಟಿ ತಂತ್ರಜ್ಞಾನಾಧಾರಿತ ಹತ್ತಿ ತಳಿಯು ಪೂರ್ಣ ಪ್ರಮಾಣದ ಪ್ರಯೋಗ ಹಂತವನ್ನು ಅದು ಪೂರೈಸಿಲ್ಲ. ಅದರಿಂದ ಒದಗುವ ಬೀಜವನ್ನು ರೈತ ಮತ್ತೆ ಬಳಸುವಂತಿಲ್ಲ ಎಂದೆಲ್ಲ ಮೇಲಿನ ಉದಾಹರಣೆಗಳಿಂದ ವ್ಯಕ್ತವಾಗಿದೆ. ಆದರೆ ಭಾರತದಲ್ಲಿ ಅದರ ಪ್ರಯೋಗ ಸಾಕಷ್ಟು ನಡೆದಿದ್ದು ಅದರ ಬಗೆಗಿನ ಸಂಶಯಗಳು ಹೋಗುತ್ತಿವೆ ಎನ್ನಲಾದ ಸಮಯದಲ್ಲಿ ಈಗಾಗಲೇ ಹೇಳಿದಂತೆ ಗುಜರಾತಿನ ಬಿ.ಟಿ. ಹತ್ತಿ ಎಳೆಗಳನ್ನು ಸುಟ್ಟು ಹಾಕಲು (ಸುಮಾರು 6000 ಎಕರೆ) ಕೇಂದ್ರ ಸರ್ಕಾರವು ನಿರ್ಧರಿಸಿತು. ಇದಕ್ಕೆ ಗುಜರಾತಿನದು ಅಕ್ರಮ ಹತ್ತಿ ಬೆಳೆ ಎನಿಸಿ ಕೇಂದ್ರದ ಈ ತೀರ್ಮಾನ ಬಂದಿತೆನ್ನಲಾಗಿದೆ. ಜೊತೆಗೆ ಕೇಂದ್ರದ ಜೈವಿಕ ತಂತ್ರಜ್ಞಾನ ಇಲಾಖೆಯು ಇದನ್ನು ಒಪ್ಪಿಲ್ಲದೇ ಇರುವುದು ಒಂದು ಕಾರಣವಾಗಿದೆ. ಇದಕ್ಕೆಲ್ಲಾ ಹಿನ್ನೆಲೆಯನ್ನು ಗಮನಿಸಬೇಕು.

ಭಾರತದಲ್ಲಿ 1995 ರಲ್ಲಿ ಈಗಾಗಲೇ ಹೇಳಿರುವಂತೆ ಮಾನ್‌ಸೆನ್‌ಟೊ ಎಂಬ ಬಹುರಾಷ್ಟ್ರೀಯ ಕಂಪೆನಿ, ಮಹಾರಾಷ್ಟ್ರದ ಮಾಯ್ಕೋ ಕಂಪೆನಿಯ

ಸಹಯೋಗದಲ್ಲಿ ಬಿ.ಟಿ. ಹತ್ತಿಯ ಗೋಲ್ಲಾರ್ಡ್ ಎಂಬ ವಿಶೇಷ ತಳಿಯನ್ನು ತಯಾರಿಸಿ ಬಿಡುಗಡೆ ಮಾಡಿತು. ಈ ತಳಿಯನ್ನು 9 ರಾಜ್ಯಗಳಲ್ಲಿ ಬೆಳೆಯುವ ಪ್ರಯೋಗವನ್ನು ಮಾಡಿತು. ಕರ್ನಾಟಕದಲ್ಲಿ 12 ಜಿಲ್ಲೆಗಳಲ್ಲಿ ಈ ತಳಿಯ ಬೀಜ ಬೆಳೆಯಲು ಪರವಾನಗಿಯನ್ನು ಹೊಂದಿದೆ. ಬಿ.ಟಿ. ಹತ್ತಿಯಿಂದ ಇಳುವರಿ ಹೆಚ್ಚುತ್ತದೆ ಎಂಬುದಕ್ಕಿಂತ ಕೀಟ ಪೀಡೆಯು ತಪ್ಪುವುದರಿಂದ ಸಹಜವಾಗಿ ಇಳುವರಿ ಹೆಚ್ಚಿ ಶೇಕಡ 60 ರಷ್ಟು ಬೆಳೆ ಕಾಯಿಕೊರಕ ಹುಳುಗಳಿಗೆ ತುತ್ತಾಗುವುದು ತಪ್ಪುತ್ತದೆ ಎನ್ನಲಾಗಿದೆ. ನಿಯಮಗಳ ಪ್ರಕಾರ ಬಿ.ಟಿ. ಹತ್ತಿಯ ತಳಿ ಮಹರಾಷ್ಟ್ರದ ಹೈಬ್ರಿಡ್ ಕಂಪನಿ ಮಾಯ್ಕೋ ಹಾಗೂ ಮಾನ್‌ಸಾನ್‌ಟೊ ಸ್ವಾಮ್ಯಕ್ಕೆ ಸೇರಿದ್ದಾಗಿದೆ. ಗುಜರಾತಿನಲ್ಲಿ ಪೂರೈಕೆಯಾದ ನವಭಾರತ್ ಸೀಡ್ಸ್ ಎಂಬ ಕಂಪನಿಯ ಬೀಜ ಒಂದು ರೀತಿ ಮಾಯ್ಕೋ ಕಂಪೆನಿ ತಳಿಗಿಂತ ತುಸು ಭಿನ್ನವಾದ ಬೀಜವಾಗಿದೆ. ತನ್ನ ತಳಿಯನ್ನು ನವಭಾರತ್ ಸೀಡ್ಸ್ ಕಂಪನಿಯು ಅಪಹರಿಸಿ ಮಾರಿದೆ ಎಂದು ಮಾನ್ಸಂಟೋ ಕಂಪೆನಿಯು ಆಕ್ರೋಶಗೊಂಡು ಕೋರ್ಟಿನ ಮೆಟ್ಟಿಲು ಹತ್ತುವ ಪ್ರಯತ್ನ ಮಾಡುವೆನೆಂದಿದೆ. ಬೇರೆಡೆ ಹತ್ತಿಯ ಇಳುವರಿ ಕಡಿಮೆಯಾಗುತ್ತಿದ್ದಾಗ ಗುಜರಾತಿನ ಹೊಲಗಳಲ್ಲಿ ವಿಪುಲವಾಗಿ ಬೆಳೆದು ನಿಂತ ಹತ್ತಿಗೆ ಬೆಂಕಿ ಹಾಕಿಸಿದ್ದು ರೈತರಿಗೆ ಅಸಮಾಧಾನವಾಗಿದೆ. ಆದರೆ ಕರ್ನಾಟಕದಲ್ಲಿ ಕೆಲವೆಡೆ ಬೆಳೆದಿದ್ದ ಬಿ.ಟಿ. ಹತ್ತಿಗೆ ರೈತ ನಾಯಕರು ಬೆಂಕಿ ಹಾಕಿದ್ದೂ ಇದೆ.

**ದೇಶೀಕರಣ ನಿಲುವುಗಳು:** ಈ ಹಿನ್ನೆಲೆಗಳಲ್ಲಿ ನಾವು ಗಮನಿಸುವಾಗ ಜೈವಿಕ ಮಾರ್ಪಾಡು ಫಸಲು ವಿರೋಧಿ ಒಕ್ಕೂಟ ಮತ್ತು ರೈತ ಸಂಘದ ನಾಯಕ ಶ್ರೀ ಎಂ.ಡಿ. ನಂಜುಂಡಸ್ವಾಮಿಯವರು ಈ ಬೀಜದ ಬಳಕೆಯ ಬಗ್ಗೆ ತೀವ್ರ ವಿರೋಧ ವ್ಯಕ್ತಪಡಿಸಿ ಪ್ರತಿಭಟಿಸಿರುವ ಕಾರಣವಾದರೂ ಏನು? ಅವರ ರೀತ್ಯ ಭಾರತದಂತಹ ದೇಶಗಳಿಗೆ ಬಿ.ಟಿ. ಹತ್ತಿ ಸೂಕ್ತ ಬೆಳೆ ಅಲ್ಲ. ಈ ಬಗೆಯ ಜೈವಿಕ ರೂಪಾಂತರ ಮಾಡಿದ ಬೆಳೆ ತಂತ್ರಜ್ಞಾನ ಭಾರತದಂತಹ ಮೂರನೇ ಜಗತ್ತಿನ ಕೃಷಿಯನ್ನು ಬಹುರಾಷ್ಟ್ರೀಯ ಕಂಪನಿಗಳು ತಮ್ಮ ತೆಕ್ಕೆಗೆ ತೆಗೆದುಕೊಳ್ಳುತ್ತಿರುವ ಸಂಚಾಗಿದೆ. ಕೃಷಿ ವೈವಿಧ್ಯತೆ ಇರುವ ಈ ದೇಶದಲ್ಲಿ ಈ ಬೆಳೆ ಬೆಳೆಯಲು ಮಾಡಿರುವ ಸಲಹೆಗಳು ಅಪಾಯಕಾರಿ ಪರಿಣಾಮಗಳನ್ನು ಉಂಟುಮಾಡುತ್ತಿವೆ. ಹತ್ತಿ ಬೆಳೆಗಾರರ ಸರಣಿ ಆತ್ಮಹತ್ಯೆ ಪ್ರಕರಣಗಳ ನಂತರ ಸಮಗ್ರ ಪೀಡೆ ನಿಯಂತ್ರಣ ವಿಧಾನ, ರಾಸಾಯನಿಕ ರಹಿತ ಪೀಡೆ ನಿಯಂತ್ರಣ ಪದ್ಧತಿಗಳು ರೈತರ ನಡುವೆ ಜನಪ್ರಿಯವಾಗುತ್ತಿವೆ. ಸರಳ ಸುಲಭ ನಿಯಂತ್ರಣ ಪದ್ಧತಿಗಳು ರೈತರ ನಡುವೆ

ಜನಪ್ರಿಯವಾಗುತ್ತಿವೆ. ಸರಳ ಸುಲಭ ವೆಚ್ಚದ ಸಾವಯವ ವಿಧಾನಗಳು ಮೂಲಕ ಹತ್ತಿ ಬೆಳೆದು ಇಳುವರಿ ಹೆಚ್ಚಿಸಿಕೊಳ್ಳುತ್ತಿದ್ದಾರೆ. ಇಂಥ ಸ್ವಾವಲಂಬನ ವಿಧಾನವನ್ನು ಮಾಯ್ಕೋ ಹಾಗು ಮಾನ್ಸಾಂಟೋ ಕಂಪನಿಗಳು ನಾಶ ಮಾಡಲು ಯತ್ನಿಸುತ್ತಿವೆ. ಯುರೋಪಿಯನ್ ಒಕ್ಕೂಟವು ಈಗಾಗಲೇ ತಿರಸ್ಕರಿಸಿರುವ ಬಿ.ಟಿ. ತಳಿಯಂತಹ ಜೈವಿಕ ರೂಪಾಂತರ ತಂತ್ರದ ಉತ್ಪನ್ನಗಳನ್ನು ನಮ್ಮಲ್ಲಿ ಪರಿಚಯಿಸುವ ಜೈವಿಕ ತಂತ್ರಜ್ಞಾನ ಅನುಮೋದನಾ ಸಮಿತಿಯು ಹತ್ತಿ ಬೆಳೆಗಾರರ ಉಳಿವು ಮಾನವ ಆರೋಗ್ಯ ಮತ್ತು ಪರಿಸರದ ಮೇಲೆ ಉಂಟಾಗುವ ಪರಿಣಾಮವನ್ನು ನಿರ್ಲಕ್ಷಿಸಿದೆ ಎಂದಾಗಿದೆ. ಇಂಥ ಉದ್ದೇಶಗಳನ್ನು ರೈತ ವಿರೋಧಿ ದರೋಡೆಕೋರತನವನ್ನು ತಿಳಿಸಲು ಬಿಟಿ ಹತ್ತಿಯುನ್ನು ತಿರಸ್ಕರಿಸಿ ರಾಜ್ಯದಾದ್ಯಂತ ಚಳುವಳಿ ಹಮ್ಮಿಕೊಳ್ಳಲಾಗುವುದೆಂದು ಒಕ್ಕೂಟದ ಸಂಚಾಲಕ ಪ್ರೋ. ವಿಶ್ವನಾಥ ಪತ್ರಿಕಾಗೋಷ್ಠಿಯಲ್ಲಿ ಹೇಳಿದ್ದು ವರದಿಯಾಗಿದೆ.

ಪ್ರೊ. ಎಂ.ಡಿ. ನಂಜುಂಡಸ್ವಾಮಿಯವರು ಬಿ.ಟಿ. ಹತ್ತಿ ಕೃಷಿಯಿಂದ ರಾಜ್ಯದ ಜಾನುವಾರುಗಳು ಭೀಕರ ರೋಗಕ್ಕೆ ಈಡಾಗುವ ಆತಂಕವಿದೆ; ಬಿ.ಟಿ. ಹತ್ತಿಗಿಡದ ಎಲ್ಲ ಭಾಗವು ವಿಷಯುಕ್ತವಾಗಿದ್ದು ಅದನ್ನು ಬಳಸಿದರೆ ಅರಗಿಸಿಕೊಳ್ಳುವ ಶಕ್ತಿ ನಮಗಾಗಲಿ, ಜಾನುವಾರುಗಳಿಗಾಗಲಿ ಇಲ್ಲ. ಅಲ್ಲದೆ ಬಿ.ಟಿ. ಜೀವಾಣುಗಳು ನಮ್ಮ ರಕ್ತನಾಳವನ್ನು ಪ್ರವೇಶಿಸಿ ರೋಗ ನಿರೋಧಕ ಶಕ್ತಿ ಕುಂದುವಂತೆ ಮಾಡುತ್ತವೆ. ಈ ಹತ್ತಿಯ ವಿಷ, ರೈತರ ಮಿತ್ರರೆನಿಸಿರುವ ಬೇರೆ ಕೀಟಗಳು ಪ್ರಾಣಿ, ಪಕ್ಷಿ, ಸಂಕುಲ ಭೂಮಿಯ ಫಲವತ್ತತೆ ಹೆಚ್ಚಿಸುವ ಸೂಕ್ಷ್ಮಾಣುಗಳನ್ನು ನಾಶಪಡಿಸುತ್ತದೆ. ಇದರಿಂದ ಭೂಮಿ ಬೇಗ ಬರಡಾಗಿ ರೈತನ ಸಾಗುವಳಿ ಖರ್ಚು ಹೆಚ್ಚಾಗುತ್ತದೆ. ಅಮೇರಿಕೆಯಲ್ಲಿ ಕಾಯಿಕೊರಕ ಹುಳು ಅಪಾಯಕಾರಿಯಾಗಿ ಪರಿಣಮಿಸಿದೆ, ಎಂದೆಲ್ಲ ಹೇಳಿದ್ದಾರೆ. ಜೈವಿಕ ತಂತ್ರಜ್ಞಾನದ ಮೂಲಕ ವಂಶವಾಹಿವರ್ಗಾವಣೆ - horizontal transference- ತಿರ್ಯನ್ಮುಖವಾದರೆ ನೈಸರ್ಗಿಕ ಎನಿಸದು. ದೈತ್ಯ ಆಹಾರೋತ್ಪಾದನೆಗೆಂದು ದೈತ್ಯ ವಿಜ್ಞಾನ ಚಾಲನೆ ಸೂಕ್ತವಲ್ಲ. ಜಗತ್ತಿನ 8 ನೂರು ಮಿಲಿಯನ್ ಜನಸಂಖ್ಯೆಗೆ ಜೈವಿಕ ತಂತ್ರಜ್ಞಾನದಿಂದ ಆಹಾರ ಉತ್ಪಾದಿಸಿ ಕೊಡುವುದೇ 2ನೇ ಹಸಿರು ಕ್ರಾಂತಿ ಎಂದು ವಿಶ್ವವ್ಯಾಪಾರ ಸಂಘಟನೆಯ ವಾದವಾಗಿದೆ. 1ನೇ ಹಸಿರು ಕ್ರಾಂತಿಯಲ್ಲಿ ದೇಶೀಯ ತಳಿಗಳ ನಾಶವಾಗಿ ಮಾನೋ ಕಲ್ಚರ್ ವಿಧಾನ ಬಂತು. ಏಕರೀತಿ ಬೆಳೆ ವಿಧಾನದಿಂದ ವಿಶ್ವದ ಹಸಿವಿನ ಸಮಸ್ಯೆ ಮತ್ತಷ್ಟು ಹೆಚ್ಚಾಯಿತಷ್ಟೆ. ಈ 2ನೇ ಕ್ರಾಂತಿ ಕುಲಾಂತರಿ ಬೀಜಗಳ ಬಳಕೆ ಎನ್ನುವುದಾದರೆ

ಪರಾಗಮಾಲಿನ್ಯ ಒದಗುತ್ತದೆ. ಸ್ಥಳೀಯ ತಳಿಗಳ ವಿನಾಶಕ್ಕೆ ದಾರಿಯಾಗುತ್ತದೆ. ವಿಷಸಸ್ಯಗಳು ಬೆಳೆದು ಅವುಗಳ ಬೇರು, ಎಲೆಗಳು ಮಣ್ಣಿನಲ್ಲಿ ಕೂಡಿ ಅಲ್ಲಿನ ಉಪಯೋಗಕಾರಿ ಸೂಕ್ಷ್ಮಾಣು ಬ್ಯಾಕ್ಟೀರಿಯಾಗಳು ನಾಶವಾಗುತ್ತವೆ. ಮಣ್ಣಿನ ಮಾಲಿನ್ಯ ಉಂಟಾಗುತ್ತದೆ. ನಮ್ಮ ಜೈವಿಕ ವ್ಯವಸ್ಥೆ ನಾಶ ಆಗ್ತದೆ. ಇಂಥ ವಿಷವಾಹಿ, ವಂಶವಾಹಿ ಸಸ್ಯಗಳ ಉತ್ಪನ್ನಗಳು ಮನುಷ್ಯರಲ್ಲಿ ಜೀರ್ಣಗೊಳ್ಳವುದೆ? ಜೀರ್ಣವಾಗದಿದ್ದರೆ ರಕ್ತಸಂಚಾರದಲ್ಲಿ ಸೇರಿ ನಮ್ಮ ಬಿಳಿರಕ್ತಕಣಗಳನ್ನು ನಾಶಮಾಡಿ ನಮ್ಮ ರೋಗ ನಿರೋಧಕ ಶಕ್ತಿಯನ್ನು ಹಾಳುಮಾಡುತ್ತವೆ. ಅಮೇರಿಕೆಯಲ್ಲಿ preg-nancy prevention Technology ಎಂದು contraceptive corn ಸಿದ್ಧವಾಗಿದೆ. ಇದನ್ನು ಮುಸುಕಿನ ಜೋಳದ ಮೇಲೆ ಪ್ರಯೋಗಿಸಿ, ಈ ಧಾನ್ಯ ತಿಂದರೆ ಸಂತಾನ ನಿಯಂತ್ರಣವಾಗುತ್ತದೆ ಎಂದು ಅಧಿಕೃತ ಪ್ರಕಟಣೆಯೂ ಅಲ್ಲಿದೆ. ಈ ಜೋಳ ನಿತ್ಯಾಹಾರವಾದಾಗ ಮಾನವ ವೀರ್ಯಾಣು, ಅಂಡಾಣುಗಳು ಚಲನೆರಹಿತವಾಗುತ್ತವೆ. ಬಂಜೆತನಕ್ಕೆ ಕಾರಣವಾಗುತ್ತದೆ, ಎಂದು ಮಾನ್ಸೆಂಟೋ ಕಂಪೆನಿಗಳಂಥವು ವಾಣಿಜ್ಯ ಉದ್ದೇಶಗಳಿಗೆ ಜೈವಿಕ ತಂತ್ರಜ್ಞಾನ ಬಳಸುತ್ತಿರುವುದನ್ನು ವಿರೋಧಿಸುವ ಸಂದರ್ಭಕ್ಕಾಗಿ ರಾಜ್ಯ ರೈತಸಂಘದ ಸಹಯೋಗದೊಡನೆ ಕರ್ನಾಟಕ ಟ್ರೇಡ್ ಯೂನಿಯನ್ ನಡೆಸಿದ ಬೆಂಗಳೂರಿನ ವಿಚಾರಸಂಕಿರಣದಲ್ಲಿ ತಮ್ಮ ಅಭಿಪ್ರಾಯಗಳನ್ನು 12.7.2002 ರಂದು ಪ್ರೊ. ಎಂ. ಡಿ. ನಂಜುಂಡಸ್ವಾಮಿಯವರು ಮಂಡಿಸಿದರು. ಇದಲ್ಲದೆ ರೈತರೇ ದೇಶೀಯ ಬೀಜ ಬ್ಯಾಂಕ್‌ಗಳನ್ನು ಪ್ರಾರಂಭಿಸಬೇಕು. ಸ್ಥಳೀಯವಾಗಿ ಲಭ್ಯವಿರುವ ಆಹಾರಧಾನ್ಯ, ಎಣ್ಣೆಬೀಜ, ತರಕಾರಿ ಬಿತ್ತನೆ ಬೀಜ ತಳಿಗಳ ಪಟ್ಟಿ ತಯಾರಿಸಬೇಕು, ಎಂಬ ಸಲಹೆಗಳನ್ನು ಸೂಚಿಸಿದರು. ಇಲ್ಲವಾದರೆ ಬಿ.ಟಿ. ಹತ್ತಿಯಿಂದ ಕುಲಾಂತರಿ ಬೀಜೋತ್ಪನ್ನಗಳನ್ನು ಜಾನುವಾರುಗಳು ಹಿಂಡಿರೂಪದಲ್ಲಿ ತಿಂದರೆ, ಅವುಗಳಿಗಷ್ಟೇ ಅಲ್ಲ ಮನುಷ್ಯರಿಗೂ ಹಾನಿ ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾ ಈ ಬಗೆಗೆಲ್ಲ ನಮ್ಮ ವೈದ್ಯರ, ವಿಜ್ಞಾನಿಗಳ ನಿರ್ಲಿಪ್ತತೆ, ಮೌನ ಸರಿಯಲ್ಲ ಎಂದರು. ಇದೇ ವಿಚಾರ ಸಂಕಿರಣದಲ್ಲಿ ಕುಲಾಂತರಿ ಬೀಜ ತಂತ್ರಜ್ಞಾನಕ್ಕೆ ಅವಸರದಲ್ಲಿ ಅನುಮತಿಸುವ ಬದಲು ರೈತರು, ವಿಜ್ಞಾನಿಗಳು, ಮಾಧ್ಯಮಗಳು, ಗ್ರಾಹಕರು ಸೇರಿ ಚರ್ಚೆ ನಡೆಸಬೇಕು. ರೈತರ ಸಮಕ್ಷಮದಲ್ಲಿ ಪ್ರಾಯೋಗಿಕ ಪರೀಕ್ಷೆ ನಡೆಯಬೇಕು ಎಂದು ಕೃಷಿ ವಿಶ್ವವಿದ್ಯಾಲಯದ ಡಾ. ರವಿ ಅವರು ತಮ್ಮ ಅಭಿಪ್ರಾಯವನ್ನು ಸೂಚಿಸಿದರು. ನಮ್ಮಲ್ಲಿ ಶೇ. 90 ರಷ್ಟು ರೈತಮಿತ್ರ ಕೀಟಗಳು, ಜೈವಿಕ ವೈವಿಧ್ಯತೆ ಇರುವಾಗ ಬಿ.ಟಿ. ಹತ್ತಿ ನಮಗೆ ಅವಶ್ಯವಾಗಿದೆಯೆ?

ಎಂದೂ ಪ್ರಶ್ನಿಸಿದರು. ಅದೇ ವಿಶ್ವವಿದ್ಯಾಲಯದ ಕೃಷಿ ಆರ್ಥಿಕ ತಜ್ಞ **ಡಾ. ಟಿ.ಎನ್. ಪ್ರಕಾಶ್**‌ರವರು ಮಾತನಾಡುತ್ತಾ ನಮ್ಮಲ್ಲಿ ಬಳಕೆಗಿದ್ದ ಹಿಂದಿನ ದೇಶಿಯ ತಂತ್ರಜ್ಞಾನದಲ್ಲಿ ಸಾಮಾಜಿಕ ಹಿಡಿತ ಇತ್ತು. ಇಂದು ಬಹುರಾಷ್ಟ್ರೀಯ ಕಂಪನಿಯಾದ ಮಾನ್ಸೆಂಟೋವಿನ ಜೈವಿಕ ತಂತ್ರಜ್ಞಾನವು ವಿದೇಶೀಯವಾದ್ದರಿಂದ ಅದರ ಮೇಲೆ ಸಾಮಾಜಿಕ ನಿಯಂತ್ರಣ ಸಾಧ್ಯವಾಗದು. ನಮ್ಮಲ್ಲಿ ಶೇ. 30–35 ರಷ್ಟು ಬೀಜ ಹಾಗು ಆಹಾರ ಸರಬರಾಜು ವ್ಯವಸ್ಥೆ ಸರ್ಕಾರಿ ಸ್ವಾಮ್ಯದ ಸಂಸ್ಥೆಗಳಲ್ಲಿದೆ; ಶೇ. 30 ರಷ್ಟು ಸಣ್ಣ ಪುಟ್ಟ ಖಾಸಗಿ ಕಂಪೆನಿಗಳ ಅವಕಾಶದಲ್ಲಿದೆ; ಉಳಿದದ್ದು ನಮ್ಮ ಗ್ರಾಮೀಣ ರೈತರ ನಡುವೆಯೆ ಇನ್‌ಫಾರ್ಮಲ್ ಆಗಿ ಬೀಜ ವಿನಿಮಯ ರೂಪದಲ್ಲಿ ಇದೆ. ಇದೊಂದು ರೀತಿ ನಿಜವಾದ ಸ್ಪರ್ಧಾತ್ಮಕ ಆರೋಗ್ಯಕರ ಒಳಮಾರುಕಟ್ಟೆ ವ್ಯವಹಾರವಾಗಿದೆ. ಹೀಗಿರುವಲ್ಲಿ ಮಾನ್ಸೆಂಟೋ ರೀತಿಯ ಯಾವುದೇ ಬಹುರಾಷ್ಟ್ರೀಯ ಕಂಪನಿಯ ಹಿಡಿತಕ್ಕೆ ಬೀಜ ಸರಬರಾಜು ಮಾರುಕಟ್ಟೆ ಸಿಲುಕಬಾರದು. ಬಿ.ಟಿ. ಹತ್ತಿಯಂಥ ಸರಬರಾಜು ಕುಲಾಂತರಿ ತಳಿಗಳ ಬಿಡುಬೀಸುವಿಗೆ ಅವಕಾಶವಾಗಬಾರದು ಎಂದೆಲ್ಲ ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದರು. ಗದಗ ಜಿಲ್ಲೆಯ ಕೃಷಿಕ ಶ್ರೀ ಡಿ.ಡಿ. ಭರಮಗೌಡ ಅವರು, ಫಾರ್ಮಸುಟಿಕಲ್ ಕ್ರಾಪ್‌ಗಳಿಗೆ ಮಾರುಹೋಗದೆ ಅವಸರಮಾಡದೆ ಮಿಶ್ರಬೆಳೆ ಪದ್ಧತಿ ಪಾಲಿಸಿದರೆ, ಸಾವಯವ ಗೊಬ್ಬರವನ್ನೂ ಬಿಡದೆ ಪಾಲಿಸಿದರೆ, ಕುಲಾಂತರಿ ತಳಿಗಳ ಹಾವಳಿ ಇರದು ಎಂಬ ಅಭಿಪ್ರಾಯಗಳನ್ನು ಸೂಚಿಸಿದರು. ಈ ಸಂದರ್ಭದಲ್ಲಿ ಕುಲಾಂತರಿ ಬೀಜ ವ್ಯಾಪಾರ ಮಾಡುತ್ತಿರುವ ಬಹುರಾಷ್ಟ್ರೀಯ ಕಂಪೆನಿ ವಿರುದ್ಧ ಮುಂದಿನ ತಿಂಗಳು ಪ್ರತಿಭಟನಾ ಕಾರ್ಯಕ್ರಮ ಹಮ್ಮಿಕೊಳ್ಳುವ ಬಗ್ಗೆ ರೈತ ಸಂಘದ ಕಾರ್ಯದರ್ಶಿ ಶ್ರೀ ಬಸವರಾಜಪ್ಪ ಅವರು ನಿರ್ಣಯ ಮಂಡಿಸಿದರು.

ಬಿ.ಟಿ. ಹತ್ತಿ ತಳಿ ಕುರಿತಂತೆ ಜಿಕೆವಿಕೆಯ ಕೃಷಿ ವಿಶ್ವವಿದ್ಯಾಲಯದ ಡಾ.ಟಿ.ಎನ್. **ಪ್ರಕಾಶ್ ಕಮ್ಮರಡಿ** ಅವರು ಕೃಷಿರಂಗ ವಿಭಾಗದ ತಮ್ಮ ಲೇಖನದಲ್ಲಿ.*[10] ಚೀನಾ ದೇಶದ ಪರಿಸರ ಸಂರಕ್ಷಣಾ ಪ್ರಾಧಿಕಾರದ ಮೇಲ್ವಿಚಾರಣೆಯಲ್ಲಿ ನಾಜಿಂಗ್ ಪರಿಸರ ವಿಜ್ಞಾನ ಸಂಸ್ಥೆ 'ಬಿ.ಟಿ. ಹತ್ತಿಯ ಮೇಲೆ ಸಂಶೋಧನೆ ನಡೆಸಿ ಅದು ಹೇಳಿರುವ ಅಂಶಗಳೆಂದರೆ ಸಸಿ ಮಟ್ಟದಲ್ಲಿ ಬಿಟಿ ಹತ್ತಿ ತನ್ನನ್ನು ಬಾಧಿಸುವ ಕಾಯಿಕೊರಕಕ್ಕೆ ಪ್ರತಿರೋಧ ಒಡ್ಡುತ್ತದೆ. ಆದರೆ ಬೆಳೆಯುತ್ತ ಬಂದಂತೆ ಪ್ರತಿರೋಧ ಶಕ್ತಿ ಕಡಿಮೆಗೊಂಡು ರೈತರು 2–3 ಬಾರಿ ಕೀಟನಾಶಕ ಸಿಂಪಡಿಸಬೇಕಾಗುತ್ತದೆ; ಆ ಹತ್ತಿ ಹೊಲಗಳಲ್ಲಿ

*10. ಡಾ. ಟಿ.ಎನ್. ಪ್ರಕಾಶ್ ಕಮ್ಮರಡಿ; 'ಬಿ.ಟಿ. ಹತ್ತಿ–ತಳಿ ಚೀನಾದ ಕಹಿ ಅನುಭವ ನಮಗೆ ಪಾಠ ಕಲಿಸೀತೆ?' ಪ್ರಜಾವಾಣಿ (26.6.2002)

ಪರಿಸರ ಸಮತೋಲನ ತಪ್ಪಿ ಕೀಟಗಳ ವೈವಿಧ್ಯ ಕುಸಿದು ಹೊಸ ಪೀಡೆಗಳ ಅವತರಣಕ್ಕೆ ಅವಕಾಶವಿದೆ; ಹತ್ತಿಗೆ ತೊಂದರೆ ಕೊಡುವ ನುಸಿ, ಹೇನು, ಜೇಡ, ಜಿಗಿಹುಳ, ಬಿಳಿನೊಣಗಳ ಸಂಖ್ಯೆ ಹೆಚ್ಚಿ ಬಿ.ಟಿ. ಹತ್ತಿಗೆ ಬಾಧಕವಾಗುತ್ತಿವೆ. ಕಾಯಿಕೊರಕ ಕೀಟದ ವಂಶದ 40ನೇ ತಲೆಮಾರಿನ ಕೀಟವು ಬಿಟಿ ತಳಿಯ ವಿಷಕ್ಕೆ ಪೂರ್ಣ ನಿರೋಧಕ ಶಕ್ತಿ ಬೆಳಸಿಕೊಳ್ಳುತ್ತದೆ. ಹೀಗಾಗಿ ಬಿಟಿ ಹತ್ತಿ ತಳಿಯ ಜೊತೆಗೆ ಸಾಧಾರಣ ಹತ್ತಿ ತಳಿಗಳನ್ನು ಸ್ವಲ್ಪ ಪ್ರಮಾಣದಲ್ಲಿ ಆಸರೆಯಾಗಿ ಪ್ರತಿರೈತರೂ ಆ ಕಂಪೆನಿ ಒದಗಿಸಿದ ಮಾಮೂಲು ತಳಿ ಬೀಜವನ್ನು ಬೆಳೆಸಬೇಕೆಂಬುದು ಕಾರ್ಯಸಾಧುವಲ್ಲ. ಇದರಿಂದಾಗಿ ಚೀನಾದಲ್ಲಿ ಕೆಲವೇ ನಿರ್ದಿಷ್ಟ ಪ್ರದೇಶದಲ್ಲಿ ಮಾತ್ರ ಕಟ್ಟುನಿಟ್ಟಿನ ನಿಗಾದಲ್ಲಿ ಬೆಳೆಸಲಾಗುತ್ತಿದೆ. ಎಂದೆಲ್ಲಾ ಹೇಳಿದ್ದಾರೆ. ಬಿ.ಟಿ. ಬೀಜದ ಮೊದ ಮೊದಲ ಉತ್ಪಾದನಾ ವೆಚ್ಚದಲ್ಲಿ ಶೇ.28 ರಷ್ಟು ಕಮ್ಮಿಯಾಗುತ್ತದೆ. ಸರಿ. ಆದರೆ ಇಳುವರಿ ಜಾಸ್ತಿಯಾಗುವುದೂ ನಿಶ್ಚಿತವಿಲ್ಲ ಎಂಬುದು ಕೇಂದ್ರೀಯ ಹತ್ತಿ ಬೆಳೆ ಸಂಶೋಧನಾ ಸಂಸ್ಥೆಯ ಅಂಬೋಣ. ಇದರಿಂದ ವ್ಯಕ್ತವಾಗುವುದು, ಕರ್ನಾಟಕದಲ್ಲಿ ಎಕರೆ ಬಿ.ಟಿ. ಹತ್ತಿ ಬೆಳೆಯಲು ಸುಮಾರು ಒಂದು ಸಾವಿರ ರೂ. ಅಧಿಕ ವೆಚ್ಚ ಮಾಡಬೇಕಾಗುತ್ತದೆ. ಒಂದು ಅಂದಾಜಿನ ರೀತ್ಯಾ ಬಿಟಿ ಹತ್ತಿಯಿಂದಲೇ ಮಾನ್ಸೆಂಟೋ ಕಂಪೆನಿಯ ಆದಾಯ 21 ಕೋಟಿ ರೂ. ಈ ವರ್ಷದ ವಹಿವಾಟಿನಿಂದ, 2–3 ವರ್ಷಗಳಲ್ಲಿ 5 ಸಾವಿರ ಕೋಟಿಗೇರುವಂತಿದೆ. ಕರ್ನಾಟಕದಲ್ಲಿಯೇ ಅದರ ವಹಿವಾಟು ಸುಲಭವಾಗಿ 100 ಕೋಟಿ ದಾಟಬಹುದಾಗಿದೆ. ಕೀಟನಾಶಕಗಳನ್ನು ವಿತರಿಸುವ ದೊಡ್ಡ ಕಂಪೆನಿಯು ಅದಾಗಿದ್ದು, ಬೀಜ ಮಾರಾಟದ ವ್ಯವಸ್ಥೆ ಅದರ ವಶವಾದರೆ ಪರಿಣಾಮ ಏನಾದೀತು! ಬೀಜವೂ ಕೂಡ ರೈತರಿಗೆ ದುಬಾರಿ ಆಗಿ, ಈಗಾಗಲೇ ನಡೆದಿರುವ ಹತ್ತಿ ರೈತರ ಆತ್ಮಹತ್ಯೆ ನಮ್ಮ ಕಣ್ಣು ಮುಂದಿರುವಲ್ಲಿ ಮತ್ತೇನೂ ಹೇಳುವುದು ಬೇಡ. ಚೀನಾದ ಅನುಭವವೂ ನಮ್ಮ ಮುಂದಿದೆ. ಆದ್ದರಿಂದ ಕೃಷಿಯಲ್ಲಿ ಜೈವಿಕ ತಂತ್ರಜ್ಞಾನದ ಬಳಕೆಯಲ್ಲಿ ಗಂಭೀರವಾಗಿ ಪರಿಗಣನೆ, ಪರಿಶೀಲನೆ ಆಗಬೇಕು. ನಮ್ಮ ಸಾಮಾಜಿಕ ಹಿಡಿತ ಇದರ ಮೇಲೆ ಗಟ್ಟಿಗೊಳ್ಳಬೇಕು, ಎಂದೆಲ್ಲ ಶ್ರೀ ಪ್ರಕಾಶ್ ಅವರು ಅಭಿಪ್ರಾಯಗಳನ್ನು ಮಂಡಿಸಿದ್ದಾರೆ. ಶ್ರೀ ಟಿ.ಜೆ.ಎಸ್. ಜಾರ್ಜ್ ಅವರೂ ಕೂಡ ತಮ್ಮ ಕನ್ನಡಪ್ರಭದ ಲೇಖನವೊಂದರಲ್ಲಿ; ಯೂರೋಪಿನಿಂದ ಮಾನ್‌ಸಾನ್‌ಟೋ ಕಂಪನಿಯನ್ನು ಹೊರಗಟ್ಟಿದ ಬಗ್ಗೆ ಹಾಗೂ ಸಾಂಪ್ರದಾಯಿಕ ಬೀಜಗಳಿಗಿಂತಲೂ ಈ ಬೀಜ ಹೆಚ್ಚು ಅಪಾಯಕಾರಿ ಎಂದು ಹೇಳಿದ್ದಾರೆ. ಅಲ್ಲದೆ 1999ರಲ್ಲಿ ರಾಕ್‌ಫೆಲ್ಲರ್ ಪ್ರತಿಷ್ಠಾನದ ಅಧ್ಯಕ್ಷರು, ಮಾನ್‌ಸಾನ್‌ಟೋ ನಿರ್ದೇಶಕ ಮಂಡಲಿಗೆ ನಿಮ್ಮ ಜಾಗತಿಕ

ಕಾರ್ಯತಂತ್ರವೂ ಹಾಗೂ ರಹಸ್ಯ ತಂತ್ರಗಳೂ ವಿಜ್ಞಾನ ಹೊಂದಿರುವ ಒಳ್ಳೆಯ ಹೆಸರನ್ನು ವಿನಾಶಕಾರಿ ಬೀಜಗಳನ್ನು ತಯಾರು ಮಾಡುವ ಮೂಲಕ ಹಾಳು ಮಾಡುತ್ತಿದ್ದೀರಿ ಎಂದಿರುವುದನ್ನೂ ತಿಳಿಸಿದ್ದಾರೆ. ಅಲ್ಲದೆ ಅಮೆರಿಕದಲ್ಲೂ ಈ ಕಂಪನಿ ವಿರುದ್ಧ ಭಾರಿ ಪ್ರತಿಭಟನೆಗಳು ನಡೆದವು ಎಂದಿದ್ದಾರೆ.

ರಾಜ್ಯ ಸರ್ಕಾರವು ಕೇಂದ್ರ ಸರ್ಕಾರದ ಅನುಮತಿಯೊಂದಿಗೆ ಉತ್ತರ ಕರ್ನಾಟಕದ 10 ಜಿಲ್ಲೆಗಳು ಸೇರಿದಂತೆ ರಾಜ್ಯದ 2 ಜಿಲ್ಲೆಗಳ 16000 ಎಕರೆ ಪ್ರದೇಶದಲ್ಲಿ ಬಿ.ಟಿ. ಹತ್ತಿ ಬೆಳೆಯಲು ತೀರ್ಮಾನಿಸಿದೆ. ಈ ಹತ್ತಿಯನ್ನು ಆಯ್ದ ರೈತರಿಗೆ ವಿತರಿಸಲಿದೆ. ಕರ್ನಾಟಕದಲ್ಲಿ ಬಿ.ಟಿ. ಹತ್ತಿಯ 5 ತಳಿಗಳ ಬಳಕೆಗೆ ಮಾತ್ರ ಕೇಂದ್ರವು ಅನುಮತಿ ನೀಡಿದೆ. ರಾಜ್ಯದಲ್ಲಿ ಮಾಯ್ಕೋ, ಮಾನ್‌ಸಾನ್‌ಟೋ ಸಂಸ್ಥೆಗಳ ಅಧಿಕೃತ ಬೀಜ ಮಾರಾಟಗಾರರ ಮೂಲಕ ಬೀಜವನ್ನು ಮಾರಾಟ ಮಾಡಲಾಗುವುದು. ಈ ಹಿಂದೆ ಈ ಹತ್ತಿ ತಳಿಯನ್ನು ಪ್ರಾಯೋಗಿಕವಾಗಿ ಬೆಳೆಯಲಾಗಿದ್ದ ಸ್ಥಳಗಳನ್ನು ಆಯ್ಕೆ ಮಾಡಿ ಅಲ್ಲಿ ಈ ಹತ್ತಿಯನ್ನು ವಾಣಿಜ್ಯ ಬೆಳೆಯಾಗಿ ಮೊದಲು ಬೆಳೆಯಲು ಯೋಜಿಸಲಾಗಿದೆ. ಕೃಷಿ ಇಲಾಖೆ ಹಾಗು ಕೃಷಿ ವಿಶ್ವವಿದ್ಯಾಲಯಗಳು ಈ ಬೆಳೆಯನ್ನು ಗಮನಿಸುತ್ತವೆ. ಪ್ರಾಯೋಗಿಕವಾಗಿ 3 ವರುಷಗಳ ಕಾಲ ಬಿ.ಟಿ. ಹತ್ತಿ ಬೆಳೆಯಲು ಕೇಂದ್ರವು ರಾಜ್ಯಕ್ಕೆ ಅವಕಾಶ ಕಲ್ಪಿಸಿದೆ. ಕೀಟನಾಶಕದಿಂದ ಶೇಕಡ 60ರಷ್ಟು ಬೆಳೆ ನಾಶವಾಗುತ್ತಿದೆ. ರಸಗೊಬ್ಬರಗಳ ಬಳಕೆಯಿಂದ ನಮ್ಮ ತಳಿಯ ವಿಧಗಳು ನಾಶವಾಗುತ್ತಿವೆ. ನಮ್ಮ ಕೃಷಿ ವಿಶ್ವವಿದ್ಯಾಲಯದಲ್ಲಿಯೇ ಮಾಯ್ಕೋ, ಮಾನ್‌ಸಾನ್‌ಟೋ ರೀತಿಯಲ್ಲಿ ವಿವಿಧ ಹತ್ತಿ ತಳಿಯನ್ನು ಹಾಕಿ ನಾವೇ ಅಭಿವೃದ್ಧಿ ಪಡಿಸಿ ನಮ್ಮ ಸ್ಥಳೀಯ ತಳಿಗಳ ಮೇಲೆ ಪ್ರಯೋಗ ಮಾಡುತ್ತೇವೆ ಎಂದೆಲ್ಲ ಕೃಷಿ ಸಚಿವ ಶ್ರೀ ಟಿ.ಬಿ. ಜಯಚಂದ್ರ ಪತ್ರಿಕಾಗೋಷ್ಠಿಯಲ್ಲಿ ಈಚೆಗೆ ತಿಳಿಸಿದ್ದಾರೆ.

ಬೇರೆ ದೇಶಗಳಲ್ಲಿ ವಿಫಲವಾದ ತಂತ್ರಜ್ಞಾನವನ್ನು ನಮ್ಮ ದೇಶದ ಮೇಲೆ ಹೇರುವ ಅಗತ್ಯವಿಲ್ಲ; ಸಣ್ಣ ರೈತರಿಗೆ ಈ ತಂತ್ರಜ್ಞಾನ ಸಹಾಯಕಾರಿಯಾಗಿಲ್ಲ. ಅಮೇರಿಕೆಯಂಥ ಶೀತಲ ವಾತಾವರಣದ ದೇಶಗಳ, ಶ್ರೀಮಂತ ರೈತರ ಉಳಿವಿಗೆ ಬರುವ, ಸಹಾಯಧನ ನೀಡಿ ರೈತರಕ್ಷಣೆ ಇರುವಲ್ಲಿ ಇದು ಅನುಕೂಲಕರ. ಆದರೆ ಬೌದ್ಧಿಕ ಆಸ್ತಿಯ ಹಕ್ಕಿನ ನೆಪದಲ್ಲಿ, ರೈತರನ್ನು ಕಾನೂನಿನಡಿಯಲ್ಲಿ ಕೋರ್ಟಿಗೆ ಹತ್ತಿಸಿದ ಮಾನ್ಸೆಂಟೋ ಬಗ್ಗೆ ವಿರೋಧ ವ್ಯಕ್ತವಾಗಿದೆ. ಹತ್ತಿ ಬೆಳೆಗಾರರ ಆತ್ಮಹತ್ಯೆ ಪ್ರಕರಣ ತಡೆಯಲು ಇದರ ಅಧಿಕ ಇಳುವರಿಯ ಲಾಭ ನೆರವಾಗಿಲ್ಲ. ಸಣ್ಣ

ರೈತರಿಗೆ ಇದು ನೆರವಾಗುತ್ತಿಲ್ಲ. ಈ ಕಾರಣಗಳೇ ಬಿ.ಟಿ. ಹತ್ತಿ ಬಳಕೆಗೆ ರೈತ ಸಂಘಟನೆಗಳ ವಿರೋಧಕ್ಕೆ ಎಡೆ ಮಾಡಿದೆ ಎಂದು ವಿವಿಧ ಮೂಲಗಳಿಂದ ಸಂಗ್ರಹಿತ ಮಾಹಿತಿಯಿಂದ ತಿಳಿಯುತ್ತದೆ.

ಕನ್ನಡ ಪ್ರಭದ ಸಂಪಾದಕೀಯವೊಂದು, ಬಿ.ಟಿ. ಹತ್ತಿಯ ಕೆಲವು ಮಾದರಿ ಬೀಜಗಳಿಗೆ ಭಾರತದ ಮಾರುಕಟ್ಟೆ ಒದಗಲು ಸರ್ಕಾರದ ಅನುಮತಿ ನೀಡಿರುವ ಹಿನ್ನೆಲೆಯಲ್ಲಿ ಸಾಧಕ ಬಾಧಕಗಳನ್ನು ವಿಶ್ಲೇಷಿಸುತ್ತ ಬಿ.ಟಿ. ಹತ್ತಿಗೆ ವಿರೋಧದ ಮುಖ್ಯ ಕಾರಣಗಳನ್ನು ಮಂಡಿಸಿರುವುದು ಗಮನಾರ್ಹವಾಗಿದೆ: ಬೀಜದಬಳಕೆ ರೈತರ ಸ್ವಾತಂತ್ರ್ಯವನ್ನು ಕಿತ್ತುಕೊಳ್ಳುತ್ತದೆ; ಪಾರಂಪರಿಕ ವಿಧಾನದಿಂದಲೇ ಉತ್ತಮಬೆಳೆ ತೆಗೆಯುತ್ತಾ ಬಂದಿರುವ ನಮ್ಮ ರೈತ 'ಮಾಯ್ಕೋ' ದಂಥ ಕಂಪನಿಗಳೆದುರು ಇನ್ನು ಮುಂದೆ ಬೀಜಕ್ಕಾಗಿ ಕೈಯೊಡ್ಡಬೇಕು; ಈ ಬೀಜಗಳು ಒಂದು ಫಸಲಿಗೆ ಮಾತ್ರ ಉಪಯೋಗ; ಅದರಿಂದ ಬರುವ ಬೀಜಗಳು ಬರಿಬಂಜೆ ಎಂದೆಲ್ಲ ಕಾರಣಗಳಿಗಾಗಿ ವಿರೋಧವಿದೆ. ಆದರೆ ಬಿ.ಟಿ. ಹತ್ತಿಯ ಪರ ವಾದಿಸುವವರು ಈ ಹತ್ತಿಯನ್ನು ಹೊಲಕ್ಕೆ ಹಾಕಿಕೊಂಡ ಚೀನಾ ಬರೀ ಮೂರುವರ್ಷಗಳಲ್ಲಿ ಏಳುಲಕ್ಷ ಹೆಕ್ಟೇರುಗಳಲ್ಲಿ ವಿಪುಲ ಬೆಳೆ ತೆಗೆಯಲು ಮುಂದಾಯಿತು. ಚೈನಾದ ರೈತರಿಂದ ಈ ಬೀಜಗಳ ಬೇಡಿಕೆ ಹೆಚ್ಚುತ್ತಲೇ ಇರುವಲ್ಲಿ ರೈತರಿಗೆ ಇದು ಲಾಭದಾಯಕ, ಎನ್ನಲು ಬೇರೆ ಪುರಾವೆ ಬೇಕೇ? ಎನ್ನುತ್ತಾರೆ. ಅಲ್ಲದೆ ಕೃಷಿ ಕ್ಷೇತ್ರದಲ್ಲಾಗುತ್ತಿರುವ ಸುಧಾರಣೆ, ಬದಲಾವಣೆಗೆ ಭಾರತದ ರೈತ ಸುಮ್ಮನೆ ಕೂರುವ ಅಗತ್ಯವಿಲ್ಲ. ಹೊಸತನ್ನು ಸ್ವಾಗತಿಸುವ ಭರದಲ್ಲಿ ಎಚ್ಚರಿಕೆಯ ಹೆಜ್ಜೆ ಬೇಕು, ಅಷ್ಟೆ. ಹತ್ತಿಯನ್ನು ಕಾಯಿಕೊರಕಹುಳು ಬಿಟ್ಟು ಬೇರೆ ಕೀಟಗಳು ಕಾಡುವುದಿಲ್ಲವೇ? ಎಂಬುದನ್ನು ಗಮನಿಸಬೇಕು. ಇದರ ಪರೀಕ್ಷೆಯನ್ನು ತನ್ನ ಹೊಲದಲ್ಲಿಯೂ ರೈತನು ಮಾಡಲು ಅಡ್ಡಿ ಎಲ್ಲಿದೆ? ಎಂದೆಲ್ಲಾ ಸಂಪಾದಕೀಯದಲ್ಲಿ ಸಮಸ್ಯೆಯ ಇಬ್ಬದಿಯನ್ನು ಹೇಳಿ ಪ್ರಯೋಗಕ್ಕೆ ಮಿತಿಇಲ್ಲ ಎನ್ನಲಾಗಿದೆ. ಒಟ್ಟಾರೆ ಎಲ್ಲಾ ಮೂಲಗಳೂ ಈ ಹೊಸ ತಂತ್ರಜ್ಞಾನ, ಜೈವಿಕ ಮಾರ್ಪಾಡಿನ ಫಸಲಿನ ಬಳಕೆಯನ್ನು ಸೂಕ್ಷ್ಮ ಹಾಗೂ ಸೂಕ್ತ ರೀತಿಯಲ್ಲಿ ಪರಿಶೀಲಿಸಿ ನಿಯಂತ್ರಣವನ್ನಿಟ್ಟುಕೊಳ್ಳದೆ ಅಳವಡಿಸುತ್ತಾ ಹೋದರೆ ಅಪಾಯವನ್ನೊಡ್ಡಬಲ್ಲುದು ಎಂದಿರುವುದನ್ನು ಮರೆಯುವಂತಿಲ್ಲ. ಇದಲ್ಲದೆ ಅಧಿಕ ಇಳುವರಿ ಸಾಲುಗಟ್ಟಿದರೆ ಮುಂದೆ ಮಾರುಕಟ್ಟೆಯಲ್ಲಿ ಬೆಲೆ ಕುಸಿತಕ್ಕೆ ಹಾದಿಯಾಗದಂತೆ ನಿಯಂತ್ರಿಸಬೇಕು. ಅಲ್ಲದೆ ಕೀಟಗಳ ನಿರೋಧಕ ಶಕ್ತಿ ನಿಯಂತ್ರಣಕ್ಕೆ ಜೀನ್ ಪಿರಿಮಿಡಿಂಗ್ (ವಂಶವಾಹಿಗಳ ಪೇರಿಕೆ) ಪ್ರಯೋಗ ಸಾರ್ವತ್ರೀಕರಣಗೊಳಿಸುವ

ವ್ಯವಸ್ಥೆ ಬೆಳೆಯಬೇಕಲ್ಲವೇ? ಎಂದೆನಿಸುತ್ತದೆ. ಮಾಮೂಲು ಹತ್ತಿಬೆಳೆಯ ರೋಗನಿರೋಧಕ ಶಕ್ತಿ ಕುಸಿಯಲು ಬೆಳೆವ ಭೂಮಿಯ ಸತ್ವವನ್ನು ಕಳೆದ ಕಾರಣವಾಗಿರಬಹುದೆ? ಎಂಬುದನ್ನೂ ಪರಿಶೀಲಿಸಬೇಕು.

ಈ ನಡುವೆ ಬಹುರಾಷ್ಟ್ರೀಯ ಕಂಪೆನಿ ಮಾನ್ಸಾಂಟೋ ವಿರುದ್ಧ ರಾಜ್ಯರೈತಸಂಘ ಪ್ರತಿಭಟನೆ ಮಾಡಿತ್ತು. ಬಿಟಿ ಹತ್ತಿ ಬೆಳೆ ಕಾನೂನು ಬಾಹಿರವಾಗಿರುವುದರಿಂದ ಅದನ್ನು ಕಿತ್ತು ಹಾಕುವವರಿಗೆ ಹೋರಾಟ ನಡೆಯುತ್ತದೆ ಎಂದಿತ್ತು. ಭಾರತೀಯ ವಿಜ್ಞಾನ ಸಂಸ್ಥೆಯ ಆವರಣದಲ್ಲಿರುವ ಆ ಕಂಪೆನಿಯನ್ನು ಹಾಗು ಇನ್ನಿತರ ಬಹುರಾಷ್ಟ್ರೀಯ ಕಂಪೆನಿಗಳನ್ನು ತೆರವುಗೊಳಿಸುವಂತೆ ಮಾಡಬೇಕು ಎಂಬ ಬೇಡಿಕೆ ಇಟ್ಟು ಪ್ರೊ! ಎಂ.ಡಿ. ನಂಜುಂಡಸ್ವಾಮಿ ಅವರ ನೇತೃತ್ವದಲ್ಲಿ ರೈತಸಂಘದ ಸಾವಿರಾರು ರೈತರು ನಗರದ ರೈಲು ನಿಲ್ದಾಣದಿಂದ 9.8.2002 ರಂದು ಮಾನ್ಸಾಂಟೋ ಕೇಂದ್ರದವರೆಗೆ ಬೃಹತ್ ಮೆರವಣಿಗೆಯಲ್ಲಿ ಸಾಗಿದರು. ಮೂವತ್ತು ಮಂದಿ ರೈತರ ನಿಯೋಗವೊಂದು ಕಂಪೆನಿಯ ನಿರ್ದೇಶಕ ಶ್ರೀ ಮಂಜುನಾಥ್ ಅವರಲ್ಲಿಗೆ ಹೋಗಿ ಬೇಡಿಕೆಗಳ ಪತ್ರವನ್ನು ನೀಡಿತು.

ಈ ಪ್ರತಿಭಟನೆಯ ಸಂದರ್ಭದಲ್ಲಿ ಸಮಗ್ರವಾಗಿ ಚರ್ಚೆ ನಡೆಸಿದ ಮೇಲೆ ಬಿ.ಟಿ. ಹತ್ತಿ ಮಾರಾಟ ಹಾಗು ಅದಕ್ಕೆ ನಿಷೇಧ ಹೇರುವ ಬಗ್ಗೆ ತೀರ್ಮಾನ ಕೈಗೊಳ್ಳಲಾಗುವುದು; ಮುಷ್ಕರವನ್ನು ಕೈಬಿಡಿ ಎಂದು ಕೃಷಿ ಸಚಿವ ಶ್ರೀ ವಿ.ಎಸ್. ಕೌಜಲಗಿ ಅವರು ರೈತರನ್ನು ಪ್ರಾರ್ಥಿಸಿದರು.

ಮೆರವಣಿಗೆಯ ರೈತರನ್ನು ಜಕ್ಕರಾಯನ ಕೆರೆಯ ಬಳಿ ತಡೆದಾಗ ರೈತರು ರಸ್ತೆಯಲ್ಲಿಯೇ ಧರಣಿಯನ್ನು ಆರಂಭಿಸಿದರು. ಆಗಲೇ ರೈತರಲ್ಲಿಗೆ ಸಚಿವರು ಬಂದು ಹೀಗೆ ಪ್ರಾರ್ಥಿಸಿದರು. ವಿಧಾನಸೌಧದ ತಮ್ಮ ಕೊಠಡಿಯಲ್ಲಿ ರೈತನಾಯಕರು, ಕೃಷಿ ವಿಶ್ವವಿದ್ಯಾಲಯಗಳ ಕುಲಪತಿಗಳು ಹಾಗು ಕೃಷಿ ಇಲಾಖಾ ಅಧಿಕಾರಿಗಳೊಡನೆ 13.8.2002 ರಂದು ಸಚಿವರು ಈ ಬಗ್ಗೆ ಚರ್ಚೆ ನಡೆಸಿದರು. ಬಿ.ಟಿ. ಹತ್ತಿಯು ಹಾನಿಕರ ಎಂದು ರೈತ ಮುಖಂಡರು ವಾದಿಸಿದರು. ಕೃಷಿ ಇಲಾಖಾ ಅಧಿಕಾರಿಗಳು ಬಿ.ಟಿ. ಹತ್ತಿಯ ಅನುಕೂಲ ಹಾಗು ಅನಾನುಕೂಲಗಳನ್ನು ವಿವರಿಸಿದರು; ಸಚಿವರು ಅದರ ನಿಷೇಧದ ಅಧಿಕಾರ ಕೇಂದ್ರ ಸರ್ಕಾರಕ್ಕಿರುವುದರಿಂದ ಸಭೆಯ ಅಭಿಪ್ರಾಯವನ್ನು ತಿಳಿಸುವುದಾಗುತ್ತದೆ ಎಂದರು.

ಬಿ.ಟಿ. ಹತ್ತಿ ನಿಷೇಧಕ್ಕೆ ಕಾನೂನಿನಲ್ಲಿ ಅವಕಾಶವಿಲ್ಲ ಎಂಬ ಕೃಷಿ ಸಚಿವರ ಮಾತನ್ನು ಒಪ್ಪದೆ ರೈತರು ಸರ್ಕಾರ ಈ ಬಗ್ಗೆ ತಡಮಾಡಿದರೆ ರೈತ ಸಂಘವು ಹೋರಾಟವನ್ನು ಮುಂದುವರಿಸುತ್ತದೆ ಎಂದರು.

ಇದರ ಇನ್ನೊಂದು ಮುಖವಾಗಿ ಧಾರವಾಡದ ರೈತ ಸಂಘದವರು ಈ ಬಿಟಿ ಹತ್ತಿ ಬೀಜಗಳ ಪರವಾಗಿ ವಾದಿಸುತ್ತಿರುವುದೂ ಸುದ್ದಿಯಾಗಿತ್ತು. ಆದರೆ (ಬಿಟಿ) ಕುಲಾಂತರಿಕುಲಾಂತಕ ಬೀಜಗಳಿಗೆ ಬದಲಾಗಿ **'ಅಮೃತಭೂಮಿ'** ಬೀಜದ ಬ್ಯಾಂಕ್ ಸ್ಥಾಪಿಸುವ ಬಗ್ಗೆ, ನೈಸರ್ಗಿಕ ಕೃಷಿ ಪದ್ಧತಿಯನ್ನು ಪ್ರೋತ್ಸಾಹಿಸುವ ಬಗ್ಗೆ ಚಾಮರಾಜನಗರ ತಾಲ್ಲೂಕು ಹೊಂಡರಬಾಳುವಿನಲ್ಲಿ 'ಅಮೃತಭೂಮಿ ಕೇಂದ್ರ'ವನ್ನು ಉದ್ಘಾಟಿಸುವ ಬಗ್ಗೆ ಪ್ರೊ. ಎಂ.ಡಿ. ನಂಜುಂಡಸ್ವಾಮಿಯವರು ಸುದ್ದಿಗಾರರಿಗೆ ತಿಳಿಸಿದ್ದೂ ವರದಿಯಾಗಿದೆ.

*ಮಂಥನ: 5 ಸಾವಿರವರ್ಷದ ಸೈಂಧವ ಸಂಸ್ಕೃತಿಯ ಕಾಲದಿಂದಲೂ ನಮ್ಮ ರೈತ, ಹತ್ತಿಯ ತನ್ನ ಕೃಷಿ ಪರಂಪರೆಯ ಸಮರ್ಥ ಜಾಡಿನಲ್ಲಿ ಹೊರಟುಬರುತ್ತಿದ್ದರೂ ಹೊಸದಕ್ಕೆ, ಸುಧಾರಣೆಗೆ ಮನಗೊಟ್ಟಿಲ್ಲ ಎಂದರೆ ಸಮಂಜಸವಲ್ಲ. ಅವನಲ್ಲಿ ಸಾಂಪ್ರದಾಯಿಕ ಎಚ್ಚರವೂ ಇದೆ. ಸ್ವಾವಲಂಬೀ ಆವಿಷ್ಕಾರ ಶಕ್ತಿಯೂ ಇದೆ. ಸಾಂಸ್ಕೃತಿಕ ಬಾಹುಳ್ಯ ಕೃಷಿಗಾರಿಕೆಯಲ್ಲಿದೆ. ಹೀಗಾಗಿ ಪ್ರಯೋಗಶೀಲತೆಗೆ ಒಡ್ಡಿಕೊಂಡರೂ ಸ್ವಾಭಿಮಾನವನ್ನು ಕಳೆದುಕೊಳ್ಳಲಿಚ್ಚಿಸುವುದಿಲ್ಲ. ಇದಕ್ಕೆ ಮಾನದಿಂದ ಬಾಳಿಸಲು ಸನ್ನಿವೇಶ ಸೋತಾಗ ಆತ್ಮಹತ್ಯೆ ಮಾಡಿಕೊಂಡ ರೈತರ ಉದಾಹರಣೆಯೂ ಸಾಕ್ಷಿಯ ಒಂದು ಮುಖವಾಗಿದೆ. ಒಂದುಕಡೆ ಒಂದು ಬೆಳೆ ಲಾಭದಾಯಕವಾಗಿ ಫಸಲುಗೊಟ್ಟಿತೆಂದರೆ ಉಳಿದ ರೈತರೂ ಅದನ್ನು ಅನುಸರಿಸುವುದು ಸಹಜ; ಅದನ್ನು ಅನುಸಂಧಾನ ಎನ್ನುವುದುಂಟು. ಅಂದರೆ ಅವರಂತೆ ನನ್ನದೂ ಸರೀಕತನವಿರಲಿ ಎಂಬ ಆಸೆಯೂ ಅದಾಗಬಹುದಲ್ಲವೆ? ಬಿ.ಟಿ. ತಳಿಯ ಪರ ವಿರೋಧವಾದಗಳು ನೇರವಾಗಿ ರೈತರ ಅರಿವಿಗೆ ಬಂದಿವೆಯೋ? ಇಲ್ಲವೋ? ಅದು ಬೇರೆ ಪ್ರಶ್ನೆ. ಅವರ ಪ್ರಯೋಗಕ್ಕೆ ತಮ್ಮ ಜಮೀನಿನಲ್ಲಿ ಅದನ್ನು ಬಳಸಿ ಲಾಭವೆಂದರೆ ತತ್ಕಾಲಕ್ಕಾದರೂ ಪರವಾದಿಯಾಗುತ್ತಾರೆ. ಲಾಭಕ್ಕೆ ಹಾನಿಯಾದಾಗ ಕಂಗೆಡುವುದೂ ಉಂಟು. ಪರ್ಯಾಯಕ್ಕೂ ಚಿಂತಿಸುವುದುಂಟು. ಭಾವನಾತ್ಮಕ ನೆಲೆಯಲ್ಲಿ ಮಾನವೀಯ ಸಂಸ್ಕೃತಿ ಉಳಿಸಿಕೊಂಡ ರೈತರು ಜಾಗತೀಕರಣದ ಬದಲಾವಣೆಗೆ ಕುರುಡಾಗಿದ್ದಾರೆ ಎನ್ನುವಂತಿಲ್ಲ. ಪ್ರಯೋಗವಾಗಿ ಬಂದದ್ದು ಒಗ್ಗಿದರೆ ಸ್ವೀಕರಿಸುತ್ತಾರೆ. ಇಲ್ಲವಾದರೆ ತಿರಸ್ಕರಿಸುತ್ತಾರೆ. ಹೀಗಿದರ*

*ಪ್ರತಿಭಟಿಸುತ್ತಾರೆ. ಚಳುವಳಿಯಲ್ಲಿ ಘಟಕವಾಗಿ ಸೇರುತ್ತಾರೆ. ಇನ್ನು ಬಿ.ಟಿ. ಹತ್ತಿಯ ಅನ್ವಯ ಸ್ವೀಕರಣದಲ್ಲಿ ಒಂದೆರಡು ಪ್ರಶ್ನೆಗಳೇಳುತ್ತವೆ. ಒಂದು ಫಸಲಿಗೆ ಗರ್ಭಕೊಟ್ಟ ಬೀಜ ಮುಂದಿನಬಾರಿಗೆ ಆ ತಳಿಯ ಉತ್ಪನ್ನವು ಬಂಜೆ ಬೀಜವಾದರೆ ರೈತ ಕಂಪೆನಿಯ ಬಾಗಿಲಲ್ಲೋ ಅದರ ಶಾಖಾ ಸಂಸ್ಥೆಯ ಬಾಗಿಲಲ್ಲೋ ಮುಂದಿನ ಬಿತ್ತನೆ ಬೀಜಕ್ಕೆ ಕಾಯುವ ಹಂಗು ಸದಾ ಲಾಭಕರವಾದರೆ ಸಹಿಸಿಕೊಂಡಾನು ರೈತ. ಆದರೆ ಸ್ವಾಭಿಮಾನ ಕುಕ್ಕುತ್ತಿರುವುದಿಲ್ಲ ಎನ್ನುವಂತಿಲ್ಲ. ಅಲ್ಲದೆ ರೈತ ಬೆಳೆದ ಧಾನ್ಯ, ತೈಲಬೀಜ ಇತ್ಯಾದಿ ಎಲ್ಲ ಕೃಷಿ ಉತ್ಪನ್ನಗಳ ಬೀಜಸ್ವಾಮ್ಯ ಕಂಪೆನಿಗಳದಾದರೆ ರೈತರು ಎಷ್ಟು ಕಂಪೆನಿಗಳ ಬಾಗಿಲನ್ನು ಕಾಯಬೇಕಾದೀತು! ನಮ್ಮ ರೈತರು ಕಳೆದುಕೊಂಡ ಸ್ವಾಮ್ಯವನ್ನು ವಿದೇಶೀ ಕಂಪೆನಿಗಳ ವಾರಸುದಾರಿಕೆಗೆ ಒಪ್ಪಿಸುವಂತಾದರೆ, ಅಲ್ಲದೆ ಇಂಥ ಸ್ವಾಮ್ಯ ಬಹುರಾಷ್ಟ್ರೀಯ ಕಂಪೆನಿಗಳ ಸೊತ್ತಾಗುತ್ತಾ ಬಂದರೆ ದೇಶೀಯ ಮಾಮೂಲು ತಳಿಗಳ ಉತ್ಪಾದನೆ ಹಾಗೂ ಸ್ವಾಮ್ಯಕ್ಕೆ ಅವಕಾಶ ವಿಸ್ತರಣೆಯಾಗುವುದೇ? ವಿದೇಶಿ ತಂತ್ರಜ್ಞಾನದ ಅನುಕೂಲದ ಹುಚ್ಚು ಸ್ವದೇಶ ತಂತ್ರಜ್ಞಾನದ ಅನುಕೂಲದ ಸ್ವಿಚ್ಚನ್ನು ಆರಿಸಬಾರದು. ಸ್ವದೇಶಿ ತಂತ್ರಜ್ಞಾನದ ಜೈವಿಕ ಫಸಲನ್ನು ರೂಪಿಸಿ ಜಾಗತಿಕ ಮಾರುಕಟ್ಟೆಯಲ್ಲಿ ಸ್ಪರ್ಧಿಸುವ ಚೈತನ್ಯ ನಮ್ಮ ಗ್ರಾಮೀಣ ಮಾರುಕಟ್ಟೆಯಿಂದಲೇ ಉಗಮವಾಗುವಂಥ ಪರಿಸರ, ಉತ್ತೇಜನ ಸೃಷ್ಟಿಗೊಳ್ಳಬೇಕು. ಒಂದು ಜೈವಿಕ ತಳಿಯ ಕೀಟ ನಿರೋಧಶಕ್ತಿ ಒಂದೊಂದಕ್ಕೇ (ಕಾಯಿಕೊರಕ ಹುಳು ಒಂದು ಉದಾ.) ಸೀಮಿತವಾದರೆ ಬೇರೆ ಬೆಳೆಗಳ ಕೀಟಗಳು ನಿರೋಧಶಕ್ತಿ ಬೆಳೆಸಿಕೊಂಡರೆ ಆಗ ಬೆಳೆರಕ್ಷಣೆ ಗ್ಯಾರಂಟಿ ಇರಬಲ್ಲುದೇ? ಎಂಬುದಕ್ಕೂ ಉತ್ತರಬೇಕು. ಮಾದರಿ ಪ್ರಯೋಗಗಳ ಸೂಕ್ಷ್ಮ ವಿಶ್ಲೇಷಣೆ ಇದನ್ನು ಉತ್ತರಿಸಬೇಕು.*

ಜೀವಕೋಶದೊಳಗಿನ ಜೀವಧಾತುವನ್ನು ಪ್ರೋಟೀನ್ ನೆಲೆಗೆ ತಂದು ತುಸು ಮಾರ್ಪಾಡು ಮಾಡಿ ಕೃಷಿ ವಲಯವನ್ನೇ ಹತೋಟಿಗಿಟ್ಟುಕೊಳ್ಳುವ ಪ್ರಯತ್ನ ಕೃಷಿಯ ನೈಸರ್ಗಿಕ ಉದ್ದೇಶವನ್ನು ಹಾಳು ಮಾಡುವಂತಿದೆ. ಪ್ರತಿ ಗಿಡಕ್ಕೂ ಇರುವ ಸಾಮರ್ಥ್ಯವನ್ನು ಕ್ರೋಡೀಕರಿಸಿದರೆ ಇಳುವರಿ ಸಮಸ್ಯೆ ಇರದು. ನಮ್ಮ ರೈತರಿಗೆ ಹೆಚ್ಚು ಬಂಡವಾಳ ಹಾಕುವ ಶಕ್ತಿ ಇಲ್ಲದಿರುವಾಗ ಸಾವಯವಕೃಷಿ ನಿಧಾನವೆನಿಸಿದರೂ ಸಾರವತ್ತಾದದ್ದು. ನಮ್ಮ ಆರ್ಥಿಕ ಹಾಗು ಸಾಂಸ್ಕೃತಿಕ ಜಾಯಮಾನಕ್ಕೆ ಹೊಂದುವಂಥದ್ದು ಎಂಬ ಅಭಿಪ್ರಾಯಗಳೂ ವ್ಯಕ್ತವಾಗಿವೆ. (ವಿ.ಕ. 29.8.2001) ಅನುವಂಶಿಕ ವಸ್ತುವಾದ ನ್ಯೂಕ್ಲಿಯರ್ ಆಮ್ಲದಂಥ ಜೀವಧಾತುವಿನ ಅನುವಂಶಿಕ ಸಂಕೇತವೇ ಡಿ.ಎನ್.ಎ. ಅದು ವಂಶವಾಹಿಯಾಗಿ ಗುಣಗಳ

ಜೋಪಾಸನೆ ಮಾಡಿ ಜೀವಿಗೆ ಸಂಯುಕ್ತಗೊಳಿಸುವಂಥದು. ಅದೊಂದು ವಂಶವಾಹಿ ಕಣ. ಇಂಥ ಜೀವಕಣವನ್ನು ಮಣ್ಣಿನ ಬ್ಯಾಕ್ಟೀರಿಯದಿಂದ (B.T) ತೆಗೆದು ಹತ್ತಿಯ ಬೀಜದಿಂದ ಒಂದೇ ಬೆಳೆ ಫಲ ಬರಿಸಿ, ಮುಂದಿನ ತಲೆಮಾರಿನ ಬೀಜ ಬಂಜೆ ಎನಿಸುವ ತಂತ್ರಜ್ಞಾನ ನಿಸ್ವಾರ್ಥದ್ದೇ? ಎಂದು ವಿವೇಚಿಸಬೇಕು. ಇಂಥ ತಂತ್ರಜ್ಞಾನ ವಾಣಿಜ್ಯೋದ್ದೇಶಗಳಿಗೆ ಬಳಸಿರುವಲ್ಲಿ ಪೂರ್ಣ ವ್ಯಾಪಾರೀ ಮನೋಭಾವ ಕಾಣುವಂತಿದೆ. ರೈತರ ಪರಾವಲಂಬನವನ್ನು ಪೋಷಿಸುವಂತಿದೆ. ಕಂಪೆನಿ ಉದ್ಯಮಗಳ ಹಿಡಿತಕ್ಕೆ ಅವರನ್ನು ಒಳಗಾಗಿಸುವ ಪ್ರಯತ್ನವೆಂಬಂತಿದೆ. ಆಧುನಿಕ ಊಳಿಗಮಾನ್ಯ ಎನಿಸುವಂತಿದೆ. ಬದಲು ನಿರಂತರ ಕೀಟಬಾಧೆ ಪ್ರತಿರೋಧಕ ತಳಿಯನ್ನು ತಯಾರಿಸಲು ಸಾಧ್ಯವಿಲ್ಲವೆ? ಒಂದು ರೀತಿ ಸಾವಯವ ಕೃಷಿಯ ಮೇಲೆ ಮಾಡುವ ಸವಾರಿಯಾಗುವ ಬದಲು ಅಂಥ ಜ್ಞಾನವನ್ನು ಗ್ರಾಮೀಣರಿಗೂ ತಲುಪಿಸುವ ಸರಳತೆಯನ್ನು ತೋರಬಾರದೇಕೆ? ಜಾಗತಿಕ ತಂತ್ರಜ್ಞಾನ ವಿಶ್ವದ ಹಳ್ಳಿಗರನ್ನು ಶ್ರೀಮಂತ ರಾಷ್ಟ್ರಗಳ, ಅಭಿವೃದ್ಧಿಸಿದ್ಧಿ ದೇಶಗಳ ದಾಸರನ್ನಾಗಿ ಮಾಡಬಾರದು. ಹೇಳುವ ಪ್ರಜಾಪ್ರಭುತ್ವ ಜಗತ್ತಿನ ಹಳ್ಳಿಗರ ನಡುವೆ ಸಂಚರಿಸಬೇಕು. ಆ ಜ್ಞಾನ ಹಳ್ಳಿಗರ ಬುದ್ಧಿಶಕ್ತಿಗೂ ತಾಗಿ ನಿಯಂತ್ರಣದಲ್ಲಿರಬೇಕು.

ಹಾನಗಲ್ ತಾ. ಕಲಕೇರಿ ಗ್ರಾಮದ ರೈತ ಬಸವರಾಜ ಹಳ್ಳೂರ ಅವರು ಬಿ.ಟಿ. ಹತ್ತಿ ಇಳುವರಿ ಬಹಳವಾಗಿ ಬರುತ್ತದೆ ಎಂಬ ಮಾತಿನ ನಿರೀಕ್ಷೆಯಲ್ಲಿ ಬಿತ್ತಿದ ಬೆಳೆ ಹಾಗು ಹಾವೇರಿ ಜಿಲ್ಲೆಯ ಸಾವಿರಾರು ರೈತರು ಒಂದು ಲಕ್ಷ ಎಕರೆ ಭೂಮಿಯಲ್ಲಿ ಬಿತ್ತಿ ಕಾಯುತ್ತಿದ್ದ ಹೆಚ್ಚು ಇಳುವರಿಯ ಈ ಬೆಳೆಯ ಕಾಯಿಗಳೆಲ್ಲ ಉದುರಿ ಕೇವಲ ದೇಟು, ಎಲೆ ಮಾತ್ರ ಉಳಿದು ನಿಂತಿದ್ದು ಅವರೆಲ್ಲ ಹತಾಶೆಗೊಂಡಿದ್ದಾರೆ. ನ್ಯಾಯದೊರಕದಿದ್ದರೆ, ರೈತರು ನ್ಯಾಯಾಲಯಕ್ಕೆ ಹೋಗಲು ಸಿದ್ಧವಿರುವ ಬಗ್ಗೆ 16.11.2002ರಲ್ಲಿ ವರದಿಗೊಂಡಿದೆ. ಆದರೆ 29.9.2003ರ ಪತ್ರಿಕಾವಾರ್ತೆಯ ರೀತ್ಯ ಪ್ರಸಕ್ತ ಆರ್ಥಿಕ ವರ್ಷದಲ್ಲಿ, ಜೈವಿಕ ತಂತ್ರಜ್ಞಾನ ಪ್ರಕಾಶನ ಸಂಸ್ಥೆಗಳು ಜಂಟಿಯಾಗಿ ನಡೆಸಿದ ಸಮೀಕ್ಷೆಯ ರೀತ್ಯಾ ದೇಶದ ಜೈವಿಕ ತಂತ್ರಜ್ಞಾನ ಕ್ಷೇತ್ರದ ಅಭಿವೃದ್ಧಿಯು, ಕಳೆದ ವರ್ಷ 635 ಕೋಟಿ ಬಂಡವಾಳ ಹೂಡಿಕೆಯಾಗಿದ್ದರೆ ಮುಂದಿನ 2 ವರ್ಷಗಳಲ್ಲಿ ಅದು ದುಪ್ಪಟ್ಟು ಆಗುವ ಸಾಧ್ಯತೆ ಇದೆ ಎಂದಿದೆ. ಈ ಹಿನ್ನೆಲೆಯಲ್ಲಿ ಬಿಟಿ ನಿರೀಕ್ಷಿತ ಆದಾಯ 1830 ಕೋಟಿ ರೂ. ಆಗುವುದಾದರೆ, ಬಿ.ಟಿ. ಬೆಳೆಗಳ ಬಗ್ಗೆ ನಿರಾಶೆಗೊಳ್ಳಬೇಕಿಲ್ಲ ಎನಿಸುತ್ತದೆ. ಆದರೆ ಈ ಬೆಳೆಯ ನಿಖರ ಪರಿಣಾಮದ ಬಗ್ಗೆ ತರುವ ಆದಾಯದ ಬಗ್ಗೆ ಮುಂದಿನ ಜಾಯಮಾನಗಳು

ಉತ್ತರ ನೀಡಬೇಕು. ಇದೆಲ್ಲ ಸ್ವದೇಶೀಕರಣದ ಅಂಕೆಯಲ್ಲಿದ್ದರೆ ನಮ್ಮ ಐಡೆಂಟಿಟಿಗೆ ಧಕ್ಕೆ ಬರಲಾರದೆನಿಸುತ್ತದೆ. ಅದನ್ನು ಎಚ್ಚರದಿಂದ, ಬೌದ್ಧಿಕ ಸಾಮರ್ಥ್ಯದಿಂದ ನಾವು ಕಾಯ್ದುಕೊಳ್ಳಬೇಕಷ್ಟೆ.

ರಾಜ್ಯ ಸರ್ಕಾರ ನಮ್ಮ ಕೃಷಿವಿಶ್ವವಿದ್ಯಾಲಯದಲ್ಲಿಯೇ ವಿವಿಧ ಹತ್ತಿ ತಳಿ ಹಾಕಿ ಅಭಿವೃದ್ಧಿಪಡಿಸಿ ಸ್ಥಳೀಯ ತಳಿಯ ಮೇಲೆ ಪ್ರಯೋಗ ಮಾಡಲಾಗುತ್ತದೆ ಎಂದಿರುವುದು ಗಮನಾರ್ಹ. ನಮ್ಮ ವಿಜ್ಞಾನಿಗಳು ಅಮೇರಿಕದ ಸೂಪರ್ ಕಂಪ್ಯೂಟರುಗಳಿಗೆ ಸರಿಸಮನಾದ 'ಪರಮ' ಎಂಬ ಸ್ವದೇಶಿ ಸುಪರ್ ಕಂಪ್ಯೂಟರ್‌ಗಳನ್ನು ರೂಪಿಸಿದರಲ್ಲವೆ? ಡಿ.ಆರ್.ಡಿ.ಓ. ಸೆಲ್‌ನ ವಿಜ್ಞಾನಿಗಳು ಕ್ರಯೋಜೆನಿಕ್ ಎಂಜಿನ್ ತಯಾರಿಕೆಗೆ ರಷ್ಯದ ನೆರವನ್ನು ಅಮೇರಿಕ ತಪ್ಪಿಸಿದಾಗ ಸ್ವತಂತ್ರವಾಗಿ ನಿರ್ಮಿಸಿದರಲ್ಲವೆ! ಇಂಥ ನಮ್ಮ ಪ್ರತಿಭಾವಂತ ವಿಜ್ಞಾನಿಗಳು ಬಿ.ಟಿ. ತಂತ್ರಜ್ಞಾನಕ್ಕೆ ಪರ್ಯಾಯ ಕೊಡಬಲ್ಲರೆನಿಸುತ್ತದೆ. ಈ ದೃಷ್ಟಿಯಿಂದ ಈಚಿನ ವರ್ಷಗಳಲ್ಲಿ ನಡೆದಿರುವ ಪ್ರಯತ್ನ ಮುಂದಿನಂತಿದೆ.

ತಂತ್ರಜ್ಞಾನ ವರ್ಗಾವಣೆ ಶುಲ್ಕ ಹಾಗು ಮಾತೃಸಂಸ್ಥೆಗೆ ರಾಯಧನ ನೀಡಬೇಕಾದ ಕಾರಣ ಭಾರತದಲ್ಲಿ ಹತ್ತಿ ಬೀಜದ ಬೆಲೆ ದುಬಾರಿ ಎನ್ನುವ ನೆಪವಿಡುವ ಮಾನ್ಸೆಂಟೋ 450ಗ್ರಾಂ ಕುಲಾಂತರಿ ಬಿಟಿ ಹತ್ತಿಯ ಬೀಜವನ್ನು 1250 ರೂ.ಗಳಿಗೆ ಮಾರಿ ಚೀನಾದಲ್ಲಿ ಕೇವಲ ಅದನ್ನು 45ರೂ. ಗಳಿಗೆ ಮಾರುತ್ತಿರುವುದನ್ನು ಗಮನಿಸಿರುವ ಆಂಧ್ರವು ಮಾನ್ಸಂಟೋ ಕಂಪೆನಿಗೆ ಭಾರತದಲ್ಲಿ ಪೇಟೆಂಟ್ ಹಕ್ಕು ಇಲ್ಲ. ಅಂತಾಗಿ ಅದೂ ಕೂಡಾ ಗರಿಷ್ಠ 750ರೂ. ಬೆಲೆಗೆ ಬೀಜ ಮಾರಬೇಕು ಎಂದು ಸರ್ಕಾರಿ ಆದೇಶ ಹೊರಡಿಸಿತ್ತು. ಆಗ ಕಂಪೆನಿಯು ದಾವೆಹೂಡಲು ಸುಪ್ರಿಂಕೋರ್ಟ್, ಆಂಧ್ರದ ರೈತಹಿತದ ಆದೇಶದಲ್ಲಿ ತಲೆಹಾಕುವುದಿಲ್ಲ ಎಂದದ್ದು ಕಂಪೆನಿಗೆ ಮುಖಭಂಗವಾಯಿತು. ಕರ್ನಾಟಕದಲ್ಲಿ ಆ ಕಂಪೆನಿ ಕುಲಾಂತರಿ ಬಿಟಿ ಕಾಟನ್ ಬೀಜದ ಮುಖಬೆಲೆಯನ್ನು 880ರೂ.ಗಳಿಗೆ ಇಳಿಸಿದರೂ, ಏಳುರಾಜ್ಯಗಳ ಒಕ್ಕೂಟವೂ 750ರೂಗಳ ನಿಗದಿಗೆ ಆಂಧ್ರದಂತೆ ಒತ್ತಾಯಿಸಿತು. ಕರ್ನಾಟಕದಲ್ಲಿ 30 ಸಾವಿರ ಹೆಕ್ಟೇರ್‌ನಲ್ಲಿ ಬಿಟಿ ಬೆಳೆಯಲಾಗುತ್ತಿದೆ. ದುಬಾರಿ ಬೆಲೆಯಲ್ಲದೆ ಕಳಪೆ ಗುಣಮಟ್ಟದ ಬಿಟಿ ಹತ್ತಿ ಬೀಜಗಳ ಮಾರಾಟದ ನಿಯಂತ್ರಣಕ್ಕಾಗಿ ಅಂತಹುವುಗಳನ್ನು ಮುಟ್ಟುಗೋಲು ಹಾಕಿಕೊಳ್ಳುವ ಪ್ರಯತ್ನವೂ ಆಗಲಿರುವ ವಿಷಯ ಸಚಿವರಿಂದ ಘೋಷಿತವಾಯಿತು. ಬಿ.ಟಿ. ಹತ್ತಿ ಬೆಳೆಯುತ್ತಿರುವ ರೈತರಿಗೆ ದ್ವಿತೀಯ ಹಂತದ ಕೀಟ 'ವೈರೈಡ್'ನಿಂದ ಇಳುವರಿ ಕುಸಿದು,

ನಷ್ಟವಾಗುತ್ತಿರುವುದಿದೆ; ಕೀಟನಾಶಕವನ್ನು ಅದಕ್ಕೂ ಕಂಡು ಹಿಡಿಯಲು ರೈತರ ಹಣವೇ ಖರ್ಚಾಗುತ್ತಿದೆ.

ಈವರೆಗೆ ಹತ್ತಿ ಬೆಳೆಗೆ ಬೆಳೆ ವಿಮೆ ಕಡ್ಡಾಯವಾಗಿದ್ದು ಪ್ರತಿ ಹೆಕ್ಟೇರ್‌ಗಳೇ ಶೇ. 15.65ರಷ್ಟು ಪ್ರೀಮಿಯಂ ಕಟ್ಟಬೇಕಿತ್ತು. ಕಳೆದ 3–4 ವರ್ಷಗಳ ಮಳೆ ಪ್ರಮಾಣ, ಬೆಳೆ ವಿಮೆಯಿಂದಾಗಿ ರೈತರಿಗೆ ಅಧಿಕ ಹೊರೆಯಾದ ಕಾರಣ, ಮಳೆಯಾಶ್ರಿತ ಪ್ರದೇಶದ ಹತ್ತಿ ಬೆಳೆಗೆ ವಿಮಾ ಪ್ರಾಪ್ತಿಯಿಂದ ಹೊರಗಟ್ಟಿದ್ದು ರೈತರಿಗೆ ಅಪಾರ ಅನುಕೂಲವಾಯಿತು. ಶೇ. 4ರ ಬಡ್ಡಿದರದ ಸಾಲವೂ ಅನುಕೂಲಿಸಿತು. ಇನ್ನೊಂದು ಪರಿಶೀಲನೆ ಎಂದರೆ, ಕೃಷಿ ವಿಜ್ಞಾನಿಗಳು ಸಂಶೋಧಿಸಿದ ಬಿಟಿ ತಳಿಗಳ ಮಾಹಿತಿ ಪತ್ರಿಕಾ ವರದಿಯಲ್ಲಿರುತ್ತದೆ. ಆದರೆ ರೈತರೊಡನೆ ಚರ್ಚೆ, ಮುಖಾಮುಖಿ, ನಡೆಯದೆ ಬಿಟಿ ಹತ್ತಿ ಪರಿಣಾಮದ ಆರೋಗ್ಯದ ಏರುಪೇರುಗಳ ವಿಷಯ ರೈತರಿಗೆ ತಲುಪದಿರುವುದಾಗಿದೆ ಎಂಬ ಟೀಕೆಯೂ ಬಂದಿದೆ. ಬಿ.ಟಿ. ತಂತ್ರಜ್ಞಾನವನ್ನು ಆರು ಪ್ರಮುಖ ಬದನೆತಳಿಗಳಿಗೆ ಅಳವಡಿಸುವ ಪ್ರಯೋಗವೂ ನಡೆದಿದ್ದು ಕ್ಷೇತ್ರ ಪರೀಕ್ಷೆಗಳಿಗೆ ಮುಕ್ತವಾಗಿದೆ. ತೊಗರಿ, ಟೊಮ್ಯಾಟೋ, ಮೆಣಸಿನಕಾಯಿ ಬೆಳೆಗಳಲ್ಲಿಯೂ ಈ ತಂತ್ರಜ್ಞಾನ ಅಳವಡಿಕೆ ಯಶಸ್ವಿಯಾಗಿ ನಡೆದು ಕೀಟನಾಶಕ ಬಳಕೆ ಗಣನೀಯವಾಗಿ ಇಳಿದಿದೆ ಎನ್ನಲಾಗಿದೆ. ಅಲ್ಲದೆ ಹಂಪಿ ಕನ್ನಡ ವಿಶ್ವವಿದ್ಯಾಲಯವು ದೇಸಿ ಸಂಸ್ಕೃತಿಯ ಸಂರಕ್ಷಣೆಯ ಜಾಡಿನಲ್ಲಿ ಬೀಜ ಸಂರಕ್ಷಣೆಯ ಜಾತ್ರೆ ನಡೆಸಿ ದೇಸಿ ತಳಿ ಅಭಿವೃದ್ಧಿ, ನೆಲಮೂಲ ಜ್ಞಾನದ ದಾಖಲೆ, ರೈತ ಸಂಶೋಧನ ಅನುಷ್ಠಾನ ಕುರಿತೆಲ್ಲ ಚರ್ಚಿಸಿರುವುದು ಸ್ವಾಗತಾರ್ಹ ಪ್ರಯತ್ನವಾಗಿದೆ. 2006ರ ನವೆಂಬರ್ ವರೆಗಿನ ಈ ಎಲ್ಲ ಪ್ರಯತ್ನಗಳನ್ನೂ ಪತ್ರಿಕೆಗಳು ಪ್ರಸಾರ ಮಾಡಿರುವುದು, ರೈತ ಪರ ಕಾಳಜಿಯ, ಕೃಷಿ ಮೌಲ್ಯದ ಸಂಕೇತವಾಗಿದೆ.

**ವಿಷಯ 2:** ಬಿ.ಟಿ. ಬೆಳೆ ಸಂಬಂಧದ ಈಚಿನ ಬೆಳವಣಿಗೆಗಳು

(ಬಿ.ಟಿ. ಬದನೆ; ಬಿ.ಟಿ. ಆಹಾರ ಬೆಳೆ, ಕೇಂದ್ರ ಸಚಿವರು, ಸಾರ್ವಜನಿಕರ ಸಭೆ, ಕೇಂದ್ರದ ತಾತ್ಕಾಲಿಕ ತೀರ್ಮಾನ)

ಭಾರತಮ್ಮ ವೈವಿಧ್ಯಮಯ ಕೃಷಿಗಾರಿಕೆಯ ಮೇಲೆ ಬಹುರಾಷ್ಟ್ರೀಯ ಬೀಜ ಕಂಪನಿಗಳು ತಮ್ಮದೇ ಬೀಜ ಪೂರೈಕೆಯ ಏಕ ಸ್ವಾಮ್ಯವನ್ನು ಹೇರಲು ಪ್ರಯತ್ನಿಸುತ್ತಲೇ ಬಂದಿವೆ. ಎಲ್ಲಕ್ಕೂ ಅಮೆರಿಕೆಯತ್ತ ಮುಖಮಾಡಿಸುವ ಪ್ರಯತ್ನ

ಅವುಗಳದಾಗಿದೆ. ವಿಶೇಷತಃ ಬಿ.ಟಿ. ತಂತ್ರಜ್ಞಾನದಿಂದ ಬಿಟಿ ಬದನೆಯಂಥವು ಸ್ವಸಾಮರ್ಥ್ಯದಿಂದ ಕಾಂಡಕೊರಕ, ಕಾಯಿಕೊರಕ ಹುಳುಗಳನ್ನೆಷ್ಟೆ ನಿಯಂತ್ರಿಸಬಲ್ಲವು. ಇದರ ಕಾಂಡ ತಿಂದರೆ ರೈತಮಿತ್ರ ಎನಿಸಿರುವ ಎರೆ ಹುಳುಗಳೂ ನಾಶವಾಗಬಲ್ಲವು. ಕೀಟಗಳಿಗೆ ಮಾರಕವೆನ್ನುವ ಈ ತಂತ್ರಜ್ಞಾನವು ಮನುಷ್ಯನಿಗೆ ಅಪಾಯಕಾರಿಯಲ್ಲ ಎಂಬುದು ಒಂದು ವಾದವಾಗಿದೆ. ಇನ್ನೊಂದು ವಾದದ ರೀತ್ಯಾ ಮನುಷ್ಯ ಮತ್ತು ಪ್ರಾಣಿಗಳ ದೇಹಕ್ಕೆ ಬಿಟಿ ಪ್ರೊಟೀನ್ ಅನ್ನು ಅರಗಿಸಿಕೊಳ್ಳುವ ಶಕ್ತಿಯೇ ಇಲ್ಲ ಎಂಬ ವಾದವೂ ಇದ್ದು ಸಂಶೋಧನಾ ನಿಖರತೆ ಇಲ್ಲದ ಕೊರತೆ ಕಾಣುತ್ತದೆ. ಈ ಕುಲಾಂತರಿ ಬೀಜಗಳ ಬಗ್ಗೆ ಎಚ್ಚರಗೊಂಡಿರುವ ಬಳಕೆದಾರರು ಇಂದು ಸಾವಯವ ಸಹಜ ಕೃಷಿಯತ್ತ ಹೆಚ್ಚು ಹೆಚ್ಚು ಗಮನ ಕೊಡುತ್ತಿದ್ದಾರೆ. ನಮ್ಮಲ್ಲಿಯ ಆಹಾರ ವೈವಿಧ್ಯವನ್ನೂ ಕುಲಾಂತರಿ ತಂತ್ರಜ್ಞಾನ ನಾಶಮಾಡಿ ಪೇಟೆಂಟ್ ಅನ್ನು ಅಭಿವೃದ್ಧಿ ಸಿದ್ಧಿ ರಾಷ್ಟ್ರಗಳು ಗುತ್ತಿಗೆ ಮಾಡಿಕೊಂಡರೆ ಅಂಥ ಅಪಾಯಕ್ಕೆ ನಾವು ಒಳಗಾಗಬಾರದು. ಗುಲಾಮರಾಗಬಾರದು. ಬಲಿಷ್ಠ ರಾಷ್ಟ್ರಗಳ ಹುನ್ನಾರಕ್ಕೆ ನಾವು ಬಲಿಯಾದರೆ ಕೀಟನಾಶಕಗಳನ್ನು ಒದಗಿಸಿ, ಕೃಷಿಯಲ್ಲಿ ನಮ್ಮ ಸ್ವಾವಲಂಬನೆಯನ್ನು ಕಸಿಯುವಂತಾದರೆ ಪ್ರಯೋಜನವೇನು! ತುತ್ತು ತುತ್ತು ಅವರು ನೀಡುವುದಕ್ಕೆ ನಾವು ಚಾತಕ ಪಕ್ಷಿಗಳಾಗಬೇಕಾಗುತ್ತದೆ. ವಿದೇಶ ಕಂಪನಿಯ ಕುಲಾಂತರಿ ಬೀಜ ದೇಶಿ ಕೃಷಿಗೆ ಕುತ್ತಾಗಬಾರದು. ಇಂಡೋನೇಷಿಯವು ದಶಕಗಳ ಹಿಂದೆಯೇ ಇದರಿಂದ ದೂರವಾಗಿದೆ. ಲ್ಯಾಟಿನ್ ಅಮೆರಿಕದಲ್ಲೂ ತೀವ್ರ ವಿರೋಧ ವ್ಯಕ್ತವಾಗಿದೆ. ನಾಟಿ ತಳಿಯ ಬದನೆ, ಮುಳುಗಾಯಿ, ಹಿತ್ತಲಬದನೆ, ಗುಳ್ಳ ಇತ್ಯಾದಿಗಳ ರುಚಿ ವಿದೇಶಗಳಿಗೆ ತಾಗಿದರೆ ಅವುಗಳಿಗೂ ಪೇಟೆಂಟ್ ಒತ್ತಿಬಿಡುತ್ತವೆ. ಹಸಿವಿನಿಂದ ನರಳಿದರೂ ಅನೇಕ ದೇಶಗಳು (ದಕ್ಷಿಣ ಆಫ್ರಿಕ) ಅಮೇರಿಕದ ಕುಲಾಂತರಿ ಬೀಜೋತ್ಪನ್ನವನ್ನು ತಿರಸ್ಕರಿಸಿದುವು. ಆದರೆ ಅದು ತನ್ನ ಮಾರುಕಟ್ಟೆಯನ್ನು ಬೆಳೆಸಲು ಉಪಾಯಗಳನ್ನು ಬಿಟ್ಟಿಲ್ಲ. ಆರಂಭದ ಎರಡು-ಮೂರು ವರ್ಷ ಉತ್ತಮ ಇಳುವರಿ ಕೊಟ್ಟವು ಎಂದು ಬಿಟಿ ಬೀಜವನ್ನು ಮುಂದುವರಿಸಿದ ಬೆಳೆಯಾಗಿಸಿದಾಗ ಅಧಿಕ ಲಾಭದಾಸೆಯಲ್ಲಿದ್ದ ರೈತರು ತಲೆಯ ಮೇಲೆ ಕೈಹೊತ್ತು ಕುಳಿತುಕೊಂಡ ಸಂದರ್ಭವಾಯಿತು. ಆಲೂಗಡ್ಡೆ, ನೆಲಗಡಲೆ, ಹತ್ತಿ ಬೆಳೆ ಸಂದರ್ಭದಲ್ಲಿ ಇಂಥ ಮೋಸಕ್ಕೆ ಈಡಾದವರುಂಟು. ಯುರೋಪಿಯನ್ ಒಕ್ಕೂಟವೇ ಈ ಬಗೆಗಿನ ಒಪ್ಪಂದವನ್ನು ಕಾದು ನೋಡಿ ಪರಿಶೀಲಿಸಲಿರುವಲ್ಲಿ ಭಾರತದ ಬಲಿಷ್ಠ ರಾಷ್ಟ್ರಗಳ ಒತ್ತಾಯಕ್ಕೆ ಮಣಿಯ ಬಾರದು ಎಂದು ವೀರಭದ್ರಪ್ಪ ಬಿಸ್ಲಳ್ಳಿ ಅವರು ವಾದಿಸುತ್ತಾರೆ. ಸಂಸ್ಕೃತಿಯ ನೆಲೆ ಕಳೆದುಕೊಳ್ಳುವ, ದೈಹಿಕ ಬಾಧೆಗಳಿಗೂ ಈಡಾಗುವ ಸಂದರ್ಭಗಳು

ಇಂಥ ಬೀಜ ಬಳಕೆಯಲ್ಲಿ ಕಾಣಬರುತ್ತಿರುವಲ್ಲಿ ನಮ್ಮ ಎಚ್ಚರ ನಮಗಿರಬೇಕು. ಸ್ವಾರ್ಥಸಾಧಕ ರಾಷ್ಟ್ರಗಳ ಅಮಲುಗಳಿಗೆ ನಾವು ಬೆಲೆ ತೆರುವಂತಾಗಬಾರದು. ನಮ್ಮ ಬಡರೈತರು ಹಿಂದೆ ರೋಗಬಾಧೆ ಇಲ್ಲದೆ ಬದನೆ, ಮೆಣಸಿನಕಾಯಿ ಟೊಮೆಟೋ ಹಲಸಂದೆ ಬೆಳೆದು ಬದುಕಿದರು. ತಂತ್ರಜ್ಞಾನದ ಪ್ರಗತಿಯ ನೆಪದಲ್ಲಿ ಹಾಲು, ಹಣ್ಣು ಕಾಳು ತರಕಾರಿಗಳಲ್ಲಿ ರಾಶಿಗಟ್ಟಲೆ ಬೆಳೆಸುವ ರಾಶಿಬೆಳೆ (monoculture) ಪದ್ಧತಿಯ ಕಾರಣ. ಪ್ರಾಕೃತಿಕ ವೈವಿಧ್ಯತೆ ನಾಶವಾಗಿದೆ. ಅಂತರ್ಜಲ ಕುಸಿದೆ. ಓಜೋನ್ ಪದರ ಛಿದ್ರಗೊಳ್ಳುತ್ತಿದೆ. ಹಸಿರುಮನೆ ಪರಿಣಾಮವಾಗಿ ರೈತರ ಬೆಳೆಗಳ ಮೇಲೆ ಸಸ್ಯರೋಗಗಳು ತಾಂಡವಾಡಿವೆ. ರಾಸಾಯನಿಕ ಕೃಷಿ, ದೇಶಿಯ ಸಂಸ್ಕೃತಿಯನ್ನು ಪೇಲವಗೊಳಿಸಿದೆ. ಬಿಟಿ ಈ ದಿಸೆಯಲ್ಲಿ ಮತ್ತಷ್ಟು ಮೇಜವಾನಿ ನಡೆಸುತ್ತಿದೆ. ಅಂತರಂಗಿಕ ಸಾಮರ್ಥ್ಯದಿಂದ ಗಿಡದ ಆರೋಗ್ಯ ನಿರ್ವಹಿತವಾಗಬೇಕೇ ವಿನಾ ಕೃತಕ ಚುಚ್ಚುಮದ್ದುಗಳಿಂದಲ್ಲ. ಬದನೆಯಲ್ಲೂ ರೋಗನಿರೋಧಕ ಶಕ್ತಿಯ ಹತ್ತಾರು ಕಾಡುಬದನೆರ ತಳಿಗಳನ್ನು ಬಳಸಿಕೊಳ್ಳಬೇಕು ಎಂಬುದು ಪಿ.ಕೆ. ಚಂದ್ರಶೇಖರ್ ಅವರ ವಾದವಾಗಿದೆ. ಬಿ.ಟಿ. ಬದನೆಯ ಕೊಯ್ಲು ಮಾಡಿದ ಮೇಲೆ ಜಾಸ್ತಿ ದಿನ ಉಳಿಯುವುದಿಲ್ಲ. ಅಡುಗೆಯಲ್ಲಿ ಅದರ ರುಚಿಯೂ ಕಾಣುವುದಿಲ್ಲ. ಬೀಜ ಮಾರಾಟದ ಕಂಪನಿಗೆ ಮಾತ್ರ ಲಾಭವಾಗುವುದಾದರೆ ನಮ್ಮ ರೈತರ ಪಾಡು ಏನಾಗಬೇಕು! ಈ ತಂತ್ರಜ್ಞಾನವನ್ನು ಮಾರಿದವರು, ಏಜೆಂಟರು ಉದ್ಧಾರವಾದರೇ ವಿನಃ ರೈತರು ಉದ್ಧಾರವಾದರೆ! ಕುಲಾಂತರಿ ಆಹಾರವನ್ನೇ ಪೇರಿಸಿಟ್ಟಾಗ ಮಾರುಕಟ್ಟೆಯಲ್ಲಿ ಜನತೆ ಅದನ್ನು ವಿಧಿ ಇಲ್ಲದೆ ಕೊಂಡರು. ರೋಗಗಳಿಗೂ ತುತ್ತಾದರು. ಅಮೇರಿಕದಲ್ಲಿ ಇದು ಎದ್ದು ಕಾಣುವ ವಾಸ್ತವವಾಗಿದೆ; ಎಂಬ ಅಭಿಪ್ರಾಯ ಎನ್. ಸದ್ಯೋಜಾತ ಅವರದಾಗಿದೆ (ಜುಲೈ 2009 ವಿ.ಕ); ಕರ್ನಾಟಕ ಸಾವಯವ ಕೃಷಿ ಮಿಷನ್ ಕೂಡ ಬಿಟಿ ತಳಿಗಳ ವಿರುದ್ಧ ಒದಗುವ ಅಪಾಯದ ವಿರುದ್ಧ ಎಚ್ಚರಿಸಲು ರೈತರು, ಗ್ರಾಹಕರು ಹಾಗೂ ವಿಜ್ಞಾನಿಗಳನ್ನೊಳಗೊಂಡ ಕಾರ್ಯಾಗಾರವನ್ನು ಏರ್ಪಡಿಸಲೆತ್ನಿಸಿದೆ. ಕುಲಾಂತರಿ ಅನುಮೋದನಾ ಸಮಿತಿಯು ಬಿಟಿ ಬದನೆಗೆ ಅನುಮೋದನೆ ನೀಡಿರುವ ವಿರುದ್ಧ ಸಾವಯವ ಸಮರಕ್ಕೆ ಸಿದ್ಧಗೊಂಡಿದೆ. ಈ ನಿಟ್ಟಿನಲ್ಲಿ ಎಲ್ಲಾ ಸಂಸದರಿಗೆ ಈ ಬಗ್ಗೆ ಮನವರಿಕೆಯ ಪ್ರಯತ್ನಮಾಡಿದೆ. (16.10.09). ಕಾನ್ಸರ್‌ಕಾರಕ ಕುಪ್ರಸಿದ್ಧಿಯ ಕುಲಾಂತರಿ ಬದನೆತಳಿಗೆ ಜೈವಿಕ ತಂತ್ರಜ್ಞಾನ ನಿಯಂತ್ರಣಾ ಸಂಸ್ಥೆ (ಜಿಇಸಿ) ಸಮ್ಮತಿ ನೀಡಿರುವುದಕ್ಕೆ ಕರ್ನಾಟಕ, ಮಹಾರಾಷ್ಟ್ರ, ತಮಿಳುನಾಡು ಹಾಗೂ ಇತರೆ

ರಾಜ್ಯಗಳ ರೈತ ಸಂಘಟನೆಗಳು ತೀವ್ರ ವಿರೋಧವನ್ನು ವ್ಯಕ್ತಪಡಿಸಿವೆ. ಬಹುರಾಷ್ಟ್ರೀಯ ಕಂಪನಿಗಳು ಭಾರತೀಯ ರೈತರನ್ನೂ ಸುಲಿಗೆ ಮಾಡಲು ಆರಂಭಿಸುತ್ತವೆ ಎಂಬುದು ರೈತ ಸಮುದಾಯದ ಆತಂಕವಾಗಿದೆ.

**ಬಿ.ಟಿ. ಬದನೆ:** ಮಹಾರಾಷ್ಟ್ರದ ಹೈಬ್ರಿಡ್ ಸೀಡ್ಸ್ ಕಂಪನಿ (ಮಹಿಕೋ ಸಂಸ್ಥೆ)ಯು ಅಮೇರಿಕದ ಮಾನ್ಸಾಂಟೊ ಕಂಪನಿಯ ಸಹಭಾಗಿತ್ವವನ್ನು ಈ ತಳಿಯನ್ನು ಅಭಿವೃದ್ಧಿಪಡಿಸಿದೆ. ಧಾರವಾಡದ ಕೃಷಿ ವಿಜ್ಞಾನ ವಿ.ವಿ. ವಾರಣಾಸಿಯ ಭಾರತೀಯ ತರಕಾರಿ ಸಂಶೋಧನಾ ಸಂಸ್ಥೆ ಹಾಗೂ ತಮಿಳುನಾಡಿನ ಕೃಷಿ ವಿಶ್ವವಿದ್ಯಾಲಯ ಈ ಕಾರ್ಯದಲ್ಲಿದ್ದವು. ಇಡೀ ಈ ಯೋಜನೆಗೆ ಅಮೆರಿಕ ಸರ್ಕಾರ ಧನಸಹಾಯ ನೀಡಿದೆ. ಇಂಥ ಸಂದರ್ಭವಾಗಿರುವಲ್ಲಿ ಧಾರವಾಡ ಕೃಷಿ ವಿಶ್ವವಿದ್ಯಾಲಯದ ವಿಜ್ಞಾನಿಗಳು ಜಿಇಸಿಯಿಂದ ಒದಗಿರುವ ಸಮ್ಮತಿಯಿಂದ ಸಂತೋಷಗೊಂಡಿದ್ದಾರೆ. ಅವರ ಸಂಶೋಧನೆಯ ರೀತ್ಯಾ ಬಿಟಿ ಬದನೆ ತಂತ್ರಜ್ಞಾನದ ಫಲಿತವು ಮಾನವನ ಮೇಲೆ ಏನೇ ಅಡ್ಡ ಪರಿಣಾಮ ಉಂಟುಮಾಡುವುದಿಲ್ಲ. ಮಂಜರಿ, ಗೋಟ, ಉಡುಪಿಗುಳ್ಳ, ಮಾಳಾಪುರ ಲೋಕಲ್, ಕುಡಚಿ ಲೋಕಲ್ ರಬಕವಿ ಲೋಕಲ್ ಮತ್ತು ಜಿಓ–112, ಇವು ವಿಶ್ವವಿದ್ಯಾಲಯವು ಅಭಿವೃದ್ಧಿಗೊಳಿಸಿರುವ ತಳಿಗಳು. ಬಿಟಿ ಹತ್ತಿಗೆ ಬಳಸಿದ್ದ ತಂತ್ರಜ್ಞಾನವನ್ನು ಬಿಟಿ ಬದನೆಗೂ ಬಳಸಿದೆ. ಕಾಂಡ ಮತ್ತು ಕಾಯಿಕೊರಕ ನಿವಾರಣೆಯಾಗಿ ಬಿ.ಟಿ.ಪ್ರೋಟಿನ್ ಬಳಸಲಾಗಿದೆ. ಬಿ.ಟಿ. ಪ್ರೋಟೀನ್ ಬಿ.ಟಿ. ಬೆಳೆಗೆ ಕೀಟದ ಉಪದ್ರವವನ್ನು ತಪ್ಪಿಸುತ್ತದೆ. ಬಿ.ಟಿ.ಬೆಳೆಗೆ ಕಡಿಮೆ ಕೀಟನಾಶಕ ಬಳಸಬಹುದು. ಅಂತರ್ಜಲಕ್ಕೆ ಕೀಟನಾಶಕದ ಸೇರ್ಪಡೆ ಕಡಿಮೆ ಆಗುತ್ತದೆ. ಬಿಟಿ ಬದನೆಯ ಗುರಿ ಮತ್ತು ಕಾಂಡಕೊರ ರೋಗವನ್ನು ಹತೋಟಿಗೆ ತರುವುದು. ಈ ಬದನೆ ಕಡಿಮೆ ಬಂಡವಾಳದಿಂದ ಹೆಚ್ಚಿನ ಇಳುವರಿಗು ಅಂದರೆ ಶೇ. 90 ರಷ್ಟು ಪಡೆಯಲನುಕೂಲಿಸುತ್ತದೆ. ಗ್ರಾಹಕರಿಗೆ ಕಡಿಮೆ ಬೆಲೆಯಲ್ಲಿ ಬದನೆ ಲಭ್ಯವಾಗುತ್ತದೆ. ಮೈಸೂರಿನ ಸಿಎಫ್ ಟಿಆರ್ಐ ಹಾಗೂ ರಾಷ್ಟ್ರೀಯ ಪೌಷ್ಠಿಕಾಂಶ ಸಂಸ್ಥೆ ಮಾಡಿದ ಪೌಷ್ಠಿಕಾಂಶ ಪರೀಕ್ಷೆಯಿಂದ ಬಿಟಿ ಹಾಗೂ ಬಿಟಿಯೇತರ ಬದನೆಯ ಪೌಷ್ಠಿಕಾಂಶಗಳಲ್ಲಿ ಯಾವುದೇ ವ್ಯತ್ಯಾಸ ಕಾಣಬಂದಿಲ್ಲ. ಹೀಗಾಗಿ ಕಾನ್ಸರ್ ಬರುವುದೆನ್ನುವುದು ಕೇವಲ ಭಯ–ಭ್ರಮೆ ಎಂಬುದು ಕೃಷಿ ವಿಜ್ಞಾನಿಗಳ ವಾದ.

ಕುಲಾಂತರಿ ಆಹಾರಕ್ಕೆ ಅವಕಾಶ ದೊರೆತರೆ, ಹೀಗೆ ಅನುಮತಿಗಾಗಿ ಕಾಯ್ದಿರುವ ಭತ್ತ, ಜೋಳ ಸೇರಿದಂತೆ ಅರವತ್ತು ಕುಲಾಂತರಿ ತಳಿಗಳಿಗೆ ಪ್ರವೇಶ ನಿರ್ಬಾಧಿತ ಎನ್ನಲಾಗಿದೆ. ಕುಲಾಂತರಿ ಉತ್ಪನ್ನಗಳಲ್ಲಿ ಕ್ಯಾನ್ಸರ್, ಪಾರ್ಕಿನ್‌ಸನ್, ಅಲರ್ಜಿ, ಕರುಳಿನ ತೊಂದರೆ ಉಂಟುಮಾಡುವ ವಿಷಕಾರಿ ವಸ್ತುಗಳಿವೆ. ಕುಲಾಂತರಿ ಬದನೆಯಲ್ಲಿ ಶೇ. 15 ರಷ್ಟು ಕಡಿಮೆ ಕಾಲೊರಿ ಇರುತ್ತದೆ. ರೈತರು ಈ ತಳಿಗೆ ಹೆಚ್ಚಿನ ದರ ತೆರಬೇಕಾಗುತ್ತದೆ ಎಂಬ ಮಾತುಗಳಿಗೆ ಎದುರಾಗಿ ಕೆಲವೊಂದು ಕೀಟಗಳಿಂದ ರಕ್ಷಣೆ ಒದಗುತ್ತದೆ; ಇಳುವರಿಯನ್ನು ಈ ತಳಿ ನೀಡುತ್ತದೆ ಎಂಬ ವಾದವೂ ಇದೆ. ಇಂಥದರ ಬಳಕೆಯ ಸಂದರ್ಭದಲ್ಲಿ ಪರಿಸರ ಮತ್ತು ಆರೋಗ್ಯದ ಮೇಲಿನ ಪರಿಣಾಮಗಳ ಬಗ್ಗೆ ಹೆಚ್ಚಿನ ಅಧ್ಯಯನವಾಗಬೇಕು. ಹೀಗೆ ಉಭಯವಾಗಿ ಪರ, ವಿರೋಧಗಳು ರೈತ ಸಮುದಾಯ ಹಾಗೂ ಕೃಷಿ ವಿಜ್ಞಾನಿಗಳು, ಬಹುರಾಷ್ಟ್ರೀಯ ಕಂಪನಿಗಳ ನಡುವೆ ಕಾಡುವಲ್ಲಿ ಹೆಚ್ಚಿನ ಅಧ್ಯಯನ ಅಗತ್ಯ. ಹಾಗೂ ಲಾಬಿಯ ಕಾರ್ಯ ದೂರವಿರಬೇಕು. ಇಂಥ ಸನ್ನಿವೇಶದಲ್ಲಿ ಈ ತಳಿಯ ಬದನೆಯ ಬಳಕೆಗೆ ಕೇಂದ್ರ ಸರ್ಕಾರ ಅನುಮತಿ ನೀಡುವಲ್ಲಿ ಭಾರತದ ಮಾರುಕಟ್ಟೆಗೆ ಬರುವ ಮೊದಲ ಆಹಾರ ವಸ್ತುವಾಗಬಹುದು. (ಇವೆಲ್ಲ ಅಕ್ಟೋಬರ್ 2009 ವೇಳೆಗೆ ಮುಂದುವರಿದು ಬಂದ ವಿದ್ಯಮಾನಗಳಾಗಿವೆ). ನಿಖರತೆಯು ಈ ದಿಸೆಯಲ್ಲಿ ಇನ್ನೂ ಅತ್ತ ಇತ್ತ ವಾಲುತ್ತಲೇ ಇದೆ ಎನ್ನಬೇಕು. ರೈತ ಸಂಘಟನೆಗಳು ಏಕೆ ಈ ಬಗ್ಗೆ ಚಳವಳಿಯುತ್ತವೆ ವಾಲುತ್ತಿವೆ ಎಂಬುದರ ಪರಿಶೀಲನೆಯೂ ಆಗಬೇಕು.

ಬಿ.ಟಿ. ಸಂಬಂಧದ ವಿವಾದ ಮತ್ತೆ ಗರಿಗೆದರಿತು. ಅದು ಬಿಟಿ ಹತ್ತಿಯ ನಂತರ ಬಿಟಿ ಬದನೆಗೆ ಬೆಳೆದ ವಿರೋಧವು ಕಾರಣವಾಯಿತು. ಬಿ.ಟಿ. ಬದನೆ ಕುಲಾತರಿ ಬದನೆಯೂ ಆರೋಗ್ಯಕ್ಕೆ ಹಾನಿ ಎಂಬುದು ಪ್ರಚುರಗೊಂಡಿತು. ಹೀಗಾಗಿ ಕುಲಾಂತರಿ ಬದನೆ ಬೆಳೆಯುವ ಬಗ್ಗೆ ಕೇಂದ್ರ ಸರ್ಕಾರ ರಾಜ್ಯಗಳ ಸಲಹೆಯನ್ನು ಪಡೆಯಲಾಶಿಸಿತು. ಆದರೆ ರಾಜ್ಯ ಸರ್ಕಾರ ಬಿ.ಟಿ. ಬದನೆಯನ್ನು ತಿರಸ್ಕರಿಸುವ ದಿಟ್ಟ ನಿಲುವನ್ನು ಪ್ರಕಟಿಸಿತು. ಕೇರಳ, ಉತ್ತರಾಂಚಲ, ಮಧ್ಯಪ್ರದೇಶ, ಛತ್ತೀಸ್‌ಗಢ, ಬಿಹಾರ, ಒರಿಸ್ಸಾ ರಾಜ್ಯಗಳು ಬಿಟಿ ಬದನೆಗೆ ವಿರೋಧ ವ್ಯಕ್ತಪಡಿಸಿದುವು. ಪಶ್ಚಿಮ ಬಂಗಾಳ, ತಮಿಳುನಾಡು, ಕರ್ನಾಟಕ ರಾಜ್ಯಗಳು ರೈತರ ಒಪ್ಪಿಗೆ ಇಲ್ಲದೆ ಯಾವುದೇ ನಿರ್ಣಯವಿಲ್ಲ ಎಂದುವು. ಈ ಸಂಬಂಧ ಬಿ.ಟಿ. ಬದನೆ ಬೆಳೆಯಲು ಅನುಮತಿ ಕುರಿತು ದೇಶದ ಏಳು ಪ್ರಮುಖ ಸ್ಥಳಗಳಲ್ಲಿ ಕೇಂದ್ರ ಪರಿಸರ ಸಚಿವಾಲಯ ಸಂವಾದವನ್ನು ಏರ್ಪಡಿಸಿತು. ಸಾರ್ವಜನಿಕ ಅಹವಾಲನ್ನು ಆಲಿಸಲು ಅವಕಾಶ ಮಾಡಲಾಯಿತು.

ರಾಜ್ಯದ ತೋಟಗಾರಿಕಾ ಸಚಿವ ಉಮೇಶ್ ಕತ್ತಿ ಅವರು, ತಿನ್ನುವ ಆಹಾರ, ರೂಪದಲ್ಲಿ ಬಿ.ಟಿ ಬರುತ್ತಿದೆ. ರೈತರ ನಿರ್ಧಾರದಂತೆ ಸರ್ಕಾರ ನಡೆದುಕೊಳ್ಳುತ್ತದೆ ಎಂದು ಹೇಳಿ ನಮ್ಮಲ್ಲಿರುವ ತಳಿಗಳನ್ನೇ ಅಭಿವೃದ್ಧಿಪಡಿಸಿ ಎಂಬ ಸೂಚನೆಯನ್ನು ಇಲಾಖೆಗೆ ನೀಡಿರುವ ಬಗ್ಗೆ ಹೇಳಿದರು. ಈ ಕುಲಾಂತರಿ ಬೆಳೆಯ ವಿವಾದ ಸುಪ್ರೀಂಕೋರ್ಟ್ ಮೆಟ್ಟಿಲನ್ನೂ ಏರಿತು. ಮೊದಲು ನಿಷೇಧ ಹೇರಿದರೂ ಆ ಮೇಲೆ ಷರತ್ತು ಸಹಿತ 2007 ರಲ್ಲಿ ತೆರವುಗೊಳಿಸಿತು. ಶರತ್ತುಗಳು ಪಾಲನೆ ಆಗುತ್ತಿಲ್ಲ ಎಂದು 2008ರಲ್ಲಿ ದಾವೆ ಹೂಡಲಾಯಿತು. ಸಾವಯವ ಕೃಷಿಯಲ್ಲಿ ದಾಪುಗಾಲು ಇಡುತ್ತಿರುವ ಕರ್ನಾಟಕದ ಮೇಲೆ ದೇಶದ ಕೃಷಿ ವಲಯದ ಕಣ್ಣು, ಅದರ ಪ್ರತಿಕ್ರಿಯೆಗಾಗಿ ಕಾದಿದ್ದುವು. ರೈತರು, ಮಹಿಳಾ ಸಂಘಟನೆಗಳು ಕೇಂದ್ರ ಪರಿಸರ ಸಚಿವ ಜೈರಾಂ ರಮೇಶ್ ಸಮಾಲೋಚನೆಗೆ ನಿಂತಾಗ, ದೇಶೀಯ ತಳಿ ಹಾಳು ಮಾಡಬೇಡಿ, ಎಂದು ಪ್ರತಿಭಟನೆಯನ್ನು ವ್ಯಕ್ತಪಡಿಸಿದುವು ಅದಕ್ಕೆ ಸಚಿವರು, ಬಿಟಿ ಬದನೆಯಿಂದ ದೇಶೀಯ ಬೆಳೆಗೆ ಧಕ್ಕೆ, ಎಂಬ ಭೀತಿ ಇದ್ದು ರೈತರು ಮತ್ತು ವಿಜ್ಞಾನಿಗಳ ನಡುವೆ ಸಮನ್ವಯದ ಕೊರತೆ ಇದೆ ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದರು.

ರಾಜಧಾನಿ ಬೆಂಗಳೂರಿನಲ್ಲಿ ಸಮಾನ ಮನಸ್ಕ ಸುಮಾರು 12ಕ್ಕೂ ಹೆಚ್ಚು ಸಂಘಟನೆಗಳು ಬಿಟಿ ಬದನೆ ವಿರುದ್ಧ ಕೇಂದ್ರ ಸರ್ಕಾರಕ್ಕೆ ಮನವರಿಕೆ ಹಾಗೂ ಜನರಲ್ಲಿ ಜಾಗೃತಿ ಮೂಡಿಸುವ ಬಗ್ಗೆ ರಾಜ್ಯ ರೈತ ಸಂಘ ಮುಖ್ಯವಾಗಿ ಸೇರಿ 17.1.2010ರಂದು ಚರ್ಚೆ ನಡೆಸಿದುವು. ಸಾರ್ವಜನಿಕ ಅಹವಾಲು ಕಾರ್ಯಕ್ರಮವು 21.1.2010 ರಂದು ಕೇಂದ್ರ ಸಚಿವ ಜೈರಾಮ್ ನೇತೃತ್ವದಲ್ಲಿ ವಿಜ್ಞಾನಿಗಳು, ತಜ್ಞರು ಸಂಘ ಸಂಸ್ಥೆಗಳ ಪ್ರತಿನಿಧಿಗಳ ಸಭೆ ಏರ್ಪಾಡಾಯಿತು. ಮನುಕುಲಕ್ಕೆ ಅಪಾಯಕಾರಿಯಾದ ತಂತ್ರಜ್ಞಾನವನ್ನು ಕೇಂದ್ರ ಸರ್ಕಾರ ಕೈಬಿಡಬೇಕು ಎಂದು ಅಂದಿನ ಸಭೆಯಲ್ಲಿ ಸಾವಿರಾರು ರೈತರು ಪಾಲ್ಗೊಂಡು ಹೇಳಿದ ಬಗ್ಗೆ ಪತ್ರಿಕಾ ಉವಾಚವಾಗಿತ್ತು. 17ರ ಸಭೆಯಲ್ಲಿ ಪಾಲ್ಗೊಂಡಿದ್ದ ಅರ್ಥಶಾಸ್ತ್ರಜ್ಞ ಪ್ರೊ॥ ಬಿ.ಎಂ. ಕುಮಾರಸ್ವಾಮಿ ಹಾಗೂ ರೈತಸಂಘದ ಕೊಡಿಹಳ್ಳಿ ಚಂದ್ರಶೇಖರ್ ಅವರು ತಮ್ಮ ಅನಿಸಿಕೆಯನ್ನು ಮುಂದಿಟ್ಟದ್ದು ಹೀಗೆ: ಪ್ರಾಣಿಜನ್ಯ ಬ್ಯಾಕ್ಟೀರಿಯಾವನ್ನು ಬದನರೆ ಬೀಜದಲ್ಲಿ ತೂರಿಸಿ, ಇಡೀ ಗಿಡವನ್ನು ವಿಷಯುಕ್ತವಾಗಿಸುವ ಋಣಾತ್ಮಕ ತಂತ್ರಜ್ಞಾನ ಬಿ.ಟಿಯದಾಗಿದೆ; ಈ ಕುಲಾಂತರಿ ಬದನೆಯಿಂದ ಬಹುರಾಷ್ಟ್ರೀಯ ಕಂಪನಿಗೆ ಮಾತ್ರ ಲಾಭ; ಬದನೆಯನ್ನು ರಾಷ್ಟ್ರೀಯ ಸಮಸ್ಯೆ ಎಂದು ಬಿಂಬಿಸಿ ಎರಡು

ಕಂಪನಿಗಳು ದೇಶದೊಳಕ್ಕೆ ಈ ತಳಿಯನ್ನು ನೂಕ್ಕಲು ಸಜ್ಜಾಗಿವೆ. ಮುಂದೆ ಕೋಸು, ಅಕ್ಕಿ, ಗೋಧಿ ಎಲ್ಲಕ್ಕೂ ಬಿ.ಟಿ ದವಾರ ತೆರೆಸುವುದೇ ಕಂಪನಿಗಳ ಹುನ್ನಾರವಾಗಿದೆ. ಈ ಬದನೆಯ ಸರಿಯಾದ ಪ್ರಯೋಗ ನಡೆಸಿಲ್ಲ. ಸುರಕ್ಷಿತತೆಯ ಬಗ್ಗೆ ಸೂಕ್ತ ರೀತಿಯ ತಪಾಸಣೆ ನಡೆದಿಲ್ಲ. ನಮ್ಮಲ್ಲಿಯೆ 2 ಸಾವಿರ ಬದನೆ ತಳಿಗಳಿವೆ. ಕರ್ನಾಟಕದಲ್ಲಿಯೆ 20 ರೀತಿ ಬದನೆ ತಳಿಗಳಿವೆ. ಒರಿಸ್ಸಾ ಪಶ್ಚಿಮ ಬಂಗಾಳದಲ್ಲಿ ಹೆಚ್ಚಾಗಿ ಬದನೆ ಬೆಳೆಯುತ್ತಾರೆ. ಬಿ.ಟಿ. ಬದನೆ ಪಕ್ಕದ ಬದನೆ ಗಿಡಕ್ಕೂ ಪರಾಗ ಪರಡಿ ಅದೂ ಬಿ.ಟಿ. ಬದನೆ ಆಗುವ ಸಂಭವ ಹೆಚ್ಚು. ಬಿ.ಟಿ. ತಂತ್ರಜ್ಞಾನದ್ದು ಪ್ರಯೋಗಶಾಲಯ ಬೀಜವೇ ವಿನಾ ಹೊಲದಲ್ಲಿ ತಯಾರಾದ ಬೀಜವಲ್ಲ. ಬಿಟಿ ಬಂದರೆ ಪ್ರತಿ ಬಾರಿ ಕಂಪನಿ ಮುಂದೆ ಬೀಜಕ್ಕಾಗಿ ಕೈ ಚಾಚಬೇಕು. ಅದು ರೈತನ ಸಾಂಪ್ರದಾಯಿಕ ಹಕ್ಕಿಗೆ ಸಂಚಕಾರ ತಂದಂತಾಗುತ್ತದೆ. ಬಿಟಿ ಬದನೆ. ಹಸಿಬಿಸಿ ಸಂಶೋಧನೆಯಿದ ರೂಪುಗೊಂಡದ್ದು. ಬಿಟಿ ಹತ್ತಿ ಸುರಕ್ಷಿತ ಎಂದಿತ್ತು. ಆದರೆ ಆ ಹತ್ತಿ ಎಲೆ ತಿಂದ ಜಾನುವಾರುಗಳು ಸತ್ತು ಹೋದ ಬಗ್ಗೆ ಮಧ್ಯಪ್ರವೇಶ ಆಂಧ್ರದಲ್ಲಿ ಸಾಕಷ್ಟು ಉದಾಹರಣೆಗಳಿವೆ. ಬಿಟಿಗೂ ರೋಗಬಂದು ಕೀಟನಾಶಕಗಳ ಬಳಕೆ ಹೆಚ್ಚಾಗುತ್ತಿದೆ. ವಿಶ್ವವಿದ್ಯಾಲಯದ ವಿಜ್ಞಾನಿಗಳು ಬಾಯಿ ಬಿಡದಂತೆ ಆಣತಿ ಇರುವಲ್ಲಿ ವಿಷಯ ಗೊತ್ತಿದ್ದೂ ಮೌನಿಗಳಾಗಿದ್ದಾರೆ. ಬದನೆಯೊಂದು ಆಹಾರ ಬೆಳೆ ಅದು ವಿಷದ ಉಣಿಸು ಆಗಬಾರದೆಂದಿರ ಕೇಂದ್ರ ಸಚಿವರ ಮುಂದೆ ಅಹವಾಲು ಸಲ್ಲಿಸಲು ಎಲ್ಲರ ಪಾತ್ರವೂ ಇರಬೇಕು, ಎಂದೆಲ್ಲ ಪ್ರತಿಪಾದನೆ ಇತ್ತು.

ರಾಮನಗರ ಜಿಲ್ಲಾಡಳಿತ, ಸ್ಥಳೀಯವಾಗಿ ಬೆಳೆಯುವ ತಳಿಗಳಲ್ಲಿಯೆ ಹೆಚ್ಚು ಪೌಷ್ಠಿಕಾಂಶವಿರುವಲ್ಲಿ, ರೈತರ ಬೇಡಿಕೆಗನುಗುಣವಾಗಿ ಉತ್ತಮ ತಳಿಯ ಬೀಜಗಳು ಮಾರುಕಟ್ಟೆಯಲ್ಲಿ ಲಭ್ಯವಿರುವಾಗ ಬಿಟಿಬದನೆ ಅವಶ್ಯಕತೆ ಇಲ್ಲ, ಎಂದು ಸರ್ಕಾರಕ್ಕೆ ಬರೆಯುವ ಪತ್ರದಲ್ಲಿ ಮಂಡಿಸಲಾಗುವುದು ಎಂದಿತು. ಮೈಸೂರು ಈರನಗೆರೆ (ಹೀರಲಗೆರೆ) ಬದನೆ ಉತ್ಕೃಷ್ಟವಾದ ರುಚಿ ಇದ್ದು, ಹಾಗೂ ವಿವಿಧ ಸ್ಥಳೀಯ ತಳಿಯ ಬದನೆಗಳಲ್ಲಿ ಪ್ರಚಲಿತವಾಗಿತ್ತು. ರೈತಸಂಘದ ಮುಖಂಡರು ರೈತರ ಹಿತ ಕಾಯುವಲ್ಲಿ ಈ ನಿಲುವು ನಮ್ಮದು ಎಂದಿದ್ದರು.

ಬೆಂಗಳೂರಿನಲ್ಲಿ 19.1.2010 ರಂದು ಕೃಷಿ ತಂತ್ರಜ್ಞನ ಸಂಸ್ಥೆಯಲ್ಲಿ ಬಿಟಿ ಬದನೆ ಸಂಬಂಧ ಆಯೋಜಿಸಿದ್ದ ಸಭೆಯಲ್ಲಿ ಬಿಟಿ ಬದನೆ ಉತ್ತಮ ಎನ್ನಿಸಬಹುದಾದ ಅಂಶವನ್ನು ಹೊಂದಿದೆ ಎಂದು ಸದ್ಯಕ್ಕೆ ತಿಳಿದರೂ 15 ವರ್ಷಗಳ

ಬಳಿಕ ಆದರೆ ದುಷ್ಪರಿಣಾಮ ಅರಿವಿಗೆ ಬರುತ್ತದೆ. ಆ ಹೊತ್ತಿಗೆ ಭೂಮಿ ಸಾಮಾನ್ಯ ಬದನೆಯನ್ನು ಬೆಳೆಯಲಾಗದ ಸ್ಥಿತಿ ತಲುಪಿರುತ್ತದೆ. ಬಿಟಿ ಬದನೆಯನ್ನು ಒಪ್ಪಿಕೊಂಡ ರಾಷ್ಟ್ರಗಳು ಕೇವಲ 20 ಮಾತ್ರ ಇದ್ದು, ಶೇ.90 ರಷ್ಟು ರಾಷ್ಟ್ರಗಳು ತಿರಸ್ಕರಿಸಿವೆ. ನಮ್ಮ ದೇಶದಲ್ಲಿಯೂ ಏಳು ರಾಜ್ಯಗಳು ತಿರಸ್ಕರಿಸಿವೆ. ಬಿಟಿ ಬದನೆಯ ಕೆಟ್ಟ ಪರಿಣಾಮ ಅಮೆರಿಕ ಮತ್ತಿತರ ರಾಷ್ಟ್ರಗಳಲ್ಲಿ ಕಂಡುಬಂದಿದೆ. ಈ ಬಗ್ಗೆ ಜನಜಾಗೃತಿ ಮಾಡಬೇಕಿದೆ, ಎಂಬೆಲ್ಲ ಅಭಿಪ್ರಾಯಗಳು ಸಭೆಯಲ್ಲಿ ವ್ಯಕ್ತವಾದುವು. ಬಿ.ಟಿ. ಹತ್ತಿ ಬಳಿಕ ಬಿಟಿ ಬದನೆ ವಿವಾದಕ್ಕೆ ಈಡಾಗಿದ್ದು, ಪರ ಮತ್ತು ವಿರೋಧ ಅಭಿಪ್ರಾಯ ವ್ಯಕ್ತವಾಗಿರುವಲ್ಲಿ, ರೈತರು, ವಿಜ್ಞಾನಿಗಳು, ಪರಿಸರವಾದಿಗಳು ಸೇವಾಸಂಸ್ಥೆಗಳೊಡನೆ ಚರ್ಚಿಸಿದ ಬಳಿಕ ಅಂತಿಮ ತೀರ್ಮಾನ ಕೈಗೊಳ್ಳುವ ಬಗ್ಗೆ ಮುಖ್ಯಮಂತ್ರಿ ಶ್ರೀ ಬಿ.ಎಸ್. ಯಡಿಯೂರಪ್ಪ ಅವರು ಸಾವಯವ ಕೃಷಿ ಮಿಷನ್‌ನ ಮನವಿಗೆ ತಿಳಿಸಿದ್ದು ವರದಿಗೊಂಡಿದೆ (21.1.2010). ಬಿಟಿ ಬದನೆಯ ಸಾಧಕ ಬಾಧಕಗಳ ಸಮಗ್ರ ಅಧ್ಯಯನ ನಡೆದ ಹೊರತು ರಾಜ್ಯದ ಮಾರುಕಟ್ಟೆಗೆ ಪ್ರವೇಶಿಸಲು ಅನುಮತಿ ನೀಡುವುದಿಲ್ಲ ಎಂದೂ ಈ ಸಂದರ್ಭದಲ್ಲಿ ಸ್ಪಷ್ಟಪಡಿಸಿದರು. ರೈತರಿಗೆ ಅಪಾಯ ಬರುವುದು ದಿಟವಾದರೆ ಬಿ.ಟಿ ಬದನೆ ನಿಷೇಧಿಸಲು ಕೇಂದ್ರ ಹಾಗೂ ರಾಜ್ಯ ಸರ್ಕಾರಗಳು ಮುಂದಾಗಬೇಕು. ರೈತರ ತೋಟದಲ್ಲಿ ಅದನ್ನು ಆರಂಭ ಮಾಡುವ ಮುನ್ನ ಆಳವಾದ ಸಂಶೋಧನೆ ಮಾಡಿ ಕೃಷಿಕರಿಗೆ ಸಾಧಕ–ಬಾಧಕಗಳನ್ನು ಮನವರಿಕೆ ಮಾಡಿಕೊಡಬೇಕು. ಈ ಬಗ್ಗೆ ಕೇಂದ್ರ ಕೃಷಿ ಸಚಿವ ಶರದ್ ಪವಾರ್ ಅವರ ಗಮನಕ್ಕೆ ತಂದಿರುವ ಬಗ್ಗೆ ಮಾಜಿ ಪ್ರಧಾನಿ ಶ್ರೀ ಹೆಚ್.ಡಿ. ದೇವೇಗೌಡರು ತಿಳಿಸಿದರು.

ಬಿ.ಟಿ. ಬದನೆ ಪರವಾಗಿರುವ ವಿಜ್ಞಾನಿ ಅವರು: ವಿರೋಧವಿದ್ದೂ ಹಾಗೂ ಸರ್ಕಾರ ಕೂಡ ಬಿ.ಟಿ ಹತ್ತಿ ಬೀಜಗಳ ಮಾರಾಟಕ್ಕೆ ಅವಕಾಶ ನೀಡದಿದ್ದ ಸಂದರ್ಭದಲ್ಲಿಯೂ ರೈತರು ಬಿಟಿ ಹತ್ತಿ ಬೆಳೆದರು. ಕಾಯಿಕೊರಕ ಹುಳುಗಳ ಕಾಟವಿಲ್ಲದೆ ಇಳುವರಿ ಬಂದು ರೈತರು ಅದನ್ನೇ ಮುಂದುವರಿಸಿದ್ದಾರೆ. ಬಿಟಿ ಬದನೆ ಕುರಿತು ವಸ್ತು ಸ್ಥಿತಿ ಕುರಿತು ಮನವರಿಕೆಯಾದರೆ ರೈತರು ಸಮ್ಮತಿಸಬಹುದು. ಧಾರವಾಡದ ಜೈವಿಕ ಕೃಷಿ ತಂತ್ರಜ್ಞಾನ ಸಂಸ್ಥೆ ಬಿ.ಟಿ ಬದನೆ ಮೇಲೆ ಐದು ವರ್ಷಗಳ ಕಾಲ ಸಂಶೋಧನೆ ನಡೆಸಿದೆ. ವಿಜ್ಞಾನಿಗಳ ವರದಿಯನ್ನು ಪರಿಶೀಲಿಸದೆಯೆ ಆತುರದ ತೀರ್ಮಾನ ಸಲ್ಲ. ಈ ಬದನೆ ಸೇವಿಸಿದ ಮನುಷ್ಯ, ಪ್ರಾಣಿ, ಪರಿಸರದ ಮೇಲೆ ಏನೇ ಪರಿಣಾಮವಿಲ್ಲ. ಕಾಯಿಕೊರಕ ಹುಳುವನ್ನು ಹತೋಟಿ ಮಾಡುವ ಗುಣವನ್ನು ಹೊಂದಿದೆ ಎನ್ನುತ್ತಾರೆ.

ಬದನೆ ಬೆಳೆಯುವಲ್ಲಿ ಎರಡನೇ ಸ್ಥಾನದಲ್ಲಿರುವ ಕರ್ನಾಟಕದಲ್ಲಿ ಹತ್ತಾರು ನಾಟಿ ಹಾಗೂ ಸಂಕಿರಣ ತಳಿಗಳಿವೆ. ಸಾಕಾದಷ್ಟು ಬೆಳೆಯುತ್ತಿರುವಲ್ಲಿ ಕುಲಾಂತರಿ ಬದನೆ ಅಗತ್ಯವಿಲ್ಲ. ಎಷ್ಟೋ ವೇಳೆ ಹೆಚ್ಚು ಬದನೆ ಉತ್ಪಾದನೆಯಾಗಿ, ಬೆಲೆ ಕುಸಿದು ರೈತರು ರಸ್ತೆಗೆ ಸುರಿದು ಪ್ರತಿಭಟನೆ ನಡೆದದ್ದುಂಟು. ಇಂತಿರುವಲ್ಲಿ ಪರಿಸರ ಮಾರಕವಾದ ಬಿಟಿ ಬದನೆ ಬೇಡೇ ಬೇಡ ಎಂದು ರೈತರು ಮತ್ತು ಕೃಷಿ ವಿಜ್ಞಾನಿಗಳು ವಾದಿಸುತ್ತಾರೆ. ಬಿ.ಟಿ. ಬದನೆ ಪ್ರಕೃತಿಗೆ ವಿರುದ್ಧವಾದ ಉತ್ಪಾದನೆ ವಿಜ್ಞಾನವನ್ನು ಅಭಿವೃದ್ಧಿಗೆ ಬದಲು ಮಾನ್ಸಾಂಟೋ ವಾಮಮಾರ್ಗಕ್ಕೆ ಬಳಸುತ್ತಿದೆ. ಬಿಟಿ ಬದನೆ ಸೇವನೆಯಿಂದ ಕಾನ್ಸರ್, ಕರುಳುಬೇನೆ ಮತ್ತಿತರ ಸಮಸ್ಯೆಗೆ ಕಾರಣವಾಗುತ್ತದೆ. ಎಂಬುದು ಸಂಶೋಧನೆಗಳಿಂದ ತಿಳಿದಿದೆ. ಈ ಬದನೆ ಕುರಿ ಮೇಕೆ ಹಾಗೂ ರಾಸುಗಳ ಮೇಲೆ ಅಡ್ಡ ಪರಿಣಾಮವಾಗುತ್ತದೆ. ದಕ್ಷಿಣ ಆಫ್ರಿಕದಲ್ಲಿ 83 ಸಾವಿರ ಎಕರೆ ಪ್ರದೇಶದಲ್ಲಿ ಬೆಳೆ ಹಾಳಾಗಿರುವುದು ದಾಖಲೆಗೊಂಡಿದೆ ಎಂಬುದು ರಾಜ್ಯ ರೈತ ಸಂಘದ ಅಧ್ಯಕ್ಷ ಕೋಡಿಹಳ್ಳಿ ಚಂದ್ರಶೇಖರ್ ಅವರ ಮಾತು. ಕುಲಾಂತರಿ ಬದನೆ ಮಾರುಕಟ್ಟೆ ಪ್ರವೇಶಿಸಿದರೆ ರೈತರ ಮಾರಣ ಹೋಮವಾದೀತು. ಎಂಬುದು ರೈತ ಸಂಘಟನೆಗಳ ಎಚ್ಚರಿಕೆ ಆಗಿತ್ತು. ಹೀಗಾಗಿ ಸರ್ಕಾರ ಬಿಟಿ ಬದನೆಗೆ ನಿರ್ಬಂಧ ಹೇರುವ ತೀರ್ಮಾನಕ್ಕೆ ಬಂದಿತ್ತು. ಈ ತೀರ್ಮಾನಕ್ಕೆ ರೈತರು, ರೈತ ಪರ ಸಂಘಟನೆಗಳು, ಮಾಜಿ ಮುಖ್ಯಮಂತ್ರಿ ಶ್ರೀ ಎಚ್.ಡಿ. ಕುಮಾರಸ್ವಾಮಿ ಅವರಿಂದ ಹಾಗೂ ರಾಜ್ಯದಾದ್ಯಂತ ಬೆಂಬಲ ವ್ಯಕ್ತವಾಗಿತ್ತು. ಹೀಗಾಗಿ ಮಾನ್ಸಾಂಟೋಗೆ ಕರ್ನಾಟಕದಲ್ಲಿ ಹಿನ್ನೆಡೆ ಒದಗಿತ್ತು. ಹೆಚ್ಚು ಬದನೆ ಬೆಳೆಯುವ ಪಶ್ಚಿಮ ಬಂಗಾಳದಲ್ಲಿ ಈ ಬೆಳೆಗೆ ನಿಷೇಧವಿದೆ. ಗುಜರಾತ್, ರಾಜಾಸ್ತಾನ್, ಮಧ್ಯಪ್ರದೇಶ ಸೇರಿದಂತೆ ಎಂಟು ರಾಜ್ಯಗಳಲ್ಲಿ ಬಿ.ಟಿ ಬದನೆ ಪರಿಚಯಿಸುವ ಕಂಪನಿ ಪ್ರಯತ್ನಕ್ಕೆ ವಿರೋಧ ವ್ಯಕ್ತಗೊಂಡಿದೆ. (ವಿ.ಕ. 25.1.10)

ಈ ಅಂಶಗಳನ್ನು ಗಮನಿಸಿದರೆ ಸಂಶೋಧನೆ ಸಮಗ್ರವಾಗದಿರುವಲ್ಲಿ, ಇರುವ ದೇಶೀಯ ತಳಿಗಳೇ ವಿಪುಲವಾಗಿ, ಬೇಡಿಕೆಯನ್ನು ಎಲ್ಲ ಬಗೆಯಲ್ಲಿ ಪೂರೈಸುತ್ತಿರುವಲ್ಲಿ, ಅನ್ಯ ಅನಗತ್ಯ ಬದನೆ ತಳಿಯನ್ನು ಹೇರುವುದರಲ್ಲ ಅರ್ಥವಿಲ್ಲ. ಆದರೆ ಹೊಸತಳಿಯೂ ಪ್ರಯೋಜನಕಾರಿ, ದೇಶೀಯ ತಳಿಗೆ ಬಾಧಕ ತರದಿದ್ದಲ್ಲಿ, ಪ್ರಯೋಗಗಳಿಗೆ ಮತ್ತಷ್ಟು ಒಡ್ಡಿ, ಅಪಾಯ ರಹಿತವೆಂದಾದಲ್ಲಿ ಒಂದು ಹೊಸ ತಳಿ ಎಂದು ಸ್ವಾಗತಿಸಬಹುದೇ ವಿನಾ ಉಳಿದ ತಳಿಗಳನ್ನು ನುಂಗಿ ರೈತರನ್ನು ಕಂಪನಿಯ ಬಾಗಿಲಿನ ಹಂಗಿಗೀಡು ಮಾಡುವುದಾದರೆ ಅಂಥ ತಳಿಯ ಅಗತ್ಯ ಕಾಣುವುದಿಲ್ಲ.

ಬಿ.ಟಿ. ಬದನೆಯ ಅಪಾಯದ ಬಗ್ಗೆ ಕೂಲಂಕಷ ಪರಾಮರ್ಶೆ ಆಗಿ ಅದರ ವರದಿ ತಿಳಿದ ಮೇಲೆ ಸೂಕ್ತವೆಂದು ಕಂಡುಬರುವವರಿವಿಗೆ ವಾಣಿಜ್ಯ ಬೆಳೆ ಎಂದು ಅನು ಮತಿಸದಿರಲು ಕೇಂದ್ರ ಪರಿಸರ ಖಾತೆ ಸಹಾಯಕ ಸಚಿವ ಜೈರಾಮ್ ರಮೇಶ್ ಅವರಿಗೆ ರಾಜ್ಯದ ಮುಖ್ಯಮಂತ್ರಿಗಳು ಪತ್ರ ಬರೆದಿದ್ದರು. ಇನ್ನೊಂದು ಕಡೆ ಕುಲಾಂತರಿ ಬೀಜ ಆಹಾರವನ್ನು ವಿರೋಧಿಸಿ ಬೆಂಗಳೂರು ಮೈಸೂರು, ಹಾವೇರಿಯಲ್ಲಿ ವಿವಿಧ ಸಂಘ ಸಂಸ್ಥೆಗಳು ಪ್ರತಿಭಟನೆ ನಡೆಸಿದುವು. ಹಾವೇರಿಯಲ್ಲಿ ಕುಲಾಂತರಿ ಬೀಜವನ್ನು ನಿಷೇಧಿಸಲು ಆಗ್ರಹಿಸಿ ಸಾವಯವ ಕೃಷಿ ಪರಿವಾರದ ಸದಸ್ಯರು ಉಪವಾಸ ಸತ್ಯಾಗ್ರಹ ನಡೆಸಿದರು. ಕುಲಾಂತರಿ ಬೀಜಗಳಿಂದ ಬೆಳೆದ ಆಹಾರ ಸೇವನೆ ಪ್ರಾಣಹಾನಿಗೆ ಕ್ರಮೇಣ ಅಂಗಾಂಗ ನಿಷ್ಕ್ರಿಯೆಗೆ ಕಾರಣವಾಗುತ್ತದೆ ಎಂಬ ವರದಿ ಇರುವ ಬಗ್ಗೆ ಅವರು ಹೇಳಿದರು.

ಬಿ.ಟಿ. ಬದನೆ ನಿಷೇಧಕ್ಕೆ ವಿವಿಧ ಸಂಘಟನೆಗಳು ಒತ್ತಾಯ ಹಾಕಿದವು ಹಾಗೂ ಪ್ರತಿಭಟನೆ ಮಾಡಿದುವು. ದೇಶದ ಆಹಾರ ಕ್ಷೇತ್ರನ್ನು ವಶಕ್ಕೆ ತೆಗೆದುಕೊಳ್ಳಲು ಸಾಮ್ರಾಜ್ಯಶಾಹಿ ಶಕ್ತಿಗಳು ರೂಪಿಸಿರುವ ಹುನ್ನಾರವೆ ಕುಲಾಂತರಿ ತಳಿಗಳು ಎಂಬುದು ಕುಲಾಂತರಿ ಮುಕ್ತ ಕರ್ನಾಟಕ ಮೈತ್ರಿಕೂಟದ ಆಶ್ರಯದಲ್ಲಿ ಗ್ರೀನ್‌ಪೀಸ್, ಸಹಜ ಸಮೃದ್ಧ, ಅನ್ನದಾನ ಸಂಸ್ಥೆ, ರಾಜ್ಯ ರೈತಸಂಘ, ಇಕ್ರಾ ಇತ್ಯಾದಿ ಸಂಘಟನೆಗಳ ಸದಸ್ಯರ ವಾದವಾಗಿತ್ತು. ಕಾರ್ಪೋರೇಟ್ ಶಕ್ತಿಗಳ ವಶಕ್ಕೆ ಕೃಷಿ ಕ್ಷೇತ್ರವನ್ನು ಒಪ್ಪಿಸುವುದು ಸಲ್ಲ ಎಂಬ ಕಳಕಳಿ ತೋರಿದ ಅವರು, ಬಿಟಿ ಬದನೆ ನಿಷೇಧಿಸಬೇಕೆದು ಒತ್ತಾಯಿಸಿ ಎಂ.ಜಿ. ರಸ್ತೆಯ ಮಹಾತ್ಮಗಾಂಧಿ ಪ್ರತಿಮೆ ಎದುರು 30.1.2010 ರಂದು ಪ್ರತಿಭಟನೆ ನಡೆಸಿದರು. ಈ ನಡುವೆ ಹೈಬ್ರಿಡ್ ತಳಿ ಟೊಮೆಟೋ ಒಂದು ಕಾಲಕ್ಕೆ ಸಹ್ಯವಲ್ಲ ಎನಿಸಿದ್ದು ಇಂದು ಅದೇ ನಮ್ಮ ಬಳಕೆಯದಾಗಿದೆ. ಆರೋಗ್ಯದ ದೃಷ್ಟಿಯಿಂದ ಅದು ಹೆಚ್ಚು ಉಪಯುಕ್ತ ಎಂದು ಇನ್ನೂ ದೃಢಪಟ್ಟಿಲ್ಲ. ಹೀಗೆಯೇ ಅನುಮಾನಕ್ಕೀಡಾಗಿರುವ ಬಿಟಿ ಬದನೆ ತಂತ್ರಜ್ಞಾನದ ಬಗ್ಗೆ ಏನೊಂದು ತಿಳಿಯದ ಬಹುಸಂಖ್ಯಾತರು ಖರೀದಿ ಮಾಡುತ್ತಾರೆ. ಅವರಿಗೆ ರುಚಿ, ಸುಲಭ ಬೆಲೆ ಮುಖ್ಯ, ಜಾಗೃತ ಬಳಕೆದಾರ ವಿಜ್ಞಾನಿಗಳನ್ನೂ ಅವರ ವರದಿಗಳನ್ನು ನಂಬುವುದು ಹೆಚ್ಚು. ಅಂತಲ್ಲಿ ಪ್ರಾಮಾಣಿಕ ವಿಜ್ಞಾನಿಯ ವರದಿಯಾದರೆ ನೈತಿಕ ಸಂವಹನವಾಗುತ್ತದೆ. ಜಲಸಂವರ್ಧನೆ, ಸುಜಲಧಾರಾ ಇತ್ಯಾದಿ ಯೋಜನೆಗಳನ್ನು ಪ್ರಾಮಾಣಿಕವಾಗಿ ಸರ್ಕಾರ ಜಾರಿಗೆ ತಂದರೆ ದಟ್ಟ ಹಸಿರು ಸೃಷ್ಟಿಯಾಗುತ್ತದೆ. ಆಗ ಭೂಮಿಯ ಶಕ್ತಿ ಹೆಚ್ಚಿ ಕ್ರಿಮಿಕೀಟಗಳಿಗೆ ನಿರೋಧ ಬೆಳೆಯುತ್ತದೆ. ಕೀಟನಾಶಕಗಳ ಬಗ್ಗೆ

ಯೋಚಿಸಬೇಕಾಗುತ್ತದೆ. ಇಂಥ ಸನ್ನಿವೇಶ ಬೆಳೆಸುವ ಬದಲು, ಶಂಕೆಗೀಡಾಗಿರುವ, ದೀರ್ಘಕಾಲೀನ ದುಷ್ಪರಿಣಾಮಗಳು ಇನ್ನೂ ಗೊತ್ತಿಲ್ಲದಿರುವ ಬಿಟಿ ಬದನೆ ಇತ್ಯಾದಿಗಳ ಬಳಕೆ ಬಗ್ಗೆ ಮುಂದಾಗುವುದು ಸೂಕ್ತ ವೆನಿಸುವುದಿಲ್ಲ; ನಿರ್ದಿಷ್ಟ ಕಾಲಾವಧಿ ಸೂಚಿಸಿ ಆ ಅವಧಿ ಪರೀಕ್ಷೆಯವರೆಗೂ ಬಿಟಿಗೆ ಅನುಮತಿ ಇಲ್ಲ ಎಂಬುದು ಸರ್ಕಾರ ಸೂಚಿವುದೊಳಿತು. ಎಂಬ ಅಭಿಪ್ರಾಯವನ್ನು ಸಾಗರದ ಬಳಕೆದಾರರ ವೇದಿಕೆಯ ಶ್ರೀ ಮಾ.ವೆಂ.ಪ್ರಸಾದ ಅವರು ವ್ಯಕ್ತ ಮಾಡಿದ್ದಾರೆ. (ಪ.ಪ:1.2.2010) ಕೇಂದ್ರ ಕೃಷಿ ಸಚಿವ ಶರದ್ ಪವಾರ್ ಬಿ.ಟಿ. ಬದನೆ ಬೇಕು ಎಂದ ಕಾರಣ ಕೃಷಿ ಸಚಿವಾಲಯವೂ ಅದೇ ನಿಲುವು ತಳೆದಿತ್ತು. ದೇಶಾದ್ಯಂತ ಬಿ.ಟಿ. ಬದನೆ ವಿರುದ್ಧ ಜನಾಂದೋಲನ ನಡೆಯುತ್ತಿರುವಲ್ಲಿ ಅದಕ್ಕೆ ವಿದೇಶಗಳೂ ಬೆಂಬಲ ಸೂಚಿಸಿವೆ ಬಿ.ಟಿ. ಬದನೆಯು ಫ್ರಾನ್ಸ್ ವಿಜ್ಞಾನಿ ಗಿಲ್ಸ್ ಸ್ಯಾಲನಿ ಅವರ ರೀತ್ಯಾ ಮಾನಸಿಕ ಸ್ವಾಸ್ಥ್ಯಕ್ಕೆ ಅದು ಮಾರಕ ಎಂದಾಗಿದೆ.

ದೇಶದಲ್ಲಿ ಒಟ್ಟು 41 ಉತ್ಪನ್ನಗಳು ಕುಲಾಂತರಿ ತಂತ್ರಜ್ಞಾನದಿಂದ ಬರುವ ಸಂಭವದಲ್ಲಿ ಕರ್ನಾಟಕದಲ್ಲಿ ಅವುಗಳ ಪೈಕಿ 20 ಉತ್ಪನ್ನಗಳಿವೆ. ಬಿಟಿ ಬದನೆ ಕತೆ ಒಂದೆಡೆಯಾದರೆ ಬಿಟಿ ಅಕ್ಕಿ (ಗೋಲ್ಡನ್ ರೈಸ್), ಬೂಸ್ಟ್ ಹಿಡಿಯದ ಅಕ್ಕಿ, ತೊಗರಿ, ಹೂಕೋಸು ಕ್ಯಾರೆಟ್, ಪರಂಗಿ, ಟೊಮೇಟೊ, ಮೆಕ್ಕೆಜೋಳ, ಮೂಲಂಗಿ, ಅರಿಷಿಣ, ಎಲೆಕೋಸು, ಕಾಫಿ, ಮೆಣಸಿನಕಾಯಿ, ಕಲ್ಲಂಗಡಿ, ನಿಂಬೆ, ಯಿಸ್ಟ್, ಹರಳೆ, ನೆಲಗಡಲೆ, ಈರುಳ್ಳಿ ಇತ್ಯಾದಿ 19 ಕುಲಾಂತರಿ ತಳಿಗಳು ಸಂಶೋಧನೆಯ ಕೊನೆಯ ಘಟ್ಟದಲ್ಲಿ ಇನ್ನೊಂದೆಡೆ ನಿಂತಿವೆ. ಬಿಟಿ ಬದನೆಗೆ ಅನುಮತಿ ಸಿಕ್ಕಿದರೆ ಇವೆಲ್ಲಕ್ಕೂ ರಾಜಮಾರ್ಗ ಲಭ್ಯವಾಗುತ್ತದೆ. ಸದ್ಯಬಳಸುತ್ತಿರುವ ಅಕ್ಕಿಯಲ್ಲಿಲ್ಲದ 'ಎ' ಅನ್ನಾಂಗ ಬಿಟಿ ಅಕ್ಕಿಯಲ್ಲಿದ್ದು ಆರೋಗ್ಯಕ್ಕೆ ಅಗತ್ಯವಾಗಿದೆ. ಉತ್ತರ ಕರ್ನಾಟಕದ ರೈತರಿಗೆ ಕೆಡದ ಗುಣ ಹೊಂದಿರುವ ಬೂಸ್ಟ್ ಹಿಡಿಯದ ಅಕ್ಕಿ ವರವೆನಿಸುತ್ತದೆ. ಶೇ 100 ರಷ್ಟು ವೈರಸ್ ಫ್ರೀ ಆದ ಬಿಟಿ ತರಕಾರಿಗಳಿರುತ್ತವೆ ಎಂಬುದು ಜಾಹೀರಾತುಗಳಿಂದಲೂ ಹರಡಿರುವ ವಿಷಯವಾಗಿದೆ, ಎಂದೆಲ್ಲ ಸಂಶೋಧನೆ ವಲಯದಲ್ಲಿ ಪ್ರಚಲಿತಗೊಳಿಸಿರುವ ಮಾತುಗಳಾಗಿದ್ದವು. ಆದರೆ ರೈತ ವಲಯವು, ಹೀಗೆ ವಿವಿಧ ಬಿಟಿ ಉತ್ಪನ್ನಗಳೇ ಆಕ್ರಮಿಸಿದರೆ ರೈತರ ತಲೆಯ ಮೇಲೆ ಚಪ್ಪಡಿ ಎಳೆದಂತಾಗುತ್ತದೆ; ಕೇಂದ್ರ ಸರ್ಕಾರ ರೈತರ ಮನವಿಗೆ ಬೆಲೆಕೊಡದಿದ್ದರೆ ರಾಷ್ಟ್ರದಾದ್ಯಂತ ರೈತ ಚಳವಳಿ ನಡೆಯುತ್ತದೆ ಎಂದಿತು. ಕೃಷಿಕರನ್ನು ಮುಗಿಸುವ ಸಂಚು ಎಂಬ ಅಭಿಪ್ರಾಯವೂ ಆ ವಲಯದಲ್ಲಿತ್ತು. ಈ ನಡುವೆ ಬಿಟಿ ಬದನೆ

ಕುರಿತಂತೆ ಕೇರಳದಲ್ಲಿ ನಡೆದ ರಾಜ್ಯ ಸರ್ಕಾರಗಳ ಸಚಿವರ ಸಮಾವೇಶದಲ್ಲಿ ಮಿಜೋರಾಂ, ಕೇರಳ, ತಮಿಳುನಾಡು, ಒರಿಸ್ಸಾ, ಆಂಧ್ರಪ್ರದೇಶ, ಬಿಹಾರ್, ಛತ್ತೀಸ್‌ಗಢ, ಮಧ್ಯಪ್ರವೇಶ, ಪಂಜಾಬ್, ರಾಜಾಸ್ಥಾನ ಇತ್ಯಾದಿ 10 ರಾಜ್ಯಗಳು ಏಕ ಧ್ವನಿಯಿಂದ ಬಿಟಿ ಬದನೆ ಸಹಿತ ಎಲ್ಲಾ ಕುಲಾಂತರಿ ಆಹಾರಗಳಿಗೆ ವಿರೋಧವನ್ನು ವ್ಯಕ್ತಪಡಿಸಿ ಜಂಟಿ ಘೋಷಣೆಯನ್ನು ಮಾಡಿದುವು. ಆಂಧ್ರ, ಪಂಜಾಬ್‌ನ ಕೃಷಿ ಸಚಿವರು ಬಿ.ಟಿ. ಹತ್ತಿಯ ಬಗ್ಗೆ ಸಭೆಗೆ ಮನವರಿಕೆ ಮಾಡಿಕೊಟ್ಟು ಆ ಉತ್ಪನ್ನಕ್ಕೆ ವಿರೋಧ ವ್ಯಕ್ತಪಡಿಸಿದವರು. ಕೃಷಿ ಉತ್ಪನ್ನ ಬೀಜಕ್ಕೆ ವಿದೇಶಗಳಿಗೆ ಶರಣಾಗಬೇಕಾದ ಸಂದರ್ಭದ ಬಗ್ಗೆ ಕೇರಳದ ಜೈವಿಕ ವೈವಿಧ್ಯ ಮಂಡಳಿಯ ಅಧ್ಯಕ್ಷ ವಿ.ಎಸ್. ವಿಜಯನ್ ತಿಳಿಸಿದರು. ಈ ಸಮಾವೇಶದಲ್ಲಿ ಕರ್ನಾಟಕ, ಅನ್ಯ ಕಾರ್ಯನಿಮಿತ್ತ ಭಾಗವಹಿಸಲಾಗಲಿಲ್ಲ ಎಂದು ಹೇಳಿಕೊಂಡಿತ್ತು. (5.2.10)

ಕೇಂದ್ರ ಪರಿಸರ ಸಚಿವ ಜೈರಾಮ್ ರಮೇಶ್ ರಾಷ್ಟ್ರಾದ್ಯಂತ ಕುಲಾಂತರಿ ಬದನೆ ಬಗ್ಗೆ ಜನಾಭಿಪ್ರಾಯ ಸಂಗ್ರಹಿಸುತ್ತಿದ್ದಂತೆ, ಕೆಲವು ಸುದ್ದಿ ಮಾಧ್ಯಮಗಳೂ ಈ ದಿಸೆಯಲ್ಲಿ ಹೀಗೆಯೇ ಪ್ರವೃತ್ತವಾದುವು. **ಜನಾಭಿಪ್ರಾಯದಲ್ಲಿ:** ದೇಶದಲ್ಲಿ ನಾನಾ ಬಗೆಯ ನಾಟಿ ಬದನೆಗಳಿದ್ದು ಬಿಟಿ ಬದನೆಗಿಂತ ರುಚಿಕರವಾಗಿರುವಲ್ಲಿ ಕುಲಾಂತರಿಗೆ ಒತ್ತುಗೊಡುವುದು ಸರಿಯಲ್ಲ; ಬಿಟಿ ಪರವಾಗಿ ಉದ್ಯೋಗಿ ವಿಜ್ಞಾನಿಗಳು, ಅಧಿಕಾರಿಗಳು, ಬಹುರಾಷ್ಟ್ರೀಯ ಕಂಪನಿಗಳ ವಕ್ತಾರರು ಇದ್ದರೆ, ವಿರೋಧವಾಗಿ ರೈತರು ಮತ್ತು ಗ್ರಾಹಕರು ಇದ್ದಾರೆ. ಬಿಟಿಯು ಸ್ವದೇಶಿ ತಂತ್ರಜ್ಞಾನ ಎನ್ನುವ ವಿಜ್ಞಾನಿಗಳು, ಬಿಟಿ ಬೀಜಗಳನ್ನು ಮಾನ್ಸಾಂಟೋದಂಥ ವಿದೇಶ ಕಂಪನಿಗಳೇ ಏಕೆ ಹಕ್ಕುಪಡೆದಿವೆ? ಮಾನ್ಸಾಂಟೋ ಸಹಭಾಗಿತ್ವದೊಂದಿಗೆ ಬಿಟಿ ತಂತ್ರಜ್ಞಾನವನ್ನು ಭಾರತಕ್ಕೆ ತಿಳಿಸಲೆಳಸಿರುವ ಭಾರತೀಯ ಮಹಿಕೋ ಕಂಪನಿಯ ಪ್ರತಿ ಶತ 26 ಶೇರುಗಳನ್ನು ಮಾನ್ಸಾಂಟೊ ಹೊಂದಿರುವ ಬಗ್ಗೆ ಇವರು ಮೌನವಾಗಿರುವುದೇಕೆ? ಅಂತಾಗಿ ಬೆಳೆಯುವವರಿಗೆ, ತಿನ್ನುವವರಿಗೆ ಬೇಡವೆನಿಸಿದ ಮೇಲೆ ಹೇರುವುದೇಕೆ?; ಸ್ವಂತ ಕೃಷಿ ಬೆಳೆಯನ್ನು ಅನುಸರಿಸಬೇಕಾದ ಮಧ್ಯೆ ಬಿಟಿ ಬದನೆ ಒತ್ತಡ ಹೇರುವುದು ಸರಿಯಲ್ಲ; ಸಾವಯವ ಕೃಷಿ ಪದ್ಧತಿಯನ್ನು ಅಳವಡಿಸಿಕೊಂಡು ಜವಾರಿ ತಳಿಗಳನ್ನು ಬಳಸಿ ಬೆಳೆಯಬೇಕು. ವಿದೇಶ ತಳಿ ಪ್ರಯೋಗಕ್ಕೆ ನಾವೇಕೆ ಬಲಿಪಶುಗಳಾಗಬೇಕು!; ಸರ್ಕಾರ ಮತ್ತು ವಿಜ್ಞಾನಿಗಳ ರೈತರ ಮೇಲೆ ನಿಜವಾದ ಕಾಳಜಿ ತೋರಿ ದೇಶೀಯ ತಳಿಗಳನ್ನು ಅಭಿವೃದ್ಧಿಪಡಿಸಲಿ.

ಅಡಿಕೆ, ತೆಂಗು, ಕಬ್ಬು ಇತ್ಯಾದಿ ಬೆಳೆಗಳು ರೈತನನ್ನು ಸಾಕುವಂಥವು. ಅವಕ್ಕೆ ಉತ್ತಮ ಬೆಲೆ ಕೊಡಿ ಎಂಬ ರೈತನ ಬೇಡಿಕೆಗೆ ಬೆಲೆ ಇಲ್ಲ. ದ್ರಾಕ್ಷಿ, ಟೊಮೆಟೋ, ಆಲೂಗಡ್ಡೆ ದರಗಳು ಕುಸಿದಾಗ ಬೀದಿಗೆ ಚೆಲ್ಲಿ ರೈತ ತಲೆ ಮೇಲೆ ಕೈ ಹೊತ್ತು ಕುಳಿತಾಗ ಯಾವ ಇಲಾಖೆಗಳೂ ಅವನ ಆಸರೆಗೆ ಬರಲಿಲ್ಲ. ಅಂದರೆ ಕೇಳಿದ್ದನ್ನು ದೊರೆಗಳು ಕೊಡದೆ, ಕೇಳದೆ ಇದ್ದಂಥ ಬಿಟಿ ಬದನೆಯನ್ನು ಬಲವಂತದಿಂದ ಏಕೆ ತುರುಕಬೇಕು! ರೈತನೇನು ಅಭಿವೃದ್ಧಿಗೆ ಅಡ್ಡ ನಿಂತಿಲ್ಲ. ಸಂಶೋಧನೆಗಳು ಲ್ಯಾಬ್ ಟು ಲ್ಯಾಂಡ್ ಆಗಬೇಕು ರೈತರ ಹೊಲದಲ್ಲಿಯೆ ಪ್ರಾತ್ಯಾಕ್ಷಿಕೆ ನಡೆದು ವ್ಯವಹಾರ ಪಾರದರ್ಶಕವಿದ್ದಾಗ ರೈತರಿಗೆ ನಂಬಿಕೆ ಬರುತ್ತದೆ ಎಂಬುದು ಶ್ರೀ ನಾ ಕಾರಂತ ಪೆರಾಜೆ ಅವರ ಅಭಿಪ್ರಾಯ (5.2.2010)

ಬಿಟಿ ತಳಿಗಳ ಕಾರಣ ಸ್ಥಳೀಯ ನಾಟಿ ತಳಿಗಳು ನಾಶವಾಗುವ ಅಪಾಯವಿದೆ. ಬಿಟಿ ಹತ್ತಿ ಬೆಳೆದ ಅನೇಕ ರೈತರು ಆತ್ಮಹತ್ಯೆಗೆ ಶರಣಾಗಿದ್ದಾರೆ. ಬಹುರಾಷ್ಟ್ರೀಯ ಕಂಪನಿಗಳು ಎಲ್ಲ ತರಕಾರಿ ಹಾಗೂ ಆಹಾರ ಬೆಳೆಗಳ ಮೇಲೆ ಏಕಸ್ವಾಮ್ಯತೆ ಸಾಧಿಸುವ ಹುನ್ನಾರವಿಲ್ಲದೆ. ಬಿಟಿ ಬೆಳೆಗಳು ಹಾನಿಕಾರಕ ಕೀಟಗಳಿಗೆ ಶಾಶ್ವತ ಪರಿಹಾರ ನೀಡುವುದಿಲ್ಲ. ಬಿ.ಟಿ.ಜೀನ್‌ಗಳನ್ನು ನಿಸರ್ಗ ಸಹಜವಾಗಿ ಬೆಳೆದ ಹತ್ತಿ, ಬದನೆಗಳಿಗೆ ಬಳಸುವುದರಿಂದ ಭವಿಷ್ಯದಲ್ಲಿ ಜೀವ ವಿಜ್ಞಾನದ ಸಮುದಾಯದ ಮೇಲೆ ಖಂಡಿತವಾಗಿ ಗಂಭೀರವಾದ ಅಡ್ಡ ಪರಿಣಾಮವನ್ನು ಬೀರುತ್ತದೆ ಎಂಬುದು ಖ್ಯಾತ ಪರಿಸರ ವಿಜ್ಞಾನಿ ಮಾಧವ ಗಾಡ್ಗಿಲ್ ಅವರ ಅಭಿಪ್ರಾಯವಾಗಿತ್ತು (6.2.2010); ಕುಲಾಂತರಿ ತಳಿಗಳನ್ನು ಬೆಳೆದರೆ ಸಾವಯವ ಕೃಷಿಗೆ ಪೆಟ್ಟು ಬೀಳುತ್ತದೆ. ರೈತರಿಗೆ ಸಾವಯವ ಸರ್ಟಿಫಿಕೇಷನ್ ದೊರೆಯುವುದಿಲ್ಲ; ದಿಲ್ಲಿಯ ಭಾರತೀಯ ಕೃಷಿ ಸಂಶೋಧನಾ ಸಂಸ್ಥೆ ದೇಸೀಯ ಮತ್ತು ಸಾಂಪ್ರದಾಯಿಕ 130 ಕೃಷಿ ತಂತ್ರಜ್ಞಾನಗಳ ಕುರಿತು ಅಧ್ಯಯನ ಮಾಡಿರುವಲ್ಲಿ 80 ಸಾಂಪ್ರದಾಯಿಕ ಕೃಷಿ ತಂತ್ರಜ್ಞಾನ ವೈಜ್ಞಾನಿಕವಾಗಿ ಸಮ್ಮತಿಗೊಂಡಿದೆ. ಇದರಲ್ಲಿ ಬದನೆ ಮತ್ತು ಕಾಂಡಕೊರಕ ನಿಯಂತ್ರಿಸುವ ತಂತ್ರಜ್ಞಾನವೂ ಇರುವಲ್ಲಿ ಬಿಟಿ ತಂತ್ರಜ್ಞಾನಕ್ಕೆ ಒತ್ತು ಏಕೆ? ಸ್ಥಾನಿಕವಾಗಿ ಹೆಸರುಗೊಂಡಿರುವ ಮು[illegible] ಬದನೆ, ಈರನಗೆ[illegible] ಮುಟ್ಟುಗುಳ್ಳ ಬದನೆ ಮುಂತಾದವು ಇರುವಾಗ ಬದನೆಗೆ ತಳಿತಂತ್ರಜ್ಞಾ[illegible] ಕೇವಲ ಕಾಂಡಕೊರಕದ ಹಾವಳಿ ತಡೆಗೆ ಬಿಟಿ ಬೇಕಾಗಿಲ್ಲ. [illegible] ಹೊಸರೋಗಗಳು. ತಾಪಮಾನ ಬದಲಾವಣೆ, ಮಳೆಂ[illegible] ಸಮಸ್ಯೆಗಳಿರುವಾಗ, ಯಾರನ್ನು ಕೇಳಿ, ಯಾರಿಗಾಗಿ ಈ ಬದನೆ ರೂಪು[illegible]ಂಡಿದೆ

ಎಂಬುದು ತಿಳಿದಿಲ್ಲ; ಇಂದು ಬಿಟಿ ಹತ್ತಿಗೂ ರೋಗಬಂದಿದೆ. ಹೊಸ ಪ್ರಕಾರದ ರೋಗಗಳು ಹುಟ್ಟಿಕೊಂಡು ರೈತರಿಗೆ ಸವಾಲೊಡ್ಡಿವೆ. ಕುಲಾಂತರಿ ಹತ್ತಿ ಬೀಜಕ್ಕಾಗಿ ಹೆಚ್ಚಿನ ಹಣ ನೀಡಿದ್ದ ರೈತರು ನಂತರ ಬಂದ ರೋಗ ನಿಯಂತ್ರಣಕ್ಕೂ ಹೆಚ್ಚಿನ ಹಣ ಖರ್ಚು ಮಾಡುವಂತಾಗಿ, ಲಾಭದ ಬದಲಿಗೆ ನಷ್ಟದ ಹಾದಿಯಲ್ಲಿದ್ದಾರೆ. ಹಿರೆಕೆರೂರು ತಾ. ಗ್ರಾಮವೊಂದರಲ್ಲಿ ಬಿಟಿ ಹತ್ತಿ ಬೆಳೆದ ಜಮೀನಿನಲ್ಲಿ ಬಿತ್ತಿದ ಮೆಣಸಿನ ಬೆಳೆಗೆ ಹೊಸ ರೋಗದ ಲಕ್ಷಣಗಳು ಕಂಡು ಬಂದಿವೆ. ಬಿಟಿ ಹತ್ತಿಯ ಉತ್ಪನ್ನಗಳನ್ನು ನೇರವಾಗಿ ದೇಹಕ್ಕೆ ಸೇವಿಸುವುದಿಲ್ಲ, ಸರಿ. ಆದರೆ ಬಿಟಿ ಬದನೆ ಬೆಳೆ ಉತ್ಪನ್ನವನ್ನು ಜನತೆ ನೇರವಾಗಿ ಸೇವಿಸುವಲ್ಲಿ ಹೊಸ ಬಗೆಯ ರೋಗಗಳು ಬರಬಹುದು; ಕುಲಾಂತರಿ ತಳಿಗಳಿಂದ ಆರ್ಥಿಕ ಲಾಭವಾಗಬಹುದು. ವಿಷಾಹಾರ ಸೇವನೆ ಆ ಲಾಭವನ್ನೆಲ್ಲ ಮುಂದೆ ನುಂಗಿಬಿಡುತ್ತದೆ. ಅದು ಬದುಕಿಗೇ ಹಾನಿ ತರಬಹುದು; ಆರ್ಥಿಕ ಮತ್ತು ರಾಜಕೀಯ ಏಕಸ್ವಾಮ್ಯತೆ ಲಕ್ಷಾಂತರ ರೈತರ ಮೇಲೆ ನಿಯಂತ್ರಣವಿಡುತ್ತದೆ. ರೈತ ಮತ್ತು ಗ್ರಾಹಕರಿಬ್ಬರೂ ಕುಲಾಂತರಿ ಕಲುಷಿತ ಆಹಾರವನ್ನೇ ಸೇವಿಸಿ ಹಾನಿಗೊಳ್ಳುವ ಅನಿವಾರ್ಯತೆಗೆ ಸಿಗುವಂತಾಗಬಹುದು; ಬಿಟಿ ಬಗ್ಗೆ ನಡೆಸಿದ ಸಂಶೋಧನೆ, ಅನುಮೋದನಾ ವರದಿಗಳು ಸ್ವತಂತ್ರವಾಗುವ ಹುರಾಷ್ಟ್ರೀಯ ಕಂಪನಿ ಪ್ರಾಯೋಜಿತ ವರದಿಯಾಗಿ ಅಡ್ಡಗೋಡೆ ಮೇಲಿನ ದೀಪದಂತಿದೆ. ಒಮ್ಮೆ ಕುಲಾಂತರಿ ತಳಿಗಳನ್ನು ಪ್ರಕೃತಿಗೆ ಬಿಡುಗಡೆ ಮಾಡಿದ ಮೇಲೆ ಹಿಂಪಡೆಯುವುದು ಅಸಾಧ್ಯ. ರಾಸಾಯನಿಕ ಕೀಟನಾಶಕಗಳು ಕಾಲಕ್ರಮದಲ್ಲಿ ನಶಿಸಿ ಹೋಗಬಹುದು. ಆದರೆ ಕುಲಾಂತರಿ ತಳಿಗಳು ವೃದ್ಧಿಸಬಹುದು. ಮುಂದೆ ಬೌದ್ಧಿಕ ಹಕ್ಕು ಕಾನೂನಿನನ್ವಯ ರೈತರ ಮೇಲೆ ಪರವಾನಿಗೆ ಇಲ್ಲದೆ ತಳಿ ಬಿತ್ತಿದ್ದಾರೆ ಎಂದು ತೀರ್ಪು ಮಾಡಬಹುದು. ಬಿಟಿ ಕೇವಲ ಕಾಯಿ-ಕಾಂಡಕೊರಕ ಕೀಟದ ಮೇಲಷ್ಟೆ ಪರಿಣಾಮಕಾರಿ. ಉಳಿದ ಬೇರು ಕೀಟಗಳು, ರೋಗಗಳಿಗೆ ಸಿಂಪರಣೆ ಬೇಕಲ್ಲವೆ! ಇಳುವರಿ ಜಾಸ್ತಿಯಾದರೆ ಬೆಲೆ ಇಳಿದರೆ ರೈತನಗತಿ ಏನು? ಆಹಾರ ಬೆಳೆ ಅಲ್ಲದ ಹತ್ತಿಗೆ ಬಳಸಿದ ತಂತ್ರಜ್ಞಾನವನ್ನು ಆಹಾರ ಬೆಳೆಗೆ ಹೋಲಿಸುವುದು ಸರಿಯೇ? ಅಮೇರಿಕದಲ್ಲಿ ಕುಲಾಂತರಿ ಆಹಾರ ಬಳಸಿ ಬದುಕುವ ಮಾದರಿಯೆ ಏಕೆ ನಮಗೆ ಬೇಕು? ಅಲ್ಲಿಯ ಅತಿಯಾದ ಬೊಜ್ಜು, ಹೆಚ್ಚುತ್ತಿರುವ ಅಪರಾಧ, ಅಲರ್ಜಿಯನ್ನು ನಮಗೂ ವರ್ಗಾಯಿಸಬೇಕೆ? ಸಣ್ಣ, ಅತಿಸಣ್ಣ ರೈತರು, ಬಿಟಿ ಮತ್ತು ಇತರೆ ಹೊಲಗಳ ನಡುವೆ ಸೂಕ್ತ ಅಂತರ ಕಾಯ್ದುಕೊಳ್ಳುವುದು ಪ್ರಾಯೋಗಿಕವಲ್ಲ, ಎಂದು ವಿವೇಚಿಸಿರುವ ಶ್ರೀ ವಾಸುದೇವ ಅದಮಾರು ಅವರು,

ಕೇಂದ್ರ ಕೃಷಿಮಂತ್ರಾಲಯ ಮತ್ತು ಪರಿಸರ ಮಂತ್ರಾಲಯಗಳು ಈ ಬಗ್ಗೆ ಖಚಿತ ನಿಲುವನ್ನು ತೋರಬೇಕಾಗಿದೆ, ಎಂಬ ಅಭಿಪ್ರಾಯವನ್ನು ವ್ಯಕ್ತಮಾಡಿದ್ದಾರೆ (6.2.10)

ಅಮೇರಿಕಾದ ಮಾನ್ಸಂಟೊ ಕಂಪನಿಗೆ ತನ್ನ ಶಿಶು ಕುಲಾಂತರಿ ತಳಿಯನ್ನು ಜಗತ್ತಿನೆಲ್ಲೆಡೆ ಹರಡುವ ತವಕ. ಆ ಕಂಪನಿಯ ಪ್ರಭಾವ ಇಡೀ ಅಮೇರಿಕಾದ ಕೃಷಿ ಕ್ಷೇತ್ರವನ್ನು ಹಿಡಿತದಲ್ಲಿಟ್ಟುಕೊಂಡಿರುವಂಥದ್ದು. ಆದರೆ ಈ ಬಿಟಿ ತಳಿಗಳಿಗೆ ಐರೋಪ್ಯ ರಾಷ್ಟ್ರಗಳು ಹಾಗೂ ಪೆರು, ಬೊಲಿವಿಯ ಅರ್ಜೆಂಟೈನಾ, ದಕ್ಷಿಣ ಅಮೇರಿಕಾ ಇತ್ಯಾದಿ ಬಹುತೇಕ ರಾಷ್ಟ್ರಗಳು ಪ್ರವೇಶವನ್ನೆ ಕೊಟ್ಟಿಲ್ಲ. ಈ ದೃಷ್ಟಿಯಿಂದ ಕರ್ನಾಟಕದ ನಿಲುವೆಂದರೆ, ರಾಜ್ಯವು ಬದನೆ ಬೆಳೆಯಲ್ಲಿ ಸ್ವಾವಲಂಬಿಯಾಗಿದೆ. ಇರುವ 50 ತಳಿಗಳನ್ನು ಮುಂದುವರಿಸಲಾಗುವುದು. ಬಿಟಿಯದು ಸುರಕ್ಷತೆ ಆಹಾರವೆಂದು ಸಾಬೀತು ಆಗಿಲ್ಲ. ನಾಟಿ ಬದನೆಯ ಔಷಧಿಯ ಗುಣಗಳು ಬಿಟಿ ಬದನೆಯಲ್ಲಿಲ್ಲ. ದೇಸಿ ಬದನೆ ಬೀಜದಿಂದ ಮತ್ತೆ ಬಿತ್ತನೆ ಸಾಧ್ಯವಾಗುವಂತೆ ಬಿಟಿಯಿಂದ ಸಾಧ್ಯವಿಲ್ಲ ಬಿಟಿಯ ಗುಣ ಸಾಬೀತಾದ ಮೇಲೆ ಮುಂದೆ ಪರಿಶೀಲಿಸುವುದಾಗುತ್ತದೆ. ಎಂದಿತ್ತು; ರೈತರಲ್ಲಿ ಕೃಷಿ ಸಂಶೋಧನೆಯಲ್ಲಿ ಜನಕಾಳಜಿ ಇರುವ ವಿಜ್ಞಾನಿಗಳ ನೇಮಕವಾಗಬೇಕು. ಬಿಟಿ ಹತ್ತಿ ತಂದ ಅನಾಹುತದ ಬಗ್ಗೆ ವಿಸ್ತೃತ ಚರ್ಚೆ ಆಗಬೇಕು. ಬಿತ್ತನೆ ಬೀಜ ಉತ್ಪಾದನೆ ನಮ್ಮ ರೈತರ ಹಕ್ಕು. ಅದನ್ನು ಕಸಿಯುವುದು ತರವಲ್ಲ ಎಂಬ ನಿಲುವಿತ್ತು. (ಕ.ಪ್ರ:6.2.10)

**ಬಿಟಿ ಆಹಾರ ಬೆಲೆ: ಸಾರ್ವಜನಿಕ ಸಭೆ:** 6.2.2010ನೇ ಶನಿವಾರ ಸೆಂಟ್ರಲ್ ಕಾಲೇಜಿನ ಜ್ಞಾನಜ್ಯೋತಿ ಸಭಾಂಗಣದಲ್ಲಿ ನಡೆದ ಸಭೆಗೆ ಬಿಟಿ ಬದನೆ ಬೇಕು ಬೇಡಗಳ ಕುರಿತು ಸಾರ್ವಜನಿಕ ಅಹವಾಲು ಪಡೆಯುವ ಸಲುವಾಗಿ ಕೇಂದ್ರ ಪರಿಸರ ಸಚಿವ ಜೈರಾಂ ರಮೇಶ ಅವರು ರಾಜ್ಯ ಸರ್ಕಾರ, ಕೃಷಿ ವಿಶ್ವವಿದ್ಯಾಲಯ ಎನ್‌ಜಿಓ, ರೈತ ಸಂಘಟನೆಗಳು ಹಾಗೂ ಆಸಕ್ತರನ್ನು ಆಹ್ವಾನಿಸಿದ್ದರು. ಅದೊಂದು ಪರ ವಿರೋಧದ ಮಾತಿನ ಅಖಾಡವೆನಿಸಿತ್ತು. ಇಬ್ಬಣದ ವಾದಗಳ ಮಾತಿನ ಚಕಮಕಿಯನ್ನು ಸುಧಾರಿಸುವಲ್ಲಿ ಕೇಂದ್ರ ಸಚಿವರಿಗೆ ಬಹಳ ಕಷ್ಟವಾಯಿತು. ಸಮಾಲೋಚನೆ ಸಭೆಗೆ ಅಡಚಣೆ ಮಾಡಿದ ಕೆಲವರನ್ನು ಹೊರಗೆ ಕಳುಹಿಸಲಾಯಿತು. ಈ ಅಹವಾಲುಗಳ ಒಳಗೆ ವೇಳೆಯಲ್ಲಿ ಸಭಾಂಗಣದ ಹೊರಗೆ ಬಿಟಿ ಪರ–ವಿರೋಧ ಘೋಷಣೆಗಳು ಮೊಳಗಿದುವು. ವಿರೋಧಿ ಘೋಷಣೆಗಳೇ ಹೆಚ್ಚು ಪ್ರಭಾವಕಾರಿಯಾಗಿದ್ದುವು. ಇದರಲ್ಲಿ ವಿವಿಧ ರೈತಸಂಘಟನೆಗಳು. ಬಿಟಿ ವಿರೋಧಿಗಳು

ಸೇರಿದ್ದು ಬಿಟಿ ಬದನೆ ಉತ್ಪಾದನೆಗೆ ಅವಕಾಶ ಬೇಡ ಎಂಬ ಒತ್ತಾಯದ ಧ್ವನಿ ಅವರಲ್ಲಿತ್ತು. ಬಿ.ಟಿ. ಕಂಪನಿಯಲ್ಲಿದ್ದು ನಿವೃತ್ತರಾದ ಅಧಿಕಾರಿಯೇ, ನಮ್ಮ ದೇಶದಲ್ಲಿ 2400 ಬದನೆ ತಳಿಗಳಿದ್ದು, ಪ್ರತಿ ವರ್ಷ ಎಂಟು ದಶಲಕ್ಷ ಟನ್ ನಾಟಿ ಬದನೆ ಉತ್ಪಾದನೆ ಆಗುತ್ತಿದ್ದು, ಅಗತ್ಯಕ್ಕಿಂತ ಹೆಚ್ಚಾದ ಬೆಳೆ ಆಗಿರುವಲ್ಲಿ, ಬಿಟಿ ಬದನೆ ಅಗತ್ಯವಿಲ್ಲ ಎಂದದ್ದು; ವಿಶ್ವದಲ್ಲಿ ಮಾನ್ಸಂಟೋ ಕಂಪನಿ ಬಿತ್ತನೆ ಬೀಜಗಳ ಮೇಲೆ ಪೇಟೆಂಟ್ ಪಡೆದು ಹಣ ಮಾಡುವುದೇ ಅದರ ಕಾಯಕ. ಈಗಾಗಲೇ ಜಗತ್ತಿನ 65ಕ್ಕೂ ಹೆಚ್ಚಿನ ಕಂಪನಿಗಳಿಂದ ರಾಯಲ್ಟಿ ಪಡೆದು ಹಣಗಳಿಸಿ, ವಿಷಬೀಜದ ಬಿಟಿ ತಳಿಗಳನ್ನು ಬಿತ್ತಿದೆ. ದೇಶದ ಆರೋಗ್ಯ ಉಳಿಯಲು ಬಿಟಿಯನ್ನು ವಿರೋಧಿಸಬೇಕು ಎಂದದ್ದು ಕಂಪನಿಯ ನಿವೃತ್ತ ಅಧಿಕಾರಿಯೊಬ್ಬರ ಆತ್ಮನಿರೀಕ್ಷಣೆ ಹಾಗೂ ಪಶ್ಚಾತ್ತಾಪದ ಮಂಡನೆ ಎನಿಸಿತ್ತು.

ಮುಖ್ಯಮಂತ್ರಿ ಶ್ರೀ ಬಿ.ಎಸ್. ಯಡಿಯೂರಪ್ಪನವರು ಕುಲಾಂತರಿ ಬಿಟಿ ಬದನೆ ತಳಿಯನ್ನು ರಾಜ್ಯ ಸರ್ಕಾರ ಶೇ.101 ರಷ್ಟು ವಿರೋಧಿಸುತ್ತದೆ. ಬಿಟಿ ಬದನೆಯನ್ನು ರಾಜ್ಯ ಸರ್ಕಾರ ಪ್ರೋತ್ಸಾಹಿಸುವ ಪ್ರಶ್ನೆಯೇ ಇಲ್ಲ ಎಂದು ಇದೇ ದಿನ ದೆಹಲಿಯಲ್ಲಿ ಸುದ್ದಿಗಾರರಿಗೆ ತಿಳಿಸಿದ್ದು ಜ್ಞಾನಜ್ಯೋತಿ ಸಭಾಂಗಣದ ರೈತರ ಮಾತಿಗೆ ಒಬ್ಬ ರೈತ ಹೋರಾಟಗಾರರಾಗಿ ಬೆಂಬಲ ನೀಡಿದಂತಾಗಿತ್ತು. ಇದಲ್ಲದೆ ನಗರದ ರೈಲು ನಿಲ್ದಾಣದಿಂದ ಸೆಂಟ್ರಲ್ ಕಾಲೇಜಿನವರೆಗೆ ರೈತ ಪರ ಸಂಘಟನೆಗಳು, ಸ್ವಯಂ ಸೇವಾ ಸಂಸ್ಥೆಗಳ ಸದಸ್ಯರು ಬೆಂಗಳೂರು ನಗರದಲ್ಲಿ ಬೃಹತ್ ಪ್ರತಿಭಟನಾ ರ್‍ಯಾಲಿ ನಡೆಸಿದುವು.

ಸಚಿವ ಜೈರಾಮ್ ರಮೇಶ್ ಅವರು ಏಳು ಪ್ರಮುಖ ರಾಜ್ಯಗಳಲ್ಲಿ ಬಿಟಿ ಬದನೆ ವಿರೋಧದ ಅಭಿಪ್ರಾಯ ಸಂಗ್ರಹಿಸಿದ್ದರು. ದೇಶದ ಶೇ.30 ರಷ್ಟು ಬದನೆ ಬೆಳೆಯುತ್ತಿರುವ ಕೊಲ್ಕತ್ತಾದಲ್ಲಿ, ಶೇ. 20 ರಷ್ಟು ಬೆಳೆಯುತ್ತಿರುವ ಒರಿಸ್ಸಾದ ಭುವನೇಶ್ವರದಲ್ಲಿ, ಬಿಟಿ ಹತ್ತಿಯನ್ನು ಯಶಸ್ವಿಯಾಗಿ ಬೆಳೆದಿರುವ ಗುಜರಾತಿನ ಅಹಮದಾಬಾದಿನಲ್ಲಿ, ಬಿಟಿ ಹತ್ತಿ ನಂತರ ರೈತರ ಆತ್ಮಹತ್ಯೆಗಳ ಪ್ರಕರಣ ವಿದರ್ಭ ಭಾಗದಲ್ಲಿ ನಡೆದ ಕಾರಣ ಮಹಾರಾಷ್ಟ್ರದ ನಾಗಪುರದಲ್ಲಿ, ಆಹಾರ ಪದಾರ್ಥ ಬೆಳೆಯುವ ಹರಿಯಾಣ, ಪಂಜಾಬ್‌ಗಳಿಗೆ ಹತ್ತಿರವಾದ ಚಂಡೀಗಢ, ಶೇ. 6 ರಷ್ಟು ಉತ್ಪಾದನೆ ಇರುವ ಆಂಧ್ರದ ಹೈದರಾಬಾದ್ ಸಭೆ ನಡೆಸಿದ್ದರು. ನಂತರ ವೈಜ್ಞಾನಿಕ ಚಟುವಟಿಕೆಗಳ ಕೇಂದ್ರವಾಗಿರುವ ಬೆಂಗಳೂರಿನಲ್ಲಿ ಸಮಾಲೋಚನಾ ಸಭೆಯನ್ನು 6.2.2010 ರಂದು ಏರ್ಪಡಿಸಲಾಗಿತ್ತು.

ಈ ಸಭೆಯಲ್ಲಿ ಸುಮಾರು 40ಕ್ಕೂ ಹೆಚ್ಚು ಪ್ರತಿನಿಧಿಗಳು ತಮ್ಮ ಅಭಿಪ್ರಾಯಗಳನ್ನು ಮಂಡಿಸಿದರು. ಶೇ 75 ಭಾಗ ಬಿಟಿ ಬದನೆ ವಿರೋಧಿ ಮಾತುಗಳು ಅಂದರೆ 30 ಪ್ರತಿನಿಧಿಗಳಿಂದ ಮಂಡನೆಯಾದರೆ, ಕೆಲವೇ ಮಂದಿ ಬಿಟಿ ಪರವಾದ ವಾದ ಮಂಡಿಸಿದರು. ರೈತ ಸಂಘಟನೆಯ ಪ್ರತಿನಿಧಿಗಳು ಲಾಭಕ್ಕಿಂತ ನಷ್ಟವೇ ಹೆಚ್ಚು ಎಂದು ತಮ್ಮ ಅನುಭವದಿಂದ ಹಕ್ಕಿದ ಮಾಹಿತಿಗಳನ್ನು ಬಹಳ ಸಂವಹನಶೀಲವಾಗಿ ಮಂಡಿಸಿದರು.

ಬಿಟಿ ಪರ ಬಂದ ವಾದಗಳಲ್ಲಿ ಆರ್ಥಿಕ ಸಬಲತೆ ಹಾಗೂ ಆಹಾರ ಕೊರತೆ ನೀಗಿಸಲು ಇಳುವರಿ ಹೆಚ್ಚು ಒದಗಿಸುವ ಬಿಟಿ ಬದನೆ, ಕೋಸು, ಮೆಣಸು, ಅಕ್ಕಿಯೂ ಬೇಕು; ಬಿಟಿಯಿಂದ ಆರೋಗ್ಯಕ್ಕೆ ಹಾನಿ ಇಲ್ಲ. ಪರಿಸರಕ್ಕೂ ತೊಂದರೆ ಇಲ್ಲ. ಅಪ ಪ್ರಚಾರ ಮಾತ್ರ ಆಗಿದೆ; ಬಿಟಿ ಬದನೆಯ ಕಡ್ಡಾಯವಿಲ್ಲದಿರುನವಲ್ಲಿ ಬಳಸಿಕೊಳ್ಳುವವರಿಗೆ ಅಡ್ಡಿಬೇಡ; ಬಿಟಿ ಬದನೆ ಬೀಜ ಪ್ರತಿ ಬಾರಿ ಕಂಪನಿಗೆ ಅಂಗಲಾಚಬೇಕಿಲ್ಲ; ರೈತರಿಗಾಗಿಯೇ ಅಭಿವೃದ್ಧಿಪಡಿಸಿದ ತಂತ್ರಜ್ಞಾನವಿದು; ಸಾಲದ ಹೊರೆ ಇಳಿಸಲು ಈ ತಂತ್ರಜ್ಞಾನ ಬೇಕು. ಈ ತಂತ್ರಜ್ಞಾನ ನಮ್ಮ ವಿಶ್ವವಿದ್ಯಾಲಯಗಳಲ್ಲಿಯೇ ಅಭಿವೃದ್ಧಿಯಾದದ್ದು, ಎಂದೆಲ್ಲ ಇತ್ತು. ಹಾವೇರಿ ಜಿಲ್ಲೆಯಿಂದ ಬಂದ ಕೆಲವು ರೈತರು ಕಳೆದ 5–6 ವರ್ಷಗಳಿಂದ ತಾವು ಬೆಳೆಸುತ್ತಿರುವ ಬಿಟಿ ಹತ್ತಿಯಿಂದ ಕೈ ತುಂಬಾ ಹಣ ಬರುತ್ತಿದೆ. ರೋಗ ರುಜಿನಗಳು ಕಾಣಿಸಿಕೊಂಡಿಲ್ಲ ಎಂದು ಬಿಟಿ ಬದನೆ ಪರ ವಾದಿಸಿದರು. ಬಿಟಿ ಹಾಗೂ ಬಿಟಿ ಬದನೆಗೆ ವಿರೋಧವು ಹಸಿರು ದನಿಗಳಲ್ಲಿ ಸ್ವಯಂ ಸೇವಾ ಸಂಸ್ಥೆ ಪ್ರತಿನಿಧಿಗಳಲ್ಲಿ, ಬಹಳಷ್ಟು ವಿಜ್ಞಾನಿಗಳಲ್ಲಿ ಕಂಡು ಬಂದಿತು. ಅವರ ರೀತ್ಯಾ: ಬಿಟಿ ಬದನೆ ಬಳಕೆಯಿಂದ ಕೀಟ ಕಡಿಮೆ ಆಗುತ್ತದೆಂಬುದು ಸುಳ್ಳು. ಕೀಟ ಕೊಲ್ಲುವ ವಿಧಾನವೂ ಆರೋಗ್ಯಕ್ಕೆ ಹಾನಿಕರ ವಿಷವಸ್ತು ಅಣುವಿನಿಂದ ಕೀಟಗಳ ನಿಯಂತ್ರಣ ಮಾಡುವುದು ವೈಜ್ಞಾನಿಕ ಅಲ್ಲ. ಅಧ್ಯಯನ ಪೂರ್ಣ ನಡೆಸದೆ ತರಾತುರಿಯಲ್ಲಿ ಮಾರುಕಟ್ಟೆಡಗೆ ಈ ಉತ್ಪನ್ನವನ್ನು ಬಿಡುವುದು ಸೂಕ್ತವಲ್ಲ; ಬಿಟಿ ಬದನೆಯಲ್ಲಿ ಬಳಸಲಾಗುವ 'ಕ್ರೈI ಎಸಿ'ಯಿಂದ ಬದನೆ ಪ್ರೋಟೀನ್‌ನಿಂದ ಮಾಡದೆ ಬದಲಿ ಪ್ರೋಟೀನು ಬಳಸಲಾಗಿದೆ; ಬಿಟಿ ಹತ್ತಿಗೆ ಪ್ರಶಸ್ತವೆಂದು ಹಾವೇರಿ ಮತ್ತು ಸುತ್ತಮುತ್ತಲ ಸ್ಥಳಗಳನ್ನು ಗುರುತಿಸಿ ಮಾನ್ಸಂಟೋ, ಮಹಿಕೋ ಇತ್ಯಾದಿ ವಿವಿಧ ಬಿಟಿ ಕಂಪನಿಗಳು ಅಲ್ಲಿಯ ರೈತರನ್ನು ಪುಸಲಾಯಿಸಿ ಆ ಹತ್ತಿ ಬೆಳೆಸುವಲ್ಲಿ ಯಶಸ್ವಿಯಾಗಿದ್ದವು. ಅಲ್ಲದೆ ಅಲ್ಲಿನ ರೈತರ ಜಮೀನುಗಳನ್ನೇ ಗುತ್ತಿಗೆ ಪಡೆದು ಬಿಟಿ ಹತ್ತಿ ತಯಾರಿಕೆಯಲ್ಲಿ ತೊಡಗಿವೆ.

ಇದರಿಂದಾಗಿ ಹಾವೇರಿ ರೈತರು ಬಿಟಿ ಹತ್ತಿ ಕಂಪನಿಗಳ ಪರವಾಗಿ ನಿಲ್ಲಲ್ಲು ಕಾರಣವಾಗಿದೆ ಎಂಬ ವಾದವಲ್ಲಿತ್ತು.

ಇದಲ್ಲದೆ ಕೋಟ್ಯಂತರ ರೂಪಾಯಿ ಬಂಡವಾಳ ಹೂಡುವ ಕಂಪನಿ ಬಿ.ಟಿ. ಹೆಸರಿನಲ್ಲಿ ಅಲ್ಲದಿದ್ದರೂ ಬೇರೆ ಹೆಸರಿನಲ್ಲಿ, ಧನಲಕ್ಷ್ಮಿ, ವೆಂಕಟೇಶ್ವರ ಇತ್ಯಾದಿ ದೇವರ ಹೆಸರಿನಲ್ಲಿ ತಳಿಗಳನ್ನು ಮಾರುಕಟ್ಟೆಗೆ ಬಿಟ್ಟರೆ ಪರಿಣಾಮ ಗೊತ್ತು ತಾನೆ. ಆದ್ದರಿಂದ ಅದಕ್ಕೆ ಅವಕಾಶ ನೀಡಬಾರದು ಎಂದು ಡಾ.ಎ.ಎಸ್. ಆನಂದ್ ಅವರ ವಾದವಾಗಿತ್ತು; ಬಿ.ಟಿ. ಬದನೆ ಬಗ್ಗೆ ವಿಜ್ಞಾನಿಗಳಲ್ಲಿಯೆ ಭಿನ್ನಾಭಿಪ್ರಾಯವಿದೆ. ಅಪಾಯವಿಲ್ಲ, ಅಪಾಯವಿದೆ ಎಂಬ ಅವರ ನಡುವಣ ಮಾತುಗಳಲ್ಲಿ ಯಾವುದನ್ನು ನಂಬಬೇಕು ಎಂಬ ಬಗ್ಗೆಯೆ ಗೊಂದಲವಿದೆ. ಅಂತಾಗಿ ರೈತರನ್ನು ಪ್ರಯೋಗ ಪಶುಗಳನ್ನು ಮಾಡಬೇಡಿ. ಈ ಬಗ್ಗೆ ಕೂಲಂಕಷ ಚರ್ಚೆ ಆಗಬೇಕು ಎಂದು ಪ್ರಧಾನಿ ಡಾ.ಮನಮೋಹನ್ ಸಿಂಗ್ ಅವರಿಗೆ ಪತ್ರ ಬರೆದಿದ್ದೇನೆ ಎಂದರು. ಕೃಷಿ ಸಚಿವ ಶ್ರೀ ಶರದ್ ಪವಾರ್ ಈಗಾಗಲೇ ತಜ್ಞರ ನಿರ್ಧಾರಕ್ಕೆ ಬದ್ಧ ಎಂದಿದ್ದರೂ, ಸಚಿವ ಶ್ರೀ ಜೈರಾಮ್ ರಮೇಶ್ ಪ್ರಮುಖ ನಗರಗಳಲ್ಲಿ ಜನಾಭಿಪ್ರಾಯ ಸಂಗ್ರಹಿಸುತ್ತಿರುವುದು ಸ್ವಾಗತಾರ್ಹ ಎಂದು ಮಾಜಿ ಪ್ರಧಾನಿ ಶ್ರೀ ಹೆಚ್.ಡಿ. ದೇವೇಗೌಡರು ಸಭೆಯಲ್ಲಿ ಹೇಳಿದರು. ಜ್ಞಾನಪೀಠ ಪ್ರಶಸ್ತಿ ವಿಜೇತ ಪ್ರೊ॥ ಯು.ಆರ್. ಅನಂತ್‌ಮೂರ್ತಿ ಅವರು ಬಿಟಿ ಬದನೆಗೆ ವಿರೋಧ ವ್ಯಕ್ತಪಡಿಸುತ್ತ ನಮ್ಮಲ್ಲಿ ಈಗಾಗಲೇ ಹಲವು ರೀತಿಯ ಬದನೆ ತಳಿಗಳಿವೆ. ವಿಜ್ಞಾನಿಗಳಿಗಿಂತ ರೈತರಿಗೆ ಹೆಚ್ಚಿನ ಜ್ಞಾನವಿದೆ ಅವರನ್ನು ಒಬ್ಬ ತಜ್ಞರ ಹಿಂದೆ ಹೋಗುವ ಹಾಗೆ ಮಾಡಬೇಡಿ ಎಂದು ನುಡಿದರು. ರಾಜ್ಯರೈತ ಸಂಘದ ಅಧ್ಯಕ್ಷ ಶ್ರೀ ಕೆ.ಎಸ್. ಪುಟ್ಟಣ್ಣಯ್ಯ ಅವರು ಈಗಾಗಲೇ 55 ತಳಿಯ ಬದನೆ ಬೆಳೆಯುತ್ತಿದ್ದು, ನಮ್ಮ ಬದನೆ ಚೆನ್ನಾಗಿರುವಾಗ ಬಿಟಿ ಬದನೆ ಯಾಕೆ? ಎಂದು ಪ್ರಶ್ನೆ ಇಟ್ಟರು. ಬದನೆಗೆ ಸ್ಥಿರ ಬೆಲೆ ಕೊಟ್ಟರೆ ರೈತರೇ ಹೆಚ್ಚು ಬೆಳೆದು ಕೊಡುತ್ತಾರೆ. ಈಗಾಗಲೇ 80 ದೇಶಗಳು ಬಿಟಿ ಬದನೆಗೆ ವಿರೋಧ ವ್ಯಕ್ತ ಪಡಿಸಿವೆ. ದೇಶೀಯ ಬದನೆಗೆ ಸಕ್ಕರೆ ಕಾಯಿಲೆ ತಡೆಯುವ ಶಕ್ತಿ ಇದೆ. ಬಹಿರಾಷ್ಟ್ರೀಯ ಕಂಪನಿಗಳ ಲಾಭಕ್ಕೆ ರೈತರನ್ನು ಬಲಿಗೊಡಬೇಡಿ, ನಿಯಂತ್ರಣ ಸರ್ಕಾರದ ಕೈಯಲ್ಲಿರಲಿ ಎಂದು ರೈತ ಸಂಘದ ಕಾರ್ಯಾಧ್ಯಕ್ಷ ಕೋಡಿಹಳ್ಳಿ ಚಂದ್ರಶೇಖರ್ ಅವರು ಅಭಿಪ್ರಾಯಪಟ್ಟರು. ಬೆಂಗಳೂರು ಗಾಂಧಿ ಕೃಷಿ ವಿಶ್ವವಿದ್ಯಾಲಯ ಉಪಕುಲಪತಿ ಡಾ.ಪಿ.ಜಿ. ಚಂಗಪ್ಪನವರು, ಧಾರವಾಡ ಕೃಷಿ ವಿಶ್ವವಿದ್ಯಾಲಯದ ಸಹಯೋಗದಲ್ಲಿ ನಡೆದ ಸಂಶೋಧನೆಯಲ್ಲಿ ಬಿಟಿ ಬದನೆಗೆ

ರೋಗ ನಿರೋಧಕ ಶಕ್ತಿ ಇರುವ ಬಗ್ಗೆ ದೃಢಪಟ್ಟಿದೆ. ಕೀಟ ನಿಯಂತ್ರಣದ ಬಗ್ಗೆ ಆಗಿರುವ ಪ್ರಯೋಗಗಳು ಮನುಷ್ಯನ ಆರೋಗ್ಯದ ಮೇಲೆ ಯಾವ ರೀತಿ ಪರಿಣಾಮ ಬೀರುತ್ತವೆ ಎಂಬ ಬಗ್ಗೆ ಇನ್ನೂ ಸಾಕಷ್ಟು ಸಂಶೋಧನೆ ಆಗಬೇಕಿದೆ ಎಂದು ನುಡಿದರು. ಮಾಜಿ ಉಪಕುಲಪತಿ ಡಾ. ವಿರೇಶ್ ಅವರು ಬಿಟಿಯನ್ನು ಸಂಪೂರ್ಣವಾಗಿ ವಿರೋಧಿಸುತ್ತ, ಬಿಟಿ ತಳಿ ನಿಧಾನವಾಗಿ ತನ್ನ ದುಷ್ಪರಿಣಾಮ ಬೀರಲಿದೆ ಎಂದು ಹೇಳಿ ಡಿಡಿಟಿಯತ್ತ ಗಮನ ಸೆಳೆದರು (ಪ್ರ.ವಾ:7.2.10) ಮಾಜಿ ಉಪಸಮಿತಿ ಡಾ. ಎಂ. ಮಹದೇವಪ್ಪ ಬಿಟಿ ಪರವಾಗಿ ಹೇಳಿದರು.

ಕೇಂದ್ರದ ಜೀವವೈವಿಧ್ಯ ಮಂಡಳಿಯ ಕಾಯ್ದೆಯ ಪ್ರಕಾರ ಯಾವುದೇ ತಳಿಯ ಮೇಲೆ ಕುಲಾಂತರಿ ಪ್ರಯೋಗ ನಡೆಸಲು ಮಂಡಳಿಯಿಂದ ಅನುಮತಿ ಪಡೆಯಬೇಕು. ಸ್ಥಳೀಯ ಜೈವಿಕ ಮಂಡಳಿಯಿಂದಲೂ ಅನುಮತಿ ಪಡೆಯಬೇಕು. ಧಾರವಾಡ ಕೃಷಿ ವಿಶ್ವವಿದ್ಯಾಲುಯವು ಪ್ರಯೋಗ ನಡೆಸಲು ಯಾವುದೇ ಅನುಮತಿ ಪಡೆದಿಲ್ಲ, ಎಂಬ ಮಾತಿಗೆ ವಿಶ್ವವಿದ್ಯಾಲಯದ ಸಂಶೋಧನಾ ವಿಭಾಗವು ಅದಕ್ಕೆ ಅನುಮತಿಯ ಅವಶ್ಯಕತೆ ಇಲ್ಲ ಎಂದಿದೆ. ಅದು ಮಹಿಕೋದೊಂದಿಗೆ ಒಡಂಬಡಿಕೆ ಮಾಡಿಕೊಂಡದ್ದು ಬರಿ ಜೀನ್ ಹಸ್ತಾಂತರಕ್ಕೆ ವಿನಾ, ಹಣ ನೀಡಿಲ್ಲ ಎಂಬ ಸ್ಪಷ್ಟನೆ ಅದರದಾಗಿತ್ತು. ಇಲ್ಲಿ ಅನುಮಾನವೆಂದರೆ ರೈತರಿಂದ ತೀವ್ರ ವಿರೋಧ ಬರುತ್ತದೆಂದು ನಿರೀಕ್ಷಿಸಿದ ಖಾಸಗಿವಲಯ ಮುಂಚಿತವಾಗಿ ವಿಶ್ವವಿದ್ಯಾಲಯದೊಡನೆ ವ್ಯವಹರಿಸಿರಬಹುದು ಎಂಬುದಾಗಿ ಬಿಟಿ ವಿರೋಧಿಗಳ ಮಾತಿರುವಲ್ಲಿ ಅದನ್ನು ಸಭೆಯಲ್ಲಿ ಕೇಳಿ ಬಂದ ಸಂಶೋಧನೆಯ ಕುರಿತ ಮಾತುಗಳಿಗೆ ತಾಳೆ ಹಾಕುವ ಸಂದರ್ಭ ಆಗುತ್ತದೆ. ಇರಲಿ. ಈ ಸಂದರ್ಭದಲ್ಲಿ ರೈತರಿಗೆ ಬದನೆಯನ್ನು ರಫ್ತು ಮಡಲು ಮಾತ್ರ ಸಹಕರಿಸಿ ಕಾಯ್ದೆ ತಂದಿದೆ ಎನ್ನಲಾಗಿದೆ. ಆದರೆ ನಮ್ಮದೇಶದಿಂದ ರಫ್ತಾ ಗುತ್ತಿರುವ ಬದನೆ ಎಷ್ಟು? ಕರ್ನಾಟಕದ ಮಟ್ಟಿಗೆ ಹೇಳುವುದಾದರೆ ದೇಶೀಯ ಬದನೆಗಳ ರಫ್ತು ಇಲ್ಲವೇ ಇಲ್ಲ ಎನ್ನುವಷ್ಟು ಕಡಿಮೆ; ಹೀಗೇಕೆ ಎಂಬ ಅನಿಸಿಕೆಗೆ ಉತ್ತರ ದೊರಕಿಲ್ಲ.

ಭಾರತೀಯ ಹಿನ್ನೆಲೆಯಲ್ಲಿ ಈ ಬಗ್ಗೆ ಕೆಲವು ಅಂಶಗಳನ್ನು ಗಮನಿಸಬೇಕು. ಇಲ್ಲಿನ ರೈತ ಚಿಕ್ಕ ಜಮೀನಿನ ಮಾಲೀಕ. ತನ್ನ ಬದುಕಿಗೆ ಅದನ್ನೆ ಅವಲಂಬಿಸಿದ್ದೇವೆ. ತನ್ನ ಒಂದೇ ಚಿಕ್ಕ ಹೊಲದಲ್ಲಿ ಮಿಶ್ರ ತಳಿಯಾಗಿಯೋ ಅಥವಾ ತವರಿ ಬದಿಯಲ್ಲಿಯೋ ಬೇರೆ ಬೆಳೆಗಳನ್ನು ಬೆಳೆಯುತ್ತಾನೆ. ಕುಲಾಂತರಿ ಸಸ್ಯದಿಂದ

ಬೇರೊಂದು ಬೆಳೆ ಪರಾಗ ಸ್ಪರ್ಶಕ್ಕೆ ಒಡ್ಡಿಕೊಂಡಾಗ ಮೂಲ ಬೆಳೆಯೂ ತನ್ನ ರೂಪ ಕಳೆದುಕೊಂಡೀತೆ? ಎಂಬ ಶಂಕೆ ಇದೆ; ಟರ್ಮಿನೇಟರ್ ತಂತ್ರಜ್ಞಾನ ಬಿಟಿ ಕಾಲಿಟ್ಟಾಗಿನಿಂದ ಕೇಳಿ ಬಂದಂಥದ್ದು. ಅದಕ್ಕೆ ಒಳಪಟ್ಟ **ಬೀಜದಿಂದ ಬರುವ ಉತ್ಪನ್ನ ಬಳಕೆಗೆಷ್ಟೆ ಸೀಮಿತವಾಗಿ ಮತ್ತೊಂದು ಬೆಳೆಯನ್ನು ಅದರಿಂದ ತೆಗೆಯಲು ಸಾಧ್ಯವಾಗದು. ಹಾಗೆ ಹುಟ್ಟುವ ಬೀಜದಲ್ಲಿ ಸಂತಾನೋತ್ಪತ್ತಿ ಸಾಮರ್ಥ್ಯವೇ ಟರ್ಮಿನೇಟರ್** ಎನಿಸಿಕೊಳ್ಳುತ್ತದೆ. ಅಮೇರಿಕದ ಕೃಷಿ ಇಲಾಖೆ ಮತ್ತು ಮಾನ್ಸಂಟೊದ ಸುಪರ್ದಿನಲ್ಲಿರುವ ಈ ತಂತ್ರಜ್ಞಾನದಿಂದಾಗಿ, ರೈತ ಪ್ರತಿ ಬಿತ್ತನೆಗೆ ಕಂಪನಿ ಎದುರು ಭವಿಷ್ಯತ್ತಿನಲ್ಲಿ ಕಾಯುತ್ತ ಕುಳಿತಿರಬೇಕಾಗುತ್ತದೆ. ಆದರೆ ರೈತರನ್ನು ಬೀಜ ಭಿಕ್ಷೆಗೆ ನಿಲ್ಲಿಸುವ ಈ ತಂತ್ರಜ್ಞಾನ ಪೂರ್ಣ ಪ್ರಮಾಣದಲ್ಲಿ ಅಭಿವೃದ್ಧಿಗೊಂಡಿಲ್ಲ. ಈ ರೀತಿ ಕುಲಾಂತರಗೊಂಡ ಸಸ್ಯಗಳ ಪುನರುಜ್ಜೀವನಕ್ಕೆ ರಾಸಾಯನಿಕವನ್ನು ಲೇಪಿಸಬೇಕಾಗುತ್ತದೆ. ಇದಕ್ಕಾಗಿ ಪ್ರತಿ ಬಾರಿ ಕಂಪನಿಗೆ ಪ್ರತಿವರ್ಷ ಹಣಪಾವತಿ ಮಾಡಿ ಕಾದುನಿಲ್ಲಬೇಕು. ಜಗತ್ತಿನಾದ್ಯಂತ 13 ಕೋಟಿ ರೈತರು ಕುಲಾಂತರಿ ಬೆಳೆ ಬೆಳೆಯುತ್ತಿದ್ದಾರೆನ್ನಲಾಗಿದೆ. ಅವುಗಳಲ್ಲಿ ಶೇ. 90 ಭಾಗ ತೃತೀಯ ರಾಷ್ಟ್ರಗಳ ರೈತರೇ ಇದ್ದಾರೆ. ಚೀನಾದಲ್ಲಿ 6.4 ಮಿಲಿಯನ್, ಸಣ್ಣ ರೈತರು, ಭಾರತದಲ್ಲಿ ಒಂದು ಮಿಲಿಯನ್, ಫಿಲಿಫೈನ್ಸ್‌ನಲ್ಲಿ 50 ಸಾವಿರ ರೈತರು ಕುಲಾಂತರಿಗಳ ಬಳಕೆ ಮಾಡುತ್ತಿದ್ದಾರೆ. ಆಸ್ಟ್ರೇಲಿಯಾ, ಕ್ವೀನ್‌ಲ್ಯಾಂಡ್‌ಗಳು ಮಾತ್ರ ಕುಲಾಂತರಿ ತಂತ್ರಜ್ಞಾನಕ್ಕೆ ನಿಷೇಧ ವಿಧಿಸಿಲ್ಲ. ಸೌಥ್‌ವೇಲ್ಸ್, ವಿಕ್ಟೋರಿಯ, ತೌಸ್ಮಾನಿಯಾ ದೇಶಗಳು ಆರಂಭದಲ್ಲಿ ಬೇಡವೆಂದರೂ 2008ರಲ್ಲಿ ಬಳಕೆಗೆ ಶುರು ಮಾಡಿವೆ. ಕೆನಡಾ ಮತ್ತು ಅಮೇರಿಕದಲ್ಲಿ ಅದು ಹೆಚ್ಚು ಬಳಕೆಯಲ್ಲಿದೆ. ಆದರೆ ಜಪಾನ್‌ನ ಗ್ರಾಹಕರು ಕುಲಾಂತರಿ ಆಹಾರೋತ್ಪನ್ನಗಳ ಆಮದು ಮತ್ತು ಉತ್ಪಾದನೆಯನ್ನು ಪ್ರಬಲವಾಗಿ ವಿರೋಧಿಸಿರುವ ಕಾರಣ ಕುಲಾಂತರಿಗಳು ಅಲ್ಲಿ ಪ್ರವೇಶಿಸಿಲ್ಲ. ಪಾಕಿಸ್ತಾನ ಹೈಬ್ರಿಡ್ ಬೀಜಗಳಿಗೆ ಉತ್ತೇಜನ ನೀಡಲಾಗಿ ಪ್ರಮುಖ ಬೆಳೆಗಳಾದ ಭತ್ತ ಮತ್ತು ಗೋಧಿಯ ಹೈಬ್ರೀಡ್ ಬೀಜಗಳನ್ನು ಮನ್ಸಾಂಟೋ ಮಾರಾಟ ಮಾಡಿತು. ಇಳುವರಿಯು ಹೆಚ್ಚಿತು. ಮುಂದೆ ಬೀಜಕ್ಕಾಗಿ ಕಂಪನಿ ಎದುರು ಕೈಯೊಡ್ಡಿ ನಿಲ್ಲಬೇಕಾದೀತು ಎಂದು ಗುತ್ತಿಗೆಯನ್ನು ಮುಂದುವರಿಸಲಿಲ್ಲ. ಜಾಂಬಿಯಾ ದೇಶದಲ್ಲಿ 2002ರಲ್ಲಿ ಬರಗಾಲ ತೀವ್ರವಾಗಿತ್ತು. ಅಮೇರಿಕಾ ನೆರವಿಗೆ ಬಂದು ಜೋಳ ಮತ್ತು ಗೋಧಿಯನ್ನು ಕೊಡುವ ಬಗ್ಗೆ ಹೇಳಿತ್ತು. ಕುಲಾಂತರಿ ತಳಿಗಳ ಅಪಾಯವೆಂದರೆ ಕಾಳುಗಳ ರೂಪದಲ್ಲಿ ಬಂದು ದೇಸೀ ಬಿತ್ತನೆಯೊಂದಿಗೆ ಬೆರತು ಹೋಗುವುದಾಗಿತ್ತು. ಅಂತಾಗಿ ಜಾಂಬಿಯ,

ಕಾಳನ್ನೂ ಹಿಟ್ಟು ಮಾಡಿಕೊಡಲು ಕೇಳಿಕೊಂಡಿತು. ಅಮೇರಿಕ ಕಾಳು ಮಾತ್ರ ಕೊಡುತ್ತೇವೆ, ಹಿಟ್ಟನ್ನಲ್ಲ ಎಂದಾಗ ಜಾಂಬಿಯ ಅದನ್ನು ಪಡೆಯಲಿಚ್ಛಿಸಲಿಲ್ಲ. ಬರಗಾಲದ ನೆಪದಲ್ಲಿ ಆಫ್ರೀಕಾ ದೇಶಗಳಿಗೆ ನೆರವೆಂದು ಕುಲಾಂತರಿಗಳನ್ನು ವರ್ಗಾಯಿಸುವ ಹುನ್ನಾರಕ್ಕೆ ಜಾಂಬಿಯಾ ಎಡೆಗೊಡಲಿಲ್ಲ. (ಕ.ಪ್ರ:8.2.10)

ಹೀಗೆ ವಿವಿಧ ಪರ–ವಿರೋಧ ಅಭಿಪ್ರಾಯಗಳ ಹಿನ್ನೆಲೆಯಲ್ಲಿ ಸಮಾಲೋಚನಾ ಸಭೆಯ ಅಂತ್ಯದಲ್ಲಿ ಕೇಂದ್ರ ಸಚಿವ ಜೈರಾಂ ರಮೇಶ್ ಅವರು: ದೇಶದ ಏಳು ಕಡೆ ಸುಮಾರು ಎಂಟು ಸಾವಿರ ಜನರ ಅಹವಾಲುಗಳನ್ನು ಆಲಿಸಿದ್ದೇನೆ. ಬಿಟಿ ಪರ–ವಿರೋಧ ಅಭಿಪ್ರಾಯಗಳನ್ನು ಸಮಗ್ರವಾಗಿ ಪರಿಶೀಲಿಸಿ ಕ್ರೋಢೀಕರಿಸಿ ಫೆಬ್ರವರಿ ಹತ್ತರಂದು ಕೇಂದ್ರದ ಪರವಾಗಿ ತೀರ್ಮಾನವನ್ನು ಪ್ರಕಟಿಸಲಾಗುವುದು. ಸರ್ಕಾರ ಏನೇ ಕಾರಣಕ್ಕೂ ಏಕಪಕ್ಷೀಯ ನಿಧಾರ ತೆಗೆದುಕೊಳ್ಳುವುದಿಲ್ಲ. ಜನಾಭಿಪ್ರಾಯಕ್ಕೂ ಮನ್ನಣೆ ಕೊಡಲಾಗುತ್ತದೆ; ಜೊತೆಗೆ ವೈಜ್ಞಾನಿಕ ಸಂಶೋಧನೆಗಳನ್ನೂ ಗಮನಿಸಲೇ ಬೇಕಾಗುತ್ತದೆ. ಈ ನಿರ್ಧಾರದಲ್ಲಿ ದೇಶದ ಅರ್ಧ ಜನತೆ ಪರವಾಗಿದ್ದರೆ ಉಳಿದರ್ಧ ಜನತೆಗೆ ಭಿನ್ನಮತವಿರಬಹುದು. ಭವಿಷ್ಯದಲ್ಲಿ ಆಹಾರದ ಬಿಕ್ಕಟ್ಟು ಉಂಟಾಗದಂತೆ ನೋಡಿಕೊಳ್ಳಬೇಕಾದ ಹೊಣೆ ನಮ್ಮ ಮೇಲಿದೆ ಎಂದು ಫೆಬ್ರವರಿ 10ರ ತೀರ್ಮಾನ ಕಾದು ನೋಡಲು ಹೇಳಿ ಸಭೆಯನ್ನು ಮುಕ್ತಾಯ ಮಾಡಿದರು.

**ತಾತ್ಕಾಲಿಕ ತೀರ್ಮಾನ ಘೋಷಣೆ:** ಮಾತುಕೊಟ್ಟಂತೆ ಕೇಂದ್ರ ಸಚಿವ ಜೈರಾಂ ರಮೇಶ್ ಅವರು ಫೆಬ್ರವರಿ 10 ರಂದು ಪ್ರಕಟಿಸಿದ ತೀರ್ಮಾನವೆಂದರೆ, ಕೇಂದ್ರ ಸರ್ಕಾರ ಕುಲಾಂತರಿ ಬದನೆಗೆ ಆರು ತಿಂಗಳ ಕಾಲ ತಡೆಯೊಡ್ಡಲಾಗಿದೆ ಎಂದು ಬಿಟಿ ಬದನೆಯ ಪ್ರವೇಶಕ್ಕೆ ತಾತ್ಕಾಲಿಕ ತಡೆಯಾಜ್ಞೆ ವಿಧಿಸಿದುದಾಗಿತ್ತು. ಅರ್ಥಾತ್ ಪ್ರವೇಶದ ಮುಂದೂಡಿಕೆ ಆಗಿತ್ತು. ಆದರೆ ನಿಷೇಧ ಹೇರಿರಲಿಲ್ಲ. ಹೆಚ್ಚಿನ ಸಂಶೋಧನೆ ಹಾಗೂ ಅಧ್ಯಯನಗಳು ನಡೆಯಬೇಕಾಗಿರುವ ಕಾರಣ ಸದ್ಯಕ್ಕೆ ಬಿಟಿ ಬದನೆಗೆ ಅನುಮತಿ ನೀಡಲು ಸಾಧ್ಯವಿಲ್ಲ ಎಂದು ಪ್ರಕಟಿಸಿದಂತಾಗಿತ್ತು. ಆದರೆ ಈ ನೀತಿ ಕುಲಾಂತರಿ ಮತ್ತು ಜೈವಿಕ ವಿಜ್ಞಾನಾಧಾರಿತ ಬೆಳೆ, ಸಂಶೋಧನೆಗಳಿಗೆ ಅನ್ವಯವಾಗುವುದಿಲ್ಲ ಎಂದೂ ಅವರ ಹೇಳಿಕೆ ಇತ್ತು. ಅಂತಾ ರಾಷ್ಟ್ರೀಯ ಒತ್ತಡ ಹಾಗೂ ಕೇಂದ್ರ ಸರ್ಕಾರದ ನಿಲುವನ್ನು ಗಮನಿಸಿದರೆ ಬಿಟಿ ಬದನೆಗೆ ಭಾರತ ನಿಷೇಧ ಹಾಕುವುದು ಸುಲಭವಲ್ಲ. ಹೆಚ್ಚೆಂದರೆ ಸಂಶೋಧನೆಯ ಕಾರಣ ಒಡ್ಡಿ ಸುಮಾರು ಎರಡು ವರ್ಷಗಳ ತನಕ್ ಬಿಟಿ ಪ್ರವೇಶವನ್ನು ತಡೆಯಬಹುದೆನ್ನುವ

ಅಭಿಪ್ರಾಯ ವ್ಯಕ್ತವಾಗಿತ್ತು. ಈ ನಿರ್ಧಾರ ಕೇವಲ ಬಿಟಿ ಬದನೆಗೆ ಸದ್ಯಕ್ಕೆ ಸೀಮಿತ. ನಿಷೇಧ ಹೇರಿದರೆ ಅಮೆರಿಕ ಬಿಟಿ ಬದನೆ ಸಂಬಂಧ, ನಮ್ಮ ದೇಶವನ್ನು 'ಡಬ್ಲ್ಯುಟಿಒ ವಿವಾದ ಇತ್ಯರ್ಥ ಸಮಿತಿ'ಗೆ ಎಳೆದೊಯ್ದರೆ ಕಷ್ಟ. ಹಿಂದೆ ಕುಲಾಂತರಿ ಉತ್ಪನ್ನಗಳನ್ನು ತಿರಸ್ಕರಿಸಿದ್ದ ಐರೋಪ್ಯ ಒಕ್ಕೂಟಕ್ಕೆ ಇಂಥ ಪರಿಸ್ಥಿತಿ ಎದುರಾಗಿತ್ತು. ಭಾರತದ ಸಂಶೋಧನೆಗಳಿಗೆ ಧನಸಹಾಯ ನೀಡುತ್ತಿರುವ ಯುಎಸ್‌ಎಐಡಿ (ಯುನೈಟೆಡ್ ಸ್ಟೇಟ್ಸ್ ಏಜೆನ್ಸಿ ಫಾರ್ ಇಂಟರ್ ನ್ಯಾಷನಲ್ ಡೆವಲಪ್‌ಮೆಂಟ್)ಯು ಭಾರಿ ಒತ್ತಡ ಹೇರಿತ್ತು. ಮಹಿಕೋ ಕಂಪನಿ ಸಂಶೋಧನೆಗೂ ಅದರದೇ ಧನಸಹಾಯ. ಅದರ ಕುಲಾಂತರಿಬ ಉದ್ಯಮ ತುಂಬ ಪ್ರಬಲ ಹಾಗೂ ಪ್ರಭಾವಿ ಆಗಿದೆ.

ಇತ್ತ ಪ್ರಧಾನಿ ಮನಮೋಹನ್ ಸಿಂಗ್ ಅವರು 2005ರಲ್ಲಿಯೆ ಕೃಷಿ ಸಂಶೋಧನೆ, ಮಾರುಕಟ್ಟೆ ಜ್ಞಾನ ವಿನಿಮಯ ಸಂಬಂಧವಾಗಿ ಅಮೆರಿಕ ಜೊತೆ ಒಪ್ಪಂದ ಮಾಡಿಕೊಂಡಿದ್ದಾರೆ ಹಾಗೂ ಕುಲಾಂತರಿ ಬೆಳೆಗಳ ಬಗ್ಗೆಯೂ ಆಸಕ್ತಿ ತೋರಿದ್ದಾರೆ. ಕೇಂದ್ರ ಸಂಪುಟದ ಕೃಷಿ ಸಚಿವ ಶರದ್‌ಪವಾರ್, ಪೃಥ್ವೀರಾಜ್ ಚೌಹಾಣ್ ಮತ್ತು ಕಪಿಲ್ ಸಿಬಲ್ ಸಹ ಬಿಟಿ ಪರ ಆಸಕ್ತಿ ತಳೆದಿದ್ದಾರೆ. ಜೈರಾಮ್ ರಮೇಶ್ ಅವರು ಸದ್ಯಕ್ಕೆ ಭಾರತದಲ್ಲಿ ಬಿಟಿ ಬದನೆಗೆ ಅನುಮತಿ ಇಲ್ಲ ಎಂದು ರೈತರ ಮತ್ತು ಸಾರ್ವಜನಿಕರ ಅಭಿಪ್ರಾಯದ ಹಿನ್ನೆಲೆಯಲ್ಲಿ ಘೋಷಿಸಿದ ಬಗ್ಗೆ ಈ ಸಂಪುಟದ ಸಚಿವರಿಗೆ ಅಸಮಾಧಾನವಾಗಿತ್ತು. ಕುಲಾಂತರಿ ತಳಿಗಳಿಗೆ ತಡೆ ಒಡ್ಡಿದರೆ ಆಹಾರ ಸಮಸ್ಯೆ ಹೆಚ್ಚುತ್ತದೆ ಎಂಬುದು ಶರದ್ ಪವಾರ್ ಹೇಳಿಕೆ ಆಗಿತ್ತು; ಬಿಟಿ ಹತ್ತಿ ದೇಶದಲ್ಲಿ ಯಶಸ್ವಿಯಾಗಿದೆ ಎಂಬುದು ಅವರ ಮಾತಾಗಿತ್ತು. ಹೀಗಾಗಿ ಈ ವಿಷಯದಲ್ಲಿ ಪ್ರಧಾನಿಯವರು ಮಧ್ಯಪ್ರವೇಶಿಸಬೇಕು ಎಂದು ಆಗ್ರಹಿಸಿದ್ದರು. ಈ ಬಗ್ಗೆ ನಿರ್ಧಾರ ಪ್ರಧಾನಿಯವರ ಅಂಗಳದಲ್ಲಿ ಆಗಬೇಕಾಯಿತು.

ಫ್ರಾನ್ಸ್‌ನ ಪ್ರೊ॥ ಜಿ.ಇ. ಸೆರಲಿನಿ ಅವರು, ಬಿಟಿ ಬದನೆಗೆ ಅವಕಾಶ ನೀಡಲು ಹೇಳಿರುವ ಪರಿಣಿತರ ಸಮಿತಿಯ ವರದಿಯಲ್ಲಿ ಹಲವು ಲೋಪಗಳು ಇವೆ. ಮಾನವನ ಆರೋಗ್ಯದ ಮೇಲೆ ಆಗುವ ಪರಿಣಾಮದ ಕುರಿತು ಹೇಳಿಲ್ಲ ಎಂದಿದ್ದಾರೆ. ಅಮೆರಿಕದ ಡಾ॥ ಡೌನ್ ಗುರೇನ್ ಶೆರ್ಮಾನ್ ಕೂಡ ಬಿಟಿ ತಳಿಗಳ ಇಳುವರಿಯ ಹೆಚ್ಚಳ ಕಳೆದ 13 ವರ್ಷಗಳಲ್ಲಿ ಶೇ.14ರಷ್ಟಿದ್ದು ಅದು ಹೇಳಿಕೊಳ್ಳುವಂಥ ಸಾಧನೆ ಏನಲ್ಲ ಎಂಬ ಅಭಿಪ್ರಾಯ ವ್ಯಕ್ತ ಮಾಡಿದ್ದಾರೆ. ನ್ಯೂಜಿಲೆಂಡ್‌ನ ಡಾ॥ಜಾಕ್‌ಹೆನ್‌ಮೆನ್ ಅವರು ಭಾರತದ ಬಿಟಿ ಬಗ್ಗೆಯ ಸಂಶೋಧನೆ ಅಂತಾರಾಷ್ಟ್ರೀಯ ಮಟ್ಟದಲ್ಲಿ

ಎಂದಿದ್ದಾರೆ. ಟಾಟಾ ಇನ್‌ಸ್ಟಿಟ್ಯೂಟ್ ಆಫ್ ಸೋಷಿಯಲ್ ಸೈನ್ ಸಂಸ್ಥೆಯ ನಿರ್ದೇಶಕ ಎನ್. ಪರಶುರಾಮನ್ ಅವರು ಬಿಟಿ ಬದನೆಯ ಅಡ್ಡ ಪರಿಣಾಮಗಳ ಬಗ್ಗೆ ಅಧ್ಯಯನ ಆಗಿಲ್ಲ ಎಂದಿದ್ದಾರೆ. ಹೀಗೆ ಖ್ಯಾತ ವಿಜ್ಞಾನಿಗಳ ಅಭಿಪ್ರಾಯಗಳಲ್ಲಿ ಬಿ.ಟಿ.ಯ ಅಪರಿಪೂರ್ಣತೆ, ಹಾಗೂ ಮಿತಿಗಳ ಚಿತ್ರಣವಿದೆ. ಆದರೆ ಬಯೋಕಾನ್ ಇಂಡಿಯಾದ ಅಧ್ಯಕ್ಷ ಕಿರಣ್ ಮಜುಂದಾರ್ ಶಾ ಅವರು ಕೇಂದ್ರ ಸರ್ಕಾರವು ಒತ್ತಡಕ್ಕೆ ಮಣಿದು ಬಿಟಿ ಬದನೆಗೆ ನಿರ್ಬಂಧ ವಿಧಿಸಿದೆ. ಬಿಟಿ ಉದ್ಯಮಕ್ಕೆ ಭಾರತದ ಸಂದೇಶ ಪೂರಕವಾಗಿಲ್ಲ ಎಂಬ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಆದರೆ ಬಿ.ಟಿ. ಪರವೇ ವಾಲಬೇಕೆನ್ನುವುದು ಒಂದು ಒತ್ತಡವೇ ಆಗುತ್ತದೆ. ಈ ದೃಷ್ಟಿಯಿಂದ ಭಾರತದ ತಾತ್ಕಾಲಿಕ ತಡೆಯು ಬಿಟಿ ಕುರಿತಾಗಿ ಕಾದು ನೋಡಿ ಅನ್ವಯಿಸುವ ಅಂಶಗಳತ್ತ ಗಮನ ಹರಿಸಿದೆ ಎನ್ನಬೇಕು.

ಇನ್ನು ಕೃಷಿ ಸಚಿವ ಶರದ್‌ಪವಾರ್ ಅವರು ಬಿಟಿ ಬದನೆ ಪರವಾಗಿ ಪ್ರಧಾನಿಯವರಿಗೆ ಆರು ಪುಟಗಳ ಪತ್ರ ಬರೆದು ಕುಲಾಂತರಿ ಆಹಾರದ ವಿಶೇಷವೆಂದರೆ 'ಹೆಚ್ಚು ಇಳುವರಿ ಹಾಗೂ ಕಡಿಮೆ ಫಸಲು ನಾಶ' ಆಗಿದೆ. ಇದಕ್ಕಾಗಿ ಈ ಆಹಾರ ಸುರಕ್ಷತೆಯ ಹಾದಿಯನ್ನು ತುಳಿಯುವವರು ಹೆಚ್ಚುತ್ತಿದ್ದಾರೆ; ಎಂದಿದ್ದಾರೆ. ಸರ್ವೋಚ್ಚ ನ್ಯಾಯಾಲಯವು ನೇಮಿಸಿದ ವಿಜ್ಞಾನಿಯೊಬ್ಬರು ಹೇಳಿರುವ ಬಿಟಿ ಅಪಾಯದ ಕುರಿತಾದ ಒಂದೇ ಒಂದು ಮಾತನ್ನು ಪವಾರ್ ಹೇಳಿಲ್ಲ. ಯುರೋಪ್ ಮತ್ತು ಜಪಾನ್‌ನಲ್ಲಿ ಈ ತಳಿಯನ್ನು ಸಂಪೂರ್ಣವಾಗಿ ತಿರಸ್ಕರಿಸಿರುವ ಬಗ್ಗೆ ಒಂದು ಮಾತೂ ಹೇಳಿಲ್ಲ. ಭಾರತ ಮತ್ತು ಅಮೆರಿಕ ನಡುವೆ ಕೃಷಿ ಮತ್ತು ಜೈವಿಕ ತಂತ್ರಜ್ಞಾನಕ್ಕೆ ಸಂಬಂಧಿಸಿದಂತೆ ಬೌದ್ಧಿಕ ಆಸ್ತಿ ಹಕ್ಕುಗಳನ್ನು ನಿಯಮಿತಗೊಳಿಸುವುದು; ಕೃಷಿಯ ಖಾಸಗೀಕರಣವನ್ನು ಉತ್ತೇಜಿಸುವಲ್ಲಿ ಅಮೆರಿಕದ ಕೃಷಿ ಉದ್ಯಮ ಮತ್ತು ಭಾಋತದ ಕೃಷಿ ವಲಯದ ಸಹಯೋಗ, ಈ ಕುರಿತ ಮನವಿ ಪತ್ರಕ್ಕೆ ಕೇಂದ್ರ ಸಂಪುಟವು ಸಮ್ಮತಿ ನೀಡಿದೆ. ಇದು ಮಾನ್ಸಾಂಟೊ ರೀತಿಯ ಖಾಸಗಿ ಕಾರ್ಪೋರೇಷನ್‌ಗಳ ಭಾರತದ ಕೃಷಿ ಸಂಶೋಧನೆ ಚಟುವಟಿಕೆಗಳನ್ನು ನೇರವಾಗಿ ಅಂಕೆಗಿಟ್ಟುಕೊಳ್ಳಲು ಅವಕಾಶ ಮಾಡಿಕೊಡುತ್ತದೆ. ಅಂದರೆ ಬಹುರಾಷ್ಟ್ರೀಯ ಕಂಪನಿಗಳು ಸಂಶೋಧನೆಯಿಂದ ಹಿಡಿದು, ಉತ್ಪಾದನೆ, ಮಾರುಕಟ್ಟೆ ಸಂಬಂಧದವರೆಗೆ ಮೇಲಾಳಿಕೆ ಪಡೆದ ಸ್ಥಿಯಲ್ಲಿರುತ್ತವೆ. ಇಂಥ ಸಂಬಂಧದ ಆಹಾರ ಸುರಕ್ಷತೆ ಭಾರತದ್ಯಾಗಿರಲು ಸಾಧ್ಯವಿಲ್ಲ ಎಂಬುದು ಖ್ಯಾತ ಅಂಕಣಕಾರ ಶ್ರೀ ಟಿ.ಜಿ.ಎಸ್. ಜಾರ್ಜ್ ಅವರ ವಿವೇಚನೆ ಆಗಿದೆ (28.2.2010). ಒಟ್ಟಿನಲ್ಲಿ

ಪ್ರಧಾನಿಯವರು ಬಿಟಿ ಬದನೆಗೆ ಅನಿರ್ದಿಷ್ಟ ಕಾಲ ತಡೆ ಇರಬಾರದು ಎಂದಿರುವ ಮಾತಿನಲ್ಲಿ ಬಹುರಾಷ್ಟ್ರೀಯ ಕಂಪನಿಗಳಿಗೆ ಈ ದಿಸೆಯಲ್ಲಿ ಅನುಮತಿಯನ್ನು ವಿಳಂಬವಾಗಿಯಾದರೂ ಕೊಡಲೇ ಬೇಕಾಗುತ್ತದೆ ಎಂಬ ವ್ಯಾಖ್ಯೆಯ ಮಾತನ್ನು ಜಾರ್ಜ್ ಅವರು ಹೇಳಿದ್ದಾರೆ.

**ಮಂಥನ:** *ಬಿ.ಟಿ. ಹತ್ತಿ ಬಳಕೆಯ ಸಂದರ್ಭದಲ್ಲಿ ಎದ್ದಂಥ ವಿವಾದಕ್ಕಿಂತ ಬಿಟಿ ಬದನೆಯನ್ನು ಮಾರುಕಟ್ಟೆಗೆ ಬಿಡುವ ವಿಷಯ ಇಡಿ ದೇಶಾದ್ಯಂತ ಚರ್ಚೆಗೀಡಾಗಿದೆ. ಈ ಕುಲಾಂತರಿ ಬೆಳೆ ಆಹಾರ ಬೆಳೆ ಆಗಿರುವುದು; ಬಿಟಿ ತಂತ್ರಜ್ಞಾನದ ಇತರ ಆಹಾರ ಬೆಳೆಯ ಮಾರುಕಟ್ಟೆ ಪ್ರವೇಶಕ್ಕೂ ಇದು ನಾಂದಿ ಆಗುವುದೇ ಎಂಬ ಅನುಮಾನವೇ ಈ ಚರ್ಚೆಗೆ ಕಾರಣವಾಗಿದೆ. ಈ ದೃಷ್ಟಿಯಿಂದ ಕೇಂದ್ರ ಸರ್ಕಾರದ ಪರಿಸರ ಸಚಿವರು ದೇಶದ ವಿವಿಧ ಕಡೆ, ರೈತರ, ವಿಜ್ಞಾನಿಗಳ, ಸಾರ್ವಜನಿಕರ, ಆಸಕ್ತರೊಡನೆ ಸಮಾಲೋಚನೆ ನಡೆಸಿ ಅಭಿಪ್ರಾಯ ಪಡೆಯುತ್ತಿರುವುದು ಪ್ರಜಾಸತ್ತಾತ್ಮಕ ನಡೆಯೆ ಆಗಿದೆ. ಬೆಂಗಳೂರಿನಲ್ಲಿ 6.2.2010 ರಂದು ನಡೆದ ಸಮಾಲೋಚನಾ ಸಭೆಯಲ್ಲಿ ಬಿಟಿ ಬದನೆ ಪರ–ವಿರೋಧ ವಾದಗಳು ಮಂಡಿತವಾದುವು. ಸಭೆಯ ಹೊರಗಡೆ ಪ್ರತಿಭಟನೆ ಹಾಗೂ ರೈಲು ನಿಲ್ದಾಣದಿಂದ ಸಭೆಯ ಸ್ಥಳ ಜ್ಞಾನಜ್ಯೋತಿ ಸಭಾಂಗಣದವರೆಗೆ ಬಿಟಿ ಬದನೆ ವಿರುದ್ಧವಾಗಿ ಮೆರವಣಿಗೆಯೂ ನಡೆದು ಬಂತು. ಕಾವೇರಿ ಚಳವಳಿಯ ನಂತರ ಬಿಟಿ ವಿರೋಧದ ಚಳವಳಿಯೂ ಇದಾಗಿತ್ತು. ಎಲ್ಲರ ಆಸಕ್ತಿಯನ್ನು ಕೆರಳಿತ್ತು. ಬಿಟಿ ಚಳವಳಿ ಎನಿಸಿತ್ತು. ಕಾವೇರಿಯದು ಜಲಸಮಸ್ಯೆ ಸಮಾಜದ ಎಲ್ಲ ವಲಯದ ಜನತೆ ಏಕತ್ರಿತವಾಗಿ ರೈತಪರವಾದ ಧ್ವನಿಯಾಗಿತ್ತು. ಬಿಟಿ ಬದನೆಯದು ಆಹಾರ ಬೆಳೆಯ ಸಮಸ್ಯೆ. ಆದರೆ ಪರ–ವಿರೋಧಗಳು, ವಿಜ್ಞಾನಿಗಳು ರೈತರಲ್ಲೂ ಕಂಡು ಬಂದಿತ್ತು. ಪರಕ್ಕಿಂತ ವಿರೋಧವೇ ಹೆಚ್ಚಿತ್ತು. ಅಭಿಪ್ರಾಯ ವೈಖರಿಗಳೂ ಇದ್ದುವು. ಎರಡೂ ಬಣದಲ್ಲಿ ಉಬ್ಬಿಸಿ ಹೇಳಿದ ಅಭಿಪ್ರಾಯಗಳೂ ಇದ್ದುವು. ಆರ್ಥಿಕ ಲಾಭವೆಂದು, ಆಹಾರ ಸಮಸ್ಯೆ ಎಂದು ವಿಷವುಂಡು ಜೀವಹಾನಿ ಮಾಡಕೊಳ್ಳಬೇಕೆ? ಎಂದು ಬಿಟಿ ಬದನೆಯಲ್ಲಿ ವಿಷವನ್ನು ಕಂಡವರ ಪ್ರಶ್ನೆ ಆಗಿತ್ತು. ನಮ್ಮಲ್ಲಿಯೆ ವಿಪುಲವಾಗಿ ಸಾವಿರಾರು ಬದನೆ ತಳಿ ಇರುವಾಗ ಬಹುರಾಷ್ಟ್ರೀಯ ಕಂಪನಿಯ ತಂತ್ರಜ್ಞಾನದ ತಳಿ ನಮಗೇಕೆ? ಎಂಬುದು ಅವರ ಪ್ರಶ್ನೆ ಆಗಿತ್ತು. ಪ್ರಯೋಗಶಾಲೆಯ ಸಂಶೋಧನೆಯ ಲಾಭ, ರೈತರಿಗೆ ಬಿಟಿ ಮೂಲಕ ದೊರಕಿ ಆರ್ಥಿಕ ಚೈತನ್ಯ ಬೆಳೆಯುತ್ತದೆ. ಬಿಟಿಯಲ್ಲಿ ವಿಷವಿದೆ ಎನ್ನುಬುವುದು ಅಪಪ್ರಚಾರ ಎಂಬುದು ಪರವಾದಿಗಳ ಮಾತಾಗಿತ್ತು. ಆದರೆ ಬಿಟಿ ಬದನೆ ಕುರಿತಾದ ಹೆಚ್ಚಿನ ಸಂಶೋಧನೆ ಅಗತ್ಯ ಎಂಬುದು ಮಾತ್ರ ಎಲ್ಲರಿಗೂ ಸಮ್ಮತವಾದ ವಿಷಯವೆನಿಸಿತ್ತು.*

ಬಿಟಿ ತಂತ್ರಜ್ಞಾನದ ಬೆಳೆಗಳು ಅಭಿವೃದ್ಧಿ ಸಾಧಕ ರಾಷ್ಟ್ರಗಳಲ್ಲಿಯ ಬಡತನ ನಿರ್ಮೂಲಕ್ಕೆ ಸಹಕಾರಿ ಎಂಬ ನಂಬಿಕೆಗೆ ಅಮೆರಿಕೆಯ ಕಾರ್ನಲ್ ವಿಶ್ವವಿದ್ಯಾಲಯದ ಸಂಶೋಧನಾಧ್ಯಯನವು ಎರವಾಗಿ ಬಂದಿತು. 1996 ರಲ್ಲಿ ಚೈನಾವು ಮಾನ್ಸೆಂಟೊ ಮೂಲಕ ಬಿಟಿ ಹತ್ತಿಗೆ ಪ್ರವೇಶ ನೀಡಿತ್ತು. ಅದು ಕಳೆದು ಏಳು ವರ್ಷಗಳ ನಂತರ ಬಿಟಿ ಹತ್ತಿಯು ಮರು ಕೀಟ ಹಾವಳಿಗೆ (Secondary) ತುತ್ತಾಯಿತು. ಮೊದಲಿನ ಸ್ಥಿತಿಗತಿಯೇ ಉಂಟಾಗಿ ಮೊದಲಿಗಿಂತ 20 ರಷ್ಟು ಆರ್ಥಿಕವಾಗಿ ಕೀಟನಾಶಕಗಳನ್ನು ಬೆಳೆಯ ಕಾಲದಲ್ಲಿ ಬಳಸಬೇಕಾಯಿತು. ಅಂದರೆ ಬೋಲ್‌ವರ್ಮ್‌ನಂಥ ಮೂಲ ಕೀಟ ಹಾವಳಿಯನ್ನು ಬಿಟಿ ಹತ್ತಿ ನಿಯಂತ್ರಿಸಿಕೊಂಡರೂ ಮಿರಿಡ್ಸ್‌ನಂಥ ನಂತರದ ಕೀಟ ಹಾವಳಿಯನ್ನು (ಸೆಕಂಡರಿ ಕೀಟಗಳು) ನಿಯಂತ್ರಿಸುವಲ್ಲಿ ವಿಫಲವಾಗುವ ಬಗ್ಗೆ ಅಲ್ಲಿಯ ವಿಜ್ಞಾನಿಗಳು ನುಡಿದಿದ್ದಾರೆ. ಇಂಥ ಪರಿಸ್ಥಿತಿಗೆ ಮಾನ್ಸಾಂಟೋದ ಕಾಮಿಲ್ಸ್ ಮಿರಾಂಡ ಗೊನ್ ಸಲ್ವಸ್ ಅವರ ರೀತ್ಯಾ, ನಕಲಿ ಬೀಜಗಳ ಬಳಕೆಯು ಇದಕ್ಕೆ ಕಾರಣವಾಗಿ ರೈತರಿಗೆ ಹಾನಿಯುಂಟುಮಾಡಿವೆ. ಎಂದಿದೆ. ಚೈನಾದ ಸಂಶೋಧಕರಾದ ಹುವಾಂಗ್ ಜಿಕೂನ್ ಅವರು, ನಡೆದಿರುವ ಬಿಟಿ ಸಂಶೋಧನೆಗಳೆಲ್ಲ (misleading) ಹಾದಿ ತಪ್ಪಿಸುವಂಥವೂ ಇವೆ ಎಂದಿದ್ದಾರೆ.* ಭಾರತವು ಚೈನಾದ ಬಿಟಿ ಸ್ವೀಕರಣ ಮಾದರಿಯನ್ನನುಸರಿಸಿ, ಹತ್ತಿಯನ್ನು ಬೆಳೆಸಿಕೊಂಡು ಬಂದಿದೆ. ಆದರೆ ಎರಡನೆ ಮಾದರಿ ಕೀಟಗಳಿಗೆ ಬಿಟಿಯ ಉತ್ತರ ಸಶಕ್ತವಿಲ್ಲವೆಂಬ ಭಾವನೆ ಪ್ರಚಲಿತವಾಗಿರುವಲ್ಲಿ ಬಿಟಿ ಬದನೆಯ ಸಂಬಂಧದಲ್ಲಿಯೂ ಕಾದು ನೋಡಬೇಕಾಗುತ್ತದೆ. (28.3.2001) ರ ವಿಧಾನ ಪರಿಷತ್ತಿನ ನಡವಳಿಕೆಗಳಲ್ಲಿ ಬಿ.ಟಿ. ಹತ್ತಿ, ಟರ್ಮಿನೇಟರ್ ಜೆನ್ ಬಗ್ಗೆಯೂ ಶಾಸಕರು ಚರ್ಚೆ ಮಾಡಿದ ಸಂಗತಿಯೂ ಇದೆ. ಈ ನಡುವೆ ಭಾರತಕ್ಕೆ ಜಾಗತೀಕರಣದ ಒತ್ತಾಯದಿಂದಾಗಿ ಅಮೆರಿಕದೊಡನಿರುವ ಒಪ್ಪಂದ ಪಾಲಿಸಬೇಕಾಗಿದೆ. ಪ್ರಧಾನಿ, ಕೃಷಿ ಸಚಿವರು ಹಾಗೂ ಸಂಪುಟದ ಕೆಲಸಚಿವರ ಒಲವು ಬಿಟಿ ಬದನೆ ಪರವಾಗಿರುವುದು, ಬಿಟಿ ಬದನೆ ನಿಷೇಧಕ್ಕೆ ಭಾರತ ಸಿದ್ಧವಿಲ್ಲವೆಂಬಂತಾಗಿದೆ. ಆದರೆ ರೈತರ ಅನುಭವಕ್ಕೆ ವಿಜ್ಞಾನಿಗಳ ಚಿಂತನೆಗಳ, ಸಾರ್ವನಿಕ (ಗ್ರಾಹಕರ) ಭಾವನೆಗಳಿಗೆ ಆದರ ಕೊಟ್ಟು, ಉಭಯ ಸಮ್ಮತವಾಗುವಂಥ, ಜಾಗೃತೀಕರಣವಾಗುವಂಥ: ಸೂತ್ರವನ್ನು ರೂಪಿಸಬೇಕಿದೆ. ಇಲ್ಲಿ ಸಾಂಸ್ಕೃತಿಕ ದೇಶೀಯ ನೆಲೆಯನ್ನು ಉಳಿಸಿಕೊಂಡು ಜಗತ್ತಿನ ಜಾಗೃತಿಯಲ್ಲಿ ಸಹಯೋಗಿಗಳಾಗಬೇಕು. ನಮ್ಮ ನೆಲದ ಬೆಳೆ ಪರಂಪರೆ ಮತ್ತು ತಂತ್ರಜ್ಞಾನದಿಂದ ನಳನಳಿಸಬೇಕು. ರೈತರ ಬದುಕನ್ನು ಹಸನಾಗಿಸಬೇಕು.

* Bt retreat in china;, *Down to Earth,* August 31, 2006 New Delhi. PP.20-21

# ಅಧ್ಯಾಯ 12

# ನೀರಾ ಚಳವಳಿ

## ವಿಷಯ: 1: ನೀರಾ ಚಳವಳಿ: ವಿಧಾನಸಭಾ ಚರ್ಚೆಗಳು (2001)

ನೀರಾ ಒಂದು ಆರೋಗ್ಯಕರ ಪೇಯ ಎಂಬುದೂ ಪಾರಂಪರಿಕವಾಗಿ ನಿಷೇಧಿತವಲ್ಲದ ಒಪ್ಪಿತ ಪೇಯ, ಸೂರ್ಯೋದಯದ ಮುನ್ನಿನ ತೆಂಗಿನಮರದ ದ್ರಾವಕ ಎಂಬುದೂ ಪ್ರಚಲಿತವೇ ಇತ್ತು.

ತೆಂಗಿಗೆ ಬಿದ್ದ ನುಸಿರೋಗಕ್ಕೆ ನೀರಾ ಇಳಿಕೆ ಒಂದು ಮದ್ದು ಎಂಬ ಭಾವನೆ ರೈತರಲ್ಲಿ ಮುಖ್ಯವಾಗಿ ಬೆಳೆದಿತ್ತು. ಎಳನೀರಿಗಿದ್ದ ಮೌಲ್ಯ ವಿದೇಶಿಕಂಪೆನಿಗಳ ರಸದ್ರವ್ಯಗಳಿಂದಾಗಿ ಹಿಂಜರಿಕೆ ಆಗಿತ್ತು. ರೈತ ಸಂಘಟನೆಗಳು ಈ ದಿಸೆಯಲ್ಲಿ ಕಾರ್ಯೋದ್ಯುಕ್ತವಾದುವು. ಆದರೆ 'ನೀರಾ' ಹೆಸರಿನಲ್ಲಿ ದುರ್ಬಳಕೆ ಆದೀತೆಂದು ಸರ್ಕಾರ ಅನುಮತಿ ನೀಡಿರಲಿಲ್ಲ.

ಅಕ್ರಮ ಇಳುವರಿ ತಪ್ಪಿಸಲು ಲೇಬಲ್ ಹಾಕಿ ಮಾರಿದರೆ ಅನುಕೂಲ; ಒಂದು ಎಕರೆಯಲ್ಲಿರುವ ತೆಂಗಿನ ಮರಗಳ ಪೈಕಿ 30 ಮರಗಳಲ್ಲಿ ಮಾತ್ರ ನೀರಾ ಇಳಿಸಬೇಕು. ಅದರಿಂದ ಸಿಕ್ಕಾಬಟ್ಟೆ ಇಳುವರಿಗೆ ಅವಕಾಶವಾಗುವುದಿಲ್ಲ. ಮೂರ್ತೆದಾರರನ್ನು ಕರೆಸಿ ಸಾವಿರಗಟ್ಟಲೆ ಕೂಲಿಕೊಟ್ಟು ಇಳಿಸುವ ಬದಲು ರೈತರೇ ನೀರಾ ಇಳಿಸುವುದನ್ನು ಕಲಿತರೆ ಸುಲಭ ದರದಲ್ಲಿ ಮಾರಲು ಅನುಕೂಲ. ಅಬ್ಕಾರಿಗೆ ಹಾನಿ ಎಂದರೆ, ಹೆಂಡದ ಬದಲು ಆರೋಗ್ಯಕರ ನೀರಾ ಮಾರಾಟದಿಂದ ಆ ನಷ್ಟ ತುಂಬಿಕೊಳ್ಳಬಹುದು. ಇವೆಲ್ಲ ಒಂದು ವ್ಯವಸ್ಥೆಗೆ ಬಂದಾಗ ರೈತರು ತಮ್ಮ ಅಗತ್ಯಕ್ಕೆ ಬೇಕಾದಷ್ಟು ಮಾತ್ರ ಇಳಿಸಿ ಮಾರಾಟಮಾಡಲು ಸುಲಭ ಎಂದೆಲ್ಲ ರೈತಸಂಘದ ವಾದವಾಗಿತ್ತು. ಇದಕ್ಕಾಗಿ ರಾಜ್ಯ ರೈತ ಸಂಘದ ನಾಯಕರು ಇಳಿಸಿದ ನೀರಾವನ್ನು ಪಾನ ಮಾಡಿ ಒಂದು ರೀತಿಯಲ್ಲಿ ಚಳವಳಿಯನ್ನು ಆರಂಭಿಸಿದರೆನ್ನಬೇಕು. ಇದು ತೆಂಗು ಬೆಳೆವ ಪ್ರದೇಶಗಳಲ್ಲಿ ನುಸಿರೋಗ ಹರಡಲಾರಂಭಿಸಿದಾಗ ಒಂದು ವ್ಯಾಪಕ ಚಳುವಳಿಯಾಗಿ ಮುಟಗೊಳ್ಳಲಾರಂಭಿಸಿತು. ಹೀಗಾಗಿ ವಿಧಾನಸಭೆಯಲ್ಲೂ ಈ ಚಳುವಳಿ ಕುರಿತ ಚರ್ಚೆ ಪ್ರತಿಧ್ವನಿಸಲಾರಂಭಿಸಿತು. ರೈತರ ಸಮಸ್ಯೆಗೆ ಶಾಸಕರ ಸ್ಪಂದನವಾಗಿತ್ತು.

29.3.2001ರ ವಿಧಾನಸಭಾಧಿವೇಶನ*[1] ಮಾನ್ಯ **ಶ್ರೀ ಎಂ.ವಿ. ವೆಂಕಟಪ್ಪ** ನವರ ಅಧ್ಯಕ್ಷತೆಯಲ್ಲಿ ನಡೆದ ಸಂದರ್ಭ. 27.3.2001 ರಂದು 'ನೀರಾ' ಚಳುವಳಿ ನಡೆದ ಸಂದರ್ಭದಲ್ಲಿ ನೀರಾ ಚಳುವಳಿಗಾರರನ್ನು ಬಂಧಿಸಿ, ಪೋಲೀಸ್ ದೌರ್ಜನ್ಯ ಅವರ ಮೇಲೆ ನಡೆದಿರುವ ಬಗ್ಗೆ ಶೂನ್ಯವೇಳೆಯಲ್ಲಿ **ಶ್ರೀ ಡಿ.ವಿ. ಸದಾನಂದಗೌಡ** ಅವರು ಪ್ರಸ್ತಾಪಿಸಿದರು. **ಶ್ರೀ ಸಿ. ಬೈರೇಗೌಡ** ಹಾಗೂ **ಶ್ರೀ ಅರಗ ಜ್ಞಾನೇಂದ್ರ** ಅವರೂ ಈ ಬಗ್ಗೆ ಮಾತನಾಡಿದ ಮೇಲೆ ಮಾನ್ಯ ಕಾನೂನು ಮತ್ತು ಸಂಸದೀಯ ವ್ಯವಹಾರಗಳ ಸಚಿವರು ಅದಕ್ಕೆ ಉತ್ತರಿಸಿದರು.

30.3.2001 ರಂದು ನಡೆದ ವಿಧಾನ ಸಭಾಧಿವೇಶನದಲ್ಲಿ *[2] **ಶ್ರೀ ಡಿ.ವಿ. ಸದಾನಂದ ಗೌಡ ಮತ್ತು ಶ್ರೀ ವಿಶ್ವೇಶ್ವರ ಹೆಗಡೆ ಕಾಗೇರಿ** ಅವರುಗಳು ಮಾತನಾಡಿ 'ನೀರಾ' ಚಳುವಳಿಯನ್ನು ಹತ್ತಿಕ್ಕಲು ಸರ್ಕಾರ ಯತ್ನಿಸುತ್ತಿದೆ ಎಂದು ಅದರ ಕ್ರಮವನ್ನು ವಿರೋಧಿಸಿದರು. ಅರಸೀಕೆರೆ ತಾಲೂಕು ಕಛೇರಿ ಎದುರು ಧರಣಿ ನಡೆಸುತ್ತಿದ್ದ 'ನೀರಾ' ರೈತರನ್ನು ಬಂಧಿಸಿರುವ ಬಗ್ಗೆ ಪ್ರಸ್ತಾಪಿಸಿದರು. ಸುಮಾರು 600 ಜನ ಪೋಲೀಸರ ದಂಡು ನೀರಾ ಇಳಿಸುತ್ತಿದ್ದ ರೈತರ ಗ್ರಾಮಗಳಿಗೆ ಹೋಗಿ ಧಾಳಿ ಮಾಡಿ ದೌರ್ಜನ್ಯ ನಡೆಸಿರುವುದನ್ನು ಪ್ರಸ್ತಾಪಿಸಿದರು. ಮಾನ್ಯ ಗೃಹ ಸಚಿವರು ಆ ಮಾತುಗಳಿಗೆ ತಮ್ಮ ಉತ್ತರವನ್ನು ನೀಡಿದರು.

### ವಿಷಯ 2: ನುಸಿಪೀಡೆ, ಕೀಟಬಾಧೆಗಳಿಂದ ತೆಂಗು, ತೊಗರಿ ಇತ್ಯಾದಿ ಬೆಳೆಹಾನಿ; ರೈತರ ಸಮಸ್ಯೆ. (ಪತ್ರಿಕಾ ವರದಿಗಳು)

ರಾಜ್ಯದ 7 ಕೋಟಿ ತೆಂಗಿನ ಮರಗಳಲ್ಲಿ ಒಂದು ಕೋಟಿ ಮರಗಳಿಗೆ ನುಸಿರೋಗ ತಗುಲಿ ತೆಂಗಿನಕಾಯಿ ನಾಶವಾಗಿದೆ. ಕೇರಳದಲ್ಲಿ ಮರವೊಂದಕ್ಕೆ 18 ರೂ ನಂತೆ ವೆಚ್ಚಮಾಡಿ ಮರಕ್ಕೆ ಚಿಕಿತ್ಸೆ ನೀಡುತ್ತಿರುವಂತೆ ರಾಜ್ಯ ಸರ್ಕಾರ ಕ್ರಮಕೈಗೊಳ್ಳಲಿ. ಚಿಕಿತ್ಸೆ ನೀಡಿದಾಗ ಆ ಮರದ ಎಳನೀರು ಬಳಸದಂತೆ ಕರಪತ್ರದ ಮೂಲಕ ಜನರಿಗೆ ತಿಳಿವಳಿಕೆ ನೀಡಲಿ. ವಿಳಂಬ ಮಾಡದೆ ಕ್ರಮಕೈಗೊಳ್ಳಲಿ. ಇಲ್ಲವಾದರೆ ಬೀದಿಗಿಳಿದು ಹೋರಾಟ ಮಾಡುವುದಾಗಿ ಮಾಜಿ ಪ್ರಧಾನಿ ಶ್ರೀ ಹೆಚ್.ಡಿ.ದೇವೇಗೌಡರು ಎಚ್ಚರಿಸಿದರು (4.8.2001); ಮುಂಗಾರು ಹಂಗಾಮಿನಲ್ಲಿ

---

*1. ವಿಧಾನಸಭಾ ನಡವಳಿಕೆಗಳು. 11ನೇ ವಿಧಾನ ಸಭೆ (3ನೇ ಅಧಿವೇಶನ) ಸಂಕ್ಷಿಪ್ತ ವರದಿ (29.3.2001) ಪು.86 (ಸೂಚನೆ: ಈ ಕೃತಿ ಬರಹದ ವೇಳೆಗೆ ಪೂರ್ಣ ವರದಿ ಮುದ್ರಿತವಾಗಿರಲಿಲ್ಲವಾಗಿ ಸಂಕ್ಷಿಪ್ತ ವರದಿಯನ್ನಷ್ಟೆ ನೀಡಿದೆ.)

*2. ವಿಧಾನಸಭಾ ನಡವಳಿಕೆಗಳು, ಅದೇ (30.3.2001), ಪುಟ 96–97

ನೀರಾವರಿ ಆಶ್ರಯದಲ್ಲಿ ಬೆಳೆದ ಸೋಯಾಬೀನ್ ಎಲೆ ತಿನ್ನುವ ಸ್ಪೊಡೋಪ್ಟರಾ ಕೀಟದ ಹಾವಳಿಯಿಂದ ಆ ಬೆಳೆಗೆ ನುಸಿಪೀಡೆ ಜೊತೆಗೆ ಇದೂ ಸೇರಿ ರೈತರಿಗೆ ತೀವ್ರ ಬೆಳೆ ಹಾನಿ ಉಂಟಾಗಿ ಅವರು ಕುಸಿದಿದ್ದಾರೆ. ಮೀಥೈಲ್ ಫ್ಯಾರಾಥಿಯಾನ್ ಅಥವಾ ಮೇಲಾಥಿಯಾನ್ ಧೂಳೀಕರಿಸುವಿಕೆಯಿಂದ ಕೀಟ ಹಾವಳಿ ನಿಯಂತ್ರಿಸಬಹುದೆಂಬ ತಜ್ಞರ ಸೂಚನೆಯ ನಡುವೆಯೂ ರೈತರು ಚೇತರಿಸಿಕೊಂಡಿಲ್ಲ; ಬರದಿಂದ ತತ್ತರಿಸಿರುವ ಬೆಳಗಾವಿ ಜಿಲ್ಲೆಯಲ್ಲಿ ಬತ್ತದ ಬೆಳೆಗೆ ಹಿರೋಗ್ಲೈಫಸ್ ಬ್ಯಾನಿಯನ್ ಅಥವಾ ಬತ್ತದ ಜಿಟ್ಟೆ ಎನ್ನುವ ಮಿಡತೆಗಳಿಂದ ಮಿಡತೆ ರೋಗ ಉಂಟಾಗಿ ಫಸಲು ಅನಿಶ್ಚಿತವಾಗಿರುವುದರಿಂದ ರೈತ ಸಮೂಹ ಕಂಗೆಟ್ಟಿದೆ. ಕ್ರಿಮಿನಾಶಕ ಬಳಕೆಯೂ ಫಲಕಾರಿ ಆಗಿಲ್ಲ (20.8.2001). ಮಂಡ್ಯ ಜಿಲ್ಲೆಯಲ್ಲಿ ಭತ್ತಕ್ಕೆ ಗಂಟುಜಂತು ರೋಗವು ಮಲಾಯಿಡೋಗ್ಯೈನ್ ಗ್ರಾಮನಿಕೋಲ ಎಂಬ ಸೂಕ್ಷ್ಮ ಕ್ರಿಮಿಜೀವಿಯಿಂದ ಉಂಟಾಗಿ ರೈತರನ್ನು ಕಂಗೆಡಿಸಿದೆ. ರೈತರಿಗೆ ಸಹಾಯಧನವನ್ನು ಕೀಟನಾಶಕ ಕಾರ್ಬೋಫ್ಯುರಾನ್ ಹರಳು ಔಷಧಿ ಖರೀದಿಸಲು ಶೇ. 50ರಷ್ಟು ಹಣ ನೀಡಲು ಪ್ರಸ್ತಾವನೆಯನ್ನು ಸರ್ಕಾರಕ್ಕೆ ಕಳುಹಿಸಲಾಗಿದೆ. (18.8.2001). ಈ ವರ್ಷದ ಆರಂಭದಲ್ಲಿ ಎಲೆತಿನ್ನುವ ಕಪ್ಪುತಲೆ ಹುಳು ಬೆಂಗಳೂರು ಗ್ರಾಮಾಂತರ ಜಿಲ್ಲೆ ಚನ್ನಪಟ್ಟಣ ತಾಲೂಕಿನ ಪ್ರಮುಖ ತೆಂಗು ಬೆಳೆ ಪ್ರದೇಶಗಳಾದ ತಿಟ್ಟಮಾರನಹಳ್ಳಿ, ಪಟ್ಲ, ಮೈನಾಯ್ಕನ ಹಳ್ಳಿ, ಅಬ್ಬೂರು, ಮಾಕಳಿ ಇತ್ಯಾದಿ ಎಪ್ಪತ್ತು ಹಳ್ಳಿಗಳಲ್ಲಿ ಬಾಧೆಯನ್ನುಂಟುಮಾಡಿದೆ. ಇದರ ಜೊತೆಗೆ ನುಸಿಪೀಡೆಯೂ ಹಬ್ಬಿ ತೆಂಗಿನ ಬೆಳೆಗೆ ಹಾನಿತಂದಿದೆ. ಇದಲ್ಲದೆ ಕೆಂಪುಮೂತಿದುಂಬಿ ಹಾವಳಿಯೂ ಸಹ ತೆಂಗುಬೆಳೆಯ ಮೇಲೆ ಹಾನಿಯನ್ನುಂಟುಮಾಡಿದೆ. ರೋಗಕ್ಕೆ ತುತ್ತಾದ ತೆಂಗಿನಮರಗಳಿಗೆ ಇಲಾಖೆ ಕೊಟ್ಟ ಮಾನೋಕ್ರೋಟೋಪಾಸ್ ಔಷಧಿ ಹಾಕಿದರೂ ಫಲಕಾಣಲಿಲ್ಲ. ಬೇವಿನ ಹಿಂಡಿಯಂಥ ಸಾವಯವ ಗೊಬ್ಬರದ ಬಳಕೆಯನ್ನು ರೈತರು ಮಾಡಿದರೂ ಅದೂ ಕೂಡ ಫಲಕೊಟ್ಟಿಲ್ಲ. ಈ ಹುಳುಗಳು ತೆಂಗಿನಮರದ ಎಲೆಯನ್ನು ಪೂರ್ಣ ತಿಂದುಬಿಡುತ್ತವೆ. ಅದರಿಂದ ಮರಗಳ ಕಾಂಡ ಜೋತುಬಿದ್ದ ಕಾಯಿಗಳು ಉದುರುತ್ತವೆ. ಮರದ ಸತ್ವ ಕಡಿಮೆಯಾಗಿ ಇಳುವರಿ ಕುಸಿದು ಕೊನೆಗೆ ಮರ ಒಣಗಿ ಗಾಳಿ ಬೀಸಿದರೆ ಉರುಳಿ ಬೀಳುತ್ತದೆ. ಇವೆಲ್ಲದರ ಜೊತೆಗೆ ವಿದೇಶದಿಂದ ತೆಂಗು ಉತ್ಪನ್ನಗಳ ಆಮದು ಜಾಸ್ತಿಯಾದ್ದರಿಂದ ದೇಶಿಯ ತೆಂಗಿನಬೆಲೆಯಲ್ಲಿ ತೀವ್ರ ಕುಸಿತವಾಗಿದೆ. ಈ ಬಗೆಗೆಲ್ಲ ಕ್ರಮಕೈಗೊಳ್ಳಲು ತಾಲ್ಲೂಕು ಕೃಷಿಕ ಸಮಾಜ, ತಾಲ್ಲೂಕು ರೈತ ಸಂಘ, ತಾಲ್ಲೂಕು ಕನ್ನಡ ರಕ್ಷಣಾವೇದಿಕೆ, ನೀರಾ ಉತ್ಪಾದಕರ ಸಹಕಾರ ಸಂಘ ಸರ್ಕಾರವನ್ನು ಆಗ್ರಹಪಡಿಸುತ್ತಿವೆ ಎಂದು ಶ್ರೀ ಎಂ. ಶಿವಮಾದು

ವರದಿ ಮಾಡಿದ್ದಾರೆ. (27.8.2001). ತೆಂಗಿಗೆ ತಗುಲಿರುವ ಮಾರಿ, ಕುಮುಟಾ ತಾಲ್ಲೂಕಿಗೂ ಕಾಲಿಟ್ಟು ತೆಂಗಿನಬೆಳೆಗೆ ತೀವ್ರವಾಗಿ ಹಾನಿಯಾಗಿದ್ದು ರೈತರು ಸಂಕಷ್ಟದಲ್ಲಿದ್ದಾರೆ. ತೆಂಗಿನಕಾಯಿ ಬೆಲೆಯೂ ಕಡಿಮೆಯಾಗಿ ಅವರು ಕಂಗಾಲಾಗಿದ್ದಾರೆ. ತಾಲೂಕಿನ ಉಳ್ವೆಕೋಡಿ, ಶಶಿಹಿತ್ಲು, ಹೊಳೆಗದ್ದೆಗಳಲ್ಲಿ ಸುಮಾರು ಸಾವಿರದ ನೂರಾ ಅರವತ್ತು ಮರಗಳು ನುಸಿ ಪೀಡೆಗೆ ತುತ್ತಾಗಿವೆ. ಗಾಳಿಯಿಂದ ಈ ನುಸಿಪೀಡೆ ಹರಡುತ್ತದೆ ಎಂಬ ಮಾತಿಗೆ ಅಷ್ಟು ಆಧಾರ ಕಾಣದು. ನುಸಿಪೀಡೆ ತಗುಲಿದ ಎಳನೀರನ್ನು ಬೇರೆ ಊರುಗಳಿಂದ ತಂದು ಸಂಪರ್ಕಗೊಳಿಸಿದ್ದು ಇದಕ್ಕೆ ಕಾರಣ ಎನ್ನುವುದುಂಟು; ಉತ್ತರಕನ್ನಡ ಜಿಲ್ಲೆಯಲ್ಲಿ ನೀರಾ ಇಳಿಸುವುದು ಲಾಭಕಾರಿಯಲ್ಲ ಎನ್ನುವುದು ಕೂಡ ಗಮನಕ್ಕೆ ಬಂದಿದೆ. ಈ ರೋಗಕ್ಕೆ ಹತೋಟಿಗೆ ತೆಂಗಿನ ಗೊಂಚಲಿಗೆ ಬೇವಿನ ಎಣ್ಣೆ, ಬೆಳ್ಳುಳ್ಳಿ ಎಣ್ಣೆಯ ಮಿಶ್ರಣವನ್ನು ಮತ್ತು ಬೇರಿಗೆ ನವೋಕ್ರಾನ್ ಸಿಂಪಡಿಸಬೇಕು ಎಂದು ಹೇಳಲಾಗಿದೆ (5.11.2001). ಹಾಸನ ಜಿಲ್ಲೆಯಲ್ಲಿ ತೆಂಗಿನ ಮರಗಳಿಗೆ ಮಾನೋಕ್ರೋಟೋಪಾಸ್ ಔಷಧಿಯ ಸಿಂಪರಣೆ ನಿಂತುಹೋಗಿದೆ. ಬದಲು ಶೇಕಡ, ಐವತ್ತರಷ್ಟು ಮರಗಳಿಗೆ ನೀರಾ ಕಟ್ಟಿ ಉಳಿದ ಮರಗಳಿಗೆ ಪೌಷ್ಟಿಕವಾಗಿ ಬಲಯುತವಾಗಿ ರೂಪುಗೊಳ್ಳಲು ಸಾವಯವ ಕೃಷಿ ಮಾಡಬೇಕು. ಸರ್ಕಾರ ತೆಂಗು ಬೆಳೆಗಾರರ ಬೆಂಬಲಕ್ಕೆ ಬರಬೇಕು ಎಂದು ಜಿಲ್ಲಾ ಕೃಷಿಕ ಸಮಾಜದ ಅಧ್ಯಕ್ಷ ಶ್ರೀ ಹೆಚ್.ಎಸ್. ಪುಟ್ಟಸ್ವಾಮಿಯವರು ಹೇಳಿದ್ದಾರೆ. (9.12.2001). ತೊಗರಿ ಕಣಜ ಎಂದೇ ಹೆಸರಾಗಿರುವ ಗುಲ್ಬರ್ಗಾ ಜಿಲ್ಲೆಯ ಲಕ್ಷಾಂತರ ಹೆಕ್ಟೇರು ಪ್ರದೇಶದ ತೊಗರಿ ಮತ್ತು ಕಡಲೆ ಬೆಳೆಗಳು ಇವು ನಾಶಮಾಡುತ್ತವೆ. ಜಿಲ್ಲೆಯಲ್ಲಿ ಮೂರು ಹಂತಗಳಲ್ಲಿ ತೊಗರಿ ಬಿತ್ತನೆ ಆಗಿದ್ದು ಕೀಟಹಾವಳಿ ಹೆಚ್ಚಾಗಲು ಅದೂ ಒಂದು ಕಾರಣ. ಆ ಸಮಯದಲ್ಲಿ ಅವು ನಿರೋಧಕ ಶಕ್ತಿ ಪಡೆದುಕೊಳ್ಳುವುದರಿಂದ ಸಮಗ್ರ ನಿರ್ವಹಣಾ ವಿಧಾನ ಅನುಸರಿಸಬೇಕು. ಕೀಟನಾಶಕ ಬಳಕೆಯೊಂದಿಗೆ ಎನ್ಪಿವಿ ನಂಜಾಣು, ಬೇವಿನ ಎಣ್ಣೆ ಬಳಸಿ ಕೀಟ ನಿರ್ವಹಣೆ ಮಾಡಬೇಕು; ಹೊಲಕ್ಕೆ ಹಕ್ಕಿಗಳು ಬರುವಂತೆ ಆಕರ್ಷಿಸಿ ಕೀಟಗಳನ್ನು ನಿಯಂತ್ರಿಸಬೇಕು ಎಂದೆಲ್ಲಾ ಡಾ. ಬಿ.ವಿ. ಪಾಟೀಲರವರು ನುಡಿದಿದ್ದಾರೆ. (1.11.2001). ಈ ಬಾರಿ ತೊಗರಿಗೆ ಬಂಪರ್ ಬೆಲೆಯಿದೆಯೆಂದು ಆ ಬೆಳೆಯ ಬಂಪರ್ ಕ್ರಾಪಿನ ನಿರೀಕ್ಷೆಯಲ್ಲಿದ್ದಾಗ ಗುಲ್ಬರ್ಗಾ ಬೀದರ್ ಪ್ರದೇಶದ ಬಂಗಾರದ ಬೆಳೆಯಾದ ತೊಗರಿಗೆ ಕಾಯಿಕೊರಕ ಕೀಟ ಎನಿಸುವ ಹೀಲಿಯೋಥಿಕ್ ಹುಳದ ಬಾಧೆ ತಗುಲಿದೆ. ರೈತರು ತಮ್ಮ ಹಣವನ್ನೆಲ್ಲಾ ದುಬಾರಿ ಬೆಲೆಯ ಕೀಟನಾಶಕಗಳ ಮೇಲೆ ಹಾಕಿ ಕೀಟಗಳ ಮೇಲೆ ಸುರಿದರೂ ಅವು ತಹಬಂದಿಗೆ ಬಂದಿಲ್ಲ.

ಅಧಿಕಪ್ರಮಾಣದಲ್ಲಿ ಆಗಿದ್ದ ಕಡಲೆ ಮತ್ತು ಹತ್ತಿ ಬಿತ್ತನೆಗೂ ಈ ಕೀಟದ ಹಾವಳಿ ತಗಲುವ ಭಯ ರೈತರನ್ನು ಆವರಿಸಿದೆ. ಕೀಟಧಾಳಿ, ಬೆಲೆ ಕುಸಿತ ಸೇರಿ ಅನೇಕ ಸಮಸ್ಯೆಗಳು ಉಂಟಾಗಿವೆ. ತೊಗರಿ ಕಣದ ರೈತರಿಗೆ ಕೀಟನಾಶಕ ಖರೀದಿಗೆ ಸಬ್ಸಿಡಿ ಘೋಷಣೆ ಮಾಡಬೇಕು ಎಂದು ಈ ಭಾಗದ ರೈತರ ಬೇಡಿಕೆಯಾಗಿದೆ. (10.11.2001), ರೈತ ಸಂಘದ ಅಧ್ಯಕ್ಷ ಮಾರುತಿ ಮಾನ್ಪಡೆಯವರು ವರ್ಷ ಬಿಟ್ಟು ವರ್ಷ ಅಮರುವ ಕೀಟ ಹಾವಳಿಯಿಂದ ತೊಗರಿ ಕಣಜವನ್ನು ಮುಕ್ತಗೊಳಿಸಲು ಸರ್ಕಾರ ದೂರಗಾಮಿ ಯೋಜನೆಗಳನ್ನು ರೂಪಿಸುತ್ತಿಲ್ಲ. ಕೀಟನಾಶಕ ಖರೀದಿಗೆ ತೊಗರಿ ರೈತರಿಗೆ ಸಬ್ಸಿಡಿ ಹಣವನ್ನು ಬಿಡುಗಡೆ ಮಾಡಿಲ್ಲ. ತೆಂಗಿನ ನುಸಿಪೀಡೆ ನಿವಾರಣೆಗೆ ನಲವತ್ತು ಕೋಟಿ ರೂ. ಬಿಡುಗಡೆ ಮಾಡಿರುವಂತೆ ತೊಗರಿ ಕೀಟದ ಹಾವಳಿಗೆ ರೈತರಿಗೆ ಸಬ್ಸಿಡಿ ಹಣ ಬಿಡುಗಡೆ ಮಾಡಬೇಕೆಂದು ಆಗ್ರಹಿಸಿದರು. ನುಸಿಪೀಡೆ ರೋಗಕ್ಕೆ ಸಿಂಪರಣೆ ಮಾಡಿರುವ ಕೀಟನಾಶಕಗಳು ಸಾಮೂಹಿಕ ಸಿಂಪರಣೆಯಾದರೆ ಪರಿಸರದಮೇಲೆ ದುಷ್ಪರಿಣಾಮ ಉಂಟಾಗುತ್ತದೆ. ನೀರಾ ಇಳಿಸುತ್ತಿರುವ ತೆಂಗಿನಮರಗಳಲ್ಲಿ ಹೊಂಬಾಳೆ ಕತ್ತರಿಸುವುದರಿಂದ ಅವಕ್ಕೆ ನುಸಿಪೀಡೆ ಇರುವುದಿಲ್ಲ. ಔಷಧಿ ಹೊಡೆಯುವ ಅಗತ್ಯವೂ ಇಲ್ಲ. ಈಗಾಗಲೇ ತೆಂಗಿನ ಮರಗಳಿಗೆ ಮಾನೋಕ್ರೋಟೋಪಾಸ್ ಔಷಧಿ ಕೊಟ್ಟಿದ್ದರೂ ಪ್ರಯೋಜನಕಾರಿಯಾಗಲಿಲ್ಲ ಎಂದು ಗುಂಡ್ಲುಪೇಟೆ ತಾಲ್ಲೂಕಿನ ರೈತನಾಯಕರು ಅಭಿಪ್ರಾಯ ಪಟ್ಟಿದ್ದಾರೆ (20.11.2001). ಜೈವಿಕ ಸಮತೋಲನ ಸಾಧನೆ ಮತ್ತು ಸಾವಯವ ಕೀಟನಾಶಕಗಳ ಬಳಕೆಯಿಂದ ಮಾತ್ರ ನುಸಿರೋಗ ತಡೆಸಾಧ್ಯ ಎಂಬ ವಿಜ್ಞಾನಿಗಳ ವರದಿಯಂತೆ ತೆಂಗಿನಮರ ಉಳಿಸುವ ಪ್ರಯತ್ನವನ್ನು ಸರ್ಕಾರ ಮಾಡುತ್ತದೆಯೇ ಎಂಬ ಪ್ರಶ್ನೆ ವರದಿಯಲ್ಲಿ ಕೇಳಿ ಬಂದಿದೆ. (27.11.2001). ಬೆಳಗಾವಿ ಜಿಲ್ಲೆಯಲ್ಲಿ ಮುಂಗಾರು ಮಳೆ ಕೈಕೊಟ್ಟ ಕಾರಣ ರೈತರಿಗೆ ಬಿತ್ತನೆ ಮಾಡಲಾಗಿರಲಿಲ್ಲ. ಹಿಂಗಾರಿ ಹಂಗಾಮಿನಲ್ಲಿ ಬೆಳೆದ ಅಲ್ಪಸಲ್ಪ ಬೆಳೆಗಳು ಒಣಗಿವೆ; ರೋಗ ಮತ್ತು ಕೀಟಗಳು ಆಕ್ರಮಿಸಿವೆ. ಹತ್ತಿ, ತೊಗರಿ ಮತ್ತು ಕಡಲೆ ಬೆಳೆಗಳಿಗೆ ಕಾಯಿಕೊರಕ ಕೀಟದ ಬಾಧೆ ತಗುಲಿದೆ. ತಂಬಾಕು ಜೋಳ ಮತ್ತು ಕುಸುಬೆ ಬೆಳೆಗಳಿಗೆ ರಸಹೀರುವ ಕೀಟದ ಬಾಧೆ ಒದಗಿದೆ. ಸೂರ್ಯಕಾಂತಿ ಮತ್ತು ಕಡಲೆ ಬೇಳೆಗಳಿಗೆ ಹಸಿರು ಕೀಟದ ಬಾಧೆ ಕಂಡುಬಂದಿದೆ. ಇಂಥಾ ಸ್ಥಿತಿಯಲ್ಲಿ ರೈತರು ಸಾಲಮಾಡಿ ಹಿಂಗಾರು ಬಿತ್ತನೆಯನ್ನು ಮಾಡಿ ಬೆಳೆಗೆ ಕಷ್ಟಪಟ್ಟು ನೀರುಣಿಸಿ, ಸಾಗುವಳಿ ಮಾಡಿದ್ದರು. ವಿದ್ಯುತ್ ಪೂರೈಕೆಯು ಅಸ್ತವ್ಯಸ್ತವಾಗಿದೆ. ನೀರಾವರಿ ಮಾಡಲಾಗದೆ ಕೆಲಪ್ರಮಾಣದಲ್ಲಿ ಬೆಳೆ ಒಣಗಿತು. ಉಳಿದುವಕ್ಕೆ ಕೀಟ ತಗುಲಿ

ಕೀಟ ಹತ್ತೋಟಿಗಾಗಿ ರೈತರು ಮತ್ತು ಕೃಷಿ ಇಲಾಖೆ ಪ್ರಯತ್ನಿಸಿದರೂ ಪೂರ್ಣವಾಗಿ ಯಶ ಸಾಧಿಸಿಲ್ಲ. ಹೀಗಾಗಿ ರೈತರು ತೀವ್ರ ಸಂಕಷ್ಟ ಪರಿಸ್ಥಿತಿಯನ್ನು ಎದುರಿಸುತ್ತಿದ್ದಾರೆ. (29.12.2001) ಗುಲ್ಬರ್ಗಾ ಜಿಲ್ಲೆಯ ಜೇವರ್ಗಿ ತಾಲ್ಲೂಕಿನಲ್ಲಿ ಐವತ್ತು ಸಾವಿರ ಹೆಕ್ಟೇರಿನಲ್ಲಿ ಹಾಕಿದ ಬೆಳೆಯು ತೇವಾಂಶದ ಕೊರತೆಯಿಂದಾಗಿ ಹಾನಿಗೊಳಗಾಗಿದೆ. ಇದಲ್ಲದೆ ಅಳಂದ, ಶಿವಪುರ ಇತ್ಯಾದಿ ತಾಲ್ಲೂಕುಗಳ ತೊಗರಿಬೆಳೆಗೆ ಗೊಡ್ಡುರೋಗ ತಗುಲಿ ಸಂಪೂರ್ಣ ಬೆಳೆ ಹಾನಿಗೊಂಡು ರೈತರು ಸಂಕಷ್ಟಕ್ಕೀಡಾಗಿದ್ದಾರೆ. ಇತ್ತೀಚಿನ ವರದಿಯ ಪ್ರಕಾರ ನುಸಿಪೀಡೆ ಔಷಧಿ ಬಳಿಸಿದ ರಾಸಾಯನಿಕದಿಂದಾಗಿ ಅನೇಕ ಕಡೆ ದುಷ್ಪರಿಣಾಮ ಉಂಟಾಗಿರುವುದು ಗಮನಕ್ಕೆ ಬಂದಿದೆ. ಸರ್ಕಾರದ ಚಿಂತನೆಯ ಪ್ರಕಾರ ರೈತ ಸಂಪರ್ಕಕೇಂದ್ರಗಳ ನೆರವು ಪಡೆಯದೆ ಮರಗಳಿಗೆ ಕಂಪನಿಯ ಔಷಧಿ ನೀಡಿದ್ದು ಸರಿಯಾಗಲಿಲ್ಲವೆಂಬ ಅಭಿಪ್ರಾಯವೂ ಇದೆ.

**ವಿಷಯ 3: ನೀರಾ ಚಳುವಳಿಯ ಆಯಾಮಗಳು (2001)**

ಕಳೆದ ಒಂದು ವರ್ಷದಲ್ಲಿ ನೀರಾ ಇಳಿಸುವಿಕೆ ಕುರಿತು ಚಳುವಳಿಯೊಂದು ಆರಂಭವಾಯಿತು. ನೀರಾ; ತೆಂಗಿನಮರದಿಂದ ಇಳಿಸುವ ಒಂದು ಆರೋಗ್ಯಕರ ದ್ರವ ಎಂದು ಅಭಿಪ್ರಾಯವಿದೆ. ಜೊತೆಗೆ ನೀರಾ ಇಳಿಸಿದರೆ ತೆಂಗಿನ ಗಿಡಗಳಿಗೆ ರೋಗ ತಗುಲುವುದಿಲ್ಲ ಎಂಬ ಅಭಿಪ್ರಾಯವೂ ಪ್ರಕಟವಾಗಿದೆ. ರೈತರಿಗೆ ನೀರಾ ಮಾರಾಟದಿಂದ ಆದಾಯವೂ ಒದಗುತ್ತದೆ ಎಂಬ ಕಾರಣವೂ ಇದೆ. ನೀರಾವು ಮಾದಕ ದ್ರವ್ಯವಲ್ಲ ಎಂಬ ಕಾರಣವನ್ನು ಕೊಡಲಾಗುತ್ತಿದೆ. ಈ ನೀರಾ ಸಂಬಂಧದಲ್ಲಿ ನಡೆದ ರೈತ ಚಳುವಳಿಗಳು ಧರಣಿ ಸತ್ಯಾಗ್ರಹ, ಪ್ರತಿಭಟನೆ ಹಾಗೂ ಪರಿಹಾರಗಳು ಗಮನಾರ್ಹವಾಗಿ ಕಂಡುಬರುತ್ತವೆ. ರೈತ ಚಳುವಳಿಯ ಒಂದು ಹೊಸ ಆಯಾಮವೂ ಇಲ್ಲಿ ಕಂಡು ಬರುತ್ತದೆ. ವಿಧಾನಸಭೆಯಲ್ಲೂ ಕೂಡ ಇದರ ಕುರಿತ ಚರ್ಚೆಯು ಮಾರ್ಚಿ 2001 ರಲ್ಲಿ ನಡೆದಿದೆ. ಈ ಹಿನ್ನೆಲೆಯಲ್ಲಿ ನೀರಾ ಚಳುವಳಿಗಳ ಕುರಿತ ಮುಂದುವರಿದ ಸಂಗತಿಗಳನ್ನು ಮುಂದಿನಂತೆ ನೀಡಲಾಗಿದೆ. 26.7.2001 ರಂದು ಶ್ರೀ ಎಂ.ವಿ. ವೆಂಕಟಪ್ಪನವರ ಅಧ್ಯಕ್ಷತೆಯಲ್ಲಿ ನಡೆದ ವಿಧಾನಸಭೆಯ ಕಾರ್ಯಕಲಾಪಗಳಲ್ಲಿ, ನಿಲುವಳಿ ಸೂಚನೆ ರೀತ್ಯಾ **ಶ್ರೀ ಡಿ.ವಿ. ಸದಾನಂದಗೌಡ** ಅವರು: ರಾಜ್ಯದಲ್ಲಿ ತೆಂಗಿನ ಮರಗಳಿಗೆ ನುಸಿರೋಗ ಬಂದಿದೆ. **'ನೀರಾ'** ಇಳಿಸಲು ಸರ್ಕಾರ ಒಪ್ಪಿಗೆ ಕೊಡದಿರುವುದರಿಂದ ರೈತರು ಮುಷ್ಕರದಲ್ಲಿ ತೊಡಗಿದ್ದಾರೆ. ಈ ಮುಷ್ಕರದಿಂದ ಉದ್ಭವವಾಗಿರುವ ಕಾನೂನು ಮತ್ತು ಸುವ್ಯವಸ್ಥೆಯು ತೊಂದರೆಗೊಂಡಿದೆ ಎಂದೆಲ್ಲ ವಿಷಯವನ್ನು ಪ್ರಸ್ತಾಪಿಸಿದರು. ಇವರಜೊತೆಗೆ ಶ್ರೀ ಹೆಚ್.ಎಸ್. ಮಹದೇವ ಪ್ರಸಾದ್, ಶ್ರೀ ಪಿ.ಜಿ.ಆರ್. ಸಿಂಧ್ಯ, ಶ್ರೀ ಸಿ.ಗುರುಸ್ವಾಮಿ

ಅವರುಗಳೂ ಮಾತನಾಡಿದರು. 1.8.2001ರ ವಿಧಾನಸಭಾಧಿವೇಶನದಲ್ಲಿ ನಿಯಮ 69ರ ಮೇರೆಗೆ ಸರ್ವಶ್ರೀ ಜಗದೀಶ್ ಶೆಟ್ಟರ್, ಪಿ.ಜಿ.ಆರ್.ಸಿಂಧ್ಯಾ, ಡಿ.ವಿ. ಸದಾನಂದಗೌಡ, ಬಿ. ಸೋಮಶೇಖರ್, ಅರಗ ಜ್ಞಾನೇಂದ್ರ ಮತ್ತು ಇತರರು ರಾಜ್ಯದಲ್ಲಿ ತೆಂಗಿನ ಮರದಿಂದ ನೀರಾ ಇಳಿಸುವ ವಿಚಾರದಲ್ಲಿ ಉಂಟಾಗಿರುವ ಪರಿಸ್ಥಿತಿಯ ಬಗ್ಗೆ ಚರ್ಚೆಯನ್ನು ಮುಂದುವರಿಸಿದರು. ಶ್ರೀ ಕೆ.ಬಿ. ಮಲ್ಲಿಕಾರ್ಜುನ ಅವರೂ ಮಾತನಾಡಿದರು. 3.8.2001ರ ವಿಧಾನಸಭಾಧಿವೇಶನದಲ್ಲಿಯೂ ಇದೇ 69 ನೇ ನಿಯಮದ ಮೇರೆಗೆ ಸರ್ವಶ್ರೀ ಜಗದೀಶ್ ಶೆಟ್ಟರ್, ಪಿ.ಜಿ.ಆರ್. ಸಿಂಧ್ಯಾ, ಡಿ.ವಿ. ಸದಾನಂದಗೌಡ, ಬಿ.ಸೋಮಶೇಖರ್ ಅರಗ ಜ್ಞಾನೇಂದ್ರ ಹಾಗು ಇತರರು ನೀರಾ ಇಳಿಸುವ ವಿಚಾರದಲ್ಲಿ ಉಂಟಾಗಿರುವ ಪರಿಸ್ಥಿಯ ಬಗ್ಗೆ ಚರ್ಚೆಯನ್ನು ಮುಂದುವರಿಸಿದರು. 4.8.2001ರ ವಿಧಾನ ಸಭಾಧಿವೇಶನದಲ್ಲಿಯೂ ಈ ಚರ್ಚೆ ಮುಂದುವರಿಯಿತು.*[3]

ಆಗಸ್ಟ್ ಮೂರರಂದು ವಿಧಾನಪರಿಷತ್ತಿನಲ್ಲಿ ಜನತಾದಳ ತಟಸ್ಥ ಬಣದ ಶಾಸಕ ಶ್ರೀ **ಬಿ.ಎಲ್.ಶಂಕರ್‌ರವರು** ಮಾತನಾಡುತ್ತಾ ತೆಂಗಿನಮರದಿಂದ ನೀರಾ ಇಳಿಸಿದರೆ ನುಸಿಪೀಡೆ ಕಡಿಮೆಯಾಗುತ್ತದೆ ಎಂಬ ಅಭಿಪ್ರಾಯವಿದೆ. ಈ ತೆಂಗಿನ ಮರದಿಂದ ನೀರಾ ಇಳಿಸುವುದರ ಬಗ್ಗೆ ಸರ್ಕಾರ ಸ್ಪಷ್ಟ ನಿರ್ಧಾರ ತೆಗೆದುಕೊಳ್ಳಬೇಕು ಎಂದರು. ಶ್ರೀ.ಸಿದ್ದರಾಜು ಅವರು ಮಾತನಾಡುತ್ತಾ ನೀರಾ ಸಮಸ್ಯೆ ಸೂರ್ಯೋದಯಕ್ಕೆ ಮೊದಲು ನಮಗೆ ಬರುತ್ತದೆ ಎಂದು ತೋಟಗಾರಿಕೆ ಇಲಾಖೆ ಹೇಳುತ್ತದೆ. ಸೂರ್ಯೋದಯದ ನಂತರ ಸಮಸ್ಯೆ ನಮಗೆ ಬರುತ್ತದೆ ಎಂದು ಅಬಕಾರಿ ಇಲಾಖೆಯು ಹೇಳುತ್ತದೆ. ಹಾಗಾಗಿ ನೀರಾ ಬಗ್ಗೆ ವಿಸ್ತೃತ ಚರ್ಚೆ ನಡೆಸಬೇಕು ಎಂದು ಕಳುಹಿಸಿರುವ ಗೊತ್ತುವಳಿ ಸೂಚನೆಯನ್ನು ಚರ್ಚೆಗೆ ತೆಗೆದುಕೊಳ್ಳಬೇಕು ಎಂದು ಅಗ್ರಹಿಸಿದರು.

ಆಗಸ್ಟ್ ಮೂರರಂದು ನಡೆದ ವಿಧಾನಸಭಾಧಿವೇಶನದಲ್ಲಿ ತೆಂಗಿನಬೆಳೆಗೆ ನುಸಿರೋಗ ತಗುಲಿರುವುದರಿಂದ ನೀರಾ ಇಳಿಸುವ ಕುರಿತು ಚರ್ಚೆಗೆ ಮೊದಲು ಅನುಮತಿ ನೀಡಬೇಕೆಂದು ಪ್ರತಿಪಕ್ಷಗಳು ಸಭಾಧ್ಯಕ್ಷರ ಪೀಠದ ಮುಂದೆ ಕೆಲಕಾಲ ಧರಣಿ ಕುಳಿತರು. ತೆಂಗಿನ ಮರಕ್ಕೆ ನುಸಿರೋಗ ತಗುಲಿ ರೈತ ಕಂಗಾಲಾಗಿದ್ದಾನೆ. ಮೊದಲೇ ರೈತರ ಬಗ್ಗೆ ಚರ್ಚಿಸೋಣ. ನಂತರ ವಿಶ್ವವಿದ್ಯಾಲಯ ವಿಧೇಯಕದ ಬಗ್ಗೆ ಚರ್ಚೆಯಾಗಲಿ ಎಂದರು. ಸಭಾಧ್ಯಕ್ಷ ಶ್ರೀ **ಎಂ.ವಿ.ವೆಂಕಟಪ್ಪನವರು**

3. (11ನೇ ವಿಧಾನಸಭೆ 3ನೇ ಅಧಿವೇಶನ, ಸಂಕ್ಷಿಪ್ತ ವರದಿ, 26.7.2001, ಪುಟ 61; 1.8.2001. ಪು. 87; 3.8.2001, ಪು. 103; 4.8.2001, ಪು. 112)

ಅಜಂಡಾಪ್ರಕಾರ ವಿಶ್ವವಿದ್ಯಾಲಯ ವಿಧೇಯಕದ ಬಗ್ಗೆ ಚರ್ಚೆಯಾಗಬೇಕು ಎಂದಾಗ ಪ್ರತಿಪಕ್ಷದ ಸದಸ್ಯರು ನೀರಾಬಗ್ಗೆ ಚರ್ಚೆ ಬೇಕೇ ಬೇಕು ಎಂದು ಘೋಷಣೆ ಕೂಗಿದಾಗ ಸದನವನ್ನು ಸ್ವಲ್ಪಕಾಲ ಸಭಾಧ್ಯಕ್ಷರು ಮುಂದೂಡಿ ಮತ್ತೆ ಸೇರಿದಾಗ ನೀರಾಬಗ್ಗೆ ಚರ್ಚೆಗೆ ಮೊದಲು ಅವಕಾಶ ನೀಡಿದರು.

ಆಗಸ್ಟ್ ನಾಲ್ಕರಂದು ನಡೆದ ವಿಧಾನಸಭಾಧಿವೇಶನದಲ್ಲಿ ತೆಂಗಿನ ಮರಕ್ಕೆ ತಗುಲಿರುವ ನುಸಿಪೀಡೆಯನ್ನು ನಿಯಂತ್ರಿಸಲು ನೀರಾ ಇಳಿಸಲು ಅನುಮತಿ ನೀಡಬೇಕು. ತೆಂಗಿನ ಬೆಳೆನಾಶವಾಗಿ ರೈತ ಕಂಗಾಲಾಗಿ ಆತ್ಮಹತ್ಯೆಯ ದಾರಿ ತುಳಿದಿದ್ದಾನೆ. ಸರ್ಕಾರ ಅವನಿಗೆ ನೆರವಾಗಬೇಕು. ನೀರಾ ಇಳಿಸಲು ಅನುಮತಿ ನೀಡಬಾರದೆಂದು ಸಚಿವ ಸಂಪುಟವು ನಿರ್ಧಾರ ಕೈಗೊಂಡದ್ದು, ಸದನವು ಈ ವಿಷಯದ ಬಗ್ಗೆಯೇ ಚರ್ಚಿಸುತ್ತಿರುವಾಗ ಸರಿಯಲ್ಲ. ಇದರಿಂದ ಸದನದ ಗೌರವವು ಕಡಿಮೆಯಾಯಿತೆಂದು ಪಕ್ಷಗಳು ಆಕ್ಷೇಪಿಸಿದವು.

ಸಂಯುಕ್ತ ಜನತಾದಳದ **ಶ್ರೀ ಕೆ.ಬಿ. ಮಲ್ಲಿಕಾರ್ಜುನ** ಅವರು ರೈತರ ಆರ್ಥಿಕ ಸಂಕಷ್ಟದ ಕಾರಣ ನೀರಾ ಇಳಿಸಲು ತುಂಬಾ ಕಷ್ಟವಾದರೂ ಅನುಮತಿಸಬೇಕೆಂದು ಆಗ್ರಹಿಸುತ್ತಿದ್ದಾರೆ ಎಂದರು. ಮರದಿಂದ ಇಳಿಸಿದ ನೀರಾ ಬೆಳಗಿನ ಜಾವ ಆರು ಗಂಟೆಯವರೆಗೆ ಹೆಂಡ ಆಗದೆ ಆರು ಗಂಟೆಯ ಮೇಲೆ ಹೆಂಡವೆನಿಸುತ್ತದೆ. ಅಂತಾಗಿ ನೀರಾವನ್ನು ನೀರಾವಾಗಿಯೇ ಉಳಿಸಬೇಕಿದೆ. ಸಂಕಷ್ಟದಲ್ಲಿರುವ ರೈತರು ಮಾತ್ರ ನೀರಾ ಇಳಿಸುವರೆ ವಿನಾ ಉಳಿದವರಾರೂ ಹಣಕ್ಕೆಂದೇ ನೀರಾ ಇಳಿಸುವುದಿಲ್ಲ ಎಂದು ನುಡಿದರು. ಕಾನೂನಿಗೆ ಹೆದರುವವರು ಮಾತ್ರ ನೀರಾ ಇಳಿಸುತ್ತಿಲ್ಲ ಎಂದರು.

ಬಿ.ಜೆ.ಪಿ.ಯ **ಶ್ರೀ ಗುರುಸ್ವಾಮಿಯವರು** ಮಾತನಾಡಿ ನೀರಾ ಇಳಿಸುವ ರೈತರ ಮೇಲೆ ದೌರ್ಜನ್ಯ ನಡೆದಿದೆ. ಅಬಕಾರಿಯಿಂದ ಎಷ್ಟು ಹಣ ಸರ್ಕಾರಕ್ಕೆ ಬರುವುದೋ ಅಷ್ಟೇ ಹಣವನ್ನು ರೈತರು ನೀರಾ ಇಳಿಸಿ ಅದರಿಂದ ಬರುವಲ್ಲಿ ಕೊಡಲು ಸಿದ್ಧರಿದ್ದಾರೆ. ಅಂತಾಗಿ ತಾತ್ಕಾಲಿಕವಾಗಿಯಾದರೂ ಅನುಮತಿ ನೀಡಿ ಎಂದರು. ಬಿ.ಜೆ.ಪಿ.ಯ ಶ್ರೀ ಎಂ.ಪಿ.ಲಕ್ಷ್ಮೀನಾರಾಯಣ ಅವರು ನೀರಾ ಇಳಿಸಲು ಅನುಮತಿ ನೀಡಬೇಕೆಂದು ವಿಧಾನಮಂಡಲದ ಕೃಷಿ ಇಲಾಖಾ ಸಮಿತಿ ಶಿಫಾರಸು ಮಾಡಿದೆ ಎಂದರು.

ಗೃಹ ಸಚಿವ ಶ್ರೀ ಎಂ. ಮಲ್ಲಿಕಾರ್ಜುನ ಖರ್ಗೆ ಅವರು ಚರ್ಚೆಯ ಮಧ್ಯೆ ಪ್ರವೇಶಿಸಿ, ರಾಜ್ಯದಲ್ಲಿರುವ ಒಂಭತ್ತು ಕೋಟಿ ತೆಂಗಿನ ಮರದಲ್ಲಿ ಎರಡು ಕೋಟಿ ಮರಕ್ಕೆ ನುಸಿಪೀಡೆ ಇದೆ. ನೀರಾಗೆ ಅನುಮತಿಸಿದರೆ ಪ್ರತಿದಿನ ನೂರು ಕೋಟಿ ಲೀಟರ್ ಒದಗುತ್ತದೆ. ಈಗ ಪ್ರತಿ ವರ್ಷ ಹದಿನೇಳು ಕೋಟಿ ಲೀಟರ್ ಸಾರಾಯಿ ತಯಾರಾಗುತ್ತಿರುವಾಗ ನೀರಾವನ್ನು ಹೀಗೆ ಭಾರೀ ಪ್ರಮಾಣದಲ್ಲಿ ತೆಗೆದು ಏನು ಮಾಡಬೇಕು? ಅದನ್ನು ಕಡ್ಡಾಯವಾಗಿ ಕುಡಿಸಬೇಕೇ? ಎಂದು ಪ್ರಶ್ನಿಸಿ ಆ ಬದಲು ತೆಂಗಿನ ಮರದ ಚಿಕಿತ್ಸೆಗೆ ಹೆಚ್ಚಿನ ಹಣಬೇಕು ಅಂತ ಕೇಳಿ ಎಂದು ಪ್ರತಿಪಕ್ಷದವರಿಗೆ ಹೇಳಿದರು. ಅದಕ್ಕೆ ಪ್ರತಿಕ್ರಿಯಿಸಿದ ಪ್ರತಿಪಕ್ಷದ ಉಪನಾಯಕ **ಶ್ರೀ ಡಿ.ವಿ. ಸದಾನಂದ ಗೌಡ** ಅವರು ನುಸಿರೋಗ ನಿಯಂತ್ರಣಕ್ಕೆ ಅದೇ ಮಾರ್ಗ. ಅದರಿಂದ ತೆಂಗಿನಮರ ಉಳಿಯುತ್ತದೆ ಎಂದರು. ಜಾತ್ಯಾತೀತ ಜನತಾದಳದ **ಶ್ರೀ ಚನ್ನಿಗಪ್ಪ** ಅವರು ನೀರಾ ಇಳಿಸಲು ಅನುಮತಿಗೆ ಆಗ್ರಹಿಸಿದರೆ, ಕಾಂಗ್ರೆಸ್ಸಿನ **ಶ್ರೀ ಬಿ.ಆರ್. ನೀಲಕಂಠಪ್ಪ** ಅವರು ಅನುಮತಿ ನೀಡಬಾರದು ಎಂದರು. ಸಚಿವ ಸಂಪುಟದ ನಿರ್ಧಾರ ಈ ದಿಸೆಯಲ್ಲಿ ಸ್ವಾಗತಾರ್ಹ ಎಂದರು. ಈ ನಡುವೆ **ಶ್ರೀ ಸುಭಾಶ್ ಗುತ್ತೇದಾರರು** ಒಂದು ತೆಂಗಿನ ಮರದಿಂದ ನೀರಾ ಇಳಿಸಲು ಐದು ನಿಮಿಷ ಸಾಕು, ಎಂಬ ಅಭಿಪ್ರಾಯ ವ್ಯಕ್ತಪಡಿಸಿ ಈಚಲು ಮರದಿಂದ ಅದನ್ನು ಮೂರು ನಿಮಿಷದಲ್ಲಿ ಇಳಿಸಬಹುದು ಎಂದರು. ಆದರೆ ಸಚಿವ ಶ್ರೀ ಕಾಗೋಡು ತಿಮ್ಮಪ್ಪನವರು ಈಚಲು ಮರದಿಂದ ನೀರಾ ಇಳಿಸುವುದು ಸುಲಭ. ತೆಂಗಿನಮರದಿಂದ ಕಷ್ಟ ಎಂದರು. (ಪತ್ರಿಕಾವಾರ್ತೆ 5.8.2001)

**ನುಸಿಪೀಡೆ ಹಾಗೂ ನೀರಾ ಪರಿಹಾರದ ವಿಚಾರ ಸಂಕಿರಣವೊಂದರಲ್ಲಿ** ರಾಜ್ಯ ರೈತಸಂಘದ ಅಧ್ಯಕ್ಷ ಪ್ರೊ.ಎಂ.ಡಿ. ನಂಜುಂಡಸ್ವಾಮಿಯವರು ತಮ್ಮ ಅಧ್ಯಕ್ಷ ಭಾಷಣದಲ್ಲಿ ಉದಾರೀಕರಣ ಹಾಗೂ ನುಸಿಪೀಡೆಯಿಂದ ಉಂಟಾಗಿರುವ ಸಮಸ್ಯೆಗಳು ತೆಂಗು ಬೆಳೆಗೆ ಮಾತ್ರ ಸೀಮಿತವಾಗದೆ, ಇತರ ಬೆಳೆಗಳಿಗೂ ಹಬ್ಬಬಹುದು ಅಂತಾಗಿ ನೀರಾ ಹೋರಾಟವನ್ನು ನಿಲ್ಲಿಸುವಂತಿಲ್ಲ. ನೀರಾ ಇಳಿಸುವ ಪದ್ಧತಿ ಬಹಳ ಮೊದಲೇ ಇತ್ತು. ಅದನ್ನು ಇಳಿಸುವುದು ರೈತನ ಬದುಕಿನ ಪ್ರಶ್ನೆ, ಹಾಗೂ ಅವನ ಹಕ್ಕು. ಉದಾರೀಕರಣ ಹಾಗೂ ನುಸಿಪೀಡೆ ಹಾವಳಿ ಮುಂದುವರಿಯುತ್ತಿರುವವರೆವಿಗೆ ರೈತರಿಗೆ ನೀರಾ ಇಳಿಸದೆ ಪರ್ಯಾಯ ಮಾರ್ಗವಿಲ್ಲ. ಅನುಮತಿ ನೀಡದಿದ್ದರೆ ರೈತರೇ ಬೀದಿಗಿಳಿದು ಹೋರಾಡಬೇಕಾಗುತ್ತದೆ ಎಂದರು. ಗೋಕಾಕದ ಸತ್ಸಂಗ ಸಮಾಜದ ಸ್ವಾಮಿ ಭಕ್ತತೀರ್ಥ ಅವರು ಸರ್ಕಾರ ಇನ್ನೊಂದು

ತಿಂಗಳ ಅವಧಿಯಲ್ಲಿ ನೀರಾ ಇಳಿಸಲು ಅನುಮತಿಸದಿದ್ದರೆ ವಿಧಾನಸೌಧದ ಮುಂದೆ ಉಪವಾಸ ಸತ್ಯಾಗ್ರಹ ನಡೆಸುವುದಾಗಿ ಹೇಳಿದರು. ಭಾರತದಲ್ಲಿ 4 ಸಾವಿರ ವರ್ಷಗಳಿಂದ ನೀರಾ ಇಳಿಸುವ ಪದ್ಧತಿ ಇದೆ. ಅದು ಅತ್ಯುತ್ತಮ ಆರೋಗ್ಯಕಾರಿ ಪೇಯ. ನೆರೆಹೊರೆ ರಾಜ್ಯಗಳಲ್ಲಿ ನೀರಾ ಇಳಿಕೆಗೆ ಹಾಗೂ ಉಪ ಉತ್ಪನ್ನ ತಯಾರಿಕೆಗೆ (ನೀರಾ ಸಕ್ಕರೆ) ನೀಡಿದ್ದು ಇಲ್ಲಿ ಅನುಮತಿ ನೀಡಿಲ್ಲದಿರುವುದು ಸರಿಯಲ್ಲವೆಂದರು. ಸರ್ವೋದಯ ನಾಯಕ ಗಾಂಧಿವಾದಿ ಶ್ರೀ ಸತ್ಯವ್ರತ ಅವರು, ಗಾಂಧೀಜಿ ಅವರ ಆಶ್ರಮದಲ್ಲಿ ನೀರಾ ಇಳಿಸಲಾಗುತ್ತಿತ್ತು. ಇಂದಿಗೂ ಸೇವಾಶ್ರಮದಲ್ಲಿ ಇಳಿಸಲಾಗುತ್ತಿದೆ. ಸರ್ಕಾರವು ನೀರಾಪಾನಕ್ಕೆ ಅನುಮತಿ ನೀಡಲಿ. ನೀರಾ ಇಳಿಸುವ ಚಳುವಳಿ ಒಂದು ರಚನಾತ್ಮಕ ಅಂದೋಲನವಾಗಿ ರೂಪುಗೊಳ್ಳಲಿ ಎಂದರು. ಕೃಷಿ ವಿಶ್ವವಿದ್ಯಾಲಯದ ಕೀಟತಜ್ಞ ಡಾ. ಪುಟ್ಟಸ್ವಾಮಿ ಅವರು, ನೀರಾ ಇಳಿಸುವುದು ರೈತರಿಗೆ ಪರ್ಯಾಯ ಗಳಿಕೆಯ ಮಾರ್ಗವೇ ವಿನಾ ನುಸಿಪೀಡೆಗೆ ಸಂಪೂರ್ಣ ಪರಿಹಾರ ಅಲ್ಲ. ನೀರಾ ಇಳಿಸುವುದನ್ನು ನಿಲ್ಲಿಸಿದ ತಕ್ಷಣ ಮತ್ತೆ ನುಸಿಕಾಟ ಶುರುವಾಗುತ್ತದೆ. ಮೂರು ವರ್ಷಗಳವರೆಗೆ ಯಾವುದೇ ಕ್ರಮವನ್ನು ನಿಲ್ಲಿಸಿದರೆ ಪ್ರಕೃತಿಯಲ್ಲಿರುವ ಅದರ ಸಹಜ ಶತ್ರುಗಳೇ ನುಸಿಯನ್ನು ನಿಯಂತ್ರಿಸುತ್ತವೆ. ಔಷಧಿಗಳ ಸಿಂಪರಣೆ, ನುಸಿಗೆ ಫಂಗಸ್ ಆರೋಪ ಇತ್ಯಾದಿ ಕ್ರಮಗಳು ತತ್ಕಾಲದ ನಿಯಂತ್ರಣವೇ ಹೊರತು ಸಂಪೂರ್ಣವಾಗಿ ನುಸಿ ನಾಶಮಾಡಲು ಸಾಧ್ಯವಿಲ್ಲ ಎಂಬ ಅಭಿಪ್ರಾಯವನ್ನು ವ್ಯಕ್ತಮಾಡಿದಾಗ ಸಂಕಿರಣದಲ್ಲಿ ಇದ್ದ ರೈತರು ಪ್ರತಿಭಟಿಸಿ ಹೆಚ್ಚಿನ ವಿವರಣೆ ಬಯಸಿದರು. ಶ್ರೀಯುತರು ತಮಗಿರುವ ನಿರ್ಬಂಧಗಳನ್ನು ಗಮನಿಸಿ ಎಂದರು. ಕೇರಳದ ತೆಂಗು ತಜ್ಞರು, ನೀರಾದ ಉಪ ಉತ್ಪನ್ನಗಳಿಗೆ ಅಂತರಾಷ್ಟ್ರೀಯ ಮಾರುಕಟ್ಟೆಯಲ್ಲಿ ಉತ್ತಮ ಬೇಡಿಕೆ ಇದೆ. ವಿನೆಗರ್, ಬೆಲ್ಲ ಸಕ್ಕರೆ, ಜಾಮ್, ಚಾಕಲೇಟ್‌ಗಳನ್ನು ಸಾಮಾನ್ಯ ತಂತ್ರಜ್ಞಾನದಿಂದ ಸಿದ್ಧಪಡಿಸಿ ಮಾರುಕಟ್ಟೆಗಿಡಬಹುದು ಎಂದರು. ತೆಂಗಿನ ಬೆಲೆ ಕುಸಿಯಲು ತೆರಿಗೆ ಇಳಿತ ಹಾಗು ಉದಾರೀಕರಣ ಕಾರಣ ಎಂದರು (14.8.2001 ಪ. ವಾರ್ತೆ). ಇದೇ ಸಮಯದಲ್ಲಿ ಮೈಸೂರಿನ ಪತ್ರಿಕಾ ಗೋಷ್ಠಿಯಲ್ಲಿ ಸಂಯುಕ್ತ ಜನತಾದಳದ ಶಾಸಕಾಂಗ ಪಕ್ಷದ ನಾಯಕ ಶ್ರೀ ಪಿ.ಜಿ.ಆರ್. ಸಿಂಧ್ಯಾ ಅವರು ನೀರಾ ಇಳಿಸುವುದು ನುಸಿರೋಗ ನಿಯಂತ್ರಣದಲ್ಲಿ ಒಂದು ಭಾಗ. ಆದ್ದರಿಂದ ಅಬ್ಕಾರಿ ಕಾಯ್ದೆಗೆ ತಿದ್ದುಪಡಿ ಮಾಡಿ 'ನೀರಾ' ಇಳಿಸಲು ಅನುಮತಿ ನೀಡುವಂತೆ ವಿಧಾನಮಂಡಲದ ಅಧಿವೇಶನದಲ್ಲಿ ಒತ್ತಾಯಿಸಿದ್ದೇವೆ. ಈ ದಿಸೆಯಲ್ಲಿ ರೈತರು ನಡೆಸುವ ಹೋರಾಟಕ್ಕೆ ನಮ್ಮ ಪಕ್ಷದ ಸಂಪೂರ್ಣ ಬೆಂಬಲ ಇದೆ ಎಂದರು. ಮೈಸೂರಿನ ಪತ್ರಿಕಾಗೋಷ್ಠಿಯಲ್ಲಿ

ರಾಜ್ಯ ರೈತ ಸಂಘದ ಅಧ್ಯಕ್ಷ ಶ್ರೀ ಕೆ.ಎಸ್. ಪುಟ್ಟಣ್ಣಯ್ಯ ಅವರು ಕೋಲಾರ ಜಿಲ್ಲೆಯಲ್ಲಿ ತೆಂಗಿನ ಮರಗಳನ್ನು ಕತ್ತರಿಸುವ ಬದಲು ಪಲ್ಸ್ ಪೋಲಿಯೋ ಮಾದರಿಯಲ್ಲಿ ನುಸಿರೋಗ ನಿಯಂತ್ರಣಕ್ಕೆ ಹಮ್ಮಿಕೊಳ್ಳುವ ಸರ್ಕಾರದ ಕಾರ್ಯಕ್ರಮಕ್ಕೆ ನಮ್ಮ ಪೂರ್ಣ ಸಹಕಾರವಿದೆ. ನೀರಾಕ್ಕೆ ಮತ್ತು ಬರಿಸುವ ರಾಸಾಯನಿಕಗಳನ್ನು ಬಳಸಿ ಮಾರುವುದಕ್ಕೆ ನಮ್ಮ ವಿರೋಧವಿದೆ. ಪರಿಶುದ್ಧವಾದ ನೀರಾ ಆರೋಗ್ಯಕರ. ನೀರಾವನ್ನು ಮದ್ಯ ಎಂದು ಏಕೆ ಪರಿಗಣಿಸಲಾಗುತ್ತಿದೆ ಎಂಬುದು ತಿಳಿಯುತ್ತಿಲ್ಲ. ತೆಂಗಿನ ಬೆಲೆ ಕುಸಿದು ರೈತ ಆತ್ಮಹತ್ಯೆಯ ದಾರಿ ಹಿಡಿದಿರುವುದರಿಂದ ನೀರಾ ಚಳುವಳಿ ನಡೆಸಲಾಗುತ್ತಿದೆ ಎಂದರು. (14.8.2001 ಪ.ವಾರ್ತೆ)

ಶಿವಮೊಗ್ಗದಲ್ಲಿ (4.9.2001) ರಂದು ಜಿಲ್ಲಾ ತೆಂಗು ಬೆಳೆಗಾರರ ಒಕ್ಕೂಟ ಮತ್ತು ಕರ್ನಾಟಕ ರಾಜ್ಯ ರೈತ ಸಂಘದ ಸಂಯುಕ್ತ ಆಶ್ರಯದಲ್ಲಿ ನಡೆದ ತೆಂಗು ಬೆಳೆಗಾರರ ಸಮಾವೇಶದಲ್ಲಿ ಅಬ್ಕಾರಿ ಕಾಯಿದೆಗೆ ತಿದ್ದುಪಡಿ ತಂದು ತೆಂಗಿನ ಮರಗಳಿಂದ ನೀರಾ ಇಳಿಸಿ ಮಾರಾಟಮಾಡಲು ಅನುಮತಿ ನೀಡಬೇಕೆಂದು ಸರ್ಕಾರವನ್ನು ರೈತ ಸಂಘದ ಮುಖಂಡರು ಒತ್ತಾಯಿಸಿದರು. ಅನುಮತಿ ನೀಡಿದಲ್ಲಿ, ನೀರಾ ಇಳಿಸುವ ಕಸುಬಿನ ಮೂಲಕ ಮತ್ತು ಮಡಕೆ ತಯಾರಿಕೆಯ ಲಕ್ಷಾಂತರ ಕುಟುಂಬಗಳಿಗೆ ಉದ್ಯೋಗ ಮತ್ತು ಆರ್ಥಿಕ ಭದ್ರತೆಗೆ ಅದು ಅನುವು ಮಾಡಿಕೊಡುತ್ತದೆ. ಕಳೆದ ಎರಡು ವರ್ಷಗಳಿಂದ ತೆಂಗಿನ ಉತ್ಪನ್ನಗಳಿಗೆ ಬೆಲೆಯಿಲ್ಲದೆ ನುಸಿರೋಗದಿಂದ ಬೆಳೆಗಾರರು, ಎರಡು ಸಾವಿರದ ಐನೂರು ಕೋಟಿ ನಷ್ಟ ಅನುಭವಿಸಿದ್ದಾರೆ. ಸರ್ಕಾರವು ನೀರಾ ಇಳಿಸಲು ಅನುಮತಿ ನೀಡದಿದ್ದರೆ ನುಸಿರೋಗವನ್ನು ತಡೆಗಟ್ಟಲು ತೆಂಗು ಬೆಳೆಗಾರರು ಸಾಮೂಹಿಕವಾಗಿ ಹೊಂಬಾಳೆ ಕಡಿಯಲು ಸಿದ್ಧರಿದ್ದಾರೆ. ಆದ್ದರಿಂದ ಪ್ರತಿಮರಕ್ಕೆ ವಾರ್ಷಿಕವಾಗಿ 750 ರೂ.ಗಳಂತೆ ಪರಿಹಾರಧನ ನೀಡಲು ಸರ್ಕಾರವನ್ನು ಸಮಾವೇಶವು ಒತ್ತಾಯಿಸಿತು. ಹಾಗೂ ಈ ಸಂಬಂಧದಲ್ಲಿ ಅಂಗೀಕರಿಸಲಾದ ನಿರ್ಣಯಗಳನ್ನು ಜಿಲ್ಲಾಧಿಕಾರಿಗಳ ಮೂಲಕ ಮುಖ್ಯಮಂತ್ರಿಗಳಿಗೆ ಸಲ್ಲಿಸಿತು. ಕರ್ನಾಟಕ ರಾಜ್ಯ ರೈತಸಂಘದ ಪ್ರಧಾನ ಕಾರ್ಯದರ್ಶಿ ಶ್ರೀ ಹೆಚ್.ಆರ್. ಬಸವರಾಜಪ್ಪ ಅವರು ಮಾತನಾಡಿ ತಮಿಳುನಾಡಿನ ರೈತರು ನೀರಾ ಮೂಲಕ ಆರ್ಥಿಕ ನಷ್ಟ ತುಂಬಿಕೊಂಡು ಜೀವನ ಮಾಡುತ್ತಿದ್ದಾರೆ. ನೀರಾ ಇಳಿಸಲು ರಾಜ್ಯ ಸರ್ಕಾರವು ಒಪ್ಪಿದರೆ ರೈತರು ಪ್ರತಿ ತೆಂಗಿನ ಮರಕ್ಕೆ 300 ರೂ.ಗಳಂತೆ ವಾರ್ಷಿಕ ತೆರಿಗೆ ನೀಡಲು ಸಿದ್ಧರಿದ್ದಾರೆ. ಇದರಿಂದ ರಾಜ್ಯದ ತೆಂಗಿನ ಮರಗಳಿಂದ ಬೊಕ್ಕಸಕ್ಕೆ ವಾರ್ಷಿಕ 1400 ಕೋಟಿ ರೂ. ಬರುವಲ್ಲಿ

ಅಬ್ಕಾರಿ ಆದಾಯಕ್ಕೆ ಅದು ಸರಿಸಮನಾಗುತ್ತದೆ ಎಂದರು. ಈ ಸಂದರ್ಭದಲ್ಲಿ ಶಾಸಕ ಡಾ. ಜಿ.ಡಿ. ನಾರಾಯಣಪ್ಪ ಅವರು ಮಾತನಾಡುತ್ತ ನೀರಾದಲ್ಲಿ ಪ್ರೋಟೀನ್ ಮತ್ತು ವಿಟಮಿನ್ 'ಸಿ', ಶರ್ಕರ ಪಿಷ್ಟಾದಿಗಳು ಇವೆ ಎಂದರು. ನೀರಾಗೆ ಅನುಮತಿ ನೀಡಬೇಕೇ ಬೇಡವೇ ಎಂದು ರಾಜ್ಯ ಸರ್ಕಾರ ಪರಿಶೀಲನೆ ನಡೆಸುತ್ತಿದೆ. ತೆಂಗು ಮಂಡಳಿ ರಚಿಸಬೇಕೆಂದು ಹೇಳಿರುವ ಶ್ರೀ ಮಹಾದೇವಪ್ಪನವರ ಸಲಹೆಯನ್ನು ಸರ್ಕಾರದ ಮುಂದಿಟ್ಟಾಗ ಅಗತ್ಯ ನೆರವು ಒದಗಿಸುವುದಾಗಿ ಅದು ತಿಳಿಸಿತು ಎಂದರು. ಕರ್ನಾಟಕ ರಾಜ್ಯ ರೈತಸಂಘದ ಮಹಿಳಾ ಘಟಕದ ಅಧ್ಯಕ್ಷೆ ಶ್ರೀಮತಿ ಸುನಂದಾ ಜಯರಾಮ್ ಅವರು ರೈತರು ಬೆಳೆದ ಎಲ್ಲಾ ಬೆಳೆಗಳಿಂದ ನಷ್ಟ ಅನುಭವಿಸುತ್ತಿದ್ದಾರೆ. ತೆಂಗು ಬೆಳೆದವರೂ ಸಂಕಷ್ಟದಲ್ಲಿರಲಾಗಿ ನೀರಾ ಇಳಿಸಲು ಅನುಮತಿ ನೀಡಬೇಕು ಎಂದರು. (5.9.2001. ಪ.ವಾರ್ತೆ)

ಈ ಮೊದಲು 27.8.2001 ರಂದು ಕೊಡಗಿನಲ್ಲಿ ರಾಜ್ಯ ರೈತ ಸಂಘದ ಅಧ್ಯಕ್ಷ ಪ್ರೊ. ಎಂ.ಡಿ. ನಂಜುಂಡಸ್ವಾಮಿ ಅವರ ನೇತೃತ್ವದಲ್ಲಿ ಬಾಳೆಲೆಯಿಂದ ಗೋಣಿಕೊಪ್ಪದವರೆಗೆ 'ಬೊಳ್ಳೆಕಳ್ಳ್' ಮಾರಾಟ ಚಳುವಳಿ ಅಂಗವಾಗಿ (ನೀರಾ ಚಳುವಳಿ) ಪಾದಯಾತ್ರೆ, ಮೆರವಣಿಗೆ, ಬೊಳ್ಳೆಕಳ್ಳ್ (ತೆಂಗಿನ ಮರದಿಂದಿಳಿಸಿದ ನೀರಾ) ನಿಂದ ಮಾಡಿದ ವಿನಿಗರ್, ಬೆಲ್ಲ, ಜಾಮ್, ಚಾಕಲೇಟ್ ಇತ್ಯಾದಿಗಳ ಪ್ರದರ್ಶನ ಹಾಗು ಮಾರಾಟವನ್ನು ಹಮ್ಮಿಕೊಳ್ಳಲಾಗಿದ್ದುದು ವರದಿಯಾಗಿದೆ. ತೆಂಗಿನ ಮರಕ್ಕೆ ರಾಜ್ಯದೆಲ್ಲೆಡೆ ನುಸಿಪೀಡೆ ಒದಗಿರುವಲ್ಲಿ ಸರ್ಕಾರದ ನೆರವು ಸಾಲದಾಗಿ ಅನ್ಯದಾರಿಯಿಲ್ಲದೆ ತೆಂಗಿನ ಬೆಳೆಗಾರರು ಸಹಿತವಾಗಿ ಎಲ್ಲ ರೈತ ವರ್ಗವೂ ಚಳುವಳಿಯ ಹಾದಿಯಲ್ಲಿವೆ ಎಂದು ಶ್ರೀ ಸ್ವಾಮಿಯವರು ತಿಳಿಸಿರುವುದೂ ವರದಿಯಾಗಿದೆ. (ಬ್ರಹ್ಮಗಿರಿ, ಕೊಡವಭಾಷಾ ವಾರಪತ್ರಿಕೆ 27.8.2001)

ಚಿಕ್ಕನಾಯಕನಹಳ್ಳಿ ಹಾಗು ಹಂದನಕೆರೆ ಪ್ರದೇಶದಲ್ಲಿ ತೆಂಗಿನ ಮರದಿಂದ ನೀರಾ ಇಳಿಸುತ್ತಿದ್ದವರನ್ನು ಪೋಲೀಸರು ದಸ್ತಗಿರಿ ಮಾಡಿದರು. ಈ ಸುದ್ದಿ ಹರಡಿದಾಗ ಚಿಕ್ಕನಾಯುಕನಹಳ್ಳಿಯ ರೈತರ ಒಂದು ಗುಂಪು ಪೋಲೀಸರನ್ನು ಅಡ್ಡಿಮಾಡಲೆಳೆಸಿದಾಗ 42 ಜನರನ್ನು ದಸ್ತಗಿರಿ ಮಾಡಿ ನ್ಯಾಯಾಲಯಕ್ಕೆ ಹಾಜರುಪಡಿಸಿ ನಂತರ ಅವರಲ್ಲಿ 38 ಜನರನ್ನು ಬಳ್ಳಾರಿ ಜೈಲಿಗೂ, ಮೂವರನ್ನು ತಿಪಟೂರು ಸಬ್ ಜೈಲಿಗೆ ಕಳುಹಿಸಲಾಯಿತು. ಒಬ್ಬರನ್ನು ವೈಯುಕ್ತಿಕ ಮುಚ್ಚಳಿಕೆಯ ಮೇಲೆ ಬಿಡುಗಡೆ ಮಾಡಲಾಗಿದೆ. ಹಂದನಕೆರೆಯಲ್ಲಿ ದಸ್ತಗಿರಿ ಮಾಡಿದ ಮೇಲೆ ಒಬ್ಬರನ್ನು ತಿಪಟೂರು ಸಬ್ ಜೈಲಿಗೆ ಕಳುಹಿಸಿ, ಇನ್ನೊಬ್ಬರನ್ನು ವೈಯುಕ್ತಿಕ

ಮುಚ್ಚಳಿಕೆ ಮೇಲೆ ಬಿಡುಗಡೆ ಮಾಡಲಾಯಿತು. ಇನ್ನು ನುಸಿಪೀಡೆ ರೋಗವು ಮೊಟ್ಟಮೊದಲಿಗೆ ಮೆಕ್ಸಿಕೋದಲ್ಲಿ (1998) ಕಾಣಿಸಿಕೊಂಡಿತು. ಭಾರತದಲ್ಲಿ ಕೇರಳದ ತೆಂಗು ಮೊಟ್ಟ ಮೊದಲಿಗೆ ನುಸಿರೋಗಕ್ಕೀಡಾಯಿತು. ಆನಂತರ ದ. ಕನ್ನಡ, ಉತ್ತರಕನ್ನಡ ಮತ್ತು ಉಡುಪಿಯಲ್ಲೂ ನುಸಿಪೀಡೆ ಕಾಣಿಸಿಕೊಂಡಿತು. ಸಾಂಪ್ರದಾಯಿಕವಾಗಿ ತೆಂಗು ಬೆಳೆಯುವ 8 ಜಿಲ್ಲೆಗಳಿಗೆ ಸೀಮಿತವಾಗಿದ್ದ ಈ ನುಸಿಪೀಡೆ ಬೆಂಗಳೂರು, ಮೈಸೂರು ಜಿಲ್ಲೆಯ ತೆಂಗಿನ ಮೇಲೂ ವಕ್ಕರಿಸಿದುವು. ಇವು ಮೊದಲು ಹೊಂಬಾಳೆಯ ಹೂವಿನ ಮೇಲೆ ಎರಗುವುದರಿಂದ ತೆಂಗಿನಕಾಯಿ ರೂಪುಗೊಳ್ಳಲು ಸಾಧ್ಯವಿಲ್ಲ. ಅದು ಕುಸಿದುಬೀಳುತ್ತದೆ. ನೀರಾ ಇಳಿಯುವುದೇ ಹೊಂಬಾಳೆಯಿಂದಾಗಿದ್ದು ಸೂರ್ಯೋದಯದ ಮುನ್ನ ಅದೊಂದು ಉತ್ತಮ ಆರೋಗ್ಯಕರ ಪಾನೀಯವಾಗಿರುತ್ತದೆ. ರೈತರ ರೀತ್ಯಾ, ಕರ್ನಾಟಕದಲ್ಲಿರುವ ತೆಂಗಿನ ಬೆಳೆಯ ಶೇಕಡಾ 65ರಷ್ಟು ನುಸಿಪೀಡೆಗೆ ಈಡಾಗಿರುವಲ್ಲಿ, ನೀರಾ ಇಳಿಕೆ ನುಸಿಪೀಡೆಯನ್ನು ನಿಯಂತ್ರಿಸುತ್ತದೆ. ಸರ್ಕಾರ ನೀರಾ ಇಳಿಕೆಗೆ ಅನುಮತಿಸದಿರುವ ಕಾರಣ ಅಬಕಾರಿ ಲಾಬಿಯ ಒತ್ತಡಕ್ಕೀಡಾಗಿರುವುದಾಗಿದೆ ಎಂದು ಪ್ರೊ.ಎಂ.ಡಿ ನಂಜುಂಡಸ್ವಾಮಿಯವರ ಅಂಬೋಣವಾಗಿದೆ. ಸರ್ಕಾರದ ಪ್ರಕಾರ, ನುಸಿಪೀಡೆಯು ನೀರಾ ಇಳಿಕೆಯಿಂದ ನಿಯಂತ್ರಣಗೊಳ್ಳುತ್ತದೆ ಎಂಬುದು ವೈಜ್ಞಾನಿಕವಾಗಿ ಸಿದ್ಧವಾಗಿಲ್ಲ. ನೀರಾ ಇಳಿಕೆಗೆ ಅನುಮತಿಸಿದರೆ ಅದನ್ನು ಹೆಂಡವನ್ನಾಗಿ ಮಾರ್ಪಡಿಸಿ ಮಾರುವ ಸಾಧ್ಯತೆಗಳೇ ಇವೆ. ಹಾಗು ನೀರಾ ಹೆಸರಿನಲ್ಲಿ ಕಳ್ಳಭಟ್ಟಿಯು ಮಾರುಕಟ್ಟೆಗೆ ಪ್ರವೇಶಿಸುವ ಅಪಾಯವೂ ಇದೆ. ಅಬಕಾರಿ ಇಲಾಖೆಯ ಅಧಿಕಾರಿ ವಲಯದಲ್ಲಿ ಹೇಳುವುದು; ನೀರಾ ಇಳಿಕೆಗೆ ಅನುಮತಿ ದೊರೆತರೆ ಸು. ಶೇ. 17 ರಷ್ಟು ಆದಾಯ ಅಂದರೆ ಸುಮಾರು 400 ಕೋಟಿ ರೂ ನಷ್ಟ ಬೊಕ್ಕಸಕ್ಕೆ ಆಗುತ್ತದೆ; ಈಗಾಗಲೇ ಸಾರಾಯಿ (ಅಬ್ಕಾರಿ) ಗುತ್ತಿಗೆ ಹರಾಜು ಮುಗಿದಿದ್ದು, ಪ್ರಬಲ ಸಾರಾಯಿ ಲಾಬಿಯೊಡನೆ ಸಂಘರ್ಷಕ್ಕಿಳಿದಂತಾಗುತ್ತದೆ, ಎಂದಾಗಿದೆ. ನುಸಿಪೀಡೆ ನಿಯಂತ್ರಣಕ್ಕೆ ಎಂಡೋಸಲ್ಫನ್ ಮತ್ತು ಮಾನೋಕ್ರೋಟೋಫಾಸ್ ಬಳಸುವುದೇನೋ ಸರಿ. ಆದರೆ ಅದು ಬುದ್ಧಿ ವೈಕಲ್ಯ ಹಾಗು ಸ್ತ್ರೀಯರಲ್ಲಿ ಮುಂದೆ ಬಂಜೆತನಕ್ಕೆ ಕಾರಣವಾಗುತ್ತದೆ ಎಂಬ ಭಯವೂ ಹರಡಿದೆ ಎಂದೆಲ್ಲ ತಮ್ಮ ಲೇಖನದಲ್ಲಿ ಶ್ರೀ ಎಸ್.ಎ. ಹೇಮಂತ ಕುಮಾರ್ ಅವರು ವರದಿ ಮಾಡಿದ್ದಾರೆ (ಟೈಮ್ಸ್ ಆಫ್ ಇಂಡಿಯ. 10.10.2001)

## ವಿಷಯ 4 : ನೀರಾ ಚಳುವಳಿ-ವಿಠಲೇನ ಹಳ್ಳಿಯಲ್ಲಿ (ಚನ್ನಪಟ್ಟಣ ತಾ) ಗೋಲಿಬಾರ್ (2001)

ವಿಠಲೇನ ಹಳ್ಳಿಯಲ್ಲಿ ಕೆಲವು ರೈತರು ತೆಂಗಿನಮರದಿಂದ ನೀರಾ ಇಳಿಸುತ್ತಿದ್ದರು. 8.10.2001ರ ಸೋಮವಾರದಂದು ಇಳಿಸಿದ ನೀರಾವನ್ನು ರೈತರು ಚನ್ನಪಟ್ಟಣದಲ್ಲಿ ಮಾರುತ್ತಿದ್ದಾಗ ಪೋಲೀಸ್ ಕಸ್ಟಡಿಗೆ ತೆಗೆದುಕೊಳ್ಳಲಾಯಿತು. ಇದು ರೈತರಲ್ಲಿ ಅಸಮಾಧಾನಕ್ಕೆ ಕಾರಣವಾಯಿತು. ಅಂತಾಗಿ ಸೋಮವಾರ ರಾತ್ರಿ ನೂರಾರು ರೈತರು, ಬಂಧಿಸಿರುವ ನೀರಾ ಇಳಿಕೆಯಾದಾಗ ರೈತರ ಬಿಡುಗಡೆಗೆ ಒತ್ತಾಯಿಸಿ ಧರಣಿ ಹೂಡಿದರು. ಅನಂತರ ಜಮಾಯಿಸಿದ್ದ ಗುಂಪು ಹಿಂಸಾಚಾರಕ್ಕಿಳಿದು ಕಲ್ಲುಗಳನ್ನು ಕೆ.ಎಸ್.ಆರ್.ಟಿ.ಸಿ. ಬಸ್ಸುಗಳ ಮೇಲೆ ತೂರಲಾರಂಭಿಸಿತು. ಹದಿನಾಲ್ಕು ಬಸ್ಸುಗಳು ಹಾನಿಗೊಂಡವು. ಸುಮಾರು ಮೂರು ಗಂಟೆ ಹೊತ್ತಿಗೆ ಇಪ್ಪತ್ತು ಸದಸ್ಯರಿದ್ದ ಪೋಲೀಸ್ ತಂಡವು ಅಕ್ಕೂರು ಪೋಲೀಸ್ ಠಾಣೆಯ ಸಬ್ ಇನ್ಸ್‌ಪೆಕ್ಟರ್ ಆದ ರಾಜೇಂದ್ರಕುಮಾರ್ ಅವರ ನೇತೃತ್ವದಲ್ಲಿ ವಿಠಲೇನಹಳ್ಳಿಗೆ ಮಂಗಳವಾರದಂದು ಹೋಯಿತು. ಅವರ ನೇತೃತ್ವದಲ್ಲಿ ಬಂದ ಪೋಲೀಸ್ ತಂಡದವರು, ಸೋಮವಾರ ಸಂಜೆ ನೀರಾ ಚಳುವಳಿಯಲ್ಲಿ ತೊಡಗಿದ್ದವರನ್ನು ಸುತ್ತುವರಿದರು. ಅಂತಾಗಿ ವಿಠಲೇನಹಳ್ಳಿಯ ಗ್ರಾಮೀಣರು ಮನೆಗಳಿಂದ ಹೊರಗೆ ಬಂದು ಪೋಲೀಸರನ್ನು ತಡೆಯಲೆತ್ನಿಸಿದರು. ಆಗ ಪೋಲೀಸರು ಬಲಪ್ರಯೋಗ ಮಾಡಲೆತ್ನಿಸಿದಾಗ ಆ ಹಳ್ಳಿಯವರು ಅವರ ಮೇಲೆ ಕಲ್ಲುತೂರಿದರು. ರಾಜೇಂದ್ರಕುಮಾರ ಅವರು ರಿಸರ್ವ್ ಪೋಲೀಸ್ ವ್ಯಾನಿನ ಜೊತೆ ಹಿಂಜರಿಯಬೇಕಾಯಿತು. ಅವರೆಲ್ಲರೂ ಜಮೀನುಗಳ ಮಧ್ಯೆ ಅಡಗಿಕೊಳ್ಳಲು ಓಡಿಹೋಗಬೇಕಾಯಿತು. ಹಳ್ಳಿಯವರು ಮೂರುಜನ ಪೋಲೀಸರನ್ನು ಹಿಡಿದು ಕೋಣೆಯಲ್ಲಿ ಕೂಡಿದರು ಆದಾದ ಒಂದು ಗಂಟೆಯ ಮೇಲೆ ರಾಜೇಂದ್ರಕುಮಾರ್ ಅವರು ಮತ್ತಷ್ಟು ಕೆ.ಎಸ್.ಆರ್.ಪಿ. ಪಡೆಯೊಡನೆ ಬಂದು ರೈತರ ಮೇಲೆ ಗೋಲಿಬಾರ್ ಮಾಡಿದರು. ಆಗ ಪುಟ್ಟಣ್ಣಯ್ಯ (65) ಎಂಬುವರು ಸ್ಥಳದಲ್ಲೇ ಸತ್ತರು. ಗಾಯಗೊಂಡ ನರಸೇಗೌಡ ಎಂಬುವರನ್ನು ವಿಕ್ಟೋರಿಯಾ ಆಸ್ಪತ್ರೆಗೆ ಸಾಗಿಸಿದರು. ತಮ್ಮಯ್ಯಣ್ಣ (55) ಎಂಬುವರು ಅಲ್ಲೇ ಕುಸಿದು ಬಿದ್ದುದರಿಂದ ವಿಕ್ಟೋರಿಯಾ ಆಸ್ಪತ್ರೆಗೆ ಸಾಗಿಸಲಾಯಿತಾದರೂ ಆತ ಅಲ್ಲಿ ತೀರಿಕೊಂಡರು. ಅವರ ಮಗ ಸತೀಶ್ ಎಂಬಾತನಿಗೆ ತಲೆಗೆ ಘಾಯವಾಗಿ ಚೆನ್ನಪಟ್ಟಣದ ಆಸ್ಪತ್ರೆಯಲ್ಲಿ ಚಿಕಿತ್ಸೆ ನೀಡಲಾಯಿತು. ಸುಮಾರು ಇಪ್ಪತ್ತು ಜನ ಪೋಲೀಸರಿಗೆ ಸರ್ಕಲ್ ಇನ್ಸ್‌ಪೆಕ್ಟರ್

ಸೇರಿದಂತೆ ಈ ಘಟನೆಯಲ್ಲಿ ಘಾಯಗಳಾದವು. ವಿಠಲೇನಹಳ್ಳಿ ಮತ್ತು ಚನ್ನಪಟ್ಟಣ ಮಾರ್ಗದಲ್ಲಿ ಈ ಕಾರಣ ಉದ್ವೇಗ ಪರಿಸ್ಥಿತಿ ತಾಂಡವಾಡುತ್ತಿತ್ತು.

ಕರ್ನಾಟಕ ಸರ್ಕಾರವು ಈ ಪ್ರಕರಣದ ಬಗ್ಗೆ ನ್ಯಾಯಾಂಗ ತನಿಖೆಗೆ ಆದೇಶ ನೀಡಿತು. ಸಬ್‌ಇನ್ಸ್‌ಪೆಕ್ಟರ್ ರಾಜೇಂದ್ರಕುಮಾರ್ ಅವರು ಮೇಲ್ನೋಟಕ್ಕೆಯೇ ಸಾಬೀತಾದಂತೆ ವಿಶೇಷ ಪೋಲೀಸ್ ಪಡೆಯನ್ನು ಒಯ್ಯಲು ಮತ್ತು ಗೋಲೀಬಾರ್ ಮಾಡಲು ಮೇಲಧಿಕಾರಿಗಳಿಂದ ಅಪ್ಪಣೆ ಪಡೆಯದಿದ್ದುದರ ಕಾರಣ ಅವರನ್ನು ಅಮಾನತ್ತಿನಲ್ಲಿ ಇಡಲಾಗಿದೆ ಎಂದು ಸರ್ಕಾರದ ಹೇಳಿಕೆಯೂ ಬಂದಿತು. ವಾರ್ತಾ ಸಚಿವ ಶ್ರೀ ಎಂ.ಶಿವಣ್ಣನವರು ವರದಿಗಾರರಿಗೆ ಈ ವಿಷಯವನ್ನು ತಿಳಿಸಿದರು.

ಚನ್ನಪಟ್ಟಣ, ಮದ್ದೂರು, ಸಾತನೂರು ಇತ್ಯಾದಿ ಕಡೆ ಪ್ರತಿ ಮರವೂ ನಾನೂರು ಕಾಯಿಯನ್ನು ಕೊಡುತ್ತಿದ್ದುದು ನುಸಿಪೀಡೆಯಿಂದ ಅದು ಕುಸಿಯಲು ರೈತರು ನೀರಾ ಇಳಿಸುವಿಕೆಗೆ ತೊಡಗಿದರು. ಪ್ರತಿ ಮರವೂ ಒಂದು ಅಥವಾ ಎರಡು ಲೀಟರಿನಷ್ಟು ನೀರಾ ಕೊಡುತ್ತಿದೆ. ಲೀಟರಿಗೆ ಹತ್ತರಿಂದ ಇಪ್ಪತ್ತು ರೂ.ಗಳು ದೊರಕುತ್ತಿವೆ. ಇದೆಲ್ಲ ಅಬಕಾರಿ ಗುತ್ತಿಗೆ ಲಾಬಿಗೆ ತೊಂದರೆ ಉಂಟಾಗಿದೆ. ಈ ಕಾರಣ ಅವರು ಅಧಿಕಾರಿಗಳ ಮೇಲೆ ಒತ್ತಡ ತಂದು ನೀರಾಬಗ್ಗೆ ಸಹಾನುಭೂತಿ ಹೊಂದದಂತೆ ಮಾಡಿದ್ದಾರೆ ಎಂಬುದು ಹೊರಗೇರಿಹಳ್ಳಿಯ ರೈತ ಕರಿಯಪ್ಪನ ಹೇಳಿಕೆಯಾಗಿತ್ತು. ಆದರೆ ಗೃಹಮಂತ್ರಿ ಶ್ರೀ ಎಂ. ಮಲ್ಲಿಕಾರ್ಜುನ ಖರ್ಗೆ ಅವರು ತೆಂಗಿಗೆ ತಗುಲಿರುವ ನುಸಿಪೀಡೆಗೆ ನೀರಾ ಇಳಿಕೆ ಮದ್ದಲ್ಲ. ಸರ್ಕಾರವು ನೀರಾ ಇಳಿಕೆಯ ವಿರುದ್ಧ ತನ್ನ ನಿಲುವನ್ನು ಬದಲಾಯಿಸುವುದಿಲ್ಲ ಎಂದು ಹೇಳಿಕೆ ಇತ್ತರು. ಅಲ್ಲದೆ ನೀರಾ ಚಳುವಳಿಯನ್ನು ಕೆಲವರು ತಮ್ಮ ಹಿತಾಸಕ್ತಿಗಾಗಿ ಬಳಸಿಕೊಳ್ಳುತ್ತಿದ್ದಾರೆ ಎಂದು ನುಡಿದರು. (ಟೈಮ್ಸ್ ಆಫ್ ಇಂಡಿಯಾ 10.10.2001)

ಈ ಗೋಲಿಬಾರ್ ಘಟನೆಯ ನಂತರ ಮಾಜಿ ಸಂಸದ ಶ್ರೀ ಜಿ. ಮಾದೇಗೌಡ ಅವರು ವಿಠಲೇನಹಳ್ಳಿಯ ಗೋಲಿಬಾರ್ ಮತ್ತು ರೈತರ ಮೇಲಿನ ದೌರ್ಜನ್ಯವನ್ನು ಖಂಡಿಸಲು ಮೂರ್‍ನಾಲ್ಕು ದಿನಗಳೊಳಗೆ ಎಲ್ಲಾ ಪಕ್ಷಗಳು ಸಂಘ ಸಂಸ್ಥೆಗಳ ಮುಖಂಡರ ಸಭೆಯನ್ನು ಕರೆದು ಚಳುವಳಿಯನ್ನು ಹಮ್ಮಿಕೊಳ್ಳುವ ಬಗ್ಗೆ ಹಂತಹಂತವಾಗಿ ರಾಜ್ಯವ್ಯಾಪಿಯಾಗಿ ವಿಸ್ತರಿಸುವ ಬಗ್ಗೆಯೂ ಹೇಳಿದರು. (13.10.2001)

## ವಿಷಯ 5 : ನೀರಾ ಇಳಿಕೆಗೆ ಮತ್ತು ಮಾರಾಟಕ್ಕೆ ಸರ್ಕಾರದ ಅನುಮತಿ

ತೆಂಗು ಬೆಳೆಗಾರರು ನುಸಿಪೀಡೆಯಿಂದ ಕಂಗಾಲಾಗಿರುವುದರಿಂದ ರಾಜ್ಯ ಸರ್ಕಾರ ನೀರಾ ಇಳಿಸಲು ಸಹಕಾರ ಸಂಘಗಳ ಮೂಲಕ ಮಾರಲು ಅನುಮತಿ ನೀಡಿತು. ನುಸಿರೋಗದಿಂದ ಕುಸಿದ ತೆಂಗು ಉತ್ಪಾದನೆ, ಆ ಉತ್ಪನ್ನಕ್ಕೆ ಸೂಕ್ತ ಬೆಲೆ ಸಿಗದೆ ಆರ್ಥಿಕ ತೊಂದರೆಗೆ ಸಿಕ್ಕಿದ ರೈತರ ಹಿತದೃಷ್ಟಿಯಿಂದ ಸರ್ಕಾರ ಹೀಗೆ ತೀರ್ಮಾನ ತೆಗೆದುಕೊಂಡಿರುವ ಬಗ್ಗೆ ತೋಟಗಾರಿಗೆ ಸಚಿವ **ಶ್ರೀ ಕಾಗೋಡು ತಿಮ್ಮಪ್ಪ** ಹಾಗೂ ಕೃಷಿ ಸಚಿವ **ಶ್ರೀ ಟಿ.ಬಿ. ಜಯಚಂದ್ರ** ಅವರು ಜಂಟಿ ಪತ್ರಿಕಾ ಗೋಷ್ಠಿಯಲ್ಲಿ ತಿಳಿಸಿದರು. ಅದಕ್ಕಿರುವ ಷರತ್ತುಗಳನ್ನು ತಿಳಿಸಿದರು. ನೀರಾವನ್ನು ಅದರ ಮೂಲ ಸ್ವರೂಪದಲ್ಲಿಯೇ ಮಾರಬೇಕು, ಹೆಂಡವಾಗಿ ಪರಿವರ್ತಿಸಬಾರದು, ಮತ್ತು ಒರಿಸುವ ರಾಸಾಯನಿಕವಾದ ಕ್ಲೋರೋಹೈಡ್ರೇಟ್ ಅನ್ನು ಮಿಶ್ರ ಮಾಡಿ ಮಾರಲು ಅವಕಾಶವಿಲ್ಲ. ನೀರಾ ಇಳಿಸಿ ಮಾರಲು ಬಯಸುವ ಆಸಕ್ತರು ಅಬಕಾರಿ ಕಾಯಿದೆ ಪ್ರಕಾರ ಪರವಾನಗಿ ಪಡೆಯಬೇಕು. ಸಹಕಾರಿ ಸಂಘಗಳನ್ನು ರಚಿಸಿ ಅವುಗಳ ಮೂಲಕ ಮಾರಬೇಕು ಎಂದು ಸಚಿವರು ತಿಳಿಸಿದರು. ಈ ಸಂದರ್ಭದಲ್ಲಿ ಸಕ್ಕರೆ ಮತ್ತಿತರ ಉಪ ಉತ್ಪನ್ನಗಳ ತಯಾರಿಕೆಗೆ ನೀರಾವನ್ನು ಬಳಸಬಹುದು. ಖಾದಿ ಗ್ರಾಮೋದ್ಯೋಗವು ಮಾರುವ ಪದಾರ್ಥಗಳ ಪಟ್ಟಿಗೆ ಇವನ್ನು ಸೇರಿಸಬಹುದು. ರೈತರಿಗೆ ನೀರಾ ಇಳಿಸುವ ಬಗ್ಗೆ ತರಬೇತಿ ನೀಡಲು ನಿರ್ಧರಿಸಲಾಗಿದೆ. ನೀರಾವನ್ನು ರೆಫ್ರಿಜರೇಟರ್ ಹಾಗು ಶೀತಲೀಕರಣ ಘಟಕಗಳಲ್ಲಿ ರೈತರು ಸಂರಕ್ಷಿಸಿಟ್ಟು ಮಾರಬಹುದು. ನೀರಾ ಇಳಿಸಲು ಅನುಮತಿ ನೀಡಿರುವುದರಿಂದ ಅಬಕಾರಿ ವಹಿವಾಟಿಗೆ ಯಾವುದೇ ಧಕ್ಕೆ ಉಂಟಾಗದು. ಸಾರಾಯಿ ಕುಡಿಯುವವರು ನಿಶೆ ಬಾರದ ಕಾರಣ ನೀರಾ ಸೇವಿಸಲು ಹೋಗುವುದಿಲ್ಲ. ಆದ್ದರಿಂದ ಅಬಕಾರಿ ಆದಾಯ ತಪ್ಪುತ್ತದೆ ಎಂಬ ಶಂಕೆಗೆ ಅವಕಾಶವಿಲ್ಲ. ಸುದೀರ್ಘ ಕಾಲದವರೆಗೆ ನೀರಾವನ್ನು ಸಂರಕ್ಷಿಸುವ ಬಗ್ಗೆ ಸಂಶೋಧನೆ ನಡೆಸಿ ವರದಿಸಲ್ಲಿಸುವಂತೆ ಮೈಸೂರಿನ ಕೇಂದ್ರೀಯ ಆಹಾರ ಸಂಶೋಧನ ಕೇಂದ್ರವನ್ನು ಕೇಳಿಕೊಳ್ಳಲಾಗಿದೆ. ನೀರಾ ಸಂರಕ್ಷಿಸುವ ತಂತ್ರಜ್ಞಾನವು ತಮ್ಮ ಬಳಿ ಇರುವ ಬಗ್ಗೆ ರೈತ ಸಂಘಟನೆಯು ಹೇಳಿಕೊಂಡಿರುವ ಕಾರಣ ಅದಿದ್ದರೆ ನೀರಾ ಇಳಿಸುವವರು ಬಳಸಿಕೊಳ್ಳಬಹುದು ಎಂದರು. ನೀರಾ ಇಳಿಸಲು ಅನುಮತಿಯ ಜೊತೆಗೆ ನುಸಿಪೀಡೆ ನಿವಾರಣೆಗೆ ತೆಂಗು ಮರಗಳಿಗೆ ಪಲ್ಸ್ ಪೋಲಿಯೋ ಮಾದರಿಯಲ್ಲಿ ಚುಚ್ಚುಮದ್ದು ಹಾಕುವ ಮೊದಲ ಹಂತದ ಕಾರ್ಯಕ್ರಮ ನವೆಂಬರ್ ಹತ್ತೊಂಬತ್ತರಿಂದ ಮೂವತ್ತರವರೆಗೆ

ನಡೆಯಲಿದೆ; ರೈತರ ಹಿತದೃಷ್ಟಿಯಿಂದ ಈ ಎಲ್ಲಾ ಕಾರ್ಯಕ್ರಮ ಜಾರಿಗೊಳಿಸಲು ತಾನುಕೊಟ್ಟ ಅನುಮತಿಯಡಿಯಲ್ಲಿ ಸರ್ಕಾರ ಮುಂದಾಗಿದೆ ಎಂದು ಸಚಿವರು ತಿಳಿಸಿದರು. (ವಿಜಯಕರ್ನಾಟಕ 28.10.2001). ನೀರಾ, ಇಳಿಸಲು ಸರ್ಕಾರ ವಿರೋಧವಿರಲಿಲ್ಲ. ಪ್ರತಿಷ್ಠೆಯ ವಿಷಯವನ್ನಾಗಿಯೂ ಮಾಡಿಕೊಂಡಿರಲಿಲ್ಲ ಎಂದ ಶ್ರೀ ಟಿ.ಬಿ. ಜಯಚಂದ್ರ ಅವರು ನೀರಾದ ಸಂರಕ್ಷಣ ತಂತ್ರಜ್ಞಾನ ಇರುವ ಬಗ್ಗೆ ಮನವರಿಕೆ ಆಗಬೇಕಿದೆ ಎಂದೂ ಹೇಳಿದರು.

ಈ ಸಂದರ್ಭದಲ್ಲಿ ಸರ್ಕಾರ ಮತ್ತು ರೈತರ ನಡುವೆ ನಡೆದ ಸಂವಾದದ ಸಾರಾಂಶದ ಪ್ರಕಟನೆ ಗಮನಾರ್ಹವಾಗಿದೆ. **ಸರ್ಕಾರ ಹೇಳಿದ್ದು:** ತೆಂಗಿನ ನುಸಿ ಬಾಧೆಗೆ ನೀರಾ ಇಳಿಕೆ ಮದ್ದಲ್ಲ; ರಾಜ್ಯದ 8 ಕೋಟಿ ತೆಂಗಿನ ಮರಗಳಲ್ಲಿ ರೋಗದವನ್ನು ಬಿಟ್ಟು, ಕನಿಷ್ಠ 1 ಕೋಟಿ ಮರಗಳಿಂದ ದಿನಕ್ಕೆ 2 ಲೀ. ನಂತೆ ಇಳಿಸಬಹುದಾದರೆ 2 ಕೋಟಿ ಲೀಟರ್ ನೀರಾದ ಬಳಕೆ ಸಾಧ್ಯವೇ?; ಹೀಗೆ ನೀರಾ ಇಳಿಕೆಯಿಂದ ಆರ್ಥಿಕ ನಷ್ಟ, ಮರದ ಭವಿಷ್ಯಕ್ಕೆ ಹಾನಿ; ನೀರಾ ಸಂರಕ್ಷಣೆಗೆ ತಂತ್ರಜ್ಞಾನ ಇಲ್ಲ. ಅನುಮತಿ ನೀಡಿದರೆ ನೀರಾ ಹೆಸರಿನಲ್ಲಿ ಹೆಂಡ ಮಾರಾಟವಾಗುತ್ತದೆ; ಕ್ಲೋರೈಲ್‌ಹೈಡ್ರೈಟ್ ಸೇರಿಸಿದಂಥ ನೀರಾ ಕಲಬೆರಕೆ ಸೇಂದಿ ಮಾರಾಟಕ್ಕೆ ಅವಕಾಶವಾಗುತ್ತದೆ. ಮಾರಾಟ ಹಾಗು ನಿಯಂತ್ರಣ ವ್ಯವಸ್ಥೆ ಇರದಿರುವ ಕಾರಣ, ಪ್ರಾಣಾಪಾಯ ಉಂಟಾದರೆ, ಮಾರಾಟಗಾರ, ವಿತರಕರ ಮೇಲೆ ಕ್ರಮಕ್ಕೆ ಸಾಧ್ಯವಿಲ್ಲ; ಆರೋಗ್ಯಕ್ಕೆ ನೀರಾ ಒಳ್ಳೆಯದೆಂದು ಖಚಿತವಾಗಿಲ್ಲ; ನೀರಾವನ್ನು ಸುಲಭವಾಗಿ ಹೆಂಡ ಮಾಡಬಹುದಾದ್ದರಿಂದ ಸಾಮಾಜಿಕ ಪಿಡುಗಾಗುತ್ತದೆ; ನೀರಾದಿಂದ ಬೇರೆ ಉತ್ಪನ್ನ ಸಾಧ್ಯವಿಲ್ಲ, ಎಂದೆಲ್ಲ ಇತ್ತು.

ಇದಕ್ಕೆಲ್ಲ ಅನುಕ್ರಮವಾಗಿ **ರೈತರು ಉತ್ತರಹೇಳಿದ್ದು:** ನೀರಾ ಇಳಿಸುವಿಕೆ ನುಸಿಪೀಡೆ ತಗ್ಗಿಸುತ್ತದೆ; ನೀರಾ ಉತ್ಪನ್ನಗಳನ್ನು ನೀರಾವನ್ನು ಜನಪ್ರಿಯಗೊಳಿಸಿದರೆ ಎಲ್ಲಾ ನೀರಾ ಬಳಕೆ ಸಾಧ್ಯ; ನೀರಾದಿಂದ ದೊರಕುವ ಹಣ ರೈತರಿಗೆ ನೆರವಾಗುತ್ತದೆ; ಹೆಂಡದ ಮಾರಾಟ ತಡೆಯುವುದು ಸಾಧ್ಯ. ನೀರಾ ಸಂರಕ್ಷಣೆಗೆ ತಂತ್ರಜ್ಞಾನವಿದೆ; 'ಬ್ರಾಂಡ್ ನೇಮ್' ಗಳಲ್ಲಿ ಮಾರಾಟ ಮಾಡಿ ಅದರ ಮೇಲೆ ಪರವಾನಗಿ ಪಡೆದವರ ಹೆಸರು ನಮೂದಿಸಿದರೆ ಹೊಣೆ ನಿಗದಿ ಪಡಿಸಬಹುದು; ಗಾಂಧೀಜಿಯವರೇ ನೀರಾ ಆರೋಗ್ಯಕ್ಕೆ ಒಳ್ಳೆಯದೆಂದಿದ್ದರು; ನೀರಾ ಕುರಿತು ಜನಜಾಗೃತಿ ಮೂಡಿಸಿದರೆ ಸಾಮಾಜಿಕ ಪಿಡುಗಾಗದು; ನೀರಾದಿಂದ ಕಲ್ಲುಸಕ್ಕರೆ, ಜೇನುತುಪ್ಪ ಬೆಲ್ಲ ತಯಾರಿಸಬಹುದು. ಈ ಪದ್ಧತಿ ಹಿಂದೆ ನಮ್ಮಲ್ಲಿತ್ತು. (ಕ.ಪ್ರಭ. 28.10.2001),

ಎಂದೆಲ್ಲ ಮಂಡಿತವಾಯಿತು. ಈ ವಿಷಯ ಸರ್ಕಾರದ ಪರಿಶೀಲನೆಗೆ ಬಂದು ತೀರ್ಮಾನಕ್ಕೆ ಕಾರಣವಾಯಿತೆನ್ನಬೇಕು. ಇದಲ್ಲದೆ ಕೇಂದ್ರ ಖಾದಿ ಗ್ರಾಮೋದ್ಯೋಗ ಆಯೋಗದ ಅಧ್ಯಕ್ಷರು ಮಹಾರಾಷ್ಟ್ರದಲ್ಲಿ, ನೀರಾ ಹಾಗು ನೀರಾ ಉತ್ಪನ್ನ ಮಾರಾಟದ ಬಗ್ಗೆ ಇತ್ತೀಚೆಗೆ ಮುಖ್ಯಮಂತ್ರಿ ಶ್ರೀ. ಎಸ್. ಎಂ. ಕೃಷ್ಣ ಅವರನ್ನು ಭೇಟಿ ಮಾಡಿ ಸಭೆಯಲ್ಲಿ ವಿವರಿಸಿದ್ದೂ ಪ್ರಭಾವ ಬೀರಿದಂತಿದೆ.

## ವಿಷಯ 6 : ನೀರಾ ಇಳಿಕೆ ಅನುಮತಿ ನಂತರದ ಸಂದರ್ಭಗಳು

ನೀರಾ ಇಳಿಸಲು ಸರ್ಕಾರ ಅನುಮತಿ ನೀಡಿದ ಬಗ್ಗೆ ಮಾಜಿ ಸಚಿವ ಶ್ರೀ ಬಿ. ಸೋಮಶೇಖರ್, ವಿಧಾನಸಭಾ ವಿರೋಧ ಪಕ್ಷದ ನಾಯಕ ಶ್ರೀ ಜಗದೀಶ್ ಶೆಟ್ಟರ್ ಮಾಜಿ ಸಚಿವ ಶ್ರೀ ಸಿ. ಬೈರೇಗೌಡ, ವಿಧಾನ ಪರಿಷತ್ ವಿರೋಧ ಪಕ್ಷದ ನಾಯಕ ಶ್ರೀ ಕೆ.ಎಚ್. ಶ್ರೀನಿವಾಸ್, ವಿಧಾನಪರಿಷತ್ ಸದಸ್ಯ ಶ್ರೀ ಎಂ.ಎಸ್. ಸಿದ್ದರಾಜು, ಪ್ರೊ. ಎಂ.ಡಿ. ನಂಜುಂಡಸ್ವಾಮಿ, ಶ್ರೀ ಬಸವರಾಜ ಪಾಟೀಲ್ ಸೇಡಂ, ಶ್ರೀ ಪಿ.ಜಿ.ಆರ್. ಸಿಂಧ್ಯ, ಶ್ರೀ ಸಿದ್ದರಾಮಯ್ಯ, ಶ್ರೀ ಅಲ್ಲಂ ವೀರಭದ್ರಪ್ಪ ಮುಂತಾದ ಶಾಸಕರು, ರೈತ ಸಂಘದ ನೇತಾರರು, ಪಕ್ಷಗಳ ನಾಯಕರು ತಮ್ಮದೇ ಆದ ರೀತಿಯಲ್ಲಿ ಸ್ವಾಗತಿಸಿದರು; ನೀರಾ ಚಳುವಳಿಗಾರರ ವಿರುದ್ಧ ಹೂಡಿರುವ ಮೊಕದ್ದಮೆಗಳ ವಾಪಸಾತಿ ಆಗಬೇಕು. ನೀರಾ ಮಾದಕ ದ್ರವವಲ್ಲ. ಮೃದುಪಾನೀಯವಾದ ಕಾರಣ ಅಬಕಾರಿ ನಿಯಮಗಳ ವ್ಯಾಪ್ತಿಯಿಂದ ಹೊರಗಿಡಬೇಕು, ಮಾರಾಟಕ್ಕೆ ಮುಕ್ತ ಅವಕಾಶ ನೀಡಬೇಕು. ಅನುಮತಿಯ ತೀರ್ಮಾನ ಮೊದಲೇ ಬಂದಿದ್ದರೆ ವಿಠಲೇನಹಳ್ಳಿ ಗೋಲಿಬಾರ್ ಘಟನೆ, ಆಸ್ತಿಪಾಸ್ತಿ ನಷ್ಟ ತಪ್ಪುತ್ತಿತ್ತು. ಸಾವನ್ನಪ್ಪಿರುವ ರೈತರ ವಾರಸುದಾರರಿಗೆ ಪರಿಹಾರ ನೀಡಬೇಕು. ರೈತರ ಹಿತದೃಷ್ಟಿಯಿಂದ ತಡವಾಗಿಯಾದರೂ ಸರ್ಕಾರ ಸೂಕ್ತ ತೀರ್ಮಾನ ತೆಗೆದುಕೊಂಡಿದೆ. ಸರಕಾರದ ಕ್ರಮ ಸ್ವಾಗತಾರ್ಹ. ನೀರಾಕ್ಕೆ ರೂಪಿಸುವ ಪರವಾನಗಿ ಸಂಬಂಧದ ನಿಯಮಾವಳಿ ರೈತರ ಹಿತಕ್ಕೆ ಧಕ್ಕೆ ತರಬಹುದು, ಎಂದೆಲ್ಲ ಅಭಿಪ್ರಾಯಗಳನ್ನು ಅವರುಗಳು ವ್ಯಕ್ತ ಮಾಡಿದರು.

ಮಾಜಿ ಪ್ರಧಾನಿ ಶ್ರೀ **ಹೆಚ್.ಡಿ.ದೇವೇಗೌಡರು** 28.10.2001 ರಿಂದ 1.11.2001 ರವರೆಗೆ ಗೋಲಿಬಾರ್ ಆಗಿ ಇಬ್ಬರು ರೈತರು ಮೃತಪಟ್ಟ ಘಟನೆಯನ್ನು ಪ್ರತಿಭಟಿಸಿ ವಿಠಲೇನ ಹಳ್ಳಿಯಿಂದ 'ಬೆಂಗಳೂರು ಚಲೋ' ಪಾದಯಾತ್ರೆ ನಡೆಸಿದರು. ಮಾನ್ಯ ಶ್ರೀ ದೇವೇಗೌಡರ ರೀತ್ಯಾ ಅದೊಂದು ರೀತಿ ಪಶ್ಚಾತ್ತಾಪ ಪಾದಯಾತ್ರೆ, ಅವರು

ಬೆಂಗಳೂರಿನ ಹಾದಿಯಲ್ಲಿ ಚನ್ನಪಟ್ಟಣ, ಕೆಂಗಲ್, ರಾಮನಗರ, ಮಾಯಗಾನಹಳ್ಳಿ ಬಿಡದಿ, ಕುಂಬಳಗೋಡು, ಕೆಂಗೇರಿ ಮುಂತಾದಕಡೆ, ಸಭೆ, ಭಾಷಣ, ವಾಸ್ತವ್ಯ ಮಾಡಿದರು. ನವೆಂಬರ್ 1 ರಂದು ಮಧ್ಯಾಹ್ನ 3 ಗಂಟೆಗೆ ಶಿವಾಜಿನಗರ ಸ್ಟೇಡಿಯಂನಲ್ಲಿ ಬಹಿರಂಗ ಸಭೆಯಲ್ಲಿ ಭಾಷಣ ಮಾಡಿದರು. ಈ ಪಾದಯಾತ್ರೆ ರೈತರ ಸಮಸ್ಯೆಗಳ ಬಗ್ಗೆ ಎಲ್ಲರ ಗಮನ ಸೆಳೆಯಲು ರೈತರ ಪರ ಹೋರಾಟ ನಡೆಸಲು ಮಾಡಿದ್ದು ಎಂದು ಸುದ್ದಿಗಾರರಿಗೆ ತಿಳಿಸಿದರು.

ಕರ್ನಾಟಕ ರಾಜ್ಯ ರೈತ ಸಂಘದ ಎರಡೂ ಬಣಗಳು ಸರ್ಕಾರ ನೀರಾ ಇಳಿಸುವ ಬಗ್ಗೆ ಅನುಮತಿ ನೀಡಿರುವುದನ್ನು ಸ್ವಾಗತಿಸಿದವು. ಆದರೆ ರೈತರು ಅದಕ್ಕೆ ಪಡೆಯಬೇಕಾದ ಸರ್ಕಾರದ ಅನುಮತಿ, ರಾಜ್ಯದ ತೆಂಗಿನ ಮರಗಳ ಸಂಖ್ಯೆಯ ಶೇಕಡ 25 ರಷ್ಟು ಮರಗಳಲ್ಲಿ ಮಾತ್ರ ನೀರಾ ಇಳಿಕೆ ಅಥವಾ ನೀರಾ ಇಳಿಸಲು ಯಾರಿಗೂ ಅವಕಾಶ–ಈ ಬಗ್ಗೆ ಮಾತ್ರ ಬಣಗಳಲ್ಲಿ ಭಿನ್ನಾಭಿಪ್ರಾಯವಿತ್ತು. ಆದರೆ ತೆಂಗಿನ ಬೆಲೆ ಸ್ಥಿರತೆ ನಿರ್ವಹಣೆ, ಹೆಂಡವಾಗಿಸಿದ ನೀರಾದ ನಿಷೇಧ, ಶಿವಮೊಗ್ಗೆಯಲ್ಲಿ ನೀರಾವನ್ನು ಹಾಗೆಯೇ ಸಂರಕ್ಷಿಸಲು ರೂಪಿಸಿರುವ ಉತ್ತಮ ತಂತ್ರಜ್ಞಾನವನ್ನು ರಾಜ್ಯದ ರೈತರಿಗೆ ಒದಗಿಸುವುದು ಈ ಬಗೆಗೆಲ್ಲ ಬಣಗಳಲ್ಲಿ ಒಮ್ಮತವಿತ್ತು. ಹಾಲು ಉತ್ಪಾದಕ ಸಹಕಾರ ಸಂಘದ ಮಾದರಿಯಲ್ಲಿ ನೀರಾ ಉತ್ಪಾದಕರ ಸಹಕಾರ ಸಂಘಗಳ ಅವುಗಳ ಪ್ರಯತ್ನವೂ ಇತ್ತು (29.10.2001).

29 ರಂದು ನಡೆದ ಸಚಿವ ಸಂಪುಟ ಸಭೆಯಲ್ಲಿ ನೀರಾಗೆ ಗುಡಿ ಕೈಗಾರಿಕೆ ಪರಿಮಿತಿಯೊಳಗೆ ನೀಡಿದ ಅನುಮತಿಯ ನಂತರ ಸಾಧಕ ಬಾಧಕಗಳ ಬಗ್ಗೆ ಸುದೀರ್ಘ ಚರ್ಚೆಯಾಯಿತು. ಅಬ್ಕಾರಿ ಕಾಯ್ದೆ ರೀತ್ಯಾ ಇದಕ್ಕೆ ರೂಪಿಸಬೇಕಾದ ನಿಯಮಾವಳಿ, ಉಪ ಉತ್ಪನ್ನಗಳ ತಯಾರಿಕೆ, ರಾಜ್ಯ ಖಾದಿ ಮತ್ತು ಗ್ರಾಮೋದ್ಯೋಗ ಮಂಡಳಿಯಿಂದ ಈ ಉತ್ಪನ್ನಗಳ ತಯಾರಿಕೆಗೆ ಸಹಾಯ, ಮಹಾರಾಷ್ಟ್ರ, ಆಂಧ್ರಗಳಲ್ಲಿ ತಯಾರಿಸುತ್ತಿರುವ ನೀರಾ ಉತ್ಪನ್ನಗಳನ್ನು ಅಧಿಕಾರಿಗಳು ಹೋಗಿ ಅಧ್ಯಯನಿಸಬೇಕಾದ ಅಗತ್ಯ ಇತ್ಯಾದಿಗಳನ್ನು ಮುಖ್ಯಮಂತ್ರಿಗಳಾದ ಶ್ರೀ ಎಸ್.ಎಂ. ಕೃಷ್ಣ ಅವರು ಸೂಚಿಸಿದರು. ಹಾಗೂ ನೀರಾವನ್ನು ಕಲಬೆರಕೆ ಅಥವಾ ಹೆಂಡಮಾಡಿ ಮಾರುವವರ ವಿರುದ್ಧ ಕಠಿಣ ಕ್ರಮಗಳನ್ನು ತೆಗೆದುಕೊಳ್ಳಲು ಆದೇಶಿಸಿದರು.

ನೀರಾ ಚಳುವಳಿ ಕೆಲವೆಡೆ ವಿದ್ಯುತ್ ಸಮಸ್ಯೆನ್ನು ಮಾತ್ರ ಹಿಡಿದುಕೊಂಡು ಹೋರಾಡುತ್ತಿದ್ದ (ಚಿತ್ರದುರ್ಗಜಿಲ್ಲೆ) ರೈತ ಸಂಘಟನೆಗೆ ವರವೆನಿಸಿ ಬಲ ತಂದಿತ್ತು,

ಸಾವಿರಾರು ರೈತರು ಇದರಲ್ಲಿ ಸಂಘಟಿತರಾದರು. ಚಳವಳಿ ಹೆಸರಿನಲ್ಲಿ ನೀರಾ ಮಾರಾಟದ ಭರಾಟೆ ಕಂಡು ತೆಂಗು ಬೆಳೆಗಾರರಿಗೆ ಆದಾಯದ ನಿರೀಕ್ಷೆ ಬೆಳೆದಿತ್ತು. ನೀರಾ ಇಳಿಸಲು ಬೇಕಾದ ಎಚ್ಚರಿಕೆ ಕ್ರಮವೆಂದರೆ ಅದು ಕೆಡದಂತೆ ಕಾಪಾಡುವುದು; ಮತ್ತು ನೀರಾ ಇಳಿಸುವ ಮೂರ್ತೇದಾರರ ಸದ್ಯದ ಸೇವೆಯ ಅಗತ್ಯ ಹೆಚ್ಚಿತ್ತು. ಅವರಿಗೆ ಕೊಡಬೇಕಾದ ಮಾಸಿಕ ಕೂಲಿಯು ಹೆಚ್ಚಿತ್ತು. ರೈತರು ಈ ಬಗ್ಗೆ ನೀರಾ ಇಳಿಸಲು ನೈಪುಣ್ಯತೆ ಪಡೆದಿರಲಿಲ್ಲ. ಈ ಹಿನ್ನೆಲೆಯಲ್ಲಿ ಹೊಸದುರ್ಗ, ಹೊಳಲ್ಕೆರೆ ತಾಲ್ಲೂಕಿನ ತೆಂಗು ಬೆಳೆಗಾರರು ನಾಲ್ಕು ಸಾವಿರ ರುಪಾಯಿ ಮಾಸಿಕ ಕೂಲಿ ಕೊಡುವ ಒಪ್ಪಂದ ಮಾಡಿಕೊಂಡು ಹಿರಿಯೂರಿನಿಂದ ಮೂರ್ತೇದಾರರನ್ನು ಕರೆತಂದು ನೀರಾ ಇಳಿಸಲು ಆರಂಭಿಸಿದರು. ಹೊಸದರಲ್ಲಿ ದಿನವೂ ಐನೂರು ಲೀಟರ್ ನೀರಾ ಮಾರಾಟವಾಗುತ್ತಿತ್ತು. ಲೀಟರಿಗೆ ಇಪ್ಪತ್ತೈದು ರೂ. ನಂತೆ ಮಾರಾಟವಾಗುತ್ತಿದ್ದ ನೀರಾ ಬೇಡಿಕೆ ಕುಗ್ಗಿ ಕೊನೆಗೆ ಲೀಟರಿಗೆ ಹತ್ತು ರೂ. ಗಳಿಗೆ ಇಳಿಯಿತು. ಅಲ್ಲಿಗೆ ಲಾಭ ಬರುವುದು ಅನುಮಾನವೇ ಆಗಿತ್ತು. ಅಂತಾಗಿ ಅದು ಸೇಂದಿಗೆ ರೂಪಾಂತರವಾಯಿತೆಂದು ಹೇಳಲಾಗಿದೆ. ಇನ್ನು ಒಂದು ಕೆ.ಜಿ. ಪನೆ ಬೆಲ್ಲ ಸಕ್ಕರೆಯನ್ನು ನೀರಾದಿಂದ ತಯಾರಿಸಲು ಐದು ಲೀಟರ್ ನೀರಾಬೇಕು. ಆಗ ಕೆ.ಜಿ. ಬೆಲ್ಲಕ್ಕೆ ಎಂಭತ್ತು ರೂ. ಆಗಿ ಉತ್ಪನ್ನದ ಬೆಲೆ ಹೆಚ್ಚಿದ್ದು ಲಾಭದಾಯಕವಲ್ಲವೆಂದು ಅಷ್ಟಕ್ಕೇ ರೈತರು ಸುಮ್ಮನಾದರು. ಚಿತ್ರದುರ್ಗ ಜಿಲ್ಲೆಯಲ್ಲಿ ಎಂಬತ್ತು ಲಕ್ಷ ತೆಂಗಿನ ಮರಗಳಿದ್ದು ಶೇ. ಎಪ್ಪತ್ತು ಭಾಗ ನುಸಿಹಾವಳಿಗೀಡಾಗಿವೆ. ನೀರಾವನ್ನು ನೀರಾ ಆಗಿಯೇ ಮಾರಾಟಮಾಡಲು ರೈತನಿಗೆ ಸದ್ಯಕ್ಕೆ ಕಷ್ಟವಾಗಿದೆ. ಅದು ಬೇರೆ ರೂಪವನ್ನು ತಳೆಯುತ್ತಿದೆ ಎಂದು ಚಿತ್ರದುರ್ಗದ ಚಿಕ್ಕಪ್ಪನಹಳ್ಳಿ ಷಣ್ಮುಖ ಅವರು ವರದಿ ಮಾಡಿದ್ದಾರೆ. (30.10.2001)

ನೀರಾ ಇಳಿಸಲು ಅನುಮತಿ ನೀಡಲು ಸರ್ಕಾರ ನಿರ್ಧರಿಸಿರುವುದರಿಂದ ಅನುಕೂಲವಾಗಿರುವುದು ಉಳ್ಳವರಿಗೆ ಮಾತ್ರ, ಎಂಬ ಅಭಿಪ್ರಾಯವೂ ವ್ಯಕ್ತವಾಗಿದೆ. ರೈತರು ಪೆಪ್ಸಿ, ಕೋಕಾಕೋಲಗಳೊಂದಿಗೆ ಸ್ಪರ್ಧೆ ಹೂಡಿ ಸಂಸ್ಕರಿಸಿದ ಪೊಟ್ಟಣಗಳಲ್ಲಿ ಎಳನೀರು ಮಾರುತ್ತಿದ್ದರು. ದುರದೃಷ್ಟವಶಾತ್ ತೆಂಗಿಗೆ ನುಸಿರೋಗ ತಗಲಿದಾಗ ಬೆಳೆಗಾರನಿಗೆ ದಿಕ್ಕುತೋಚಲಿಲ್ಲ. ನುಸಿರೋಗ ತಗುಲಿದ ಮರಗಳಲ್ಲಿ [illegible] ಕಾಯಾಗುತ್ತಿದ್ದಂತೆ ಉದುರಿ ತೆಂಗು ಹಾಳಾಗಿ ತೊಡಗಿತು. ಆಗ ಔಷಧಿ ಸಿಂಪಡಿಸಿದರೂ ನಿಯಂತ್ರಣಕ್ಕೆ ಬಾರದಾದಾಗ ನೀರಾ ಇಳಿಸುವುದೇ ಸೂಕ್ತ ಎನಿಸಿ ಅದು ಚಳುವಳಿಯ ರೂಪವನ್ನು ತಾಳಿತು. ತೆಂಗಿನ ಮರವೊಂದರಿಂದ ವರ್ಷಕ್ಕೆ

ಸರಾಸರಿ ಸುಮಾರು ಎರಡು ಸಾವಿರ ರೂ. ಆದಾಯಗಳಿಸುತ್ತಿದ್ದ ರೈತರಿಗೆ ನುಸಿರೋಗ ನಿವಾರಣೆಗೆ ಪರ್ಯಾಯ ವಿಧಾನ ತಿಳಿಯದೆ ನಷ್ಟಕ್ಕೆ ಪರಿಹಾರವೇನು ಎಂದು ಚಳವಳಿಯಲ್ಲಿ ಅದನ್ನು ವ್ಯಕ್ತಗೊಳಿಸಿದರು. ನೀರಾ ಇಳಿಕೆ ಮತ್ತು ಮಾರಾಟದ ಪರ ಮತ್ತು ವಿರೋಧ ಮಾಡುವ ಬಣಗಳು ಬೆಳೆದು ವಿಠಲೇನಹಳ್ಳಿ ಗೋಲಿಬಾರ್ ನಡೆಯಿತಷ್ಟೆ! ರಾಜ್ಯದ ಇಪ್ಪತ್ತೇಳು ಜಿಲ್ಲೆಗಳ ಪೈಕಿ ಹದಿಮೂರು ಜಿಲ್ಲೆಗಳಲ್ಲಿ ತೆಂಗು ಪ್ರಮುಖ ವಾಣಿಜ್ಯ ಬೆಳೆಯೇ. ಇಂತಲ್ಲಿ ಪರಿಹಾರಧನದ ಮೊತ್ತ ವಿಪರೀತವಾಗುವುದರಿಂದ ಅದರ ಬದಲಿಗೆ ಅಗ್ರೋ ಕೇಂದ್ರಗಳ ಮೂಲಕ ಶೇ. ಎಪ್ಪತ್ತೈದರಷ್ಟು ರಿಯಾಯಿತಿ ದರದಲ್ಲಿ ನುಸಿಪೀಡೆ ನಾಶಕಗಳನ್ನು ರೈತರಿಗೆ ನೀಡಲಾಯಿತು. ಆದರೆ ಮಾನೋಕ್ರೋಟೋಪಾಸ್ ಕೀಟನಾಶಕದಿಂದಲೂ ನುಸಿಹಾವಳಿ ನಿಯಂತ್ರಣಕ್ಕೆ ಬರಲಿಲ್ಲ. ನೀರಾ ಪರವಾಗಿ ಮಾತನಾಡುವವರು; ಅದನ್ನು ಇಳಿಸುವ ಕಾರ್ಮಿಕರು, ಕುಂಬಾರರು, ಏಣಿ ಮರಗೆಲಸದವರು, ಕ್ಯಾನು ಮಾರಾಟಗಾರರು, ಮಿನಿವಾಹನ ಮಾಲೀಕರು ಇವರಿಗೆಲ್ಲಾ ಬದುಕು ನಿರ್ವಹಣೆಗೆ ಸ್ವಲ್ಪವಾದರೂ ಸಹಾಯವಾಗುತ್ತದೆ ಎನ್ನುತ್ತಾರೆ. ನೀರಾ ವಿರುದ್ಧ ಮಾತನಾಡುವವರು: ನೀರಾ ಹೆಂಡವಾಗುವುದೇನು ಕಷ್ಟವಲ್ಲ; ಸೇವಿಸಿದವರು ಕುಡಿತದ ಚಟಕ್ಕೆ ಬಲಿಯಾಗುವುದಿಲ್ಲ ಎನ್ನುವಂತಿಲ್ಲ. ಇಲ್ಲಿ ಬಳಸುವ ಕ್ರಿಮಿನಾಶಕ ಬಹಳ ವಿಷಕಾರಿಯಾದ್ದರಿಂದ ತೀವ್ರ ಪರಿಣಾಮವನ್ನು ಉಂಟುಮಾಡಬಲ್ಲದು. ತೆಂಗಿಗೆ ಈ ಚುಚ್ಚುಮದ್ದು ನೀಡಿದ ನಂತರ ನಲವತ್ತೈದು ದಿನಗಳೊಳಗೆ ಎಳನೀರು, ತೆಂಗಿನಕಾಯಿ, ನೀರಾ ಪಡೆಯುವುದು ಅಪಾಯಕಾರಿ. ಕ್ರಿಮಿನಾಶಕಗಳನ್ನು ಹೀರಿಕೊಂಡ ಮರದಿಂದ ಇಳಿದ ನೀರಾ ಎಷ್ಟು ಆರೋಗ್ಯಕಾರಿಯೆಂಬುದು ಸ್ಪಷ್ಟವಿಲ್ಲ. ನೀರಾ ಮಾರಾಟ ಮಧ್ಯವರ್ತಿಗಳ ಕೈಗೆ ಸಿಕ್ಕಿ ಅಮಲು ಔಷಧಿಗಳನ್ನು ಬೆರೆಸಿ ಮಾರುತ್ತಿರುವ ವದಂತಿಗಳು ಇವೆ (ಕ್ಲೋರಲ್‌ಹೈಡ್ರೇಟ್, ಯೂರಿಯಾ ಮತ್ತು ಡೈಜೆಪಾಮ್ ಎಂಬವು ಮತ್ತು ಬರಿಸುವ ಔಷಧಿಗಳು). ಈಗ ರೈತರು ಮಾರಾಟಮಾಡುತ್ತಿರುವ ನೀರಾದಲ್ಲಿ ಶೇ. ಏಳರಷ್ಟು ಆಲ್ಕೋಹಾಲ್ ಅಂಶವಿದೆಯೆಂದು ತಿಳಿದು ಬಂದಿದೆ. ಲೀಟರಿಗೆ ನಲವತ್ತು ರೂ. ನಂತೆ ಮಾರಾಟವಾಗುತ್ತಿದ್ದ ನೀರಾ ಇಂದು ಐದು ಆರು ರೂ.ಗಳಿಗೆ ಮಾರಲ್ಪಡುತ್ತಿದೆ. ನೀರಾವನ್ನು ಸಂರಕ್ಷಿಸಲು ತೊಂಬತ್ತು ಡಿಗ್ರಿ ಉಷ್ಣತೆಯಲ್ಲಿ ಕುದಿಸಿದಾಗ ನೀರಾದ ಮೂಲಗುಣ ಸತ್ವ ಉಳಿಯುವುದಿಲ್ಲ. ತೆಂಗಿನಮರದ ಆಯಸ್ಸು ನೀರಾ ಇಳಿಕೆಯಿಂದ ಧಕ್ಕೆಗೊಳ್ಳುವುದಿಲ್ಲವೇ ಎಂಬುದು ತಜ್ಞರಿಂದ ನಿರ್ಧಾರವಾಗಬೇಕು. ಮದ್ಯ ಸೇವಿಸುವವರೇನು ನೀರಾ ಕುಡಿಯಲು ಹೋಗುವುದಿಲ್ಲ. ನೀರಾ ಕಡಿಮೆಯ

ದರದಲ್ಲಿ ದೊರೆತಷ್ಟು ಕುಡಿಯುವವನಿಗೆ ಲಾಭ. ಆದರೆ ನುಸಿಪೀಡೆ ನಿಂತಮೇಲೆ ನೀರಾ ಇಳಿಕೆ ಮುಂದುವರಿಯುಬಹುದೇ? ಜನರು ನೀರಾವ್ಯಸನಿಗಳಾಗಬಹುದೇ ಎಂಬುದು ಮುಂದೆ ಕಾದುನೋಡಬೇಕಾದ ವಿಷಯ, ಎಂದು ಚೈತ್ರ ಅರ್ಜುನಪುರಿ ಹಾಗು ಎಂ.ಎಸ್.ರಮೇಶ್‌ರವರು ತಮ್ಮ ಪತ್ರಿಕಾ ಲೇಖನವೊಂದರಲ್ಲಿ ಇತ್ತೀಚೆಗೆ ಪ್ರಕಟಮಾಡಿದ್ದಾರೆ.

## ವಿಷಯ 7 : ಹಿರಿಯೂರಿನಲ್ಲಿ ನೀರಾ ಇಳಿಕೆಯವರ ಮೇಲೆ ಹಲ್ಲೆ:

ಸರಕಾರ ಅನುಮತಿ ಪ್ರಕಟಿಸಿದ 48 ಗಂಟೆ ಒಳಗೆ ತೆಂಗಿನ ತೋಟದಲ್ಲಿ ಕಟ್ಟಿದ ನೀರಾ ಇಳಿಕೆಯ 300 ಮಡಿಕೆಗಳನ್ನು ಅಬಕಾರಿ ಪೋಲೀಸ್ ಸಿಬ್ಬಂದಿಯು 30.10.2001ರ ಬೆಳಗಿನ ಜಾವ ಒಡೆದು ಹಾಕಿದೆ. ಸರಕಾರದ ಅನುಮತಿ ಇದ್ದರೂ, ಅಧಿಕಾರಿಗಳು ಮನೆಮನೆಗೆ ಹೋಗಿ ತಪಾಸಣೆ ಮಾಡಿದ್ದಕ್ಕೆ ರೈತರ ಆಕ್ರೋಶ ವ್ಯಕ್ತವಾಗಿದೆ. ಅಧಿಕೃತ ಪರವಾನಗಿ ಪಡೆದು ಇಳಿಸಿದ 'ನೀರಾ' ರೂಪದಲ್ಲಿಯೆ ಮಾರದೆ ಸೇಂದಿ ಉದ್ದೇಶದಿಂದ 300 ಸಂಖ್ಯೆ ಮೀರಿ ಸೋರೆಗಳನ್ನು ತೆಂಗಿನ ಮರಕ್ಕೆ ಕಟ್ಟಿದ್ದರು ಎಂದು ಪೋಲೀಸ್ ಠಾಣೆಯಲ್ಲಿ ಪ್ರಕರಣ ದಾಖಲು ಆಗಿದೆ. ಇದೇ ರೀತಿ ಹೊಳಲ್ಕೆರೆ ತಾ. ಗುಂಡೇರಿ ಹಾಗು ಹೊಳಲ್ಕೆರೆ ಪಟ್ಟಣ ವ್ಯಾಪ್ತಿಯಲ್ಲಿ ನೀರಾ ಇಳಿಸಲು ರೈತರು ಕಟ್ಟಿದ್ದ ಮಡಕೆಯನ್ನೊಡೆದು ಹಾಕಿ, ಮನೆಯಲ್ಲಿ ಮಾರಾಟಕ್ಕೆ ಸಂಗ್ರಹವಾದ ನೀರಾವನ್ನು, ಅಬಕಾರಿ ಪೊಲೀಸರು ಬಂದು ವಶಪಡಿಸಿಕೊಂಡಿದ್ದಾರೆ ಎಂಬುದು ಪತ್ರಿಕಾಸುದ್ದಿಯಿಂದ ತಿಳಿದುಬಂದಿದೆ. (13.10.2001).

## ವಿಷಯ 8 : ನೀರಾ ಸಾಗಿಸುತ್ತಿದ್ದ ರೈತನ ಮೇಲೆ ಹಲ್ಲೆ

ಕೀರಾಳುಗ್ರಾಮದ ಲಿಂಗಪ್ಪ ಎಂಬುವರು ತಮ್ಮ ದ್ವಿಚಕ್ರವಾಹನದಲ್ಲಿ ಸಮೀಪದ ಚಿಕ್ಕಳ್ಳಿಗೆ ಮೂವತ್ತು ಲೀಟರಿನಷ್ಟು ನೀರಾವನ್ನು ಸಾಗಿಸುತ್ತಿದ್ದರು. ಆಗ ಜೀಪಿನಲ್ಲಿ ಬಂದ ಅಬ್ಕಾರಿ ಗುತ್ತಿಗೆದಾರರ ಕಡೆಯವರು ದ್ವಿಚಕ್ರವಾಹನಕ್ಕೆ ಡಿಕ್ಕಿಹೊಡೆದು ಲಿಂಗಪ್ಪ ಅವರ ಮೇಲೆ ಮಾರಕಾಸ್ತ್ರಗಳಿಂದ ಹಲ್ಲೆಮಾಡಿದರು. ಜೀಪು ಹೂತು ಹೋದಕಾರಣ ಅದನ್ನು ಬಿಟ್ಟು ಆರೋಪಿಗಳು ಓಡಿಹೋದರು. ಇದನ್ನು ಕಂಡು ಆಕ್ರೋಶಗೊಂಡ ರೈತರು ಜೀಪಿನಲ್ಲಿದ್ದ ಸಾವಿರಾರು ರೂ. ಮೌಲ್ಯದ ಸಾರಾಯಿ ಪ್ಯಾಕೆಟ್‌ಗಳನ್ನು ಸುಟ್ಟರು. ಈ ಘಟನೆ ಕೀರಾಳುಗ್ರಾಮದ ಸಮೀಪ ಸಂಭವಿಸಿದ್ದು ಹಲ್ಲೆಗೀಡಾದ ಲಿಂಗಪ್ಪ ಅವರನ್ನು ಕೆ.ಆರ್.ಆಸ್ಪತ್ರೆಗೆ ದಾಖಲು ಮಾಡಲಾಯಿತು.

ಸ್ಥಳಕ್ಕೆ ಜಿಲ್ಲಾ ಪೋಲೀಸ್ ಅಧಿಕಾರಿಗಳು ಭೇಟಿ ನೀಡಿದರು. ಬಿ.ಜೆ.ಪಿ. ನಾಯಕ ಶ್ರೀ ಬಿ.ಎಸ್.ಯಡಿಯೂರಪ್ಪ, ಶಾಸಕ ಎ. ರಾಮದಾಸ್ ಅವರು ಆಸ್ಪತ್ರೆಯಲ್ಲಿ ಲಿಂಗಪ್ಪನವರ ಕ್ಷೇಮವಿಚಾರಿಸಿದರು. ರೈತ ಮೋರ್ಚಾದ ಅಧ್ಯಕ್ಷರು ಮತ್ತು ಸದಸ್ಯರು ಹಲ್ಲೆಯನ್ನು ಖಂಡಿಸಿ ಇಂಥ ಹಲ್ಲೆ ಮುಂದುವರಿದರೆ ಸಾರಾಯಿ ಅಂಗಡಿಗಳೆದುರು ಎತ್ತಂಗಡಿ ಚಳುವಳಿ ಮಾಡಬೇಕಾಗುತ್ತದೆ ಎಂದರು. (2.11.2001 ಪತ್ರಿಕಾ ವಾರ್ತೆ) ಹೀಗೆಯೇ ಚಳ್ಳಕೆರೆ ತಾ. ಬೇಡರಹಟ್ಟಿ ಗ್ರಾಮದ ರೈತ ಮುಖಂಡ ಸುರೇಶ್ ತಿಪ್ಪೇಸ್ವಾಮಿ ಎಂಬುವರ ಮೇಲೆ ಹಿರೇಹಳ್ಳಿ ಸಮೀಪದಲ್ಲಿ ಅಬಕಾರಿ ಗುತ್ತಿಗೆದಾರರು ಹಲ್ಲೆ ನಡೆಸಿದ್ದು, ಪೋಲೀಸ್ ಠಾಣೆಗೆ ದೂರು, ಆರೋಪಿಗಳ ಜೀಪು ಜಪ್ತಿ, ಬಂಧನ ನಡೆದು, ರೈತ ಸಂಘ ನ್ಯಾಯಕ್ಕೆ ಹೋರಾಡಿದ ವಿಷಯವಿದೆ.

**ಇತರೆ ವಿಷಯಗಳು:** ಗ್ರಾಮೀಣ ಕುಟುಂಬಗಳ ಆರೋಗ್ಯದ ದೃಷ್ಟಿಯಿಂದ ನೀರಾ ಇಳಿಸಲು ಅನುಮತಿಯನ್ನು ತಕ್ಷಣ ಹಿಂದಕ್ಕೆ ಪಡೆಯುವಂತೆ ಮಹಿಳಾ ಅಭಿವೃದ್ಧಿ ಕ್ರಿಯಾ ಯೋಜನಾ ಸಮಿತಿ ಅಧ್ಯಕ್ಷೆ ಶ್ರೀಮತಿ ಗುರಮ್ಮ ಸಿದ್ದರೆಡ್ಡಿಯವರು ಸರ್ಕಾರವನ್ನು ಆಗ್ರಹಿಸಿದರು. ಶ್ರೀ ವೀರಪ್ಪಮೊಯ್ಲಿಯವರು ನೀರಾ ಬಗ್ಗೆ ಮಾತನಾಡುತ್ತಾ ಕೇವಲ ಒಂದು ಹಂಗಾಮಿನಲ್ಲಿ ಮಾತ್ರ ತೆಂಗಿಗೆ ನುಸಿರೋಗ ಅದು ತಾತ್ಕಾಲಿಕ ಸಮಸ್ಯೆಯಾಗಿದೆ. ನೀರಾ ಇಳಿಕೆಯೇ ಇದಕ್ಕೆ ಶಾಶ್ವತ ಪರಿಹಾರವಲ್ಲ. ಅಲ್ಲದೆ ತೆಂಗಿನ ಗಿಡದಿಂದ ನೀರಾ ಪ್ರಮಾಣ ಅಷ್ಟಾಗಿ ಬರುವುದಿಲ್ಲ. ನೀರಾದಲ್ಲಿ ರಾಸಾಯನಿಕ ಬಳಕೆಯಾದರೆ ಅಪಾಯ ತಪ್ಪಿದ್ದಲ್ಲ ಎಂಬ ಅಭಿಪ್ರಾಯವನ್ನು ವ್ಯಕ್ತಮಾಡಿದರು (ಪತ್ರಿಕಾ ವಾರ್ತೆ 3.11.2001). ಕೃಷಿ ಸಚಿವ ಶ್ರೀ ಟಿ.ಬಿ. ಜಯಚಂದ್ರ ಅವರು ಹುಬ್ಬಳ್ಳಿಯ ಸುದ್ದಿಗಾರರೊಂದಿಗೆ ಮಾತನಾಡುತ್ತಾ ತೆಂಗಿನಮರದ ನೀರಾವನ್ನು ನೀರಾ ಆಗಿಯೇ ಉಳಿಸಿಕೊಳ್ಳುವ ತಂತ್ರಜ್ಞಾನ ಇನ್ನೂ ಜಗತ್ತಿನಲ್ಲಿ ಇಲ್ಲ. ಈ ಹಿಂದೆ ನೀರಾವನ್ನು ಹೆಂಡವಾಗಿ ಪರಿವರ್ತಿಸಿದಾಗ ಅದರ ಪರವಾನಗಿಯನ್ನು ರದ್ದುಗೊಳಿಸಲಾಗಿತ್ತು. ಈಗ ನೀರಾ ಇಳಿಸಲು ನೀಡಿರುವ ಪರವಾನಗಿ ತಾತ್ಕಾಲಿಕವಾಗಲಿದೆ ಎಂದರು (12.1.2001). ಹಾಸನದ ಜಿಲ್ಲಾ ರೈತ ಸಂಘವು ತೆಂಗಿನ ನುಸಿಪೀಡೆಗೆ ಬಳಸಿದ ಕೀಟನಾಶಕವನ್ನು ಸಿಂಪಡಿಸಿದ ಮೇಲೆ ಆರು ತಿಂಗಳ ಕಾಲ ಕಾಯಿ, ಕೊಬರಿ ಎಣ್ಣೆ, ನೀರು, ಬಳಸಬಾರದೆಂದಿದೆ. ನಮ್ಮ ಸಾಮಾಜಿಕ ವ್ಯವಸ್ಥೆಯಲ್ಲಿ ಇದು ಸಾಧ್ಯವಾಗುವುದು ಕಷ್ಟ ನೀರಾ ಮಾರಾಟದ ವ್ಯವಸ್ಥೆಯೂ ಕೂಡ ಸರಿಯಾಗಿಲ್ಲ. ಸರ್ಕಾರದ ಅನುಮತಿ ಬಂದು ಎರಡು ತಿಂಗಳು ಕಳೆದರೂ ಆ ಬಗ್ಗೆ ರೂಪರೇಷೆ ಜಾರಿಯಾಗದೆ ರೈತರಲ್ಲಿ ಗೊಂದಲ

ಮೂಡಿದೆ. ಕೊಳ್ಳೇಗಾಲದಲ್ಲೂ ನೀರಾ ರೈತರ ಮೇಲೆ ಅಬ್ಕಾರಿ ಗುತ್ತಿಗೆದಾರರು ಹಲ್ಲೆ ಮಾಡಿದ್ದಾರೆ. ಕಳೆದ ಮೂರುವರ್ಷಗಳ ಹಿಂದೆಯೇ ಮಾನೋಕ್ರೋಟೋಪಾಸ್ ಔಷಧಿಯನ್ನು ಸಿಂಪಡಿಸಿದರೂ ನುಸಿರೋಗ ನಿವಾರಣೆಯಾಗಿಲ್ಲ. ನೀರಾ ಇಳಿಸುವ ತೆಂಗಿನ ಮರಗಳ ಹೊಂಬಾಳೆ ಕತ್ತರಿಸುವುದರಿಂದ ನುಸಿಪೀಡೆ ಇರುವುದಿಲ್ಲ. ಆದರೆ ಮುಂದಿನ ಪರಿಣಾಮವನ್ನು ಕೂಡ ಗಮನಿಸಬೇಕು ಎಂದೆಲ್ಲಾ ಹೇಳಲಾಗಿದೆ. ಸರ್ಕಾರ ಕೂಡಲೇ ನೀರಾ ಮಾರಾಟ ವ್ಯವಸ್ಥೆಗೆ ಆದೇಶ ಹೊರಡಿಸಬೇಕೆಂದು ಚಾಮರಾಜನಗರ ಜಿಲ್ಲಾ ರೈತ ಒಕ್ಕೂಟದ ರೈತ ನಾಯಕರು ಹೇಳಿದ್ದಾರೆ. ಮತ್ತು ಈ ವ್ಯವಸ್ಥೆ ಆಗದಿದ್ದರೆ ತೋಟಗಾರಿಕೆ ಇಲಾಖೆಯ ಯಾವುದೇ ಅಧಿಕಾರಿಗಳನ್ನು ತಮ್ಮ ತೋಟಗಳಿಗೆ ಪ್ರವೇಶಿಸಲು ರೈತರು ಅವಕಾಶ ಕೊಡುವುದಿಲ್ಲ ಎಂದಿದ್ದಾರೆ. (20.11.2001).

ರಾಷ್ಟ್ರೀಯ ಕೃಷಿ ಯಂತ್ರೋಪಕರಣಗಳ ಪ್ರದರ್ಶನದ ಉದ್ಘಾಟನಾ ಸಮಾರಂಭದ ಸಂದರ್ಭದಲ್ಲಿ ಕೃಷಿ ಸಚಿವ ಶ್ರೀ ಟಿ.ಬಿ.ಜಯಚಂದ್ರ ಅವರು ಸುದ್ದಿಗಾರರೊಡನೆ ಮಾತನಾಡುತ್ತಾ ನುಸಿಪೀಡೆ ನಿಯಂತ್ರಣಕ್ಕೆ ಕೈಗೊಳ್ಳಲಾಗಿರುವ ಚಿಕಿತ್ಸಾಕ್ರಮದಲ್ಲಿಯೇ ತೆಂಗಿನ ಮರವನ್ನು ಆಹುತಿ ತೆಗೆದುಕೊಳ್ಳುತ್ತಿರುವ ಮುನ್ಸೂಚನೆ ದೊರಕಿದೆ. ಅದಕ್ಕಾಗಿ ತಕ್ಷಣದಿಂದ ಈ ಚಿಕಿತ್ಸೆ ನಿಲ್ಲಿಸಲು ಸರ್ಕಾರ ನಿರ್ಧರಿಸಿ ಚಿಕಿತ್ಸೆ ಬಗ್ಗೆ ತನಿಖೆ ನಡೆಸುವಂತೆ ತಜ್ಞರಿಗೆ ಸೂಚಿಸಿದೆ. ರೋಗಗ್ರಸ್ತ ತೆಂಗಿನ ಮರಗಳಿಗೆ ಎರಡು ಹಾಗೂ ಮೂರನೇ ಹಂತದ ಚಿಕಿತ್ಸೆಯನ್ನು ಮುಂದುವರಿಸಬೇಕೇ ಬೇಡವೇ ಎಂಬ ಬಗ್ಗೆಯೂ ಸದ್ಯದಲ್ಲೇ ತೀರ್ಮಾನ ತೆಗೆದುಕೊಳ್ಳಲಾಗುವುದು. ತೆಂಗು ಬೆಳೆಗಾರರ ಭವಿಷ್ಯದೊಂದಿಗೆ ಇಂಥಾ ಔಷಧಿಯ ಮೂಲಕ ಚೆಲ್ಲಾಟ ನಡೆಸಿದವರ ಮೇಲೆ ಕ್ರಮ ಕೈಗೊಳ್ಳಲು ಔಷಧಿ ಕುರಿತು ತಜ್ಞರ ಅಭಿಪ್ರಾಯ ಪಡೆದ ನಂತರವೆ ಆಗುತ್ತದೆ. ಈ ಚಿಕಿತ್ಸೆಗೆ ತೆಂಗಿನ ಮರಗಳಲ್ಲಿ ಕೆಲವೆಡೆ ಕಾಂಡದಿಂದ ರಸ ಒಸರುವುದು ಆರಂಭವಾದರೆ ಇನ್ನು ಕೆಲವು ಪ್ರದೇಶಗಳಲ್ಲಿ ಮರದ ತಿರುಳೇ ಹೊರಗೆ ಬರುತ್ತದೆ. ಇದನ್ನು ತಜ್ಞರ ಗಮನಕ್ಕೆ ತರಲಾಗುವುದು. ಈ ಕಾರಣ ಕಾಂಡದ ಮೂಲಕ ಉಪಚರಿಸುವ ಪದ್ಧತಿಯನ್ನು ಬಿಟ್ಟು ಬೇರಿನ ಮುಖಾಂತರ ಔಷಧಿಯಿಂದ ಉಪಚರಿಸುವ ಪದ್ಧತಿಯನ್ನು ಮಾತ್ರ ಉಳಿಸಲಾಗುವುದು. ತೆಂಗಿನ ಮರಕ್ಕೆ ಬೇವಿನ ಹಿಂಡಿ ಎಣ್ಣೆ ಬಳಸುವುದರಿಂದ ತೊಂದರೆಯಾಗುವುದಿಲ್ಲ ಎಂಬುದು ಖಚಿತವಾಗಿವೆ ಎಂದೂ ಹೇಳಿದರು. ಈಗ ಕೋಲಾರ ಜಿಲ್ಲೆಯ ತೆಂಗು ಬೆಳೆಗಾರರು ನುಸಿರೋಗ ಹಿಡಿದ ಮರಗಳನ್ನೇ ಕಡಿಯತೊಡಗಿದ್ದಾರೆ. ಮಂಡ್ಯ ಜಿಲ್ಲೆಯಲ್ಲಿ

ತೆಂಗಿನ ಮರಗಳಿಗೆ ನುಸಿಪೀಡೆ ರೋಗವಲ್ಲದೆ, ಗರಿ ಒಣಗುವ ರೋಗವೂ ಕಾಣಿಸಿಕೊಂಡಿದೆ. ನುಸಿರೋಗ ತೆಂಗಿನ ಸುಳಿಯನ್ನು ತಿಂದರೆ, ಹರಿತ್ತನ್ನು ನುಂಗಿ ಗರಿಗಳನ್ನು ಒಣಗಿಸುವ ಗರಿರೋಗದಿಂದ ಗೊಡ್ಡಾಗುತ್ತಿರುವ ತೆಂಗಿನ ಮರಗಳನ್ನು ಕಂಡು ಹತಾಶರಾದ ರೈತರು ತಮ್ಮ ತೋಟಗಳಲ್ಲಿ ಕಡಿದು ಹಾಕುತ್ತಿದ್ದಾರೆ. ನೀರಾ ಇಳಿಕೆ, ಬೇರಿಗೆ ಬೇವಿನ ಔಷಧಿ, ಕಾಂಡಕ್ಕೆ ಚುಚ್ಚು ಮದ್ದುಕೂಡ ರೋಗವನ್ನು ನಿಯಂತ್ರಿಸಿಲ್ಲ ಎಂಬುದು ರೈತರ ಅಳಲು.

***ಮಂಥನ :*** *ನೀರಾ, ತೆಂಗಿನ ಮರದಿಂದ ಮೊದಲಿನಿಂದ ಇಳಿಸುತ್ತಿದ್ದ, ಹೊತ್ತು ಮೂಡುವ ಮುನ್ನಿನ ಹೆಂಡವಲ್ಲದ ಆರೋಗ್ಯಕರ ಪೇಯವಾಗಿ ಬಳಕೆಯಲ್ಲಿದೆ. ಸದ್ದಿಲ್ಲದೆ ನಡೆಯುತ್ತಿದ್ದ ಈ ಬಳಕೆಗೆ ಸಾಕಷ್ಟು ಆದಾಯವೂ ಇತ್ತು. ಅಮಲು ಮತ್ತು ನಿಶೆ ಇತ್ಯಾದಿ ಆರೋಪವಿಲ್ಲದೆ ಸಾಮಾನ್ಯರ ಬಳಕೆಗಿತ್ತು. ಒಂದು ಕಾಲಕ್ಕೆ ಇದನ್ನು ದುರುಪಯೋಗಪಡಿಸಿಕೊಂಡು ಹೆಂಡವಾಗಿ ಪರಿವರ್ತಿಸಿ ಮಾರಾಟ ಮಾಡತೊಡಗಿದಾಗ ಪರವಾನಗಿಯನ್ನು ಈ ಹಿಂದೆ ರದ್ದು ಮಾಡಲಾಗಿದದ್ದು ಸರ್ಕಾರ ಕೊಟ್ಟ ಎಚ್ಚರಿಕೆ ಆಗಿತ್ತು. ತೆಂಗು ಬೆಳೆಗಾರರು ತೀರ ಕಂಗಾಲಾದದ್ದು ನುಸಿರೋಗ ತೆಂಗಿಗೆ ತಗುಲಿದಾಗ. ಹೂವು ಉದುರಿ ಕಾಯಿಬರದೆ ಬೆಳೆಯ ಇಳುವರಿ ಹಾಗು ಆದಾಯ ಎರಡೂ ಕುಸಿದು ಪರ್ಯಾಯ ತೋಚಿರಲಿಲ್ಲ. ಆಂಧ್ರ ಮಹಾರಾಷ್ಟ್ರ ತಮಿಳುನಾಡುಗಳಲ್ಲಿ ನೀರಾ ಹಾಗು ನೀರಾ ಉತ್ಪನ್ನಗಳಿಂದ ಒದಗುತ್ತಿದ್ದ ಆದಾಯ ಗಮನಕ್ಕೆ ಬಂತು. ಅಲ್ಲದೆ ರಾಜ್ಯ ರೈತ ಸಂಘದ ಎರಡೂ ಬಣಗಳು ರೈತರ ನೆರವಿಗೆ ಬಂದವು. ನೀರಾ ಚಳುವಳಿಗೆ ಒಂದು ಸ್ವರೂಪವನ್ನು ಒದಗಿಸಿದುವು. ನೀರಾ ಇಳಿಕೆಯು ನುಸಿಪೀಡೆಗೆ ಒಂದು ಮದ್ದು ಎಂದಾಗಿ ರೈತರಲ್ಲಿ ಉತ್ಸಾಹ ನಿಮಿರಿತು. ರೈತ ಸಂಘದ ಒಂದು ಬಣದ ನೇತಾರರು ಹಳ್ಳಿಗಳಲ್ಲಿ ತೆಂಗಿನ ಮರಗಳಿಗೆ ಮಡಿಕೆ ಕಟ್ಟಿ ನೀರಾ ಇಳಿಸತೊಡಗಿದರು. ಚಳುವಳಿಯಾಗಿ ಇವೆಲ್ಲ ಕಾವು ಪಡೆಯಲಾರಂಭಿಸಿದಾಗ ರಾಜಕೀಯ ಪಕ್ಷಗಳೂ ನೀರಾ ಸಂದರ್ಭವನ್ನು ಕೈಗೆತ್ತಿಕೊಂಡವು. ರೈತಸಂಘ ಮತ್ತು ಸರಕಾರದ ನಡುವೆ ಸಂವಾದವೂ ನಡೆಯಿತು. ವಿಧಾನಸಭೆ ಮತ್ತು ವಿಧಾನಪರಿಷತ್ತಿನಲ್ಲಿ ನೀರಾ ಇಳಿಸಲು ಅನುಮತಿ ನೀಡಬೇಕೆಂದು, ಚರ್ಚೆಗಳೂ ನಡೆದುವು. ಪ್ರತಿಪಕ್ಷಗಳು ಧರಣಿ, ಸತ್ಯಾಗ್ರಹ ನಡೆಸಿದುವು. ಒಂದೆಡೆ ಅಬ್ಕಾರಿ ಗುತ್ತಿಗೆದಾರರಿಂದ ನೀರಾದಿಂದ ಹೆಂಡಮಾರಾಟಕ್ಕೆ ಕುತ್ತು ಎಂಬ ಒತ್ತಡ, ಇನ್ನೊಂದೆಡೆ ವಿಪಕ್ಷಗಳ, ರೈತ ಸಂಘಟನೆಗಳ ಒತ್ತಡ ಇವುಗಳ ನಡುವೆ ಸರ್ಕಾರ ಸಾಧಕ ಬಾಧಕ ನೋಡಿ ಒಂದು*

ನಿರ್ಧಾರಕ್ಕೆಬರಬೇಕಾಯಿತು. ಈ ಸಂದರ್ಭದಲ್ಲಿಯೇ ವಿಠಲೇನಹಳ್ಳಿಯಲ್ಲಿ ನೀರಾ ಇಳಿಸಿ ಚನ್ನಪಟ್ಟಣಕ್ಕೆ ಹೋಗಿ ಮಾರಾಟ ಮಾಡುತ್ತಿದ್ದ ಘಟನೆ, ರೈತರ ಬಂಧನ, ವಿಠಲೇನಹಳ್ಳಿಯಲ್ಲಿ ಹಿಂಸಾಚಾರಕ್ಕೆ ತಿರುಗಿ ಕಲ್ಲು ತೂರಾಟ, ಗೋಲಿಬಾರ್ ನಡೆದು ಓರ್ವ ರೈತರು ಸಾವಿಗೀಡಾದದ್ದು, ಆ ನಂತರ ಮಾಜಿ ಪ್ರಧಾನಿ ಶ್ರೀ ಹೆಚ್.ಡಿ. ದೇವೇಗೌಡರ ಪಾದಯಾತ್ರೆ ಇವೆಲ್ಲ ಸರಣಿಯಾಗಿ ನಡೆದುವು. ಕೊನೆಗೆ ಎಲ್ಲ ಸಾಧಕ ಬಾಧಕಗಳ ಹಿನ್ನೆಲೆಯಲ್ಲಿ ಶರತ್ತುಗಳನ್ನಿಟ್ಟು ರೈತರ ಸದ್ಯದ ಹಿತದೃಷ್ಟಿಯಿಂದ ನೀರಾ ಇಳಿಸಲು ಸರ್ಕಾರ ಅನುಮತಿ ನೀಡಿತು. ಇದೊಂದು ತಾತ್ಕಾಲಿಕ ಪರವಾನಗಿ ಎಂಬ ಮಾತು ಇದೆ. ನೀರಾ ಹಾಗು ನೀರಾ ಉತ್ಪನ್ನಗಳ ಸಮರ್ಪಕ ಬಳಕೆ, ರೈತರಿಗೆ ಆದಾಯ ಖಚಿತತೆ ನಿಖರಗೊಳ್ಳುವುದಾದರೆ ಇದೊಂದು ಸಮಾಧಾನಕರ ಮಾರ್ಗವಾಗಬಹುದು. ವಿಠಲೇನಹಳ್ಳಿಯಲ್ಲಿ ರೈತರ ನೀರಾ ಚಳುವಳಿಯ ಸಂದರ್ಭದಲ್ಲಿ ನಡೆದ ಗೋಲಿಬಾರ್ ಪ್ರಕರಣದ ವಿಚಾರಣೆಯನ್ನು ನ್ಯಾಯಮೂರ್ತಿ ಶ್ರೀ ಬಿ. ಪದ್ಮರಾಜ್ ಅವರ ನೇತೃತ್ವದ ವಿಚಾರಣಾ ಆಯೋಗವು ನಡೆಸಿರುವುದು ಒಂದು ಗಮನಾರ್ಹ ವಿಷಯ.

ನೀರಾ ಸಂಬಂಧದ ಹೆಚ್ಚಿನ ಉಭಯ ಸದನಗಳ ಚರ್ಚೆಯನ್ನು ಮುಂದೆ ಪೂರಕ ಅಧ್ಯಾಯದಲ್ಲಿ ನೀಡಿದೆ. ಅಲ್ಲಿನ ಚರ್ಚೆ ತುಂಬ ತಲಸ್ಪರ್ಶಿಯಾಗಿ, ತಾಂತ್ರಿಕಸ್ಪರ್ಶಿಯಾಗಿ ಸರಳ ಸಂವಹನದ ಮೂಲಕ ಮನಸ್ಸು ತಟ್ಟುವಂತಿದೆ. ವಿಶೇಷ ಚಿಂತನೆಗಳಿಗೂ ಅವಕಾಶ ಮಾಡಿಕೊಟ್ಟಿದೆ. ಈ ಮಾಹಿತಿ ಕಾಲಾಂತರದಲ್ಲಿ ಲಭ್ಯವಾದ ಕಾರಣ ಮುಂದಿನ ಅಧ್ಯಾಯದಲ್ಲಿ ಸೇರ್ಪಡೆಗೊಳಿಸಲಾಗಿದೆ.

# ಅಧ್ಯಾಯ–13

# ಸಹಸ್ರಮಾನ ಮೊದಲ ದಶಕದಲ್ಲಿ ರೈತರ ಸಮಸ್ಯೆಗಳು ಮತ್ತು ಚಳವಳಿಗಳು ಸದನದ ನಡವಳಿಕೆಗಳು

ಈ ಮುನ್ನ 2000ನೇ ಇಸವಿಯ ಸುಮಾರಿನ ವರೆಗೆ ಬರೆದ ರೈತ ಚಳವಳಿಯ ವಿಷಯಗಳಿಗೆ 2005ನೇ ಇಸವಿ ಸುಮಾರಿನವರೆಗೂ ವಿಷಯಗಳನ್ನು ಸೇರಿಸಿ ಬರೆಯಲು ಗ್ರಂಥಾಲಯ ಸಮಿತಿಯು ತಿಳಿಸಲಾಗಿ, ಅನುಬಂಧವಾಗಿ ವಿವರಗಳನ್ನು ಸದ್ಯ ನೀಡಿದೆ. ಉಭಯ ಸದನಗಳ ನಡವಳಿಕೆಗಳನ್ನು ಚಳುವಳಿ ಸಂಬಂಧವಾಗಿ ನೀಡುವಲ್ಲಿ, ತುರ್ತಾಗಿ ನೀಡಬೇಕಾದ ಸಂದರ್ಭದ ಕಾರಣ, ಸಂಕ್ಷಿಪ್ತವಾಗಿ ಅವುಗಳನ್ನು ತಿಳಿಸಲಾಗಿದೆ. ಅಲ್ಲದೆ ಕೆಲವು ವಿಷಯಗಳು ಪುನರ್ ಪ್ರಸ್ತಾಪಗೊಂಡರೂ ಆಯಾ ವರ್ತಮಾನದ ಸಂಗತಿಗಳ ಹಿನ್ನಲೆಯಲ್ಲಿ ಅವುಗಳಿಗೆ ಬೇರೆ ವ್ಯಾಖ್ಯಾನಗಳೂ ಕಾಣಬಹುದು. ವಿಶೇಷತಃ ರೈತರ ಸಮಸ್ಯೆಗಳು, ಬೆಳೆಹಾನಿ, ಮಳೆ ಅಭಾವ, ಬೆಳೆ ಹಣದ ಪಾವತಿ ಬಾಕಿ, ಬೆಲೆ ಕುಸಿತ, ಆತ್ಮಹತ್ಯೆಯ ಕಾರಣ, ಪರಿಹಾರ, ನೀರಿನ ಸಮಸ್ಯೆಯೂ ಸೇರಿದಂತೆ ಹಲವಾರು ವಿಷಯಗಳ ಪುನರ್ ವ್ಯಾಖ್ಯಾನಗೊಳ್ಳುವ ಸಂದರ್ಭವೂ ಇಲ್ಲಿ ಒದಗಿದೆ. ಇವನ್ನು ಆಯಾ ವಿಷಯ ಶೀರ್ಷಿಕೆಯಡಿಯಲ್ಲಿ ವಿವೇಚಿಸಿಕೊಂಡು ಬರಲಾಗಿದೆ.ಚಳವಳಿಯ ಇತರ ಮಜಲುಗಳನ್ನು ಹಾಗು ಸಾಂತ್ವನ ಪ್ರಯತ್ನಗಳ ಆಯಾಮಗಳನ್ನು ಇಂದಿನವಾಗಿ ಗಮನಿಸಲಾಗಿದೆ. ಅದಾಗಿ ಚಳವಳಿಯ ನಿರಂತರತೆ, ಪರಿಹಾರದ ಪ್ರಗತಿ, ಸಾಂತ್ವನದ ನವ್ಯ ರೀತಿಗಳನ್ನು ವಿವೇಚಿಸಬೇಕಾಗುತ್ತದೆ. ವಿಶೇಷತಃ ಶಾಸಕರ ಚಿಂತನೆಗಳು, ಕ್ಷೇತ್ರಾನುಭವಗಳನ್ನು ಅವರ ಮಂಡನೆಗಳಲ್ಲಿ ಗಮನಿಸಬೇಕಾಗುತ್ತದೆ. ಸಹಸ್ರಮಾನ ನಿರ್ಮಿಸಿರುವ ಮನೋಧರ್ಮನ್ನು ಪರಿಗಣಿಸಬೇಕಾಗುತ್ತದೆ. ಹೀಗಾಗಿ ಅಧಿವೇಶನ ನಡವಳಿಕೆಗಳ ಸಂಪುಟಗಳಿಂದ ಆಯ್ದ ವಿಷಯಗಳನ್ನು ಪ್ರಮುಖವಾಗಿ ಇಲ್ಲಿ ನೀಡಲಾಗಿದೆ.

## ವಿಷಯ 1 : ನುಸಿ ರೋಗ ಮತ್ತು ನೀರಾ ಬೆಳೆಹಾನಿ ಸಮಸ್ಯೆಗಳು

ವಿಧಾನ ಸಭಾಧಿವೇಶನವು 21.3.2000ದಲ್ಲಿ ನಡೆದ ಸಂದರ್ಭದಲ್ಲಿ*[1] 15 ತೆಂಗಿನ ಮರಗಳಿಗೆ ತಗುಲಿರುವ ನುಸಿರೋಗದ ಕುರಿತು ಪ್ರಸ್ತಾಪಿತಗೊಂಡಿದೆ. ಶ್ರೀ ಪಿ.ಜಿ.ಆರ್.ಸಿಂಧ್ಯಾ ಅವರು ವಿಷಯ ಪ್ರಸ್ತಾಪ ಮಾಡುತ್ತ : ರಾಜ್ಯದ ಸುಮಾರು 10 ಲಕ್ಷ ಎಕರೆ ಜಮಿನಿನಲ್ಲಿ 7 ಕೋಟಿಗೂ ಮೀರಿ ಇರುವ ತೆಂಗಿನ ಮರಗಳಿಗೆ ತಗುಲಿರುವ ನುಸಿರೋಗ; ಅದರ ನಿವಾರಣೆಗಾಗಿ ಸರಕಾರದ ಭರವಸೆಯು ಹುಸಿಯಾಗಿರುವುದು; ಕೇಂದ್ರ ಸರ್ಕಾರದ ತೆಂಗಿನ ಮಂಡಳಿ ಯಾವುದೇ ರಾಜ್ಯದ ತೆಂಗಿನ ಕೃಷಿಗೆ ನೆರವೀಯಲು ಮುಂದಾಗದಿರುವುದು; ಅದಕ್ಕೆ ಲೋಕಸಭಾ ಸದಸ್ಯರು ಅಲ್ಪ ಸಹಾಯ ಉಪಯೋಗವಿಲ್ಲದಿರುವುದು; ಇತ್ಯಾದಿ ಕುರಿತು ಸದನದಲ್ಲಿರುವವರೆಲ್ಲ ರೈತರ ಮಕ್ಕಳೇ ಆಗಿರುವಲ್ಲಿ ತೆಂಗು ಬೆಳೆಗೆ ಬಂದಿರುವ ಪಿಡುಗಿನ ಪರಿಹಾರ ಕುರಿತು ವಿಚಾರಮಾಡಿದರು.

ಈ ದಿನದ ಚರ್ಚೆಯಲ್ಲಿ ಸರ್ವಶ್ರೀ ಡಿ.ಬಿ.ಚಂದ್ರೇಗೌಡ, ಮಲ್ಲಿಕಾರ್ಜುನ ಖರ್ಗೆ ಸಭಾಧ್ಯಕ್ಷರು, ಬಿ.ಸೋಮಶೇಖರ್ ಅವರುಗಳು ಭಾಗವಹಿಸಿದ್ದರು.

ಶ್ರೀ **ರಾಜುಗೌಡ** ಅವರು ಮಾತನಾಡುತ್ತ : ಪ್ರಮುಖ ವಾಣಿಜ್ಯ ಬೆಳೆಯಾದ ತೆಂಗಿಗೆ ಇಲ್ಲದ ರಕ್ಷಣೆ, ನುಸಿರೋಗ ಬಾಧೆಯ ನಿವಾರಣೆ, ನುಸಿರೋಗ ಬಡವರ ತುತ್ತಿನ ಚೀಲದ ಮೇಲೆ ಆಗುವ ಮಾರಕ ರೋಗ ಎಂಬುದರ ಅರಿವು, ಅದರ ಸಾಮೂಹಿಕ ನಿಯಂತ್ರಣ, ಈ ರೋಗ ಎಲ್ಲ ಜಿಲ್ಲೆಗಳಲ್ಲಿ ಹರಡಿರುವುದು; ಔಷಧಿಯು ಕಳೆದುಕೊಂಡಿರುವ ನುಸಿರೋಗ ನಿಯಂತ್ರಣ ಶಕ್ತಿ; ಕಳೆದ ಒಂದು ವರ್ಷದಿಂದ ರೈತರಿಗೆ ನಷ್ಟವಾಗಿರುವ 4 ಕೋಟಿ, ಅವರಿಗೆ ಕೊಡಬೇಕಾದ ಪರಿಹಾರ ಕುರಿತೆಲ್ಲ ತಿಳಿಸಿದರು.

ಶ್ರೀ **ಸಿ.ಬೈರೆಗೌಡ** ರೈತರ ಆರ್ಥಿಕ ಪರಿಸ್ಥಿತಿಯ ಮೇಲೆ ಆಗಿರುವ ಭೀಕರ ಪರಿಣಾಮ, ಮೆಕ್ಸಿಕೋದಲ್ಲಿ 1956ರಲ್ಲಿ ತೆಂಗಿಗೆ ಹತ್ತಿದ ನುಸಿರೋಗ ಗಾಳಿ ಮತ್ತು ಗಿಡಗಳಿಂದ ನಮ್ಮ ದೇಶಕ್ಕೂ ಹರಡಿರುವುದು; ರಾಜ್ಯದಲ್ಲಿ ಸುಮಾರು 4-6 ಲಕ್ಷ ಹೆಕ್ಟೇರ್ ಪ್ರದೇಶದಲ್ಲಿ ಬೆಳೆಯುವ ತೆಂಗು ರೈತರಿಗೆ ಆರ್ಥಿಕ ಪ್ರಯೋಜನ ನೀಡಿರುವುದು; ವಾರ್ಷಿಕವಾಗಿ 3120 ದಶಲಕ್ಷ ತೆಂಗಿನಕಾಯಿ ಉತ್ಪಾದನೆಯಲ್ಲಿ ರಾಜ್ಯದ 10ಲಕ್ಷ ಜನ ತೊಡಗಿರುವುದು (ಉಳುಮೆ, ಶುದ್ಧೀಕರಣ ನಾರು ಬೇರ್ಪಡೆ,

---

1. ವಿಧಾನಸಭಾ ನಡವಳಿಕೆಗಳು., ಸಂಪುಟ 29 (1-8), 21.3.2000, ಪು.578-81; 962-967

ಉತ್ಪನ್ನ ರೂಪಾಂತರ ಇತ್ಯಾದಿಗಳಲ್ಲಿ); ಒಟ್ಟು ತೋಟಗಾರಿಕಾ ಬೆಳೆಯಲ್ಲಿ ಶೇ.30 ರಷ್ಟು ತೆಂಗಿನ ಬೆಳೆಯನ್ನು ಅವಲಂಬಿಸಿರುವ ರೈತರು; ತೆಂಗಿಗೆ ತಗುಲಿರುವ 4–5 ರೋಗಗಳು–ಎರಿಯೋಫೈಡ್ ಮೈಟ್, ರೆಡ್ ಫಾಮ್ ಗ್ರಿವಿಲ್, ಬ್ಲಾಕ್ ಹೆಡೆಡ್ ಕ್ಯಾಟಲ್ ಪಿಲ್ಲರ್ ರೈನೊಸರಿಸ್ ಬೀಟಲ್ ಇತ್ಯಾದಿ; ಮರದ ಕಾಂಡದಲ್ಲಿ ಅಂಟು ಬಂದು ಸ್ಟೆಮ್ ಬ್ಲೀಡಿಂಗ್ ನಿಂದ ಮರ ಸಾಯುವುದು; ಸಣ್ಣ ಕಾಯಿ ಆದಕೂಡಲೆ ಬೀಳುವಿಕೆಯ ರೋಗ, ಬಟರ್ ಷಡ್ಡಿಂಗ್, ಅಣಬೆರೋಗದಿಂದಲೂ ಮರಗಳು ಸಾಯುವುದು; ಕಪ್ಪುತಲೆಹುಳುವಿನಿಂದಾಗಿ ತೆಂಗಿನ ಮರಗಳ ಗರಿ ಒಣಗಿ, ಇಳುವರಿ ಕಡಿಮೆ ಆಗುತ್ತಿರುವುದು; ಇವೆಲ್ಲದರ ಜೊತೆಗೆ ನುಸಿಪೀಡೆಯಿಂದ ತೆಂಗಿನ ನಾಶ – ಈ ಬಗೆಗೆಲ್ಲ ವಿಜ್ಞಾನಿಗಳ ಸಲಹೆ ಪಡೆದು ತೆಗೆದುಕೊಳ್ಳಬೇಕಾದ ಕ್ರಮ; ಕೃಷಿರಂಗದಲ್ಲಿ ಕೇವಲ ಘೋಷಣೆಗಳನ್ನು ಬಿಟ್ಟು ಸೂಕ್ತ ಕಾರ್ಯಕ್ರಮಗಳನ್ನು ಕೈಗೊಳ್ಳುವುದು; ತರೀಕೆರೆ, ಚಿಕ್ಕಮಗಳೂರು, ಕಡೂರು ಮುಂತಾದ ಕಡೆ ರೋಗ ಪೀಡಿತವಾಗಿರುವ ಮರಗಳಿಂದಾಗಿ ರೈತರು ಕುಟುಂಬಗಳು ಅನುಭವಿಸುತ್ತಿರುವ ತೊಂದರೆ ಕುರಿತೆಲ್ಲ ವಿಶದೀಕರಿಸಿದರು.

12.4.2000ರ ವಿಧಾನ ಪರಿಷತ್ ಅಧಿವೇಶನದಲ್ಲಿ *[2]ತೋಟಗಾರಿಕೆ ರಾಜ್ಯ ಸಚಿವರಾದ ಶ್ರೀ **ಅಲ್ಲಂ ವೀರಭದ್ರಪ್ಪ** ನವರು ನುಸಿಬಾಧೆ ಕುರಿತ ವಿವರಗಳನ್ನೊದಗಿಸುತ್ತ, ತೆಂಗು ಬೆಳೆವ ಜಿಲ್ಲೆಗಳಲ್ಲಿ ನುಸಿಬಾಧೆ ಪ್ರಮಾಣ ತಿಳಿಯಲು ಮಾಡಿದ ಸಮೀಕ್ಷಾ ತಂಡಗಳ ಮೂಲಕ ಗಣತಿಯಿಂದ 65 ಲಕ್ಷ ತೆಂಗಿನ ಮರಗಳು ರೋಗ ಪೀಡಿತವಾಗಿರುವುದು; ಕೃಷಿ ವಿಶ್ವವಿದ್ಯಾಲಯದ ತಜ್ಞರೊಡನೆ ಚರ್ಚಿಸಿ ತೆಗೆದುಕೊಳ್ಳಬೇಕಾದ ಕ್ರಮಗಳ ರೂಪುರೇಷೆ ತಯಾರಿಕೆ; ಹಾಗು ತರಬೇತಿ ಕಾರ್ಯಕ್ರಮ; ಪ್ರಚಾರ ಮಾಧ್ಯಮಗಳ ಮೂಲಕ ನುಸಿಪೀಡೆ ಹತೋಟಿಗೆ ರೈತರಿಗೆ ತಿಳುವಳಿಕೆ ಹಾಗು ಕರಪತ್ರ ವಿತರಣೆ; ಕೇಂದ್ರಕ್ಕೆ ಈ ಬಗೆಗಿನ ವರದಿ ಹಾಗು 80 ಕೋಟಿ ರೂ ಆರ್ಥಿಕ ನೆರವಿಗೆ ಕೋರಿಕೆ; ನುಸಿಬಾಧಿತ ಜಿಲ್ಲೆಗಳಲ್ಲಿ ಸಾಮೂಹಿಕ ನಿವಾರಣಾ ಕ್ರಮಕ್ಕೆ ರೈತರಿಗೆ ಶೇ.50ರ ರಿಯಾಯಿತಿ ದರದಲ್ಲಿ ಕೀಟನಾಶಕಗಳ ಸರಬರಾಜಿಗೆ ಹಣಬಿಡುಗಡೆ; ಸಣ್ಣ ಮತ್ತು ಅತಿ ಸಣ್ಣ ರೈತರಿಗೆ ಶೇ.75 ರಷ್ಟು ಸಹಾಯಧನದ ಮಂಜೂರಾತಿ; ಸಾಮೂಹಿಕ ನಿವಾರಣಾ ಅನುಷ್ಠಾನಕ್ಕಾಗಿ ಸಿಬ್ಬಂದಿ ತಂಡಗಳು, ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಟಾಸ್ಕ್ ಫೋರ್ಸ್ ಸಮಿತಿ ರಚನೆ : ತಾಲೂಕು ಮತ್ತು ಹೋಬಳಿ ಮಟ್ಟದಲ್ಲಿ ಉಪಸಮಿತಿಗಳ ರಷನೆ, ಅವುಗಳ ಮುಖೇನ ರೈತರ ತೋಟಗಳಲ್ಲಿ ನುಸಿಬಾಧೆ ಹತೋಟಿ ಕಾರ್ಯಕ್ರಮ ಅನುಷ್ಠಾನಕ್ಕೆ

---

**2. ವಿಧಾನ ಪರಿಷತ್ತಿನ ನಡವಳಿಕೆಗಳು., ಸಂಪುಟ 297 (1–5) 12.4.2000 ಪು.576–77**

ಬೇಕಾದ ಕೀಟನಾಶಕಗಳನ್ನು ಕೆ.ಎ.ಐ.ಸಿ ಮತ್ತು ಕ.ಹೆಚ್.ಎಫ್ ಸಂಸ್ಥೆಗಳ ಮೂಲಕ ಸರಬರಾಜು, ಈ ಬಗೆಗಿನ ತಾಂತ್ರಿಕ ಸೂಚನೆಗಳ ಸುತ್ತೋಲೆ ಹೊರಡಿಸಿರುವುದು; ಸರ್ಕಾರ ರೈತರ ಹಿತಾಸಕ್ತಿಯನ್ನು ಕಾಪಾಡಲು ನುಸಿಬಾಧೆ ವಿರುದ್ಧ ತೆಗೆದುಕೊಂಡಿರುವ ಪರಿಣಾಮಕಾರಿ ಕ್ರಮಗಳ ಕಾರ್ಯೋನ್ಮುಖತೆ ಕುರಿತು ಹೇಳಿದರು.

**ವಿಷಯ 2: ತೆಂಗಿನ ಬೆಳೆಗೆ ನುಸಿಪೀಡೆ; ರೈತರಿಗೆ ತೊಂದರೆ; ನೀರಾ ಇಳಿಕೆಗೆ ಅನುಮತಿ**

ನುಸಿಪೀಡೆ ಕಾರಣ ನೀರಾ ಇಳಿಕೆಗೆ ಅನುಮತಿ ಕೋರಿಕೆ ಇಟ್ಟ ಸಂದರ್ಭವು 4.8.2001 ರ ವಿಧಾನ ಪರಿಷತ್ತಿನ ನಡವಳಿಕೆಗಳಲ್ಲಿ*[3] ಪ್ರಸ್ತಾಪವಾಗಿರಲು. ಶ್ರೀ ಎಂ.ಎಸ್. ಸಿದ್ದರಾಜು ಅವರು ಮಾತನಾಡುತ್ತ; ರೈತನ ವ್ಯವಸಾಯ, ಕುಟುಂಬ, ರಾಸುಗಳಿಗೆಲ್ಲ ತೊಂದರೆಗಳ ನಡುವಿನ ಅವನ ಬದುಕು; ನುಸಿಪೀಡೆ ನಿರ್ಮೂಲನಕ್ಕೆ 9 ಕೋಟಿ ರೂ ಖರ್ಚುಪಾಡಿದರೂ ನಿವಾರಣೆ ಆಗದೆ ರೈತನಿಗೆ ಪ್ರಯೋಜನವಾಗದಿರುವುದು; 1964ರಲ್ಲಿ ಮೆಕ್ಸಿಕೋದಲ್ಲಿ ಮೊದಲು ಕಂಡ ನುಸಿರೋಗ ಶ್ರೀಲಂಕಾಕ್ಕೆ ಹರಡಿ ಅಲ್ಲಿಯೂ ನಿರ್ಮೂಲನವಾಗದಿರುವುದು; 25.6.2001ರಂದು ಕೃಷಿವಿಶ್ವವಿದ್ಯಾಲಯದ ಕೀಟ ಶಾಸ್ತ್ರ ವಿಜ್ಞಾನಿಗಳು, ಕೃಷಿ ಮತ್ತು ತೋಟಗಾರಿಕಾ ಇಲಾಖಾ ಅಧಿಕಾರಿಗಳ ಸಮಾಲೋಚನಾ ಸಭೆಯು ನುಸಿಪೀಡೆ ತಡೆಗಟ್ಟಲು ನೀರಾ ಇಳಿಸಲು ಒಪ್ಪಿಗೆ ನೀಡುವ ಬಗ್ಗೆ ಪರಿಶೀಲಿಸಲು ಶಿಫಾರಸು ಮಾಡಿದುದು; ನೀರಾದಿಂದ ತಯಾರಿಸಬಹುದಾದ ಬೆಲ್ಲ, ಸಕ್ಕರೆ, ಜ್ಯೂಸ್, ಚಾಕಲೇಟ್ ಇತ್ಯಾದಿ ಉತ್ಪನ್ನಗಳು; ತೆಂಗಿಗೆ ತಗುಲಿರುವ ನುಸಿಪೀಡೆಯಿಂದಾಗಿ ರೈತರ ಜೀವನದ ಮೇಲೆ ಆರ್ಥಿಕ ನಷ್ಟದ ದುಷ್ಪರಿಣಾಮ; ತೆಂಗಿನ ಮರವೊಂದಕ್ಕೆ ವಾರ್ಷಿಕ 1 ಸಾವಿರ ರೂ ಆದಾಯ ಇದ್ದದ್ದು ಇಂದು ಒಂದು ರೂ. ಕೂಡ ಇಲ್ಲ ಎಂದರೆ ಆಗಿರುವ ಕೋಟಿಗಟ್ಟಲೆ ನಷ್ಟ; ರಾಸಾಯನಿಕ ಹಾಕಿ ಕೇವಲ ಹಣ ಖರ್ಚು ಮಾಡುವ ಬದಲು, ಕೇರಳದಲ್ಲಿ ರೂಪಿಸಿಕೊಂಡಿರುವ ನೀರಾ ಸಹಕಾರ ಸಂಘಗಳಿಗೆ ಆಗಿರುವ ಕೋಟ್ಯಾಂತರ ಲಾಭದ ಕುರಿತು ಸರ್ಕಾರದ ಪ್ರತಿನಿಧಿಗಳು ಹೋಗಿ ಮಾಡಬೇಕಾದ ಅಧ್ಯಯನದ ಅಗತ್ಯ; ನೀರಾದಲ್ಲಿ ಕ್ಲೋರಲ್ ಹೈಡ್ರೇಡ್ ಮುಂತಾದ ರಾಸಾಯನಿಕ ಬೆರಸಿ ಕಲುಷಿತಗೊಳಿಸಿ ಸೇವನೆಗೆ ಬಿಡುಗಡೆ ಮಾಡುವಲ್ಲಿ ಜನರ ಆರೋಗ್ಯದ ಮೇಲೆ ಆಗುವ ಪರಿಣಾಮ; ನೀರಾ ಇಳಿಕೆಗೆ ಅನುಮತಿ ಕೊಟ್ಟಿಲ್ಲ, ಸಾರಾಯಿ ಮಾರಾಟದಿಂದ ಒದಗುವ ಲಾಭಕ್ಕೆ ಬೀಳುವ ಕತ್ತರಿ ಎಂದು, ಸರ್ಕಾರದ ನಿಲುವು; ಮಹಾರಾಷ್ಟ್ರದಂತೆ ನೀರಾದಿಂದ ಸಕ್ಕರೆ ತಯಾರಿಸಿ ಗ್ರಾಮೀಣ ಆರ್ಥಿಕತೆಯನ್ನು

3. ವಿಧಾನಪರಿಷತ್ತಿನ ನಡವಳಿಕೆಗಳು., ಸಂಪುಟ 8, ಭಾಗ-2, (4.8.2001) ಪು. 54-87

ಪರ್ಯಾಯವಾಗಿ ಹೆಚ್ಚಿಸುವಿಕೆ? ಕುರಿತು ಸರ್ಕಾರ ಯೋಚಿಸಿ ರೈತರ ರಕ್ಷಣೆ ಮಾಡಲು ಇದರಿಂದಾಗುವ ಅವಕಾಶ; ನೀರಾವನ್ನು ಉನ್ನತ ತಂತ್ರಜ್ಞಾನದಿಂದ ರಕ್ಷಿಸುವ (6 ತಿಂಗಳಕಾಲ) ಬಗೆ; ಇದನ್ನೆಲ್ಲ ಬಿಟ್ಟು ನೀರಾ ಇಳಿಸಲು ಅನುಮತಿ ಇಲ್ಲ ಎಂದು ಸರ್ಕಾರ ಅನುಸರಿಸುತ್ತಿರುವ ದ್ವಂದ್ವ ನೀತಿ; ಸರ್ಕಾರ ಅಬಕಾರಿ ಲಾಬಿಗೆ ಮಣಿಯದೆ ರೈತರ ಹಿತ ಕಾಪಾಡುವುದು; ರೈತರನ್ನು ಉಳಿಸಿಕೊಳ್ಳಬೇಕಿರುವುದು ಕುರಿತೆಲ್ಲ ಹೇಳಿ ಮಾತು ಮುಗಿಸಿದರು.

ಶ್ರೀ **ಎಸ್.ಚಿನ್ನಬಸವಯ್ಯ** ಅವರು ಮಾತನಾಡುತ್ತ : ರಾಜ್ಯದ ಬಯಲು ಸೀಮೆಯ 14 ಜಿಲ್ಲೆಗಳಲ್ಲಿ ಬಹುತೇಕ ತೆಂಗಿನ ಬೆಳೆಯನ್ನು ಆಧಾರವಾಗಿಟ್ಟುಕೊಂಡಿರುವ ಸಣ್ಣ ರೈತರಿಗೆ ಪರ್ಯಾಯಗಳಿಕೆ ಇಲ್ಲದಿರುವುದು, ಹಾಗೂ ಗೊತ್ತಿಲ್ಲದಿರುವುದು; ಏಳು ವರ್ಷಗಳ ಸತತ ಪರಿಶ್ರಮದಿಂದ ತೆಂಗು ಬೆಳೆಯನ್ನು ಪಾಲನೆ ಮಾಡಿರುವ ರೈತರು; ಬ್ಯಾಂಕ್ ಅಥವಾ ಶ್ರೀಮಂತರ ಬಳಿ ಮಾಡಿರುವ ಸಾಲ; ನೀರಾ ಪ್ರಶ್ನೆ ಉದ್ಭವವಾಗಿರುವ ಕಾರಣ ಹಾಗು ರೈತರ ನೋವಿನ ಆಳ; ಅಂತರ್ಜಲ ಮಟ್ಟ 700 ಅಡಿ ಆಳಕ್ಕೆ ಹೋಗಿರುವುದು; ಬೋರ್‌ವೆಲ್, ಟ್ರಾಕ್ಟರ್‌ಗಳನ್ನು ತೆಂಗಿನ ಫಸಲು ನಿರೀಕ್ಷೆಯಲ್ಲಿ ಸಾಲ ಮಾಡಿಕೊಂಡಿರುವುದು; ಬೋರ್‌ವೆಲ್‌ಗಳಲ್ಲಿ ನೀರಿನ ಕೊರತೆ, ವಿದ್ಯುತ್ ಸರಬರಾಜಿನ ಅವ್ಯವಸ್ಥೆ; ನೀರಾ ಇಳಿಸಲು ಅನುಮತಿ ಇಲ್ಲವೆಂದರೆ, ಮರವೊಂದಕ್ಕೆ ನೀಡಬೇಕಾದ ನಿಗದಿತ ಪರಿಹಾರ ಧನ; ರೈತನು ನೆಟ್ಟಿದ್ದ ಮರ ಹಾಗು ನಾಶಗೊಂಡ ಮರ, ಆದ ನಷ್ಟ ಲೆಕ್ಕ ಹಾಕಿ ಪರಿಹಾರ ನೀಡುವ ಯೋಜನೆ; ಬರ ಪರಿಹಾರಕ್ಕೆ ಸರ್ಕಾರದ ಯೋಜನೆ; ರೈತ ಆತ್ಮಹತ್ಯೆ ಮಾಡಿಕೊಳ್ಳುವ ಹಿಂದೆ ಅಡಗಿರುವ ನೋವು; ಬದುಕಲು ಅವನಿಗೆ ಕಲ್ಪಿಸಿಕೊಡಬೇಕಾದ ಮಾರ್ಗೋಪಾಯ, ಕುರಿತೆಲ್ಲ ವಿಷಯವನ್ನು ಮಂಡಿಸಿ ತಮ್ಮ ಮಾತನ್ನು ಮುಗಿಸಿದರು.

**ಶ್ರೀ.ಡಿ.ಎಲ್.ಜಗದೀಶ್** ಅವರು ತೆಂಗು ಬೆಳೆಗಾರರ ರಕ್ಷಣೆಗೆ ಸರ್ಕಾರ 2 ವರ್ಷದಿಂದ ಸ್ಪಂದಿಸಿದೆಯೇ? ಅಥವಾ ವಿಫಲವಾಗಿದೆಯೇ? ಎಂಬ ಪ್ರಶ್ನೆ ಎತ್ತಿಕೊಂಡು ಮಾತನಾಡಿದರು; ರಾಜ್ಯದ 14 ಜಿಲ್ಲೆಗಳಲ್ಲಿ ತೆಂಗಿನ ಮರಗಳಿಗೆ ಬಂದಿರುವ ರೋಗದ ವ್ಯಾಪಕತೆ; ತಮ್ಮ ಅಭಿಪ್ರಾಯಗಳನ್ನು ವ್ಯಕ್ತಮಾಡಿ, ಸಲಹೆಗಳನ್ನು ಕೊಟ್ಟ ಸದಸ್ಯರ ಅಭಿಪ್ರಾಯಗಳಿಗೆ ಸಹಮತ; ತೆಂಗು ಬೆಳೆಗಾರರು ಸಂಕಷ್ಟಕ್ಕೆ ಒಳಗಾದಾಗ ನಾವು ಸರ್ಕಾರದ ನಮನ ಸೆಳೆದರೂ, ತೆಗೆದುಕೊಳ್ಳಬೇಕಾದ ಕ್ರಮದ ಬಗ್ಗೆ ನಿರಾಸಕ್ತಿ; ಖರೀದಿಮಾಡಿರುವ ಮಾನೋಕ್ರೋಟೋಪಾಸ್ ಪ್ರಮಾಣ ಹಾಗು

ಪ್ರಯೋಜನ; ಕೃಷಿ ಇಲಾಖೆಯಿಂದ ನುಸಿರೋಗ ಪರಿಹಾರದ ಈ ದಿಸೆಯ ಸಂಶೋಧನೆ; ರಾಜ್ಯದಲ್ಲಿ ಸಮೀಕ್ಷೆ ನಡೆಸಿ ತೆಗೆದುಕೊಳ್ಳಬೇಕಾದ ಕ್ರಮ ಹಾಗು ಜನತೆಗೆ ಮಾಹಿತಿ ನೀಡಿಕೆ; ನುಸಿ ಹಿಡಿದ ತೆಂಗು ಬೆಳೆಗೆ ಔಷಧಿ ಇಲ್ಲವೆಂದರೆ ಆಲ್ಟರ್‌ನೇಟಿವ್ ಕ್ರಾಪ್ ಬೆಳೆಯಲು ರೈತರಿಗೆ ನೀಡಬೇಕಾದ ಪ್ರೇರಣೆ; ನುಸಿಪೀಡೆ ರೋಗದ ನಿಯಂತ್ರಣ; ನಫೆಡ್ ಗೋಡೌನ್ ಇಲ್ಲದೆ ಕೇಂದ್ರ ಸರ್ಕಾರ ಕೊಬ್ಬರಿ ಖರೀದಿಯನ್ನು ಮುಂದುವರಿಸದಿರುವುದು; ಸಂದರ್ಭದ ಅವಶ್ಯಕತೆ ಗಮನಿಸಿ ರಾಜ್ಯ ಸರ್ಕಾರ ನಿಗದಿ ಮಾಡಿರುವ ರಿವಾಲ್ವಿಂಗ್ ಫಂಡ್' ಮೂಲಕ ಮಾಡಬೇಕಾದ ಖರೀದಿ ಹಾಗು 60% ನಷ್ಟವಾದರೂ, ಉಳಿದಿರುವ 40% ತೆಂಗಿಗೆ ಸೂಕ್ತ ಬೆಲೆ ನೀಡಿ ಸರ್ಕಾರವೇ ಖರೀದಿಸಿ ರೈತರಿಗೆ ನೀಡಬೇಕಾದ ಪರಿಹಾರ, ಕುರಿತು ಹೇಳಿ ಮಾತು ಮುಗಿಸಿದರು.

**ಶ್ರೀ ರಾಮಚಂದ್ರ ಗೌಡರು** : ಆಲೂಗಡ್ಡೆ, ಟೊಮೇಟೊ ಬೆಳೆ ನಷ್ಟವಾದರೆ ಒಂದು ವರ್ಷಕ್ಕೆ ನಷ್ಟವಾಗಬಹುದು. ತೆಂಗು ಬೆಳೆ ನಾಶವಾದರೆ ರೈತರು ಜೀವನ ಪರ್ಯಂತ ನಾಶವಾಗುತ್ತಾರೆ. ಜಾಗತೀಕರಣದ ಹಿನ್ನೆಲೆಯಲ್ಲಿ ರೈತರು ಬದುಕುವುದಕ್ಕೆ ಯಾವುದೇ ರಿಸ್ಟ್ರಿಕ್ಷನ್ ಇಲ್ಲದ ರೀತಿಯಲ್ಲಿ ದಾರಿ ಮಾಡಿಕೊಡಬೇಕಾದುದು ಸರ್ಕಾರದ ಕರ್ತವ್ಯ. ಭಿಕ್ಷೆ ಕೇಳಲು ರಾಜ್ಯದ ರೈತರು ಯಾವತ್ತೂ ಬಂದಿಲ್ಲ. 17 ಜಿಲ್ಲೆಗಳಲ್ಲಿ ತೆಂಗು ಬೆಳೆಯುವ ರೈತರಿಗೆ ಇಂದು ನೀರಾ ಇಳಿಸುವ ಬಗ್ಗೆ ಸಮಸ್ಯೆಯಾಗಿದೆ. 1965 ರಲ್ಲಿ ಮೆಕ್ಸಿಕೋದಿಂದ ಆರಂಭಿಸಿ, ದ.ಆಫ್ರಿಕಾ, ಶ್ರೀಲಂಕಾ ಮೂಲಕ ಕೇರಳಕ್ಕೆ ಬಂದ ನುಸಿಕಾಯಿಲೆ ನಮ್ಮ ರಾಜ್ಯಕ್ಕೆ ನುಗ್ಗಿದೆ. ಹೊಂಬಾಳೆ ಹತ್ತಿರ ಬಹಳ ಸುಲಭವಾಗಿ ಅಟ್ಯಾಕ್ ಮಾಡಿ ನಂತರ ಮರದ ಇತರ ಭಾಗಗಳಲ್ಲಿ ಬೆಳೆಯುವ ಕೀಟವಿದಾಗಿದೆ. ರಾಜ್ಯದ 7 ಕೋಟಿ ತೆಂಗಿನ ಮರದಲ್ಲಿ ಕನಿಷ್ಠ 2 ಕೋಟಿ ತೆಂಗಿನ ಮರಗಳಲ್ಲಿ ನೀರಾ ಇಳಿಕೆಗೆ ಅವಕಾಶವಾದರೆ 8 ಲಕ್ಷ ಜನರಿಗೆ ಲಭಿಸುವ ಉದ್ಯೋಗವಲ್ಲದೆ, ಅದಕ್ಕೆ ಮಡಿಕೆ ತಯಾರಿಸುವ 2 ಲಕ್ಷ ಜನಕ್ಕೆ ಉದ್ಯೋಗ ದೊರಕಿ ಒಟ್ಟು 10 ಲಕ್ಷ ಜನಕ್ಕೆ ಅನುಕೂಲವಾಗುತ್ತದೆ. ಇದರಿಂದ ವರ್ಷಕ್ಕೆ 30 ಸಾವಿರ ಕೋಟಿ ಆದಾಯ ಬರುವ ಸಾಧ್ಯತೆ ಇದೆ, ಎಂದು ತಜ್ಞರು ಅಂಕಿ ಅಂಶಗಳನ್ನು ನೀಡಿದ್ದಾರೆ. **ನೀರಾ ಎಂದರೆ ತೆಂಗಿನ ಮರದಲ್ಲಿ ಎಳನೀರು ಕಾಯಿ, ಕೊಬ್ಬರಿ ರೂಪಕ್ಕೆ ಬರುವ ಮುನ್ನಿನ ಅದರಲ್ಲಿನ ದ್ರವ್ಯರೂಪ.** ಅಸ್ತಮ, ಉಬ್ಬಸ, ಮಲಬದ್ಧತೆ ಇವರು ನೀರಾ ಸೇವಿಸಿದರೆ ಉಪಯೋಗ ಹಾಗು ನೀರಾದಿಂದ ಆದ ಬೆಲ್ಲ, ಸಕ್ಕರೆ ಪಾನೀಯ, ಚಾಕೊಲೇಟ್ ಬಳಸಿದರೆ ಅನೇಕ ಖಾಯಿಲೆಗಳು

ದೂರವಾಗುತ್ತವೆ ಎಂದು ಫಿಲಿಫೈನ್ಸ್ ಮತ್ತು ಥಾಲ್ಯೆಂಡ್ ದೇಶದಲ್ಲಿ ಕಂಡು ಹಿಡಿಯಲಾಗಿದೆ. ಆದರೆ ಇದರಲ್ಲಿ ತೊಂದರೆಯೂ ಇದೆ. ಔಷಧಿ ಸಿಂಪರಣೆಯಿಂದ ತೆಂಗಿನ ಪರಾಗಸ್ಪರ್ಶಕ್ಕೆ ಬೇಕಾದ ಜೇನು ನೊಣ, ಕೀಟ, ಚಿಟ್ಟೆ, ಮಿತ್ರಪಕ್ಷಿಗಳಿಗೆ ಜೀವಹಾನಿ, ಜೊತೆಗೆ ಕಪ್ಪೆ, ಏಡಿಗಳಿಗೂ ಜೀವ ಹಾನಿ ಆಗುವ ಸಮಸ್ಯೆಯೆ ಅದು. ಆದಕಾರಣ ಪ್ರಾಯೋಗಿಕವಾಗಿ ಕೆಲವಾರು ಜಿಲ್ಲೆಗಳಲ್ಲಿ ನುಸಿಪೀಡೆ ತಪ್ಪಿಸಲು ನೀರಾ ತೆಗೆಯುವ ಪ್ರಕ್ರಿಯೆ ನಡೆಸಬೇಕಿದೆ. ನೀರಾವನ್ನು ಇಳಿಸಿ ಬದುಕುತ್ತೇವೆ ಎಂದು ಹೇಳುವಂಥ ಅವಕಾಶವೊಂದನ್ನು ರೈತನಿಗೆ ಮಾಡಿಕೊಡಿ. ಅನೇಕ ಸಂಘ–ಸಂಸ್ಥೆಗಳು ನೀರಾ ತೆಗೆದು ಮಾರಲು ಮುಂದೆ ಬಂದಿವೆ. ಇದಕ್ಕೆ ಸಮ್ಮತಿ ನೀಡಬೇಕೆನ್ನುವ ಒತ್ತಾಯ ನನ್ನದು ಎಂದು ನುಡಿದು ಮಾತಿಗೆ ವಿರಾಮವಿಟ್ಟರು.

**ಶ್ರೀ ಕೆ.ಅಣ್ಣಾವಿನಯ ಚಂದ್ರ** ಅವರು ನುಸಿರೋಗದ ಕುರಿತ ಚರ್ಚೆಯಲ್ಲಿ ತಮ್ಮ ನುಡಿಗಳನ್ನಿಟ್ಟಿದ್ದು : **ನುಸಿರೋಗ ಒಂದು ಅತ್ಯಂತ ಸೂಕ್ಷ್ಮವಾದ ಮೈಟ್ ರೋಗ.** ರಾಸಾಯನಿಕ ವಿಷಯದಿಂದ ಇದನ್ನು ನಿರ್ಮೂಲನೆ ಮಾಡಲು ಸಾಧ್ಯವಿಲ್ಲ. ಮರ ವಿಷವನ್ನು ಹೀರಿದಾಗ ಮಾತ್ರ ಈ ಕ್ರಿಮಿಯನ್ನು ಕೊಲ್ಲಲು ಸಾಧ್ಯ. ನುಸಿರೋಗ ಸುಮಾರು 2 ಕೋಟಿ ಮರಗಳಿಗೆ ಹಬ್ಬಿದೆ. ಮುಂದೆ ಬೇರೆ ಮರಗಳಿಗೆ ರೋಗ ಹಬ್ಬದಿರಬೇಕೆಂದರೆ ಚೆಂಡಲು ರೂಪವನ್ನು ತಾಳುವ ಮೊದಲೇ ಆ ಕೊಂಬನ್ನು ಕೊಯ್ದು ಅದರಿಂದ ಒಸರುವಂಥ ನೀರನ್ನು ಮಣ್ಣಿನ ಮಡಕೆಯಲ್ಲಿ ಸಂಗ್ರಹಿಸಿದರೆ ಅದೇ ನೀರಾ. 6 ಗಂಟೆವರೆಗೆ ನೀರಾ, ನಂತರ ಹೆಂಡ ಎನ್ನುವುದಲ್ಲ. ಅದು ತಪ್ಪು ಗ್ರಹಿಕೆ. ನಮ್ಮ ಜಿಲ್ಲೆಯಲ್ಲಿ (ದ.ಕ) ತೆಂಗು ಅಥವಾ ಈಚಲ ಮರದಿಂದ ನೀರಾ ತೆಗೆಯುತ್ತೇವೆ. ನೀರಾ ಸಂಗ್ರಹಿಸುವ ಮಡಿಕೆಯನ್ನು ಪ್ರತಿದಿವಸ ತೊಳೆಯಬೇಕು. ಸುಣ್ಣದ ನೀರಿನಿಂದ (ಕ್ಯಾಲ್ಸಿಯಂ ಹೈಡ್ರಾಕ್ಸೈಡ್) ಮಡಿಕೆಯನ್ನು ತೊಳೆದು ಸ್ವಚ್ಛಮಾಡಿ ಮರಕ್ಕೆ ಕಟ್ಟಬೇಕು. ಮಡಿಕೆಯಲ್ಲಿರುವ ಫರ್ಮೆಂಟೇಷನ್ ಅನ್ನು ನಿಲ್ಲಿಸಲು ಇದನ್ನು ಮಾಡುತ್ತಾರೆ. ಹೀಗೆ ಮಾಡಿದರೆ 6 ಗಂಟೆ ಅವಧಿಯಲ್ಲಿ ಹುಳಿ ಬರುವುದಿಲ್ಲ. ಅದರಲ್ಲಿ ಗ್ಲೂಕೋಸ್ ಅಧಾರಿತ ಸುಕ್ರೋಸ್ ಸಿಗುವ ಕಾರಣ, ಅತ್ಯಂತ ಒಳ್ಳೆಯ ಪೇಯವಾಗಿ, ಶರೀರದ ಶಕ್ತಿಗೆ ಅತ್ಯಂತ ಒಳ್ಳೆಯದು ಆಗಿದೆ. ಎಂದೆಲ್ಲ ವಿವರಿಸಿದರು.

**ಡಾ.ವಿ.ಎಸ್.ಆಚಾರ್ಯ** ಅವರು ಉಪ್ಪೂರು ತಾ. ಅಬ್ಬಣ್ಣಕುದುರು ಗ್ರಾಮದಲ್ಲಿ ತಮಗೆ ಹಿಂದೆ ಸೇರಿದ್ದ ತೆಂಗಿನ ತೋಟದ ಗಿಡದ ತೊಂದರೆ ನಿವಾರಣೆ ಕುರಿತ ಅನುಭವವನ್ನು ಸ್ಮರಿಸಿ ಹೇಳುತ್ತ : ಒಕ್ಕಲು ಲೋಕ ಪೂಜಾರ್ ಅವರು ತೊಂದರೆ ಬಂದಂಥ ಗಿಡಗಳಿಗೆ ಮೂರ್ತೆ ಕಟ್ಟುತ್ತಿದ್ದು ಅಂದರೆ ಕೊಂಬು ಕಟ್ಟಿ

ನೀರಾ ಇಳಿಸಲಿಕ್ಕೆ ವ್ಯವಸ್ಥೆ ಮಾಡುತ್ತಿದ್ದರು. 2 ವರ್ಷ ನೀರಾ ಇಳಿಸಿದರೆ ಗಿಡ ಸ್ವಚ್ಛವಾಗಿ, ಆರೋಗ್ಯವಾಗಿ ಬರುತ್ತಿತ್ತು. ಹೀರಿಯೆಪಿಡ್ ಖಾಯಿಲೆ ಮೇಟ್‌ಕಾಯಿಲೆ ಎಂಬುದು ಗೊತ್ತಿರಲಿಲ್ಲ. ಆದರೆ ಸರ್ವರೋಗ ನಿವಾರಣೆ ಈ **ಮೂರ್ತೆ** ಕಟ್ಟುವಂಥಾದ್ದು; ಗಿಡಕ್ಕೆ ತೊಂದರೆ ಬಂದರೆ ಹಾಕಬೇಕಾದ್ದು ಗೊಬ್ಬರ ಎಂದು ತಿಳಿಯಿತು ಎಂದೆಲ್ಲ ವಿಷಯವಿಟ್ಟರು. ಈ ನಡುವೆ **ಕಾಗೋಡು ತಿಮ್ಮಪ್ಪನವರು** ಮಾತನಾಡಿ ಮಿಳ್ಳಿಗಳು ಉಲುಗುತ್ತಿದ್ದಾಗ (ಬೀಳುವುದು) ಈ ಕಾಯಿಯನ್ನು ಹಿಡಿದು ಮಿಳ್ಳಿಯನ್ನು ನಿಲ್ಲಿಸುವುದಕ್ಕೋಸ್ಕರ ಸೇಂದಿಯನ್ನು ಎತ್ತಿಕೊಡುತ್ತಿದ್ದರು, ಎಂದರು. ಆಗ ಡಾ.ವಿ.ಎಸ್.ಆಚಾರ್ಯ ಅವರು ಮಾತು ಮುಂದುವರಿಸಿ; ಗಿಡದ ಬುಡಕ್ಕೆ ಕಹಿ ಬೇವಿನ ಹಿಂಡಿ ಹಾಕಿ, ಮೇಲಿಂದ ಮೂರ್ತೆ ಕಟ್ಟಿದರೆ, ಹೀಗೆ ಒಂದೆರಡು ವರ್ಷ ಮಾಡಿದರೆ ಪುನಃ ತೆಂಗಿನಕಾಯಿ ಬರುತ್ತದೆ. ಒಂದು ವ್ಯವಸ್ಥೆ ಒಂದು ಕಡೆ ಯಶಸ್ವಿಯಾಗಿದೆ. ಅಂದರೆ ತೆಂಗನ್ನೇ ಅವಲಂಬಿಸಿದವರು ಅದನ್ನು ಪ್ರಯೋಗಿಸಬಹುದು. ಅದರಿಂದ ಬರುವ ಉತ್ಪನ್ನವಾದ ಓಲೆ ಬೆಲ್ಲ ಮಕ್ಕಳಿಗೆ ತಿನ್ನಲು ಚೆನ್ನ. ಟೀ ಗೆ ಬಳಸಿದರೆ ಬಹಳ ಚೆನ್ನ. ಆದರೆ ಸಕ್ಕರೆ ಬಂದ ಮೇಲೆ ಜನಕ್ಕೆ ಅದೆಲ್ಲ ಮರೆತುಹೋಗಿದೆ ಎಂದು ಪ್ರತಿಕ್ರಿಯಿಸಿದರು. ಡಾ.ವಿ.ಎಸ್.ಆಚಾರ್ಯ ಅವರು ಮಾತು ಮುಂದುವರಿಸಿ, ಪ್ರಯೋಗಿಕವಾಗಿ ನೀರಾ ಇಳಿಸಲು ನಮ್ಮ ರೈತರಿಗೆ ಬಿಟ್ಟರೆ, ಗಿಡಗಳನ್ನು ಬಚಾವ್ ಮಾಡುತ್ತೇವೆ ಎಂದು ಅವರು ಹೇಳುವಾಗ ಅಡ್ಡಿ ಏಕೆ? ಲ್ಯಾಬೋರೇಟರಿ ಅಧೀಕ್ಷರೂ ರೈತರು ಕೊಟ್ಟ ನೀರಾ ಸ್ಯಾಂಪಲ್ ಅನ್ನು ಪರಿಶೀಲಿಸಿ ಟ್ರಯಲ್ ಮಾಡುತ್ತಿರುವ ಬಗ್ಗೆ ತಿಳಿಸಿರುವ ಉತ್ತರವೂ ಬಂದಿದೆ. ಇದರಿಂದ ಪರಿಹಾರ ಸಿಗುವುದಾದರೆ, ಪಡೆಯಬೇಕು. ರೈತರು ತುಂಬಾ ಡೆಸ್ಪರೇಟ್ ಆಗಿರುವುದರಿಂದ, ಅವರನ್ನು ಹಾಗೆ ಬಿಡುವುದು ಒಳ್ಳೆಯದಲ್ಲ ಎಂದರು.

ಶ್ರೀ ಕೆ. ಅಣ್ಣವಿನಯಚಂದ್ರ ಅವರು ಮತ್ತೆ ನುಡಿಯುತ್ತ : ಕಬ್ಬಿಗೆ ಹಾಯಿಸುವಂತೆ ತೆಂಗಿನಮರಕ್ಕೆ ಅತ್ಯಂತ ದೊಡ್ಡರೀತಿಯಲ್ಲಿ ನೀರು ಹಾಯಿಸಬೇಕಿಲ್ಲ. ತೆಂಗಿನ ಮರದಿಂದ ತಯಾರಿಸುವ ಸಕ್ಕರೆ, ಕಬ್ಬಿನದಕ್ಕಿಂತ ಕಡಿಮೆದರದ್ದು ಎಂದರೂ ಅದೇ ಆಗಬೇಕೆಂದಿಲ್ಲ. ರೋಗ ಮತ್ತಷ್ಟು ಹರಡದಿರಲು **ಚಂಡಲು** ಇರಬಾರದು. ಅಂದರೆ ನೀರಾ ಕಟ್ಟಲು ಅವಕಾಶ ನೀಡಬೇಕು. ಕೊಂಬನ್ನು ಕಟ್ಟಿದಾಗ ಮಾತ್ರ ನೀರಾ ಉಪಯೋಗಕ್ಕೆ ಬರುತ್ತದೆ. ಈ ರೋಗ ನಿಲ್ಲಬೇಕಿದ್ದರೆ ಜೈವಿಕ ನಿಯಂತ್ರಣದಿಂದ ಮಾತ್ರ ಸಾಧ್ಯ. ಸಿಂಪಡಿಸುವ ಔಷಧಿಯಿಂದ ಭೂಮಿ ವಿಷಯುಕ್ತವಾಗಿ ಜೈವಿಕ ನಿಯಂತ್ರಣ ನಾಶವಾಗುತ್ತದೆ. ನೀರಾ ಹುಳಿ ಬಂದರೆ

ಲಿಕ್ಕರ್ ಲಾಬಿಯವರಿಗೆ ಕೊಡಬಹುದು; ಕೋಕೋನೆಟ್ ಪೆನ್ನಿ ಅನ್ನು ಅದರಿಂದ ತಯಾರಿಸಬಹುದು ಎಂದರು. ವಿದೇಶಕ್ಕೂ ಕಳುಹಿಸಬಹುದು. ಅಂತು ರೈತರ ಬವಣೆಗೆ ಸ್ಪಂದಿಸಬೇಕು ಎಂದರು. ರೋಗವನ್ನು ನೀರಾ ಇಳಿಸುವುದರಿಂದ ತಡೆಗಟ್ಟಬೇಕು; ಕಾರಣ ಅದು ಇಂದಿನ ಅತ್ಯಂತ ಸುಲಭದ ವ್ಯವಸ್ಥೆ. ಜೈವಿಕ ನಿಯಂತ್ರಣ ಕಂಡು ಹಿಡಿದ ನಂತರ ನೀರಾ ಇಳಿಸುವುದನ್ನು ನಿಲ್ಲಿಸಬಹುದು. ತತ್ಕಾಲದ ಪರಿಹಾರವಾಗಿ ನೀರಾ ಇಳಿಸುವುದಾಗಲಿ ಎಂದು ವಿನಂತಿಸುತ್ತ ಮಾತು ನಿಲ್ಲಿಸಿದರೂ.

**ಶ್ರೀ ಕೆ.ಎಚ್. ಶ್ರೀನಿವಾಸ್** ಅವರು  ನೀರಾ ಕುರಿತಂತೆ ಮಾತನಾಡುತ್ತ ನುಸಿಪೀಡೆಗೆ ಔಷಧಿ ಸಿಂಪರಣೆಯಿಂದ ಪ್ರಯೋಜನವಾಗದಿರುವುದು, ಪಲ್ಸ್ ಪೋಲಿಯೋ ರೀತಿ ಏಕ ಕಾಲದಲ್ಲಿ ಎಲ್ಲ ಕಡೆ ಅವ್ಯವಹಾರಿಕತೆ; ಸರ್ಕಾರ ಖರ್ಚು ಮಾಡಿರುವ ದುಡ್ಡು ನಿರುಪಯೋಗವಾಗಿರುವುದು. ಹಾಗು ತೋಟ ಇರುವವರು ತೋಟದ ಮಧ್ಯದಲ್ಲಿ ಬೆಳೆಯುವ ಅಲ್ಪಾವಧಿ ಬೆಳೆ, ನೀರಾ ಇಳಿಸಿ ನುಸಿ ಪೀಡೆ ನಿಯಂತ್ರಿಸುವ ಸಾಧ್ಯತೆಗೆ ಸಮ್ಮತಿ; ಎಳನೀರಿನಂತೆ ನೀರಾ ಸ್ಥಿತಿಯಲ್ಲಿಯೇ ರಕ್ಷಿಸುವ ಟೆಕ್ನಾಲಜಿಯು ಕುರಿತಂತೆ ವಿವೇಚನೆ, ಇಳಿಸಿದ ನೀರಾ ಸೇಂದಿಯಾಗುವುದಾದರೂ ಅಪ್ಪಟ ಸೇಂದಿಯಾಗಿ ಮಾರಾಟಗೊಳ್ಳದಿರುವುದು, ನೀರಾ ಇಳಿಸುವ ಪರಿಣಿತ ಜನರ ಅವಶ್ಯಕತೆ; ಈ ದಿಸೆಯಲ್ಲಿ ರೈತರ ನಿರ್ವಹಣೆಗಿಂತ ಸಹಕಾರ ಸಂಘದ ನಿರ್ವಹಣೆಯ ಸೂಕ್ತತೆ, ರೈತಾನುಕೂಲವಾದ ವಿಷಯದ ಬಗ್ಗೆ ಸರ್ಕಾರದ್ದು ತಾತ್ಸಾರದ ವರ್ತನೆ ಎಂಬ ಭಾವನೆ ಬಂದಿರುವುದು, ಅಬಕಾರಿ ಕಂಟ್ರಾಕ್ಟ್‌ದಾರರಿಗೆ ಎರಡು ವರ್ಷಗಳ ಅವಧಿಯಲ್ಲಿ ನೀರಾವನ್ನೆ ಇಳಿಸಿಕೊಡಲು ಹೇಳಬಹುದಾಗಿದ್ದುದು, ನುಸಿಪೀಡೆ ಎದುರಿಸಲು ಸರ್ಕಾರಕ್ಕೆ ಇರಬೇಕಿದ್ದ ತೆರೆದ ಮನಸ್ಸು, ಸಮಸ್ಯೆ ಸರ್ಕಾರದಿಂದ ಬಗೆ ಹರಿಯುವ ಸಾಧ್ಯತೆ ಇಲ್ಲದಿರುವುದರ ಬಗ್ಗೆ ರೈತರಿಗೆ ತಿಳಿದರೆ ಅವರು ಸ್ವಂತ ಹಾದಿಯನ್ನು ಹುಡುಕಿಕೊಳ್ಳವ ಸಂದರ್ಭ, ನೀರಾ ಬಗ್ಗೆ ರೈತರನ್ನು ಎತ್ತಿಕಟ್ಟುತ್ತಿದ್ದಾರೆ ಎಂದರೆ ಅದನ್ನು ಎದುರಿಸಬೇಕಾದ ಸರ್ಕಾರದ ಜವಾಬ್ದಾರಿ, ರೈತರಿಗೆ ತಿಳುವಳಿಕೆ ನೀಡಬೇಕಾದ ಜವಾಬ್ದಾರಿ, ರೈತ ಸಂಘದ ಪ್ರತಿನಿಧಿಗಳೊಡನೆ ನೀರಾ ಇಳಿಸುವುದರ ಅವಧಿಯ ಮಿತಿ ಕುರಿತು ಸಮಾಲೋಚನೆ, ನುಸಿಪೀಡೆಯಿಂದ ರಕ್ಷಣೆ ಕುರಿತಂತೆ ರೈತರಿಗೆ ತಿಳುವಳಿಕೆ ನೀಡಿಕೆ ಹಾಗು ವಿಚಾರ ವಿನಿಮಯವಾಗಬೇಕಿದ್ದುದು, ನುಸಿಪೀಡೆಯಿಂದ ಹಾನಿಯ ಜೊತೆಗೆ ಬೇರೆ ರೀತಿಯ ಹಾನಿಯು ರೈತರಿಗೆ ಉಂಟಾದ ಸಂದರ್ಭ; ಸರ್ಕಾರ ಸಮಸ್ಯೆಯನ್ನು

ತೆರೆದ ಮನಸ್ಸಿನಿಂದ ನೋಡಬೇಕಾದ ಅಗತ್ಯತೆ ಕುರಿತೆಲ್ಲ ವಿಷಯವನ್ನು ಮಂಡಿಸಿ ತಮ್ಮ ಮಾತನ್ನು ಮುಗಿಸಿದರು.

**ಸಚಿವ ಶ್ರೀ ಅಲ್ಲಂ ವೀರಭದ್ರಪ್ಪ** ಅವರು ನುಸಿ ರೋಗದ ಬಗ್ಗೆ ನಡೆದ ಚರ್ಚೆ ಕುರಿತು ಹೇಳುತ್ತ: ಶಾಸಕರು ನೀರಾ ಬಗ್ಗೆ ನೀಡಿದ ವಿಶೇಷ ಮಾಹಿತಿ, ಕೆಮಿಕಲ್ ಪೆಸ್ಟಿಸೈಡ್ಸ್‌ಗಳಿಂದ ಸಂಪೂರ್ಣವಾಗಿ ನುಸಿ ರೋಗ ನಿವಾರಣೆಯ ಸಾಧ್ಯತೆ ಬಗ್ಗೆ ಎದ್ದಿರುವ ಪ್ರಶ್ನೆ; ನೀರಾ ಇಳಿಸಲು ಸರ್ಕಾರದ ಅನುಮತಿ ಬಗ್ಗೆ ವಿವೇಚನೆ, ಸಿ ಎಫ್ ಟಿ ಆರ್ ಐ ನಲ್ಲಿ ಎಳನೀರನ್ನು ಎಳನೀರನ್ನಾಗಿಯೇ ಇಡುವ ಬಗ್ಗೆ ವಿಶ್ಲೇಷಣೆ ಆಗಿದೆ ವಿನಾ, ನೀರಾ ಬಗ್ಗೆ ಸಂಶೋಧನೆ ಆಗದಿರುವುದು, ನೀರಾದಲ್ಲಿ ಶೇ 96 ಭಾಗ ನೀರು, ಶೇ 3 ಭಾಗ ಫ್ರಕ್ಟೋಸ್ ಇರುವ ಹಾಗು ಆಲ್ಕೋಹಾಲ್ ಪ್ರಮಾಣ ಶೇ 1 ರಿಂದ 2ರಷ್ಟು ಇರುವುದು, ನೀರಾ ಆರೋಗ್ಯಕರ ಪೇಯವಾಗಿರುವ ಸಂದರ್ಭ ಹಾಗು ಸೇವನೆಯ ಸ್ವರೂಪ, ನುಸಿರೋಗಕ್ಕೆ ಜೈವಿಕ ಕೀಟನಾಶಕಗಳಿಂದ ಸಿಗಬಹುದಾದ ಪರಿಹಾರ, ತೋಟಗಾರಿಕೆ ಇಲಾಖೆ ಸೂಚಿಸಿದ ಔಷಧಗಳ ಉಪಯೋಗ ಮಾಡುತ್ತಿರುವಿಕೆ ಹಾಗು ಕೃಷಿ ವಿಶ್ವವಿದ್ಯಾಲಯದ ತಜ್ಞರ ಅಭಿಪ್ರಾಯಾನುಸಾರ ತಯಾರಿಸಿರುವ ಔಷಧಿ ಪಟ್ಟಿ; ಆದರೆ ರೈತರು ವಿತರಿಸಿದ ಔಷಧಿಯನ್ನು ಬಳಸದಿದ್ದುದು; ಪಲ್ಸ್ ಪೋಲಿಯೋ ವಿಧಾನದಲ್ಲಿ ಪ್ರಯತ್ನ ಪ್ರಯೋಗ ಮಾಡಿ ರೋಗ ತಡೆಗಟ್ಟುವ ಕಾರ್ಯದತ್ತ ಸರ್ಕಾರದ ಗಮನ ಹಾಗು ಉದ್ದೇಶ, ಇಲಾಖೆಗಳೂ ಸೇರಿದಂತೆ ಜಿಲ್ಲಾಪಂಚಾಯಿತಿ ತಾಲ್ಲೂಕ್ ಪಂಚಾಯಿತಿ ಚುನಾಯಿತ ಪ್ರತಿನಿಧಿಗಳ ಒಟ್ಟಭಿಪ್ರಾಯ ಪಡೆದು ಸಾಗುವ ಬಗ್ಗೆ ಈ ಕುರಿತೆಲ್ಲ ಮಾತನಾಡಿದರು. ಈ ಸಂದರ್ಭದಲ್ಲಿ **ಶ್ರೀ ಕೆ ಎಚ್. ಶ್ರೀನಿವಾಸ್** ಅವರು ಏಕಕಾಲದಲ್ಲಿ ಎಲ್ಲಾ ಮರಗಳಿಗೆ ಔಷಧ ಹೊಡೆದರೆ ರೋಗ ನಿಯಂತ್ರಿಸಬಹುದೆಂದರೂ, ಇಂದಿನ ಪರಿಸ್ಥಿತಿಯಲ್ಲಿ ಸಾಧ್ಯವಾಗದೆಂದರು. **ಶ್ರೀ ಎಂ ಎಸ್. ಸಿದ್ದರಾಜು** ಅವರು ಮೆಕ್ಸಿಕೋದಲ್ಲಿ 37 ವರ್ಷದಿಂದ ರೋಗ ನಿಯಂತ್ರಣ ಸಾಧ್ಯವಾಗಿಲ್ಲದಿರುವ ಬಗ್ಗೆ ವರದಿ ತರಿಸಿಕೊಂಡು ಇಲ್ಲಿ ಅದನ್ನು ನಿಯಂತ್ರಣ ಮಾಡುವ ಸಾಧ್ಯತೆಯ ಬಗ್ಗೆ ವಿಶ್ವಾಸ ಇದೆಯೇ ಎಂದು ಪ್ರಶ್ನಿಸಿದರು. ಶ್ರೀ ಅಲ್ಲಂ ವೀರಭದ್ರಪ್ಪ ಅವರು ಈ ರೋಗ ಕೇವಲ 2–4 ವರ್ಷಗಳಿಂದ ರಾಜ್ಯದಲ್ಲಿ ಕಂಡು ಬಂದಿದ್ದು 25–30 ಪರ್ಸೆಂಟ್ ಮಾತ್ರ ಅಂದರೆ ಸುಮಾರು 2ಕೋಟಿ ಗಿಡಗಳಿಗೆ ಈ ರೋಗ ಹರಡಿದೆ. ರೋಗ ನಿರ್ಮೂಲನೆ ಪೂರ್ಣ ಆಗುವ ಬಗ್ಗೆ ತಿಳಿಯದಿದ್ದರೂ ಪರ್ಯಾಯವು ತ್ವರಿತವಾಗಿ ರೈತರಿಗೆ ಮಾವು, ಹಲಸು ಗಿಡಗಳನ್ನು ಉಚಿತವಾಗಿ ಒದಗಿಸಲು ಸರ್ಕಾರ ಸಿದ್ಧವಿದೆ.

ಈ ಬಗೆಗೆಲ್ಲ ಮುಕ್ತ ಮನಸ್ಸಿನಿಂದ ಕಾರ್ಯ ಕೈಗೊಳ್ಳಬೇಕು ಎಂದಿರುವ ಸದಸ್ಯರ ಸಲಹೆಗನುಗುಣವಾಗಿ ತಾಂತ್ರಿಕ ಸಮಿತಿಯನ್ನು ರೂಪಿಸಿ ರೈತರನ್ನು ಸ್ಥಳೀಯರನ್ನು ಭೇಟಿ ಮಾಡಿ ಸಮಸ್ಯೆ ತಿಳಿದು ಪರಿಹಾರ ಸೂಚಿಸಿದಂತೆ ಸರ್ಕಾರ ಚಾಲುಗೊಳಿಸುತ್ತದೆ ಎಂದರು. ಶ್ರೀ ಸಿದ್ದರಾಜು ಅವರು ಕಮಿಟಿ ಮಾಡುವುದಕ್ಕಿಂತ ಸರ್ಕಾರವೇ ಪರಿಹಾರದ ಬಗ್ಗೆ ಯೋಚಿಸಬೇಕು ಎಂದರು.

**ಶ್ರೀ ಎಂ,ಸಿ ನಾಣಯ್ಯ** ಅವರು, ಮದ್ದು ಬಳಕೆಯ ಬದಲು ನೀರಾವನ್ನು ತೆಗೆದರೆ ನುಸಿಪೀಡೆ ನಾಶವಾಗುತ್ತದೆ ಎಂಬುದು ಬೆಳೆಗಾರರ ಮನಸ್ಸಿನ ಭಾವನೆ ಆಗಿದೆ. ರೈತರ ಮನಸ್ಸಿನಲ್ಲಿರುವ ಸಂಶಯವನ್ನು ನಿವಾರಿಸುವ ಪ್ರಯತ್ನ ಸರ್ಕಾರದಿಂದ ಆಗಿಲ್ಲ. ಈ ಹಿನ್ನೆಲೆಗಳಲ್ಲಿ ರೈತರು ಹೋರಾಟ ಮಾಡುತ್ತಿದ್ದಾರೆ. ಸರ್ಕಾರ ಮಾತ್ರ ಪೆಸ್ಟಿಸೈಡಿಂದ ನುಸಿ ರೋಗ ನಿವಾರಣೆ ಸಾಧ್ಯ ಎಂದು 18–20ಕೋಟಿ ಖರ್ಚು ಮಾಡಿದೆ. ಆದರೆ ರೈತರ ಮನಸ್ಸಿನಲ್ಲಿಯ ಸಂಶಯ ಎಂದರೆ ನೀರಾ ತೆಗೆಯಬೇಕು ಎನ್ನುವುದಾಗಿದೆ. ನೀರಾ ಆದ ಮೇಲೆ ಸೇಂದಿಯಾಗಿ ಕ್ಲೋರೋಹೈಡ್ರೇಟ್ ಆಗಿ ಕುಡಿದಾಗ ಕಿಕ್ ಕೊಡುತ್ತದೆ. ಆದರೆ ಈ ವಿಚಾರವನ್ನು ದಿಕ್ಕು ತಪ್ಪಿಸಿ ಎಕ್ಸಪ್ಲಾಯಿಟ್ ಮಾಡುವಂಥ ವರ್ಗವಿದೆ. ನೀರಾ ತೆಗೆಯಲು ಅವಕಾಶ ಸಿಕ್ಕಿದಾಗ ಕ್ಲೋರೋಹೈಡ್ರೇಟ್ ಮಾಡಿ ಸ್ಯಾಚೆಟ್ಸ್‌ನಲ್ಲಿ ಮಾರಾಟ ಮಾಡುವ ಕಂಟ್ರಾಕ್ಟ್‌ದಾರರು ಇಲ್ಲಿಗೆ ಬರುತ್ತಾರೆ. ರೈತರು ಹಾನಿಗೆ ಒಳಗಾಗುತ್ತಾರೆ. ರೈತನಿಗಿರುವ 100 ಮರಗಳಲ್ಲಿ ತೆಗೆದರೆ ಒಂದು ಮರಕ್ಕೆ ತಿಂಗಳಿಗೆ 100–150 ರೂ ಸಿಗಬಹುದು. ಅದರಿಂದ ಆರ್ಥಿಕ ಸುಧಾರಣೆ ಆಗಬಹುದು ಎಂದು ರೈತರ ನಂಬಿಕೆ. ನೀರಾ ಆದರೋ ಒಂದು ಮೃದು ಪಾನೀಯವೇ ಸರಿ. ತೆಂಗಿನ ಮರದಲ್ಲಿ ನೀರಾ ತೆಗೆದು ಸೇಂದಿ ಮಾಡಿ ವ್ಯಾಪಾರ ಮಾಡಿರುವುದೂ ಉಂಟು. ಒಂದು ಕಡೆ ಇದರಿಂದ ರೈತರ ಆರ್ಥಿಕ ಪರಿಸ್ಥಿತಿ ಸುಧಾರಿಸಿದರೂ, ಜನರನ್ನು ಹಾಳು ಮಾಡುವಂಥ ಪರಿಸ್ಥಿತಿ ನಿರ್ಮಾಣವಾಗಬಾರದು. ರಾಮಕೃಷ್ಣ ಹೆಗಡೆ ಅವರ ಕಾಲದಲ್ಲಿ ಸೇಂದಿಯನ್ನು ನಿಷೇಧಿಸಲು ತೀರ್ಮಾನಮಾಡಿದಾಗ, ತೆಂಗಿನ ಮರಗಳನ್ನು ವರ್ಷಕ್ಕೆ ಗುತ್ತಿಗೆ ಕೊಟ್ಟು ರೈತರಿಗೆ ಲಾಭಕೊಟ್ಟು ಸೇಂದಿ ತೆಗೆಯುತ್ತಿದ್ದರು. ಹಾಗೆ ಅದರಲ್ಲಿ ಬಂದ 50 ಕೋಟಿ ಆದಾಯವೆಂದರೆ– ಸೇಂದಿಯಿಂದ ಉತ್ಪಾದನೆ 5 ಕೋಟಿ ರೂ. ಬಾಕಿ 45 ಕೋಟಿ ಆದಾಯ ಕ್ಲೋರೋ ಹೈಡ್ರೇಟ್‌ನಿಂದ ಬಂದದ್ದು. ನೀರಾ ತೆಗೆದರೆ ನುಸಿಪೀಡೆ ಹೋಗುತ್ತದೆ, ಆರ್ಥಿಕ ಲಾಭ ಆಗುತ್ತದೆ ಎನ್ನುವ

ರೈತರು ಇವತ್ತು ಎಲ್ಲಾ ಕಡೆ ಚಳುವಳಿಗೆ ತಯಾರಿದ್ದಾರೆ. ರೈತಸಂಘದವರು ಈ ವಿಚಾರವನ್ನು ಕೈಗೆತ್ತಿಕೊಂಡಿದ್ದಾರೆ. ಸಿಎಫ್‌ಟಿಆರ್‌ಐ ಫಲಿತಾಂಶವನ್ನು ಮಾತ್ರ ಗಮನಿಸಿ ಹೇಳಿದೆ ರೈತರ ಮನಸ್ಸಿನ ಚಿಂತನೆಯನ್ನು ಗಮನಿಸಿ ಅವರ ಮನಸ್ಸಿಗೆ ಸಮಾಧಾನವಾಗುವ ಪರಿಸ್ಥಿತಿ ನಿರ್ಮಿಸಬೇಕು. ನೀರಾವನ್ನು ವೈಜ್ಞಾನಿಕವಾದ ಮೃದು ಪಾನೀಯವಾಗಿಸುವ ತಾಂತ್ರಿಕ ಜ್ಞಾನ ರೂಪಿಸಿದರೆ, ಪೆಪ್ಸಿ, ಕೋಲಾಗಳಿಗೆ ಅದು ಸವಾಲು ಹಾಕೀತು. ಈ ದೊಡ್ಡ ವೈಜ್ಞಾನಿಕ ಯೋಜನೆ ಬಗ್ಗೆ ಸರ್ಕಾರ ಚಿಂತಿಸಬೇಕು. ತೆಂಗಿನ ಮರ ಬೆಳೆಸಲು ಸಾಲ ಮಾಡಿದ ರೈತರಿಗೆ ಬಡ್ಡಿ ಕಟ್ಟಲೂ ಸಾಧ್ಯವಿಲ್ಲವಾಗಿದೆ. ಜನಪ್ರತಿನಿಧಿಗಳು ರೈತರ ಬಳಿ ಹೋಗಿ ಪರಿಸ್ಥಿತಿ ನಿಭಾಯಿಸುವ ಬಗ್ಗೆ ಚರ್ಚೆಮಾಡಲಿ. ಅಥವಾ ತೆಂಗು ಬೆಳೆವ ಪ್ರದೇಶದ ಸದಸ್ಯರ ಸಮಿತಿ ಮಾಡಿ ವಿಚಾರ ಸಂಗ್ರಹ ಮಾಡಿದರೆ. ಸರ್ಕಾರದ ಪ್ರಾಮಾಣಿಕ ಪ್ರಯತ್ನದ ಬಗ್ಗೆ ಮನನವಾಗಬಲ್ಲದು. ಇಲ್ಲವಾದರೆ ಈ ನೀರಾ ಚಳುವಳಿ ಬೇರೆ ದಾರಿ ಹಿಡಿಯುವ ಸಂಭವ ಇದೆ. ಮುಂದೆ ಅದು ಕಾನೂನು-ಶಿಸ್ತು ನಿರ್ವಹಣಾ ವ್ಯವಸ್ಥೆಗೆ ಸಮಸ್ಯೆಯಾಗಬಹುದು. ಅಂತೇ ಸದನ ಸಮಿತಿ ರೂಪಿಸಿ. ರೈತರನ್ನು ಭೇಟಿ ಮಾಡಿ ಅವರ ಆತಂಕ ಪರಿಹಾರ ಮಾಡಲು ಪ್ರಯತ್ನ ಮಾಡಬೇಕು. ಎಂದೆಲ್ಲ ತಮ್ಮ ಅಭಿಪ್ರಾಯವಿಟ್ಟು ಸಲಹೆಗಳಲ್ಲಿ ತಿಳಿಸಿದರು. ಆಗ **ಶ್ರೀ ಎಂ.ಎಸ್.ಸಿದ್ಧರಾಜು** ಅವರು, ಸಮಿತಿಯು ಹಳ್ಳಿಗೆ ಹೋದರೆ ಘರ್ಷಣೆಯಾದೀತು. ಬದಲು ಮಹಾರಾಷ್ಟ್ರ, ಕೇರಳದಲ್ಲಿ ನೀರಾಕ್ಕೆ ಕಂಡುಹಿಡಿದುಕೊಂಡಿರುವ ಪರಿಹಾರೋಪಾಯವನ್ನು ತಿಳಿದು ಬರಲಿ ಎಂದರು. ಶ್ರೀ ಎಂ.ಸಿ.ನಾಣಯ್ಯನವರು, ಹಾಗೆ ತಿಳಿದು ಬರಲು ಸಮಿತಿ, ಪ್ರವಾಸವನ್ನು ಮಾಡಲಿ ಎಂದರು. ಇದಕ್ಕೆ ಪ್ರತಿಕ್ರಿಯಿಸುತ್ತ ಸಚಿವ ಶ್ರೀ ಅಲ್ಲಂ ವೀರಭದ್ರಪ್ಪನವರು ಈ ಸಲಹೆಗಳಂತೆ ವಿಜ್ಞಾನಿಗಳು, ಹಾಗೂ ರೈತರು, ತಾಂತ್ರಿಕರು, ಸಂಶೋಧಕರನ್ನು ಒಳಗೊಂಡ ಸಮಿತಿ ಮಾಡಿ ಈ ಕಾರ್ಯವನ್ನು ಕೈಗೆತ್ತಿಕೊಳ್ಳುವ ಬಗ್ಗೆ ಹೇಳಿದರು. **ಡಾ.ಎಂ.ಪಿ.ನಾಡಗೌಡರು** ಕೆಳಮನೆ ಮೇಲ್ಮನೆ ಸದಸ್ಯರಿರುವಂಥ ಜಂಟಿ ಸದನ ಸಮಿತಿ ಮಾಡುವ ಬಗ್ಗೆ ಸಲಹೆ ಮಾಡಿದರು. ಈ ಬಗ್ಗೆ ತೀರ್ಮಾನ ಮೊದಲು ತೆಗೆದುಕೊಳ್ಳಬೇಕು ಎಂದಾಗ, ಸಭಾಪತಿಗಳು ಈ ಕುರಿತು ನಿರ್ಣಯ ಕೈಗೊಳ್ಳುವ ಬಗ್ಗೆ ಹೇಳಿದರು.

*ಇಂದಿನ ಚರ್ಚೆಯಲ್ಲಿ ಸರ್ವಶ್ರೀ ಸಿ.ಆರ್.ಸಗೀರ್ ಅಹಮದ್, ಬಸವರಾಜ ಹೊರಟ್ಟಿ ಬಸವರಾಜ್ ಬೊಮ್ಮಾಯಿ, ಹೆಚ್.ವಿಶ್ವನಾಥ್, ಜಿ.ಪರಮೇಶ್ವರ್ ಕೃಷಿ ಸಚಿವ ಟಿ.ಬಿ.ಜಯಚಂದ್ರ, ಜಿ.ಮಧುಸೂದನ್, ಟಿ.ಜಾನ್, ಡಿ.ಬಿ.ಚಂದ್ರೇಗೌಡ. ಅವರುಗಳೂ ಪಾಲ್ಗೊಂಡಿದ್ದರು.*

## ವಿಷಯ 3: ತೆಂಗಿನ ಬೆಳೆಗೆ ನುಸಿರೋಗ; ಮುಂದುವರಿದ ಚರ್ಚೆ

26.7.2001 ರ ವಿಧಾನಸಭಾಧಿವೇಶನದಲ್ಲಿ[4] **ಶ್ರೀ ಡಿ.ವಿ.ಸದಾನಂದಗೌಡ** ಅವರು ವಿಷಯ ಪ್ರಸ್ತಾಪ ಮಾಡಿ : ರಾಜ್ಯದಲ್ಲಿ ಒಂದು ಕಡೆ ಬರ, ಇನ್ನೊಂದು ಕಡೆ ಬೆಳೆದ ಬೆಳೆಗಳ ಬೆಲೆಕುಸಿತ, ಮತ್ತೊಂದು ಕಡೆ ನುಸಿರೋಗದ ಬಾಧೆ, ಹೀಗಾಗಿ ರಾಜ್ಯದ ರೈತರ ಕಂಗಾಲು ಸ್ಥಿತಿ; ರಾಜ್ಯದ 16 ಜಿಲ್ಲೆಗಳಲ್ಲಿ ತೆಂಗು ಪ್ರಮುಖ ಬೆಳೆಯಾಗಿದ್ದು ಅದಕ್ಕೆ ತಗುಲಿರುವ ನುಸಿರೋಗಕ್ಕೆ ಸರ್ಕಾರ ಸಿಂಪರಣೆಮಾಡಲು 2 ಕೋಟಿ ರೂ. ಖರ್ಚು ಮಾಡಿರುವುದಾದರೂ, ಫಲ ದೊರೆಯದಿರುವುದು; ಅದ್ದರಿಂದ ರೈತ ಮಿತ್ರರಾಗಿರುವ ಹಲವಾರು ಕೀಟಗಳ ನಾಶ; ರೋಗ ಅಡಿಕೆ ಮರಗಳಿಗೂ ಹಬ್ಬುತ್ತಿರುವುದು; ಮರದಿಂದ(ತೆಂಗಿನ) ಹೊಂಬಾಳೆ ಬರುವ ಮುನ್ನಿನ ಅದನ್ನು ಕತ್ತರಿಸಿ ನೀರಾ ಇಳಿಸಿ ನುಸಿಪೀಡೆ ಹೋಗಿಸಲು ಸರ್ಕಾರ ನೀಡಬೇಕಾದ ಅನುಮತಿ; ಸರ್ಕಾರ ಈ ಬಗ್ಗೆ ನಿರಾಸಕ್ತಿ ತಳೆದಿರುವುದು; ಈ ಸಂಬಂಧ ಚನ್ನರಾಯಪಟ್ಟಣ, ಚಾಮರಾಜನಗರ, ಹಾಸನ, ಅರಸೀಕೆರೆಯಲ್ಲಿ ಗಲಾಟೆ ಆಗಿರುವುದು; ನೀರಾ ಇಳಿಸುವಲ್ಲಿ ನುಸಿರೋಗಕ್ಕೆ ತಡೆ, ಎಕರೆಗೆ 20 ಕ್ವಿಂಟಾಲ್ ಬೆಲ್ಲ ಒದಗುವಿಕೆ, ಈ ಕುರಿತ ಸಾಧಕ ಬಾಧಕಗಳ ಬಗ್ಗೆ ಚರ್ಚೆಗೆ ಅನುಮತಿ ಕೊಡಬೇಕು ಎಂದು ನುಡಿದರು. **ಶ್ರೀ ಹೆಚ್.ಎಸ್.ಮಹದೇವ ಪ್ರಸಾದ್** ಅವರೂ ಚರ್ಚೆಗಾಗಿ ಮನವಿ ಸಲ್ಲಿಸಿರುವ ಬಗ್ಗೆ, 8 ಕೋಟಿ ತೆಂಗಿನ ಮರಗಳ ಪೈಕಿ ಸುಮಾರು 3 ಕೋಟಿ ಮರಗಳಿಗೆ ನುಸಿರೋಗ ತಗುಲಿರುವಲ್ಲಿ ರೈತರು ಕಂಗಾಲಾಗಿರುವ ಬಗ್ಗೆ ಹೇಳಿದರು. **ಶ್ರೀ ಎ.ಎಸ್.ಪಾಟೀಲ್** ಅವರು ರೈತರ ಸಮಸ್ಯೆ ಚರ್ಚೆಗೆ ಬಂದಾಗ ಮಾತ್ರ ನಿಯಮಾವಳಿಯನ್ನು ಹೇಳುವುದೇಕೆ? ಎಂದು ಪ್ರಶ್ನಿಸಿದರು. **ಶ್ರೀ ಹೆಚ್.ಎಸ್.ಮಹದೇವ ಪ್ರಸಾದ್** ಅವರು; ನುಸಿರೋಗದ ವಿಷಯದಲ್ಲಿ ತಡೆಗಟ್ಟಲು ಸರ್ಕಾರ ವಿಫಲವಾಗಿರುವಲ್ಲಿ ಪರ್ಯಾಯ ಮಾರ್ಗವಾಗಿ ನೀರಾ ಇಳಿಸಲು ಸಮ್ಮತಿ ಬೇಕೆಂದು ಕೋರಿಕೆ ಇಟ್ಟಿದ್ದೇವೆ, ವಿನಾ ರೈತರಿಗೆ ಪರಿಹಾರ ಕೊಡಿ ಎಂದಿಲ್ಲ. ಅನೇಕ ಕಡೆ ನೀರಾ ಇಳಿಕೆ ಕಾರ್ಯವನ್ನು ರೈತರೇ ಪ್ರಾರಂಭಿಸಿದ್ದಾರೆ; ಅದನ್ನು ತಡೆಯಲು ಅಬಕಾರಿ ಇಲಾಖೆಯವರು ಧಾಳಿ ಮಾಡಹೊರಟಾಗ ರೈತರಿಂದ ಪ್ರತಿಭಟನೆ ಎದುರಾಗಿದೆ; ನೀರಾ ಇಳಿಸುವವರ ಚಳುವಳಿ ಬಗ್ಗೆ ದಿನವೂ ಪತ್ರಿಕೆಗಳಲ್ಲಿ ವರದಿ ಹಾಗು ಚಿತ್ರಗಳು ಬರುತ್ತಿವೆ. ಅನೇಕ ಕಡೆ ರಸ್ತೆ ತಡೆ ಚಳುವಳಿಗಳು, ಜಿಲ್ಲಾಧಿಕಾರಿ ಕಛೇರಿ ಮುಂದೆ ರೈತ ಚಳುವಳಿ

4. ವಿಧಾನಸಭೆಯ ನಡವಳಿಕೆಗಳು, ಸಂಪುಟ 6, ಭಾಗ 11, 26.7.2001 ಪು.1203–1211

ನಡೆಯುತ್ತಿದ್ದರೂ ಸರ್ಕಾರ ಮೌನವಿರುವ ಕಾರಣ ಚರ್ಚೆಗೆ ಅನುಮತಿಬೇಕು ಎಂದು ಕೇಳಿಕೊಂಡರು. **ಶ್ರೀಪಿ.ಜಿ.ಆರ್.ಸಿಂಧ್ಯಾ** ಅವರೂ ಇದಕ್ಕೆ ಬೆಂಬಲವಿತ್ತರು **ಶ್ರೀ ಸಿ.ಗುರುಸ್ವಾಮಿ** ಅವರು ಕಳೆದ ಎರಡು ವರ್ಷಗಳಿಂದ ತೆಂಗಿನ ರೈತರು ಪಡುತ್ತಿರುವ ಕಷ್ಟ, ಚಾಮರಾಜನಗರದಲ್ಲಿ ನೀರಾ ಇಳಿಸುವ ವಿಚಾರವಾಗಿ ಅಧಿಕಾರಿಗಳು ಗುಂಡಾಗಳನ್ನು ಕರೆದುಕೊಂಡು ಬಂದಾಗ ಆದ ಗಲಾಟೆ, ನುಸಿರೋಗ ಎಲ್ಲ ಜಿಲ್ಲೆಗಳಲ್ಲಿ ಬರ್ನಿಂಗ್ ಪ್ರಾಬ್ಲಮ್ ಆಗಿ ರೈತರಿಗೆ ದೊಡ್ಡ ಸಮಸ್ಯೆ ಉಂಟಾಗಿರುವುದು, ಅಧಿಕಾರಿ ವರ್ಗ ಅಬಕಾರಿ ಲಾಬಿಯೊಡನೆ ಶಾಮೀಲಾಗಿ ರೈತರ ಕಷ್ಟ ಕೇಳುವವರಿಲ್ಲದೆ ಅವರು ಕಣ್ಣೀರಿಡುತ್ತಿರುವುದು, ಈ ಹಿನ್ನೆಲೆಗಳನ್ನೆಲ್ಲ ಹೇಳಿ ಚರ್ಚೆಗೆ ಆದೇಶ ಬೇಕೆಂದು ಸಭಾಧ್ಯಕ್ಷರಲ್ಲಿ ಪ್ರಾರ್ಥಿಸಿದರು.

**ವಿಷಯ 4: ನೀರಾ ಇಳಿಕೆ ಮತ್ತು ನುಸಿರೋಗ : ಮುಂದುವರಿದ ಚರ್ಚೆ**

ನಿಯಮ 69 ರ ಮೇರೆಗೆ 3.8.2001 ರ ವಿಧಾನ ಸಭೆಯ 3ನೇ ಅಧಿವೇಶನದ[5] ಚರ್ಚೆಯಲ್ಲಿ ಪಾಲ್ಗೊಂಡ ಶ್ರೀ **ಕೆ.ಬಿ.ಮಲ್ಲಿಕಾರ್ಜುನ** ಅವರು : ಸರ್ಕಾರ ನೀರಾ ವಿಚಾರವನ್ನು ನಿರಾಸೆಗೊಳಿಸಿರುವ ಕೆಲಸ ಮಾಡುತ್ತಿದೆ. ನೀರಾ ಇಳಿಸಲು ಸದ್ಯಕ್ಕೆ ಅನುಮತಿಸುವುದಿಲ್ಲ ಎಂಬ ಸಂಪುಟದ ತೀರ್ಮಾನವನ್ನು ಪತ್ರಿಕೆಯಲ್ಲಿ ಪ್ರಕಟಿಸಿದೆ. ಇದರಿಂದ ಸದನದ ಗೌರವ ಕಡಿಮೆಯಾದಂತಾಗುತ್ತದೆ. ಕಳೆದ 10 ವರ್ಷಗಳಿಂದ ತೆಂಗಿನ ಮರಗಳಿಗೆ ತಗುಲಿರುವ ದೊಡ್ಡರೋಗ, ಕಪ್ಪು ತಲೆ ಹುಳದ ರೋಗವಿದೆ; ಜೊತೆಗೆ ನುಸಿಪೀಡೆ. ತೆಂಗಿನ ಮರದಿಂದ ನೀರಾ ಇಳಿಸಲು ರೈತರಿಗೆ ಕಷ್ಟವೂ ಇದೆ. ತೆಂಗಿನ ಎಲ್ಲಾ ಗರಿಗಳನ್ನು ಕಡಿದು, ಎಲ್ಲಾ ಕಾಯಿಗಳನ್ನು ಬೀಳಿಸಿ ಹೊಂಬಾಳೆ ಕುಯ್ದು ಮಡಕೆಯನ್ನು ಕಟ್ಟಬೇಕು. ಆದರೂ ನೀರಾ ಇಳಿಸುವ ಅನಿವಾರ್ಯತೆಗೆ ಕಾರಣ ರೈತರ ಆರ್ಥಿಕ ಪರಿಸ್ಥಿತಿ. ವರ್ಷಕ್ಕೆ ಸುಮಾರು 312 ಕೋಟಿ ತೆಂಗಿನ ಕಾಯಿಗಳನ್ನು 7 ಕೋಟಿ ಮರಗಳಿಂದ ಬೆಳೆಯುತ್ತಿದ್ದುದು, ನುಸಿರೋಗ, ಕಪ್ಪುತಲೆ ಹುಳದ ರೋಗದಿಂದಾಗಿ ಹಾನಿಗೊಂಡಿವೆ. ಕಾಯಿ ಬೆಲೆ ಕುಸಿತವಾಗಿದೆ. ರೋಗ ಹಿಡಿದ ಮರಗಳಿಗೆ ಡೈಕ್ರೋಟೋಪಾಸ್, ನೊವಾಕ್ರಾನ್ ಔಷಧಿಯನ್ನು ಬೇರಿಗೆ ಕೊಡುವಲ್ಲಿ ಎಳನೀರು ವಿಷವಾಗುತ್ತಿದೆ ಎಂದು 3 ಕೋಟಿ ಎಳನೀರು ವ್ಯಾಪಾರ ನಿಂತು ಹೋಗಿದೆ. ಇನ್ನು ಡಬ್ಲುಟಿಓ ಆಸರೆಯಲ್ಲಿ ತೆಂಗಿನ ಕಾಯನ್ನು 2.74 ಲಕ್ಷ ಮೆಟ್ರಿಕ್ ಟನ್ ನಷ್ಟು ಆಮದುಮಾಡಿಕೊಳ್ಳಲು ಅನುಮತಿ ಇದೆ. ಬದಲು 35 ರಿಂದ 40 ಲಕ್ಷ ಮೆಟ್ರಿಕ್‌ಟನ್

5. ವಿಧಾನಸಭಾ ನಡವಳಿಕೆಗಳು., ಸಂಪುಟ 8 (1–2), ಭಾಗ. 1, (3.8.2001) ಪು. 231–315

ಆಮದು ಮಾಡಿಕೊಂಡರೆ ಬೆಲೆ ಕುಸಿಯುವುದಿಲ್ಲವೆ? ಡ್ರೈನಟ್ಸ್, ಕೊಬ್ಬರಿ, ತೆಂಗಿನ ಎಣ್ಣೆ, ಆಯಿಲ್ ಕೇಕ್, ಕೊಬ್ಬರಿ ತುರಿ ಇತ್ಯಾದಿ ಉತ್ಪನ್ನಗಳನ್ನು ಆಮದು ಮಾಡಿಕೊಳ್ಳುತ್ತಿದ್ದೇವೆ. ನಮ್ಮ ರಫ್ತು ಕಡಿಮೆಯಾಗುತ್ತಿದೆ. ಡಬ್ಲುಟಿಓ ಒಪ್ಪಂದದ ಪ್ರಕಾರ ಆಮದು ಪದಾರ್ಥದ ಮೇಲೆ 300 ಪರ್ಸೆಂಟ್ ತೆರಿಗೆ ಹಾಕಲು ಅವಕಾಶವಿದ್ದರೂ ಇಂದು 55–85 ಪರ್ಸೆಂಟ್ ಮಾತ್ರ ತೆರಿಗೆ ಹಾಕಿ ಆಮದು ಮಾಡಿಕೊಳ್ಳುವ ಪ್ರಯತ್ನ ಹಾಗೂ ಡ್ರೈ–ಫ್ರೂಟ್ ಹೆಸರಿನಲ್ಲಿ ಮಲೇಷಿಯಾದಿಂದ ತೆಂಗಿನಕಾಯಿ ಬಂದು, ತೆರಿಗೆ ವಿನಾಯಿತಿಯೂ ಆಗುತ್ತಿದೆ. ಮತ್ತೆ ಹತ್ತು ಪರ್ಸೆಂಟ್ ಆಮದು ಡ್ಯೂಟಿಯನ್ನು ತೆಂಗಿನ ಉತ್ಪನ್ನಗಳ ಮೇಲೆ ಕಡಿಮೆ ಮಾಡುವ ಪ್ರಧಾನ ಮಂತ್ರಿಗಳ ಹೇಳಿಕೆ ರೈತರಲ್ಲಿ ತಲ್ಲಣ ಹುಟ್ಟಿಸಿದೆ. 1996–97 ರಲ್ಲಿ ಎಕರೆಗೆ ನಲವತ್ತು ತೆಂಗಿನ ಗಿಡಗಳಿಂದ ನೂರು ಕಾಯಿಗಳಂತೆ ನಾಲ್ಕು ಸಾವಿರ ಕಾಯಿಗಳಿಗೆ ತಲಾ 5 ರೂನಂತೆ 20 ಸಾವಿರ ರೂ ಆದಾಯವಿದ್ದು, 1998–99ರಲ್ಲಿ ಖರ್ಚು ಕಳೆದು 14 ಸಾವಿರ ಉಳಿಯುತ್ತಿತ್ತು. ಈಗ ನುಸಿರೋಗ, ಇತರೆ ರೋಗಗಳಿಂದಾಗಿ ತಲಾ ಗಿಡಕ್ಕೆ 25 ಕಾಯಿಗಳು ಮಾತ್ರ ಬಂದು 2 1/2 ಸಾವಿರ ರೂ ಆದಾಯ ಬಂದರೆ ಖರ್ಚು 8 ಸಾವಿರ ಆಗುತ್ತಿದೆ. ಕೈಯಿಂದ ಖರ್ಚು ಮಾಡಿ ಗಿಡ ಉಳಿಸಿಕೊಳ್ಳಬೇಕಿದೆ. ರಾಷ್ಟ್ರೀಯ ಕೃಷಿ ಮಾರಾಟ ಮಂಡಳಿಯಿಂದ ಕಡೂರಿನಲ್ಲಿ ಕೊಬ್ಬರಿ ಕೊಳ್ಳಲು ಹೇಳಿದರೂ ಆ ಕೆಲಸ ಆಗಲಿಲ್ಲ. ತೆಂಗಿನಿಂದ ನಾರು, ಮಟ್ಟೆ, ವ್ಯಾಪಾರವಾಗುತ್ತಿದ್ದುದು, ನುಸಿರೋಗದಿಂದಾಗಿ ಅದೆಲ್ಲ ಬಾರದೆ, ತೆಂಗು ಬೆಳೆಗಾರರು ಹೀನಸ್ಥಿತಿಯಲ್ಲಿದ್ದಾರೆ.

*ನೀರಾ ಇಳಿಸಲು ಅನುಮತಿ ಕೇಳುವ ಕಾರಣವೆಂದರೆ ಗರಿ ಕಡಿದರೆ ಕಪ್ಪುತಲೆ ಹುಳು ನಾಶವಾಗುತ್ತದೆ; ನುಸಿರೋಗ ಕಾಯಿಗೆ ಬರುವಕಾರಣ ನೀರಾ ಕಟ್ಟುವ ಸಂದರ್ಭದಲ್ಲಿ ಕಾಯಿಗಳನ್ನು ಕಿತ್ತುಹಾಕಿ ಹೊಂಬಾಳೆಯಲ್ಲಿ ನೀರಾ ಇಳಿಸುತ್ತಾರೆ. ಹೀಗೆ ರೋಗವು ಪೂರ್ಣ ಮಟ್ಟದಲ್ಲಿ ಹತೋಟಿಗೆ ಬರುತ್ತದೆ. ನೀರಾ ಕಟ್ಟಿ 21 ದಿವಸಗಳ ನಂತರ ನೀರಾ ಬರಲು ಆರಂಭವಾಗುತ್ತದೆ ಎಂಬ ಮಾಹಿತಿ ಇದೆ. ವರ್ಷದಲ್ಲಿ 180 ದಿವಸಗಳ ತನಕ ನೀರಾ ಬರುತ್ತದೆ. ಒಂದು ಮರಕ್ಕೆ ಎಲ್ಲಾ ಖರ್ಚು ಕಳೆದು 10ರೂ.ನಂತೆ, ಮರದಲ್ಲಿ ಸುಮಾರು 2 ಲೀಟರ್ ನೀರಾ ಬರುವಲ್ಲಿ 20ರೂ.ನಲ್ಲಿ ಒದಗುತ್ತದೆ. ಕನಿಷ್ಠ 5ರೂ. ಸಿಕ್ಕಿದರೂ ಎಕರೆಗೆ 36 ಸಾವಿರರೂ. ಉಳಿಸಬಹುದು. ಆರ್ಥಿಕವಾಗಿ ಇದು ರೈತರಿಗೆ ಅನುಕೂಲ. ಬೆಳಗ್ಗೆ 6 ಗಂಟೆ ಒಳಗೆ ನೀರಾ ಆಗಿದ್ದು ಆನಂತರ ಹೆಂಡವಾಗುವುದನ್ನು ತಪ್ಪಿಸಿ*

*ನೀರಾ ಆಗಿಯೇ ಉಳಿಯುವಂಥ ಸಂಶೋಧನೆ ಅಗತ್ಯವಾಗಿದೆ. ಆದರೆ ಅದಕ್ಕೆ ಕ್ಲೋರೋಹೈಡ್ರೇಟ್ ಬಳಸಿ ಕಲಬೆರಕೆ ಮಾಡಲಾಗುತ್ತಿದೆ. ಯಾರು ಆರ್ಥಿಕವಾಗಿ ನುಸಿರೋಗದಿಂದಾಗಿ ಸಂಕಷ್ಟಕ್ಕೀಡಾಗಿದ್ದರೆ ಅಂಥವರು ಮಾತ್ರ ನೀರಾ ಇಳಿಸಲು ಪ್ರಯತ್ನ ಮಾಡುತ್ತಾರೆ. ಈ ಹೊತ್ತು ಯಾವ ರೈತ ಕಾನೂನಿಗೆ ಹೆದರಿಕೊಂಡಿದ್ದಾರೆ ಅವನು ನೀರಾ ಇಳಿಸುವ ಕೆಲಸ ಮಾಡುತ್ತಿಲ್ಲ. ಸರ್ಕಾರದ ಅನುಮತಿಗಾಗಿ ಕಾಯುತ್ತಿದ್ದಾನೆ. ಕಾನೂನನ್ನು ಕೈಗೆತ್ತಿಕೊಂಡಿರುವವರು ಮಾತ್ರ ನೀರಾ ಇಳಿಸಿ ಮಾರಾಟ ಮಾಡಿ ಜೀವನ ನಡೆಸುತ್ತಿದ್ದಾರೆ. ಈ ಮಧ್ಯೆ ಪೋಲಿಸ್ ಮತ್ತು ಅಬಕಾರಿ ಇಲಾಖೆಯವರ ಲಾಬಿ ಹೆಚ್ಚಾಗಿದೆ. ಅಬ್ಕಾರಿ ಗುತ್ತಿಗೆದಾರರು ಈ ಇಲಾಖೆಯ ಸಂಪರ್ಕವಿಟ್ಟುಕೊಂಡು, ರೈತರ ನೀರಾ ಇಳಿಸುವ ಮಡಿಕೆ ಒಡೆದು ಹಾಕುವುದು, ರೈತರ ಮೇಲೆ ದೌರ್ಜನ್ಯ ನಡೆಸುವುದು ಮಾಡುತ್ತಾರೆ. ನೀರಾ ಇಳಿಸುವಿಕೆಗೆ ತೆರಿಗೆ ಹಾಕಿ ಸಹಮತಿಸಿದರೆ, ರೈತರು ಅದಕ್ಕೂ ಸಿದ್ಧವಿದ್ದಾರೆ. ನೀರಾದಿಂದ ಮಾಡಿದಂಥ ಸೇಂದಿಯಿಂದ ಆರೋಗ್ಯಕ್ಕೆ ಹಾನಿ ಏನೂ ಇಲ್ಲ ಎಂದೂ ಗೊತ್ತಾಗಿದೆ, ಎಂದೆಲ್ಲ ಹೇಳಿದಾಗ ಶ್ರೀ ಬಿ.ಆರ್.ನೀಲಕಂಠಪ್ಪ ಅವರು ನೀರಾ ಇಳಿಸುವುದರಿಂದ ಆಗುವ ಪರಿಣಾಮಗಳ ಬಗ್ಗೆ ನಾನೂ ಹೇಳಲಿಚ್ಛಿಸುವೆ, ಎಂದರು, ಆಗ ಶ್ರೀ ಮಲ್ಲಿಕಾರ್ಜುನ್ ಅವರು ಮಾತು ಮುಂದುವರಿಸಿ, ಆರ್ಥಿಕ ಒತ್ತಡ ತಡೆಯಲಾಗದೆ ತೆಂಗು ಬೆಳೆಗಾರರೂ ದಂಗೆ ಏಳುವ ಪರಿಸ್ಥಿತಿ ತಲುಪಿದ್ದಾರೆ. ನುಸಿರೋಗ, ಕಪ್ಪುತಲೆ ಹುಳವನ್ನು ಹತೋಟಿಗೆ ತರಲಾಗದ ಹಾಗೂ ಕಳೆದ 10 ವರ್ಷಗಳಿಂದ ತೆಂಗಿನ ಮರಕ್ಕೆ ಬಿದ್ದಿರುವ ಈ ರೋಗ ನಿವಾರಣೆ ಆಗದ ಪರಿಸ್ಥಿತಿ ಉಂಟಾಗಿದೆ. ತೆಂಗಿನಕಾಯಿಯ ಬೆಲೆ 9 ರೂನಿಂದ ಎರಡುವರೆ ರೂ.ಗೆ ಕುಸಿದಿದೆ. ಇಂಥ ಹೀನ ಪರಿಸ್ಥಿತಿಯಲ್ಲಿ ರೈತರಿಗೆ ಆತ್ಮಹತ್ಯೆಯ ಮಾಡಿಕೊಳ್ಳುವ ಅಥವಾ ದಂಗೆ ಏಳುವ ಪರಿಸ್ಥಿತಿ ಒದಗಿದೆ. ಈ ಹಿನ್ನೆಲೆಗಳಲ್ಲಿ ರೈತರಿಗೆ ನೀರಾ ಇಳಿಸಲು ಅನುಮತಿ ಕೊಡಬೇಕೆಂದು ಹೇಳಿ ತಮ್ಮ ಮಾತನ್ನು ಮುಗಿಸಿದರು.*

**ಶ್ರೀ ಸಿ.ಗುರುಸ್ವಾಮಿ ಅವರು :** ರಾಜ್ಯದ 16 ಜಿಲ್ಲೆಗಳ ತೆಂಗು ಬೆಳೆಗಾರರ ಸಂಕಷ್ಟ; ಅನುಮತಿ; ಈ ಬಗ್ಗೆ ರೈತರು ಎಲ್ಲೆಡೆ ನಡೆಸುತ್ತಿರುವ ಪ್ರತಿಭಟನೆ; ನೀರಾ ಇಳಿಸುವೆಡೆ ಅಬ್ಕಾರಿ ಮತ್ತು ಪೋಲೀಸರು, ಅಬ್ಕಾರಿ ಗುತ್ತಿಗೆದಾರರೊಡಗೂಡಿ ಹೋಗಿ ಮಾಡುತ್ತಿರುವ ದಬ್ಬಾಳಿಕೆ ಹಾಗೂ ಹಿಂಸೆ, ಮಡಿಕೆ ಒಡೆದು, ಹೊಂಬಾಳೆ ಕಡಿದು ಮಾಡಿರುವ ನಷ್ಟ; ನೀರಾ ಇಳಿಕೆಗೆ ಸರ್ಕಾರ ಅನುಮತಿ ಕೊಡದಿರುವ ಬಗ್ಗೆ ತಮ್ಮ ಖಂಡನೆ; ರೈತರ ಪರವಾಗಿ ಹೇಳುವ ರೈತ ಪ್ರತಿನಿಧಿ ಸದಸ್ಯರ

ಹೇಳಿಕೆಗಳ ಬಗ್ಗೆ ಸರ್ಕಾರದ ಉದಾಸೀನ; ಕೃಷಿ ಮಂತ್ರಿಗಳು ಒದಗಿಸಿದ ಔಷಧಿಗಳ ಸಿಂಪಡಣೆ ಆದರೂ ರೋಗ ನಿವಾರಣಾ ಕ್ರಮದ ವೈಫಲ್ಯ; ತೆಂಗಿನ 'ಕುರುವೆ' (ಹೊಂಬಾಳೆ) ಬಂದ ಸಂದರ್ಭದಲ್ಲಿ ನುಸಿರೋಗ ನುಸುಳಿ, ಹುಳು ಮೊಟ್ಟೆ ಇಟ್ಟು ಮರಿ ಮಾಡುವ ಸಂದರ್ಭವಾಗಿ ಯಾವ ಔಷಧಿ ಸಿಂಪಡಣೆಗೂ ಅದು ಬಗ್ಗದಿರುವುದು; ವೈಮಾನಿಕವಾಗಿ ಔಷಧಿ ಸಿಂಪಡಣೆಯಿಂದ ಇತರೆ ಬೆಳೆ, ಪ್ರಾಣಿ, ಪಕ್ಷಿಗಳಿಗೆ ಆಗುವ ಅನಾಹುತ; ಎಳನೀರು ತೆಗೆದರೂ ರೋಗ ಹೋಗದಿರುವುದು; ಎಲ್ಲರ ತೋಟದಲ್ಲೂ ಹೊಂಬಾಳೆ ಕಡಿದಾಗ ಮಾತ್ರ ಒಂದೆರಡು ವರ್ಷಗಳಲ್ಲಿ ನುಸಿರೋಗ ಹೋಗುತ್ತದೆ. ಆದರೆ ರೈತರಿಗೆ ಆವರೆಗೆ ಯಾವುದೇ ಉತ್ಪತ್ತಿ ಇಲ್ಲದೆ ಒದಗುವ ಆರ್ಥಿಕ ಹಿನ್ನಡೆ ಹಾಗೂ ಸಂಕಷ್ಟ; ಸರ್ಕಾರ ಈ ಸಂದರ್ಭದ ರೈತರ ಬೇಡಿಕೆ ಬಗ್ಗೆ ಮಾಡಬೇಕಾದ ಚಿಂತನೆ; ವಿರೋಧ ಪಕ್ಷದ ಸದಸ್ಯರನ್ನು ಕಡೆಗಣಿಸಿ ತೆಗೆದುಕೊಂಡಿರುವ ನೀರಾ ಬಗೆಗಿನ ತೀರ್ಮಾನ; ಸರ್ಕಾರ ಪ್ರಾಯೋಗಿಕ ಆಧಾರದ ಮೇಲಾದರೂ ರೋಗ ನಿಯಂತ್ರಣದ ಸಾಧ್ಯತೆಗೆ ಅವಕಾಶ ನೀಡುವಿಕೆ; ರೈತರಿಗೆ ತುಂಬ ಆಗಿರುವ ಬೇಸರ; ತಾತ್ಕಾಲಿಕವಾಗಿಯಾದರೂ ನೀರಾ ಇಳಿಸಲು ಅನುಮತಿ; ಅಬ್ಕಾರಿ ಬಾಬತ್ತಿನಿಂದ ಪಡೆಯುವ ಆದಾಯದಂತೆ ರೈತರಿಂದಲೂ ತೆಂಗು ಬೆಳೆಗಾರರಿಂದಲೂ ಪಡೆವುದು ಹಾಗೂ ಆ ರೈತರು ಅದಕ್ಕೆ ಸಿದ್ಧವಿರುವುದು; ಸಾರಾಯಿ ಹೇಗೇ ತಯಾರಿಸಲಿ, ಕಲಬೆರಕೆ ಮಾಡಿರಲಿ, ಸರ್ಕಾರ ಅನುಮತಿ ನೀಡಿರುವಲ್ಲಿ ಜನರ ಆರೋಗ್ಯ ಹಾಳಾಗುತ್ತಿರುವುದು; ನೀರಾ ಬಗ್ಗೆ ತಜ್ಞರ ಸಮಿತಿ ಮಾಡಿ ವರದಿತರಿಸಿ, ಪರಿಶೀಲಿಸುವುದು; ನೀರಾದಿಂದ ಬೆಲ್ಲ ಅಥವಾ ವೆನಿಗರ್ ಮಾಡಲು ಪ್ರಯತ್ನವಾದರೆ ರೈತರಿಗೆ ಆಗುವ ಸಹಾಯ; ನಿನ್ನೆ ಮೊನ್ನೆಯಿಂದ ಎಲ್ಲೆಡೆ ಪ್ರತಿಭಟನೆ, ಹೋರಾಟ ಮಾಡುತ್ತಿರುವ ರೈತರು ಹಾಗೂ ಅವರೇ ನೀರಾ ಕಟ್ಟುವ ಕಾರ್ಯಕ್ರಮ ರೂಪಿಸಿಕೊಂಡಿರುವುದು; ಈ ಕಾರಣ ತಾತ್ಕಾಲಿಕವಾಗಿಯಾದರೂ ರೈತರಿಗೆ ನೀರಾ ಇಳಿಸಲು ಅವಕಾಶ ನೀಡಿ ಅವರ ಸಂಕಷ್ಟ ನೀಗಿಸಿ, ಆರ್ಥಿಕ ಮಟ್ಟ ಸುಧಾರಿಸುವುದು ಕುರಿತೆಲ್ಲ ಹೇಳಿ ಮನವಿ ಇಟ್ಟು ತಮ್ಮ ಮಾತು ಮುಗಿಸಿದರು.

**ಶ್ರೀ ಬಿ.ಆರ್.ನೀಲಕಂಠಪ್ಪ** ಅವರು ಮಾತನಾಡಿ, ರೈತರು ನೀರಾ ಇಳಿಸುವಲ್ಲಿ ತೋಟಕ್ಕೆ ಸಾಗಬೇಕಾದ ದೂರ, ನೀರಾ ಇಳಿಸಲು ತೆಗೆದುಕೊಳ್ಳುವಕಾಲ, (ಕನಿಷ್ಠ ಅರ್ಧ ಗಂಟೆ); ನೂರು ಮರಗಳಿಂದ ನೀರಾ ಇಳಿಸಬೇಕೆಂದರೆ ರಾತ್ರಿಯೆಲ್ಲಾ ಒದಗುವ ನಿದ್ದೆಗೇಡು; ನೀರಾದ ಮಾರಾಟದ ವ್ಯವಸ್ಥೆಯ ಸಮಸ್ಯೆಗಳು, ನುಸಿರೋಗ

ಉಳಿದ ಮರಗಳಿಗೆ ತಗುಲುವ ಭಯ; ಆ ರೋಗ ತಗುಲದ ಮರದ ಕುರಿತಾಗಿ ವೈಜ್ಞಾನಿಕ ಚಿಂತನೆ ಮಾಡಿಲ್ಲದಿರುವುದು; ಹೆಂಡದ ದೊರೆಗಳ ಜೊತೆ ಶಾಮೀಲಾಗಿರುವವರು, ರೈತರ ಸಂಕಷ್ಟವನ್ನು ಬೇರೆ ರೀತಿಯಲ್ಲಿ ಬಗೆಹರಿಸುವ ನಿಟ್ಟಿನಲ್ಲಿ ಕೊಡಬೇಕಾದ ಸೂಚನೆ ಬಗೆಗೆಲ್ಲ ಹೇಳಿ ಮನವಿ ಮಾಡಿ ಮಾತು ಮುಗಿಸಿದರು.

**ಶ್ರೀ ಸಿ.ಚನ್ನಿಗಪ್ಪ** ಅವರು ಮಾತನಾಡುತ್ತ : ತೆಂಗು, ಬಾಳೆ, ಅಡಿಕೆ ತರಕಾರಿ ಬೆಳೆಯುವಲ್ಲಿ ಕರ್ನಾಟಕ ರಾಜ್ಯ ಅತ್ಯುತ್ತಮ. ಕಲ್ಪವೃಕ್ಷವೆನಿಸಿರುವ ತೆಂಗಿನ ಮರವು 10 ವರ್ಷಗಳ ಹಿಂದೆ 300–400 ಕಾಯಿಗಳನ್ನು ಬಿಡುತ್ತಿದ್ದುದು ಕಂಡಿದ್ದೇವೆ. ಈ ಹತ್ತು ವರ್ಷಗಳ ನಂತರ ಪ್ರತಿ ವರ್ಷ ನುಸಿರೋಗ ಮತ್ತು ಕಪ್ಪುತಲೆ ಹುಳದಿಂದಾಗಿ ತೆಂಗಿನ ಗರಿಗಳು ಕೆಂಪಾಗುವುದು, ತೆಂಗಿನ ಕಾಯಿಗಳ ಮೇಲೆ ಕಪ್ಪು ಕಲೆ ಒಂದು ಇಳುವರಿ ಕಡಿಮೆಯಾಗಿರುವುದಿದೆ. ರೋಗ ತಗುಲಿದ ಮರದ ಕಾಯಿ, ಅಡಿಗೆಗೆ ಬಳಸಲು, ಎಳನೀರು ಕುಡಿಯಲು ಆಗುವುದಿಲ್ಲ. ರೋಗ ನಿಯಂತ್ರಣ ಮಾಡಲು ತಜ್ಞರನ್ನು ಕರೆಸಿ ತೋರಿಸಿ ಅಭಿಪ್ರಾಯ ಪಡೆದು ಔಷಧಿ ಹಾಕಬೇಕಿತ್ತು. ಈ ಸರ್ಕಾರ ಎಕರೆಗೆ 3–4 ಲೀಟರ್ ಔಷಧಿಯನ್ನು ಸಬ್ಸಿಡಿ ದರದಲ್ಲಿ ನೀಡಿತು; ಆದರೆ ಮರಗಳಿಗೆ ಪ್ರಯೋಗ ಮಾಡಿದಾಗ ಇಪ್ಪತ್ತು ಪರ್ಸೆಂಟ್ ಕೂಡ ಅದು ಕೆಲಸ ಮಾಡಲಿಲ್ಲ. ಆ ಔಷಧಿ ನಕಲಿಯೋ, ನೈಜವೋ ತಿಳಿಯಲಿಲ್ಲ. ರೋಗವಂತು ನಿವಾರಣೆ ಆಗಲಿಲ್ಲ. ನಿವಾರಣೆ ಆಗದಿದ್ದರೆ ರೈತರಿಗೆ ಆಘಾತವಾಗುತ್ತದೆ. ಅವರ ಹಣಕಾಸಿನ ಪರಿಸ್ಥಿತಿಗೆ ಬಹಳ ತೊಂದರೆ ಆಗುತ್ತದೆ. ನೀರಾ ಇಳಿಸಲು ಅನುಮತಿ ಈ ಕಾರಣದಿಂದ ಬೇಕು; ರೋಗ ನಿವಾರಣೆಗೆ ವೈಜ್ಞಾನಿಕವಾಗಿ ಪರೀಕ್ಷೆ ಮಾಡಿಸಬೇಕು ಎಂದರು. ಮತ್ತೆ ಮುಂದುವರಿದು, ಕೃಷಿ ಸಚಿವರು ಮತ್ತು ನಾನು ನಮ್ಮ ತಾಲೂಕಿನಲ್ಲಿ ಸುತ್ತಾಡಿ ನೋಡಿದಾಗ ನೂರಕ್ಕೆ ಅರವತ್ತು ಮರಗಳು ನುಸಿರೋಗಕ್ಕೆ ಈಡಾಗಿ ನಾರೂ ಸಿಗದಂಥ ಪರಿಸ್ಥಿತಿ ಆಗಿದೆ. ಉತ್ತಮವಾದ ಕಾಯಿ, ಕೊಬ್ಬರಿಯೂ ಸಿಗುವುದಿಲ್ಲ. ರೋಗದ್ದು ಎಂದು ಜನರೂ ಎಳನೀರನ್ನು ತೆಗೆದುಕೊಳ್ಳುತ್ತಿಲ್ಲ. ಒಂದೆರಡು ವರ್ಷ ನೀರಾವನ್ನು ಇಳಿಸಲು ಅವಕಾಶ ಕೊಡಬೇಕು. ಯಶಸ್ವಿಯಾಗದಿದ್ದಲ್ಲಿ ಅನುಮತಿ ವಾಪಸ್ ಪಡೆಯಬಹುದು. ರೋಗದ ತಡೆಗಾಗಿ ಜಿಲ್ಲೆಗೆ ಕೊಟ್ಟಿರುವ 50–60 ಲಕ್ಷ ರೂ.ಗಳು ಸಾಕಾಗದಿರುವುದರಿಂದ ಸರ್ಕಾರವು ಹೆಚ್ಚು ಕೊಟ್ಟು ರೋಗ ನಿವಾರಣೆಗೆ ನೆರವಾಗಬೇಕೆಂದು ಹೇಳಿ ತಮ್ಮ ಮಾತನ್ನು ಮುಗಿಸಿದರು.

**ಶ್ರೀ ಎಂ.ಡಿ.ಲಕ್ಷ್ಮೀನಾರಾಯಣ** ಅವರು ಪತ್ರಿಕೆಗಳಲ್ಲಿ ಪ್ರಕಟವಾಗಿದ್ದ ನೀರಾ ಮಾರಾಟ, ರೈತರಿಗೆ ನುಸಿಪೀಡೆ, ನಿರಾಶೆಯ ಬೆಂಬಲಬೆಲೆ, ಸರ್ಕಾರದ ನೀತಿಯ ಬಗ್ಗೆ ರೈತರ ಆಕ್ರೋಶ, ಇತ್ಯಾದಿ ವಿಷಯಗಳ ಬಗ್ಗೆ ಹೇಳಿದರು. ಸರ್ವಪಕ್ಷಗಳ ಸಭೆಯಲ್ಲಿ ಕೃಷಿ ವಿಜ್ಞಾನಿಗಳ ಅಭಿಪ್ರಾಯ ಪಡೆದು ರಾಜಕಾರಣಿಗಳು ಚರ್ಚಿಸಿ ನುಸಿರೋಗ ನಿವಾರಣೆಗೆ ನೀರಾ ಇಳಿಕೆಯು ಒಂದು ಮಾರ್ಗ ಎಂದು ಶಿಫಾರಸು ಮಾಡಿದ ವಿಷಯ ಸಮಿತಿಯ ವರದಿಯಲ್ಲಿ ಹೇಳಿದೆ. ನೀರಾ ಇಳಿಸಿದ ಮೇಲೆ ಅದು ಸೇಂದಿ ಅಥವಾ ಹೆಂಡವಾಗಿರಬಹುದು. ಅದನ್ನು ಕುಡಿಸಲು ಸರ್ಕಾರ ಸಿದ್ಧವಿಲ್ಲ. ಸರಿಯೆ. ಆದರೆ ಹಳ್ಳಿಯ ಶರಾಬು ಅಂಗಡಿಗಳಲ್ಲಿ ತೊಂಬತ್ತು ಭಾಗ ಸ್ಪಿರಿಟ್ ಅನ್ನು ಹಾಕಿ ಕುಡಿಸುತ್ತಿರುವುದರಿಂದ ಜನ ಸಾಯುತ್ತಿದ್ದಾರೆ. ನೀರಾದಿಂದ ಅಂಥ ಹಾನಿಯಿಲ್ಲ ಎಂದು ವಿಜ್ಞಾನಿಗಳು ಸಾಬೀತು ಮಾಡಿದ್ದಾರೆ. ಈ ದೃಷ್ಟಿಯಿಂದ ನೀರಾ ಇಳಿಸಲು ಅವಕಾಶ ಕೊಡಬೇಕೆಂದು ನಮ್ಮ ಕೇಳಿಕೆ ಇದೆ. ಈ ಹಿಂದೆ ಚರ್ಚೆ ಆಗಿದ್ದಂತೆ ಸಮಗ್ರವಾಗಿ ಔಷಧಿ ಸಿಂಪಡಣೆ ಮಾಡಲು 50–60 ಕೋಟಿ ರೂ.ಗಳು ಬೇಕಾಗುತ್ತದೆ. ಆಗ ರೋಗ ತಡೆಗಟ್ಟಬಹುದು. ಕೃಷಿಯಿಂದ ರೈತನಿಗೆ ತೊಂದರೆಯಾದ, ನಷ್ಟವಾದ ಸಂದರ್ಭದಲ್ಲಿ ಎಕರೆಗೆ 8–10 ಸಾವಿರ ರೂ. ಪರಿಹಾರವನ್ನು ಇಂಗ್ಲೆಂಡ್, ಅಮೆರಿಕಾ ಹಾಗೂ ಇತರ ದೇಶಗಳಲ್ಲಿ ನೀಡಲಾಗುತ್ತಿದೆ. ಆದರೆ ನಮ್ಮ ಸರ್ಕಾರ ಕೃಷಿಗೆ ಒತ್ತುಕೊಡುವ ಯಾವುದೇ ನೀತಿಯನ್ನು ಹಾಕಿಕೊಂಡಿಲ್ಲ. ತೆಂಗು, ಅಡಿಕೆ ಬೆಳೆಗಾರರಿಗೆ ಅನ್ಯಾಯವಾಗುತ್ತಿದೆ. ಕೊಬ್ಬರಿ ಮಾರುಕಟ್ಟೆಯಲ್ಲಿ ಲಕ್ಷ ಗಟ್ಟಲೆ ಕೊಬ್ಬರಿ ಚೀಲವು ಮಾರಾಟವಾಗದೆ ವಾಪಸ್ ಬಂದಿವೆ. ಆವರ್ತ ನಿಧಿಯನ್ನು 400 ಕೋಟಿಗೆ ಹೆಚ್ಚಿಸುವ ಪ್ರಸ್ತಾಪ ಸರ್ಕಾರ ಮಾಡಿ ಬಜೆಟ್‌ನಲ್ಲಿ 208 ಕೋಟಿ ರೂ.ಗಳ ಪ್ರಾವಿಜನ್ ಮಾಡಿರುವುದಷ್ಟಕ್ಕಾದರೂ ನನ್ನ ಶ್ಲಾಘನೆ ಇದೆ. ಆದರೆ ತುರುವೇಕೆರೆ, ತಿಪಟೂರಿನಿಂದ ತುಮಕೂರಿನವರೆಗಿನ ಮಾರುಕಟ್ಟೆ ಸ್ಥಳಗಳಲ್ಲಿ ಬರುವ ಕೊಬ್ಬರಿಯನ್ನು 2 ಸಾವಿರ ರೂ.ಗಳ ಧಾರಣೆಗೂ ಕೊಳ್ಳಲು ಯಾವ ವರ್ತಕನೂ ಮುಂದೆ ಬರುತ್ತಿಲ್ಲ. ರೈತ ಕಂಗಾಲಾಗಿ ಆತ್ಮಹತ್ಯೆಗೆ ಮುಂದಾಗುತ್ತಿದ್ದಾನೆ. ಕೊಟ್ಟಿರುವ ಚೆಕ್‌ಗಳು ಬೌನ್ಸ್ ಆಗಿವೆ. 76 ಲಕ್ಷ ರೂ.ಗಳ ಬಾಕಿಯನ್ನು ಪಡೆಯಲು ರೈತ ಹೋರಾಟ ಮಾಡುತ್ತಿದ್ದಾನೆ. ಕೊಬ್ಬರಿಯನ್ನು ತುಂಬಲಿಕ್ಕೆ ವೇರ್‌ಹೌಸ್‌ಗಳಿಲ್ಲದೆ, ಪುರಭವನ, ಛತ್ರಗಳಲ್ಲಿ ತುಂಬಿದ್ದು, ಅಲ್ಲಿ ಇಲಿ ಹೆಗ್ಗಣಗಳಿಗೆ ಆಹಾರವಾಗಿದೆ. ಮಾನ್ಯ ಕೃಷಿ ಸಚಿವರು, ತೋಟಗಾರಿಕಾ ಸಚಿವರು ಜಂಟಿಯಾಗಿ ಪ್ರವಾಸ ಮಾಡಲಿ. ತೆಂಗು ಬೆಳೆಗಾರರ ಸಭೆಗಳನ್ನು ಕೂಡಿಸಿ ನುಸಿರೋಗ ನಿವಾರಣೆ ಮಾಡಲು ನಿರ್ಧಾರಕ್ಕೆ ಬರಬೇಕು. ನೀರಾ ಇಳಿಸುವ ಬಗ್ಗೆ ಸದನದಲ್ಲಿ

ಚರ್ಚೆಗಳಾದುವು. ಅದಕ್ಕೆ ಸಮಯವನ್ನು ಧರಣಿ ಮಾಡಿ ತೆಗೆದುಕೊಳ್ಳುವುದು ಸಮಾಧಾನಕರವಲ್ಲ. ರೈತರ ಬಗ್ಗೆ ಮಾತನಾಡಲು ಧರಣಿ ಮಾಡಿ ಅವಕಾಶ ಪಡೆಯಬೇಕಾದುದು ವಿಷಾದನೀಯ ಎಂದರು.

**ಶ್ರೀ ಮಲ್ಲಿಕಾರ್ಜುನ ಖರ್ಗೆ** ಅವರು ಮಾತನಾಡಿ, ನೀರಾ ಇಳಿಸಲಿಕ್ಕೆ ಅಡ್ಡಿ ಬರುವ ಉದ್ದೇಶ ನಮಗಿಲ್ಲ. ಪ್ರಾಕ್ಟಿಕಲ್ ಆಗಿ ಹೇಳಿ ಎಂಬುದಷ್ಟೇ ನಮ್ಮ ಆಶಯ. ರಾಜ್ಯದಲ್ಲಿರುವ 9 ಕೋಟಿ ತೆಂಗಿನ ಮರಗಳಲ್ಲಿ ನುಸಿರೋಗಕ್ಕೆ 2 ಕೋಟಿ ಮರಗಳು ತುತ್ತಾಗಿವೆ. ಇವುಗಳಿಂದ ನೀರಾ ಇಳಿಸಿದರೆ ದಿನಕ್ಕೆ 1 1/2 ಲೀಟರ್‌ನಂತೆ 3 ಕೋಟಿ ಲೀಟರ್, ಆಗುತ್ತದೆ. ಅರ್‍ಯಾಕ್, ಬೀರು ಇತ್ಯಾದಿ ಎಲ್ಲಾ ಖರ್ಚಾಗುವುದು ವರ್ಷಕ್ಕೆ 17 ಕೋಟಿ ಲೀಟರ್, ಮಾತ್ರ. ಅಂದರೆ ನೀರಾವನ್ನು ಎಲ್ಲರೂ ಕುಡಿಯಬೇಕೆಂದು ಒತ್ತಾಯ ಮಾಡಬೇಕಾಗುತ್ತದೆ. ರೇಷನ್ ಕಾರ್ಡುಗಳಲ್ಲಿ ಸಕ್ಕರೆ, ಸೀಮೆ ಎಣ್ಣೆ ಖರೀದಿಸುವಂತೆ ದಿನಕ್ಕೆ ಒಬ್ಬರಿಗೆ 1ಲೀಟರ್ ನೀರಾ ಕೊಳ್ಳಲೇಬೇಕು ಎಂದು ಕಡ್ಡಾಯ ಮಾಡಬೇಕಾಗುತ್ತದೆ. ಆಗ ಸಮಸ್ಯೆ ಪರಿಹಾರವಾಗಬಹುದು. ಇನ್ನೂ ಗಿಡಕ್ಕೆ 15 ರೂ. ಗಳನ್ನು ಖರ್ಚುಮಾಡಲು ರೈತನಿಂದ ಆಗುವುದಿಲ್ಲವಾದ ಕಾರಣ, ಸರ್ಕಾರವನ್ನು 9 ಕೋಟಿ ಬದಲು 20-50 ಕೋಟಿ ರೂ ಕೇಳಿದರೆ ಪರಿಶೀಲಿಸಬಹುದು ಎಂದರು.

**ಶ್ರೀ ಡಿ.ವಿ.ಸದಾನಂದಗೌಡ** ಅವರು : ನುಸಿರೋಗ ಹೋಗುವುದೆಂದರೆ ನೀರಾ ಇಳಿಕೆ ಪ್ರಮಾಣ ಕಡಿಮೆಯಾಗುತ್ತಿದೆ. ನುಸಿರೋಗವನ್ನು ತಡೆಗಟ್ಟಿದರೆ ನೀರಾ ಇಳಿಸುವ ಅವಶ್ಯಕತೆ ಇರುವುದಿಲ್ಲ. ನೀರಾ ಇಳಿಸಲು ರೈತರಿಗೆ ಪರವಾನಗಿ ಕೊಟ್ಟರೆ ಕನಿಷ್ಟ ಪಕ್ಷ ತೆಂಗಿನ ಗಿಡವನ್ನಾದರೂ ಉಳಿಸಿಕೊಳ್ಳಲು ಪರವಾನಗಿ ಕೊಟ್ಟಂತಾಗುವುದು. ನೀರಾ ಇಳಿಸಿದರೆ ಕೊಳ್ಳಲು ಬಲಾತ್ಕಾರ ಮಾಡಲಾಗುವುದಿಲ್ಲ. ಸರ್ಕಾರದ ಉತ್ಪನ್ನವನ್ನು ವಿತರಿಸಿದರೆ ತೊಂದರೆ ಎಂಬ ಧಾಟಿಯಲ್ಲಿ ಸರ್ಕಾರ ಮಾತನಾಡಿದರೆ ರೈತರಲ್ಲಿ ಗೊಂದಲ ಉಂಟಾಗುತ್ತದೆ ಎಂಬ ಭಾವನೆ ಬರಬಾರದು. ನುಸಿರೋಗ ತಡೆಗಟ್ಟಲು ನೀರಾ ಇಳಿಸಬೇಕೆನ್ನುವುದು ನಮ್ಮ ಬೇಡಿಕೆ ಎಂದರು. ಆಗ ಶ್ರೀ ಮಲ್ಲಿಕಾರ್ಜುನ ಖರ್ಗೆ ಅವರು ಪ್ರತಿಕ್ರಿಯಿಸಿ ಉತ್ಪಾದನೆಯಾದ ಅಷ್ಟು ಕೋಟಿ ಲೀಟರ್ ನೀರಾವನ್ನು ರೈತ ಎಲ್ಲಿ ಒಯ್ದು ಮಾರಬೇಕು? ಅದಕ್ಕಾಗಿ ಕಂಪಲ್ಸರಿ ಆಕ್ಟ್ ಮಾಡಬೇಕೆ? ಎಂಬ ಪ್ರಶ್ನೆ ಬರುತ್ತದೆ ಎಂದರು. ಶ್ರೀ ಎಂ.ಡಿ.ಲಕ್ಷ್ಮೀನಾರಾಯಣ ಅವರು ಮುಂದುವರೆದು ಮಾತನಾಡುತ್ತ ನೀರಾ ಇಳಿಸತಕ್ಕ ಉದ್ದೇಶ ರೈತರಿಗೆ ಕುಡಿಸುವುದಕ್ಕಲ್ಲ. ನುಸಿಪೀಡೆ ಕಳೆಯಲು ಅದೊಂದು ಪದ್ಧತಿ

ಎಂದು ವಿಜ್ಞಾನಿಗಳ ಮಾತಿದೆ. ರೈತ ಬೆಳೆದ ಪದಾರ್ಥಗಳಿಗೆ ಬೆಲೆ ಇಲ್ಲದೆ ಕಂಗಾಲಾಗಿರುವಾಗ ನೀರಾ ಇಳಿಕೆಯಿಂದ ತೆಂಗಿನ ಮರವೊಂದಕ್ಕೆ 30–40 ರೂ. ದುಡ್ಡು ಬರುವಲ್ಲಿ ಅವನ ಖರ್ಚಿಗೆ ಆದೀತು, ಆದಕ್ಕಾಗಿ ನಮ್ಮ ಆಗ್ರಹ ಇದೆ. ಕೊಬ್ಬರಿ ಬಗ್ಗೆಯೂ ತೀರ್ಮಾನವಾಗಬೇಕು. ಅದಕ್ಕಾಗಿ ತಕ್ಷಣ ಕ್ರಮ ತೆಗೆದುಕೊಂಡು ಕೊಬ್ಬರಿ ಬೆಳೆಗಾರರಿಗೆ ನ್ಯಾಯ ದೊರಕಿಸಿಕೊಡಿ; ನೀರಾ ಇಳಿಸಲು ಅನುಮತಿ ಕೊಡಿ ಎಂಬ ಆಗ್ರಹದೊಡನೆ ಮಾತು ಮುಗಿಸಿದರು.

**ಶ್ರೀ ಸಿ.ಬೈರೇಗೌಡರು** ತಮ್ಮ ವಿಚಾರವನ್ನು ಮುಂದಿಟ್ಟು ರೈತರು ಹಣ್ಣು, ತರಕಾರಿ ದವಸ ಧಾನ್ಯ, ತೆಂಗು ಇತ್ಯಾದಿ ಅನೇಕ ಬೆಳೆಗಳನ್ನು ಬೆಳೆಯುತ್ತಾರೆ. ಯಾವ ಬೆಳೆಯೂ ರೋಗಮುಕ್ತವಲ್ಲ. ಅದು ಪ್ರಕೃತಿಯಲ್ಲಿ ಇರುವ ವಿಚಾರವೆ. ಆದರೂ ಇವೆಲ್ಲಕ್ಕೂ ಕೂಡ ಒಂದು ಸಮತೋಲನ ಕಾಪಾಡಿಕೊಳ್ಳುವ ವ್ಯವಸ್ಥೆ ಪ್ರಕೃತಿಯಲ್ಲಿದೆ. ಸಮತೋಲನ ಕೆಡತಕ್ಕಂಥ ಕೃಷಿ ವಿಧಾನ ಬಳಸಿದಾಗ, ರೋಗಗಳು, ಕೀಟಗಳೂ ಹೆಚ್ಚಾಗುತ್ತಿರುವುದನ್ನು ಇಂದು ನಾವು ಕಾಣುತ್ತಿದ್ದೇವೆ. ಹಿಂದೆ ಬೆಳೆ ಬೆಳೆಯತಕ್ಕವರು ಕೆಲವರೇ ಇರುತ್ತಿದ್ದರು. ಸೀಸನ್ ಅನುಸರಿಸಿ ಬೆಳೆ ಬೆಳೆದರೆ ರೋಗರುಜಿನ ಕಡಿಮೆ ಹಾಗು ಅವುಗಳನ್ನು ತಹಬಂದಿಗೆ ತರುವ ಶಕ್ತಿ ವಾತಾವರಣದಲ್ಲೂ ಇದೆ. ಸಮತೋಲನವನ್ನು ಕೆಡಿಸಿದಾಗ ಅದಕ್ಕೆ ತಕ್ಕಂತೆ ರೋಗರುಜಿನಗಳು, ಹೆಚ್ಚಿ ಅವುಗಳಲ್ಲೂ ಎವಲ್ಯೂಷನ್‌ಅನ್ನು ಕಾಣುತ್ತಿದ್ದೇವೆ. ರೈತರು ಇವೆಲ್ಲಕ್ಕೂ ಹೊಂದಿಕೊಂಡು ಜೀವನ ಸಾಗಿಸುವಲ್ಲಿ ಪ್ರಯಾಸ ಪಡುತ್ತ ಬಂದಿದ್ದಾರೆ. ಈ ಹಿನ್ನೆಲೆಯಲ್ಲಿ ನಾವು ನುಸಿರೋಗವನ್ನು ನೋಡಬೇಕಾಗುತ್ತದೆ. ಸಮಗ್ರ ಕೀಟ ಅಥವಾ ಸಮಗ್ರ ರೋಗ ನಿವಾರಣೆ ಅಂದರೆ **ಇಂಟಿಗ್ರೇಟೆಡ್ ಪೆಸ್ಟ್ ಮಾನೇಜ್‌ಮೆಂಟ್ (ಐಪಿಎಂ)** ಅನ್ನು ವಿಜ್ಞಾನಿಗಳು ಪ್ರತಿಪಾದನೆ ಮಾಡುತ್ತಿದ್ದಾರೆ. ಎಲ್ಲಾ ವಿಧಾನಗಳನ್ನು ಬಳಸಿ ಬೆಳೆಗಳನ್ನು ಶಿಕ್ಷಣ ಮಾಡತಕ್ಕದ್ದು ಆ ಪ್ರತಿಪಾದನೆಯಲ್ಲಿದೆ. ನೀರಾ ಇಳಿಸತಕ್ಕದ್ದು ಸಹ ಐ.ಪಿ.ಎಂ.ನಲ್ಲಿ ಒಂದು ಭಾಗ. ಇಂತಹುದೇ ಸರಿಯಾದ ಮಾರ್ಗ ಎನ್ನುವುದು ಇಲ್ಲದೇ ಇರುವ ಕಾರಣದಿಂದ ವಿಜ್ಞಾನಿಗಳು ಐಪಿಎಂ ವಿಚಾರ ಹೇಳುತ್ತಿದ್ದಾರೆ. ನುಸಿರೋಗದ ಬಾಧೆ ಮೆಕ್ಸಿಕೋದಿಂದ ಭಾರತಕ್ಕೆ ಬಂದು ಪ್ರಪ್ರಥಮವಾಗಿ ಕೇರಳದಲ್ಲಿ ಕಾಣಿಸಿಕೊಂಡಿತು. ನಂತರ ನಮ್ಮ ರಾಜ್ಯದ ಅದರಲ್ಲೂ ಬೆಂಗಳೂರು ಸುತ್ತಮುತ್ತ ಮತ್ತು ಕೋಲಾರ ಜಿಲ್ಲೆಗಳಲ್ಲಿ ಕಾಣಿಸಿತು. ಈ ಕೀಟಾಣುಗಳು ಎಷ್ಟು ದೂರ ಬೇಕಾದರೂ ಗಾಳಿಯಲ್ಲಿ ಬರತಕ್ಕಂಥವು. ನಮ್ಮಲ್ಲಿ, ನಾನು ಕೃಷಿ ಮಂತ್ರಿಯಾಗಿದ್ದ ಸಂದರ್ಭದಲ್ಲಿಯೇ ದುರದೃಷ್ಟವಶಾತ್ ಈ ರೋಗ ಕಾಣಿಸಿಕೊಂಡಿತು. ತತ್‌ಕ್ಷಣ

ಅನೇಕ ತೋಟಗಳಿಗೆ ಹೋಗಿ ನೋಡಿದೆ. ಬೆಂಗಳೂರು ಕೃಷಿ ವಿಶ್ವವಿದ್ಯಾಲಯದ ವಿಜ್ಞಾನಿಗಳನ್ನು ಕಳುಹಿಸಿ, ವಿಷಯ ತಿಳಿದುಕೊಳ್ಳಲು ಹಾಗು ರೈತರಿಗೆ ತಿಳುವಳಿಕೆ ನೀಡಲು ಹೇಳಿದೆ. ರೋಗವಿರಲಿ–ಇಲ್ಲದಿರಲಿ ಎಲ್ಲಾ ಮರಗಳಿಗೂ ಔಷಧಿಯನ್ನು ಸಿಂಪರಣೆ ಮಾಡಿ ಹಾಗು ಬೇರುಗಳ ಮೂಲಕವೂ ಇಂಜಕ್ಷನ್ ಮಾಡಬೇಕೆಂಬ ಸೂಚನೆಯನ್ನು ಅಧಿಕಾರಿಗಳಿಗೆ ನೀಡಿದ್ದೆ. ಚುನಾವಣೆ ಬಂತು ರಾಜಕೀಯ ಬದಲಾವಣೆಯೂ ಆಯಿತು. ಕೇವಲ ರಾಸಾಯನಿಕ ವಸ್ತುಗಳ ಬಳಕೆಯಿಂದ ಈ ರೋಗ ತಡೆಗಟ್ಟಲು ಸಾಧ್ಯ ಎಂದು ಖಂಡಿತ ನಾನು ಭಾವಿಸಿಲ್ಲ. ಕೀಟವಿರಲಿ, ಫಂಗಸ್ಸಿರಲಿ ಪ್ರತಿರೋಧಕದ ಗುಣ ಅವುಗಳಲ್ಲಿ ಸ್ವಾಭಾವಿಕವಾಗಿ ಬರುತ್ತದೆ. ಅದಕ್ಕೆ ಕಾರಣ ಇಮ್ಯುನಿಟಿ ಎಂಬುದು–ಸ್ವಾಭಾವಿಕವಾಗಿ ಜೀವರಾಶಿಯ ಶರೀರದಲ್ಲಿ ಈ ಗುಣವನ್ನು ಪ್ರಕೃತಿಕೊಟ್ಟಿದೆ. ಮಾನೋಕ್ರೋಟೋಫಾಸ್ ಕೊಟ್ಟರೂ ನುಸಿರೋಗಕ್ಕೆ ಕೆಲಸ ಮಾಡಲಿಲ್ಲ ಎನ್ನುವ ಆರೋಪವೂ ಇದೆ. ಆದರೆ ಬಳಸಿದ ಆ ಔಷಧಿಯ ಗುಣಮಟ್ಟದ್ದಲ್ಲದಿದ್ದರೆ; ಗುಣಮಟ್ಟದ ಔಷಧಿಯನ್ನು ಬಳಸಿದರೂ ಕೀಟವು ಇಮ್ಯುನಿಟಿ ಪಡೆದುಕೊಂಡಿದ್ದರೆ ರೋಗ ವಾಸಿಯಾಗದು. ನಮ್ಮ ಸಾಮಾನ್ಯ ರೈತರಲ್ಲೂ ಕೂಡ ಈ ವಿಷಯ ಮನವರಿಕೆಯಾಗುವ ಅಗತ್ಯವಿದೆ. ಅಂತಾಗಿ ನುಸಿರೋಗ ಒಂದೇ ಅಲ್ಲ, ಕಪ್ಪುತಲೆ ಹುಳು ರೋಗದ ಬಾಧೆಯೂ ಇದೆ. ತೆಂಗಿನ ಗರಿ ಎಲ್ಲಾ ಒಣಗಿ ಕರ‍್ರಗೆ ಆಗುವಂತಹ ದೃಶ್ಯ ಅದು. ಕೇರಳದಲ್ಲಿ ಇದೆಲ್ಲವನ್ನು ಮೀರಿಸತಕ್ಕಂಥ ಭೀಕರ ರೋಗವಾದ ಹೊರ ದೇಶದಿಂದ ಬಂದಿರುವಂಥ 'ರೂಟ್‌ಕ್ರಬ್' ರೋಗವು ಹರಡುತ್ತಿದೆ. ಈ ರೋಗ ತಗುಲಿದ ಮರದ ಗರಿ ಮಾರುದ್ದ ಇರಬೇಕಾದದ್ದು ಒಂದು ಮೊಳದುದ್ದ ಆಗಿ ಕಾಯಿ ಬಿಡುವಿಕೆ ಕಡಿಮೆಗೊಳ್ಳುತ್ತದೆ. ಗುಣಮಟ್ಟದ ಕಾಯಿಯೂ ಬರದು. ಕೊಬ್ಬರಿ ಪ್ರಮಾಣವೂ ಆರೋಗ್ಯವಂತ ಮರದಷ್ಟಿರುವುದಿಲ್ಲ. ಕೇರಳದ 7–8 ಜಿಲ್ಲೆಗಳಲ್ಲಿ ದೊಡ್ಡ ಪ್ರಮಾಣದಲ್ಲಿ ಈ ರೋಗ ಹರಡಿದಾಗ, ಕೇಂದ್ರ ಸರ್ಕಾರ ಈ ರೋಗದ ಮರಗಳೆಲ್ಲವನ್ನು ತಕ್ಷಣವೇ ಕಡಿದು ಹಾಕಲು ಹೇಳಿ, ಧನ ಸಹಾಯವನ್ನು ಮೂಡಿತು. ಆದರೆ ಧನಸಹಾಯ ಪಡೆದರೂ ರೋಗದ ಮರಗಳನ್ನು ಕಡಿದೆವೆಂದು ಕಾಗದದ ಮೇಲೆ ಕೇರಳವು ನಮೂದುಕೊಟ್ಟಿತೇ ವಿನಾ ವಾಸ್ತವವಾಗಿ ಕಡಿಯಲೇ ಇಲ್ಲ. ಮುಂದಿನ 15–20 ವರ್ಷಗಳಲ್ಲಿ ಈ ಕಾರಣ ಕೇರಳದಲ್ಲಿ ತೆಂಗಿನ ಬೆಳೆ ಇಲ್ಲದೇ ಹೋಗುವ ಪರಿಸ್ಥಿತಿ ಒದಗಬಹುದು. ಇದರ ಪರಿಣಾಮ ನಮ್ಮ ರಾಜ್ಯದ ಮೇಲೆ ಆಗುವ ಅಪಾಯವಿದೆ. ತೆಂಗಿನ ಮರಗಳಿಗೆ ಈ ರೋಗ ಬಂದರೆ ವಾಸಿಯಾಗದು; ಔಷಧಿಗೆ ಜಗ್ಗದು. ಕೇರಳಕ್ಕೆ ಮಾನ್ಯ ಸಚಿವರು ಹೋಗಿ ಖುದ್ದಾಗಿ ಅಧ್ಯಯನ ಮಾಡಿ ಪರಿಶೀಲಿಸಿ ಬರಬೇಕು.

ಇದಕ್ಕೆ ಈಗಲೇ ಮುನ್ನೆಚ್ಚರಿಕೆಯ ಕ್ರಮಗಳನ್ನು ಕೈಗೊಳ್ಳುವ ಅವಶ್ಯಕತೆ ಇದೆ. ಐಪಿಎಂ. ನಲ್ಲಿ 'ನೀರಾ' ಇಳಿಸುವುದು ಒಂದು ಭಾಗವಾಗಿರುವ ಕಾರಣ ನೀರಾ ಇಳಿಸಲು ಸರ್ಕಾರ ಅವಕಾಶ ಕಲ್ಪಿಸಿಕೊಡಬೇಕು. ರಾಜ್ಯದ ಕೋಟಿಗಟ್ಟಲೆ ಮರಗಳಿಂದ ನೀರಾ ಇಳಿಸಿದರೆ ಕುಡಿಯುವವರು ಯಾರು? ಎಂದು ಮಾನ್ಯ ಗೃಹ ಸಚಿವ ಮಲ್ಲಿಕಾರ್ಜುನ ಖರ್ಗೆಯವರು ಪ್ರಶ್ನೆ ಇದೆ. ಆದರೆ ಎಲ್ಲಾ ರೈತರು ತೆಂಗಿನ ಮರಗಳಿಂದ ನೀರಾ ಇಳಿಸುವುದಿಲ್ಲ. ತೆಂಗಿನ ಮರಗಳಿಂದ ನೀರಾ, ಹೆಂಡ ಇಳಿಸಲು ಕಾನೂನಿನಲ್ಲಿ ನಿರ್ಬಂಧವಿದ್ದರೂ, ರಾಜ್ಯದ ರೈತರನ್ನು ಕಾಪಾಡುವ ಸಲುವಾಗಿ ನಾನೇ ಸ್ವತಃ 2–3 ಕಡೆಗಳಿಗೆ ಹೋಗಿ ತೆಂಗಿನ ಮರಗಳಿಗೆ ಗಡಿಗೆ ಕಟ್ಟುವ ಮೂಲಕ ಕಾನೂನು ಉಲ್ಲಂಘಿಸಿ ಬಂದಿದ್ದೇನೆ. ಇವೊತ್ತು ರಾಜ್ಯದಲ್ಲಿ ಏಕೆ ರೈತ ಆತ್ಮಹತ್ಯೆ ಮಾಡಿಕೊಳ್ಳುತ್ತಿದ್ದಾನೆ? ನಾನಾ ರೀತಿಯ ಬಾಧೆಗಳಿಂದ ಪೀಡಿತನಾಗಿರುವ ಅವನಿಗೆ ಸ್ವಲ್ಪಮಟ್ಟಿಗಾದರೂ ರಕ್ಷಣೆ ಸಿಗಬೇಕಾದ ಅವಶ್ಯಕತೆ ಇದೆ. ನೀರಾ ಮಾರಾಟಕ್ಕೆ ತೊಂದರೆ ಇದೆ ಎಂದು ಹೇಳಲಾಗಿದೆ. ಆದರೆ ಯಾರು ಏನೇ ಹೇಳಲಿ ನಮ್ಮೆಲ್ಲರ ಲಗಾಮು ಹಿಡಿದಿರುವವರಲ್ಲಿ ಅಬ್ಕಾರಿವಲಯದವರೂ ಇದ್ದಾರೆ. ಸರ್ಕಾರ ಸಾರಾಯಿ ಲಾಬಿಗೆ ಮಣಿದು ತೆಂಗಿನ ಮರಗಳಿಂದ ನೀರಾ ಇಳಿಸಲು ಅವಕಾಶ ಕೊಡುವುದಿಲ್ಲವೆಂದು ಸಾಮಾನ್ಯ ಜನರ ಅಭಿಪ್ರಾಯವಾಗಿದೆ. ಅವರ ಅಭಿಪ್ರಾಯಕ್ಕೆ ನಾನೂ ಧ್ವನಿಗೂಡಿಸುತ್ತೇನೆ. ಕ್ಲೋರಲ್ ಹೈಡ್ರೇಟ್ ಬೆರಸಿರುವ ನೀರಾವನ್ನು ಹೆಂಡವೆಂದು ಮಾರಾಟಮಾಡುವುದನ್ನು ಅದು 'ವಿಷ'ವಾಗಿರುವ ಕಾರಣ ರದ್ದುಗೊಳಿಸಬೇಕು ಎಂದರು.

ಅರಣ್ಯ ಸಚಿವ **ಶ್ರೀ ಕೆ.ಎಚ್.ರಂಗನಾಥ್** ಅವರು ಚರ್ಚೆಯಲ್ಲಿ ಪಾಲ್ಗೊಂಡು ಮದ್ಯಪಾನ ನಿಷೇಧ ಕುರಿತಂತೆ ಮೊದಲು ಮಹಾತ್ಮಗಾಂಧಿಯವರು ದನಿ ಎತ್ತಿದರು; ಮೊರಾರ್ಜಿದೇಸಾಯಿಯವರು ಬೊಂಬಾಯಿ ಪ್ರಾಂತ್ಯದಲ್ಲಿ 1947ರಲ್ಲಿ ನಿಷೇಧಿಸಿದರು. ಶ್ರೀಮತಿ ಯಶೋಧರಮ್ಮ ದಾಸಪ್ಪ ಅವರು ಈ ಹಿನ್ನೆಲೆಯಲ್ಲಿ 1968ರಲ್ಲಿ ಮದ್ಯಪಾನ ನಿಷೇಧ ತೆಗೆದ ಕಾರಣ ತಮ್ಮ ಮಂತ್ರಿ ಪದವಿಗೆ ರಾಜೀನಾಮೆ ನೀಡಿದರು. ಎಂದೆಲ್ಲ ಹೇಳುತ್ತ ಮದ್ಯಪಾನ ನಿಷೇಧದ ಹಿಂದಿನ ಚರಿತ್ರೆಯನ್ನು ಮುಂದಿಟ್ಟರು. ಈ ನಡುವೆ **ಶ್ರೀ ಎಸ್.ಎಸ್.ಪಾಟೀಲ್** ಅವರು ಮಾತನಾಡಿ ರೈತರು ಇಳಿಸುವ ನೀರಾವನ್ನು ತಡೆಗಟ್ಟಲು ಸರ್ಕಾರಕ್ಕೆ ಅಧಿಕಾರವಿಲ್ಲ, ಯಾವ ಕಾಯ್ದೆಯಲ್ಲೂ ಅವಕಾಶವಿಲ್ಲ. ಪಾನ ನಿರೋಧ ಜಾರಿಗೆ ತಂದಿಲ್ಲದಿರುವಾಗ ರೈತರಿಗೇಕೆ ಅನ್ಯಾಯ ಮಾಡಬೇಕು? ಎಂದರು. ಶ್ರೀ ಕೆ.ಎಚ್.ರಂಗನಾಥ್ ಅವರು ಮಾತು ಮುಂದುವರಿಸಿ:

ನಾವೆಲ್ಲ ಸಾರ್ವಜನಿಕ ಹಿತಕ್ಕಾಗಿ ಸದಸ್ಯರಾಗಿ ಇಲ್ಲಿಗೆ ಬಂದಿದ್ದೇವೆ. ತೆಂಗಿನ ಮರದ ಬಗ್ಗೆ ಇಲ್ಲಿ ಪ್ರಶ್ನೆ ಇರುವಾಗ ಅದರ ಮಾಲೀಕರಾಗಿ ಸಣ್ಣರೈತರಾಗಿಯೇ ದೊಡ್ಡ ರೈತರಾಗಿಯೇ ನಮ್ಮ ಸ್ವಂತ ಹಿತದಿಂದ ಮಾತನಾಡುತ್ತಿದ್ದೇವೆ. ಕ್ಲೋರೋ ಹೈಡ್ರೇಡ್ ಅನ್ನು ಮಿಶ್ರಮಾಡಿ ಹೆಂಡದ ಹೆಸರಿನಲ್ಲಿ ಮಾರಾಟ ಮಾಡುತ್ತಿದ್ದುದರಿಂದ ಆರೋಗ್ಯಕ್ಕೆ ಹಾನಿ, ಕಣ್ಣು ಹೋಗುತ್ತದೆ ಎಂಬ ಕಾರಣದಿಂದ ಪಾನ ನಿರೋಧ ಜಾರಿಗೆ ತರುವ ಒಂದು ವಿಚಾರಧಾರೆ ಇತ್ತು. ಆದರೆ ಇವತ್ತು ಈ ನೀರಾ ಹೆಂಡವಾಗಿ ಪರಿವರ್ತನೆಯಾಗುವುದಿಲ್ಲವೆಂಬುದಕ್ಕೆ ಏನು ಗ್ಯಾರಂಟಿ? ನೀರಾ ಇಳಿಸಿದರೆ ಅಗಾಧವಾಗಿ ಉಳಿಯುವ ನೀರಾವನ್ನು ಚರಂಡಿಗೆ ಚೆಲ್ಲುವಿರಾ? ಅಥವಾ ಕುಡಿಯಲು ಕಡ್ಡಾಯ ಮಾಡುವಿರಾ! ಈ ಬಗೆಗೆಲ್ಲ ಯೋಚಿಸಬೇಕು. ನಾಳೆ ದಿವಸ ಇನ್ನೊಂದು ಲಾಬಿ ಶುರುವಾಗಿ ರೈತರ ಹೆಸರಿನಲ್ಲಿ ಹೆಂಡ ಮರುಪ್ರವೇಶವಾಗುವುದಿಲ್ಲ ಎಂಬುದಕ್ಕೆ ಏನು ಗ್ಯಾರಂಟಿ? ನಮ್ಮ ಉದ್ದಿಮೆಗಾಗಲಿ, ವ್ಯವಸಾಯ ಮಾಡುವ ಬಡಜನರೇನಿದ್ದಾರೆ ಅವರ ದೃಷ್ಟಿಯಿಂದ ವಿಚಾರ ಮಾಡದೆ ಕೇವಲ ನಮ್ಮ ದೃಷ್ಟಿಯಿಂದ ವಿಚಾರ ಮಾಡುತ್ತಿದ್ದೇವೆ, ಎಂದರು..

ಶ್ರೀ ಸಿ.ಭೈರೇಗೌಡರು, ಮಾನ್ಯ ಶ್ರೀ ರಂಗನಾಥ್ ಅವರ ವಾದದಲ್ಲಿಯೂ ಅರ್ಥವಿದೆ ಎನ್ನುತ್ತ, ತೆಂಗಿನಮರವಿರುವರು ನೀರಾ ಇಳಿಸಬೇಕೆನ್ನುವಲ್ಲಿ ಅವರ ಆರ್ಥಿಕ ಪರಿಸ್ಥಿತಿ ಯಾವ ಮಟ್ಟಕ್ಕೆ ಬಂದು ನಿಂತಿದೆ ಎಂಬ ಬಗ್ಗೆಯು ವಿಚಾರ ಮಾಡಬೇಕಿದೆ. ನುಸಿರೋಗದ ಬಾಧೆ ಕಡಿಮೆಯಾಗುವವರೆಗೆ, 2–3 ವರ್ಷಗಳವರೆಗೆ ಮಾತ್ರ ನೀರಾ ಇಳಿಸಲು ಅನುಮತಿ ಕೊಡಬೇಕೆಂದು ನಮ್ಮ ಒತ್ತಾಯವಾಗಿದೆ. ನೀರಾವನ್ನು ಬಳಸುವವರು ಬಳಸುತ್ತಾರೆ. ಹೆಂಡ ಮಾಡಿಕೊಂಡು ಬಳಸುವವರೂ ಇದ್ದಾರೆ. ಕಾನೂನು ಮಾಡಿದರೆ ಸೈನಿಕರ ರೀತಿಯಲ್ಲಿ ಪಾಲನೆ ಮಾಡುತ್ತಾರೆ ಎಂಬುದಕ್ಕೆ ಯಾವುದೇ ಗ್ಯಾರಂಟಿ ಇಲ್ಲ. ದುರುಪಯೋಗ ಆಗಿಯೇ ಆಗುತ್ತದೆ. ರೈತರ ಪರಿಸ್ಥಿತಿ ಬಹಳ ಆತಂಕಕಾರಿ ಆಗಿರುವುದರಿಂದ ನೀರಾ ಇಳಿಕೆ ಅನುಮತಿಗಾಗಿ ನಮ್ಮ ಒತ್ತಾಯವಿದೆ. ಕೆಲವು ದಿನಗಳ ಮಟ್ಟಿಗೆ ಸಾರಾಯಿ ಲಾಬಿಯನ್ನು ದೂರವಿಟ್ಟು ರೈತರ ಕಡೆ ನೋಡಬೇಕಾದ ಅವಶ್ಯಕತೆ ಇದೆ. ಇವತ್ತು ಸಿ.ಎಫ್.ಟಿ.ಆರ್.ಐ. ನವರು ನೀರಾವನ್ನು ನೀರಾ ಆಗಿಯೆ ಇಟ್ಟುಕೊಳ್ಳುವ ಬಗ್ಗೆ ವೈಜ್ಞಾನಿಕ ಪ್ರಯೋಗಗಳನ್ನು ನಡೆಸಿ ಸಂಶೋಧನೆ ಮಾಡುತ್ತಿದ್ದಾರೆ. ಅಲ್ಲಿನ ಮುಖ್ಯಸ್ಥರೂ ಮಾನ್ಯ ಮಂತ್ರಿಗಳಿಗೆ ಬರೆದಿರುವ ಪತ್ರದ ನಕಲಿನ ಭಾಗ ಇಂತಿದೆ:

*Sri Allam veerabhadrappa during his visit to defence food research laboratory, Mysore on 7th July 2001, I wish to inform that we have already started preliminary work on Neera Sample provided by the farmers for its preservation to extend shelf life and maintain nutritive value. A detailed project indicating the funds required etc., will be submitted shortly'*- ಇಂತಿರುವಲ್ಲಿ ಸರ್ಕಾರವು ಅವರಿಗೆ ಬಯಸಿರುವ ಸೌಕರ್ಯ ಹಾಗು ಹಣವನ್ನು ಒದಗಿಸಿ ಕೊಟ್ಟು ನೀರಾವಿನ ಸೆಲ್ಫ್ ಲೈಫ್ ಅನ್ನು ಜಾಸ್ತಿ ಮಾಡುವುದಕ್ಕೆ ಅವಕಾಶ ಒದಗಿಸಿ ರೈತರನ್ನು ಉಳಿಸಬೇಕು; ರೈತರ ಕಡೆ ನೋಡಬೇಕು ಎಂಬ ಮನವಿಯೊಡನೆ ನೀರಾ ಇಳಿಕೆಗೆ ಅನುಮತಿಗೆ ಒತ್ತಾಯಿಸಿ ಮಾತನ್ನು ನಿಲ್ಲಿಸಿದರು.

ಈ ದಿನದ ಕಲಾಪಗಳಲ್ಲಿ ಸರ್ವಶ್ರೀ ಎಂ.ಚಂದ್ರಪ್ಪ ಎಸ್.ಎಸ್.ಪಾಟೀಲ್, ಕಾಗೋಡು ತಿಮ್ಮಪ್ಪ, ಎಂ.ಮಹದೇವ್, ಸುಭಾಷ್ ಗುತ್ತೇದಾರ್, ಕೆ.ಶ್ರೀನಿವಾಸಗೌಡ, ಡಾ.ಜಿ.ಪರಮೇಶ್ವರ್ ಎಚ್.ಸಿ.ಬಸವರಾಜ್ ಅವರುಗಳೂ ಪಾಲ್ಗೊಂಡಿದ್ದರು.

**ವಿಷಯ 5: ನೀರಾ ಇಳಿಸಲು ಅನುಮತಿ ನೀಡುವ ಬಗ್ಗೆ (ನಿಯಮ 69ರ ಮೇರೆಗೆ)**

4.8.2001ರ ವಿಧಾನಸಭಾ ಅಧಿವೇಶನದಲ್ಲಿ[6] ನಡೆದ ನೀರಾ ಇಳಿಕೆ ಕುರಿತ ಬೆಳಗಿನ ಸಮಯದ ಚರ್ಚೆಯಲ್ಲಿ **ಶ್ರೀ ಪಿ.ಜಿ.ಆರ್.ಸಿಂಧ್ಯಾ** ಅವರು ಪಾಲ್ಗೊಂಡು; ನೀರಾ ಇಳಿಸುವ ವಿಚಾರದಲ್ಲಿ ಸೈಂಟಿಫಿಕ್ ಆಗಿ ರಿಪೋರ್ಟ್ ಬರುವುದಾದರೆ ಪರಿಶೀಲಿಸಬಹುದು, ಎಂದಾಗ **ಶ್ರೀ ಟಿ.ಬಿ.ಜಯಚಂದ್ರ** ಅವರು ದ.ಕನ್ನಡ, ಉಡುಪಿ ಬಿಟ್ಟರೆ ಬೇರೆಲ್ಲೂ ಸೇಂದಿ ಇಳಿಸುವಿಕೆ ಇಲ್ಲ. ಗುಲ್ಬರ್ಗಾ, ರಾಯಚೂರು ಜಿಲ್ಲೆಗಳಲ್ಲಿ ಸೇಂದಿ ಇಳಿಸಲು ಅನುಮತಿ ಹಿಂತೆಗೆದುಕೊಂಡಿರುವುದನ್ನು ಸದಸ್ಯರೆಲ್ಲ ಸ್ವಾಗತಿಸಿದ್ದೀರಿ ಎಂದರು. **ಶ್ರೀ ಬಿ.ಸೋಮಶೇಖರ್** ಅವರು, ನೀರಾ ಇಳಿಸಲು ಅನುಮತಿ ನೀಡುವ ಬಗ್ಗೆ ನಡೆದಿರುವ ಚರ್ಚೆ ಮಹತ್ವದ್ದು. ಈ ಬಗ್ಗೆ ರೈತರಿಗೆ ಆತಂಕವಾಗಿರುವ ಕಾರಣ ಅನುಮತಿಗಾಗಿ ಬೀದಿಗಿಳಿದು ಪ್ರತಿಭಟನೆ ಮಾಡುತ್ತಿದ್ದಾರೆ. ಸರ್ಕಾರ ಸ್ಪಷ್ಟ ನಿಲುವು ಪ್ರಕಟಿಸಿಲ್ಲ, ಎಂದರು.

**ಶ್ರೀ ಹೆಚ್.ಎಸ್.ಮಹದೇವ್ ಪ್ರಸಾದ್** ಅವರು ಚರ್ಚೆಯನ್ನು ಮುಂದುವರಿಸುತ್ತ ರಾಜ್ಯದ ಸುಮಾರು 14 ಜಿಲ್ಲೆಗಳ ರೈತರು ತೆಂಗು ಬೆಳೆಯನ್ನು 5 ಲಕ್ಷ ಹೆಕ್ಟೇರ್ ಪ್ರದೇಶದಲ್ಲಿ ಬೆಳೆದು ಜೀವನ ಮಾಡುತ್ತಿರುವುದು, ತೆಂಗು 50–60 ವರ್ಷಗಳ ಕಾಲ ರೈತರ ನೆರವಿಗೆ ಒದಗುವುದು; ಕಳೆದ 8–10 ವರ್ಷಗಳಿಂದ

6. ವಿಧಾನ ಸಭಾ ನಡವಳಿಕೆಗಳು, ಸಂಪುಟ 8, ಭಾಗ 2, (4–8–2001), ಪು. 475–534

ಕಪ್ಪು ತಲೆ ಹುಳದ ಕಾರಣ ತೆಂಗಿನ ಬೆಳೆಬಾರದೆ ರೈತರಿಗೆ ತೊಂದರೆ; ಕಳೆದೆರಡು ವರ್ಷಗಳಿಂದ ತೆಂಗಿಗೆ ನುಸಿಪೀಡೆ ತಗುಲಿ ಕಂಗಾಲಾಗಿರುವ ರೈತರು; ಮಲೇಷಿಯಾ, ಶ್ರೀಲಂಕಾ, ತಮಿಳುನಾಡು, ಕೇರಳ ಹಾಗು ಕರ್ನಾಟಕಕ್ಕೆ ಆವರಿಸಿರುವ ನುಸಿರೋಗ; ರಾಜ್ಯದಲ್ಲಿ ತೆಂಗು ಬೆಳೆಗಾರರು ನಡೆಸುತ್ತಿರುವ ವಾರ್ಷಿಕ 2 ಸಾವಿರ ಕೋಟಿ ವಹಿವಾಟು; ವಿಶ್ವವಾಣಿಜ್ಯ ಒಪ್ಪಂದದ ಕಾರಣ ತೆಂಗಿನ ಬೆಲೆ ಕುಸಿತ ಸುಮಾರು ಮೂರುಕೋಟಿ; ತೆಂಗಿನ ಮರಗಳಿಗೆ ನುಸಿಪೀಡೆ ತಗುಲಿ ಇಳುವರಿ ಕುಸಿತ ಹಾಗು ಮಾರುಕಟ್ಟೆಯಲ್ಲಿ ಮಾರಾಟವಾಗದಿರುವುದು ಹಾಗು ಶೇ. 50 ರಷ್ಟು ಬೆಲೆ ಕುಸಿತ; ನುಸಿರೋಗ ತಡೆಗಟ್ಟಲು ರಾಜ್ಯ ಸರ್ಕಾರದ ಪ್ರಯತ್ನ; ಮಾನೋಕ್ರೋಟೋಫಾಸ್, ಟ್ರೈಸೋಫಾಸ್, ನೀವರ್‌ಟ್ರೀಟ್ ಬಳಸಿದರೂ, ಸರ್ಕಾರ ನೀಡಿದ ಸಬ್ಸಿಡಿ ಯೋಜನೆಯಾದರೂ ನುಸಿರೋಗ ಕಡಿಮೆಯಾಗದಿರುವುದು; ಔಷಧಿಕೊಟ್ಟು 45 ದಿನಗಳ ಕಾಲ ಎಳನೀರು, ತೆಂಗಿನಕಾಯಿ ಬಳಸಿದರೆ ದೇಹಬಾಧೆ ಬರುವ ಕಾರಣ ಕೀಳಬಾರದೆನ್ನುವ ತಜ್ಞರ ಸಲಹೆಯನ್ನು ಸ್ವತಃ ಅನುಸರಿಸಿದರೂ ಪ್ರಯೋಜನವಾಗದಿರುವುದು; ಆರ್ಥಿಕ ಉದ್ದೇಶದಿಂದ ಬೆಳೆಸಿದ ತೆಂಗಿಗೆ ನುಸಿರೋಗ ಬಂತೆಂದು ಕಡಿದು ಬೇರೆ ಬೆಳೆ ಬೆಳೆದು ಇಂಟರ್‌ಕ್ರಾಪ್ ಮಾಡಲು ಸಾಧ್ಯವಿಲ್ಲದಿರುವುದು; ಕಳೆದ 3–4 ತಿಂಗಳುಗಳಿಂದ ರೈತರು ತಮ್ಮದೇ ಮಾರ್ಗ ಕಂಡುಕೊಂಡು ಸ್ವಯಂಪ್ರೇರಣೆಯಿಂದ ನೀರಾ ಇಳಿಸುವ ಕಾರ್ಯ ಆರಂಭಿಸಿರುವುದು; ವರ್ಷದಲ್ಲಿ 12 ಹೊಂಬಾಳೆಗಳು ತೆಂಗಿನ ಮರದಲ್ಲಿ ಬಿಡುವಲ್ಲಿ, ತಲಾ 8.12 ತೆಂಗಿನಕಾಯಿ ಬರುತ್ತವೆಂದರೂ ಕನಿಷ್ಠ ಎಂದರೂ 80 ಕಾಯಿಗಳು ಆರೋಗ್ಯ ಪೂರ್ಣ ಮರದಲ್ಲಿ ಬರುವ ಸಂದರ್ಭದಲ್ಲಿ 15–25 ಕಾಯಿಗಳನ್ನು ವಾರ್ಷಿಕವಾಗಿ ಪಡೆಯಲು ದುರ್ಲಭವಾಗಿರುವುದು, ಗಾತ್ರವೂ ಕಡಿಮೆಯಾಗಿರುವುದು; ತೆಂಗಿನ ಉತ್ಪನ್ನಗಳಾದ ಮಟ್ಟೆ ಹಾಗು ನಾರಿನ ಮೇಲೆ ಅನೇಕ ಫ್ಯಾಕ್ಟರಿಗಳು ಹಾಗು ಕಾರ್ಮಿಕರು ಅವಲಂಬಿತರಿದ್ದು ಅವರಿಗೂ ತೊಂದರೆ ಆಗಿರುವುದು; ನೀರಾ ಇಳಿಸಿ ನೀರಾ ಆಗಿಯೇ ಕುಡಿದರೆ ಸಕ್ಕರೆ ಖಾಯಿಲೆ, ಗ್ಯಾಸ್ಟ್ರಿಕ್ ಹಾಗು ಇತರ ಕಾಯಿಲೆಗಳು ವಾಸಿಯಾಗುತ್ತವೆ ಎಂಬ ವಾಸ್ತವ ಅಭಿಪ್ರಾಯ; ತೆಂಗಿನ ಮರಕ್ಕೆ ಸರ್ಕಾರ ಕೊಟ್ಟಿರುವ ಔಷಧಿಯನ್ನು ಪ್ರತಿವರ್ಷ ಸಿಂಪಡಿಸಿದರೆ ಮರ ಹಾಳಾಗುವಿಕೆ ಹಾಗು ಔಷಧಿ ವಾಸನೆಯಿಂದ ಒಂದು ವಾರದವರೆಗೆ ಜಮೀನಿನಲ್ಲಿ ಓಡಾಡಲಾಗದೆ ತಲೆಸುತ್ತು ಬರುವಿಕೆ; ನೀರಾ ಇಳಿಕೆಗೆ ಅನುಮತಿ ಕೊಟ್ಟಕೂಡಲೆ ಯಾರೂ ಎಲ್ಲಾ ಮರಗಳಿಂದ ನೀರಾ ಇಳಿಸಹೋಗದಿರುವುದು; ಒಂದು ತೆಂಗಿನ ಮರದಿಂದ ನಾಲ್ಕು ತಿಂಗಳು ಮಾತ್ರ ನೀರಾ ಇಳಿಸಲು

ಸಾಧ್ಯವಿರುವುದು; ಆರೋಗ್ಯಪೂರ್ಣ ಮರದಿಂದ ಮಾತ್ರ ನೀರಾ ಬರುವ ಸಾಧ್ಯತೆ; ಕೇರಳದಲ್ಲಿ ಅರ್ರ್ಯಾಕ್ ಇಲ್ಲದೆ ಸೇಂದಿಯೇ ಚಾಲನೆಯಲ್ಲಿದ್ದು ಕೋಆಪರೇಟಿವ್ ಸೊಸೈಟಿಗಳು; ಗುತ್ತಿಗೆ ರೂಪದಲ್ಲಿ ತೆಂಗಿನ ತೋಟಗಳನ್ನು ಪಡೆದು ನೀರಾ ಇಳಿಸಿ ಮಾರುಕಟ್ಟೆಗೆ ತಂದು ಮಾರುತ್ತಿರುವುದು; ಯಾವುದೇ ರೀತಿಯ ಎಕ್ಸೈಸ್ ಆಕ್ಷನ್ ಅಲ್ಲದಿರುವುದು; ಅದೇ ರೀತಿ ಕರ್ನಾಟಕದಲ್ಲಿಯೂ ಜಾರಿಗೆ ತರುವುದು; ನೀರಾವನ್ನು ಸೇಂದಿಯಾಗಿ ಪರಿವರ್ತನೆ ಮಾಡಿ ಮಾರಿದರೂ ಕೇವಲ ನಾಲ್ಕು ಪರ್ಸೆಂಟ್ ಆಲ್ಕೋಹಾಲ್ ಇರುವುದರಿಂದ ಕೆಟ್ಟದ್ದೇನೋ ಆಗದಿರುವುದು; ಸಾರಾಯಿಯಷ್ಟು ಆರೋಗ್ಯಕ್ಕೆ ಹಾನಿಕರವಾಗದಿರುವುದು; ನುಸಿರೋಗವನ್ನು ತಡೆಹಿಡಿಯಲು ಸಾಧ್ಯವಿಲ್ಲ, ಅದೊಂದು ಅಂತರಾಷ್ಟ್ರೀಯ ಪೀಡೆ ಎಂಬ ಅಭಿಪ್ರಾಯವನ್ನು ಕೃಷಿವಿಶ್ವವಿದ್ಯಾಲಯದ ಹಾಗೂ ಅಂಟೋಮಾಲಜಿ ಪ್ರಾಧ್ಯಾಪಕರಂತಹ ತಜ್ಞರು ವ್ಯಕ್ತ ಪಡಿಸಿರುವುದು; ನೀರಾ ಇಳಿಸಿ ಆಕ್ಷನ್ ಮಾಡಿದರೆ ಸರ್ಕಾರಕ್ಕೆ ಆರ್ಥಿಕ ಹಿನ್ನಡೆ, ಅದರಿಂದ ಗೊಂದಲ ಎಂಬ ಭಾವನೆ ಇದ್ದರೆ ಏಕಕಾಲದಲ್ಲಿ ತೆಂಗಿನ ಮರದ ಹೊಂಬಾಳೆಗಳನ್ನು ಕತ್ತರಿಸಿ **(ಕಾಯಿ ಬಿಡುವ ಗೊಂಚಲಿನ ಸಂದಿಯಲ್ಲಿಯೇ ನುಸಿ ಬಂದು ಸೇರುವ ಕಾರಣ)** ಹಾಕುವುದು; ಸರಾಸರಿ ಮರಕ್ಕೆ 100 ಕಾಯಿ ಬಂದರೆ ಇಂದಿನ ರೇಟ್‌ನಲ್ಲಿ 250ರೂ ಒದಗುವಲ್ಲಿ, ಅದಕ್ಕೆ ಶೇ.50 ರಷ್ಟು ಎಂದರೆ 100ರಿಂದ 150ರೂ ಪರಿಹಾರವನ್ನು ರೈತರಿಗೆ ಕೊಡುವುದು; ಈಗಾಗಲೇ ಔಷಧದ ಸಿಂಪರಣೆಗೆ 4 ಕೋಟಿ ಖರ್ಚಾದರೂ ಪರಿಣಾಮರಹಿತವಾಗಿರುವುದು; ಸದ್ಯದ ತಮ್ಮ ಸಲಹೆಯ ರೀತ್ಯಾ 700 (ಏಳುನೂರು) ಕೋಟಿ ರೂ. ವೆಚ್ಚವು ಸರ್ಕಾರಕ್ಕೆ ಹೊರೆ ಎಂದರೆ ಕೇಂದ್ರಸರ್ಕಾರದ ಸೆಂಟ್ರಲ್ ಕೋಕೋನಟ್ ಬೋರ್ಡ್ ನಿಂದ ಯೋಜನೆಗೆ ಒದಗುವ 25–30 ಪರ್ಸೆಂಟ್ ಶೇರ್ ಪಡೆದು ನೆರವುಗಳಿಸಿ ರೈತರಿಗೆ ಪರಿಹಾರ ಹಣಕೊಡುವುದು, ತೆಂಗಿನ ಮರದ ಹೊಂಬಾಳೆಗಳನ್ನು ಒಂದೇ ಸಲ ಕಡಿದು ಹಾಕಿದರೆ ರೋಗ ನಿಯಂತ್ರಣಕ್ಕೆ ಬರಬಹುದೇ ಹೊರತು ಔಷಧಿಯಿಂದ ನಿಯಂತ್ರಣಕ್ಕೆ ಬರುವ ಸಾಧ್ಯತೆ ಇಲ್ಲದಿರುವುದು – ಈ ಬಗೆಗೆಲ್ಲ ಕುರಿತು ಮಾತನಾಡಿದರು. ಈ ಬಗ್ಗೆ ಶ್ರೀ **ಕೆ.ಎಚ್.ಹನುಮೇಗೌಡರು,** ಸ್ಪಷ್ಟನೆ ಬಯಸುತ್ತ; ನುಸಿರೋಗ ಬ್ಯಾಕ್ಟೀರಿಯಾದಿಂದ ಬರತಕ್ಕಂಥ ಕಾಯಿಲೆ ಎಂಬ ಅಭಿಪ್ರಾಯವೂ ಇದೆ. ಈ ಬ್ಯಾಕ್ಟೀರಿಯಾ ಮನುಷ್ಯನಿಗೆ ತಗಲುವುದಿಲ್ಲ ಎಂಬ ಬಗ್ಗೆ ವೈಜ್ಞಾನಿಕವಾಗಿ ಸಾಧಿಸಲ್ಪಟ್ಟರೆ ಒಪ್ಪಬಹುದು. ನೀರಾವನ್ನು ನಮ್ಮವರಾರಿಗೂ ಕುಡಿಸದೆ ಮುಗ್ಧ ಜನರ ಮೇಲೆ ಪ್ರಯೋಗ ಮಾಡಹೊರಟಿರುವುದು ಪಾಪದ ಕೆಲಸ ಎಂದರು.

**ಶ್ರೀ ಹೆಚ್.ಎಸ್. ಮಹದೇವಪ್ರಸಾದ್** ಅವರು ಈ ಬಗ್ಗೆ ಪ್ರತಿಕ್ರಿಯಿಸುತ್ತ, ಸಾರಾಯಿ ಆಕ್ಷನ್ ಬಿಡ್‌ನಲ್ಲಿ ಮೂರುಸಲ of ಆಕ್ಷನ್ ಮಾಡಿ ಬೆಂಗಳೂರಿನಲ್ಲಿ 47 ಲಕ್ಷಕ್ಕೆ ತೆಗೆದುಕೊಳ್ಳಲೇಬೇಕೆಂದು ಸರ್ಕಾರ ಒತ್ತಾಯ ಮಾಡಿದ್ದು ಏಕೆ? ಎಂದು ಕೇಳಿದರು. ನಂತರ ಮುಂದುವರಿದು ಸದ್ಯ ತೆಂಗು ಬೆಳೆಗಾರರ ಸಮಸ್ಯೆಗೆ ಪರಿಹಾರ ಹುಡುಕುವುದಾಗಿದೆ. ಬ್ಯಾಕ್ಟೀರಿಯಾವು ಹೊಂಬಾಳೆಯಿಂದ ಆಚೆ ಕಡಿಯತಕ್ಕಂಥ ಕಾಯಿಯ ಕಾಪಿನ ಸಂದಿಗೆ ಬಂದು ಸೇರುವಂಥದ್ದು. ಹೊಂಬಾಳೆಯನ್ನಷ್ಟನ್ನೆ ಕತ್ತರಿಸಿದರೆ ಆ ಬ್ಯಾಕ್ಟೀರಿಯ ಮರಕ್ಕೆ ಬರುವ ಪ್ರಶ್ನೆಯೇ ಇಲ್ಲ. ಅಂತಾಗಿ ಅದಕ್ಕೆ ಮಡಕೆ ಕಟ್ಟಿ ನೀರಾ ಇಳಿಸುವ ಪ್ರಯತ್ನ ಮಾಡಬಹುದು. ಹೀಗಾಗಿ ಬ್ಯಾಕ್ಟೀರಿಯಾಕ್ಕೂ, ನೀರಾ ಇಳಿಸುವುದಕ್ಕೂ ಸಂಬಂಧವಿಲ್ಲ. ಬೆಳಗಿನ ಜಾವ ನಾಲ್ಕುವರೆಯಿಂದ ಐದುಗಂಟೆಯಲ್ಲಿ ದ್ರಾಕ್ಷಿ, ಗೋಡಂಬಿ ಕಲ್ಲು ಸಕ್ಕರೆಯನ್ನು ಶುಭ್ರವಾದ ಮಡಕೆಯಲ್ಲಿಟ್ಟು ನೀರಾ ಇಳಿಸಿ ಕುಡಿದರೆ ಆರೋಗ್ಯಕ್ಕೆ ಒಳಿತು ಎಂಬ ಪದ್ಧತಿ ಇದೆ. ಸರ್ಕಾರದವರು ಕೊಡುವ ಮೂರು ಹಂತದ ಔಷಧವಾಗಿ, ಬೇರಿಗೆ, ಗೆಡ್ಡೆಗೆ ಔಷಧಿಯನ್ನು ಹಾಗು ಬೇವಿನ ಹಿಂಡಿಯನ್ನು ಗಿಡದ ಸುತ್ತ ಹಾಕುವುದು; ಇದಕ್ಕೆ ರೂಲ್ಸ್ ಎಂದರೆ ತಂಗು ಬೆಳೆಯುವ ರೈತ ಆರ್.ಟಿ.ಸಿ ತೆಗೆದುಕೊಂಡು, ತೋಟಗಾರಿಕೆ ಇಲಾಖೆಯಿಂದ ಪರ್ಮಿಟ್ ತೋರಿಸಿ ಔಷಧಿಕೊಳ್ಳುವುದು; ಸರ್ಕಾರ ಕೊಡುವ 50 ಪರ್ಸೆಂಟ್ ಸಬ್ಸಿಡಿ ಆರ್.ಟಿ.ಸಿ ಪರ್ಮಿಟ್ ಪಡೆದುಕೊಳ್ಳುವಲ್ಲಿಯೆ ಖರ್ಚಾಗುವ ಕಾರಣ ಈ ಬಗ್ಗೆ ರೈತರು, ಆಸಕ್ತಿ ತೋರದಿರುವುದು; ಒಂದು ಪಕ್ಷ ಖಾಸಗಿ ಏಜೆನ್ಸಿಯವರು ಸರ್ವವ್ಯಾಪಿಯಾಗಿ ಕೆಲಸ ಕೈಗೊಂಡು ನುಸಿರೋಗ ಹೋಗಿಸುವ ಪ್ರಯತ್ನ ಮಾಡಲು ಮುಂದೆ ಬಂದರೆ, ಗ್ಯಾರಂಟಿ ಒಂದು ವರ್ಷ ಕೊಟ್ಟರೆ ಒಪ್ಪಂದಮಾಡಿಕೊಂಡು ಅವಕಾಶ ನೀಡುವುದು; ಬಯಲು ಪ್ರದೇಶದಲ್ಲಿ ನೀರಾವರಿ ಯೋಜನೆ ಇಲ್ಲದೆ ಇರುವಂಥ ತಾಲೂಕುಗಳಲ್ಲಿ ಬರಗಾಲದಲ್ಲಿ ತೆಂಗು ಆಶಾದಾಯಕ ಬೆಳೆಆದ ಕಾರಣ, ಅಷ್ಟು ಇಷ್ಟು ವರಮಾನ ಕಾಣುವುದು; ನೀರಾವರಿ ಪ್ರದೇಶದಲ್ಲಿ ತೆಂಗಿನ ಬೆಳೆಯ ನುಸಿರೋಗದ ಬಗ್ಗೆ ಚಿಂತೆಯೆ ಇಲ್ಲದಿರುವುದು; ಹನಿ ನೀರಾವರಿ ಯೋಜನೆಯಲ್ಲಿ ಮೊದಲಿಗೆ ಶೆ.70 ರಷ್ಟು, ಎಸ್.ಸಿ/ಎಸ್.ಟಿ ಗುಂಪಿಗೆ ಶೇ.90ರಷ್ಟು ಸಬ್ಸಿಡಿ ಕೊಟ್ಟು ನಂತರ ಅವುಗಳಲ್ಲಿ ಸರ್ಕಾರ ಸುಮಾರು ಅರ್ಧದಷ್ಟು ಕಡಿತಗೊಳಿಸಿದ ಕಾರಣ ಎಲ್ಲರೂ ಡ್ರಿಪ್ ಹಾಕಿಸುವುದನ್ನು ಬಿಟ್ಟಿದ್ದು; ಸ್ವಕ್ಷೇತ್ರ ಚಾಮರಾಜನಗರದಲ್ಲಿ 15 ಸಾವಿರ ಹೆಕ್ಟೇರ್ ಪ್ರದೇಶದಲ್ಲಿ 18 ಲಕ್ಷ ತೆಂಗಿನ ಮರಗಳನ್ನು ಬೆಳೆದಿದ್ದು, 40 ಸಾವಿರ ರೈತರು ಅದನ್ನವಲಂಬಿಸಿ ಜೀವನ ನಡೆಸುತ್ತಿರುವುದು; ಈ ತೆಂಗು ಬೆಳೆ ಬಿಟ್ಟು ಬೇರೆ ಬೆಳೆ ಸಾಧ್ಯವಿಲ್ಲದಿರುವಾಗ

ರೈತರನ್ನು ಕಾಡುತ್ತಿರುವ ಸಮಸ್ಯೆ; ಸರ್ಕಾರ ಔಷಧ ಸಿಂಪಡಿಸಬೇಕೆನ್ನುವ ಪ್ರಚಾರ ಬಿಟ್ಟು ಪರ್ಯಾಯ ಮಾರ್ಗೋಪಾಯಗಳನ್ನೂ ಹುಡುಕದಿರುವುದು; ಸರ್ಕಾರವು ಶಾಸಕರನ್ನೊಳಗೊಂಡ ಸದನ ಸಮಿತಿ ಮಾಡಿ ನೆರೆ ರಾಜ್ಯಗಳು ನುಸಿರೋಗ ನಿವಾರಣೆಗಾಗಿ ಹಾಕಿಕೊಂಡಿರುವ ಕಾರ್ಯಕ್ರಮಗಳನ್ನು ತಿಳಿದು ಬರಲು ಕಳುಹಿಸಿ ವಿವರಗಳನ್ನು ಪಡೆಯಬೇಕಾಗಿದ್ದ ಪ್ರಯತ್ನಮಾಡದಿರುವುದು; ಅದರಿಂದಾಗಿ ರೈತರು ರೊಚ್ಚಿಗೆದ್ದು, ಶಾಸಕರು ಮನೆಗಳಿಗೂ ಲಗ್ಗೆ ಹಾಕುತ್ತಿರುವುದು; ಈ ಬಗ್ಗೆ ಸರ್ಕಾರದಿಂದ ಉತ್ತರ ಪಡೆಯದೆ ಊರಿಗೆ ಶಾಸಕರು ಹಿಂದಿರುಗಿದರೆ ಒದಗುವ ಪರಿಸ್ಥಿತಿ; ಚಳುವಳಿಯಲ್ಲಿ ತೊಡಗಿರುವಂಥ ರೈತರಿಗೆ ಸ್ಪಷ್ಟವಾದ ನಿರ್ದೇಶನವನ್ನು ಸರ್ಕಾರ ಕೊಡಬೇಕಿರುವುದು; ರೈತರು ತೋಟದಲ್ಲಿ ನೀರಾ ಕಟ್ಟುವಾಗ ಮಡಿಕೆಯನ್ನು ಶಾಸಕರೇ ಕಟ್ಟಬೇಕೆಂದು ಕರೆದಾಗ ಒದಗುವ ಸಂದಿಗ್ಧತೆ; ಚನ್ನಪಟ್ಟಣ ತಾಲೂಕಿನಲ್ಲಿ ಸಾವಿರ ಮರಕ್ಕೆ ಮಡಕೆ ಕಟ್ಟಿ ನೀರಾ ಇಳಿಸುವಲ್ಲಿ ಸಹಕಾರಿ ಸಚಿವರ ಹಾಗು ಮಾನ್ಯ ಮುಖ್ಯಮಂತ್ರಿಗಳ ಬೆಂಬಲವಿದೆ ಎಂದು 'ವಿಜಯಕರ್ನಾಟಕ' ಪತ್ರಿಕೆಯಲ್ಲಿ ಬಂದಿರುವುದನ್ನು ರೈತರು ಓದುವಾಗ ಅವರ ಮನಸ್ಸಿನ ಮೇಲೆ ಆಗುವ ಪರಿಣಾಮ; ಸರ್ಕಾರ ಈ ಬಗ್ಗೆ ಗಂಭೀರವಾಗಿ ಯೋಚಿಸಿ ಪರಿಹಾರ ಮಾರ್ಗ ಕಂಡುಹಿಡಿಯಬೇಕಾದ್ದು ಹಾಗು ತೆಂಗಿನ ಮರಕ್ಕೆ ಇಂತಿಷ್ಟು ಹಣವೆಂದು ಮೀಸಲು ಕೊಡುವುದು; ಪ್ರತಿ ತಾಲೂಕು ಕೇಂದ್ರಗಳಲ್ಲಿ ಈ ಕಾರಣಗಳಿಂದ ರಸ್ತೆ ತಡೆ ಚಳುವಳಿ, ಡಿ.ಸಿ.ಕಛೇರಿ ಮುತ್ತಿಗೆ ಹಾಕುತ್ತಿರುವುದು; ಈ ಸಮಸ್ಯೆಗಳನ್ನೆಲ್ಲ ಗಂಭೀರವಾಗಿ ಪರಿಗಣಿಸಿ ರೈತರಿಗೆ ಸರ್ಕಾರ ನೆರವಾಗಬೇಕು, ಎಂದೆಲ್ಲ ಹೇಳಿ ತಮ್ಮ ಮಾತಿಗೆ ವಿರಾಮ ನೀಡಿದರು.

ಮಧ್ಯಾಹ್ನ ಮೂರುಗಂಟೆಗೆ **ಶ್ರೀ ಎಂ.ವಿ.ವೆಂಕಟಪ್ಪನವರ** ಅಧ್ಯಕ್ಷತೆಯಲ್ಲಿ ನಡೆದ ಸಮಾವೇಶದಲ್ಲಿ ನಿಯಮ 69ರ ಮೇಲೆ ತೆಂಗಿನ ಮರಗಳಿಂದ ನೀರಾ ಇಳಿಸಲು ಅನುಮತಿ ನೀಡುವ ಬಗ್ಗೆ ಚರ್ಚೆ ಮುಂದುವರಿಯಿತು. ಈ ಚರ್ಚೆಯಲ್ಲಿ ಪಾಲ್ಗೊಂಡ **ಶ್ರೀ ಕೆ.ಎಂ.ಕೃಷ್ಣಮೂರ್ತಿ** ಅವರು: ನುಸಿರೋಗವಿಲ್ಲದಿದ್ದರೆ ನೀರಾ ಇಳಿಸುವ ಸಮಸ್ಯೆ ಇರದಿರುವುದು; 1988ರಲ್ಲಿ ಸೇಂದಿಯನ್ನು ಪ್ರಾಹಿಬಿಷನ್ ಮಾಡಿದ ಮೇಲೆ ನೀರಾ ಮತ್ತು ಸೇಂದಿಯನ್ನು ಮರೆತ ಜನತೆ; ರೈತರ ಭಾವನೆಗಳನ್ನು ಕೃಷಿ – ತೋಟಗಾರಿಕಾ ಸಚಿವರಿಗೆ ತಿಳಿಸಬೇಕಾದ ಅವಶ್ಯಕತೆ; ತೆಂಗಿನ ಮರದ 25 ಹಸಿರುಗರಿಗಳಲ್ಲಿ, ಎರಡು ಹಸಿರು ಎಡೆಮಟ್ಟೆ ಮಧ್ಯೆ ಹೊಂಬಾಳೆಯು ಮುಂಗಾರಿನಲ್ಲಿ 4, ಮಧ್ಯದ ಅವಧಿಯಲ್ಲಿ 4, ಡಿಸೆಂಬರ್‌ನಿಂದ ಫೆಬ್ರವರಿಯಲ್ಲಿ

4 ಬರುವುದು; ನುಸಿರೋಗ ತೆಂಗಿನ ಮರಕ್ಕೆ ಬರದೆ ಹೊಂಬಾಳೆಯಲ್ಲಿ ಉತ್ಪತ್ತಿಯಾಗಿ ಆರಂಭದಲ್ಲಿಯೆ ಅದನ್ನು ತಿನ್ನುವುದು; ನುಸಿ ಎಂಬ ಫಂಗೈ ಬಹಳ ಕಡಿಮೆ ಆವರಿಸಿಕೊಂಡರೆ ತೆಂಗಿನ ಮರದಲ್ಲಿ 25–30 ತೆಂಗಿನ ಕಾಯಿ ತೆಗೆದುಕೊಳ್ಳಲು ಇರುವ ಸಾಧ್ಯತೆ; ನೀರಾ ಇಳಿಸುವಿಕೆಯಿಂದ ರೈತರ ಆರ್ಥಿಕ ಪರಿಸ್ಥಿತಿ ಸುಧಾರಣೆ, ಸಬ್ಸಿಡಿ ಬದಲು ಬೆಂಬಲ ಬೆಲೆಯನ್ನು ಬಂದಂಥ ಬೆಳೆಗೆ ಕೇಳಿದ್ದುದು; ಕೊಬ್ಬರಿಗೆ ಕೊಟ್ಟ ಬೆಂಬಲ ಬೆಲೆ ಒಂದೇ ಜಿಲ್ಲೆಗೆ ಅನುಕೂಲವಾಗಿ ಬೇರೆ ತಾಲೂಕಿನವರಿಗೆ ಆಗದೆ ವರ್ತಕರು ರೈತರಿಂದ 220 ರೂ.ಗಳಿಗೆ ಕೊಬ್ಬರಿ ಕೊಂಡುಕೊಂಡು ಮೂರುವರೆ ಸಾವಿರ ರೂಗಳಿಗೆ ನೆಫೆಡ್‌ಗೆ ಮಾರಿಕೊಂಡಂತೆ ರೈತರಿಗೆ ಸಾಧ್ಯವಾಗದಿದ್ದುದು; ಸರ್ಕಾರ ಇದನ್ನು ಗಮನಿಸದಿರುವುದು; ನುಸಿರೋಗ, ಕಪ್ಪುತಲೆ ಹುಳು ಬಂದರೂ ಬದುಕುವ ತೆಂಗಿನಮರ **ಸ್ಟೆಮ್‌ಬ್ಲೀಡಿಂಗ್** ಆದರೆ ಅದು ಉಳಿಯಲು ಸಾಧ್ಯವಿಲ್ಲದಿರುವುದು; ತೆಂಗು ಬೆಳೆಯುವುದರಿಂದ ಉಪಯೋಗವಿಲ್ಲವೆಂಬ ಭಾವನೆ ರೈತರಿಗೆ ಬಂದಿರುವುದು; ಚಿಕ್ಕಮಗಳೂರು ಜಿಲ್ಲೆಗೆ 62 ಲಕ್ಷ ರೂಗಳನ್ನು ಕೊಟ್ಟರೂ ಅಧಿಕಾರಿಗಳು ಬಳಸದಿರುವುದು; **ಮಾನೋಕ್ರೋಟೋಪಾಸ್ ಎಂಬ ಎನರ್ಜಿ ಪೌಡರ್** ಅನ್ನು 6 ತಿಂಗಳಿಗೊಮ್ಮೆ ಪುನಃ ಪುನಃ ಬಳಸಿ ರೋಗವನ್ನು ನಿಯಂತ್ರಿಸುವುದು; ನೀರಾವು 9 ಗಂಟೆಯ ಮೇಲೆ ಸೇಂದಿ ಆದಾಗ, 'ಸಿ' ಮತ್ತು 'ಡಿ' ಅನ್ನಾಂಗ ಹೊಂದಿ ಲಿವರ್‌ಗೆ ಪುಷ್ಟಿಕರ ಎನ್ನುವ ವೈದ್ಯರ ಮಾತು; ನುಸಿರೋಗ ತಗಲುವುದು 1 1/2 ತಿಂಗಳಿನ ಎಳೆಯ ಬಡ್ಡಿಂಗ್‌ಗೆ ಮಾತ್ರವೇ ವಿನಾ, ಬಡ್ಡಿಂಗ್ ಬಲಿತ ಮೇಲೆ ನುಸಿರೋಗ ಪರಿಣಾಮ ರಹಿತವಾಗುವುದು; ಇವೊತ್ತು ಸರ್ಕಾರದ ವಿರುದ್ಧ ರೈತರು ತಿರುಗಿ ಬಿದ್ದಿರುವುದು; ತೆಂಗಿನ ಬೆಳೆ ವಿಫಲವಾಗಿ ಉಳಿದಿರುವ ಬೆಳೆಗೆ ಪಕ್ಷಿಗಳ ಕಾಟ, ಮಂಗಗಳ ಕಾಟ, ಮಾರುಕಟ್ಟೆಯಲ್ಲಿ ಮಾನವನ ಕಾಟ ಎಂದಾಗಿರುವುದು; ರಾಜ್ಯದಲ್ಲಿ ತೆಂಗು ಬೆಳೆಯುವ ಭಾಗದಲ್ಲಿ ಉತ್ಪಾದನೆ ಆಗುವಂಥ ಕೊಬ್ಬರಿ ಅಥವಾ ತೆಂಗಿನ ಕಾಯಿಯನ್ನು ನೆಫಡ್ ಸಂಸ್ಥೆಯವರು ತೆಗೆದುಕೊಂಡರೆ ನೀರಾ ಇಳಿಸುವ ಕೆಲಸದ ಅಗತ್ಯವಿಲ್ಲದಿರುವುದು; ಸೇಂದಿ ಇಳಿಸುವಾಗ ತೆಂಗಿನ ಗರಿ ಹಾಗು 12 ಹೊಂಬಾಳೆಯನ್ನು ಕತ್ತರಿಸುವುದು, ಒಂದು ಹೊಂಬಾಳೆಯಲ್ಲಿ ಅರ್ಧಭಾಗ ಬಿಟ್ಟು ಮಾನೋಕಾಟ್ ಮತ್ತು ಡ್ರೈಕಾಟ್ ಸ್ಟೆಮ್ ಮುಖಾಂತರ ಸೇಂದಿಯನ್ನು ಎಕ್ಸ್‌ಟ್ರಾಕ್ಟ್ ಮಾಡುವ ಪದ್ಧತಿ ಇದ್ದು ಅದರಿಂದ ತೆಂಗಿನ ಮರಗಳು ಕೂಡ ಹಾಳಾಗದಿರುವುದು; ರೈತರ ಅನುಭವದ ರೀತ್ಯಾ ಸೇಂದಿ ಇಳಿಸತಕ್ಕಂಥ ಮರಗಳಿಗೆ ಎರಡು ವರ್ಷಗಳವರೆಗೆ ಸೂಕ್ತ ಪೋಷಣೆ ಮಾಡಿದರೆ ಯಥೇಚ್ಛ ಫಸಲು ಬರುವ ವಿಷಯ; ಅಬ್ಕಾರಿ

ಲಾಬಿಗೆ ಹೆದರಿಕೊಂಡು ರಾಜ್ಯದ ಯಾವುದೇ ತಾಲೂಕನ್ನು ಪೈಲೆಟ್ ತಾಲೂಕು ಆಗಿ ನೀರಾ ಇಳಿಸುವ ಕಾರ್ಯಕ್ರಮವನ್ನು ಕೈಬಿಟ್ಟರೆ ರೈತರು ಹೋರಾಟ ಮಾಡುವಂತಾಗಿ ಪೋಲೀಸ್‌ನವರಾಗಲಿ, ಅಬ್ಕಾರಿಯವರಾಗಲಿ ಅವರನ್ನು ತಡೆಯಲು ಆಗದಿರುವ ಸನ್ನಿವೇಶ ಒದಗುವುದು; ಇವೊತ್ತು ಹೆಚ್ಚಾಗಿ ಪೆಸ್ಟಿಸೈಡ್ ಔಷಧಿಯನ್ನು ಹೊಡೆಯುತ್ತಿರುವುದರಿಂದ ಪರಿಸರ ಹಾಳಾಗುವುದು, ನಮ್ಮಲ್ಲಿ ಗುಬ್ಬಚ್ಚಿಯೂ ಬರದಂತಾಗಿರುವುದು ಇತ್ಯಾದಿ ಕುರಿತೆಲ್ಲ ಹೇಳಿ ನೀರಾ ಇಳಿಸಲು ಸರ್ಕಾರ ಅನುಮತಿ ಕೊಡಬೇಕೆಂದು ನುಡಿದರು.

**ಶ್ರೀ ಡಿ.ಬಿ.ಸದಾನಂದ ಗೌಡ** ಅವರು ಮಾತನಾಡುತ್ತ: ನುಸಿರೋಗದ ಬಗ್ಗೆ ಕಳೆದ ಮೂರು ತಿಂಗಳಿನಿಂದ ಇಡೀ ರಾಜ್ಯದಲ್ಲಿ ರೈತರು ಚಳುವಳಿ ಮಾಡುತ್ತಿರುವುದು; ನೀರಾ ಇಳಿಸಲು ಸದ್ಯಕ್ಕೆ ಅನುಮತಿ ಕೊಡದಿರಲು ಸರ್ಕಾರ ಕ್ಯಾಬಿನೆಟ್‌ನಲ್ಲಿ ತೆಗೆದುಕೊಂಡಿರುವ ತೀರ್ಮಾನ ಹಾಗು ಅದು ಪತ್ರಿಕೆಯಲ್ಲಿ ಬಂದಿರುವುದು; ನೀರಾ ಇಳಿಸುವ ಬಗ್ಗೆ ಅನುಮತಿ ನೀಡುವುದು ಇಲ್ಲಿನ ಚರ್ಚೆಯಿಂದ ಬರತಕ್ಕಂಥ ತೀರ್ಮಾನವೇ ಅಂತಿಮವಾಗಬೇಕಿರುವುದು ವಿನಾ ಕ್ಯಾಬಿನೆಟ್‌ನಲ್ಲಿ ಬೇರೊಂದು ತೀರ್ಮಾನ ತೆಗೆದುಕೊಳ್ಳುವುದು ಅಸೂಕ್ತವಾಗುವುದು; ಸುಮಾರು ಆರು ತಿಂಗಳ ಕಾಲ ನೀರಾವನ್ನು ಕೆಡದಂತೆ ಇಡಬಹುದಾದದ್ದನ್ನು ಸಿಎಫ್‌ಟಿಆರ್.ಐನವರು ಹೇಳಿ ಪ್ರಯೋಗಗಳನ್ನು ಮಾಡುತ್ತಿರುವುದು; ಏಕ್‌ದಂ ನೀರಾ ಇಳಿಸಲಿಕ್ಕೆ ಅವಕಾಶವಿಲ್ಲವೆಂದು ಹೇಳುವುದು ಸರಿಯೆನಿಸದಿರುವುದು ಕೇವಲ ರಾಸಾಯನಿಕಗಳಿಂದ ನುಸಿಪೀಡೆ ತಡೆಗಟ್ಟಲು ಸಾಧ್ಯವಿಲ್ಲದಿರುವಲ್ಲಿ ಪ್ರಾಯೋಗಿಕವಾಗಿ ಎಲ್ಲಾ ತೆಂಗು ಬೆಳೆಗಾರರು ಏಕಕಾಲದಲ್ಲಿ ನೀರಾ ಇಳಿಸಿ ನುಸಿರೋಗ ತಡೆಗಟ್ಟುವುದು; ನೀರಾ ಇಳಿಸುವ ಮರಗಳಲ್ಲೆಲ್ಲ ರೋಗ ಕಡಿಮೆಯಾಗುವುದರ ಬಗ್ಗೆ ಕೀಟಶಾಸ್ತ್ರ ವಿಜ್ಞಾನಿಗಳು ಹೇಳಿರುವಲ್ಲಿ ಸರ್ಕಾರ ತಡಮಾಡದೆ ನೀರಾ ಇಳಿಸಲು ಅನುಮತಿ ನೀಡಬೇಕಿರುವುದು; ದ.ಕ.ಜಿಲ್ಲೆ ಹಾಗು ಕೇರಳ ರಾಜ್ಯದ ಕಾಸರಗೋಡು ಜಿಲ್ಲೆಗಳಲ್ಲಿ ಎಂಡೋಸಲ್ಫಾನ್ ಕಾರಣ ಭಾರಿ ಪ್ರತಿಭಟನೆ ನಡೆಯುತ್ತಿದ್ದು ಪುನಃ ಸಿಂಪರಣೆಗೆ ಬಿಡುವುದಿಲ್ಲ ಎಂದು ಜನರು ಎಚ್ಚರಿಕೆ ನೀಡಿರುವುದು; ರಸಾಯನಿಕ ಸಿಂಪರಣೆಯಿಂದ ತೆಂಗಿನ ಗಿಡದಲ್ಲಿಯೇ ಪರಾಗಸ್ಪರ್ಷಕ್ಕೆ ನೆರವಾಗಿದ್ದ ರೈತ ಮಿತ್ರರಾದ ಕೀಟ, ಚಿಟ್ಟೆಗಳು, ಪಕ್ಷಿಗಳು ಜೇನುನೊಣಗಳು ನಾಶವಾಗುವುದು; ಇರುವ 10 ಲಕ್ಷ ತೆಂಗಿನ ಮರಗಳಿಂದ ನೀರಾ ಇಳಿಸಿದರೆ ಮಾರುಕಟ್ಟೆ ವ್ಯವಸ್ಥೆ ಕಷ್ಟವಾಗುವುದು, ದ.ಕ. ಜಿಲ್ಲೆಯಲ್ಲಿ ನೀರಾದಿಂದ ಸಾವಿರಾರು ಯುವಕರಿಗೆ ಉದ್ಯೋಗ, ರೈತರಿಗೆ ಜೀವನಕ್ಕೆ ಆಧಾರ; ನೀರಾ ಇಳಿಸಿದರೆ ಮಾರ್ಕೆಟಿಂಗ್ ವ್ಯವಸ್ಥೆಯನ್ನು ಶಾಶ್ವತವಾಗಿ

ಮಾಡಬೇಕಿರುವುದು; ನೀರಾ ಇಳಿಸಲು ಒಪ್ಪಿಗೆ ಕೊಡುವುದು ಸೂಕ್ತ ಎಂಬ ಬಗೆಗೆಲ್ಲ ಹೇಳುತ್ತ ತಮ್ಮ ಮಾತನ್ನು ಮುಕ್ತಾಯಗೊಳಿಸಿದರು.

**ಶ್ರೀ ಬಿ.ಸೋಮಶೇಖರ್** ಅವರು, ಕರ್ನಾಟಕದಲ್ಲಿ ಶೇಕಡ 30 (ಮೂವತ್ತು)ರಷ್ಟು ತೆಂಗಿನ ಮರಗಳಿಗೆ ನುಸಿರೋಗ ಹತ್ತಿರುವ ಬಗ್ಗೆ ದೀರ್ಘ ಚರ್ಚೆ ಆಗುತ್ತಿರುವುದು; ನುಸಿರೋಗಕ್ಕೆ ಮೂರುವರೆ ಕೋಟಿ ಖರ್ಚು ಮಾಡಿಯೂ ಸುಧಾರಣೆ ಆಗಿ ತೆಂಗಿನ ಅಭಿವೃದ್ಧಿ ಆಗಿದೆಯಾ ಎಂಬ ಬಗ್ಗೆ ಸರ್ಕಾರ ಕೊಡಬೇಕಾದ ಉತ್ತರ; ಸಮಸ್ಯೆಗೆ ಐದಾರು ತಿಂಗಳಿಂದ ಪರಿಹಾರಕ್ಕೆ ಕಾಯ್ದ ರೈತರು ಉಪಯೋಗ ಕಾಣದೆ 14–15 ಜಿಲ್ಲೆಯ ತೆಂಗು ಬೆಳೆಗಾರರು ಬೀದಿಗಿಳಿದಿರುವುದು; ಇಡೀ ದೇಶದಲ್ಲಿ ತೆಂಗು ಬೆಳೆಯುವಲ್ಲಿ ಎರಡನೇ ಸ್ಥಾನದಲ್ಲಿರುವ ನಮ್ಮ ರಾಜ್ಯದಲ್ಲಿ 4 ಲಕ್ಷ 65 ಸಾವಿರ ಹೆಕ್ಟೇರ್‌ನಲ್ಲಿ ತೆಂಗು ಬೆಳೆಯು 300 ರಿಂದ 350 ಕೋಟಿಯಷ್ಟು ಆಗಬೇಕಾಗಿರುವ ಸಂದರ್ಭದಲ್ಲಿ ಶೇ. 30 ರಷ್ಟೂ ಬೆಳೆಯಾಗದೆ ರೈತರು ಕಂಗಾಲಾಗಿರುವುದು; ರೈತನಿಗೆ ಆಗುವ ನಷ್ಟಕ್ಕೆ ಪರಿಹಾರ ನೀಡದೆ ಬೇರೆ ಪರ್ಯಾಯ ವ್ಯವಸ್ಥೆ, ಮಾಡದಿರುವುದು; ರಾಜ್ಯದಾದ್ಯಂತ ಜನ ಬೀದಿಗಿಳಿದು ಪೋಲೀಸ್ ದಬ್ಬಾಳಿಕೆ ಆಗಿರುವುದು; ನೀರಾ ಇಳಿಸುವುದನ್ನು ತಾವೇ ಕೈಗೆತ್ತಿಕೊಂಡ ರೈತರಿಂದ ಕಾನೂನು ಭಂಗ ಆಗಿ ತೀಕ್ಷ್ಣ ರೂಪಕ್ಕೆ ವಿಷಯ ತಿರುಗಿರುವುದು; ಕ್ಯಾಬಿನೆಟ್‌ನಲ್ಲಿ ನೀರಾ ಇಳಿಕೆಗೆ ಅನುಮತಿ ಇಲ್ಲ ಎಂದು ತೀರ್ಮಾನ ತೆಗೆದುಕೊಂಡು, ಸದನದಲ್ಲಿ ಗೌರವ ಇಲ್ಲದಂತಾಗಿರುವುದು; ಕೀಟ ವಿಜ್ಞಾನಿಗಳ ವರದಿಯ ರೀತ್ಯಾ ತೆಂಗಿನ ಮರಗಳನ್ನು ಮೂರು ವರ್ಗವಾಗಿ ಮಾಡಬಹುದು; **ಒಂದು ವರ್ಗದಲ್ಲಿ ನುಸಿರೋಗ ತಟ್ಟದಿರುವಂಥವು, ಎರಡನೇ ವರ್ಗದಲ್ಲಿ ನುಸಿರೋಗ ಬಂದೂ ಕೆಲಮಟ್ಟಿಗೆ ತೆಂಗಿನ ಬೆಳೆ ಒದಗುವುದು, ಮೂರನೇ ವರ್ಗದಲ್ಲಿ ತೆಂಗಿನ ಕಾಯಿಯೇ ಉತ್ಪತ್ತಿಯಾಗದಿರುವುದು;** ರೈತರಿಗೆ ಅನ್ವಯಿಸುವ ಎರಡು ವಿಧಾನಗಳಲ್ಲಿ ಒಂದು ವಿಧಾನವು ಬೆಳೆ ಪಡೆದು ನೀರಾವನ್ನು ಬಳಸಬಹುದಾದದ್ದು ಇಲ್ಲಿ ಹೊಂಬಾಳೆ ಮೇಲೆ ನುಸಿ ಹುಳು ತಟ್ಟದು. ಕಾಯಿ ಬಿಟ್ಟಾಗ ರೋಗ ತಟ್ಟುತ್ತದೆ. ಅದಾಗಿ ಕಾಯಿ ಬಿಡುವ ಮೊದಲೇ ನೀರಾ ಇಳಿಸಿ ನುಸಿರೋಗ ತಡೆಯುವುದು. ಇನ್ನೊಂದು ವಿಧಾನದಲ್ಲಿ ಹದಿನೈದು ತಿಂಗಳ ಮಟ್ಟಿಗೆ ನೀರಾ ಇಳಿಸಿ ಮುಂದೆ ತೆಂಗಿನಕಾಯಿ ತೆಗೆದುಕೊಳ್ಳಬಹುದು. ಹಾಗಾಗಿ ಒಂದು ವರ್ಗದಲ್ಲಿ ಸಂಪೂರ್ಣವಾಗಿ ತೆಂಗು ಬೆಳೆಯಬಹುದೆನ್ನಲಾಗಿದೆ. ಇಳಿಸಿದ ನೀರಾವನ್ನು ಮಾರ್ಕೆಟಿಂಗ್ ಮಾಡುವ ವಿಧಾನವೆಂದರೆ ವರ್ಷದಲ್ಲಿ ಮರವೊಂದರಿಂದ 1200 ಲೀಟರ್ ನೀರಾ ಬರುವಲ್ಲಿ,

ನೀರಾದಿಂದ ಬೇರೆ ಏನೇನು ಪದಾರ್ಥಗಳನ್ನು ಮಾಡಬಹುದು? ಎಂಬ ಬಗ್ಗೆ ಮಾಹಿತಿಯನ್ನು ಬೇರೆ ರಾಜ್ಯಗಳಿಂದಲೂ ಪಡೆಯುವುದು; ಕೇರಳ, ಮಹಾರಾಷ್ಟ್ರ ಮುಂತಾದ ಕಡೆ ಗುಡಿಕೈಗಾರಿಕೆ ಎಂದು ಪರಿಗಣಿಸಿ, ತೆಂಗು ಬೆಳೆಗಾರರ ಸೊಸೈಟಿಗಳನ್ನು ಮಾಡಿಕೊಂಡು ನೀರಾ ಶೇಖರಣೆ ಮಾಡುತ್ತಾರೆ. **ನೀರಾದಿಂದ ಬೆಲ್ಲ, ಜೇನು ತಯಾರಿಕೆ ಹಾಗು ತಿಂಡಿಗಳನ್ನು ಮಾಡಬಹುದು. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಇದನ್ನು ಬಳಸಿ ಇಡ್ಲಿ ತಯಾರು ಮಾಡುತ್ತಾರೆ.** ಹೀಗೆ ಬೈಪ್ರಾಡಕ್ಟ್ ಮಾಡುವ ಬಗ್ಗೆ ಚಿಂತನೆ ಮಾಡುವುದು; ನೀರಾವನ್ನು ಪ್ರಿಸರ್ವ್ ಮಾಡುವ ಬಗ್ಗೆಯೂ ಚಿಂತಿಸಬೇಕು. ರೈತರಿಗಂತೂ ಸರ್ಕಾರ ನೀಡಿರುವ ಔಷಧಿಗಳಿಂದ ಸಮಾಧಾನ ಆಗಿಲ್ಲ. 3 1/2 ಕೋಟಿ ರೂ. ಖರ್ಚು ಮಾಡಿ ಮಾನೋಕ್ರೋಟೋಫಾಸ್ ಮತ್ತು ಬಬಿಕೋಫಾಸ್ ಸಿಂಪರಣೆಯಿಂದ ಸತ್ಪರಿಣಾಮ ಆಗಿಲ್ಲ. ಪೆಸ್ಟಿಸೈಡ್ ಮ್ಯಾನುಫ್ಯಾಕ್ಚರ್ಸ್‌ಗೆ ಅನ್ಯಾಯವಾಗಿ ಹಣ ಸುರಿಯಲಾಗುತ್ತಿದೆ. ಈ ದುಡ್ಡನ್ನು ರೀಸರ್ಚ್ ಹಾಗು ಅದರಿಂದ ಬೈಪ್ರಾಡಕ್ಟ್ ಉತ್ಪನ್ನದ ಬಗ್ಗೆ ಹೂಡುವುದು ಸೂಕ್ತ. ಜನರು ನಮ್ಮನ್ನು ವಿಧಾನ ಸಭೆಯಲ್ಲಿ ಇದನ್ನೆಲ್ಲ ಕೇಳಿ ಎಂದು ತರಾಟೆಗೆ ತೆಗೆದುಕೊಂಡಿದ್ದಾರೆ. ಸರ್ಕಾರ ಯಾರದೋ ಒತ್ತಡಕ್ಕೆ ಮಣಿದು ರೈತರ ಕಷ್ಟಕ್ಕೆ ಬರುತ್ತಿಲ್ಲ. ಹೋರಾಟ ಮಾಡಬೇಕೆಂದು ಅವರೆಲ್ಲ ಬೀದಿಗಿಳಿದಿದ್ದಾರೆ. ಎಷ್ಟೋ ಜನ ಅರೆಸ್ಟ್ ಆಗಿದ್ದಾರೆ. ಸದನದಲ್ಲಿ ಆಗಿರತಕ್ಕಂಥ ಚರ್ಚೆಯ ಆಧಾರದ ಮೇಲೆ, ಸಾರ್ವಜನಿಕ ಪ್ರತಿಭಟನೆಯ ಹಿನ್ನೆಲೆಯಲ್ಲಿ ನೀರಾ ಇಳಿಸಿ ಅನುಮತಿ ನೀಡಬೇಕು ಎಂದೆಲ್ಲ ಹೇಳಿ ಒತ್ತಾಯವಿಟ್ಟು ತಮ್ಮ ಮಾತನ್ನು ನಿಲ್ಲಿಸಿದರು.

**ಶ್ರೀ ಕೆ.ಶ್ರೀನಿವಾಸಗೌಡ** ಅವರು ತಮ್ಮ ಮಾತುಗಳನ್ನು ಮುಂದಿಟ್ಟು ನುಸಿರೋಗವನ್ನು ಎರಡುವರ್ಷವಾದರೂ ನಿಯಂತ್ರಣ ಮಾಡುವುದಕ್ಕಾಗದಿರುವಾಗ ಕನಿಷ್ಟ ನೀರಾ ಇಳಿಸಲಾದರೂ ಅವಕಾಶ ನೀಡುವುದು; ಇಲ್ಲಿ ಸಿಟ್‌ಲಿಕ್ಕರನ್ನು, ನವಸಾಗರ, ಯೂರಿಯಾ, ಬ್ಯಾಟರಿಸೆಲ್, ಚಪ್ಪಲಿ ಹಾಕಿ ಸಾರಾಯಿ ಮಾಡುವುದನ್ನು, ನಿಲ್ಲಿಸಿಲ್ಲದಿರುವುದು; ಇಂತಲ್ಲಿ ಕಲ್ಪವೃಕ್ಷದಲ್ಲಿ ಬರುವಂಥ ನೀರಾಗೆ ಅವಕಾಶ ನೀಡಿ ನುಸಿರೋಗ ತಡೆಗಟ್ಟಿ ಎಂದರೆ ಆಗದು ಎಂದರೆ ಹೇಗೆ ಎಂದು ಪ್ರಶ್ನಿಸಿದರು. ಇಂದು ಅರ್ಧಭಾಗದಷ್ಟು ಮರಗಳು ಸೌತ್‌ಕೆನರಾ, ನಾರ್ತ್ ಕೆನಾರಾದಲ್ಲಿ ಇದ್ದು ರೋಗ ಕಡಿಮೆ ಇರುವ ಕಾರಣವೆಂದರೆ ಮಳೆ ಜಾಸ್ತಿ, ಬಿಸಲೂಜಾಸ್ತಿ. ನುಸಿರೋಗ ಬಂದಿರುವ ಕಡೆ ನೀರಾವೋ, ಸೇಂದಿಯೋ ಮಾಡುವ ಪರ್ಸೆಂಟ್ ನಿರ್ಧರಿಸಿ ಅಬಕಾರಿ ಮಸೂದೆಯನ್ನು ತಿದ್ದುಪಡಿ ಮಾಡಿ. ನನ್ನ ಎರಡು ತೋಟಗಳಲ್ಲಿ 700

ತೆಂಗಿನ ಗಿಡಗಳಿಗೆ ಆರುಸಾರಿ ಮನೋಕ್ರಾಟೋಫಾಸ್, ಕೊಡಿಸಿ ಮೂರು ಸಾರಿ ಸಿಂಪರಣೆ ಮಾಡಿಸಿ, ಗರಿಗಳನ್ನೆಲ್ಲ ಕತ್ತರಿಸಿಟ್ಟರೂ ಮತ್ತೆ ರೋಗ ಬಂದಿದೆ. ಮಧ್ಯದಲ್ಲಿ ಬೆಳೆದ ಬಾಳೆಯನ್ನು ಕತ್ತರಿಸಿ ಸುಟ್ಟು ಹಾಕಿದರೂ ರೋಗ ಮತ್ತೆ ಬಂದಿದೆ. ಎಲ್ಲಾ ತೆಂಗಿನ ಮರಗಳನ್ನು ಕಡಿದು ಸಬ್ಸಿಡಿ ಕೊಟ್ಟುಬಿಡಿ. ಸದ್ಯ ನಮ್ಮಲ್ಲಿ ಆ ಜಾಗದಲ್ಲಿ ರೇಷ್ಮೆಯನ್ನೋ, ಮತ್ತೊಂದನ್ನೋ ಹಾಕಿಕೊಂಡು ಜೀವನ ಸಾಗಿಸುತ್ತಿದ್ದಾರೆ. ಈ ಪರಿಸ್ಥಿತಿಯಲ್ಲೂ ಸಹ ತೆಂಗಿನ ಮರ ಬೆಳೆಸಿ ದೊಡ್ಡದು ಮಾಡಿರುವಾಗ, ಜೆಸಿಬಿ ಯಂತ್ರ ತೆಗೆದುಕೊಂಡು ಹೋಗಿ ತಳ್ಳಬೇಕೆಂದು ಹೇಳಿದರೆ ರೈತನ ಗತಿ ಏನಾಗಬೇಕು? ಮಾಲೂರಿನಲ್ಲಿ ಶುರುವಾದ ಈ ರೋಗ 2 ವರ್ಷವಾದರೂ ನಿಯಂತ್ರಣವಾಗದಿರಲು, ನಷ್ಟವಾದ ಬೆಳೆ ನಷ್ಟವಾದ ಮರ, ಇವುಗಳ ಬಗ್ಗೆ ವೈಜ್ಞಾನಿಕ ಮಾಹಿತಿ ಇದೆಯೇ? ಎಂದು ಪ್ರಶ್ನಿಸಿದರು.

**ಶ್ರೀಮತಿ ಪಾರ್ವತಮ್ಮ ಶ್ರೀಕಂಠಯ್ಯ** ಅವರು ಬುಡದಿಂದ ತಲೆಯವರೆಗೂ ನುಸಿರೋಗ ಇರುವ ತೆಂಗಿನ ಮರದಿಂದ ನೀರಾ ಇಳಿಸಿದರೆ ಆ ರೋಗ ನೀರಾಗೆ ಬರುವುದಿಲ್ಲವೆ? ಆ ನೀರು ಕುಡಿದರೆ ಜನರ ಆರೋಗ್ಯಕ್ಕೆ ಹಾನಿ ಇಲ್ಲವೆ? ಈ ಬಗ್ಗೆ ವೈಜ್ಞಾನಿಕ ತಪಾಸಣೆ ಆಗಿದೆಯೇ? ಎಂದು ಪ್ರಶ್ನಿಸಿದರು.

**ಶ್ರೀ ಕೆ.ಶ್ರೀನಿವಾಸಗೌಡ** ಅವರು ಮಾತನ್ನು ಮುಂದುವರಿಸಿ ತೆಂಗಿನ ಮರಗಳಿಗೆ ಹೂವು ಆಗಿ **ಸಣ್ಣಪಿಂದೆ** ಬರುವಾಗ ನುಸಿ ಬರುವುದಾಗಿದೆ. ಅದಕ್ಕೆ ಮೊದಲೇ ಹೊಂಬಾಳೆ ಬಂದಾಗ ನೀರಾ ಇಳಿಸಿದರೆ ಆ ನುಸಿ ಹೋಗುತ್ತದೆ. ಒಳಗಡೆಯಿಂದ ಬರದೆ ನುಸಿ ಮೇಲುಗಡೆಯಿಂದ ಬಂದು ಹೀರುವಂಥದು. ಈ ಹೊಂಬಾಳೆಯಲ್ಲಿರುವ ಪಿಂದೆಗಳನ್ನು ಹೀರಲು ಬರುವಂಥ ಹುಳು ಅದು. ಅಂದರೆ ಮರದ ಆಚೆ ಬರುವಂಥ ರೋಗ. ಮಾನೋಕ್ರೋಟೋಫಾಸ್‌ಗೂ ಬಗ್ಗಿಲ್ಲ. ಈ ನುಸಿ ರೋಗವನ್ನು ಮೂರು ತಿಂಗಳೊಳಗಾಗಿ ರಾಜ್ಯದ ತೆಂಗಿನ ಗಿಡಗಳಿಂದ ಹೋಗಿಸುವುದಾದರೆ ನೀರಾ ಬೇಡ, ಸೇಂದಿಯೂ ಬೇಡ. ತೆಂಗಿನ ಮರಬೇಕು, ತೆಂಗಿನಕಾಯಿ ಬೇಕು. ಅದಕ್ಕಾಗಿ ಸರ್ಕಾರದಿಂದ ರೋಗ ತಡೆಹಿಡಿಯಲಾಗದ ಕಾರಣ ಅಂಥಪ್ರಯತ್ನ ಮಾಡಲು ರೈತರು ಮುಂದಾಗಿದ್ದಾರೆ, ಎಂದರು. ಈ ಸಂದರ್ಭದಲ್ಲಿ **ಶ್ರೀ ಟಿ.ಬಿ. ಜಯಚಂದ್ರ** (ಕೃಷಿ ಸಚಿವರು) ಅವರು, ತೆಂಗು ಬೆಳೆಗಾರರ ಯೋಗಕ್ಷೇಮಕ್ಕೆ ಇರುವಂಥ ನೆಫೆಡ್ ಸಂಸ್ಥೆಯು ನುಸಿ ಸಂಬಂಧದಲ್ಲಿ ರೈತರಿಗೆ ನೆರವಾಗಿರುವ ಬಗ್ಗೆ ವಿವರ ಬಯಸಿದರು. ಸಭೆಯ ಛೇರ್ಮನ್ ಅವರೂ ಕೂಡ ರೋಗ ತಡೆಗಟ್ಟುವ ಬಗ್ಗೆ ಸಂಸ್ಥೆಯಲ್ಲಿ ಶ್ರೀ ಶ್ರೀನಿವಾಸಗೌಡರೇ ನಿರ್ದೇಶಕರಾಗಿರುವಲ್ಲಿ ಅದರ ಕೊಡುಗೆಯ ಬಗ್ಗೆ ತಿಳಿಯಲಿಚ್ಛಿಸಿದರು.

ಈ ಬಗ್ಗೆ ಶ್ರೀನಿವಾಸಗೌಡರು ಪ್ರತಿಕ್ರಿಯಿಸಿ ಈ ಸಂಬಂಧದಲ್ಲಿ ನೆಫೆಡ್‌ನಿಂದ ಹಣ ಬರದೆ, ಕೇಂದ್ರದಿಂದಲೇ ಬರಬೇಕಾಗಿದೆ. ನುಸಿರೋಗ ಕೇರಳ ಮತ್ತು ಕರ್ನಾಟಕದಲ್ಲಿ ಮಾತ್ರ ಇದೆ. ದೆಹಲಿಯಲ್ಲಿ ಕೇಂದ್ರದ ವ್ಯವಸಾಯ ಇಲಾಖೆಯ ಕಾರ್ಯದರ್ಶಿ ಹಾಗು ತೆಂಗು ಅಭಿವೃದ್ಧಿ ಮಂಡಲಿ ಅಧ್ಯಕ್ಷರ ಸಭೆ ಸೇರಿಸಿ ವಿಷಯ ಚರ್ಚಿಸಿದೆ. ಅವರ ರೀತ್ಯಾ ನುಸಿರೋಗವನ್ನು ಕಡಿಮೆ ಮಾಡಬಹುದೇ ವಿನಾ ಪೂರ್ಣ ನಿಯಂತ್ರಣ ಸಾಧ್ಯವಿಲ್ಲ. ಅದರಲ್ಲೂ ಹೊಸ ಪ್ರಯೋಗಗಳನ್ನು ಮಾಡಲಾಗುತ್ತಿದೆ ಎಂದಿದ್ದಾರೆ. ಸದ್ಯ ನೀರಾ ಇಳಿಸಲು ಅನುಮತಿ ಕೇಳುತ್ತಿರುವುದು ರೈತರ ಕಷ್ಟ ಹೋಗಲಾಡಿಸಬೇಕೆಂಬ ಕಾರಣಕ್ಕಾಗಿಯೆ. ಕೋಕೋಕೋಲಾ, ಪೆಪ್ಸಿ, ಫಾಂಟಾಗಳನ್ನು ಬೇರೆ ದೇಶಗಳಿಗೆ ಕಳುಹಿಸುವ ಮಟ್ಟಕ್ಕೆ ಬಂದಿದ್ದೇವೆ. ಇಂಥ ಪ್ರಯತ್ನವನ್ನು ನೀರಾ ತೆಗೆದು ಮಾಡಬೇಕಿತ್ತು. ಲಕ್ಷದ್ವೀಪದಲ್ಲಿ ತೆಂಗು ಬಿಟ್ಟು ಬೇರೇನೂ ಬೆಳೆಯದೆ, ಬೆಳಿಗ್ಗೆ ಆದ ತಕ್ಷಣವೇ ಮುಸ್ಲಿಮರು ನೀರಾವನ್ನು ಬಾಟಲಿಗಳಲ್ಲಿ ಹಾಕಿ ತಂದು ಮಾರಿ ಜೀವನ ನಡೆಸುತ್ತಾರೆ. ಹಾಗೆಯೇ ಇಲ್ಲಿಯೂ ತೆಂಗಿನ ರೈತರ ಸಹಾಯಕ್ಕೆ ಬಂದು ಕಾಪಾಡಿ. ನುಸಿರೋಗ ಬರದಂತೆ ಮಾಡಿ ಇಲ್ಲವೆ ನೀರಾ ಅಥವಾ (ಕೆಮಿಕಲ್ಸ್ ಬೆರೆಸದೆ) ಸೇಂದಿ ಮಾರಲು ಅವಕಾಶ ಕೊಡಿ ಎಂದು ಪ್ರಾರ್ಥನೆ ಇಟ್ಟರು.

**ಶ್ರೀ ಎನ್.ಚಲುವರಾಯಸ್ವಾಮಿ** ಅವರು ಮಾತನಾಡಿ, ತೆಂಗಿಗೆ ಖಾಯಿಲೆ ಬಂದಿದೆ; ಮಾನ್ಯ ಶ್ರೀನಿವಾಸಗೌಡರು ಹೇಳಿದಂತೆ ಜೆಸಿಬಿ ಯಂತ್ರ ತಂದು ತೆಂಗನ್ನು ಮುರಿದು ಹಾಕಲಿದ್ದಾರೆ. ಈ ಭಯದಲ್ಲಿ ನೀರಾ ಇಳಿಸಬೇಕೆಂದು ರೈತರು ಮುಂದೆ ಬಂದಿದ್ದಾರೆಯೇ ವಿನಾ, ಸರ್ಕಾರ ನುಸಿರೋಗ ನಿವಾರಣೆ ಮಾಡಿದರೆ ಅವರು ನೀರಾ ಇಳಿಸಬೇಕೆಂದು ಕೇಳುವುದಿಲ್ಲ. ಇವೊತ್ತು ನೀರಾವನ್ನು ಎಕ್ಸ್‌ಪೋರ್ಟ್ ಮಾಡಲು ಸಾಧ್ಯವೇ? ಔಷಧಿಗೆ ಅಥವಾ ಇಂಡಸ್ಟ್ರಿಗೆ ಬಳಸಲು ಸಾಧ್ಯವೇ? ಎಂಬ ಬಗೆಗೆಲ್ಲ ಸರ್ಕಾರ ಯೋಚಿಸಬೇಕು. ಆರ್ಥಿಕವಾಗಿ ರೈತರ ಸಂಕಷ್ಟಕ್ಕೆ ಯಾವ ರೀತಿ ಹೋಗಬೇಕು ಎಂಬ ಬಗ್ಗೆಯೂ ಯೋಚಿಸಬೇಕಾಗಿದೆ. ನುಸಿ ಖಾಯಿಲೆಯನ್ನು ಬೇರೆ ರೀತಿಯಿಂದಹೋಗಲಾಡಿಸಲು ಸಾಧ್ಯವಿದ್ದರೆ ಮಾಡಿ; ಇಲ್ಲವೆ ಎರಡು ವರ್ಷ ಸತತವಾಗಿ ನೀರಾ ಇಳಿಸಿದರೆ ಈ ಖಾಯಿಲೆ ಹೋಗುತ್ತದೆ. ಹಾಗು ಈ ಗಿಡಗಳು ಎರಡು ವರ್ಷ ಏನು ನಷ್ಟ ಮಾಡಿದ್ದವು ಅದಕ್ಕಿಂತ ಹೆಚ್ಚು ಫಲ ಬಿಡುತ್ತದೆ ಎಂಬ ಮಾಹಿತಿ ಇರುವುದರಿಂದ ಅದನ್ನು ಮಾಡಿ. ಗಿಡದ ರಕ್ಷಣೆ ಮಾಡಿಕೊಂಡು, ರೈತರ ಚೇತರಿಕೆಗೂ ಅನುಕೂಲವಾಗುತ್ತದೆ. ಸರ್ಕಾರ ಈ ಬಗ್ಗೆ ಸ್ಪಂದಿಸಲಿ ಎಂದು ನುಡಿದರು.

**ಶ್ರೀ ಪಿ.ಜಿ.ಆರ್.ಸಿಂಧ್ಯಾ** ಅವರು: ಬೇರೆ ರಾಷ್ಟ್ರಗಳಿಂದ ಬಂದಿರುವ ಈ ಕಾಯಿಲೆ ಮತ್ತೆ ಶ್ರೀಲಂಕಾ ಇತ್ಯಾದಿ ರಾಷ್ಟ್ರಗಳಿಂದ ಬರುವ ಸಂಭವವಿದೆ. ತೆಂಗಿನ ಕಾಯಿ, ಎಳನೀರಿನ ಬೆಲೆ ಕಡಿಮೆಯಾಗಿರುವುದು, ಉತ್ಪನ್ನವೂ ಕಡಿಮೆಯಾಗಿರುವುದು, ಈ ಬಗೆಗೆಲ್ಲ ತಿಳಿಯಲು ಸದನ ಸಮಿತಿಯನ್ನು ರಚಿಸಬೇಕು. ತೆಂಗಿನ ಬೆಳೆ ಬಗ್ಗೆ ತಿಳಿದಿರುವ ಸದಸ್ಯರು ಸದನ ಸಮಿತಿಯಲ್ಲಿರಲಿ. ಕೇರಳ ಹಾಗು ಇತರೆ ರಾಜ್ಯಗಳಲ್ಲಿ ಈ ಬಗ್ಗೆ ಕ್ರಮತೆಗೆದುಕೊಂಡಿರುವ ಬಗ್ಗೆ ಅಧ್ಯಯನ ಮಾಡಿ ಮೂರುತಿಂಗಳೊಳಗೆ ವರದಿ ಕೊಡಲಿ. ರೈತರ ಆತ್ಮಹತ್ಯೆ ಸಂಬಂಧದಲ್ಲಿ ಸಮಸ್ಯೆ ತಿಳಿಯಲು ರೂಪಿಸಿದ ತಜ್ಞರ ಸಮಿತಿಯನ್ನು ಈ ಸಂದರ್ಭದಲ್ಲಿಯೂ ರಚಿಸಿ ಮೂರುತಿಂಗಳೊಳಗೆ ವರದಿ ಕೊಡಲು ಸಮಯ ನಿಗದಿ ಮಾಡಿ. ತೆಂಗು ಹೆಚ್ಚು ಬೆಳೆಯುವ 3–4 ಜಿಲ್ಲೆಗಳಲ್ಲಿ ಒಂದನ್ನು ಆರಿಸಿಕೊಂಡು ಅಲ್ಲಿ ಪ್ರಾಯೋಗಿಕವಾಗಿ ನೀರಾ ಇಳಿಸಲು ಅವಕಾಶ ಮಾಡಿಕೊಟ್ಟರೆ ಮಾರುಕಟ್ಟೆ ಸಮಸ್ಯೆ, ತೆಂಗಿಗೆ ತಗುಲಿದ ನುಸಿರೋಗ ಕಡಿಮೆ ಆಗುವುದೆ, ಇಲ್ಲವೆ ಎಂಬ ಬಗ್ಗೆ ತಿಳಿಯಬಹುದು, ಎಂದೆಲ್ಲ ಸಲಹೆಗಳನ್ನು ಮುಂದಿಟ್ಟರು.

**ಸಭೆಯ ಛೇರ್ಮನ್** ಅವರು, ಈ ಬಗ್ಗೆ ಇಂಡಸ್ಟ್ರಿಯಲ್ ಯೂಸ್‌ವ್ಯಾಲ್ಯು ಅಥವಾ ಮೆಸಿಸಿನಲ್ ಅರೋಮ್ಯಾಟಿಕ್ ವ್ಯಾಲ್ಯೂ ಇರುವ ಬಗ್ಗೆ ಎಕ್ಸಾಮಿನ್ ಮಾಡಿದರೆ ರೈತನಿಗೆ ಒಳ್ಳೆ ಬೆಲೆ ಸಿಗವುದು ಎಂದರು.

**ಶ್ರೀ ಟಿ.ಬಿ.ಜಯಚಂದ್ರ** ಅವರು : ನುಸಿರೋಗ ನಿಯಂತ್ರಿಸುವ ಬಗ್ಗೆ ಮಾನ್ಯ ಸದಸ್ಯರ ಮಾತುಗಳಿಗೆ ಪ್ರತಿಕ್ರಿಯಿಸಿ, ಸದಸ್ಯರು ಯುರೋಫೈಡ್ ಮೈಟ್ಸ್ ಬಗ್ಗೆ ಹೇಳಿದ್ದು, ಆ ರೋಗವು ನಮ್ಮ ದೇಶದಲ್ಲಿ ರಾಜ್ಯದಲ್ಲಿ ಬಂದಿದ್ದು, ಅವುಗಳಲ್ಲಿ ಒಂಬತ್ತು ಸ್ಪಿಸೀಸ್ ಇದ್ದು, ಒಂದೊಂದು ಕಡೆ ಒಂದೊಂದು ಹರಡಿರುವುದು, ರೋಗ ನಿಯಂತ್ರಣಕ್ಕೆ ಆಗಿರುವ ಪ್ರಯತ್ನ ಮತ್ತು ಹಣದ ಖರ್ಚು; ಕೇರಳ ಮತ್ತು ತಮಿಳುನಾಡಿನಲ್ಲಿ ನಡೆದಿರುವ ಈ ಬಗೆಗಿನ ಹೆಚ್ಚಿನ ಅಧ್ಯಯನ, ಸಂಶೋಧನೆ, ಫಾರ್ಮ್ ಮ್ಯಾನೇಜ್‌ಮೇಂಟ್; ಅಲ್ಲಿಗೆಲ್ಲ ಹೋಗಿ ನಡೆಸಿರುವ ಚರ್ಚೆ; ರಾಜ್ಯಕ್ಕೆ 2–3 ವರ್ಷಗಳ ಹಿಂದೆ ಬಂದ ಈ ರೋಗ; ಅಂಡಮಾನ್ ಮತ್ತು ನಿಕೋಬಾರ್‌ಗೂ ಹರಡಿದ್ದು ಇಡೀ ಏಷ್ಯಾ ಖಂಡಕ್ಕೆ ವ್ಯಾಪಿಸಿಬಿಟ್ಟರೆ ಆಗಬಹುದಾದ ಪರಿಣಾಮ ಮತ್ತು ಬೆಳೆಹಾನಿ; ಆ ಹಿನ್ನೆಲೆಯಲ್ಲಿ ಪ್ರಮುಖವಾಗಿ ಮಾಡಬೇಕಾದ ಚಿಂತನ; ಜಗತ್ತಿನ 80 ದೇಶಗಳಲ್ಲಿ ತೆಂಗು ಬೆಳೆಯುವುದರ ಪೈಕಿ ಭಾರತಕ್ಕಿರುವ ಆದ್ಯಸ್ಥಾನ; ಪ್ರಪಂಚದ ಒಟ್ಟು ಉತ್ಪನ್ನದ ಶೇ.25 ರಷ್ಟು ಭಾರತದ್ದಾಗಿರುವುದು, ರೋಗ

ನಿಯಂತ್ರಣಕ್ಕೆ ಸಮಗ್ರ ಕೀಟ ನಿರ್ವಹಣಾ ಪದ್ಧತಿಯಾದ ಇಂಟೆಗ್ರೇಟೆಡ್ ಪೆಸ್ಟ್ ಮ್ಯಾನೇಜ್‌ಮೆಂಟ್‌ನಲ್ಲಿಯ ಕಲ್ಚರಲ್, ಫಿಸಿಕಲ್, ಮೆಕಾನಿಕಲ್, ಬಯಲಾಜಿಕಲ್, ಕೆಮಿಕಲ್ ಮೆಥೆಡ್ ಇತ್ಯಾದಿ ಮಾರ್ಗೋಪಾಯಗಳು ಹಾಗು ಆವುಗಳ ಪ್ರಾಮುಖ್ಯತೆ; ಆದರೆ ತೆಂಗು ಬೆಳೆ ಸಮೃದ್ಧವಾಗಿದ್ದು, ಮಾನೋಕ್ರಾಪಿಂಗ್‌ನಿಂದ ಪ್ರಗತಿಗೊಳ್ಳುತ್ತಿದ್ದ ಪ್ಯಾಥೋಜನ್ ಸೆಂಟರ್ಸ್ ಹಾಲಿ ಉಳಿಯುವ ಸ್ಥಿತಿಯಲ್ಲಿಲ್ಲದಿರುವುದು; ಇಂಟರ್ ಕ್ರಾಪಿಂಗ್, ಮಲ್ಟಿಸ್ಪಿಸೀಸ್ ಮತ್ತು ಮಲ್ಟಿ ಫಾರ್ಮಿಂಗ್ ಆಕ್ಟಿವಿಟಿ ಮಾಡುವಂಥ ಸಂದರ್ಭದಲ್ಲಿ ಪ್ಯಾಥೋಜಿನ್ ಅನ್ನು ಅಭಿವೃದ್ಧಿಪಡಿಸುವಲ್ಲಿ ಸಹಜವಾಗಿ ರೋಗ ನಿಯಂತ್ರಣವಾಗುವುದು; ಮೆಕ್ಸಿಕೋದಲ್ಲಿ ಈ ಪ್ರಯೋಗ ನಡೆದು ಈ ದಿಸೆಯಲ್ಲಿ ಸ್ವಲ್ಪ ಮಟ್ಟಿಗೆ ಯಶಸ್ಸು ಪಡೆದಿರುವಲ್ಲಿ ಸಮಗ್ರ ಕೀಟ ನಿರ್ವಹಣಾ ಪದ್ಧತಿ ಬಗ್ಗೆ ಒತ್ತು ಕೊಡುವ ಪ್ರೇರಣೆ ಆಗಿರುವುದು; ರೈತರಿಗೆ ಇಂಟರ್‌ಕ್ರಾಪಿಂಗ್‌ಗೆ ಹಾಕಬೇಕಾದ ಬೆಳೆ ಬಗ್ಗೆ ಸಲಹೆಕೊಡುವುದು; ಕೃಷಿ ವಿಜ್ಞಾನಿಗಳು ಹಾಗು ಕಾಸರಗೋಡಿನ ಸಿ.ಪಿ.ಸಿ.ಆರ್.ಐ ಸಂಸ್ಥೆ ನೀಡಿದ ಸಂಶೋಧನಾ ಪ್ರಥಮ ಸಲಹೆಯಂತೆ ನುಸಿರೋಗ ಬಾಧಿತ ತೆಂಗಿನ ಮರಗಳಿಗೆ ಮಾನೋಕ್ರೋಟೋಫಾಸ್ ಡೈಕೊಫಾಲ್ ಅಥವಾ ಎಂಡೋಸಲ್ಫಾನ್ ಕೊಡುವುದು; ನಂತರ ಬಂದ ಸಿಪಿಸಿಆರ್ ಸಲಹೆಯಂತೆ ಮೊದಲನೇ ಡೋಸ್ ಆಗಿ ಮಾನೋಕ್ರೋಟೋಫಾಸ್; ಎರಡನೆ ಹಾಗು ಮೂರನೆಯ ಚಿಕಿತ್ಸೆ ಆಗಿ ಅಜಾಡಿರ್ಕ್ಟಿನ್ ಎಂಬ ಬಯೋ ಪೆಸ್ಟಿಸೈಡ್ಸ್ ಕೊಟ್ಟು ನಿಯಂತ್ರಿಸಲು ಸಾಧ್ಯವೆಂಬುದು; ಆದರೂ ಇಡೀ ಜಿಲ್ಲೆಯ ಅಧಿಕಾರಿ ವರ್ಗ ಹೊಣೆಯಿಂದ ಕೆಲಸ ನಿರ್ವಹಿಸಿದರೂ ರೋಗ ತಹಬಂದಿಗೆ ಬರದೆ 80 ಲಕ್ಷದಿಂದ 1 ಕೋಟಿ ಮರಗಳು ಅಫೆಕ್ಟ್ ಆಗಿರುವಲ್ಲಿ, ಎಲ್ಲಾ ಮರಗಳಿಗೆ ಟ್ರೀಟ್‌ಮೆಂಟ್ ಅನ್ನು ಇಲಾಖೆಯು ರೈತರ ಸಹಯೋಗದಿಂದಲೇ ಮಾಡಬೇಕಿರುವುದು; ಆದರೆ ಏಕ ಕಾಲಕ್ಕೆ ಎಲ್ಲಾ ಮರಗಳಿಗೆ ಟ್ರೀಟ್‌ಮೆಂಟ್ ಮಾಡಲಾಗದ ಕಾರಣ ರೋಗ ನಿಯಂತ್ರಣ ಸಾಧ್ಯವಾಗದೆ ಹೋಗಿರುವುದು; ಕಪ್ಪುತಲೆ ಹುಳಗಳ ರೋಗ ಮತ್ತು ನುಸಿರೋಗ ಎರಡು ಸೇರಿ ತೆಂಗಿನ ಬೆಳೆಗೆ ಆಗಿರುವ ತೊಂದರೆ; ಯಾವುದೇ ತರಹದ ಟ್ರೀಟ್‌ಮೆಂಟ್ ಮಾಡದೆ ಒಂದೆರಡು ವರ್ಷ ಬಿಟ್ಟರೆ ಬಹುಶಃ ನ್ಯಾಚುರಲ್ ಆಗಿ ಪ್ಯಾಥೋಜಿನ್ಸ್ ಡೆವಲಪ್ ಆಗಿ ಅದನ್ನು ಕಂಟ್ರೋಲ್ ಮಾಡಲು ಸಾಧ್ಯ ಎಂದು ಐ.ಸಿ.ಆರ್ ವಿಜ್ಞಾನಿಗಳು ನೀಡಿರುವ ಸಲಹೆಗಳು; ಕೇರಳದಲ್ಲಿ ಈ ಬಗ್ಗೆ ಪ್ರಯೋಗ ಮಾಡಿ ರೋಗ ಕಡಿಮೆಯಾಗುತ್ತಿರುವುದನ್ನು ಗಮನಿಸಿರುವುದು; ರೈತರ ಸಲಹೆಗಳು, ಮಾನಿಟರಿಂಗ್ ಏಜೆನ್ಸಿಗಳು ನೀಡಿರುವ ತಾಂತ್ರಿಕ ಸಲಹೆಗಳೂ ಸರ್ಕಾರದ ಪರಿಶೀಲನೆಯಲ್ಲಿರುವುದು; ಎಲ್ಲಾ ಕಾಲಕ್ಕೂ ಎಲ್ಲಾ ಮರಗಳಿಗೂ ನೀರಾ ಕಟ್ಟುವ ಸಾಧ್ಯತೆಯ ಬಗ್ಗೆ ಯೋಚನೆ;

ನೀರಾ ಇಳಿಸಲು ಬಂದಿರುವ ಎಲ್ಲರ ಒತ್ತಾಯ; ಸೇಂದಿಯನ್ನು ಎರಡು ಜಿಲ್ಲೆಗಳಲ್ಲಿ 20 ಸಾವಿರ ಮರಗಳಲ್ಲಿ ಟ್ಯಾಪಿಂಗ್ ಮಾಡುತ್ತಿರುವ 25–30 ಟ್ಯಾಪರ್ಸ್ ಸೊಸೈಟಿಗಳು; ಸೇಂದಿಗೆ **ಕ್ಲೋರಲ್‌ಹೈಡ್ರೇಟ್** ಸೇರಿಸಿ ನಡೆಸಿದ ಮಾರಾಟದ ಹಾವಳಿ; ನೀರಾವನ್ನು ಬೆಳಗಿನ ಜಾವವೇ ಇಳಿಸಿದರೂ ಬೆಳಗಿನ ಜಾವಕ್ಕೆ ಕುಡಿಯಲು ಸಾಧ್ಯವಿಲ್ಲದೆ, ಕಮರ್ಷಿಯಲ್ ದೃಷ್ಟಿಯಿಂದ ಹಗಲು ಹೊತ್ತಿನಲ್ಲಿಯೇ ಹೆಂಡವಾಗಿರುವಾಗ ಕುಡಿಯಬೇಕಾಗಿರುವುದು; ನಮ್ಮಲ್ಲಿರುವ ವ್ಯವಸ್ಥೆಯಲ್ಲಿ ನಿಜವಾಗಿರತಕ್ಕಂಥ ನೀರಾ ಮತ್ತು ಹೆಂಡವನ್ನು ಕುಡಿಯಲು ಜನಗಳಿಗೆ ಕೊಡಲಿಕ್ಕಾಗದಿರುವುದು, ವ್ಯಾಪಾರದ ದೃಷ್ಟಿಯಿಂದ ಈವೊತ್ತು ಕ್ಲೋರಲ್ ಹೈಡ್ರೇಟ್ ಅನ್ನು ಕಂಟ್ರೋಲ್ ಮಾಡುವುದಕ್ಕೆ ಸಾಧ್ಯವಿಲ್ಲದಿರುವುದು; ನಮ್ಮ ಹಳ್ಳಿಯ ಕಡೆ 500–1000 ಮರಗಳಲ್ಲಿ ನೀರಾ ಇಳಿಸಲು ಶುರುಮಾಡಿ ಲೀಟರ್‌ಗೆ 30 ರೂ.ನಂತೆ ಮಾರಾಟ ಮಾಡಿ, ನಂತರದಲ್ಲಿ ಇಳಿಸುವುದು ಹೆಚ್ಚುಗೊಂಡಾಗ ಲೀಟರ್‌ಗೆ 15 ರೂ.ಮಾರತೊಡಗಿದಾಗ ವರ್ಕ್ ಔಟ್ ಆಗದೆ ಹೋಗುವುದು; ಕಾರಣ ಟ್ಯಾಪರ್ಸ್ ನಮ್ಮಲ್ಲಿಲ್ಲದೆ ತಮಿಳುನಾಡು ಕಡೆಯಿಂದ ಕರೆಸಿ ಟ್ಯಾಪ್ ಮಾಡಿಸಿದರೂ ಛಾರ್ಜು ಜಾಸ್ತಿಯಾಗಿ ಯಾವ ರೈತರಿಗೂ ಅದು ವರ್ಕ್ ಔಟ್ ಆಗದಿರುವುದು; ಬಡವರಿಗೆ ಶೇ.42 ರಷ್ಟು ಆಲ್ಕೋಹಾಲ್ ಕಂಟೆಂಟ್ ಇರುವ ಅರ್ರ್ಯಾಕ್ ಕೊಡುತ್ತಿರುವುದು; ಇಂತಲ್ಲಿ ನೀರಾದಲ್ಲಿ ಶೇ.1ರಷ್ಟು, ಟಾಡಿಯಲ್ಲಿ ಇರುವ ಅರ್ರ್ಯಾಕ್ ಕೊಡುತ್ತಿರುವುದು; ಇಂತಲ್ಲಿ ನೀರಾದಲ್ಲಿ ಶೇ.1ರಷ್ಟು, ಟಾಡಿಯಲ್ಲಿ ಶೇ.3ರಷ್ಟು ಆಲ್ಕೋಹಾಲ್ ಇರುವಲ್ಲಿ ತಾಳೆ ಇಲ್ಲ? ಅಂತೇ ಕ್ಲೋರೈಲ್ ಹೈಡ್ರೇಟ್ ಬೆರಸಿ ಮಾಡುತ್ತಿರುವ ಮಾರಾಟ; ರೈತರ ಕಷ್ಟದ ಜೊತೆಗೆ ಆರೋಗ್ಯವನ್ನೂ ಗಮನಿಸಬೇಕಿರುವುದು; ಆರ್ರ್ಯಾಕ್‌ನಲ್ಲಿ ಅಡಲ್ಟ್ರೇಟ್ ಮಾಡಲಾಗದಿರುವುದನ್ನು ಟಾಡಿಯಲ್ಲಿ ಮಾಡಲು ಸಾಧ್ಯವಿರುವುದು; ಸಿ.ಎಫ್.ಟಿ.ಆಲ್.ಐ ಮತ್ತು ಡಿಫೆನ್ಸ್ ರೀಸರ್ಚ್ ಇನ್ಸ್‌ಟಿಟ್ಯೂಟ್‌ನವರು, ನುಸಿರೋಗವನ್ನು ನೀರಾ ಅಥವಾ ಟಾಡಿಯನ್ನು ಇಳಿಸುವುದರಿಂದ ನಿಯಂತ್ರಿಸಲು ಮಾಡುವ ಪರ್ಯಾಯ ಕ್ರಮವಲ್ಲ ಎಂದಿರುವ ಅಭಿಪ್ರಾಯ; ನೀರಾದಿಂದ ಬೈ–ಪ್ರಾಡಕ್ಟ್ ಮಾಡುವ ಸಲಹೆಯಲ್ಲಿ ತಂಪು ಪಾನೀಯವನ್ನು ತಯಾರಿಸುವ ಸಾಧ್ಯತೆ ಕುರಿತ ಸಂಶೋಧನೆ, ಹಾಗು ಮೆಕ್ಸಿಕೋದಲ್ಲಿ ತಂಪು ಪಾನೀಯವನ್ನು ತಯಾರಿಸುವ ಸಾಧ್ಯತೆ ಕುರಿತ ಸಂಶೋಧನೆ ಹಾಗು ಮೆಕ್ಸಿಕೋದಲ್ಲಿ ಶುಗರ್ ಕೇನ್ ಇಲ್ಲದಿರುವ ಕಾರಣ ನೀರಾವನ್ನು ಶುಗರ್ ಮಾಡುತ್ತಿರುವುದು; ನಮ್ಮಲ್ಲಿ ತೆಂಗಿನಿಂದ ಮಾಡುವ ಬೆಲ್ಲವನ್ನು ಔಷಧಿಗೆ ಮಾತ್ರ ಬಳಸುವುದು, ಶುಗರ್‌ಕೇನ್‌ನಿಂದ ತಯಾರಿಸುವ ಸಕ್ಕರೆ ಅಥವಾ ಬೆಲ್ಲವು ಅಗ್ಗದ ಬೆಲೆಗೆ ದೊರೆಯುವ ಕಾರಣ ತೆಂಗಿನ ಜಾಗರಿ ದುಬಾರಿಯಾಗಿದ್ದು ಬೈಪ್ರಾಡಕ್ಟ್

ಆಗಿ ಮಾರಲು ಸಾಧ್ಯವಿಲ್ಲದಿರುವುದು, ರೈತರ ಬೆಳೆಗೆ ಸರಿಯಾದ ಬೆಲೆ ದೊರಕದಿರುವುದು; ನುಸಿರೋಗ ನಿಯಂತ್ರಣಕ್ಕೆ ಬರದಿರುವುದು; ನಿರಂತರ ಆಯಿಲ್ ಇಂಪೋರ್ಟ್‌ನಿಂದಾಗಿ ಆಗಿರುವ ಬೆಲೆ ಕುಸಿತದ ಬಗ್ಗೆ ಕೇಂದ್ರ ವಾಣಿಜ್ಯ ಸಚಿವರು ಹೇಳಿರುವುದು; ಈ ಹಿನ್ನೆಲೆಗಳಲ್ಲಿ ನೀರಾ ಇಳಿಸಲು ಅನುಮತಿಸುವ ಬದಲು ಬೆಲೆ ಬರುವಂಥ ರೀತಿಯ ಮಾರುಕಟ್ಟೆ ವ್ಯವಸ್ಥೆಗೆ ಪರ್ಯಾಯ ಹುಡುಕುವುದು ನುಸಿರೋಗ ನಿಯಂತ್ರಣಕ್ಕೆ ಎಲ್ಲಾ ರೈತರಿಗೆ – ಸಣ್ಣ ಮತ್ತು ಅತಿ ಸಣ್ಣರೈತರಿಗೆ 75 ಪರ್ಸೆಂಟ್ ಸಬ್ಸಿಡಿ ದರದಲ್ಲಿ ಔಷಧಿ ವ್ಯವಸ್ಥೆ ಮಾಡಿ ಪಲ್ಸ್‌ಪೋಲಿಯೋ ಮಾದರಿ ಕಾರ್ಯಕ್ರಮ ಹಾಕಿಕೊಳ್ಳುವುದು; ನುಸಿ ನಿಯಂತ್ರಣಕ್ಕೆ ರೀಸರ್ಚ್ ನಾಲೆಡ್ಜ್ ಇಂಪ್ರೂವ್ ಮಾಡುವುದಕ್ಕೆ ರೈತರಿಗೆ ತೊಂದರೆ ಆಗದ ರೀತಿಯಲ್ಲಿ ಮಾಡುವ ಪ್ರಯತ್ನ; ಈ ರೋಗ ನಿಯಂತ್ರಣಕ್ಕೆ ಎಲ್ಲ ಜನಪ್ರತಿನಿಧಿಗಳ ಹಾಗೂ ರೈತರ ಸಹಕಾರದ ಅಗತ್ಯ ಕುರಿತೆಲ್ಲ ಹೇಳಿ ತಮ್ಮ ಮಾತನ್ನು ಮುಗಿಸಿದರು.

**ಶ್ರೀ ಪಿ.ಜಿ.ಆರ್.ಸಿಂಧ್ಯ** ಅವರು, ಸರ್ಕಾರವು ತಜ್ಞರ ಸಮಿತಿ, ಸದನ ಸಮಿತಿ ರೂಪಿಸುವ ಬಗ್ಗೆ ಮತ್ತೆ ನೆನಪಿಸುತ್ತ, ಎಲ್ಲಾ ಕಡೆ ರೈತರು ಕಾನೂನು ಕೈಗೆತ್ತಿಕೊಂಡು ಸರ್ಕಾರದ ವಿರುದ್ಧ ಹೋಗುವಂಥ ಪರಿಸ್ಥಿತಿ ಬರುತ್ತಿರುವ ಬಗ್ಗೆ, ಮಾನ್ಯ ಕೃಷಿ ಸಚಿವರು ಸದನದ ಮುಂದೆ ಇಟ್ಟಿರುವ ಅನೇಕ ವಾಸ್ತವಾಂಶಗಳು ಹಾಗು ಮಾನ್ಯ ಮುಖ್ಯಮಂತ್ರಿಗಳು ಈ ಕುರಿತು ಹೇಳಬೇಕಾದ ಮಾತಿನ ಬಗ್ಗೆ ಪ್ರಸ್ತಾಪಿಸಿದರು.

**ಶ್ರೀ ಡಿ.ವಿ.ಸದಾನಂದಗೌಡ** ಅವರು ಮಾತನಾಡಿ, ಕೃಷಿ ಮಂತ್ರಿಗಳು, ರೈತರ ಪರವಾಗಿದ್ದೇವೆಂದು ಒಂದು ಕಡೆ ಹೇಳಿದ್ದಾರೆ; ಇನ್ನೊಂದು ಕಡೆ ಆ ಪ್ರಯತ್ನಗಳನ್ನು ಮಾಡದೇ ಇರುವ ವ್ಯವಸ್ಥೆ ಸರ್ಕಾರದಲ್ಲಿ ಕಾಣುತ್ತದೆ. ಉತ್ತರ ಕೂಡ ರೈತ ವಿರೋಧಿ ನೀತಿಯನ್ನು ಸಾದರ ಪಡಿಸುತ್ತದೆ. ಅವರ ಉತ್ತರವನ್ನು ಪ್ರತಿಭಟಿಸಿ ಸಭಾತ್ಯಾಗ ಮಾಡುತ್ತೇವೆ ಎಂದು ಬಿಜೆಪಿ ಸದಸ್ಯರೊಡನೆ ಸಭಾತ್ಯಾಗ ಮಾಡಿದರು...**ಶ್ರೀ ಸಿ.ಬೈರೇಗೌಡರು** ರೈತರ ಸಮಸ್ಯೆಯನ್ನು ಬಗೆಹರಿಸಿ ಅವರ ನೆರವಿಗೆ ಬರಬೇಕಾಗಿರುವುದರಿಂದ ಮಾನ್ಯ ಮುಖ್ಯಮಂತ್ರಿಗಳು ಈ ವಿಚಾರದಲ್ಲಿ ತಮ್ಮ ಆಲೋಚನೆಯನ್ನು ತಿಳಿಸಲು ವಿನಂತಿಸಿದರು.

ಮಾನ್ಯ ಮುಖ್ಯಮಂತ್ರಿಗಳಾದ **ಶ್ರೀ ಎಸ್.ಎಂ.ಕೃಷ್ಣ** ಅವರು ಪ್ರತಿಕ್ರಿಯಿಸುತ್ತ ವ್ಯವಸಾಯ ಸಚಿವರು ಸರ್ಕಾರದ ಆಲೋಚನೆಗಳನ್ನು ಪ್ರತಿನಿಧಿಸಿರುವ ಬಗ್ಗೆ,

ಸದ್ಯದ ಜ್ವಲಂತ ಸಮಸ್ಯೆಗೆ ಸುಲಭವಾದ ಪರಿಹಾರ ಉಭಯತ್ರ ಇಲ್ಲದಿರುವುದು; ಇದಕ್ಕಾಗಿ ಪರಿಣತರಿಗೆ ಶರಣಾಗಬೇಕಿರುವುದು, ಶ್ರೀ ಸಿಂಧ್ಯಾ ಅವರ ಯೋಗ್ಯ ಸಲಹೆಯಾದ ತಜ್ಞರ ಸಮಿತಿ ನೇಮಕ ಮಾಡಿ ಪರಿಹಾರ ಕಂಡು ಹಿಡಿಯುವ ದಿಕ್ಕಿನಲ್ಲಿ ತೊಡಗಿಸುವುದು; ನೀರಾ ಇಳಿಸುವಿಕೆ ಒಂದು ಪರಿಹಾರ ಎಂಬ ಬಗ್ಗೆ ಯಾರೇ ಕನ್‌ವಿನ್ಸ್ ಮಾಡಿದರೂ ಒಪ್ಪುವುದು; ವ್ಯವಸಾಯಗಾರರ ಭವಿಷ್ಯದ ಬಗ್ಗೆ ಸರ್ಕಾರಕ್ಕೆ ಇರುವ ಸಂಪೂರ್ಣ ಅರಿವು ಕುರಿತೆಲ್ಲ ಮಾನ್ಯ ಸದಸ್ಯರೊಡನೆ ಸಮಾಲೋಚನೆ ಮಾಡಿ ಮುಂದಿನ ಪರ್ಯಾಯ ಮಾರ್ಗಗಳನ್ನು ಕಂಡುಹಿಡಿಯಲು ಸಾಧ್ಯವಾದೀತು ಎಂದೂ ಹೇಳಿದರು.

ಈ ದಿನದ ಕಾರ್ಯಕಲಾಪಗಳಲ್ಲಿ ಸರ್ವಶ್ರೀ ಡಿ.ಕೆ.ಶಿವಕುಮಾರ್, ಬಿ.ಆರ್.ನೀಲಕಂಠಪ್ಪ ಅಲ್ಲಂ ವೀರಭದ್ರಪ್ಪ ಅವರುಗಳು ಪಾಲ್ಗೊಂಡಿದ್ದರು. ಮಾನ್ಯ ಶ್ರೀ ಎಂ.ವಿ.ವೆಂಕಟಪ್ಪನವರು ಅಧ್ಯಕ್ಷ ಪೀಠದಲ್ಲಿದ್ದರು.

**ಮಂಥನ:** *ನಮ್ಮ ರೈತರಿಗೆ ಆರ್ಥಿಕವಾಗಿ, ಸಾಂಸ್ಕೃತಿಕವಾಗಿ ತೆಂಗು ಎಲ್ಲ ರೀತಿಯಲ್ಲಿ ಕಲ್ಪವೃಕ್ಷವೆ. ಆ ಬೆಳೆಗೆ ಹಾನಿಯಾದರೆ ಅರ್ಥಾತ್ ನುಸಿರೋಗ, ಕಪ್ಪುತಲೆ ಹುಳದ ರೋಗ, ರೂಟ್‌ಕ್ರಾಬ್ ಇತ್ಯಾದಿ ಯಾವುದೇ ರೋಗ ತಗುಲಿದರೆ ರೈತರ ಬದುಕು ಆತಂಕಕ್ಕೊಳಗಾಗುತ್ತದೆ, ತವಕ ತಲ್ಲಣಗಳಲ್ಲಿ ಕಂಗೆಡುತ್ತದೆ. ಇಂಥ ರೋಗ ತಡೆಯಲು ಅಥವಾ ನಿಯಂತ್ರಿಸಲು ಒಂದು ಮಾರ್ಗೋಪಾಯ ನೀರಾ ಇಳಿಸುವುದು ಎಂದು ರೈತರಲ್ಲಿ, ರೈತ ಸಂಘಟನೆಗಳಿಂದ ಪ್ರಚಲಿತಗೊಂಡು ಸಂಗತಿ, ಕೆಲಮಟ್ಟಿಗೆ ವೈಜ್ಞಾನಿಕ, ಪ್ರಾಯೋಗಿಕ ಬೆಂಬಲವೂ ಆ ಕಾರ್ಯಕ್ರಮಕ್ಕೆ ಇದೆ. ರೋಗತಗುಲಿರುವಲ್ಲಿ ಔಷಧಿಯನ್ನು ವಿವಿಧ ರೀತಿಯಲ್ಲಿ ಬಳಸಿ ರೋಗ ನಿಯಂತ್ರಣ ಮಾಡುವುದೂ ಒಂದು ವಿಧಾನ ಎಂದು ಆಡಳಿತದ ನಿಲುವೂ ಉಂಟು. ಸದನದ ಸದಸ್ಯರು ರೈತರ ಹಾಗು ನೆರೆ ರಾಜ್ಯಗಳಲ್ಲಿ ತೆಂಗು ನುಸಿರೋಗಕ್ಕೆ ಪರಿಹಾರ ಕಂಡುಕೊಂಡಿರುವ ಬಗ್ಗೆ ವಿಸ್ತಾರವಾಗಿ ಚರ್ಚಿಸಿ ಅಧ್ಯಯನ ಪೂರ್ಣವಾಗಿ ವಿಷಯ ಮಂಡನೆ ಮಾಡಿರುವುದೂ, ನೀರಾ ಇಳಿಕೆಗೆ ಅನುಮತಿಗಾಗಿ ಒತ್ತಾಯವನ್ನು ಸರ್ಕಾರದ ಮೇಲೆ ಹಾಕಿರುವುದೂ ಕಾಣಬರುತ್ತದೆ. ಅನೇಕ ಶಾಸಕರು ಸ್ವಯಂ ಬೆಳೆಗಾರರಾಗಿ ಅನುಭವದ ವಿಸ್ತಾರವನ್ನು, ತಲಸ್ಪರ್ಶಿ, ತಾಂತ್ರಿಕ ಸ್ಪರ್ಶ ಸಂವಹನ ಸ್ಪರ್ಶಿಯಾದಂಥ ಅಧ್ಯಯನ ಪೂರ್ಣ ಮಾಹಿತಿಯನ್ನು ನೀಡಿದ್ದಾರೆ. ಗಮನಾರ್ಹ ವಿಷಯವೆಂದರೆ ನೀರಾದ ಅರ್ಥ (ತೆಂಗಿನ ಮರದಿಂದ ಹೊತ್ತು ಮೂಡುವ ಮುನ್ನ ಮೊದಲಿನಿಂದಲೂ ಇಳಿಸುತ್ತಿದ್ದ, ಹೆಂಡವೆನಿಸದ ಆರೋಗ್ಯಕರ ಪೇಯವೇ*

ನೀರಾ) ಹಾಗು ರಾಜ್ಯದಲ್ಲಿ ಇರುವ ತೆಂಗಿನ ಬೆಳೆ, ನುಸಿರೋಗ ತಗುಲುವ ಸಂದರ್ಭ, ಸ್ಥಳ ಇತ್ಯಾದಿ ಸಂಪೂರ್ಣ ವಿವರಗಳನ್ನು ನೀಡಿದ್ದಾರೆ. ಪರಿಹಾರೋಪಾಯಗಳನ್ನು ಸೂಚಿಸಿದ್ದಾರೆ. ಅವರ ಅನುಭವದಲ್ಲಿಯೇ ಮೂಡಿ ಬಂದಿರುವ ಈ ಬೆಳೆ ಕುರಿತ ತಾಂತ್ರಿಕ ಜ್ಞಾನ, ಸಮಸ್ಯೆಯ ವಿಶ್ಲೇಷಣೆ ಬಹಳ ಆಸಕ್ತಿದಾಯಕವಾಗಿವೆ, ಅರಿವಿಗೆ ಮಾರ್ಗದರ್ಶಕವಾಗಿವೆ. ಇದರ ಆರ್ಥಿಕ, ಸಾಮಾಜಿಕ, ರಾಜಕೀಯ ಆಯಾಮಗಳನ್ನು ತೆರೆದು ತೋರಿದ್ದಾರೆ. 65 ಲಕ್ಷಕ್ಕೂ ಮೀರಿದ ಸಂಖ್ಯೆಯ ತೆಂಗಿನ ಮರಗಳಿಗೆ ನುಸಿರೋಗ ತಗುಲಿತ್ತೆಂದರೆ ಬಡರೈತರ ತುತ್ತಿನ ಚೀಲದ ಮೇಲೆಯೆ ಧಾಳಿಮಾಡಿದ ಮಾರಕರೋಗದ ಹಾವಳಿಯ ಬಗ್ಗೆ ಕಲ್ಪನೆ ಒದಗುತ್ತದೆ. ಅಬ್ಕಾರಿ ಲಾಬಿಯ ಒತ್ತಡದಿಂದ ಆಡಳಿತಕ್ಕೆ ಒದಗುವ ಸಂಕಷ್ಟಗಳ ಚಿತ್ರಣವೂ ಇದೆ. ತೆಂಗಿನ ಫಸಲು ನಿರೀಕ್ಷೆಯ ರೈತರಿಗೆ ಈ ನುಸಿರೋಗದ ಕಾರಣ ಆಗಿರುವ ಅಘಾತ, ಅಂತಾಗಿ ನೀರಾ ಇಳಿಕೆಯ ಅನುಮತಿಗೆ ಆಗ್ರಹಪಡಿಸಿರುವ ಶಾಸಕರು, ಔಷಧಿಯ ರಾಸಾಯನಿಕದಿಂದ ಜೈವಿಕ ನಿಯಂತ್ರಣ ನಾಶವಾಗುವಲ್ಲಿ, ಬದಲಿಗೆ ಜೈವಿಕ ನಿಯಂತ್ರಣದಿಂದಲೇ ರೋಗವನ್ನು ಹತೋಟಿಗೆ ತರುವ ಪ್ರಯತ್ನಗಳ ಬಗ್ಗೆ ಸಲಹೆಗಳು ಬಂದಿವೆ. ಪಲ್ಸ್‌ಪೋಲಿಯೋ ವಿಧಾನದಲ್ಲಿ ಏಕಕಾಲಕ್ಕೆ ಎಲ್ಲ ಮರಗಳಿಗೆ ಔಷಧ ಹೊಡೆಯುವ ವಿಧಾನ ಅನುಸರಿಸಲು ಪರಿಣಿತರ ವರದಿಗಳನ್ನು ಅನುಸರಿಸಲೂ ಸಲಹೆಗಳು ಬಂದಿವೆ.

ನೀರಾ ಸೇಂದಿಯಾದ ಮೇಲೆ ಕ್ಲೋರೋ ಹೈಡ್ರೇಟ್ ಬೆರೆಸಿ ಕಿಕ್ ಪಡೆಯುವ ಕಾರಣ, ಜನಬಳಕೆಯಾಗುವುದರ ಅಪಾಯ, ನುಸಿರೋಗದ ಉಗಮ ಹಾಗು ಪ್ರಸಾರ, ತಜ್ಞರ ಅಭಿಪ್ರಾಯಗಳ ಉದ್ಧೃತ, ಅಪಾಯಕಾರಿ ವಿಧಾನದಲ್ಲಿ ಸಿದ್ಧಪಡಿಸಿದ ಸಾರಾಯಿ ಮಾರಾಟವನ್ನು ನಿಲ್ಲಿಸದೆ, ನೀರಾ ಇಳಿಸುವಿಕೆಗೆ ಅವಕಾಶ ನೀಡದಿರುವುದರಲ್ಲಿನ ವೈರುಧ್ಯ, ನೀರಾದ ಉತ್ಪನ್ನಗಳು ಕುರಿತೆಲ್ಲ ವಿಧಾನಸಭೆ ಹಾಗು ವಿಧಾನಪರಿಷತ್ತಿನಲ್ಲಿ ಚರ್ಚೆಗಳಾಗಿರುವುದು ಗಮನಾರ್ಹವಾಗಿದೆ. ಉಭಯ ಸದನಗಳ ಕಾಳಜಿಯ ಚಿತ್ರ ದೊರಕುತ್ತದೆ ದಿಟ. ಅಲ್ಲದೆ ಫಸಲು ವೈಫಲ್ಯ ರೋಗದ ಕಾರಣದಿಂದಾಗಿ ಆದಾಯ ಕಳೆದುಕೊಂಡ ತೆಂಗು ರೈತರ ಆತ್ಮಹತ್ಯೆಯ ಪ್ರಸ್ತಾಪವೂ ಆಗಿದೆ. ಒಟ್ಟಾರೆ ಸರ್ಕಾರ ನೀರಾ ಇಳಿಸುವಿಕೆಗೆ ಅನುಮತಿ ನೀಡಲಿ ಅಥವಾ ರೋಗ ನಿಯಂತ್ರಣಕ್ಕೆ ಪರ್ಯಾಯ ಮಾರ್ಗ ಹುಡುಕಲಿ ಎಂಬ ಆಗ್ರಹ ಕಾಣುತ್ತದೆ. ಈ ಸಂಬಂಧದಲ್ಲಿ ಈ ಹಿಂದೆಯೇ ನೀರಾ ಚಳುವಳಿಗಾರರ ಮೇಲೆ ವಿಠಲೇನಹಳ್ಳಿಯಲ್ಲಿ ಆದ ಗೋಲಿಬಾರ್, ಮಾನ್ಯ ಮಾಜಿ ಪ್ರಧಾನಮಂತ್ರಿ ಶ್ರೀ ಹೆಚ್.ಡಿ.ದೇವೇಗೌಡರ ಪಾದಯಾತ್ರೆ ಕುರಿತು ಈ ಹಿಂದಿನ ಅಧ್ಯಾಯಗಳಲ್ಲಿ ಪ್ರಸ್ತಾಪಿಸಲಾಗಿದೆ.

ನೀರಾ ಚಳುವಳಿ, ನೀರಾ ಇಳಿಕೆ ಸಂಬಂಧದಲ್ಲಿ ಪತ್ರಿಕಾ ಲೇಖನಗಳೂ ಬಂದಿವೆ. ನೀರಾ ಕುಡಿದರೆ ಹೆಚ್ಚುವ ಜೀವನೋತ್ಸಾಹ, ಗ್ಯಾಸ್ಟ್ರಿಕ್ ತೊಂದರೆಗೆ ಸಾಂತ್ವನ ಔಷಧ ಎಂದು ಚಿತ್ರದುರ್ಗದಲ್ಲಿ ನೀರಾ ಪ್ಯಾಕೆಟ್‌ಗಳನ್ನು ಮನೆ ಬಾಗಿಲಿಗೆ ತಲುಪಿಸಲು ತೆಂಗು ಬೆಳೆಗಾರರು ಮಾಡಿದ್ದ ವ್ಯವಸ್ಥೆ, ನೀರಾಗೆ ಕಲ್ಲುಸಕ್ಕರೆ, ಏಲಕ್ಕಿ ಬೆರಸಿ ಕುಡಿದರೆ ಹೆಚ್ಚುವ ರುಚಿ ಎನ್ನುವುದನ್ನೆಲ್ಲ ಹೇಳಲಾಗಿದೆ. ಆದರೆ ಇಂದು ಶುದ್ಧ ನೀರಾವನ್ನು ಹುಳಿ ಹೆಂಡದ ರೂಪದಲ್ಲಿ ಸೇವಿಸುವುದನ್ನು ಜನ ರೂಢಿಗಿಟ್ಟಿರುಕೊಂಡಿರುವುದು ಕಾಣುತ್ತದೆ. ನೀರಾ ಹೆಸರಿನಲ್ಲಿ ರೈತ ಚಳುವಳಿ ಸಂಘಟಿತವಾದರೂ ಸರ್ಕಾರ ನೀರಾ ಇಳಿಸಲು ಅನುಮತಿ ಕೊಟ್ಟ ಮೇಲೆ ಆ ಸಂಘಟನೆ ಕಾವು ಕಳೆದುಕೊಂಡಿತು. ನೀರಾ ಚಳುವಳಿ ಸಂದರ್ಭದ ಮೊಕದ್ದಮೆಗಳೂ ಇತ್ಯರ್ಥವಾಗಿಬಿಟ್ಟಿವೆ. ನೀರಾ ಒದಗಿಸುವ ಬೆಳೆಗಾರರಿಗೆ ವ್ಯವಸ್ಥಿತ ಮಾರುಕಟ್ಟೆ ಒದಗಿಸುವ ಬಗ್ಗೆ ಕೊಟ್ಟ ಆಶ್ವಾಸನೆಯೂ ಈಡೇರಲಿಲ್ಲ. ಆಯ್ಕೆ ಮರಗಳಿಂದ ನೀರಾ ಇಳಿಸಿದರೂ ಮಾರಾಟಮಾಡುವುದೇ ಒಂದು ಮಹಾಸಾಹಸವೆನ್ನುವಂತಾಗಿದೆ. ಎಲ್ಲ ಮರಗಳಿಗೆ ನೀರಾ ಇಳಿಕೆ ಮಡಕೆ ಕಟ್ಟದಿದ್ದರೆ ನುಸಿರೋಗ ನಿಯಂತ್ರಣ ಸಾಧ್ಯವೆ? ಬಂದ ನೀರಾವನ್ನು ಮಾರಲು ಸಾಧ್ಯವಾಗದಿದ್ದರೆ ಪ್ರಯೋಜನವೇನು? ಸಾರಾಯಿ ಲಾಬಿಯನ್ನು ಎದುರಿಸುವ ಬಗೆ ಹೇಗೆ? ಇವೆಲ್ಲ ತೆಂಗು ಬೆಳೆಗಾರರ ಮುಂದಿದ್ದ ಸಮಸ್ಯೆಗಳು. ಅವರ ಪಾಡು ಇಕ್ಕಳದ ಮಧ್ಯೆ ಸಿಕ್ಕ ಉಸಿರುಕಟ್ಟಿದ ಸ್ಥಿತಿ ಆಯಿತು. ಈ ಸಂದರ್ಭದಲ್ಲಿ ನೀರಾ ಬದಲಿಗೆ ಕೊಬ್ಬರಿಗೆ ಬೆಂಬಲಬೆಲೆ ನಿಗದಿಪಡಿಸಿದಂತೆ ಪರ್ಯಾಯ ವ್ಯವಸ್ಥೆ ಆಗದಿದ್ದರೆ ಅನುಕೂಲವಾಗುತ್ತಿತ್ತು ಎಂಬುದು ಸಾಮಾನ್ಯ ರೈತರ ಅಭಿಪ್ರಾಯವೂ ಆಗಿತ್ತು. ಹೀಗೆಲ್ಲ ಆದರೂ ಚಿತ್ರದುರ್ಗ ಜಿಲ್ಲೆ ಹಿರಿಯೂರು ತಾಲೂಕಿನಲ್ಲಿ ಈಗಲೂ ಬಹಳಷ್ಟು ತೆಂಗು ಬೆಳೆಗಾರರು ನೀರಾ ಇಳಿಸುವಿಕೆಯನ್ನು ಸಾರಾಯಿ ಗುತ್ತಿಗೆದಾರರ ಹಲ್ಲೆಯ ನಡುವೆಯೂ ಮುಂದುವರಿಸಿದ್ದಾರೆ. ಮೊದಲಿಗೆ ಲೀಟರ್‌ಗೆ 15 ರೂ.ನಂತೆ ಮಾರಾಟಗೊಳ್ಳುತ್ತಿದ್ದ ನೀರಾ ಇಂದು 5 ರೂ.ಗೆ ಕೊಟ್ಟರೂ ಕೇಳುವವರಿಲ್ಲ. ನುಸಿ ಪೀಡೆಯು ಹೋಗಲಿಲ್ಲ ನೀರಾದಿಂದಲೂ ಲಾಭವಿಲ್ಲ ಎಂಬಂತಾಗಿ ದಿಕ್ಕುತೋಚದೆ ತೆಂಗು ಬೆಳೆಗಾರ ನಿಂತಿದ್ದಾನೆ. ನೀರಾ ಇಳಿಸಿದ ತೆಂಗಿನ ಮರದಲ್ಲಿಯೂ ಕೂಡ ನುಸಿರೋಗ ಕಾಣಿಸಿಕೊಂಡಿದೆ. ಈ ಬಗ್ಗೆ ನೀರಾದಿಂದ ಲಾಭ ಪಡೆಯಲು [illegible] [illegible] ಮಾರ್ಗವನ್ನು ರೂಪಿಸುತ್ತಿಲ್ಲ ಎಂದು ತೆಂಗು ಬೆಳೆಗಾರರ ಆಕ್ರೋಶವಿರುವ ಬಗ್ಗೆ ಶ್ರೀ ಮಂಜುನಾಥ ಎಳೆನಾಡು (ಕನ್ನಡಪ್ರಭ, 30.3.2006) ಅವರು ಹೇಳಿದ್ದಾರೆ.

ಸದನ ಚರ್ಚೆಯಂತು ಈ ದಿಸೆಯಲ್ಲಿ ಅರ್ಥಪೂರ್ಣ ಚರ್ಚೆಯಾಗಿ ಮನತಟ್ಟುವಂತಿದೆ.

ಉಭಯ ಸದನಗಳ ಚರ್ಚೆಯಲ್ಲಿ ನೀರಾ ಬಗೆಗಿನ ಸಮಸ್ಯೆಗಳ ಪರಿಹಾರಕ್ಕೆ ತಾಂತ್ರಿಕ, ಶಾಸನಿಕ, ಕ್ಷೇತ್ರಾಧ್ಯಯನಗಳ ಆಧಾರಿತ ಮಾರ್ಗೋಪಾಯಗಳು ಮಂಡಿತವಾಗಿರುವಲ್ಲಿ ಅವುಗಳನ್ನು ಜಾರಿಗೊಳಿಸುವಲ್ಲಿ ಶೀಘ್ರಗತಿ ಇಲ್ಲವೇ? ಎಂಬ ಪ್ರಶ್ನೆ ಏಳುತ್ತದೆ. ಮೇಲ್ಲೂಚಿತ ಸಂಗತಿಗಳನ್ನು ಗಮನಿಸುವಲ್ಲಿ ಈ ಪ್ರಶ್ನೆ ಜೀವಂತವಾಗಿಯೇ ಉಳಿದಿದೆ ಎನ್ನಿಸುತ್ತದೆ. ಅದೇನೇ ಇರಲಿ, ಈ ಸಮಸ್ಯೆಯ ಪರಿಹಾರಕ್ಕೆ ಸಮುದಾಯದ ಪ್ರಯತ್ನ ಆಡಳಿತಾಂಗ ಪ್ರಯತ್ನಗಳು ಸಾಮಯಿಕವಾಗಿ ಸಮರಸಗೊಂಡಂತೆ ರೈತ ಬೆಳೆಗಾರರ ಆತಂಕಗಳು ತವಿದು ಬದುಕಿನ ತುತ್ತಿನ ಚೀಲ ತುಂಬುವ ಆಸೆ ಅವರಿಗೆ ಫಲಿತವಾಗಬಹುದು.

# ರೈತರ ಜಲ ಹಾಗೂ ಆರ್ಥಿಕ ಸಮಸ್ಯೆಗಳು

## ಅಧ್ಯಾಯ-14

### ವಿಷಯ 1: ಬಾಗಲಕೋಟೆ ಪ್ರದೇಶದಲ್ಲಿ ಬೆಳೆಗಳಿಗೆ ನೀರಿನ ಅಭಾವ.

2.3.2001ರ ವಿಧಾನಸಭಾಧಿವೇಶನದಲ್ಲಿ[1] ಬಾಗಲಕೋಟೆ ಜಿಲ್ಲೆ ಚಿಕ್ಕಪಡಸಲಗಿ ಹಾಗೂ ಗಲಗಲಿ ಬ್ಯಾರೇಜುಗಳಲ್ಲಿ ನೀರು ಕಡಿಮೆಯಾದ ಕಾರಣ ಬೆಳೆಗಳಿಗೆ ತೊಂದರೆಯಾಗಿ ರೈತರ ಸಮಸ್ಯೆಯ ಬಗ್ಗೆ ಚರ್ಚೆ ನಡೆಯಿತು. ಬೀಳಗಿಯ ಶಾಸಕ ಶ್ರೀ **ಜೆ.ಟಿ.ಪಾಟೀಲ್** ಅವರು ಈ ಬ್ಯಾರೇಜುಗಳಲ್ಲಿ 25–30 ಹಳ್ಳಿಗಳವರು ಅನುಭವಿಸುತ್ತಿರುವ ತೊಂದರೆಯ ಬಗ್ಗೆ ಹೇಳಿದರು. ಮಾನ್ಯ ಸಚಿವ ಶ್ರೀ ಹೆಚ್.ಕೆ. ಪಾಟೀಲ್ ಅವರು ಈ ಬಗ್ಗೆ ಉತ್ತರಿಸುತ್ತ ಕೃಷ್ಣಾ ನದಿಯಲ್ಲಿ ನೀರು ಕಡಿಮೆಯಾದ ಕಾರಣ ಚಿಕ್ಕಪಡಸಲಗಿ, ಗಲಗಲಿ ಬ್ಯಾರೇಜುಗಳಿಗೆ ನೀರು ಹೆಚ್ಚು ಒದಗಿಲ್ಲ. ಕುಡಿಯುವ ನೀರಿಗೂ ತೊಂದರೆಯಾಗಿರುವ ಬಗ್ಗೆ ಮಾಹಿತಿ ಇದೆ. ಹಿಡ್ಕಲ್ ಜಲಾಶಯ ಅಥವಾ ಮಹಿಶ್ವಾಡಿ ಅಥವಾ ಕೊಯ್ನಾದಿಂದ ನೀರು ಬಿಟ್ಟುಕೊಡಲು ಮಾನ್ಯ ಮುಖ್ಯಮಂತ್ರಿಗಳು ಕೇಳಿದ್ದಾರೆ. ನೀರಿನ ಮಟ್ಟ ನೋಡಿಕೊಂಡು, ನೀರು ಬಿಟ್ಟು ಸಾಧ್ಯವಾದಷ್ಟೂ ಸಮಸ್ಯೆಗೆ ಪರಿಹಾರ ಒದಗಿಸಲಾಗುವುದು ಎಂದು ಮಹಾರಾಷ್ಟ್ರದ ಮುಖ್ಯಮಂತ್ರಿಗಳು ಭರವಸೆ ಇತ್ತರು. ಶ್ರೀ ಎಂ.ಆರ್. ಕಲೂತಿ ಅವರು ಕೊಯ್ನಾ ಪಕ್ಕದಲ್ಲಿಯೇ ಇರುವ ಕಾಳಂಬವಾಡಿ ಡ್ಯಾಮ್‌ನಲ್ಲಿ ನೀರಿನ ಸಂಗ್ರಹವಿದ್ದು 2 ಟಿ.ಎಂ.ಸಿ ನೀರನ್ನು ಬಿಡಿಸಿದರೆ ಅನುಕೂಲ ಎಂಬ ಸಲಹೆ ಇತ್ತರು. ಶ್ರೀ ಜೆ.ಟಿ ಪಾಟೀಲ್ ಅವರು ಹಿಡ್ಕಲ್ ಜಲಾಶಯದಲ್ಲಿ ನೀರಿನ ಸಂಗ್ರಹ ಕಡಿಮೆ. ಭೀಮಾನದಿ ವ್ಯಾಪ್ತಿಯ ಹಳ್ಳಿಯ ರೈತರಿಗಾಗಿರುವಂಥ ತೊಂದರೆ ಕೃಷ್ಣಾನದಿ ವ್ಯಾಪ್ತಿಯ ಹಳ್ಳಿಯ ರೈತರಿಗೂ ಆಗುವ ಕಾರಣ ಕೊಯ್ನಾ ಅಥವಾ ಕಾಳಂಬವಾಡಿ ಡ್ಯಾಂನ ಮುಖಾಂತರ ನೀರನ್ನು ಬಿಡಲು ಮಹಾರಾಷ್ಟ್ರದ ಮುಖ್ಯಮಂತ್ರಿಗಳೊಡನೆ ಮಾತನಾಡಿ, ಇನ್ನೂ 4–5 ದಿನಗಳೊಳಗೆ ವ್ಯವಸ್ಥೆ ಮಾಡಲು ವಿನಂತಿಸಿದರು. ಅಥಣಿಯ ಶ್ರೀ ದೊಂಗರಗಾಂವ **ಶಹಜಹಾನ ಇಸ್ಮಾಯಿಲ್** ಅವರೂ ಈ ಸಲಹೆಗೆ ದನಿಗೂಡಿಸಿದರು. ಭಾರಿ ನೀರಾವರಿ ಸಚಿವ ಶ್ರೀ **ಹೆಚ್.ಕೆ. ಪಾಟೀಲರು** ಮಾನ್ಯ ಶಾಸಕರ ಮೂರು ಪರ್ಯಾಯ ಸೂಚನೆಗಳ ಬಗ್ಗೆ ಚಿಂತನೆ ಮಾಡಿ ಸರ್ಕಾರ ನೀರು ಬಿಡಿಸುವ ಕೆಲಸ ಮಾಡುತ್ತದೆ; ರೈತರ ಕಷ್ಟ ಪರಿಹರಿಸುತ್ತದೆ ಎಂದರು.

### ವಿಷಯ 2: ಸಕ್ಕರೆ ಕಾರ್ಖಾನೆಯಿಂದ ಕಬ್ಬಿನ ಹಣ ಬಾಕಿ

ಚಾಮರಾಜನಗರ ಜಿಲ್ಲೆ ಮಹದೇಶ್ವರ ಸಕ್ಕರೆ ಕಾರ್ಖಾನೆಯು ರೈತರು ಒದಗಿಸಿದ ಕಬ್ಬಿಗೆ ಬಾಕಿ ಹಣವನ್ನು ಪಾವತಿಸಿರುವ ವಿಚಾರವನ್ನು 28.3.2001ರಂದು ವಿಧಾನಸಭೆಯಲ್ಲಿ[2] ಪ್ರಸ್ತಾಪಿಸಿದ ಸಂತೆಮಾರನಹಳ್ಳಿ ಶ್ರೀ **ಐ.ಆರ್. ಕೃಷ್ಣಮೂರ್ತಿ**

1. (ವಿಧಾನ ಸಭಾ ನಡವಳಿಕೆಗಳು.ಸಂಪುಟ 1. ಭಾಗ 1,ಪು.348–49,(2.3.2001)).
2. (ವಿಧಾನಸಭಾ ನಡವಳಿಕೆಗಳು, ಸಂಪುಟ 4(1–3), ಭಾಗ 1, (28.3.2001)ಪು.629–673)

ಅವರು, 30.1.2001 ಹಾಗು 2.2.2001ರ ಸಭೆಯು ವಿಫಲವಾಯಿತು. ರೈತರು ಕಳೆದ ವಾರ ಆತ್ಮಾಹುತಿ ಮಾಡಿಕೊಳ್ಳುತ್ತೇವೆಂದು ವಿಧಾನಸೌಧಕ್ಕೆ ಲಗ್ಗೆ ಇಟ್ಟ ಸಂದರ್ಭದಲ್ಲಿ ಸರ್ಕಾರ ಮಧ್ಯ ಪ್ರವೇಶಮಾಡಿ, ರೈತರ ಮತ್ತು ಕಾರ್ಖಾನೆ ಮಾಲೀಕರ ನಡುವೆ ಕರಾರು ಒಪ್ಪಂದ ಮಾಡಿತು. ಕಾರ್ಖಾನೆಯ 11 ಕೋಟಿ 38 ಲಕ್ಷ ರೂಪಾಯಿ ಮೇ 31ರ ಒಳಗೆ ಬಾಕಿಯನ್ನು ಕಂತುಗಳಲ್ಲಿ ಕೊಡುವ ಒಪ್ಪಂದ ಮಾಡಿಕೊಂಡಿತು.ಆದರೆ ಅದನ್ನು ಉಲ್ಲಂಘನೆ ಮಾಡಿ ಇವೊತ್ತು ಕಬ್ಬಿನ ಕಟಾವಿನ ಪೇಮೆಂಟ್ ಮಾಡುವ ಬಗ್ಗೆ ಹೇಳಿದ ಪ್ರಯುಕ್ತ ನಿನ್ನೆಯದಿನ ರಾತ್ರಿಯಿಡೀ ಕಾರ್ಖಾನೆ ನೌಕರರನ್ನು ದಿಗ್ಬಂಧನ ಮಾಡಿ 5 ಲೋಡ್ ಸಕ್ಕರೆ ಲಾರಿಗಳನ್ನು ಕೂಡ ರೈತರು ಸುತ್ತುವರಿದು ನಿಲ್ಲಿಸಿದ್ದಾರೆ. ಈ ಕುರಿತು ಸರ್ಕಾರ ಗಂಭೀರವಾಗಿ ಪರಿಗಣಿಸಿ ರೈತರ ಹಣವನ್ನು ಪಾವತಿ ಮಾಡುವ ತೀರ್ಮಾನ ಮಾಡಿ ಸಮಸ್ಯೆಯನ್ನು ಬಗೆಹರಿಸಬೇಕೆಂದು ಸರ್ಕಾರವನ್ನು ಕೇಳಿಕೊಂಡರು.

ಮಾನ್ಯ ಸಹಕಾರ ಸಚಿವ ಶ್ರೀ **ಡಿ.ಕೆ.ಶಿವಕುಮಾರ್** ಅವರು ಉತ್ತರಿಸುತ್ತ: ಮೊದಲಿಗೆ ಸಹಕಾರ ಸಕ್ಕರೆ ಕಾರ್ಖಾನೆಯಾಗಿದ್ದು ಈಗ ಖಾಸಗಿ ಒಡೆತನದ ಫ್ಯಾಕ್ಟರಿ ಆಗಿದೆ. ರೈತರಿಗೆ ಹಣವನ್ನು ಪಾವತಿಮಾಡಲು ಬ್ಯಾಂಕುಗಳಿಂದ ಫ್ಯಾಕ್ಟರಿಗೆ ಒಂದಷ್ಟು ಸಾಲ ಕೊಡಿಸಲಾಗಿದೆ. ಆದರೆ ಸಕ್ಕರ ಲಾರಿಯು ಹೊರಗೆ ಹೋಗುವುದನ್ನು ಅಡ್ಡಗಟ್ಟಿದರೆ ಹಣ ಬರುವುದಾದರೂ ಹೇಗೆ ! ರೈತರ ಸಹಕಾರ, ಸಂಸ್ಥೆಯ ಆಸ್ತಿಪಾಸ್ತಿ ದಾಖಲೆಗಳನ್ನು ಗ್ಯಾರಂಟಿಯಾಗಿ ಒದಗಿಸಿದರೆ ಹಣವನ್ನು ಬಿಡುಗಡೆಮಾಡಿ ಸಮಸ್ಯೆ ಪರಿಹರಿಸಬಹುದು ಎಂದರು. ಶ್ರೀ ಎ.ಆರ್.ಕೃಷ್ಣಮೂರ್ತಿಯವರು, ಬ್ಯಾಂಕ್‌ನವರು ಕಾರ್ಖಾನೆಯವರಿಗೆ ನೀಡಿದ 5ಕೋಟಿ ರೂ ಸಾಲದಲ್ಲಿ ರೈತರಿಗೆ 4ಕೋಟಿ ವಿತರಣೆ ಮಾಡುವ ಲಿಖಿತ ಒಪ್ಪಂದವಾಗಿರುವಲ್ಲಿ ರೈತರಿಗೆ ಸಕಾಲದಲ್ಲಿ ಹಣಪಾವತಿಸಲಿ. ರೈತರ ಹಾಗು ನಮ್ಮ ರಕ್ಷಣೆಗೆ ಅಧ್ಯಕ್ಷರು ಬರಬೇಕೆಂದು ವಿನಂತಿಸಿದರು; ರೈತರು ಇದಾಗದಿದ್ದರೆ ಯಾವ ತೀರ್ಮಾನ ತೆಗೆದುಕೊಳ್ಳುವರೆಂಬುದು ಹೇಳಲು ಕಷ್ಟ. ಸರ್ಕಾರ ಇದನ್ನು ಸೂಕ್ತವಾಗಿ ಬಗೆಹರಿಸಲಿ ಎಂದರು.

ಶ್ರೀ **ಉಮೇಶ್ ವಿ.ಕತ್ತಿ** ಅವರು ಮಾತನಾಡಿ, ತಮ್ಮ ಕಡೆಯಲ್ಲಿ ಸಹಕಾರಿ ಸಕ್ಕರೆ ಕಾರ್ಖಾನೆಗಳು ರೈತರಿಗೆ, ಅವರು ಕಬ್ಬು ಹೊಡೆಯುತ್ತಿದ್ದರೂ ಹಣ ಪಾವತಿ ಮಾಡದೆ ಮಾಡುತ್ತಿರುವ ಮೋಸ; ಸರ್ಕಾರದ ಗ್ಯಾರೆಂಟಿ ಒದಗಿದರೆ ಮಾತ್ರ ಹಾವೇರಿ ಶುಗರ್ ಫ್ಯಾಕ್ಟರಿಯವರಿಗೆ ಕೊಡುವ ಸಾಲ ಕುರಿತು ಹೇಳಿದರು. ಹಾಗು

ರೈತರಿಗೆ ಬಾಕಿ ಕೊಡದೇ ಇರುವ ಕಾರಣ ವಾರಕೊಮ್ಮೆ ಹೈವೇ ಬಂದ್ ಮಾಡುತ್ತಿದ್ದಾರೆ. ಇದಕ್ಕೆಲ್ಲ ಸರ್ಕಾರ ಸ್ಪಷ್ಟೀಕರಣ ನೀಡಬೇಕು ಎಂದರು.

ಶ್ರೀ **ವಿ.ಬಿ.ಪಾಟೀಲ್** ಅವರು ಹಾವೇರಿ ಸಹಕಾರಿ ಸಕ್ಕರೆ ಕಾರ್ಖಾನೆಯಿಂದಲೂ ಹೀಗೆಯೇ ಸಮಸ್ಯೆಯಾಗಿ, ರೈತರು ಅಲ್ಲಿ ಧರಣಿ ಕುಳಿತಿದ್ದಾರೆ. ರಾಯಬಾಗ ಕಾರ್ಖಾನೆಯಲ್ಲಿ ಏನೂ ಇಲ್ಲದಿದ್ದರೂ 2ವರ್ಷ ಗ್ಯಾರೆಂಟಿ ಕೊಡುವ ಸರ್ಕಾರ ಹಾವೇರಿ ಕಾರ್ಖಾನೆ ಉತ್ತಮವಾಗಿ ನಡೆಯುತ್ತಿದ್ದರೂ, ರೈತರ ಧರಣಿ ನಡೆದರೂ ಸರ್ಕಾರದ ಗಮನ ಹೋಗಿಲ್ಲ. ಸರ್ಕಾರ ಗ್ಯಾರೆಂಟಿ ಕೊಡುವ ಬಗ್ಗೆ ಕ್ರಮಕೈಗೊಳ್ಳಲಿ ಎಂದರು.

ಶ್ರೀ **ಪಿ.ಜಿ.ಆರ್.ಸಿಂಧ್ಯ** ಅವರು, ಸದನದ ಸದಸ್ಯರಿಂದ (ಸರ್ವಶ್ರೀ ಕೃಷ್ಣಮೂರ್ತಿ, ಗುರುಪ್ರಸಾದ್, ಮಹದೇವಪ್ರಸಾದ್) ಚಾಮರಾಜನಗರ ಸಕ್ಕರೆ ಕಾರ್ಖಾನೆ ರಾಯಭಾಗ ಸಕ್ಕರೆ ಕಾರ್ಖಾನೆ, ಕುರಿತು ಪ್ರಸ್ತಾಪಿತವಾಗಿರುವಲ್ಲಿ, ಹಾವೇರಿ ಸಕ್ಕರೆ ಕಾರ್ಖಾನೆಗೆ ಸಾಲ ದಕ್ಕದಿರುವುದರಿಂದ ರೈತರು ಬೀದಿಪಾಲಾಗಿ ಪಡುತ್ತಿರುವ ಕಷ್ಟ ಕುರಿತೆಲ್ಲ ಹೇಳಿ, ಈ ಬಗ್ಗೆ ಸರ್ಕಾರದ ಉತ್ತರಕ್ಕಿಂತ, ಪರಿಹಾರ ಘೋಷಣೆ ಆಗಲಿ ಎಂದು ಒತ್ತಾಯಿಸಿದರು. ಶ್ರೀ ಎ.ಆರ್.ಕೃಷ್ಣಮೂರ್ತಿ ಅವರು, ಹಣಪಾವತಿಸುವಲ್ಲಿ ಮಾಲೀಕರು ವಿಫಲವಾಗಿರುವ ಬಗ್ಗೆ, ರೈತರ ಲಾರಿ ಮುತ್ತಿಗೆ ಕುರಿತೆಲ್ಲ ಹೇಳಿದರು.

ಸಕ್ಕರೆ ಸಚಿವ ಶ್ರೀ **ವಿ.ಕೃಷ್ಣಪ್ಪ** ಅವರು ಈ ಹಣಪಾವತಿಯ ತಾಂತ್ರಿಕ, ನಿಯಮಾವಳಿ ಹಾಗೂ ಆಡಳಿತ ಪ್ರಕ್ರಿಯೆಗಳ ಕಾರಣ ವಿಳಂಬವಾಗಿರುವ ಬಗ್ಗೆ ಹೇಳಿದಾಗ ಶ್ರೀ ಎ.ಆರ್. ಕೃಷ್ಣಮೂರ್ತಿಯವರು ಸಾಲ ಕೊಡುವ ತೀರ್ಮಾನ ಈಡೇರದ ಕಾರಣ ಸಕ್ಕರೆ ಲಾರಿಗೆ, ಕಾರ್ಖಾನೆ ನೌಕರರಿಗೆ ರೈತರು ದಿಗ್ಬಂಧನ ಮಾಡಿದ್ದಾರೆ ಎಂದರು. ಶ್ರೀ ವಿ. ಕೃಷ್ಣಪ್ಪನವರು ಈಗಾಗಲೆ 28ಲಕ್ಷ ರೂ.ಗಳನ್ನು ರೈತರಿಗೆ ಬಟವಾಡೆ ಮಾಡಿದೆ. ಉಳಿದ ದುಡ್ಡು ಕೊಡಲು ಬ್ಯಾಂಕ್ ಮೀಟಿಂಗ್ ಇಂದು ನಡೆದು ಸಾಲಸ್ಯಾಂಕ್ಷನ್ ಆರ್ಡರ್ ಕೊಟ್ಟಿದ್ದಾರೆ. ತಾಳ್ಮೆಯಿಂದ ಇನ್ನೆರಡು ದಿನ ಕಾಯ್ದರೆ ಅನುಕೂಲವಾಗುತ್ತದೆ ಎಂದು ಸದಸ್ಯರ ಸಹಕಾರ ಬಯಸಿದರು. ರಾಯ್‌ಬಾಗ್ ಸಕ್ಕರೆ ಕಾರ್ಖಾನೆ ಸಮಸ್ಯೆ ಪರಿಹರಿಸಲು ಸರ್ಕಾರ ಕ್ಯಾಬಿನೆಟ್ ಸಬ್‌ಕಮಿಟಿಯನ್ನು ರಚಿಸಿದೆ ಎಂದು ನುಡಿದರು. ಅದಕ್ಕೆ ಶ್ರೀ ಉಮೇಶ್ ವಿ. ಕತ್ತಿ ಅವರು ಎಲ್ಲ ಅನುಕೂಲ ಮಾಡಿಕೊಟ್ಟರೂ, ರಾಯಬಾಗ ಸಕ್ಕರೆ ಕಾರ್ಖಾನೆ

ರೈತರಿಗೆ 23 ಕೋಟಿ ಬಾಕಿ ಎರಡು ವರ್ಷದಿಂದ ಕೊಡಬೇಕಿರುವುದನ್ನು ಕೊಟ್ಟಿಲ್ಲ. ರೈತರಿಗೆ ಮೋಸಮಾಡಿ ಕಬ್ಬು ತಂದು ನುರಿಸುತ್ತಿದ್ದಾರೆ. ಇದರ ಬಗ್ಗೆ 13ನೇ ತಾರೀಖಿನಂದೆ ಜೀರೋ ಅವರ್‌ನಲ್ಲಿ ನೋಟೀಸ್ ಕೊಟ್ಟರೂ ಉತ್ತರ ಬಂದಿಲ್ಲ ಎಂದರು. ಅಧ್ಯಕ್ಷರು ಚರ್ಚೆಯನ್ನು ಇನ್ನೊಂದು ದಿನಕ್ಕೆ ಮುಂದೂಡಿದರು.

## ವಿಷಯ 3: ಅರಸೀಕೆರೆ, ತಿಪಟೂರು, ತುರುವೇಕೆರೆ ಕೊಬ್ಬರಿ ಮಾರುಕಟ್ಟೆಯಲ್ಲಿ ರೈತರಿಗೆ ಹಣ ಪಾವತಿ ಕೊರತೆ

ತುರುವೇಕೆರೆಯ ಶ್ರೀ **ಎಂ.ಡಿ.ಲಕ್ಷ್ಮೀನಾರಾಯಣ್** ಅವರು ಸಭಾಧ್ಯಕ್ಷರಲ್ಲಿ ವಿಷಯವನ್ನು 31.3.2001ರ ವಿಧಾನಸಭಾಧಿವೇಶನದಲ್ಲಿ[3] ಪ್ರಸ್ತಾಪ ಮಾಡುತ್ತ; ಪ್ರಮುಖ ಕೊಬ್ಬರಿ ಬೆಳೆವ ಕೇಂದ್ರ ತುಮಕೂರು ಜಿಲ್ಲೆ. ಆ ಜಿಲ್ಲೆಯ ಅರಸೀಕೆರೆ, ತಿಪಟೂರು ತುರುವೇಕೆರೆ ಹಾಗೂ ಇನ್ನಿತರ ಮಾರುಕಟ್ಟೆಗಳಲ್ಲಿ ರೈತರಿಂದ ಕೊಬ್ಬರಿ ಕೊಂಡು, ಎರಡು ತಿಂಗಳಿಂದ ರೈತರಿಗೆ ಹಣ ಪಾವತಿ ಆಗಿಲ್ಲ. ಸರ್ಕಾರ ಕೊಟ್ಟಿರುವ 9 ಕೋಟಿ ರೂಗಳ ಚೆಕ್‌ಗಳು ಬೌನ್ಸ್ ಆಗಿವೆ. ಅದರ ಕಾಪಿಯನ್ನು ಸಭಾ ಅಧ್ಯಕ್ಷರಾದ ತಮಗೆ ನೀಡಿದೆ. 1 ತಿಂಗಳು 21 ದಿವಸಗಳಿಂದ ಕೊಟ್ಟಿರುವಂಥ ಎಲ್ಲಾ ಚೆಕ್‌ಗಳು ಬೌನ್ಸ್ ಆದ ಕಾರಣ ರೈತರು ಮಾರುಕಟ್ಟೆಯಲ್ಲಿ ಧರಣಿ ಕುಳಿತಿದ್ದಾರೆ. ಸರ್ಕಾರ ಮುಂದೆ ಬಂದು ಅವರಿಗೆ ಸಮಾಧಾನ ಹೇಳುತ್ತಿಲ್ಲ. ನಫೆಡ್‌ನಿಂದ ಹಣ ಬಂದಿರುವಲ್ಲಿ, ಚೆಕ್‌ಗಳಿಗೆ ಹಣ ಬಿಡುಗಡೆ ಮಾಡಬೇಕು. ಜಿಲ್ಲೆಯ ಸಚಿವ ಶ್ರೀ ಜಯಚಂದ್ರ ಅವರು ಹಣದ ಕೊರತೆ ಇದೆ ಎಂದರೆ, ಮಾರುಕಟ್ಟೆ ಕೃಷಿ ಸಚಿವರು ಆವರ್ತನಾಧಿಯಲ್ಲಿ 29.16 ಲಕ್ಷ ಹಣ ಇದೆ; ಅದು ಖರ್ಚಾಗಿಲ್ಲ ಎಂದಿದ್ದಾರೆ. ಈ ವ್ಯತ್ಯಾಸದ ಹೇಳಿಕೆ ಏಕೆ! ರೈತರಿಗೆ ಹಣ ಏಕೆ ಕೊಡುತ್ತಿಲ್ಲ. ಅವರು ತರುವ ಕೊಬ್ಬರಿಯನ್ನು ವಾಪಸ್ಸು ಕಳಿಹಿಸಲಾಗುತ್ತಿದೆ. ಕಳೆದ ಬಾರಿ ಕಡಲೆಕಾಯಿ ಬೆಳೆದಂಥ ಸಂದರ್ಭದಲ್ಲಿ ಇದೇ ರೀತಿ ಕೊಳ್ಳದಂಥ ಸಮಯದಲ್ಲಿ ರೈತರ ಮೇಲೆ ಗೋಲಿಬಾರ್ ಆಗಿ ಅನೇಕರು ಸತ್ತಿದ್ದಾರೆ. ಈ ಸದನ ಮುಗಿದು ನಾವು ಆ ಕ್ಷೇತ್ರಗಳಿಗೆ ಹೋದಂಥ ಸಂದರ್ಭದಲ್ಲಿ ರೈತರು ನಮ್ಮ ಮನೆಗೆ ಮುತ್ತಿಗೆ ಹಾಕುವಂಥ ಸಂದರ್ಭ ಒಂದು ಕಡೆ. ಕೃಷಿ ಮಾರುಕಟ್ಟೆಗೆ ಮುತ್ತಿಗೆ ಹಾಕುವಂತ ಸಂದರ್ಭ ಇನ್ನೊಂದು ಕಡೆ. ಹೀಗೆ ಗಲಭೆಗಳು ಆಗಿ ಸರ್ಕಾರಕ್ಕೆ ಕೆಟ್ಟ ಹೆಸರು ಬರುವ ವಾತಾವರಣ ಇದೆ. ನಿರಾಸೆ ಮೂಡಿಸಿರುವಂತ ಕೊಬ್ಬರಿ ಖರೀದಿ, ಎನ್ನುವ ಮಾತು ಪತ್ರಿಕೆಗಳಲ್ಲಿ

3. (ವಿಧಾನಸಭಾ ನಡವಳಿಕೆಗಳು,11ನೇ ಅಧಿವೇಶನ,ಸಂಪುಟ 4,ಭಾಗ1(31.3.2001) ಪು.1339–40)

ಬಂದಿದೆ. ಮಾನ್ಯ ಸಚಿವರು ಕ್ಯಾಬಿನೆಟ್ ಸಬ್ ಕಮಿಟಿಯಲ್ಲಿ ತೀರ್ಮಾನ ತೆಗೆದುಕೊಂಡು ನಾಳೆಯೇ ಹಣ ಬಿಡುಗಡೆಗೆ ವ್ಯವಸ್ಥೆ ಮಾಡಲಾಗುವುದೆಂದು ಹೇಳಿ 3–4 ದಿನ ಆದರೂ, ಏನೂ ವ್ಯವಸ್ಥೆ ಆಗಿಲ್ಲ. ರೈತರು ತಾಲೂಕುಮಟ್ಟದಲ್ಲಿ ಜಿಲ್ಲಾಮಟ್ಟದಲ್ಲಿ ಗಲಾಟೆ ಮಾಡುವ, ಸರ್ಕಾರಿ ಕಛೇರಿಗಳಿಗೆ ನುಗ್ಗುವ ಕಾರ್ಯಕ್ರಮವಿದೆ. ತುರುವೇಕೆರೆ, ತಿಪಟೂರುಗಳಲ್ಲಿ ಕೊಂಡಿರುವ ಕೊಬ್ಬರಿಗೆ ರಸೀದಿ ಕೊಟ್ಟಿದ್ದರೂ ಸಹ ಹಳ್ಳಿಯ ರೈತರಿಗೆ ಕೊಟ್ಟಿರುವ ಚೆಕ್‌ಗಳು ಬೌನ್ಸ್ ಆಗಲು ಕಾರಣ ಏನು ! ಸರ್ಕಾರ ಬೌನ್ಸ್ ಆಗಿರುವ ಚೆಕ್‌ಗಳನ್ನು ವಾಪಸ್ಸು ಪಾವತಿಸಿಕೊಂಡು ಇರುವ 29.16 ಕೋಟಿ ರೂ ಆವರ್ತನಿಧಿಯಿಂದ ಹಣವನ್ನು ಬಿಡುಗಡೆ ಮಾಡಿ ಅದರಿಂದ ರೈತರಿಗೆ ಹಣ ಒದಗುವಂತೆ ಮಾಡಬೇಕು ಎಂದು ಮನವಿ ಇಟ್ಟರು. ಸಭಾಧ್ಯಕ್ಷರು ಕೃಷಿಸಚಿವರು, ಈ ಬಗ್ಗೆ ಉತ್ತರಿಸುತ್ತಾರೆ ಎಂದರು.

**ವಿಷಯ 4: ಸಕ್ಕರೆ ಕಾರ್ಖಾನೆಗಳ ಕಬ್ಬು ಉತ್ಪಾದನೆ, ರಫ್ತು, ಮತ್ತು ಹಣಪಾವತಿ**

24.1.2002ರ ವಿಧಾನಸಭೆಯ ಚರ್ಚೆಯಲ್ಲಿ[4] ಸಕ್ಕರೆ ಕಾರ್ಖಾನೆಗಳ (ಖಾಸಗಿ ಮತ್ತು ಸರ್ಕಾರಿ) ಸಂಖ್ಯೆ, ಸಕ್ಕರೆ ಉತ್ಪಾದನೆ, ದಾಸ್ತಾನು, ರೈತರಿಂದ ಪಡೆದ ಕಬ್ಬು ಹಾಗು ಪಾವತಿಸಿದ ಹಣ, ಮತ್ತು ಬಾಕಿ, ಬಿಡುಗಡೆ ಮಾಡಿದ ಸಕ್ಕರೆ ಇತ್ಯಾದಿಗಳ ಕುರಿತು ಚರ್ಚೆಗಳಾದವು. ಒಟ್ಟು 38 ಸಕ್ಕರೆ ಕಾರ್ಖಾನೆಗಳಿಂದ 15–16 ಟನ್ ಸಕ್ಕರೆ ಉತ್ಪಾದನೆ; 31.12.2001ರ ಅಂತ್ಯಕ್ಕೆ 1380 ಕೋಟಿ ರೂ. ಮೌಲ್ಯದ 10.62 ಲಕ್ಷ ಮೆ. ಟನ್ ದಾಸ್ತಾನು; 55.56 ಲಕ್ಷ ಮೆಟ್ರಿಕ್ ಟನ್‌ಗಳ ಕಬ್ಬು ಖರೀದಿಸಿಲ್ಲ; ರೈತರಿಗೆ 280.91 ಕೋಟಿ ಹಣಪಾವತಿ; ಬಾಕಿ ಕೊಡಬೇಕಾದ್ದು 184.96 ಕೋಟಿ, ಎಂದೆಲ್ಲಾ ಉತ್ತರಗಳೂ ಒದಗಿದುವು.

ಶ್ರೀ **ಬಿ.ಎನ್.ಬಚ್ಚೇಗೌಡರು** ಈ ಬಗ್ಗೆ ಚರ್ಚಿಸುತ್ತ; ಹಾಲಿ ಸಕ್ಕರೆ ದಾಸ್ತಾನನ್ನು ಬಿಡುಗಡೆ ಮಾಡುವ ಬಗ್ಗೆ ಕೇಂದ್ರದೊಡನೆ ಚರ್ಚಿಸಿ ತೀರ್ಮಾನ ಕೈಗೊಳ್ಳುವ ಬಗ್ಗೆ ಸಚಿವರ ಹೇಳಿಕೆ ಕಳೆದ ಸದನದಲ್ಲಿ ಹೇಳಿದ್ದು, ಆ ಬಗೆಗಿನ ತೀರ್ಮಾನ ತಿಳಿಯಲಿಲ್ಲ. ಸಕ್ಕರೆ ಬಿಡುಗಡೆ ಆಗಿಲ್ಲ. ರೈತರಿಗೆ ಹಣ ಪಾವತಿ ಆಗಿಲ್ಲ. ಮಂಡ್ಯ, ಪಾಂಡವಪುರ ಸಕ್ಕರೆ ಕಾರ್ಖಾನೆಗಳಿಂದ ರೈತರಿಗೆ ಹಣ ಬಾಕಿ ಇದೆ. ಕೇಂದ್ರ ಸರ್ಕಾರ ಖಾಸಗಿ ಕಾರ್ಖಾನೆಗಳಿಗೆ ಕೊಟ್ಟ ಹಣ,ರೈತರಿಗೆ ಬೇರೆ ಕೆಲಸಗಳಿಗೆ ಉಪಯೋಗವಾಗುತ್ತಿದೆ. ಸಾಕಷ್ಟು ಸಕ್ಕರೆ ದಾಸ್ತಾನು ಇದ್ದರೂ ಮಾರುಕಟ್ಟೆಗೆ ಬಿಡುಗಡೆ

4. (ವಿಧಾನಸಭಾ ನಡವಳಿಕೆಗಳು, ಸಂಪುಟ 1(4–5), ಭಾಗ 2, (24.1.2002) ಪು.1200–1211).

ಮಾಡಿಲ್ಲ. ಜೊತೆಗೆ ಮಾರಾಟಕ್ಕೆ ನಿಷೇಧವನ್ನೂ ಹಾಕಲಾಗಿದೆ. ಬೇರೆ ರಾಜ್ಯಕ್ಕೆ ಹೋಗಿ ಮಾರಿ ಹೆಚ್ಚಿನ ಬೆಲೆ ಸಿಗುವುದನ್ನೂ ಹೀಗಾಗಿ ತಪ್ಪಿಸಿದಂತಾಗಿದೆ, ಎಂದು ಇದಕ್ಕೆ ಸಚಿವರ ಉತ್ತರವನ್ನು ಬಯಸಿದಾಗ ಶ್ರೀ **ಎ.ಕೃಷ್ಣಪ್ಪ** ಅವರು; 2ಸಾವಿರ ಕೋಟಿ ರೂ. ಮೌಲ್ಯದಷ್ಟು ಸಕ್ಕರೆಯಿದ್ದುದನ್ನೂ ವಿತರಿಸಿ 1380 ಕೋಟಿ ರೂ.ಸ್ಟಾಕ್‌ಗೆ ತಂದಿದ್ದೇವೆ. ರಫ್ತು ಮಾಡುವ ಕಾರ್ಖಾನೆಗಳಿಗೆ ಹಲವಾರು ರಿಯಾಯಿತಿಗಳನ್ನು ನೀಡಿದೆ. ಕಬ್ಬಿನ ಟ್ಯಾಕ್ಸನ್ನು ಅವರ ಮೇಲೆ ತೆಗೆದುಹಾಕಲಾಗಿದೆ. ಕಳೆದ ವರ್ಷದ ಸಾಲದ ಬಾಬ್ತು 11 ಕೋಟಿ ರೂ. ಮಾತ್ರ ಬಾಕಿ ಇದೆ. ಪಾಂಡವಪುರ, ಮಂಡ್ಯದ 2–3 ಕಾರ್ಖಾನೆಗಳಿಗೆ ಸರ್ಕಾರ ಗ್ಯಾರೆಂಟಿ ನಿಂತು, ಮೊದಲ ಬಾರಿಗೆ ಬಿಡಿಸಿಸಿ, ಅಪೆಕ್ಸ್ ಬಾಂಕ್‌ಗಳಿಂದ ಹಣ ಕೊಡಿಸಿದೆ. ರೈತರ ಆರ್ಥಿಕ ಸಂಕಷ್ಟವನ್ನು ತಪ್ಪಿಸಲಿಕ್ಕೆ ಸರ್ಕಾರ ವಿವಿಧ ಕ್ರಮಗಳನ್ನು ಕೈಗೊಂಡಿದೆ. ರೈತರಿಗೆ ಕೊಡಬೇಕಾದಂಥ ಬಾಕಿ ವಿಚಾರದಲ್ಲಿ ತಾರತಮ್ಯ ಅಥವಾ ಬೇಜವಾಬ್ದಾರಿ ತೋರಿದ ಕಾರ್ಖಾನೆಗಳ ಮೇಲೆ, ಕಠಿಣ ಕ್ರಮ ತೆಗೆದುಕೊಂಡು, ಅವರ ಆಸ್ತಿಗೆ ಮುಟ್ಟುಗೋಲು ಹಾಕಲಾಗಿದೆ. ಕಬ್ಬು ಹೊರರಾಜ್ಯಗಳಿಗೆ ಹೋಗಿ, ಕೋಟಿ ರೂಪಾಯಿಗಳಷ್ಟು ಏನು ಟ್ಯಾಕ್ಸ್ ಸೋರಿ ಹೋಗುತ್ತಿತ್ತು, ಅದನ್ನು ತಪ್ಪಿಸಲು ಸಾಗಾಣಿಕೆಗೆ ನಿಷೇಧ ಹಾಕಿದೆವು, ನಿಜ. ನಮ್ಮಲ್ಲಿರುವ ಫ್ಯಾಕ್ಟರಿಗಳಿಗೆ ಪ್ರೊಡಕ್ಷನ್‌ಗೆ ರಾಮೆಟೀರಿಯಲ್ಸ್‌ನ ಕೊರತೆ ಬಂತೋ ಅಂಥ ಕಡೆ ಪರ್ಮಿಷನ್ ಕೊಟ್ಟಿದೆ. ಶಾಸಕರಿಂದ ಮನವಿ ಬಂದ ಕಡೆಯೂ ಹೀಗೆಯೇ ಎಕ್ಸ್‌ಂಪಷನ್ ಕೊಟ್ಟಿದೆ, ಎಂದರು.

ಶ್ರೀ **ಜಗದೀಶ್ ಶೆಟ್ಟರ್** (ವಿರೋಧ ಪಕ್ಷದ ನಾಯಕರು) ಅವರು ಮಾತನಾಡಿ; ರೈತರು ಬೆಳೆದ ಕಬ್ಬಿಗೆ ಬೇರೆ ರಾಜ್ಯದಲ್ಲಿ ಮಾರಾಟ ಮಾಡಿದರೆ ಒಳ್ಳೆಯ ಬೆಲೆ ಬರುತ್ತದೆಂದರೆ ರೈತರು ಏಕೆ ಮಾರಾಟ ಮಾಡಬಾರದು ? ನಿಷೇಧ ಮಾಡುವುದರಿಂದ ರೈತರ ಶೋಷಣೆಯಾಗುತ್ತದೆ. ಕೆಲವೊಂದು ಕಡೆ ನಿಷೇಧ ತೆಗೆದಂತೆ ಎಲ್ಲ ಕಡೆಯಲ್ಲಿಯೂ ತೆಗೆಯಬೇಕು. ಕಾರ್ಖಾನೆಗೆ ಕೊಟ್ಟ ಹಣ ರೈತರ ಪೇಮೆಂಟ್‌ಗೇ ಆಗುವಂತೆ ಕ್ರಮ ಕೈಗೊಳ್ಳಬೇಕು. ಇನ್ನು ಬೆಳಗಾಂನಲ್ಲಿ ಸಕ್ಕರೆ ನಿರ್ದೇಶನಾಲಯವು ಜನಪ್ರತಿನಿಧಿಗಳು ಬೇಡವೆಂದು ಹೇಳಿದ್ದಾರೆ, ಎಂದು ಮಾನ್ಯ ಮುಖ್ಯಮುಂತ್ರಿಗಳು ಬಜೆಟ್ ಭಾಷಣದಲ್ಲಿ ತಿಳಿಸಿದ್ದಾರೆ. ಆ ಜನಪ್ರತಿನಿಧಿಗಳು ಯಾರು ? ಎಂಬುದನ್ನು ತಿಳಿಯಲು ಶ್ರೀ ಶೆಟ್ಟರ್ ಅವರು ಬಯಸಿದರು.

ಶ್ರೀ **ಐ.ಕೃಷ್ಣಪ್ಪನವರು** ಮಾತನಾಡುತ್ತ; ಕಬ್ಬು ಮಾರಿದರೆ ರೈತರಿಗೆ ಹೈಯರ್ ರೇಟ್ ಸಿಗುವಾಗ ಬ್ಯಾನ್ ಏಕೆ? ಎಂಬ ಪ್ರಶ್ನೆ ಎತ್ತಲಾಗಿದೆ. ಬ್ಯಾನ್ ಮಾಡಿ ಎಂದು ಹೇಳಿದ ರೈತರೇ ಮುಂದಿನ ವರ್ಷ ಬ್ಯಾನ್ ತೆಗೆಯಿರಿ ಎಂದರು. ಎರಡು ವರ್ಷಗಳ ಹಿಂದೆ ಎಕ್ಸೆಸ್ ಪ್ರೊಡಕ್ಷನ್ ಇತ್ತು. ಈ ವರ್ಷ ಕೆಲವು ತಾಲೂಕುಗಳಲ್ಲಿ ಲೋ ಪ್ರೊಡಕ್ಷನ್ ಇದೆ. ಈ ವಿಚಾರಗಳ ಹಿನ್ನೆಲೆಯಲ್ಲಿ ಸರ್ಕಾರ ಕಾಲಕಾಲಕ್ಕೆ ರೈತರಿಗೆ ಅನುಕೂಲವಾಗುವಂಥ ತೀರ್ಮಾನ ಮಾಡಬೇಕೇ ವಿನಃ ಜನರಲ್ ಡಿಶಿಷನ್‌ನಂಥ ಅಪಾಯಕಾರಿ ತೀರ್ಮಾನವಲ್ಲ. ಇನ್ನು ಅಪೆಕ್ಸ್ ಬ್ಯಾಂಕ್, ಡಿಸಿಸಿ ಬ್ಯಾಂಕ್‌ಗಳಿಂದ ಕಾರ್ಖಾನೆಗಳಿಗೆ ದುಡ್ಡು ಕೊಡಿಸಿದ್ದು ಬೇರೆ ವೆಚ್ಚಗಳಿಗೆ ಬಳಸಿ ದುರುಪಯೋಗವಾಗಿದೆ ಎನ್ನುವ ಇನ್ಸಿಡೆಂಟ್‌ಗಳಿದ್ದರೆ ಮಾನ್ಯ ವಿರೋಧ ಪಕ್ಷದ ನಾಯಕರು ತಿಳಿಸಲಿ. ಅಂಥವರ ಮೇಲೆ ಕ್ರಮವನ್ನು ತತ್‌ಕ್ಷಣದಲ್ಲಿ ತೆಗೆದುಕೊಳ್ಳುತೇನೆ. We have asked our Deputy Commissioners to scrutinise the whole thing and to ensure that money reaches only to the farmers, ಎಂದರು. ಮುಂದೆ ಬೇರೆ ಬೇರೆ ವಿಷಯಗಳ ಪ್ರಸ್ತಾಪವಾದ ಮೇಲೆ ಶ್ರೀ **ಎಸ್.ಎಸ್. ಪಾಟೀಲ್** ಅವರು; 184 ಕೋಟಿ ರೂ ಗಳನ್ನು ರೈತರಿಗೆ ಪಾವತಿಸಬೇಕಾದ ಬಗ್ಗೆ ಮಾನ್ಯ ಸಚಿವರು ಹೇಳಿದ್ದಾರೆ. ಅದು ಎಷ್ಟು ವರ್ಷಗಳಿಂದ ಬಾಕಿ ಆಗಿದೆ? ಯಾವಾಗ ತೀರಿಸಲಾಗುತ್ತದೆ? ಇವತ್ತು ಬರ ಇರುವುದರಿಂದ ರೈತರು ಬಹಳ ಕಷ್ಟದಲ್ಲಿದ್ದು ಉರುಲು ಹಾಕಿಕೊಂಡು ಸಾಯುತ್ತಿರುವ ವಿಚಾರ ಎಲ್ಲರಿಗೂ ತಿಳಿದ ವಿಷಯ. ಹಾವೇರಿ ಸಕ್ಕರೆ ಕಾರ್ಖಾನೆ ಬಾಕಿ ತೀರಿಸಿಲ್ಲವಾದರೆ ಎಂದು ತೀರಿಸಲಾಗುತ್ತದೆ ಎಂಬುದಕ್ಕೆ ಉತ್ತರ ಬೇಕು; ಹಾವೇರಿ ಜಿಲ್ಲೆಯಲ್ಲಿ ಹಿಂದೆಂದೂ ಕಾಣದಂಥ ಬರ ಬಿದ್ದು ಕಷ್ಟದಲ್ಲಿದೆ, ಎಂದರು.

ಶ್ರೀ **ಕೆ.ಬಿ.ಕೋಳಿವಾಡ** ಅವರು, ಕೆ.ಸಿ.ಸಿ.ಬ್ಯಾಂಕ್‌ಗಳು ಡಿಫಂಕ್ಟ್ ಆಗಿರುವ ವಿಚಾರ, ಸರ್ಕಾರ ಕೊಟ್ಟಿರುವ ಗ್ಯಾರೆಂಟಿ, ಅದನ್ನು ಆಪರೇಷನ್ ಮಾಡುವಲ್ಲಿರುವ ಸಮಸ್ಯೆ, ಡಿಸಿಸಿ ಬ್ಯಾಂಕ್ ಅನ್ನು ಲೀಡ್ ಬ್ಯಾಂಕ್ ಮಾಡಿ ವ್ಯವಹಾರ ನಡೆಯಲನುಕೂಲಿಸಬೇಕೆಂಬ ಸಲಹೆಯನ್ನು ನೀಡಿದರು. ಶ್ರೀ **ಎಂ.ಎಸ್.ಆತ್ಮಾನಂದ** ಅವರು, ಬೆಳಗಾಂನಲ್ಲಿಯೇ ಸಕ್ಕರೆ ನಿರ್ದೇಶನಾಲಯ ಇರಬೇಕೆಂದು ಕೋರಿದರು.

ಶ್ರೀ **ಕೆ.ಶ್ರೀನಿವಾಸಗೌಡ** ಅವರು, ರಾಜ್ಯದ ಮಾರಾಟ ಮಹಾಮಂಡಳಿಯು ತಮ್ಮ ಅಧ್ಯಕ್ಷಾವಧಿ ಕಾಲದಲ್ಲಿ, 6 ಸಾವಿರ ಟನ್ ಸಕ್ಕರೆಯನ್ನು ಕಳೆದ ವರ್ಷ ರಫ್ತು ಮಾಡಿತ್ತು. ಇದರಲ್ಲಿ ಅಂತರರಾಷ್ಟ್ರೀಯ ಮಾರುಕಟ್ಟೆಯಲ್ಲಿ ನಮಗೆ ಲಾಭ ಕಡಿಮೆ

ಇದೆ. ನಮ್ಮಲ್ಲಿ 10.69ಲಕ್ಷ ಮೆಟ್ರಿಕ್ ಟನ್ ಸಕ್ಕರೆ ದಾಸ್ತಾನು ಇದೆ. ತೆಗೆದುಕೊಂಡಿರುವ ಕಬ್ಬಿಗೆ ಕೊಡಬೇಕಾದ ದುಡ್ಡು, ಬಂಡವಾಳ ಹಾಕಿರುವ ಕಾರ್ಖಾನೆ ಬಗ್ಗೆ ಗಮನಿಸಬೇಕು.ನಮಗೆ ಲಾಭ ಬೇಡ. ಬ್ರೇಕ್ ಈವನ್ ಬಂದರೆ ಸಾಕು. ರಿಬೇಟ್ ಕೊಟ್ಟು ಸರ್ಕಾರ ಸಹಾಯ ಮಾಡಿದರೆ ಲಾಭವಾಗದಿದ್ದರೂ ಕನಿಷ್ಠ ನಮ್ಮ ಸಕ್ಕರೆಯನ್ನು ಬೇರೆ ದೇಶಕ್ಕೆ ರಫ್ತು ಮಾಡುವ ಅವಕಾಶ ಸಿಗುತ್ತದೆ. ಇದರಿಂದ ರೈತರಿಗೂ ಅನುಕೂಲವಾಗುತ್ತದೆ, ಎಂದರು.

ಶ್ರೀ **ಎ.ಕೃಷ್ಣಪ್ಪ** ಅವರು, ಹಾವೇರಿ ಸಕ್ಕರೆ ಕಾರ್ಖಾನೆಗೆ ಸರ್ಕಾರ ಬ್ಯಾಂಕ್ ಗ್ಯಾರೆಂಟಿ ಕೊಟ್ಟಿದೆ. ಸಾಫ್ಟ್ ಲೋನ್ ಕೊಟ್ಟಿದೆ. ಅಲ್ಲಿ ಬರ ಬಂದು, ಬಹಳ ಕಷ್ಟವೆಂದಿರುವುದನ್ನು ಗಮನಿಸಿ ಕಡತಗಳನ್ನು ಖುದ್ದಾಗಿ ನೋಡುವೆ ಎಂದು ಶ್ರೀ ಪಾಟೀಲರ ಮಾತಿಗೆ ಉತ್ತರಿಸಿದರು. ಶ್ರೀ ಶ್ರೀನಿವಾಸಗೌಡ ಅವರು ಸಕ್ಕರೆ ಎಕ್ಸ್‌ಪೋರ್ಟ್ ಪ್ರಸ್ತಾಪಕ್ಕೆ, ಪಾಲಿಸಿ ಡಿಸಿಷನ್ ಆದ ಕಾರಣ ಭಾರತ ಸರ್ಕಾರದ ಜೊತೆ ಮಾತುಕತೆ ನಡೆಸಲಾಗುತ್ತಿದೆ ಎಂದರು.

*ಮಂಥನ: ರೈತರ ಸಮಸ್ಯೆಗಳು ಇಂದಿನ ಜಾಗತಿಕ ಸನ್ನಿವೇಶದಲ್ಲಿ ವಿವಿಧ ಆಯಾಮಗಳನ್ನು ಪಡೆಯುತ್ತಿವೆ. ಇವೆಲ್ಲ ಚಳುವಳಿಕಾರಕಗಳೂ ಆಗಬಲ್ಲವಂತವು. ಅವುಗಳಿಗೆ ಪರಿಹಾರದ ಮಾರ್ಗಗಳು ಸೂಕ್ತವಾಗಿದ್ದರೆ ಸಾಂತ್ವನ ಕೊಡುತ್ತದೆ. ಬೆಳೆಗೆ ನೀರಿನ ಅಭಾವ ಕಬ್ಬಿನ ಹಣ ಪಾವತಿಯ ಅತಿ ವಿಳಂಬಗಳು, ಕೊಬ್ಬರಿ ಮಾರುಕಟ್ಟೆಯಲ್ಲೂ ಹಣ ಪಾವತಿಯ ಸಮಸ್ಯೆಗಳು, ಇವೆಲ್ಲ ರೈತರ ಬಾಳುವೆಯ ಮೇಲೆ ಪರಿಣಾಮ ಬೀರಿ ಆತ್ಮಹತ್ಯೆಗೂ ಕಾರಣವಾದ ಸನ್ನಿವೇಶಗಳಾಗಿವೆ. ಈ ಬಗೆಗೆಲ್ಲ ನಡೆದ ಸದನದ ಚರ್ಚೆಗಳು, ರೈತಪರ ಕಾಳಜಿಯನ್ನು ತೋರಿವೆ ನಿಜ. ಆದರೆ ಪರಿಹಾರ ದೊರಕುವಲ್ಲಿ ವಿಳಂಬವಾಗುತ್ತಿದೆ ಎಂಬ ಭಾವನೆಗಳೂ ಅಡಕವಾಗಿ ಕಾಣುತ್ತವೆ. ಸ್ವಾವಲಂಬಿತ ಪ್ರಯತ್ನಗಳೂ ರೈತರ ವತಿಯಿಂದ ನಡೆದರೂ, ಪೂರಕ ಸನ್ನಿವೇಶಗಳು, ಸೃಷ್ಟಿಯಾಗದಿದ್ದರೆ, ಬೆಂಬಲ ದೊರೆಯದಿದ್ದರೆ, ಆ ಮುಗ್ಧ ಮನಸ್ಸುಗಳು ಕೊರಗುತ್ತವೆ; ಘಾಸಿಗೊಳ್ಳುತ್ತವೆ. ಈ ದಿಸೆಯಲ್ಲಿ ಪರಿಹಾರೋಪಾಯಗಳ ಮುನ್ನೋಟಗಳು ದಕ್ಷತೆಯನ್ನು ಪ್ರಮಾಣೀಕರಿಸಬಲ್ಲವು ಎನ್ನಿಸುತ್ತದೆ.*

## ವಿಷಯ 5: ಬರ ಪರಿಸ್ಥಿತಿ ಮತ್ತು ರೈತರ ಸಮಸ್ಯೆಗಳ ಕುರಿತು ರಾಜ್ಯಪಾಲರ ಭಾಷಣ

21.2.2002ರ ವಿಧಾನಸಭೆಯ ನಾಲ್ಕನೆಯ ಅಧಿವೇಶನದಲ್ಲಿ[5] ಮಾನ್ಯ ಘನತೆವತ್ತ ರಾಜ್ಯಪಾಲರು ಭಾಷಣ ಮಾಡುತ್ತ; 2001ರ ಜುಲೈ ಮತ್ತು ಆಗಸ್ಟ್‌ನಲ್ಲಿ ಮಳೆಯ ವೈಫಲ್ಯದಿಂದಾಗಿ ರಾಜ್ಯವು ಬರಗಾಲ ಪರಿಸ್ಥಿತಿಗೆ ಒಳಗಾಗಿದ್ದು, 151 ತಾಲೂಕುಗಳನ್ನು ಬರಪೀಡಿತವೆಂದು ಘೋಷಿಸಿರುವುದು, ಆರ್ಥಿಕ ಬೆನ್ನೆಲುಬು ಆದ ಕೃಷಿ ವಲಯದಲ್ಲಿ ತಂತ್ರಜ್ಞಾನದ ಬಳಕೆಯ ಅಗತ್ಯತೆ, ಬೆಲೆಗಳ ಡೋಲಾಯಮಾನ ಪರಿಸ್ಥಿತಿಯಿಂದ ರೈತರ ರಕ್ಷಣೆ, ಸರ್ಕಾರದಿಂದ ಕೃಷಿ ಬೆಲೆಗಳ ಆಯೋಗ ರಚನೆ ಹಾಗು ಅದರ ಶಿಫಾರಸ್ಸುಗಳ ಅನುಷ್ಠಾನ; ಆಧುನಿಕ ಕೃಷಿಯ ಬೇಡಿಕೆಗಳ ಪೂರೈಕೆಯ ಸಲುವಾಗಿ ರೂಪಿಸಿರುವ ರೈತಮಿತ್ರ ಯೋಜನೆ, 241 ಹೋಬಳಿಗಳಲ್ಲಿ ರೈತ ಸಂಪರ್ಕ ಕೇಂದ್ರಗಳ ಸ್ಥಾಪನೆ; ಅದರಿಂದ ಅವು ಕೃಷಿಕ ಸಮುದಾಯದ ತಾಂತ್ರಿಕ ಅಗತ್ಯಗಳ ಪೂರೈಕೆಯ ಸಮಾಲೋಚನಾ ಕೇಂದ್ರವೆನಿಸಿರುವುದು; ಕೃಷಿ ಪದ್ಧತಿಗಳ ಅಭಿವೃದ್ಧಿಗಾಗಿ ಕೈಗೊಂಡ ಕ್ರಮಗಳು; ರೈತರ ಆದಾಯದ ಹೆಚ್ಚಳಕ್ಕೆಂದು, ತೋಟಗಾರಿಕೆಯ ಅಭಿವೃದ್ಧಿಗೆ ಇರುವ ಅವಕಾಶಗಳತ್ತ ಗಮನ ನೀಡಿಕೆ; ರೈತರಿಗೆ ಅಗತ್ಯವಿರುವಂಥ ಬಹುಮುಖ್ಯ ಮಾಹಿತಿ ನೀಡುವಿಕೆಗೆ ಏಕಗವಾಕ್ಷಿ ವಿಧಾನವನ್ನು ಒದಗಿಸುವ ಕೃಷಿ ಹವಮಾನ ಯೋಜನೆ ಮಾಹಿತಿ ಬ್ಯಾಂಕ್ ಸ್ಥಾಪನೆ; ಪಶು ವೈದ್ಯಕೀಯ ಸೇವೆಗಳ ಸುಧಾರಣೆಗಾಗಿ ಮಾಡುತ್ತಿರುವ ಪ್ರಯತ್ನಗಳು; ಸಹಕಾರ ವಲಯದಲ್ಲಿ ಕೃಷಿ ಮಾರಾಟ ಇಲಾಖೆಯ ಪ್ರಮುಖ ಮಾರುಕಟ್ಟೆಗಳಲ್ಲಿ ಆನ್‌ಲೈನ್ ಬೆಲೆ ಮಾಹಿತಿ ವ್ಯವಸ್ಥೆಯ ಅನುಷ್ಠಾನ ಹಾಗು ಅದರಿಂದ ರೈತರಿಗೆ ಇತ್ತೀಚಿನ ಬೆಲೆಗಳನ್ನು ತಿಳಿದುಕೊಳ್ಳುವ ಅವಶ್ಯಕತೆ; ಪಂಚಾಯತ್ ರಾಜ್ ವ್ಯವಸ್ಥೆಯನ್ನು ಬಲಗೊಳಿಸಬೇಕಾದ ಅಗತ್ಯ, ಗ್ರಾಮಸಭೆಗಳನ್ನು ಬಲಪಡಿಸುವ ಕ್ರಮಗಳನ್ನು ಕೈಗೊಳ್ಳುವಿಕೆ ಇತ್ಯಾದಿ ಅಭಿವೃದ್ಧಿಪರ ಚಿಂತನೆಗಳನ್ನು ವ್ಯಕ್ತಪಡಿಸಿದರು. ರಾಜ್ಯಪಾಲರ ಈ ಸಲಹೆಗಳು, ರೈತಾಭಿವೃದ್ಧಿ ಹಾಗು ರೈತ ಸಂಕಷ್ಟಗಳ, ಸಮಸ್ಯೆಗಳ ಪರಿಹಾರೋಪಾಯಗಳ, ಸಾಂತ್ವನ ಕ್ರಿಯೆಗಳ ಒಂದು ರೂಪವಾಗಿತ್ತು ಎನ್ನಬಹುದು.

---

5. (ವಿಧಾನಸಭಾದಲ್ಲಿ (ರಾಜ್ಯಪಾಲರ ಭಾಷಣ) ನಡವಳಿಕೆಗಳು, ಸಂಪುಟ 1(1–2), 21.1.2002ರ 4ನೇ ಅಧವೇಶನ, ಪು.3)

## ವಿಷಯ 6: ರಾಜ್ಯದಲ್ಲಿ ಬರಪರಿಸ್ಥಿತಿ; ವಿದ್ಯುತ್ ಅಭಾವ; ಬೆಳೆ ವಿಮೆ.

19.3.2002ರ ವಿಧಾನಸಭೆಯ ನಡವಳಿಕೆಗಳಲ್ಲಿ[6] ವಿರೋಧ ಪಕ್ಷದ ನಾಯಕರಾದ ಶ್ರೀ **ಜಗದೀಶ್ ಶೆಟ್ಟರ್** ಅವರು ರಾಜ್ಯದ ಬರದ ಪರಿಸ್ಥಿತಿ ಕುರಿತು ಮಾತನಾಡುತ್ತ; ಗ್ರಾಮೀಣ ಪ್ರದೇಶಗಳಲ್ಲಿ ನೀರಿಗಾಗಿ ಹಾಹಾಕಾರ ಆಗಿದೆ. ಮುಂಗಾರು ಮಳೆ ಹೋಯಿತು. ಹಿಂಗಾರು ಸಹ ಫೇಲ್ ಆಯಿತು. ವಿದ್ಯುತ್ತಿನ ಅಭಾವ ಇದೆ. ಕುಡಿಯುವ ನೀರಿನ ಯೋಜನೆಗಳೆಲ್ಲ ಮಣ್ಣು ಪಾಲಾಗಿವೆ. ವಿದ್ಯುತ್ತಿಲ್ಲದೆ ರೈತರಿಗೆ ಹೊಲಗಳಿಗೆ ನೀರು ಬಿಟ್ಟು ಕೊಳ್ಳಲು ಪಂಪುಸೆಟ್ಟುಗಳಿಂದ ಸಾಧ್ಯವಾಗುತ್ತಿಲ್ಲ. ಗ್ರಾಮೀಣ ಪ್ರದೇಶಗಳಿಗೆ 12 ತಾಸು ನಿರಂತರ ವಿದ್ಯುತ್ ಸರಬರಾಜಿನ ಬಗ್ಗೆ ಮಾನ್ಯ ಮುಖ್ಯಮುಂತ್ರಿಗಳ ಬಜೆಟ್ ಭಾಷಣದ ಹೇಳಿಕೆ ಕಾರ್ಯಗತವಾಗಿಲ್ಲ. ಆ ಸುಧಾರಣೆ ವಿದ್ಯುತ್ ಸರಬರಾಜಿನಲ್ಲಿ ಆಗಿಲ್ಲ. ಅಧಿಕಾರಿಗಳ ಮೇಲೆ ಕ್ರಮ ಕೈಗೊಂಡಿಲ್ಲ. ಗ್ರಾಮೀಣ ಪ್ರದೇಶದಲ್ಲಿ ಕೇವಲ 3–4 ಗಂಟೆಗಳಷ್ಟು ಮಾತ್ರದೂ ಲೋ ವೋಲ್ಟೇಜ್‌ನಲ್ಲಿ ಮಾತ್ರ ಸರಬರಾಜಾಗುತ್ತಿದೆ. ಇದರಿಂದ ರೈತ ಹೇಗೆ ಉಳುಮೆ ಮಾಡಲು ಸಾಧ್ಯ! ಒಳ್ಳೆ ಬೆಳೆ ತೆಗೆಯಲು ಸಾಧ್ಯ ! ಇದರಿಂದಾಗಿ ನಾಳೆ ಕಾನೂನು ಮತ್ತು ಸುವ್ಯವಸ್ಥೆಯ ಮೇಲೆ ಪರಿಣಾಮ ಉಂಟಾಗಬಹುದು. ರೈತಾಪಿ ಜನರು, ಸಾರ್ವಜನಿಕ ಸಭೆಯಲ್ಲಿ ಮಂತ್ರಿಗಳು ಪಾಲ್ಗೊಂಡಾಗ, 'ಸ್ವಾಮಿ ನಮಗೆ ವಿದ್ಯುತ್ ಒದಗಿಸಿ', ಎಂದು ಒಕ್ಕೊರಲಿನಿಂದ ಕೇಳುತ್ತಿರುವುದನ್ನು ಕಂಡಿದ್ದೇವೆ. ಆ ಜನರು ತಮ್ಮ ಕಷ್ಟ ನಷ್ಟಗಳನ್ನು ಈ ರೀತಿಯ ಭಾವನೆಗಳ ಮೂಲಕ ವ್ಯಕ್ತ ಪಡಿಸುತ್ತಿರುವಲ್ಲಿ ಸರ್ಕಾರದ ಚಿಂತನೆ ಏನು ನಡೆದಿದೆ ? ರೈತರು ವಿದ್ಯುತ್ ಬಳಸದೆ ವ್ಯವಸಾಯ ಮಾಡುವುದು ಇಂದು ಗ್ರಾಮೀಣ ಭಾಗದಲ್ಲಿ ಸಾಧ್ಯವಿಲ್ಲದಾಗಿದೆ. ರೈತರಿಗೆ ಭೂಮಿ ಮತ್ತು ನೀರಿನ ಮೇಲೆ ಹೇಗೆ ಹಕ್ಕು ಇದೆಯೋ ಅದೇ ರೀತಿಯ ಹಕ್ಕು ವಿದ್ಯುತ್ತಿನ ಮೇಲೂ ಇದೆ. ಇವೊತ್ತು ಪ್ರತಿಯೊಂದು ಹಂತದಲ್ಲೂ ರೈತರಿಗೂ ಹಾಗೂ ನಿಗಮಕ್ಕೂ ಸಂಘರ್ಷಗಳು ನಡೆಯುತ್ತಿರುವುದನ್ನು ನಾವು ನೋಡುತ್ತಿದ್ದೇವೆ. ಕೆಪಿಟಿಸಿಎಲ್ ಕಛೇರಿಗೆ ಮುತ್ತಿಗೆ ಹಾಕುವುದು, ಅಧಿಕಾರಿಗಳಿಗೆ ದಿಗ್ಬಂಧನ ಹಾಕುವುದೆಲ್ಲವೂ ಏಕೆ ಆಗುತ್ತದೆ ? ಕಾರಣ ಸ್ಪಷ್ಟವಾಗಿದೆ. ಪರಸ್ಪರ ವಿಶ್ವಾಸವಿಲ್ಲ. ಸರ್ಕಾರ ರೈತರನ್ನು ವಿಶ್ವಾಸಕ್ಕೆ ತೆಗೆದುಕೊಂಡು, ವಿದ್ಯುತ್ ಪರಿಸ್ಥಿತಿ ಈ ರೀತಿ ಇದೆಯೆಂದು ಸಾರ್ವಜನಿಕವಾಗಿ ಹೇಳುವಂತಹ ಪರಿಸ್ಥಿತಿ ನಿರ್ಮಾಣವಾಗಿಲ್ಲ. ಹೀಗಾಗಿ ರೈತ ಬಾಂಧವರಲ್ಲಿ ಕೆಪಿಟಿಸಿಎಲ್ ಹಾಗು ಸರ್ಕಾರದ ಬಗ್ಗೆ ಅಪನಂಬಿಕೆ ಹುಟ್ಟಲು ಸಾಧ್ಯವಾಗಿದೆ;

6. (ವಿಧಾನಸಭಾ ನಡವಳಿಕೆಗಳು, ಸಂಪುಟ 2(1–4) ಭಾಗ–1, (19.3.2002) ಪು.115, 116, 122, 123–195),

ಸಂಘರ್ಷಗಳು ಜರುಗುತ್ತಿವೆ. ಒಂದು ಕಡೆ ರೈತರು ಬೆಳೆದಂತ ಬೆಳೆಗೆ ಸರಿಯಾದ ಬೆಲೆ ಸಿಗುತ್ತಿಲ್ಲ. ಹೀಗಾಗಿ ಸಹಕಾರಿ ಬ್ಯಾಂಕುಗಳಿಂದ ಪಡೆದ ಸಾಲವನ್ನು ಕಟ್ಟುವಂಥ ಪರಿಸ್ಥಿತಿಯಲ್ಲಿ ರೈತರು ಇಲ್ಲ. ಇಂತಹ ಪರಿಸ್ಥಿತಿಯಲ್ಲಿ ತಮ್ಮ ಪಂಪ್‌ಸೆಟ್ಟುಗಳಿಗೆ ಅನಧಿಕೃತವಾಗಿ ವಿದ್ಯುತ್ ಸೌಕರ್ಯ ತೆಗೆದುಕೊಂಡಿರುವುದಕ್ಕೆ ದಂಡ ಕಟ್ಟಿ ಎಂದು ಸರ್ಕಾರ ಹೇಳುವ ಮೂಲಕ ಅವರ ಮೇಲೆ ದೌರ್ಜನ್ಯ ನಡೆಸುತ್ತಿದೆಯೆಂದು ಅನಿಸುತ್ತದೆ.

ಒಬ್ಬ ರೈತ 5ರಿಂದ 10 ಹೆಚ್.ಪಿ.ಯಷ್ಟು ಸಾಮರ್ಥ್ಯದ ಪಂಪ್‌ಸೆಟ್ ಬಳಸಿ ನೀರು ಹಾಯಿಸಿ ಅನಾನಸ್ ಬೆಳೆ ಬೆಳೆದರೆ ಆತನಿಗೆ ಸುಮಾರು 63 ಸಾವಿರ ರೂ.ಗಳಷ್ಟು ವಿದ್ಯುತ್ ಬಿಲ್ ಬರುತ್ತದೆ. ನಂತರ ಆ ಬೆಳೆಯನ್ನು ಸರಿಯಾದ ಬೆಲೆಗೆ ಮಾರಾಟ ಮಾಡಿದರೂ ಸಹ ಇಷ್ಟೊಂದು ಮೊತ್ತದ ವಿದ್ಯುತ್ ಬಿಲ್ಲನ್ನು ಕಟ್ಟುವುದಕ್ಕಾಗುವುದಿಲ್ಲ. ಇದು ರೈತರ ಪರಿಸ್ಥಿತಿ. ವಿದ್ಯುತ್ ದರವೂ ಒಂದು ಹೆಚ್.ಪಿ ಗೆ ನೂರು ರೂಪಾಯಿಗಳಿರುವುದನ್ನು 900 ರೂಪಾಯಿಗಳಿಗೆ ಹೆಚ್ಚಿಸುವ ಪ್ರಯತ್ನ ಸಾಗಿದೆ. ಅಷ್ಟೇ ಅಲ್ಲ ಇವೊತ್ತು ಯಾವ ರೈತ ಟೆಲಿಫೋನ್, ಟ್ರಾಕ್ಟರ್, ದ್ವಿಚಕ್ರ ವಾಹನ, ಮೊಬೈಲ್ ಇಟ್ಟುಕೊಂಡಿದ್ದಾನೋ ಅಂತಹವನಿಗೆ ವಿದ್ಯುತ್ ದರ ಏರಿಕೆಯ ಪರಿಣಾಮ ಉಂಟಾಗುತ್ತದೆ. ಅದಾಗಿ ರೈತ ಇವಾವುದನ್ನು ಇಟ್ಟುಕೊಳ್ಳದೆ, ಹೇಗೆ ಬಡತನದಲ್ಲಿದ್ದಾನೋ, ಅದೇ ರೀತಿ ಮುಂದುವರೆಯಲಿ ಎಂದರೆ ಭೇದ ಮಾಡಿದಂತೆ. ಈ ರೀತಿಯ ಭೇದವಾದರೆ, ರೈತ ಎಂದರೆ 'ಬಡವ' ಎನ್ನುವಂತಾಗಿ, ಅವನು ಉದ್ಧಾರವಾಗುವುದಿಲ್ಲ. ಪ್ರತಿವರ್ಷ ಒಂದಲ್ಲ ಒಂದು ತೊಂದರೆ ರೈತನಿಗೆ. ಒಮ್ಮೆ ಬರಗಾಲ ಬಂದರೆ ಮತ್ತೊಮ್ಮೆ ಅತಿವೃಷ್ಟಿಯಾಗುತ್ತದೆ. ಮಳೆ ಬಂದು ಬೆಳೆ ಬೆಳೆದರೂ ಅದಕ್ಕೆ ಸರಿಯಾದ ಧಾರಣೆ ಸಿಗದು. ಹೀಗೆ ಪ್ರತಿಯೊಂದು ಹಂತದಲ್ಲಿ ರೈತನಿಗೆ ತೊಂದರೆ.

ನಮ್ಮ ಪಕ್ಕದ ರಾಜ್ಯವಾದ ತಮಿಳುನಾಡಿನಲ್ಲಿ ರೈತರಿಗೆ ನಿರಂತರವಾದ ವಿದ್ಯುತ್ ಸರಬರಾಜು ಹಾಗು ಗುಣಮಟ್ಟದ ವಿದ್ಯುತ್ ಸರಬರಾಜು ವ್ಯವಸ್ಥೆ ಇದೆ. ನಮ್ಮಲ್ಲಿ ಇದು ಏಕೆ ಆಗಬಾರದು ? ರೈತರಿಗೆ ನಾವು ರಾತ್ರಿ ವೇಳೆ 4–5 ಗಂಟೆಗಳು ಮಾತ್ರ ವಿದ್ಯುತ್ ಕೊಡುತ್ತಿದ್ದೇವೆ. ಈ ರಾತ್ರಿಗಳಲ್ಲಿ ಪ್ರಾಣಿಗಳ ಕಾಟದ ನಡುವೆಯೂ ತನ್ನ ಹೊಲಕ್ಕೆ ಹೋಗಿ ನೀರು ಬಿಡುವಂಥ ಪರಿಸ್ಥಿತಿ ಇರುವಲ್ಲಿ ರೈತ ಹೇಗೆ ಬದುಕುವುದಕ್ಕೆ ಸಾಧ್ಯ, ಎಂಬ ಬಗ್ಗೆ ಸರ್ಕಾರ ತುಂಬಾ ಗಂಭೀರವಾಗಿ ಚಿಂತನೆ ಮಾಡಬೇಕಾಗಿದೆ. ಈ ಪರಿಸ್ಥಿತಿ ನಿರ್ಮಾಣ ಹಾಗೂ

ಬರಗಾಲದ ಕಾರಣ ಹಲವಾರು ತಾಲೂಕುಗಳಲ್ಲಿ ನೀರಿನ ಅಭಾವವೂ ಪೂರ್ತಿಗಂಭೀರವಾಗಿದೆ. ದನಕರುಗಳಿಗೆ ಮೇವು ಇಲ್ಲದೆ, ಬೇರೆಡೆಯಿಂದ ತರುವಂತಹ ಪ್ರಯತ್ನ ನಡೆಯುತ್ತಿದೆ. ಸರ್ಕಾರ ಮೇವಿನ ಕೊರತೆ ನಿವಾರಣೆಗೆ ವ್ಯವಸ್ಥೆ ಮಾಡಬೇಕಿತ್ತು. ಉತ್ತರ ಕರ್ನಾಟಕದ ಎಷ್ಟೋ ತಾಲೂಕುಗಳಲ್ಲಿ ಕೃಷಿ ಕಾರ್ಮಿಕರು, ರೈತರು ಇವತ್ತು ತಮ್ಮ ಜಾನುವಾರುಗಳನ್ನು ಕರೆದುಕೊಂಡು ಬೇರೆ ರಾಜ್ಯಗಳಿಗೆ ಗುಳೇ ಹೋಗುವಂಥ ಪರಿಸ್ಥಿತಿ ನಿರ್ಮಾಣವಾಗಿದೆ. ಎಲ್ಲಾ ಜಿಲ್ಲೆಗಳಲ್ಲಿ ಬರಕಾಲದ ಕಾಮಗಾರಿಗಳು ನಿಂತಿವೆ. ಜಿಲ್ಲಾಧಿಕಾರಿಗಳ ಸೂಚನೆಯ ಮೇರೆಗೆ ಅರ್ಧಂಬರ್ಧವಾದಂತಹ ಕೆಲಸಗಳೂ ಸಹ ನಿಂತಿವೆ. ಇವತ್ತಿಗೂ ಕೂಡ ಹಲವಾರು ತಾಲ್ಲೂಕುಗಳು ಮತ್ತು ಗ್ರಾಮಗಳಲ್ಲಿ ಕುಡಿಯುವ ನೀರಿನ ಅಭಾವ ಮತ್ತು ಬರಗಾಲ ಪರಿಸ್ಥಿತಿ ಇರುವುದು ಎದ್ದು ಕಾಣುತ್ತದೆ. ಬರಪರಿಹಾರಕ್ಕಾಗಿ ಬಿಡುಗಡೆ ಮಾಡಿದ 96 ಕೋಟಿ ರೂಪಾಯಿಗಳ ಪೈಕಿ 44 ಕೋಟಿ ರೂ. ಖರ್ಚಾಗಿಲ್ಲ. ಇದಕ್ಕೆ ಕಾರಣ **ಕೂಲಿ–ಕಾಳು ಯೋಜನೆ** ಅಡಿ ಕೆಲಸ ಮಾಡಿದವರಿಗೆ ಅರ್ಧ ಹಣ ಮತ್ತು ಉಳಿದ ಭಾಗವನ್ನು ಆಹಾರ ಧಾನ್ಯದ ರೂಪದಲ್ಲಿ ನೀಡಲಾಗುತ್ತಿತ್ತು. ಆದರೆ ಜಿಲ್ಲಾಧಿಕಾರಿಗಳಿಗೆ ಬಿಡುಗಡೆ ಮಾಡಿದಂಥ 96 ಕೋಟಿ ರೂ ಪೂರ್ತಿ ಖರ್ಚು ಮಾಡಲು ಬಿಡಲಿಲ್ಲ. ಹೀಗಾದರೆ ಬರಗಾಲ ಕಾಮಗಾರಿಗಳು ಹೇಗೆ ನಡೆಯಬೇಕು? ಬರದಿಂದಾಗಿ ಹಿಂಗಾರು ಮತ್ತು ಮುಂಗಾರು ಬೆಳೆಗಳು ಕೈಗೆಟುಕದೆ ಇವತ್ತು 2000 ಕೋಟಿ ರೂ. ಬೆಳೆ ನಾಶವಾಗಿದೆ. ಮಳೆ ಬರದೆ ಬೆಳೆ ಹಾನಿಯಾದರೆ ಪರಿಹಾರ ನೀಡಲು ಮಾರ್ಗಸೂಚಿಗಳಲ್ಲಿ ಅವಕಾಶವಿರುವುದಿಲ್ಲ. ಆದರೆ ಬೆಳೆ ಆಣೇವಾರಿ ಶೇಕಡ 95ರ ಒಳಗೆ ಬಂದರೆ ಪೂರ್ಣ ಭೂಕಂದಾಯ ಮನ್ನಾ ಮಾಡಲು, ಸಾಲ ಪರಿವರ್ತನೆ ಹಾಗೂ ಬೆಳೆ ವಿಮಾ ಚಂದಾದಾರರಿಗೆ ಬೆಳೆ ವಿಮಾ ಪರಿಹಾರ ಸೌಲಭ್ಯ ದೊರಕುತ್ತದೆ. ಈ ಪರಿಸ್ಥಿತಿಯಲ್ಲಿ ರೈತರ ಸಾಲದ ಮೇಲೆ ಬಡ್ಡಿಯನ್ನು ಕೇಳಿದ್ದೇವೆ, ಎಂದು ನುಡಿವರು.

ರಾಜ್ಯದ ಬರಪರಿಸ್ಥಿತಿ ಕುರಿತ ಚರ್ಚೆ ಮುಂದುವರಿಸಿ ಶ್ರೀ **ಜಗದೀಶ್ ಶೆಟ್ಟರ್** ಅವರು : ರಾಜ್ಯದ ಬೇರೆ ಬೇರೆ ಜಿಲ್ಲೆಗಳಲ್ಲಿ ಈ ಪರಿಸ್ಥಿತಿ ಇರುವಲ್ಲಿ, ಬೆಳೆ ಆಣೇವಾರಿ ಶೇಕಡ 25ಕ್ಕೂ ಕಡಿಮೆ ಬಂದಂಥ ಸಂದರ್ಭದಲ್ಲಿ ಆಗ ತಕ್ಷಣ **ಬೆಳೆ ವಿಮೆ** ಕೊಡುವಂಥದ್ದಾಗಬೇಕು ಮತ್ತು ರೈತರಿಂದ ಸಾಲ ವಸೂಲಾತಿಯನ್ನು ತಕ್ಷಣ ನಿಲ್ಲಿಸಿ ಆ ಅಲ್ಪಾವಧಿ ಸಾಲವನ್ನು ಮಧ್ಯಾವಧಿ ಸಾಲವನ್ನಾಗಿ ಪರಿವರ್ತನೆ ಮಾಡುವಂಥಾದ್ದು ತಕ್ಷಣವೆ ಆಗಬೇಕು.

ಬ್ಯಾಂಕುಗಳು, ಸಹಕಾರಿ ಸಂಘಗಳು, ಸೊಸೈಟಿಗಳು, ಗ್ರಾಮೀಣ ಬ್ಯಾಂಕುಗಳಿಂದ ಬಹಳಷ್ಟು ದೊಡ್ಡ ಪ್ರಮಾಣದಲ್ಲಿ ರೈತರಿಗೆ ಸಾಲ ವಸೂಲಾತಿಗಾಗಿ ನೋಟೀಸ್ ಕೊಡುವಂಥಾದ್ದು, ಅವರ ಹೊಲಮನೆಗಳನ್ನು ಮಾರುವುದು ಅವರ ಆಸ್ತಿಗಳನ್ನು ಜಪ್ತಿ ಮಾಡುವಂಥಾದ್ದು ನಡೆಯುತ್ತಿದೆ. ಕೋರ್ಟ್‌ನಿಂದ ವಾರೆಂಟ್ ಇಷ್ಯೂ ಆಗಿ ರೈತರು ಸಾಲ ತೀರಿಸಲಾಗದೆ ಜೈಲಿನಲ್ಲಿ ಇರುವುದನ್ನು ಕಾಣುತ್ತಿದ್ದೇವೆ. ರೈತರ ಬಂಧನವಾಗುತ್ತಿದೆ. ಬರಗಾಲದ ಪರಿಸ್ಥಿತಿಯಲ್ಲಿ ರೈತರು ಸಾಲವನ್ನು ತೀರಿಸಲಾರದ ಪರಿಸ್ಥಿತಿ ಇದೆ. ಅವರು ಬೆಳೆದಂಥ ಬೆಳೆಗೆ ಸರಿಯಾದ ಬೆಲೆ ಇಲ್ಲದಂಥ ಈ ಸಂದರ್ಭದಲ್ಲಿ ರೈತ ಒಂದು ದೊಡ್ಡಬಾಧೆಯನ್ನು ಪಡುತ್ತಿದ್ದಾನೆ. ಕೃಷಿ ಬೆಳೆ ವಿಮೆಯನ್ನು ರೈತರಿಗೆ ಕೊಡಲು ಏನು ತೊಂದರೆ ಆಗದು ಎನ್ನುವುದಕ್ಕೆ ರಾಜ್ಯಸರ್ಕಾರ ಸ್ಪಷ್ಟನೆ ನೀಡಬೇಕಾಗಿದೆ. ಬರಗಾಲದಿಂದ ತೊಂದರೆ ಆದಂಥ ರೈತರಿಗೆ ಮತ್ತು ಆಣೇವಾರಿ ಲೆಕ್ಕದಲ್ಲಿ ಬೆಳೆ ವಿಮೆ ಯಾರಿಗೆ ಕೊಡಬೇಕು ಎನ್ನುವ ಬಗ್ಗೆ ಗೈಡ್‌ಲೈನ್ಸ್‌ನ ಚೌಕಟ್ಟಿನಲ್ಲಿ ಬರುವ ರೈತರಿಗೆ ತಕ್ಷಣವೇ ಬೆಳೆ ವಿಮೆಯನ್ನು ಕೊಡುವಂಥ ಕೆಲಸ ಆಗಬೇಕಾಗಿದೆ. ಆಗ ಮಾತ್ರ ನಾವು ರೈತರಿಗೆ ಒಂದು ರೀತಿಯ ರಿಲೀಫ್ ಅನ್ನು ಕೊಡಲು ಸಾಧ್ಯವಿದೆ, ಎನ್ನಬಹುದು. ಬರಕಾಮಗಾರಿಗೆಂದು ಹಣ ಬಿಡುಗಡೆ ಮಾಡಿ ಬೇರೇನೋ ಕೆಲಸಕ್ಕೆ ಬಳಸಿದರೆ, ರೈತರಿಗೆ ಕೂಲಿ ಕಾರ್ಮಿಕರಿಗೆ ಬಡಜನರಿಗೆ, ಹಣ ಮುಟ್ಟುವುದಿಲ್ಲ, ಈ ಬಗ್ಗೆ ಸರ್ಕಾರ ಚಿಂತನೆ ಮಾಡಬೇಕು, ಎಂದರು.

ಶ್ರೀ **ಪಿ.ಜಿ.ಆರ್.**ಸಿಂಧ್ಯ ಅವರು ವಿಚಾರ ಮಂಡನೆ ಮಾಡಿ; ರಾಜ್ಯದಲ್ಲಿ ಇರತಕ್ಕಂಥ ಬರಗಾಲ ಪರಿಸ್ಥಿತಿಯನ್ನು ನಿಭಾಯಿಸುವುದಕ್ಕೆ ಸರ್ಕಾರ ಯಾವುದೇ ರೀತಿಯ ಸಿದ್ಧತೆಯನ್ನು ಮಾಡಿಕೊಂಡಿಲ್ಲ. ಮಳೆ ಕಡಿಮೆ ಆಗಿ ಕುಡಿಯುವ ನೀರಿಗೆ ತೊಂದರೆ ಆಗಿದೆ. ವಿದ್ಯುತ್ ಅಭಾವ ಉಂಟಾಗಿದೆ. ಕೃಷಿಗೆ ಸಂಬಂಧ ಪಟ್ಟಹಾಗೆ ವಿದ್ಯುತ್ ಸರಬರಾಜು ಆಗದೆ ಹೋದರೆ ಆ ಜನರು ಏನು ಮಾಡಬೇಕು?

ಕೃಷಿ ವಿಮೆಯ ಬಗ್ಗೆ ಹೇಳಿದರೆ, ವಾಸ್ತವ ಸಂಗತಿಗಳನ್ನು ಮುಖ್ಯಮಂತ್ರಿಗಳಿಗೆ ಅವರ ಸಹೋದ್ಯೋಗಿಗಳು ತಿಳಿಸಿದ್ದಾರೋ ಇಲ್ಲವೋ ಗೊತ್ತಿಲ್ಲ.ಕೆಲವು ಜಿಲ್ಲೆಗಳಿಗೆ (ಹಾವೇರಿ ಜಿಲ್ಲೆ) ಏನೂ ಹಣ ಈ ಬಗ್ಗೆ ಬಂದಿಲ್ಲ. ರೈತ ಸಂಪರ್ಕ ಕೇಂದ್ರಗಳನ್ನು ಹೋಬಳಿ ಮಟ್ಟದಲ್ಲಿ ಏನು ಮಾಡಿದ್ದೀರಿ, ಆ ಕೇಂದ್ರಗಳಿಂದ ಕೃಷಿ ಮಂತ್ರಿಗಳು ವರದಿ ತರಿಸಿಕೊಳ್ಳಬೇಕು. ಆ ಕೇಂದ್ರಗಳಲ್ಲಿ ಅಗ್ರಿಕಲ್ಚರ್ ಅಸಿಸ್ಟೆಂಟ್‌ಗಳು ರೈತರಿಗೆ ತಿಳುವಳಿಕೆಯನ್ನು ಕೊಡತಕ್ಕಂತಹ ಕೆಲಸವನ್ನು ಮಾಡುತ್ತಿಲ್ಲ. ಬೆಳೆ ವಿಮೆ ಕಾರ್ಯಕ್ರಮಕ್ಕೆ

ಕೇಂದ್ರ ಸರ್ಕಾರದಿಂದ ಬರತಕ್ಕಂಥ ಹಣದ ಕಾರ್ಯಕ್ರಮ ಏನಿದೆ, ಇದನ್ನು ನಾವು ಸಂಪೂರ್ಣ ಪ್ರಾಕ್ಟಿಕಲ್ ಆಸ್‌ಪೆಕ್ಟ್‌ನಿಂದ ವಿಚಾರ ಮಾಡಬೇಕಾಗುತ್ತದೆ. ಇದರ ಉಪಯೋಗ ನಮ್ಮ ರೈತರಿಗೆ ಸಿಗುತ್ತಿಲ್ಲ. ಅದೇನಾದರೂ ಸಿಕ್ಕಿದ್ದರೆ ಉತ್ತರ ಕರ್ನಾಟಕದಲ್ಲಿರತಕ್ಕಂತಹ ಬರಗಾಲ ಪೀಡಿತ ಪ್ರದೇಶದ ರೈತರಿಗೆ ಸ್ವಲ್ಪವಾದರೂ ಅನುಕೂಲವಾಗುತ್ತಿತ್ತು. ಈ ಬಗ್ಗೆ ಸರ್ಕಾರ ತುರ್ತಾಗಿ ಕ್ರಮ ತೆಗೆದುಕೊಳ್ಳಬೇಕು. ಒಂದು ಕಡೆ ಮಿನಿಮಮ್ ಪ್ರೈಸ್ ಫಿಕ್ಸೇಷನ್ ಕಮಿಟಿಯನ್ನು ಅಬಾಲಿಷ್ ಮಾಡಬೇಕೆಂದು ಯೋಚನೆ ಮಾಡುತ್ತಿರುವಂತಹ ಸಂದರ್ಭದಲ್ಲಿ ಪ್ರೊಕ್ಯೂರ್‌ಮೆಂಟ್‌ನ್ನು ಸ್ಟೇಟ್ ಗೌರ್ನಮೆಂಟ್‌ಗಳೇ ಮಾಡಿಕೊಳ್ಳಲಿ ಎಂದು ಹೇಳುವಂತಹ ಸನ್ನಿವೇಶದಲ್ಲಿ ಇನ್ನು ಇದೂ ಇಲ್ಲದೇ ಹೋದರೆ, ರೈತರಲ್ಲಿ ಒಬ್ಬೊಬ್ಬರಾಗಿ ಆತ್ಮಹತ್ಯೆ ಮಾಡಿಕೊಳ್ಳದೆ ಸಾಮೂಹಿಕವಾಗಿ ಆತ್ಮಹತ್ಯೆ ಮಾಡಿಕೊಳ್ಳುವಂತಹ ಸನ್ನಿವೇಶ ಬರುತ್ತದೆ. ಅದನ್ನು ತಪ್ಪಿಸಲಿಕ್ಕೆ ಸರ್ಕಾರ ಗಮನಕೊಡಬೇಕು.

ಕೆರೆಗಳಲ್ಲಿ ಹೂಳೆತ್ತುವ ಕೆಲಸ, ಸರ್ಕಾರ ಹೇಳಿದಂತೆ ನಡೆಯದೆ, ಆ ಕೆಲಸ ಎಲ್ಲೂ ಪ್ರಾರಂಭವಾಗಿಲ್ಲ. ಇನ್ನು ವಿದ್ಯುಚ್ಛಕ್ತಿ ವಿಚಾರವಾಗಿ ಹೇಳಿದರೆ ಡಾರ್ಕ್ ಮತ್ತು ಗ್ರೇ ಏರಿಯಾದಲ್ಲಿ ಸುಮಾರು 2ಲಕ್ಷ ಮತ್ತು 2.5 ಲಕ್ಷ ಇಲ್ಲೀಗಲ್ ಆಗಿ ಕನೆಕ್ಷನ್ ತೆಗೆದುಕೊಂಡಿದ್ದಾರೆ. ಅದನ್ನು ಲೀಗಲೈಸ್ ಮಾಡಲು ಸಾಧ್ಯವಿಲ್ಲವೆಂದು ಕೆಪಿಟಿಸಿಎಲ್‌ನವರು ಹೇಳುತ್ತಿದ್ದಾರೆ. ಅದರಿಂದಾಗಿ ರೈತರು ಈಗಾಗಲೇ ಸಾಕಷ್ಟು ಹಣವನ್ನು ಖರ್ಚುಮಾಡಿ ಪಂಪ್‌ಸೆಟ್ಟುಗಳನ್ನು ತೆಗೆದುಕೊಂಡು ಬಂದು ಸುಮಾರು 30 ರಿಂದ 50 ಸಾವಿರ ರೂ.ಗಳನ್ನು ಬರೀಮೋಟಾರ್‌ಗೆ ಇನ್‌ವೆಸ್ಟ್‌ಮೆಂಟ್ ಮಾಡಿದ್ದಾರೆ. ಪೈಪ್‌ಲೈನ್‌ಗಳನ್ನು ಅವರು ತರಿಸಿಕೊಂಡು ಜೋಡಿಸಿಕೊಂಡಿದ್ದಾರೆ. ಇಂತಹ ಸನ್ನಿವೇಶದಲ್ಲಿ ನೀವು ಲೀಗಲೈಜ್ ಮಾಡುವುದಿಲ್ಲವೆಂದರೆ ಅವರು ಏನು ಮಾಡಬೇಕು ? ಅದಕ್ಕೋಸ್ಕರ ಕೆಪಿಟಿಸಿಎಲ್ ರಿಫಾರ್ಮ್ಸ್ ಮಾಡುವ ದೃಷ್ಟಿಯಿಂದ ಸರ್ಕಾರ ಮಾಡತಕ್ಕ ಎಲ್ಲಾ ಕೆಲಸವನ್ನು ನಾವು ವಿರೋಧಮಾಡುವುದಿಲ್ಲ, ಎಂದರು.

**ಶ್ರೀ ಅರಗ ಜ್ಞಾನೇಂದ್ರ ಅವರು ಮಾತನಾಡಿ :** ಈ ಸಾರಿ ಬರ ಬರುತ್ತೆನ್ನುವುದು ಕಳೆದ ಮಳೆಗಾಲದಿಂದ ನಮಗೆ ಗೊತ್ತಿದೆ. ಆದರೆ ಅದರ ನಿವಾರಣೋಪಾಯಕ್ಕೆ ಸರ್ಕಾರ ಯಾವ ರೀತಿ ಗಮನ ಹರಿಸಬೇಕಾಗಿತ್ತೋ ಅದನ್ನು ಹರಿಸಿಲ್ಲ ಎಂದು ನಮ್ಮ ಆರೋಪವಿದೆ. ಜಾನುವಾರು ಮೇವು ಸಾಗಾಣಿಕೆಯ ಬ್ಯಾನ್‌ನಿಂದ ತೊಂದರೆ ಆಗಿರುವುದನ್ನು ಗಮನಿಸಿಲ್ಲ. ಇನ್ನು ಕೆಪಿಟಿಸಿಎಲ್‌ಗೂ ಕುಡಿಯುವ ನೀರಿಗೂ

ಸಂಬಂಧ ಇದೆ. ಅದಾಗಿ ಈಗ ರೈತ ಸಂಘದವರು ಕಾವೇರಿ ಭವನಕ್ಕೆ ಮುತ್ತಿಗೆ ಹಾಕಿದರು. ಅವರಿಗೆ 12 ಗಂಟೆ ಕರೆಂಟ್ ಕೊಡುತ್ತೇವೆ ಎಂದು ಆಶ್ವಾಸನೆ ಸಿಕ್ಕಿತ್ತು. 1993ನೇ ಇಸವಿಯಲ್ಲಿ ನಾವು ನಿಮಗೆ ಹಣ ಕೊಟ್ಟಿದ್ದೇವೆ, ವಿದ್ಯುತ್ ಒದಗಿಸುತ್ತೇವೆ ಎಂದು ಅಗ್ರಿಮೆಂಟ್ ಮಾಡಿಕೊಟ್ಟಿದ್ದೀರಿ; ಅದರ ಆಧಾರದ ಮೇಲೆ ಪಿ.ಎಲ್.ಡಿ.ಬ್ಯಾಂಕ್‌ನಲ್ಲಿ ಕಮರ್ಷಿಯಲ್ ಬ್ಯಾಂಕುಗಳಲ್ಲಿ ರೈತರು ಸಾಲತೆಗೆದುಕೊಂಡಿದ್ದಾರೆ. ಅದರೆ ಈವರೆಗೂ ಕೂಡ ರೈತನಿಗೆ ನೀವು ವಿದ್ಯುತ್ ಸಂಪರ್ಕ ಕೊಟ್ಟಿಲ್ಲ. ಹೀಗೆ 8-9 ವರ್ಷಗಳಿಂದ ರೈತನಿಗೆ ಕನೆಕ್ಷನ್ ಕೊಟ್ಟಿಲ್ಲ ಎಂದರೆ ಆ ರೈತ ಏನು ಮಾಡಬೇಕು ? ಇವತ್ತು ರೈತರು ಆತ್ಮಹತ್ಯೆ ಮಾಡಿಕೊಳ್ಳುತ್ತಿದ್ದಾರೆ. ಬ್ಯಾಂಕಿನವರು ಅವರ ಮನೆ ಜಪ್ತಿ ಮಾಡುತ್ತಿದ್ದಾರೆ. ಇವತ್ತು ಅಕ್ರಮ-ಸಕ್ರಮದಲ್ಲಿ ಸಂಪರ್ಕ ತೆಗೆದುಕೊಂಡವರಿದ್ದಾರೆ. ಯಾರು ಬಡವ ಇದ್ದಾನೆ, ಯಾರು ಸಾಲಮಾಡಿ ಒಂದೆರಡಯ ಎಕರೆ ಜಮೀನಿಗೆ ನೀರು ಹಾಯಿಸಬೇಕೆಂದು ಬಯಸುತ್ತಾನೆ, ಆವನಿಗೆ ನೀವು ಕೊಟ್ಟಿರುವುದು ವಿಷ. ಆತ್ಮಹತ್ಯೆ ಮಾಡಿಕೊಂಡು ಸಾಯಿ ಎನ್ನುವ ರೀತಿಯಲ್ಲಿ ಮಾಡಿದ್ದೀರಿ. 9 ವರ್ಷಗಳಿಂದ ವಿದ್ಯುತ್ ಸಂಪರ್ಕ ಕೊಟ್ಟಿಲ್ಲವೆಂದರೆ ನೀವು ಇಲಾಖೆಗೆ ಬಾಗಿಲು ಹಾಕುವುದು ಒಳ್ಳೆಯದು. ನ್ಯಾಯವಾದ ರೀತಿಯಲ್ಲಿ ವಿದ್ಯುತ್ ಸಂಪರ್ಕ ಕೊಡಿ ಎಂದು ಕೇಳಿದರೆ ನೀವು ಕೊಡುವುದಿಲ್ಲ. ಅಕ್ರಮ-ಸಕ್ರಮ ಎನ್ನುವ ಮಾತನ್ನು ಹೇಳುತ್ತೀರಿ. ಅಕ್ರಮ ಮಾಡಿದವರಿಗೆ ಸಂಪರ್ಕ ಕೊಡುವುದು ನಿಮಗೆ ಸಾಧ್ಯವಾಗುವುದಾದರೆ, ನ್ಯಾಯವಾಗಿ ಕೇಳಿದವರಿಗೆ ಕೊಡಲು ನಿಮ್ಮ ಹತ್ತಿರ ವಿದ್ಯುತ್ ಇರಲಿಲ್ಲವೇನು? ಎಂದೆಲ್ಲ ಪ್ರಶ್ನಿಸಿ ವಿಷಯ ಮಂಡನೆ ಮಾಡಿದರು.

ಶ್ರೀ ಎಸ್.ಕುಮಾರ್ ಬಂಗಾರಪ್ಪ ಅವರು ಜಲಸಂವರ್ಧನೆ, ರೈತ ಕಾಯಕ ಕೆರೆ ಸಂಬಂಧವಾಗಿ ಮಾತನಾಡುತ್ತ; ಇವೆರಡೂ ಬೇರೆ ಬೇರೆ ಕಾರ್ಯಕ್ರಮಗಳಾಗಿವೆ. **ರೈತ ಕಾಯಕ ಕೆರೆ** ಯೋಜನೆ ಸಂಪೂರ್ಣವಾಗಿ ನಾವು ರಾಜ್ಯ ಹಣಕಾಸು ಯೋಜನೆಯಿಂದ ಮಾಡಿರತಕ್ಕಂಥ ಕಾರ್ಯಕ್ರಮ. ಅಪ್ರೈಸರ್ ಕಮಿಟಿಯವರು ಮಾಡಿಕೊಟ್ಟಿದ್ದೇವೆ ಎನ್ನುವ ಮಾತು ಬಂದಿದೆ. ಆದರೆ ಅಧಿಕಾರಿಗಳಿಂದ ನಮಗೆ ಆ ಬಗ್ಗೆ ಇನ್ನೂ ಮಾಹಿತಿ ಬಂದಿಲ್ಲ. ರೈತ ಕಾಯಕ ಕೆರೆ ಕಾರ್ಯಕ್ರಮವನ್ನೂ ತತ್‌ಕ್ಷಣ ಮಾಡುತ್ತೇವೆ. ಅದಕ್ಕೂ ವರ್ಲ್ಡ್‌ಬ್ಯಾಂಕ್ ಸ್ಕೀಮಿಗೂ ನಮಗೂ ಸಂಬಂಧವಿಲ್ಲ ಎಂದರು.

ಶ್ರೀ **ಸಿ.ಭೈರೇಗೌಡರು** ಚರ್ಚೆಯಲ್ಲಿ ಪಾಲ್ಗೊಂಡು, ಎಂದಿನ ಬರಗಾಲದ ಜೊತೆಗೆ ವಿದ್ಯುತ್ ಬರಗಾಲವೂ ತಾಗಿಕೊಂಡಿದೆ. ನಮ್ಮ ರಾಜ್ಯದಲ್ಲಿರತಕ್ಕಂಥ

ನೀರಾವರಿ ಮೂಲಗಳ ಸಾಗುವಳಿಯಾಗತಕ್ಕಂಥದ್ದು ಶೇಕಡ 22–23 ರಷ್ಟು ಭಾಗದ ಭೂಮಿಗಳು ಮಾತ್ರ. ಉಳಿದಂತೆ ಶೇಕಡ 28–29ರಷ್ಟು ಭಾಗಗಳು ಮಳೆಯಾಧಾರಿತವಾಗಿವೆ. ಅವುಗಳಿಗೆ ಪಂಪ್‌ಸೆಟ್‌ಗಳೇ ಆಧಾರಗಳಾಗಿವೆ. ನಮ್ಮ ರಾಜ್ಯದಲ್ಲಿ 16–17 ಲಕ್ಷ ಪಂಪ್‌ಸೆಟ್‌ಗಳಿದ್ದು, 70–80 ಲಕ್ಷ ಎಕರೆಗಳಷ್ಟು ಭೂಮಿಯು ದೊಡ್ಡಪ್ರಮಾಣದಲ್ಲಿ ಪಂಪ್‌ಸೆಟ್‌ಗಳ ಮೂಲಕ ನೀರನ್ನು ಪಡೆದುಕೊಳ್ಳುತ್ತಿವೆ. ಅದೇ ರೀತಿಯಲ್ಲಿ ಹೆಚ್ಚುಮೌಲ್ಯದ ಕೃಷಿ ಉತ್ಪಾದನೆ ಆಗತಕ್ಕಂಥಾದ್ದೂ ಕೂಡ ಈ ಮೂಲಕವೆ. ಇದಕ್ಕೆ ರೈತರೇ ತಮ್ಮ ಸ್ವಂತ ಬಂಡವಾಳವನ್ನು ಹಾಕಿ ಕೊಂಡಿದ್ದಾರೆ. ಬಾವಿ ತೆಗೆಸುವುದು, ಕೊಳವೆ ಬಾವಿಗಳನ್ನು ಹಾಕಿಸಿರುವುದು, ವಿದ್ಯುತ್ ಪಂಪ್‌ಸೆಟ್ ಅನ್ನು ಅಳವಡಿಸಿರುವುದು, ವಿದ್ಯುತ್ ಬಳಕೆಗೆ ಹಣವನ್ನು ಕೊಡುವುದು ಮುಂತಾಗಿ ಎಲ್ಲವನ್ನೂ ಕೂಡ ರೈತರು ತಮ್ಮ ಸ್ವಂತ ಖರ್ಚಿನಲ್ಲಿ ಮಾಡಿಕೊಂಡಿದ್ದಾರೆ. ಒಂದು ಪಂಪ್‌ಸೆಟ್ ಅನ್ನು ಹಾಕಿ ಬಳಕೆಗೆ ತರುವಲ್ಲಿ 1ರಿಂದ 1.5 ಲಕ್ಷ ಖರ್ಚು ಬೀಳುತ್ತದೆ. ಹೀಗೆ ಖರ್ಚು ಮಾಡಿರುವ ರಾಜ್ಯದ ರೈತರಿಗೆ ಆರು ಗಂಟೆಗಳ ಕಾಲ ವಿದ್ಯುತ್ ಕೊಡುತ್ತೇವೆಂದು ಹೇಳಿ ದಿನಕ್ಕೆ ಎರಡು ಮೂರು ಗಂಟೆಗಳ ಕಾಲ ಕೊಟ್ಟರೆ ರೈತರು ಏನು ಮಾಡಬೇಕು ? ಅವರ ಪರಿಸ್ಥಿತಿ ಏನು ? ಎಂಬುದರ ಬಗ್ಗೆ ನಾವು ಯೋಚನೆ ಮಾಡಬೇಕಾಗುತ್ತದೆ. ರಾಜ್ಯದಲ್ಲಿ ಈವೊತ್ತು ಅನೇಕ ಕಡೆಗಳಲ್ಲಿ ರೈತರು ಸರಕಾರದ ಕಛೇರಿಗಳಿಗೆ ನುಗ್ಗಿ ಬೆಂಕಿ ಇಟ್ಟಿರುವಂಥಾದ್ದು ಆಗಿದೆ. ಅಲ್ಲಿರುವ ಅಧಿಕಾರಿಗಳ ಮೇಲೆ ಕೈಮಾಡಿರತಕ್ಕಂಥದ್ದಾಗಿದೆ. ಇಷ್ಟಾದರೂ ಸರಕಾರ ಎಚ್ಚೆತ್ತುಕೊಂಡಿಲ್ಲ, ಎಂದರು.

ಈ ಸಂದರ್ಭದಲ್ಲಿ ಶ್ರೀ **ಕಾಗೋಡು ತಿಮ್ಮಪ್ಪನವರು,** ರೂರಲ್ ಮತ್ತು ಅರ್ಬನ್ ಏರಿಯಾದವರಿಗೆ ಹಿಂದೆ ನೀಡುತ್ತಿದ್ದ ವಿದ್ಯುತ್ತಿನ ಪ್ರಮಾಣದ ಬಗ್ಗೆ ಹೇಳಲು ಕೇಳಿದಾಗ ಶ್ರೀ ಸಿ.ಭೈರೇಗೌಡರು ತಮ್ಮ ಅಧಿಕಾರಾವಧಿಯಲ್ಲಿ ನಡೆದ ವಿಷಯವನ್ನು ಮುಂದಿಟ್ಟರು ; ಕೈಗಾರಿಕೆಗಳಿಗೆ ಕೊಡುತ್ತಿದ್ದ ವಿದ್ಯುತ್‌ನಲ್ಲಿ ಶೇಕಡ 10–15–20–25 ರಿಂದ 50 ರವರೆಗೂ ಕಡಿತವಾಗಿರತಕ್ಕಂಥ ಸಂದರ್ಭ ಕೂಡ ಉಂಟು. ಸರಕಾರದ ದಾಖಲೆಗಳಲ್ಲಿ ಈ ವಿಷಯಗಳಿವೆ. ಕೈಗಾರಿಕೆಗಳಲ್ಲಿ ಉಳಿತಾಯವಾಗುತ್ತಿದ್ದಂಥ ವಿದ್ಯುತ್ ಅನ್ನು ರೈತರಿಗೆ ಕೊಡಲು ಕಾರಣ, ಈ ಸಮಾಜವನ್ನು, ಈ ದೇಶವನ್ನು, ಎಲ್ಲರನ್ನೂ ಕಾಪಾಡುತ್ತಾ ಇರತಕ್ಕಂಥವರು ಅವರು. ಆದರೆ ಇವೊತ್ತು ರೈತರಿಗೆ ಆ ಆದ್ಯತೆಯೂ ಇಲ್ಲ, ಎಂದರು.

ಗೃಹ ಸಚಿವ ಶ್ರೀ **ಮಲ್ಲಿಕಾರ್ಜುನ ಖರ್ಗೆ** ಅವರು ಈ ಮಾತುಗಳ ಬಗ್ಗೆ, ಸಮ್ಮತಿಸುತ್ತಲೇ, ಹಿನ್ನಲೆಯಲ್ಲಿ ಹೇಳಿದ್ದು ಹೀಗೆ ; ಆಗ ವಿದ್ಯುತ್ ಸರಬರಾಜು ಹೈಡ್ರೋಎಲೆಕ್ಟ್ರಿಕ್ ಜನರೇಷನ್‌ನಿಂದ ಉತ್ಪತ್ತಿಯಾಗುತ್ತಿತ್ತು; ಅದರ ಕಾಸ್ಟ್ ಏನಿತ್ತು ಅದು 15–20 ಪೈಸೆಗಳಷ್ಟಿತ್ತು. ಈಗ ನಾವು ರೈತರಿಗೆ ಕೊಡತಕ್ಕಂಥಾದ್ದರ ಕಾಸ್ಟ್ 2–3 ರೂಪಾಯಿಗಳವರೆಗೆ ಇದೆ. ಲಿಂಗನಮಕ್ಕಿ ಜಲಾಶಯದಲ್ಲಿ 800 ರಿಂದ 1000 ಮೆಗಾವ್ಯಾಟ್ ಉತ್ಪಾದನೆಯಾಗುವಲ್ಲಿ ಕೇವಲ 400 ಮೆಗಾವ್ಯಾಟ್‌ನಷ್ಟು ಅಂದರೆ ಅರ್ಧದಷ್ಟೂ ಕೂಡ ಉತ್ಪಾದನೆ ಆಗದೆ ಕೊರತೆ ಬೀಳುತ್ತಿದೆ. ಈಗ ನಾವು ಹೊರರಾಜ್ಯಗಳಿಂದ ಖರೀದಿ ಮಾಡಿ ಅಥವಾ ರಾಯಚೂರು ಥರ್ಮಲ್ ಪ್ಲ್ಯಾಂಟ್‌ನಿಂದ ತೆಗೆದುಕೊಂಡು ಒಂದು ಯೂನಿಟ್‌ಗೆ ಮೂರು–ಮೂರುವರೆ ರೂಪಾಯಿಗಳನ್ನು ಖರ್ಚುಮಾಡಿ ಹಿಂದಿನಸದರದಂತೆ ರೈತರಿಗೆ ಕೊಡಲು ಸಾಧ್ಯವೆ! ಈ ಬಗ್ಗೆ ಕನ್‌ಸ್ಟ್ರಕ್ಟೀವ್ ಆದ ಸಲಹೆ ಕೊಡಿ. ಪ್ರಾಕ್ಟಿಕಲ್ ಆಗಿದ್ದರೆ ಇಂಪ್ಲಿಮೆಂಟ್ ಮಾಡೋಣ. ವಿದ್ಯುತ್ತನ್ನು ಇಂಡಸ್ಟ್ರೀಸ್‌ಗೆ ಕೊಡಲು ಕಾರಣ, ಅವರು ಪ್ರೈಸ್ ಪ್ರಕಾರ ಕೊಡುತ್ತಿದ್ದಾರೆ. ಆದರೆ ಗ್ರಾಮೀಣ ಪ್ರದೇಶದ ಬಗ್ಗೆ ತಮಗೂ ಗೊತ್ತಿರುವಂತೆ ಸುಮಾರು 2000 ಕೋಟಿ ಸಬ್ಸಿಡಿಯನ್ನು ಸರ್ಕಾರವೇ ಕೊಡುತ್ತಿದೆ. ಕೇಂದ್ರದಿಂದ ಬರಬೇಕಾದ್ದರಲ್ಲಿ 600 ಕೋಟಿ ರೂ ಡೆವಲ್ಯೂಷನ್ ಆಫ್ ಫಂಡ್ಸ್‌ನಲ್ಲಿ ಕಡಿತವಾಗಿರುವುದು ತಮಗೂ ಗೊತ್ತು ; ಪತ್ರಿಕೆಗಳಲ್ಲಿ ಆ ವಿಷಯ ಬಂದಿದೆ, ಎಂದರು.

ಶ್ರೀ ಸಿ.ಭೈರೇಗೌಡರು ; ಹಿಂದೆ ನನಗೆ ನೆನಪಿರುವಂತೆ ಹಗಲು 6 ಗಂಟೆ, ರಾತ್ರಿ10 ರಿಂದ ಬೆಳಗ್ಗೆ 6 ಗಂಟೆಯವರೆಗೆ ವಿದ್ಯುತ್ ನೀಡುತ್ತಿದ್ದೆವು. ಕೇವಲ ಕೈಗಾರಿಕೆಗಳಿಗೆ ವಿದ್ಯುತ್ ಕಡಿತ ಮಾಡುತ್ತಿರಲಿಲ್ಲ. ರಾಜ್ಯದ ಹೊರಗಡೆಯಿಂದ ವಿದ್ಯುತ್ ತರಲು ಪ್ರಾಮಾಣಿಕ ಪ್ರಯತ್ನ ಮಾಡಿದ್ದೆವು. ಒಮ್ಮೆ ಕಾವೇರಿ ನದಿಯಿಂದ ನೀರನ್ನು ತಮಿಳ್ನಾಡಿಗೆ ಬಿಟ್ಟು ಆ ನೀರಿಗೆ ಬದಲಾಗಿ ವಿದ್ಯುತ್ ತಂದಿರುವ ಉದಾಹರಣೆ ಕೂಡ ಈ ರಾಜ್ಯದಲ್ಲಿ ಇದೆ. ಮಹಾರಾಷ್ಟ್ರದಿಂದಲೂ ವಿದ್ಯುತ್ ತಂದಿರುವ ಉದಾಹರಣೆ ಇದೆ. ಕೇಂದ್ರ ಗ್ರಿಡ್‌ನಿಂದ ಹೆಚ್ಚು ವಿದ್ಯುತ್ ತರುವ ಪ್ರಯತ್ನವಾದ ಉದಾಹರಣೆಯೂ ಇದೆ. ಈಗ ಅದೆಲ್ಲ ಆಗಿಲ್ಲ. ವಿದ್ಯುತ್ ಪೂರೈಕೆಗಿಂತ ಬೇಡಿಕೆ ಹೆಚ್ಚಿದೆ ಎಂಬುದು ನಮಗೂ ತಿಳಿದಿದೆ, ಎಂದು ನುಡಿಯುವಲ್ಲಿ ಶ್ರೀ ಕಾಗೋಡು ತಿಮ್ಮಪ್ಪನವರು, ಸದ್ಯ 125 ಮೆಗಾವ್ಯಾಟ್‌ನಷ್ಟು ವಿದ್ಯುತ್ ಹೊರಗಡೆಯಿಂದ ಬರುತ್ತಿದೆ. ಬೇರೆಯವರ ಜೊತೆ ಒಡಂಬಡಿಕೆಯೂ ಆಗಿದೆ ಎಂದು ಮಾಹಿತಿ ನೀಡಿದರು.

ಅದಕ್ಕೆ ಪ್ರತಿಕ್ರಿಯಿಸಿದ ಶ್ರೀ ಸಿ.ಭೈರೇಗೌಡರು ಇವತ್ತಿನ ಭೀಕರತೆಗೆ ತಕ್ಕಂತೆ ಪ್ರಯತ್ನ ಆಗಿಲ್ಲ. ರೈತರು ಈ ಬಗ್ಗೆ ತೀರ ಬೆಂಕಿಯಿಂಥ ಕಷ್ಟ ಅನುಭವಿಸುತ್ತಿದ್ದಾರೆ.

ಈ ಬಾರಿ ಜಲಾಶಯಗಳಲ್ಲಿ ನೀರಿನಮಟ್ಟ ಕಡಿಮೆ. ವಿದ್ಯುತ್ ಕೊರತೆ ಉಂಟಾಗುತ್ತದೆ. ಆದ್ದರಿಂದ ಬೆಳೆಗಳನ್ನು ಕಡಿಮೆಮಾಡಿಕೊಳ್ಳಿ ಎಂದು ಎರಡು ತಿಂಗಳ ಹಿಂದೆ ಪತ್ರಿಕಾ ಜಾಹೀರಾತಿನ ಮೂಲಕ ರೈತರಿಗೆ ತಿಳಿಯಪಡಿಸಿದ್ದಿರಿ. ಆದರೆ ಈ ವಿಷಯ ಮೊದಲೇ ನಿಮಗೆ ತಿಳಿದಿದ್ದು ಆಗಿನಿಂದಲೇ ಏಕೆ ಪ್ರಯತ್ನ ಮಾಡಲಿಲ್ಲ? ರಾಜ್ಯದ ರೈತರ ದೃಷ್ಟಿಯಿಂದ ಸಕಾಲದಲ್ಲಿ ನೀವು ಕ್ರಮಕೈಗೊಳ್ಳುವಲ್ಲಿ ವಿಫಲರಾಗಿದ್ದೀರಿ, ಎಂದು ನುಡಿದರು. ಈ ಮಾತಿಗೆ ಕಾಗೋಡು ತಿಮ್ಮಪ್ಪನವರು ಛತ್ತಿಸಗಡದಿಂದ 120 ಮೆಗಾವಾಟ್ ವಿದ್ಯುತ್‌ಗೆ ಪ್ರಯತ್ನ ಮಾಡಿದ್ದ ಕಾರಣವೆ ಅದು ಬಂದಿದ್ದು ಎಂದು ಉತ್ತರಿಸಿದರು. ಆ ನಂತರ ಶ್ರೀ ಭೈರೇಗೌಡರು ಪಂಪ್‌ಸೆಟ್‌ಗಳನ್ನು ಸಕ್ರಮಗೊಳಿಸುವ ಕಾರ್ಯವನ್ನು ಹಿಂದೆ ಮಾಡಿದಂತೆ ಈಗಲೂ ಮಾಡಬೇಕೆಂಬ ಅಭಿಪ್ರಾಯವನ್ನು ವ್ಯಕ್ತಮಾಡಿದರು. ಸಮಾಜದ ಬೇರೆ ವರ್ಗಗಳ ಜೊತೆ ರೈತರು ಕೂಡ ಬದುಕಬೇಕಾಗಿದೆ, ಎಂದೂ ನುಡಿದರು.

ಶ್ರೀ **ಡಿ.ವಿ.ಸದಾನಂದ ಗೌಡರು,** ಅಕ್ರಮ ಪಂಪ್‌ಸೆಟ್‌ಗಳನ್ನು ಸಕ್ರಮ ಮಾಡುವ ಸಂದರ್ಭದಲ್ಲಿ ಬಂಟ್ವಾಳ ತಾಲೂಕಿನಲ್ಲಿ ವಿಪರ್ಯಾಸಗೊಂಡಿರುವ ಬಗ್ಗೆ ಗಮನ ಸೆಳೆಯುತ್ತ ಹೇಳಿದರು ; ಆ ತಾಲೂಕನ್ನು ಪೂರ್ತಿ ಕಪ್ಪು ಪ್ರದೇಶವೆಂದಿರುವ ಕಾರಣ, ಯಾವುದೇ ವಿದ್ಯುತ್ ಕನೆಕ್ಷನ್ ಕೊಡದಿರುವುದು, ಆಗಿದೆ. ಆದರೆ ಈಗಾಗಲೇ ಆ ಪ್ರದೇಶದಲ್ಲಿ ಕನೆಕ್ಷನ್ ಪಡೆದುಕೊಂಡು, ಮೂರು ಹೆಚ್.ಪಿ, ಐದು ಹೆಚ್.ಪಿ ಪಂಪ್ ಹಾಕಿಕೊಂಡಿದ್ದು, ಅದನ್ನು ಯಾವುದೇ ಸಂದರ್ಭದಲ್ಲಿ ಡಿಸ್‌ಕನೆಕ್ಟ್ ಮಾಡಿರುವ ಬಗ್ಗೆ ಆದೇಶ ಕೊಡಬೇಕು ಎಂದರು. ರೈತರಿಗೆ ನೋಟೀಸ್ ಕೊಟ್ಟು ಕನೆಕ್ಷನ್ ನಿಲ್ಲಿಸಬಾರದು ಎಂದು ವಿನಂತಿಸಿದರು. ಆಗ **ಹೆಚ್.ಎಸ್.ಮಹದೇವ ಪ್ರಸಾದ** ಅವರು ಡಾರ್ಕ್ ಏರಿಯಾ ಇರುವ ಎಲ್ಲಾ ತಾಲೂಕುಗಳನ್ನು ಗಮನಿಸಬೇಕು ಎಂದರು. ಶ್ರೀ ಸಿ.ಭೈರೇಗೌಡರು ಮುಂದುವರಿದು, ರೈತರು ಬಳಸುತ್ತಿರುವ ಅನಧಿಕೃತ ಪಂಪ್‌ಸೆಟ್‌ಗಳನ್ನು ಕೂಡ ಸಕ್ರಮಗೊಳಿಸುವ ಬಗ್ಗೆ, ಒಂದು ಲಕ್ಷ ಡಾರ್ಕ್ ಮತ್ತು ಗ್ರೇ ಏರಿಯಾದಲ್ಲಿರತಕ್ಕ ರೈತರ ಪಂಪುಸೆಟ್‌ಗಳನ್ನು ಸಕ್ರಮಗೊಳಿಸುವ ಬಗ್ಗೆ, ಹಾಗು ಆ ಕಾರ್ಯವಾಗದಿದ್ದರೆ ಉಂಟಾಗುವ ರೈತ ಸಮಸ್ಯೆಯ ಬಗ್ಗೆ, ಹಾಗು ಹೊಸ ತಂತ್ರಜ್ಞಾನವನ್ನು ನೀರಿನ ಬಳಕೆಯಲ್ಲಿ ಅಳವಡಿಸಿಕೊಳ್ಳುವ ಬಗ್ಗೆ ವಿಚಾರವನ್ನಿಟ್ಟರು. ಈ ಸಂದರ್ಭದಲ್ಲಿ ರೈತರ ಹೆರಾಸ್‌ಮೆಂಟ್ ಆಗದಂತೆ ಗಮನ

ಹರಿಸಬೇಕು ಎಂದು ಶ್ರೀ ಡಿ.ವಿ.ಸದಾನಂದಗೌಡರು ನುಡಿದರು. ನಂತರ ಶ್ರೀ ಸಿ.ಭೈರೇಗೌಡರು, ರೈತರಿಗೆ ಪುಕ್ಕಟೆಯಾಗಿ ವಿದ್ಯುತ್ ಕೊಡಬೇಕು ಎನ್ನುವುದಿಲ್ಲ; ದರ ವಿಧಿಸುವಂಥ ಹಂತದಲ್ಲಿ ರೈತ ಎಷ್ಟು ಪ್ರಮಾಣದಲ್ಲಿ ಯಾವ ಬೆಳೆ ಬೆಳೆದಿದ್ದಾನೆ, ಆದಾಯವೆಷ್ಟಿದೆ ಎಂದೆಲ್ಲ ಗಮನಿಸಿ ಅದಕ್ಕನುಗುಣವಾಗಿ ವಿದ್ಯುತ್‌ದರ ವಿಧಿಸಬೇಕು; **ಡಾರ್ಕ್ ಮತ್ತು ಗ್ರೇ ಏರಿಯಾ** ಎಂಬ ವಿಂಗಡಣೆಯನ್ನು ತಕ್ಷಣವೆ ತೆಗೆದು, ಎಲ್ಲ ಪ್ರದೇಶದ ಪಂಪ್‌ಸೆಟ್‌ಗಳನ್ನು ಸಕ್ರಮಗೊಳಿಸಬೇಕು. ನಮ್ಮ ಕೃಷಿಕನಿಗೆ ಕೃಷಿಯಲ್ಲದೆ ಬೇರೆ ಕಸಬು ಗೊತ್ತಿಲ್ಲದ ಕಾರಣ, ಕೃಷಿಕರಿಗೆ ಕೃಷಿ ಬದುಕಿಗೆ ನೆರವಾಗಬೇಕು, ರೈತರ ಜಮೀನಿಗೆ ನಾಲೆಯ ಮುಖಾಂತರ ನೀರನ್ನು ಕೊಡಿಸುವುದಾದರೆ ಪಂಪ್‌ಸೆಟ್‌ಗಳ ಅಗತ್ಯವೇ ಇರದು ಎಂದು ಹೇಳಿ ತಮ್ಮ ಮಾತನ್ನು ಮುಕ್ತಾಯಗೊಳಿಸಿದರು.

ಶ್ರೀ **ಸಿ.ಚನ್ನಿಗಪ್ಪ** ಅವರು ಚರ್ಚೆಯಲ್ಲಿ ಭಾಗವಹಿಸುತ್ತ, ಕುಡಿವ ನೀರಿನ ಸಮಸ್ಯೆ, ಬರಗಾಲ, ವಿದ್ಯುಚ್ಛಕ್ತಿ ಸಮಸ್ಯೆ, ಮೇವು ಸಮಸ್ಯೆ, ಬರಕಾಮಗಾರಿಗೆ ಸಂದಾಯವಾಗದಿರುವ ಹಣ, ರೈತರ ಆತ್ಮಹತ್ಯೆ, ತಾಲುಕು ಕೇಂದ್ರಗಳಿಗೆ 20ಲಕ್ಷದಿಂದ 25ಲಕ್ಷ ರೂಗಳವರೆಗೆ ನೆರವು, ಪಂಪ್‌ಸೆಟ್‌ಅನ್ನು ಸಕ್ರಮಗೊಳಿಸಿದ ಮೇಲೆ ಇಲಾಖೆಗೆ ಬರಬೇಕಾದ ಹಣ. ಹಿಂದಿನ ವಿದ್ಯುತ್ ದರದ ಮುಂದುವರಿಕೆ, ರೈತರ ಕ್ಷೇಮಾಭಿವೃದ್ಧಿಗೆ ಹೆಚ್ಚು ಹಣ ವಿನಿಯೋಗಲ್ಲೆ ಸರ್ಕಾರದ ನಿರ್ಧಾರ, ಡಿಫಿಸಿಟ್ ಎಲೆಕ್ಟ್ರಿಸಿಟಿಯಿಂದ ಪಂಪ್‌ಸೆಟ್ಟುಗಳು (ಶೇ 80 ರಷ್ಟು) ಸುಟ್ಟು ಹೋಗಿರುವ ವಿಷಯ ಹಾಗೂ ಅದರಿಂದ ರೈತರಿಗಾಗುವ ಸಾವಿರಾರು ರೂ.ನಷ್ಟ, ಬ್ಯಾಂಕ್‌ಗಳಿಂದ ರೈತರು ಪಡೆದಿರುವ ಸಾಲದ ಮೇಲಿನ ಬಡ್ಡಿಮನ್ನಾ, ಸಾಲವಸೂಲಾತಿ ಕಾಲದಲ್ಲಿ ಅಧಿಕಾರಿಗಳ ದರ್ಪ, ರೈತರ ವಿದ್ಯುತ್ ಬಾಕಿ ವಸೂಲಿಯ ಹಣವನ್ನೂ ಬರಗಾಲದ ಸಮಯದಲ್ಲಿ ಕಡಿಮೆ ಮಾಡುವುದು ; ರಿಯಾಯಿತಿ ವಿದ್ಯುತ್ ಒದಗಿಸಿ ರೈತರಿಗೆ ಅನುಕೂಲಮಾಡುವುದು, ಕೃಷಿ ವಿಮೆ, ರೈತ ಸೇವಾ ಸಹಕಾರ ಸಂಘ, ರೈತ ಸೇವಾಕೇಂದ್ರ ಸ್ಥಾಪನೆ ಇತ್ಯಾದಿಗಳ ಬಗ್ಗೆ ಮಾತನಾಡಿ, ತಮ್ಮ ಮಾತನ್ನು ಮುಗಿಸಿದರು.

ಶ್ರೀ **ಎಸ್.ಸುರೇಶ್‌ಕುಮಾರ್** ಅವರು ಗುಣಮಟ್ಟದ ವಿದ್ಯುತ್ ಸರಬರಾಜು ಬಗ್ಗೆ, ಕುಡಿಯುವ ನೀರಿನ ಸಮಸ್ಯೆಯ ಬಗ್ಗೆ ಮಾತಿಟ್ಟರು.

ಶ್ರೀ **ಎಂ.ಡಿ.ಲಕ್ಷ್ಮೀನಾರಾಯಣ** ಅವರು, ರೈತರಿಗೆ ಅಸಮರ್ಪಕ ವಿದ್ಯುತ್ ಸರಬರಾಜಿನಿಂದಾಗಿ ತೊಂದರೆಯಾಗುತ್ತಿರುವ ಬಗ್ಗೆ ಪ್ರಸ್ತಾಪಿಸಿತ್ತ, ರೈತರು ಇವತ್ತು

ಪ್ರತಿಯೊಂದು ಹನಿ ನೀರಿಗೂ ಪರಿತಪಿಸಬೇಕಾಗಿದೆ. ಕುಡಿಯುವ ನೀರಿನ ಸಮಸ್ಯೆ ಇರುವ ಗ್ರಾಮದ ಜನತೆ ಅದರಲ್ಲೂ ವಿಶೇಷವಾಗಿ ಮಹಿಳೆಯರು ಗ್ರಾಮ ಪಂಚಾಯತ್ ಕಛೇರಿಯ ಮುಂದೆ ಧರಣಿ ಮಾಡಿ, ಆ ಕಛೇರಿಯ ಕಡತಗಳನ್ನು ಹೊರಗೆ ಬಿಸಾಡಿ ಪ್ರತಿಭಟನೆಗಳನ್ನು ಮಾಡಿದರೂ ಸಹಾ ಅಧಿಕಾರಿಗಳು ಇದರ ಬಗ್ಗೆ ಕ್ರಮ ಕೈಗೊಳ್ಳದಿರುವಲ್ಲಿ ಕಟ್ಟೆಚ್ಚರಿಕೆ ನೀಡಬೇಕು.

ಅಕ್ರಮ ವಿದ್ಯುತ್ ಸಂಪರ್ಕ ಪಡೆದಿರುವ ಕಡೆ ನಾಮಿನಲ್ ರೇಟ್ ಫಿಕ್ಸ್ ಮಾಡಿ ಸಕ್ರಮ ಮಾಡಿಕೊಟ್ಟಿದ್ದರೆ ಸರ್ಕಾರಕ್ಕೆ ಸಾಕಷ್ಟು ಆದಾಯ ಬರುತ್ತಿತ್ತು. ಆದರೆ ಈ ಆದಾಯವನ್ನೂ ಕಳೆದುಕೊಂಡು, ಅಕ್ರಮವಾಗಿರುವ ಸಂಪರ್ಕವನ್ನು ಸಕ್ರಮ ಮಾಡುವುದರಲ್ಲಿ ಕೂಡ ವಿಫಲವಾಗಿದೆ. ರೈತರಿಗೆ 10–12 ಸಾವಿರ ದಂಡವನ್ನು ಫಿಕ್ಸ್‌ಮಾಡಲಾಗಿದೆ. ಇದನ್ನು ತೆರುವಲ್ಲಿ ಬರಗಾಲ ಪರಿಸ್ಥಿತಿಯಿಂದ ಕಂಗಾಲಾಗಿರುವ ರೈತ ವಿಫಲನಾಗಿದ್ದಾನೆ. ಸಣ್ಣ ಮೊತ್ತವನ್ನು ನಿಗದಿ ಪಡಿಸಿ ಅಕ್ರಮ ಸಂಪರ್ಕವನ್ನು ಸಕ್ರಮಗೊಳಿಸುವ ಯೋಜನೆಯನ್ನು ರೂಪಿಸಿದರೆ ರೈತರಿಗೆ ಪ್ರಯೋಜನವಾಗಿ, ಸಮರ್ಪಕ ವಿದ್ಯುತ್ ಪಡೆಯಲು ಸಹಕಾರಿಯಾಗುತ್ತದೆ, ಎಂದು ಸಲಹೆ ಇತ್ತರು. ಮುಂದುವರಿದು ತುಮಕೂರು ಜಿಲ್ಲೆಯ ಕೊಬ್ಬರಿ ಕೇಂದ್ರಗಳಲ್ಲಿ ಕೊಬ್ಬರಿ ಖರೀದಿನಿಂತು 1.5 ತಿಂಗಳು ಕಳೆದರೂ ಕೂಡ ರೈತರಿಗೆ ಚೆಕ್ಕುಗಳು ಬರದೆ, ಹಣ ಒದಗದೆ ಅವರು ಪರಿತಪಿಸುತ್ತಿದ್ದಾರೆ, ಎಂದು ಬರಗಾಲ ಪರಿಸ್ಥಿತಿಯ ಚರ್ಚೆಯ ಸಂದರ್ಭದಲ್ಲಿ ತಮ್ಮ ಮಾತುಗಳನ್ನು ಸಭೆಯ ಮುಂದಿಟ್ಟರು.

*ಈ ಚರ್ಚೆಗಳಲ್ಲಿ ಸರ್ವಶ್ರೀ ಕೆ.ಶ್ರೀನಿವಾಸಗೌಡ, ಕೆ.ಜಯಪ್ರಕಾಶ್ ಹೆಗ್ಡೆ, ಎಸ್.ಎಂ.ಕೃಷ್ಣ, ಎಂ.ಮಹದೇವ್, ಜಿ.ಬಿ.ಚಿಮ್ಮನಕಟ್ಟಿ, ಆರ್.ವಿ.ದೇಶಪಾಂಡೆ, ಸಿ.ಆರ್.ಸಗೀರ್ ಅಹಮದ್, ಎಸ್.ಎಸ್.ಪಾಟೀಲ್, ಹೆಚ್.ಎಸ್.ಮಹದೇವ ಪ್ರಸಾದ, ಬಿ.ಎಚ್.ಬನ್ನಿಕೋಡ್ ಮುಂತಾದವರು ಪಾಲ್ಗೊಂಡಿದ್ದರು. ಸಭಾಧ್ಯಕ್ಷ ಸ್ಥಾನವನ್ನು, ಶ್ರೀ ಎಂ.ವಿ.ವೆಂಕಟಪ್ಪ ಹಾಗು ಶ್ರೀ ಮನೋಹರ್ ಹೆಚ್. ತಹಸೀಲ್ದಾರ್ ನಿರ್ವಹಿಸಿದರು.*

## ವಿಷಯ 7 : ಬರ ಪರಿಸ್ಥಿತಿ; ನಿಯಮ 69ರ ಮೇರೆಗೆ ಚರ್ಚೆ

20.3.2002ರ ವಿಧಾನಸಭಾಧಿವೇಶನದಲ್ಲಿ[7] ಶ್ರೀ **ಬಿ.ಎನ್.ಬಚ್ಚೇಗೌಡರು,** ಬರ ಹಾಗು ವಿದ್ಯುತ್ ಸರಬರಾಜಿನ ವ್ಯವಸ್ಥೆ ಕುರಿತು ಮಾತನಾಡುತ್ತ; 24 ಗಂಟೆಗಳ ಕಾಲ ನಿರಂತರ ವಿದ್ಯುತ್ ಸರಬರಾಜಿನ ಬಗ್ಗೆ ಭಾಷೆ ಇತ್ತ ಸರ್ಕಾರ ಕೇವಲ 6 ಗಂಟೆಗಳ ಕಾಲವೂ ರೈತರಿಗೆ ವಿದ್ಯುತ್ ನೀಡದಿರುವುದು; 12 ಗಂಟೆಕಾಲ ವಿದ್ಯುತ್ತನ್ನು ಸಿಂಗಲ್‌ಫೇಸ್ ಮಾಡಿರುವುದು, ಲೋಡ್ ಷಡ್ಡಿಂಗ್ ಇದಕ್ಕೆಲ್ಲ ಕಾರಣವಾಗಿರುವುದು ; ಕೆಪಿಟಿಸಿಎಲ್ ಅಧಿಕಾರಿಗಳು ರೈತರಿಗೆ ಸಾಕಷ್ಟು ತೊಂದರೆ ಕೊಡುತ್ತಿರುವುದು; ರಾಜ್ಯದಲ್ಲಿ 43 ತಾಲೂಕುಗಳು ಡಾರ್ಕ್ ಮತ್ತು ಗ್ರೇ ಏರಿಯಾ ಎಂದು ಗುರುತಿಸಲ್ಪಟ್ಟಿದ್ದು, ಅವುಗಳಲ್ಲಿ 30 ಸಾವಿರಕ್ಕೂ ಹೆಚ್ಚು ಪಂಪ್‌ಸೆಟ್‌ಗಳಿಗೆ ವಿದ್ಯುತ್ ಪೂರೈಕೆಯನ್ನು ರೆಗ್ಯುಲರೈಸ್ ಮಾಡಬೇಕಾಗಿರುವುದು ; ಆದರೆ ಈ ಕೆಲಸವನ್ನು ಕೆಪಿಟಿಸಿಎಲ್ ಅಧಿಕಾರಿಗಳು ನಿರಾಕರಿಸಿರುವುದು; ಸರ್ಕಾರ ಏಪ್ರಿಲ್ 6ರ ಒಳಗೆ ರೆಗ್ಯುಲರೈಸ್ ಮಾಡಿಸಿಕೊಳ್ಳಲು ಗಡುವಿನ ಅವಕಾಶ ಕೊಡುವ ಬಗ್ಗೆ ; ಕೇಂದ್ರದೊಡನೆ ಚರ್ಚಿಸಿ ಡಾರ್ಕ್ ಮತ್ತು ಗ್ರೇ ಏರಿಯಾಗಳನ್ನು ರಿಲಾಕ್ಸ್ ಮಾಡುವುದು; ಅನಧಿಕೃತವಾಗಿ ಕೊಳವೆಭಾವಿಗಳನ್ನು ಕೊರೆದು ಬಳಸುತ್ತಿರುವುದನ್ನು ಸಕ್ರಮಗೊಳಿಸುವ ಕೆಲಸವನ್ನು ಸರ್ಕಾರ ಮಾಡಬೇಕಾಗಿರುವುದು, ಕುರಿತೆಲ್ಲ ನುಡಿದರು. ಸಭಾಧ್ಯಕ್ಷರೂ ಈ ಬಗ್ಗೆ ಶ್ರೀ ಖರ್ಗೆಯವರನ್ನು ಯೋಚಿಸಲು ತಿಳಿಸಿದರು.

ಶ್ರೀ **ಎಸ್.ಪಿ.ಮುದ್ದಹನುಮೇಗೌಡರು** ಚರ್ಚೆಯಲ್ಲಿ ಪಾಲ್ಗೊಂಡು, ರೈತರು ಬಹಳ ಆತಂಕದಲ್ಲಿದ್ದಾರೆ. 43 ತಾಲೂಕುಗಳ ರೈತರಿಗೆ 6ನೇ ತಾರೀಖಿನ ಗಡುವು ನೀರಿನ ನಂತರ ವಿದ್ಯುತ್ ಸಂಪರ್ಕ ಕಿತ್ತುಹಾಕುವ ಭಯದ ವಾತಾವರಣದಲ್ಲಿದ್ದಾರೆ. ಮಾನವೀಯತೆಯ ದೃಷ್ಟಿಯಿಂದ ಗಡುವಿನ ವಿಸ್ತರಣೆ ಮಾಡಿ ಮಾಹಿತಿ ರೈತರಿಗೆ ಹೋಗದಿದ್ದರೆ ಎಲ್ಲರಿಗೂ ತೊಂದರೆಯಾಗುತ್ತದೆ ಕಪ್ಪುಪ್ರದೇಶ, ಬೂದು ಪ್ರದೇಶ ಎಂಬ ತೀರ್ಮಾನಕ್ಕೆ ವೈಜ್ಞಾನಿಕ ಕಾರಣ ಇಲ್ಲ. ಎಂದರು. ಶ್ರೀ ಕೆ.ಶ್ರೀನಿವಾಸಗೌಡರು ಈ ಮಾತಿಗೆ ಬೆಂಬಲ ಸೂಚಿಸಿ ರೈತರಿಗೆ ಈ ಮಾಹಿತಿ ತಲುಪಬೇಕೆಂದರು.

ಶ್ರೀ ಮಲ್ಲಿಕಾರ್ಜುನ ಖರ್ಗೆ ಅವರು ಗ್ರೇ ಅಥವಾ ಡಾರ್ಕ್ ಏರಿಯಾ ಎಂಬ ವಿಂಗಡಣೆ ಹಿಂದಿನಿಂದಲೂ ಇದೆ. ಇದಕ್ಕೆಲ್ಲ ಪರಿಹಾರ ಒಂದೆರಡು ದಿನಗಳಲ್ಲಿ ದೊರೆಯುವ ಕಾರಣ ಪುನರಪಿ ಪ್ರಸ್ತಾಪ ಪ್ರಯೋಜನವಿಲ್ಲ ಎಂದರು.

---

7. ವಿಧಾನ ಸಭಾ ನಡಾವಳಿಕೆಗಳು, ಸಂಪುಟ 2(5), ಭಾಗ 2 (20.3.2002) ಪು. 875–975

ಶ್ರೀ ಬಿ.ಎನ್.ಬಚ್ಚೇಗೌಡರು ತಮ್ಮ ಚರ್ಚೆಯನ್ನು ಮುಂದುವರಿಸಿ ; ರೈತರಿಗೆ ದೊಡ್ಡ ಹೆರಾಸ್‌ಮೆಂಟ್ ಆಗಿದೆ. ಅವರೆಲ್ಲಾ ಹೆದರಿ ಬಿಟ್ಟಿದ್ದಾರೆ. ಅಧಿಕಾರಿಗಳ ಕಾರ್ಯದ ರೀತಿಯು ಅವರಿಗೆ ಭಯೋತ್ಪಾದನೆ ತರಹ ಆಗಿದೆ. ಡಾರ್ಕ್ ಮತ್ತು ಗ್ರೇ ಏರಿಯಾದಲ್ಲಿ ಅಕ್ರಮ ಪಂಪ್‌ಸೆಟ್‌ಗಳನ್ನು ರೆಗ್ಯುಲರೈಸ್ ಮಾಡಲು ಇರುವ ನಿರ್ಬಂಧವನ್ನು ಸಂಪೂರ್ಣವಾಗಿ ತೆಗೆದುಹಾಕುವಂಥ ಕಾರ್ಯ ಇವತ್ತು ಆಗಬೇಕಾಗಿದೆ. ಇವತ್ತು ಬೋರ್‌ವೆಲ್ ಪಂಪ್‌ಸೆಟ್ ಸರ್ವೀಸ್ ಪಡೆಯಲು ಡಿಪಾಸಿಟ್ ರೂಪದಲ್ಲಿ 10 ಹೆಚ್.ಪಿ ಒದಗಿಸುವ ಮೊದಲೇ 900ರೂ ಕೊಡುವಂಥದ್ದಾಗಿದೆ. ಬೇರೆ ಬೇರೆ ರೀತಿ ಡಿಪಾಸಿಟ್ ಎಂದು 16 ಸಾವಿರ ರೂ ಕೊಡಬೇಕು; ಮೊದಲನೇ ಮೂರು ಪೋಲ್ ಎಂದು ಮೂರು ಕಂಬ ಹಾಕಿದರೆ ಏಳೂವರೆ ಸಾವಿರ ರೂ, ನಾಲ್ಕನೆಯ ಪೋಲ್ ಹಾಕಿದರೆ 10 ಸಾವಿರ ಕೊಡಬೇಕು. ಇದರಿಂದ ರೈತ ಸಂಪೂರ್ಣ ಮುಗಿದೇ ಹೋಗಿದ್ದಾನೆ. ವಿದ್ಯುಚ್ಛಕ್ತಿ ಪೂರೈಕೆ ಸರಿ ಇಲ್ಲದೆ ರೈತನ ಬಾಳು ಗೋಳಾಗಿದೆ. ಲೋಡ್‌ಷೆಡ್ಡಿಂಗ್ ಅನಿವಾರ್ಯ, ವಿದ್ಯುತ್ ಪೂರೈಕೆ ಇತ್ಯಾದಿ ಸರ್ಕಾರದ ಹೇಳಿಕೆಗಳು ರೈತರಿಗೆ ಗೊಂದಲವಾಗಿದೆ. ರೈತನು 500ರೂ, 1000ರೂ ಕಟ್ಟದಿದ್ದರೆ ಏಪ್ರಿಲ್ 6ರಿಂದ ಜೈಲಿಗೆ ಕಳುಹಿಸುತ್ತೇವೆಂದು ನಿರಂತರವಾಗಿ ದೂರದರ್ಶನದಲ್ಲಿ ಪ್ರಸಾರವಾಗುತ್ತಿದೆ. ಅನ್ನಕೊಡುವ ರೈತನನ್ನು ಜೈಲಿಗೆ ಕಳುಹಿಸುತ್ತೇವೆ ಎನ್ನುವಂಥಾದ್ದು ಸರ್ಕಾರದ್ದು. ರೈತರು ಬಳಸುವ ವಿದ್ಯುತ್ ಪ್ರಮಾಣವೆಷ್ಟು ? ಎಂಬುದು ಗೊತ್ತಿಲ್ಲ. ಕೈಗಾರಿಕೆಗಳು, ಕೈಗಾರಿಕಾ ಪ್ರದೇಶದಲ್ಲಿ ಸಾಕಷ್ಟು ವಿದ್ಯುತ್ ಸೋರುವಂಥಾದ್ದಾಗಿದೆ. ಫಿಲ್‌ಫರೇಜ್ ಆಗಿ ಅವರ ಮೇಲೆ ಎಷ್ಟು ಕೇಸ್ ಹಾಕಲಾಗಿದೆ! ಪವರ್ ಥೆಫ್ಟ್, ಟ್ರಾನ್ಸ್‌ಮಿಷನ್ ಲಾಸ್ ಎಷ್ಟಾಗುತ್ತಿದೆ ಗೊತ್ತಿಲ್ಲ. ಕೆಪಿಟಿಸಿಎಲ್ ಸಂಸ್ಥೆ ರೈತರಿಗೆ ಮಾರಕವಾಗಿ ರೈತವಿರೋಧಿಗಳೆನ್ನುವ ರೀತಿಯಲ್ಲಿ ನಡೆದುಕೊಳ್ಳುವುದು ತಪ್ಪಬೇಕು. ರೈತರ ಮೇಲೆ ಹೆರಾಸ್‌ಮೆಂಟ್ ಮಾಡಿರುವ ತೊಂದರೆಗಳನ್ನು ತಪ್ಪಿಸಬೇಕು, ಎಂದೆಲ್ಲ ಹೇಳಿದರು. ಹಾಗೂ ಹೈಡ್ರೊ ವಿದ್ಯುಚ್ಛಕ್ತಿ ಉತ್ಪಾದನೆ, ಥರ್ಮಲ್ ವಿದ್ಯುಚ್ಛಕ್ತಿ ಉತ್ಪಾದನೆ, ರೂರಲ್ ಪ್ರದೇಶದಲ್ಲಿ ಮಾತ್ರ ಲೋಡ್‌ಷೆಡ್ಡಿಂಗ್ ಅನ್ವಯ, ಅರಿಯರ್ಸ್ ಇಂಟರೆಸ್ಟ್‌ನ ಸಂಪೂರ್ಣ ವೇವ್‌ಆಫ್,ಒರಿಸ್ಸಾ, ಮಹಾರಾಷ್ಟ್ರದಿಂದ ವಿದ್ಯುತ್ ಒದಗಣೆ ಕಾರ್ಯದ ವಿವರ, ಪ್ರತಿನಿತ್ಯ 16ಲಕ್ಷ ಪಂಪ್‌ಸೆಟ್‌ಗಳನ್ನು ಬಳಸುವ ಶೇಕಡ 70 ಭಾಗದ ರೈತರಿಗೆ ಒದಗಬೇಕಾದ ವಿದ್ಯುತ್ ಮಾಹಿತಿ, ಕೆಪಿಟಿಸಿಎಲ್‌ಗೆ ಸದಸ್ಯರನ್ನಾಗಿ ಪವರ್ ಪ್ರೊಡ್ಯೂಸರ್ ಅವರನ್ನು ತೆಗೆದುಕೊಂಡಿರುವುದು ಹಾಗು ಅವರು ಬಾಕಿ ಉಳಿಸಿಕೊಂಡಿರುವ ಕೋಟಿಗಟ್ಟಲೆ ಹಣ, ವಿವಿಧ ಸಂಸ್ಥೆಗಳು ಕೆಪಿಟಿಸಿಎಲ್‌ಗೆ ಕೊಡಬೇಕಾದ ಹಣ, ಬರಗಾಲ ಇರುವ ಪ್ರದೇಶಗಳು, ಮೇವಿಗೆ

ಬರ, ಕೇಂದ್ರದಿಂದ ಹಣ ಬರುವ ಬಗ್ಗೆ ಸ್ವಪ್ರಯತ್ನ ಬಿಟ್ಟು, ಅನಗತ್ಯವಾಗಿ ಕಾಯುತ್ತಿರುವುದು ಇತ್ಯಾದಿ ವಿಷಯಗಳ ಕುರಿತೂ ಪ್ರಸ್ತಾಪಿಸಿದರು.

ಶ್ರೀ **ಬೆಲ್ಲದ ಚಂದ್ರಕಾಂತ ಗುರಪ್ಪ** ಅವರು; ಬರಗಾಲ ಎಲ್ಲ ಜಿಲ್ಲೆಗಳಲ್ಲು ಹರಡಿದೆ. ಅಂಥ ಬರಗಾಲ ಕಂಡ ರೈತನಿಗೆ, ಏನು ಮುಂಗಾರುಮಳೆ ಬೆಳೆ ಪಡೆಯುತ್ತಿದ್ದ ಆ ಮುಂಗಾರು ಬೆಳೆಗಳು ಕೈಗೆ ಸಿಗಲಿಲ್ಲ. ಹಿಂಗಾರು ಬೆಳೆಯೂ ಸಹ ಇಲ್ಲಿಯೂ ಆಗಲಿಲ್ಲ. ರೈತರಿಗೆ ಕೇವಲ ಬೆಳೆ ಬರಲಿಲ್ಲ ಇಂತಿಷ್ಟೆ ಅಲ್ಲಾ ಅವನ ಮೇಲೆ ಅವಲಂಬಿತರಾದಂಥ, ಕೆಲಸಮಾಡುವಂಥ ಕೂಲಿಕಾರರಿಗೆ ಬಹಳ ಕಠಿಣವಾದ ಪರಿಸ್ಥಿತಿ ಇದೆ. 'ಕೂಲಿಗಾಗಿ ಕಾಳು' ಕಾರ್ಯಕ್ರಮಕ್ಕೆ ಸಾವಿರಾರು ಜನರು ಬಂದು ನಿಂತಿದ್ದರು. ಅಂದರೆ ಎಷ್ಟೊಂದು ಬರಗಾಲವನ್ನು ಆ ರೈತರು ಅನುಭವಿಸುತ್ತಿದ್ದಾರೆಂದು ಕಾಣಿಸುತ್ತದೆ. ದನಕರುಗಳಿಗೂ ನೀರಿಲ್ಲ. ಮೇವು ಸಿಗುತ್ತಿಲ್ಲ. ಅವುಗಳನ್ನು ದೊಡ್ಡ ದೊಡ್ಡ ರೈತರು ಕಟುಕರಿಗೆ ಮಾರಾಟ ಮಾಡುವಂಥ ಪರಿಸ್ಥಿತಿ ಕಾಣುತ್ತಿದೆ. ದನಕರುಗಳಿಗೆ ಮೇವಿಲ್ಲದೆ, ನೀರಿಲ್ಲದೆ ರೈತ ಸಾಲಗಾರನಾಗಿ ಪರಿತಪಿಸುವುದು, ಕೈಗೆ ಬಂದ ರೇಟಿಗೆ ದನಗಳನ್ನು ಮಾರಾಟಮಾಡುವ ಪರಿಸ್ಥಿತಿ ಕಾಣುತ್ತಿದೆ. ರೈತರು ಪಡೆದಂಥ ಸಾಲವನ್ನು ವಾಪಸ್ಸು ಮುಟ್ಟಿಸಲು ಸಾಧ್ಯವಿಲ್ಲ. ಇವತ್ತು ಯಾವ ಬೆಳೆಯೂ (ಮುಂಗಾರಿ,ಹಿಂಗಾರಿ ಬೆಳೆ) ರೈತನ ಕೈಗೆ ಬರುತ್ತಿಲ್ಲ. ಸರ್ಕಾರ ಜಲಸಂವೃದ್ಧಿ ಕಾರ್ಯವನ್ನು ತೆಗೆದುಕೊಳ್ಳುವ ಸಂದರ್ಭದಲ್ಲಿ ಕೆರೆಗಳ ಹೂಳೆತ್ತುವ ಕಾರ್ಯವನ್ನು ಕೈಗೊಳ್ಳಬೇಕು. ಅದಕ್ಕೆ ಮೊದಲ ಆದ್ಯತೆ ಸಿಗಬೇಕು. ಎಂದೂ ಬತ್ತದ ಕೆರೆಗಳು ಇವತ್ತು ನೀರಿಲ್ಲದ ಹಾಗೆ ಆಗಿವೆ. ಫಾರ್ಮರ್ಸ್ ಪಾರ್ಟಿಸಿಪೇಷನ್ ಮೂಲಕ ಅಂದರೆ ಜೆಸಿಬಿ ಹಚ್ಚಿ ರೈತರನ್ನು ಸೇರಿಸಿಕೊಂಡು ಮಾಕ್ಸಿಮಮ್ ಕೆರೆಗಳ ಹೂಳು ತೆಗೆಯಲು ಸಾಧ್ಯವಿದೆ. ಇದರಿಂದ ಬರುವ ದೊಡ್ಡ ಲಾಭವೆಂದರೆ ನಾಳೆ ಬರುವ ಮಳೆಗಾಲದಿಂದ ಅದರ ಪ್ರಯೋಜನ ನಮ್ಮ ರೈತರಿಗೆ ಸಿಗುತ್ತದೆ. ಇದರಿಂದ ಬತ್ತಿರುವ ಬೋರ್‌ವೆಲ್‌ಗಳಿಂದಲೂ ನೀರು ಸಿಗುತ್ತದೆ, ಎಂದೆಲ್ಲ ವಿಷಯಗಳ ಪ್ರತಿಪಾದನೆ ಮಾಡಿದರು ; ಕೆರೆಗಳನ್ನು ಮುಚ್ಚಿಹಾಕಿರುವಲ್ಲಿ ಬಾವಿಗಳಲ್ಲಿ ನೀರು ಎಲ್ಲಿಂದ ಬರಬೇಕು ? ಎಂದೂ ಪ್ರಶ್ನಿಸಿದರು. ನಮ್ಮಲ್ಲಿರುವ ಶೇಕಡ 38ರಷ್ಟು ವಿದ್ಯುತ್ ಸೋರಿಕೆಯನ್ನು ತಡೆಗಟ್ಟಲು ಸರ್ಕಾರದ ವ್ಯವಸ್ಥೆ ಆಗಬೇಕು. ಆಗ ಸರಿಯಾದ ರೇಟಿನಲ್ಲಿ ರೈತರಿಗೆ ವಿದ್ಯುತ್ ಅನ್ನು ಕೊಡಲಿಕ್ಕೆ ಸಾಧ್ಯ ಆಗುತ್ತದೆ. ರೈತರಿಗೆ ಸರ್ಕಾರ ವಿದ್ಯುತ್ತನ್ನು ಕೊಡುವುದರಿಂದ, ಪ್ರತಿಯೊಂದು ಪಂಪ್‌ಸೆಟ್ ಇರುವಂಥ ರೈತನಿಗೆ ಹತ್ತುಮಂದಿಗೆ ಕೂಲಿಕೆಲಸ ಕೊಡಲಿಕ್ಕೆ ಆಗುತ್ತದೆ. ಆದರೆ

ಇವತ್ತು ರೈತನೇ ಶಹರಿಗೆ ಉದ್ಯೋಗಕ್ಕಾಗಿ ಬರುವಂಥ ಪರಿಸ್ಥಿತಿ ಬಂದಿದೆ. ಕಾರಣ ಅವನು ಬೆಳೆದ ಮಾಲಿಗೆ ಸರಿಯಾದ ಬೆಲೆ ಇಲ್ಲ. ವಿದ್ಯುಚ್ಛಕ್ತಿ ಅಭಾವದಿಂದ ಸರಿಯಾದ ಪ್ರಮಾಣದಲ್ಲಿ ಉತ್ಪನ್ನ ಬರುವಂಥ ಪರಿಸ್ಥಿತಿ ಇಲ್ಲ. ರೈತರು ಕೇಳುತ್ತಿರುವುದು ಕ್ವಾಲಿಟಿ ಪವರ್ ಮತ್ತು ನಿರ್ದಿಷ್ಟ ಅವಧಿಯಲ್ಲಿ ಪವರ್ ಸಪ್ಲೈ. ಅವನ ಮೇಲೆ ಅವಲಂಬಿಸಿರುವ ಕೂಲಿಕಾರರೆಲ್ಲರಿಗೂ ಉದ್ಯೋಗ ಸಿಗಬೇಕಾದರೆ ಮ್ಯಾಕ್ಸಿಮಮ್ ಪವರ್‌ಅನ್ನು ಸರ್ಕಾರ ಉತ್ಪಾದಿಸಬೇಕು. ಸರಿಯಾದ ರೀತಿಯಲ್ಲಿ ಸರಬರಾಜು ಮಾಡಬೇಕು. ಬರಗಾಲದ ಪರಿಹಾರಕ್ಕೆ ಜಲಾನಯನ ಯೋಜನೆ, ಕೆರೆಹೂಳು ತೆಗೆಯುವ ಯೋಜನೆ ಅಥವಾ ಜಲಸಂವರ್ಧನ ಯೋಜನೆ ಕಾರ್ಯಗಳನ್ನೂ ತೀವ್ರವಾಗಿ ತೆಗೆದುಕೊಳ್ಳಬೇಕು, ಎಂದೆಲ್ಲ ಹೇಳಿ ತಮ್ಮ ಮಾತುಗಳನ್ನು ಮುಗಿಸಿದರು.

ಶ್ರೀ **ಕರಡಿ ಸಂಗಣ್ಣ ಅಮರಪ್ಪ** ಅವರು ಚರ್ಚೆಯಲ್ಲಿ ಪಾಲ್ಗೊಂಡು ; ಸುಮಾರು ನಮ್ಮ ರಾಜ್ಯದಲ್ಲಿ 17 ರಿಂದ 18 ಲಕ್ಷ ಜನ ಐ.ಪಿ.ಸೆಟ್ ಹೊಂದಿದಂಥ ರೈತರಿದ್ದೇವೆ. ಅವರಿಗೆ ವಿದ್ಯುತ್ತನ್ನು 6 ತಾಸುಗಳ ಕಾಲ ತ್ರಿಫೇಸ್ ಕೊಡುವ ವ್ಯವಸ್ಥೆ ಆಗಿದೆ. ಅಂದರೆ ಇನ್ನೂ 12 ತಾಸುಗಳು ಸಿಂಗಲ್ ಮತ್ತು ಲೋಡ್ ಷೆಡ್ಡಿಂಗ್ 6 ಅವರ್ಸ್, ಎಂಬ ವ್ಯವಸ್ಥೆ ಮಾಡಿದೆ. ಆದರೆ ಈ 6 ತಾಸಿನ ಅವಧಿಯಲ್ಲಿ ಹಲವಾರು ಸಾರಿ ಇಂಟ್ರಪ್‌ಷನ್ ಆಗುತ್ತಿರುವುದರಿಂದ ಸ್ಟಾರ್ಟರುಗಳ ಹಾಗು ಪಂಪುಸೆಟ್ಟುಗಳು ಸುಟ್ಟುಹೋಗುತ್ತಿವೆ. ರೈತ ಪೂರ್ತಿ ಆರ್ಥಿಕ ದೃಷ್ಟಿಯಿಂದ ಪೂರಾ ಕೆಳಗಿದ್ದು, ಅದು ಬರಗಾಲ ಎದುರಿಸಿದ ಕಾರಣದಿಂದಾಗಿದೆ. ಉತ್ತರ ಕರ್ನಾಟಕದಲ್ಲಿ ಐ.ಪಿ.ಸೆಟ್ ಬಿಟ್ಟರೆ ಬೇರೆ ನಿರಾವರಿ ಮೂಲದಿಂದ ಬದುಕುವುದಕ್ಕೆ ಸಾಧ್ಯವಿಲ್ಲ. 1995ರಿಂದ 2001ರ ಕೊನೆಯವರಿವಿಗೆ ರೈತರಿಂದ ಪಂಪ್‌ಸೆಟ್‌ಗೆ ಡಿಪಾಸಿಟ್ ಮಾಡಿಸಿಕೊಂಡು, ಕಾಮಗಾರಿ ಆದೇಶಕೊಟ್ಟಿದ್ದರೂ ಆರ್.ಆರ್.ನಂಬರನ್ನು ಮಾಡಿಲ್ಲವೆಂದರೆ ರೈತರಿಗೆ ಬಹಳ ತೊಂದರೆ ಆಗುವಲ್ಲಿ, ಸರ್ಕಾರದ ತಪ್ಪು ನೀತಿ ಎಂದು ಭಾವಿಸಬೇಕಾಗುತ್ತದೆ. ಅವರಿಗೆ ಅಡಿಷನಲ್ ಡಿಪಾಸಿಟ್ ಮಾಡಿದರೆ ಮಾತ್ರ ಅಧಿಕೃತ ಪಂಪ್‌ಸೆಟ್ ಎಂದು ಘೋಷಿಸಲಾಗುತ್ತದೆ. ಈ ಅಡಿಷನಲ್ ಡಿಪಾಸಿಟ್ ಹಾಕಬಾರದೆಂದು, ಆರ್.ಆರ್.ನಂಬರ್ ಇಷ್ಯು ಮಾಡಿ ಎಂದು ನನ್ನ ಒತ್ತಾಯವಿದೆ. ಏಪ್ರಿಲ್ 6ರ ಕಟ್ ಆಫ್ ಡೇಟ್ ಅನ್ನೂ ಸಕ್ರಮಗೊಳಿಸುವಿಕೆಗೆ ಕೊಟ್ಟು, ಅದನ್ನು ಮಾಡಿಸಿಕೊಳ್ಳದಿದ್ದರೆ ಪಂಪ್‌ಸೆಟ್ ಕಿತ್ತುಹಾಕಿ ರೈತನನ್ನು ಜೈಲಿಗೆ ಕಳುಹಿಸುತ್ತೇವೆ ಎಂದು ಪ್ರಸಾರ ಮಾಡಲಾಗಿದೆ. ಈ ಬಗ್ಗೆ ನಾವು ಆತ್ಮವಿಮರ್ಶೆ

ಮಾಡಿಕೊಳ್ಳಬೇಕಾಗಿದೆ. ಈ ಜೈಲು ಶಿಕ್ಷೆಯಿಂದ 6 ತಿಂಗಳು ಹೊರಗೆ ಬರುವುದಕ್ಕೆ ಸಾಧ್ಯವಿಲ್ಲ ಎಂದರೆ ಬಹಳ ಕಠಿಣ ನಿಲುವು ಆಗುತ್ತದೆ. ಈ ವ್ಯವಸ್ಥೆ ಮುಂದುವರಿದರೆ ಇಡೀ ರಾಜ್ಯದಲ್ಲಿ ರೈತರು ದಂಗೆ ಏಳುತ್ತಾರೆ. ಕಾನೂನು ಮಾಡಿ, ಕಾರ್ಯಗತಗೊಳಿಸುವ ಸಂದರ್ಭದಲ್ಲಿ ಬಹಳ ತೊಂದರೆಯನ್ನು ಸರ್ಕಾರ ಅನುಭವಿಸಬೇಕಾಗುತ್ತದೆ. ಪೂರ್ಣ ಪ್ರಮಾಣದಲ್ಲಿ ವಿದ್ಯುತ್ತನ್ನು ರೈತರಿಗೆ ಕೊಡಲಿಕ್ಕೆ ಆಗದಿದ್ದ ಸಂದರ್ಭದಲ್ಲಿ ಸರ್ಕಾರ ರಿಯಾಯಿತಿಯನ್ನು ಕೊಡಬೇಕಾಗುತ್ತದೆ.ಇನ್ನು ಬರಗಾಲದಲ್ಲಿ ಗೋಶಾಲೆಯನ್ನು ಆರಂಭಿಸಿದರೂ ಅದೇ ಮುಚ್ಚಿಹೋಯಿತು. ಜಾನುವಾರುಗಳನ್ನು ಬದುಕಿಸುವಂಥ ಕೆಲಸವನ್ನು ಸರ್ಕಾರ ಮಾಡಿದೆಯೆ ? ನೀರಿನ ಸೋರ್ಸ್ ಇರುವೆಡೆ ಮೇವು ಬೆಳೆಯಲು ಸಾಧ್ಯ. ಮೇವಿಲ್ಲದ ಕಾರಣ ರೈತರು ಜಾನುವಾರುಗಳನ್ನು ಮಾರುಕಟ್ಟೆಯಲ್ಲಿ ಮಾರುತ್ತಿದ್ದಾರೆ. ರೈತನಿಗೆ ಜಾನುವಾರುಗಳು ಎಷ್ಟು ಅವಶ್ಯಕತೆ ಎಂಬುದನ್ನು ಗಮನಿಸಿ ಅವುಗಳ ರಕ್ಷಣೆ ಮಾಡಬೇಕಾಗುತ್ತದೆ. ಆ ಬಗ್ಗೆ ಸರ್ಕಾರದ ಕಾರ್ಯಕ್ರಮವೇನಿದೆ ? ಇಂದು ಬರ ಬಂದಿರುವಲ್ಲಿ ಕೇಂದ್ರದೊಡನೆ ವ್ಯವಹರಿಸಿ ಅಕ್ಕಿ,ಗೋಧಿ ತರಿಸಿಕೊಳ್ಳಬೇಕಾಗಿತ್ತು. ರೈತರಿಗೆ ವಿದ್ಯುತ್ ಸಕ್ರಮ ಕೊಡುವಲ್ಲಿ ಹೆರಾಸ್‌ಮೆಂಟ್ ಇರಬಾರದಂತೆ ಸರ್ಕಾರ ಯೋಚಿಸಬೇಕಾಗಿತ್ತು ಎಂದೆಲ್ಲ ವಿಷಯ ಮಂಡನೆ ಮಾಡಿದರು.

ಶ್ರೀ **ಡಿ.ವಿ.ಸದಾನಂದ ಗೌಡರು** ಮಾತನಾಡಿ, ದಕ್ಷಿಣ ಕನ್ನಡ ಜಿಲ್ಲೆಯಲ್ಲಿ, ಸುಮಾರು ಒಂದು ಲಕ್ಷ ರೈತರ ಪಂಪುಸೆಟ್ಟುಗಳಿವೆ. ಆ ಭಾಗದ ಯಾವುದೇ ತಾಲೂಕುಗಳು ಕಂದು ಅಥವಾ ಬೂದು ಪ್ರದೇಶ ಇರಬಹುದು. ಅಲ್ಲಿ ಬೇರೆ ಯಾವುದೇ ಯೋಜನೆಯಲ್ಲಿ ನೀರು ತೆಗೆಯುವುದಕ್ಕೆ ಆಗುವುದಿಲ್ಲ, ವಾಟರ್‌ಲೆವೆಲ್ ಸಿಗುವುದಿಲ್ಲ ಎಂಬ ದೃಷ್ಟಿಯಿಂದ ಯಾವುದೇ ಬೋರ್‌ವೆಲ್‌ಗಳನ್ನು ತೋಡಬಾರದು, ಕರೆಂಟ್ ಕೊಡಬಾರದು, ಎಂದರೆ ಆ ಮನುಷ್ಯ ಎಲ್ಲಿಗೆ ಹೋಗಬೇಕು ? ಪರ್ಯಾಯ ವ್ಯವಸ್ಥೆ ಆಗಬೇಕು. ಬೋರ್‌ವೆಲ್ ತೋಡಿ, ಅಕ್ರಮ ಕನೆಕ್ಷನ್ ಮಾಡಿರುವವನಿಗೆ ಕನೆಕ್ಷನ್ ಕೊಡುವುದಿಲ್ಲ, ಡಿಸ್‌ಕನೆಕ್ಟ್ ತಕ್ಷಣ ಮಾಡಬೇಕು ಎಂದು ಏಪ್ರಿಲ್ 6ನೇ ತಾರೀಖನ್ನು ಫಿಕ್ಸ್ ಮಾಡಿದರೆ ಆ ರೈತನ ಪರಿಸ್ಥಿತಿ ಏನು ? ಅವನು ಮಾಡಿರುವ ಕೃಷಿ ಭೂಮಿಯ ಪರಿಸ್ಥಿತಿ ಏನು ? ಹಿಗಾಗಿ ಸಕ್ರಮೀಕರಣವನ್ನು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಮಾಡಬೇಕೆಂದು, ಆಗ್ರಹಿಸಿದರು.

ಶ್ರೀ **ಎನ್.ಚೆಲುವರಾಯ ಸ್ವಾಮಿ** ಅವರು ಚರ್ಚೆಯಲ್ಲಿ ಭಾಗವಹಿಸುತ್ತ ; ವಿದ್ಯುತ್ ಕನೆಕ್ಷನ್ ಅನ್ನು ಕಂದು ಅಥವಾ ಬೂದು ಪ್ರದೇಶ ಯಾವುದೇ ಕ್ಷೇತ್ರದಲ್ಲಿ

ಸಕ್ರಮ ಬಳಕೆಮಾಡಿಕೊಂಡಿರುವುದನ್ನು, ಸಕ್ರಮ ಮಾಡಲೇಬೇಕಾದ ಪರಿಸ್ಥಿತಿ ಇದೆ. ಜೊತೆಗೆ ಪೆನಾಲ್ಟಿಯನ್ನು ಸರ್ಕಾರ ಇವತ್ತು ಏನು ಫಿಕ್ಸ್ ಮಾಡಿದೆ, ಅದರಿಂದಾಗಿ, ರೈತರಿಗೆ ನೇರವಾಗಿ ಗುಂಡು ಹಾರಿಸುವುದಕ್ಕಿಂತ ಇನ್ನೊಂದು ತರಹ ಅವರು ಆತ್ಮಹತ್ಯೆ ಮಾಡಿಕೊಳ್ಳುವಂಥ ಸನ್ನಿವೇಶವನ್ನೂ ಸರ್ಕಾರ ತಂದುಕೊಟ್ಟಹಾಗೆ ಆಗುತ್ತದೆ. ಪೆನಾಲ್ಟಿ ಕಟ್ಟದಿದ್ದರೆ ಶಿಕ್ಷೆಗೆ ಗುರಿ ಎಂದಿರುವುದಲ್ಲಿ, ಇಂದಿನ ವ್ಯವಸ್ಥೆಯಲ್ಲಿ ಅವರಿಗೆ ಪೆನಾಲ್ಟಿ ಕಟ್ಟಲಿಕ್ಕೆ ಆಗುತ್ತದೆಯೇ ಎನ್ನುವುದನ್ನು ದಯಮಾಡಿ ಯೋಚಿಸಬೇಕು. ಇದು ಇಡೀ ರಾಜ್ಯದ ರೈತರು ಇವೊತ್ತು ಎದುರಿಸುತ್ತಿರುವ ಆರ್ಥಿಕ ಸಮಸ್ಯೆ. ಪೆನಾಲ್ಟಿಯನ್ನು ಹಿಂದಿನಂತೆ ಎರಡು ಸಾವಿರದಿಂದ ಮೂರುಸಾವಿರದೊಳಗೆ ಏನಾದರೂ ಮಾಡಲಿಕ್ಕೆ ಸಾಧ್ಯವಾದರೆ ಮಾತ್ರ ರೈತರು ಸಕ್ರಮ ಮಾಡಿಕೊಳ್ಳಲಿಕ್ಕೆ ಸಾಧ್ಯ ಇದೆ. ಬದಲು 7ಸಾವಿರದಿಂದ 15ಸಾವಿರ ಪೆನಾಲ್ಟಿ ಎಂದರೆ ರೈತರು ಯಾವುದೇ ಸಕ್ರಮ ಮಾಡಿಕೊಳ್ಳುವುದಕ್ಕೆ ಅವಕಾಶವೂ ಇಲ್ಲ,ಅವರು ಮುಂದೆ ಬರುವುದೂ ಇಲ್ಲ. ರೈತರಿಗೆ ಕುಡಿಯಲು ನೀರು ಇಲ್ಲ, ಬೆಳೆ ಬೆಳೆದಿದ್ದಕ್ಕೆ ರೇಟ್ ಇಲ್ಲ. ಇಂಥ ನೂರಾರು ಸಮಸ್ಯೆಗಳ ಮಧ್ಯದಲ್ಲಿ ಕೆಇಬಿಯವರು ಗ್ರಾಮಾಂತರ ಪ್ರದೇಶದಲ್ಲಿ ರೈತರಿಗೆ ಮಾನಸಿಕವಾದಂಥ ಹಿಂಸೆಯನ್ನು ಕೊಡುವಂಥ ಕೆಲಸ ಆಗಬಾರದು. ಸರ್ಕಾರ ತಕ್ಷಣವೆ ಪೆನಾಲ್ಟಿ ಕುರಿತ ಆದೇಶವನ್ನು ಬದಲಾವಣೆ ಮಾಡಬೇಕು. ಮಂಡ್ಯ, ನಾಗಮಮಂಗಲ, ಕೆ.ಆರ್.ಪೇಟೆ, ಪಾಂಡವಪುರ ಭಾಗದಲ್ಲಿ ಕೆ.ಆರ್.ಎಸ್ ಇದೆ ಎಂದು ಹೇಳಿ ಕೃಷಿ ಭೂಮಿಯನ್ನು ನಂಬಿಕೊಂಡಿರತಕ್ಕಂಥವರು ಬರಗಾಲಕ್ಕಿಂತ ಹೆಚ್ಚು ಪರಿಸ್ಥಿತಿಯನ್ನು ಅನುಭವಿಸುತ್ತಿದ್ದಾರೆ. ಅಧಿಕಾರಿಗಳಿಗೆ ನೇರವಾಗಿ ಹಣ ಬಿಡುಗಡೆ ಅಧಿಕಾರ ನೀಡುವುದು, ಅಕ್ರಮವಾಗಿರುವುದನ್ನು ಸಕ್ರಮ ಮಾಡುವಿಕೆ, ಪೆನಾಲ್ಟಿಯನ್ನು ಕಡಿಮೆ ಮಾಡುವುದು, ಎರಡು ತಿಂಗಳು ಎಕ್ಸ್‌ಟೆಂಡ್ ಮಾಡುವುದು ಆಗಬೇಕು. ಇಲ್ಲದಿದ್ದರೆ ರೈತರು ಆತ್ಮಹತ್ಯೆ ಮಾಡಿಕೊಳ್ಳುವ ಕಾರಣದ ನೇರ ಜವಾಬ್ದಾರಿಯನ್ನು ಸರ್ಕಾರ ಹೊರಬೇಕಾಗುತ್ತದೆ, ಎಂದರು.

ಶ್ರೀ **ಕೆ.ಶ್ರೀನಿವಾಸಗೌಡ** ಅವರು ; ರೈತ ಒಂದು ಲಕ್ಷರೂ. ಖರ್ಚು ಮಾಡಿ ಬೋರ್‌ವೆಲ್ ತೋಡಿಸಿ ಪಂಪ್‌ಸೆಟ್ ಹಾಕಿಸಿಕೊಂಡು ಜಮೀನಿಗೆ ನೀರು ಹಾಯಿಸಿಕೊಂಡು ಜೀವನ ಮಾಡುತ್ತಿರುವ ಸಂದರ್ಭದಲ್ಲಿ ಅವರ ಮೇಲೆ ಸರ್ಕಾರ ಕೊಡಲಿಪೆಟ್ಟು ಹಾಕಲು ಹೊರಟಿದೆ. ಶೇಕಡ 69–70ರಷ್ಟು ರೈತರು ಕೃಷಿ ಅವಲಂಬಿಸಿ, ಉಳಿದ ಶೇಕಡ 35ರಷ್ಟು ಜನರಿಗೆ ಆಹಾರ ಕಲ್ಪಿಸಿ ಕೊಡುವವರಾಗಿದ್ದಾರೆ. ಅವರ ಪಂಪ್‌ಸೆಟ್‌ಗಳ ಸಕ್ರಮೀಕರಣಕ್ಕೆ ಏಪ್ರಿಲ್ 6ನೇ ತಾರೀಖಿನ ಗಡುವಿಟ್ಟು,

ತಪ್ಪಿದರೆ(ಅಕ್ರಮವಾಗಿದ್ದಲ್ಲಿ) ಜೈಲಿಗೆ ಎಂದು ಕೆಪಿಟಿಸಿಎಲ್‌ನವರು ಕೇಳಿರುವಲ್ಲಿ ಮಾನ್ಯ ಗೃಹಮಂತ್ರಿಗಳಾದ ಶ್ರೀ ಮಲ್ಲಿಕಾರ್ಜುನ ಖರ್ಗೆಯವರು ಇನ್ನೆರಡು ದಿನಗಳಲ್ಲಿ ಸಂದೇಶ ನೀಡಿ ಅದನ್ನೆಲ್ಲ ತಪ್ಪಿಸಬೇಕು. ರೈತರೂ ಎಂದು ತಮಗೆ ಪುಕ್ಕಟೆಯಾಗಿ ವಿದ್ಯುತ್ತನ್ನು ವ್ಯವಸಾಯಕ್ಕೆ ಕೊಡಿ ಎಂದು ಕೇಳಿಲ್ಲ. ರಾಜಕಾರಣಿಗಳು ರಾಜಕೀಯ ಪಕ್ಷಗಳು ಈ ದಿಸೆಯಲ್ಲಿ ರೈತರನ್ನು ಬಲಿಪಶುಗಳನ್ನಾಗಿ ಮಾಡಿವೆ ಎಂದರು. ಇದಕ್ಕೆ ಶ್ರೀ ಮಲ್ಲಿಕಾರ್ಜುನ ಖರ್ಗೆ ಅವರು ಉತ್ತರ ನೀಡುತ್ತ, ಹಿಂದೆ ಸುಮಾರು 3.5 ಲಕ್ಷದಷ್ಟು ಪಂಪ್‌ಸೆಟ್‌ಗಳಿದ್ದು ಕನ್ಸಂಪ್ಷನ್ ಏಳು ಪರ್ಸೆಂಟ್‌ನಷ್ಟು ಇತ್ತು. ಇವೊತ್ತು 15 ಲಕ್ಷದಷ್ಟು ಪಂಪ್‌ಸೆಟ್‌ಗಳಿರುವುದರಿಂದ ಸುಮಾರು ಅಂದಾಜು 39ರಿಂದ 40ರಷ್ಟು ಕನ್‌ಸಂಕ್ಷನ್ ಇದೆ. ಅನಧಿಕೃತ ಸಂಪರ್ಕಗಳನ್ನು ಲೆಕ್ಕ ಹಾಕಬೇಕಾಗಿದೆ. ಜೊತೆಗೆ ಹೈಡ್ರೊ ಎಲೆಕ್ಟ್ರಿಸಿಟಿ ಜನರೇಶನ್ ಸಹ ಜಾಸ್ತಿ ಇದ್ದು ನಾವು ಥರ್ಮಲ್ ಪವರ್ ಪಡೆದುಕೊಳ್ಳುತ್ತಿದ್ದು, ಇದರೊಂದಿಗೆ ಛತ್ತೀಸ್‌ಗಡ್ ಮತ್ತು ಒರಿಸ್ಸಾದಿಂದ ವಿದ್ಯುತ್ ಬರಬೇಕಿದೆ. ಆದುದರಿಂದ ರಾಜಕಾರಣಿಗಳನ್ನು ದೂರಲು ಹೋಗಬೇಡಿ. ನೀವು ನಾವೆಲ್ಲರೂ ಸಹ ರಾಜಕಾರಣಿಗಳು, ಎಂದರು. ಶ್ರೀ.ಕೆ.ಶ್ರೀನಿವಾಸಗೌಡರು ಮಾತನ್ನು ಮುಂದುವರಿಸುತ್ತ; ಶ್ರೀ ಖರ್ಗೆಯವರು ಹೇಳಿರುವಂತೆ ರೈತರು ಕೇಳದಿದ್ದರೂ ಕೊಟ್ಟ ಕರೆಂಟಿನ ಲಾಭವನ್ನು ಕೈಗಾರಿಕೆಗಳವರು ಪಡೆದುಕೊಂಡರು. ರೈತನಿಗೆ ಶೇ 38ರಷ್ಟು ಕರೆಂಟ್ ಪೂರೈಕೆಮಾಡುತ್ತಿದ್ದೇವೆಂದು ಕೆಪಿಟಿಸಿಎಲ್‌ನವರು ಕರಾರುವಾಕ್ಕಾಗಿ ಹೇಳುತ್ತಾರೆಯೆ? ಕೈಗಾರಿಕೆಗಳವರು ಮತ್ತು ರೈತರು, ಹೆಚ್ಟಿ ಮತ್ತು ಎಲ್‌ಡಿಯನ್ನು ಎಷ್ಟು ಕನ್ಸ್ಯೂಮ್ ಮಾಡುತ್ತಾರೆಂದು ಲೆಕ್ಕ ಹಾಕಬೇಕು. ರೈತರಿಂದ ಮಾತ್ರ ಶೇ 38ರಷ್ಟು ವಿದ್ಯುತ್ ಬಳಕೆ ಎಂಬುದಕ್ಕೆ ಆಧಾರ ಮತ್ತು ಮಾನದಂಡವೇನು? ರೈತರಲ್ಲಿ ಒಗ್ಗಟ್ಟಿಲ್ಲದ ಕಾರಣ ಎಲ್ಲಾ ರೀತಿಯ ಪ್ರಹಾರಗಳು ಅವರ ಮೇಲೆಯೇ ಬೀಳುತ್ತಿದೆ. ಮೀಟರ್ ಮೂಲಕ ಕರೆಂಟ್ ಕೊಡುತ್ತಿದ್ದರೆ ಇವೊತ್ತು ಕರೆಂಟ್ ಸಮಸ್ಯೆಯೆ ಬರುತ್ತಿರಲಿಲ್ಲ. 55 ತಾಲೂಕುಗಳಲ್ಲಿ ಬಯಲು ಸೀಮೆಯಲ್ಲಿ ಕಡಿಮೆ ಸಂಖ್ಯೆಯಲ್ಲಿ ಬಾವಿಗಳಿದ್ದವು. ಈ ಹಿನ್ನೆಲೆಯಲ್ಲಿ ವಿದ್ಯುತ್ ಅನ್ನು ಉಚಿತವಾಗಿ ಕೊಡುತ್ತೇವೆ ಎಂದಾಗ ಮತ್ತು ಸಮಯಕ್ಕೆ ಬೋರ್‌ವೆಲ್ ತೋಡುವಂಥ ಕೆಲಸವನ್ನು ರೈತಾಪಿ ವರ್ಗವು ಮಾಡಿತು. ಸರ್ಕಾರವೂ ಅದಕ್ಕೆ ತನ್ನ ಒಪ್ಪಿಗೆ ನೀಡಿತು. ನಂತರ ರೈತರು ಕೊಳವೆ ಬಾವಿಗೆ ಪಂಪ್‌ಸೆಟ್ ಅಳವಡಿಸಿಕೊಂಡು ವಿದ್ಯುತ್ ಸಂಪರ್ಕ ಕಲ್ಪಿಸಿಕೊಂಡು ಜಮೀನಿಗೆ ನೀರುಣಿಸಿ ಬದುಕುತ್ತಿದ್ದಾಗ, ಅನಧಿಕೃತವೆಂದು ಸಂಪರ್ಕ ಕಡಿತ ಮಾಡಿ ಜೈಲಿಗೆ ದೂಡುತ್ತೇವೆಂದರೆ ಯಾವ ನ್ಯಾಯ ? 24 ಗಂಟೆಗಳ ಕಾಲ ವಿದ್ಯುತ್ ಕಲ್ಪಿಸಿಕೊಟ್ಟಲ್ಲಿ, ಸರ್ಕಾರ ನಿಗದಿಗೊಳಿಸಿದ ದರದಂತೆ ಕಟ್ಟಲು ಅವರು ತಯಾರಿದ್ದಾರೆ.

ಬೋರ್‌ವೆಲ್‌ಗಳು ಬತ್ತಿ ಹೋಗುತ್ತಿದ್ದು 18ಅಡಿಗಳಷ್ಟಿದ್ದ ಅಂತರ್ಜಲಸೆಲೆ ಇಂದು ಸುಮಾರು 250–800 ಅಡಿಗಳಷ್ಟು ಕೆಳಗಡೆ ಹೋಗಿದೆ. ರೈತ ಶೇಕಡ ಹತ್ತರಷ್ಟು ನೀರನ್ನು ಮಾತ್ರ ಕಾಲುವೆ ಮೂಲಕ ತೋಟಕ್ಕೆ ಹಾಯಿಸಿಕೊಳ್ಳಲು ಸಾಧ್ಯವಾಗಿದೆ. ಅಂತರ್ಜಾಲ ಮಟ್ಟವನ್ನು ಎತ್ತರಿಸುವ ಕುರಿತಂತೆ ಯಾವುದೇ ಸರ್ಕಾರಗಳೂ ಕೂಡ ಗಮನ ಹರಿಸಿಲ್ಲ.ಇದಕ್ಕೆಲ್ಲ ರೈತನೇ ಏಕೆ ಹೊಣೆಗಾರನಾಗಬೇಕು? ಹೆಚ್‌ಟಿ ಮತ್ತು ಎಲ್‌ಟಿಯಲ್ಲಿ ಕರೆಂಟ್ ಕಳ್ಳತನವಾಗುತ್ತಿದ್ದು ಸೋರಿಕೆ ವಿದ್ಯುತ್ತನ್ನು ಕಂಟ್ರೋಲ್ ಮಾಡಬೇಕು. ಆ ಮೂಲಕ ಸಿಸ್ಟಂ ಅನ್ನು ಇಂಪ್ರೂವ್ ಮಾಡಬೇಕು. ಜೊತೆಗೆ ಟ್ರಾಕ್ಟರ್,ಟೆಲಿಫೋನ್,ಕಾರ್,ಮೊಬೈಲ್ ಬಳಸುವ ರೈತರಿಗೆ ಬೇರೆ ರೀತಿಯಾದ ಚಾರ್ಜ್ ಎಂದರೆ, ಟ್ರಾಕ್ಟರ್ ಇಟ್ಟುಕೊಂಡರೂ ವಿದ್ಯುತ್ ಬೆಲೆ ಜಾಸ್ತಿ ಮಾಡುತ್ತೇವೆಂದರೆ, ಟಿ.ವಿ.ಇಟ್ಟುಕೊಂಡಿದ್ದರೆ ವಿದ್ಯುತ್ ಬೆಲೆ ಜಾಸ್ತಿ ಮಾಡುತ್ತೇವೆಂದರೆ ಯಾವ ನ್ಯಾಯ ? ರೈತರು ಯಾವಾಗಲೂ ಹೆಗಲ ಮೇಲೆ ಟವಲ್ ಹಾಕಿಕೊಂಡು ತಲೆಗೆ ಬಟ್ಟೆ ಕಟ್ಟಿಕೊಂಡೇ ಓಡಾಡಬೇಕು ಎಂಬ ಭಾವನೆ ಈ ದೇಶದಲ್ಲಿದೆ. ರೈತರು ಚೆನ್ನಾಗಿ ಬದುಕಬಾರದು ಎಂಬ ಭಾವನೆಯನ್ನು ಕೆಪಿಟಿಸಿಎಲ್ ಮೂಲಕ ತೋರಿಸುವುದನ್ನು ಕೈಬಿಡಬೇಕು. ರಾತ್ರಿಯ ಸಮಯದಲ್ಲಿ ರೈತ ಅವನ ಬೆಳೆಗೆ ನೀರನ್ನು ಕಟ್ಟಲು ಹೋದರೆ ಹಾವು ಕಚ್ಚಿಯೋ (ಬಿಜಾಪುರ ಜಿಲ್ಲೆಯ ರೈತ ಕಬ್ಬು ಕಡಿಯುತ್ತಿದ್ದಾಗ ಹಗಲಿನಲ್ಲಿಯೇ ಹಾವು ಕಚ್ಚಿಸತ್ತ.ಇನ್ನೂ ರಾತ್ರಿಯಲ್ಲಾದರೆ ಗತಿ!) ಇನ್ನ್ಯಾವುದೋ ಕಾರಣಕ್ಕೊ ಅವನು ಸತ್ತರೂ ಪರವಾಗಿಲ್ಲ. ರಾತ್ರಿ ಎಂಟುಗಂಟೆ ವಿದ್ಯುತ್ ಕೊಡುತ್ತೇವೆ ಎನ್ನುತ್ತೀರಿ. ಇದು ಅವೈಜ್ಞಾನಿಕವಾಗಿ ಅದರಲ್ಲೂ ರೈತರ ಮೇಲೆಯೇ ಪ್ರಹಾರ ಮಾಡತಕ್ಕದ್ದು ತಪ್ಪು ಎನ್ನತಕ್ಕ ಚಿಂತನೆ ಬರಬೇಕು.ಇಸ್ರೇಲ್ ದೇಶದಲ್ಲಿ ನೀರು ಕಾಯಿಸಲು ಪ್ರತಿಮನೆಯಲ್ಲಿ ಸೋಲಾರ್ ಹಾಕಿದ್ದಾರೆ. ಸಬ್ಸಿಡಿ ಕೊಡುತ್ತಾರೆ. ವಿದ್ಯುತ್ ಉಳಿಸಲು ನೀವೂ ಈ ದಿಕ್ಕಿನಲ್ಲಿ ಯೋಚನೆಮಾಡಿ. ಎಲ್ಲದಕ್ಕೂ ಬರಿ ರೈತರ ಮೇಲೆ ಕಣ್ಣು ಏಕೆ ? ಅಜ್ಜನ ಕಾಲದಲ್ಲಿ **ಊರುಗದ್ದೆ** ಎಂದು ಮಾಡುತ್ತಿದ್ದೆವು. ಇಂದು ವಿದ್ಯುತ್ ಅನ್ನು ನಂಬಿಕೊಂಡು ಭತ್ತ ಹಾಕಿರುವನನಗೇ ಅದರ ಸಹವಾಸ ಸಾಕು ಎನಿಸಿದೆ. ಭತ್ತ ಬೆಳೆಯಲು ಜನರೇಟರ್, ಡೀಸೆಲ್ ಇಂಜನ್‌ಗೆ ಖರ್ಚುಮಾಡಿ ಮೂರು ವರ್ಷಕ್ಕಾಗುವಷ್ಟು ಅಕ್ಕಿಯನ್ನು ಮಾತ್ರ ಆರು ಎಕರೆಯಲ್ಲಿ ತೆಗೆದಿದ್ದೇನೆ. ನನ್ನ ಪರಿಸ್ಥಿತಿಯೇ ಹೀಗಿರುವಲ್ಲಿ ಉಳಿದ ರೈತರ ಗತಿ ಏನು ? ಇಂಥ ಪರಿಸ್ಥಿತಿಯನ್ನೆಲ್ಲ ಯೋಚಿಸಿ, 6ನೇ ತಾರೀಖಿನ ಗಡುವು, ಡಾರ್ಕ್ ಅಂಡ್ ಗ್ರೇ ಏರಿಯಾ ಎಂಬ ಗುರುತು ಇವನ್ನೆಲ್ಲ ತೆಗೆದು, ಸಕ್ರಮೀಕರಣ, ಹಾಗು ಬರ ನೀಗಿಸುವ ಕ್ರಮಗಳನ್ನು ಸರ್ಕಾರ ಕೈಗೊಳ್ಳಬೇಕು, ಎಂದು ಹೇಳಿ ತಮ್ಮ ವಿಷಯ ಮಂಡನೆಯನ್ನು ಮುಗಿಸಿದರು.

ಶ್ರೀ **ಹೆಚ್.ಸಿ.ಬಸವರಾಜ್** ಅವರು ರಾಜ್ಯದ ಜ್ವಲಂತ ಸಮಸ್ಯೆ ಹಾಗು ಬರ ಪರಿಸ್ಥಿತಿಯನ್ನು ಕುರಿತು ಮಾತನಾಡುತ್ತ ; ಅತಿವೃಷ್ಟಿಯಿಂದ ಬೆಳೆ ಹಾನಿ ಕುರಿತು ಶಾಸನ ಸಭೆಗಳಲ್ಲಿ ನಡೆಯುವ ಭಾಷಣ, ಪರಿಹಾರಕ್ಕೆ ಭರವಸೆಯ ಸರ್ಕಾರದ ಭರವಸೆಯ ಮಾತು, ಖಾಯಂ ಪರಿಹಾರ ಕ್ರಮದ ಅವಶ್ಯಕತೆ, ರೈತರ ಶೋಚನೀಯ ಪರಿಸ್ಥಿತಿ, ಕುಡಿಯುವ ನೀರಿನ ಸಮಸ್ಯೆ, ಬೋರ್‌ವೆಲ್ ರಿಪೇರಿಗೆ ಸಾಕಾಗದ ಹಾಗು ಬದಲಿ ಬೋರ್‌ವೆಲ್‌ಗಳ ಸ್ಥಾಪನೆ ಹಾಗು ಒದಗಿರುವ ತೊಡಕುಗಳು ಕೆರೆಗಳ ಹೂಳೆತ್ತುವಿಕೆಯ ಬಗ್ಗೆ ಕಾರ್ಯಗತವಾಗದ ಸಚಿವರ ಭರವಸೆ.

ರೈತರ ಶೋಷಣೆಯ ಸಂಸ್ಥೆ ಕೆಪಿಟಿಸಿಎಲ್, ರೈತರಿಗೆ ಕೇವಲ 6ಗಂಟೆಗಳ ಕಾಲದ ವಿದ್ಯುಚ್ಛಕ್ತಿ ಸರಬರಾಜಿನಿಂದಾಗಿರುವ ಬೆಳೆ ನಷ್ಟ, ಪಿರಿಯಾಪಟ್ಟಣದಲ್ಲಿ ಕೆಪಿಟಿಸಿಎಲ್ ಕಛೇರಿ ಮುಂದೆ ಸಾವಿರಾರು ರೈತರ ಧರಣಿ, ಹಾಗು ಅಲ್ಲಿ ಇಲ್ಲದಿರುವ ಸಬ್‌ಸ್ಟೇಷನ್, ಕಾರ್ಯಾರಂಭ ಮಾಡದೆ ಮಂಜೂರಾದ ಟ್ರಾನ್ಸ್‌ಫಾರ್ಮರ್, ಪಿರಿಯಾಪಟ್ಟಣ ಲಿಫ್ಟ್ ಇರಿಗೇಷನ್ ಅಥವಾ ಕರಡಿಲಕ್ಕನ ಕೆರೆ ಸ್ಕೀಮ್‌ನಲ್ಲಿ ನೀರಾವರಿ ಆಗುವಂಥ 30–35 ಎಕರೆ ನೀರಾವರಿಗೆ 1985–90ರಲ್ಲಿ ಮೂರು ಕೋಟಿ ರೂವನ್ನು ಕೆಪಿಟಿಸಿಎಲ್‌ಗೆ ಮುಂಗಡ ಕಟ್ಟಿದ್ದರೂ, ಕೇಂದ್ರದ ಮಂಜೂರಾತಿಗೆ ಸೂಕ್ತ ಕ್ರಮ ಕೈಗೊಳ್ಳದೆ ಕರೆಂಟ್ ಒದಗಿಸಲು ವಿಳಂಬವಾಗಿರುವುದು, ಕಂಗಾಲಾಗಿರುವ ರೈತರು ಸಾಲದ ಮೇಲಿನ ಬಡ್ಡಿ ಕಟ್ಟಲಿಕ್ಕೆ ಆಗದಿರುವುದು, ಅದಕ್ಕಾಗಿ ಮಾಡಬೇಕಾದ ಬಡ್ಡಿ ಮನ್ನಾ, ಅಲ್ಪಾವಧಿಯ ಸಾಲವನ್ನು ದೀರ್ಘಾವಧಿ ಸಾಲವಾಗಿಸಿ ಹೊಸ ಸಾಲಕೊಟ್ಟು ವ್ಯವಸಾಯಕ್ಕೆ ಉತ್ತೇಜನ ಕೊಡುವಿಕೆ ಇತ್ಯಾದಿ ಕುರಿತೆಲ್ಲ ವಿಷಯಗಳನ್ನು ವಿವೇಚಿಸಿದರು.

ಶ್ರೀ **ಹೆಚ್.ಎಸ್.ಮಹದೇವ್ ಪ್ರಸಾದ್** ಅವರು ನೀರು ಮತ್ತು ವಿದ್ಯುತ್ ಬಗ್ಗೆ ನಡೆದ ಚರ್ಚೆಗಳನ್ನು ಪ್ರಸ್ತಾಪವನ್ನೂ ಮಾಡಿ ಚಾಮರಾಜನಗರ ಜಿಲ್ಲೆಯಲ್ಲಿ ನೀರಾವರಿ ಸೌಲಭ್ಯದ ಕೊರತೆ, ಬರಗಾಲ ಪ್ರದೇಶವಾಗಿರುವ ಗುಂಡ್ಲುಪೇಟೆ, ಪೂರ್ಣಹಣ ಬಿಡುಗಡೆಯಾಗದೆ ಕೊಳವೆ ಬಾವಿ ರಿಪೇರಿ ಸಾಧ್ಯವಾಗದಿರುವುದು, ಬೋರ್‌ವೆಲ್ ಮೇಂಟೆನೆನ್ಸ್‌ಗೆ ನಿಗದಿಯಾದ ಹಣವನ್ನು, ತಾಲೂಕು ಪಂಚಾಯತ್‌ಗೆ ಬಿಡುಗಡೆ ಆಗಬೇಕಾದ ವ್ಯವಸ್ಥೆ, ಬೋರ್‌ವೆಲ್ ಡೀಪನಿಂಗ್ ಸಮಸ್ಯೆಗಳು, ಅದಕ್ಕಾಗಿ ಹೈಡ್ರೋಫ್ರಾಕ್ಚರಿಂಗ್ ಮೆಷಿನ್ ಬಳಕೆ, ಬೆಳೆ ವಿಮೆಯ ಯೋಜನೆಯನ್ನು ಕ್ರಾಪ್ ಫೈಲ್ಯೂರ್ ಆದಾಗ ಜಾರಿಗೊಳಿಸಿದ್ದಕ್ಕೆ, ರೈತರು ಪ್ರೀಮಿಯಂ ಕಟ್ಟಿದ್ದುದು ಸರ್ವೆಯಿಂದ ತಿಳಿದು ಬಂದದ್ದು, ಕೇಂದ್ರದಿಂದ ಬರಬೇಕಾದ ಪರಿಹಾರದ ಹಣ, ಬೆಳೆವಿಮೆ

ಯೋಜನೆಗೆ ಪ್ರೀಮಿಯಂ ಹಣ ಕಟ್ಟಿದ ರೈತನಿಗೆ ಇನ್ಶೂರೆನ್ಸ್ ಹಣದ ನಿರೀಕ್ಷೆ ಮಾಡಿದರೂ, ಹಣ ತಲುಪಿಲ್ಲದಿರುವುದು, ಜಲಸಂವರ್ಧನೆ, ಕೆರೆ ಹೂಳೆತ್ತಿ ಅಂತರ್ಜಲ ಸೃಷ್ಟಿ ಮಾಡುವಿಕೆ, ಶಾಸಕರಿಗೆ ಕೊಟ್ಟಿರುವ 25ಲಕ್ಷ ಕ್ಷೇತ್ರಾಭಿವೃದ್ಧಿ ಹಣದ ಅರೆಪಾಲು ಒದಗಣೆ, ಸಿಸ್ಟಂ ಇಂಪ್ರೂವ್ ಮಾಡದೆ ವಿದ್ಯುಚ್ಛಕ್ತಿ ನೀಡುವ ಭರವಸೆ ಹುಸಿಯಾಗುವುದು, ಸಕ್ರಮೀಕರಣವು ಬಹುತೇಕ ಹಣವಂತ ರೈತರು, ವಿವಿಧ ಉದ್ಯೋಗಸ್ಥರು, ಬಿಸಿನೆಸ್ ಫೀಲ್ಡ್‌ನವರು ವ್ಯವಸಾಯದ ಹೆಸರಿನಲ್ಲಿ ಜಮೀನುಮಾಡಿರುವವರಿಗೆ ಮಾತ್ರ ಒದಗಿಸಿರುವ ಸೌಲಭ್ಯವಾಗಿರುವುದೇ ವಿನಹ ನಿಜವಾದ ರೈತನಿಗೆ ಆಗದ ಪ್ರಯೋಜನ, ತ್ವರಿತ ವಿದ್ಯುತ್ ಯೋಜನಾಕ್ರಮ, ರೈತರ ಮೇಲೆ ಜಾರಿಗೊಳಿಸಬೇಕೆನ್ನುವ ಕಠಿಣ ಕಾನೂನಿನ ಅಶಕ್ತತೆ, ಸಿಂಗಲ್ ಫೇಸ್‌ನಲ್ಲಿ ಹೆಚ್ಚಿಗೆ ವೋಲ್ಟೇಜ್ ಬರುವ ವಿಧಾನ ಅಂದರೆ ಕಂಡೆನ್ಸರ್ ಬಳಸಿ ವೋಲ್ಟೇಜ್ ತೆಗೆದುಕೊಳ್ಳುವ ವಿಧಾನವನ್ನು ಕಂಡುಕೊಂಡಿರುವ ರೈತರು, 8ಗಂಟೆ ವಿದ್ಯುತ್ ಒದಗಣೆ ಬಗ್ಗೆ ರೈತರು ಇಟ್ಟುಕೊಂಡಿರುವ ಭರವಸೆಯನ್ನು ಹುಸಿ ಮಾಡಿರುವ ಸಬ್‌ಸ್ಟೇಷನ್ನಿನ ಸೆಕ್ಷನ್ ಆಫೀಸರು ಈ ಹಿನ್ನೆಲೆಗಳಲ್ಲಿ ರೈತರಿಗೆ ಒದಗಬೇಕಿರುವ ನೆರವು ಇತ್ಯಾದಿ ಕುರಿತು ಮಾತನಾಡಿದರು.

ಶ್ರೀ **ಕೆ.ಬಿ.ಮಲ್ಲಿಕಾರ್ಜುನ್** ಅವರು ಮಾತನಾಡುತ್ತ, ನೀರಿನ ಬರ, ವಿದ್ಯುಚ್ಛಕ್ತಿ ಬರ, ಕೂಲಿಯ ಬರ, ಮೇವಿನ ಬರ ಇರುವಲ್ಲಿ ಅವನ್ನು ಎದುರಿಸುವ ಬಗೆ, ಬತ್ತಿದ ಕೊಳವೆ ಬಾವಿ, ಒಣಗಿರುವ ಡ್ರೈವೆಲ್, ಕನಿಷ್ಠ ಶಿವರಾತ್ರಿಯಂದು ಸ್ನಾನ ಮಾಡಲಾದರೂ ನೀರು ತೆಗೆದು ಕೊಳ್ಳಲು ಕರೆಂಟ್ ಕೊಡಿ ಎಂದು ಕೇಳಿದಂಥ ರೈತರನ್ನು ಹೊಡೆದು ಬಳ್ಳಾರಿ ಜೈಲಿಗೆ ಕಳುಹಿಸಿದ ಪ್ರಸಂಗ, ಬೆಂಗಳೂರು ಅಧಿಕಾರಿಗಳು 8–10 ಗಂಟೆಗಳ ಕಾಲ ಕರೆಂಟು ಕೊಡೆತ್ತೇವೆ ಎಂದು ನೀಡಿದ ಹೇಳಿಕೆ, ಜನರಿಗೆ ತಪ್ಪಾಗಿ ನೀಡಿದ ಮಾಹಿತಿ, ಈ ಕುರಿತೆಲ್ಲ ಹೇಳಿದರು.

ಶ್ರೀ **ಎಸ್.ಎಸ್.ಪಾಟೀಲ್** ಅವರು, ಜೈಲಿಗೆ ಹಾಕಿರುವ ರೈತರ ಬಗ್ಗೆ ದನಿ ಎತ್ತಿ, ಈ 38 ಜನ ರೈತರನ್ನು ಒಳಗೆ ಹಾಕಿರುವ ವಿಷಯದಲ್ಲಿ ನಾವು ಸುಮ್ಮನಿದ್ದರೆ ಮುಂದೆ ರೈತರನ್ನೆಲ್ಲಾ ಒಳಗೆ ಹಾಕುತ್ತಾರೆ. ಈ ಬಗ್ಗೆ ಚರ್ಚೆ ಬೇಕು ಎಂದರು. ಶ್ರೀ ಕಾಗೋಡು ತಿಮ್ಮಪ್ಪ ಅವರು ಪ್ರತಿಕ್ರಿಯಿಸುತ್ತ, ಅಧಿಕಾರಿಯ ತಪ್ಪು, ಕರೆಂಟ್ ನಿಲುಗಡೆ ಇಷ್ಟಕ್ಕೆ ಹೋಗಿ ಸುಟ್ಟುಬಿಡಿ, ಹೊಡೆದುಬಿಡಿ, ಕೊಂದುಬಿಡಿ ಎಂದು ಜನರಿಗೆ ಹೇಳಿಬಿಡೋಣವೇ? ಅಧಿಕಾರಿಗಳ ತಪ್ಪಿಗೆ ಶಿಕ್ಷಿಸುವ ವಿಧಾನಗಳಾವುವು, ಎಂಬುದು ನಾವೆಲ್ಲ ಒಪ್ಪಿರುವಂಥ ವ್ಯವಸ್ಥೆಯಲ್ಲಿದೆ ಎಂದಾಗ

**ಶ್ರೀ ಎಸ್.ಎಸ್.ಪಾಟೀಲರು,** ಇಂಥ ವ್ಯವಸ್ಥೆಯಲ್ಲೂ ನಿರಪರಾಧಿಗಳನ್ನು ಒಳಗೆ ಹಾಕಿದರೆ ಹೇಗೆ ? ಎಂದು ಪ್ರಶ್ನಿಸಿದರು. ಆಗ ಶ್ರೀ ಕಾಗೋಡು ತಿಮ್ಮಪ್ಪನವರು ಹೌದು ಸಿಟ್ಟು ಬಂದ ಜನರನ್ನು ಸಮಾಧಾನ ಪಡಿಸುವ ಬಗ್ಗೆ ಸಂಯಮವನ್ನು ವ್ಯಕ್ತಪಡಿಸಬೇಕು ಎಂದರು. ನಂತರ ಮಾತುಗಳ ವಿಮಯವೂ ನಡೆಯಿತು.

ಶ್ರೀ **ಕೆ.ಬಿ.ಮಲ್ಲಿಕಾರ್ಜುನ್** ಅವರು ಮಾತನ್ನು ಮುಂದುವರಿಸಿ, ಅಂಜನಪುರದ ಘಟನೆಗಳು, ಶಿವರಾತ್ರಿಯ ದಿನ ನೀರಿನ ಬೇಡಿಕೆ ಸಂದರ್ಭದಲ್ಲಿ ನಡೆದ ಸಂಘರ್ಷ, ಆರಿಸಿ ಪಟ್ಟಿಮಾಡಿ ಮುಖಂಡರನ್ನು ಅರೆಸ್ಟ್ ಮಾಡಿದ್ದು, ಸ್ಟ್ರೈಕ್ ಮಾಡಿದ ಕಡೆ ಒಂದೆರಡು ದಿನದಲ್ಲಿ ಹೇಗೆ ಕೆಪಿಟಿಸಿಎಲ್ ಕರೆಂಟ್ ಕೊಡುವುದು, ಅದರಿಂದ ಇತರರಿಗೂ ಒದಗುವ ಪ್ರೇರಣೆ, ಬೋರ್‌ವೆಲ್ ತೆಗೆಯದೆ ಬರಪರಿಹಾರ ನಿರ್ವಹಿಸಲು ಒತ್ತಾಯ, ಕೊಳವೆ ಬಾವಿಗೆ ಪೈಪ್ ಹಾಕಿಸಲು, ಕೊರೆಸಲು ದುಡ್ಡು ನೀಡದಿರುವುದು ಇತ್ಯಾದಿ ವಿಷಯಗಳ ಕುರಿತು, ಮಂಡಿಸಿದರು.

ಶ್ರೀ **ಸಿ.ಗುರುಸ್ವಾಮಿ** ಅವರು ಚರ್ಚೆಯಲ್ಲಿ ಪಾಲ್ಗೊಂಡು, ಗ್ರಾಮಾಂತರದ ರೈತರ ಸಮಸ್ಯೆ, ಅಜ್ಜಂಪುರದ ಘಟನೆಯನ್ನು ಶ್ರೀ ಕೆ.ಬಿ.ಮಲ್ಲಿಕಾರ್ಜುನ್ ಅವರು ವಿವರಿಸಿದ್ದನ್ನೂ ಪ್ರಸ್ತಾಪಿಸುತ್ತ, ನುಡಿದರು; ಅಜ್ಜಂಪುರದಲ್ಲಿ ಐದು ದಿನಗಳ ಕಾಲ ಕಂಟಿನ್ಯೂಯಸ್ ಆಗಿ ಎಲೆಕ್ಟ್ರಿಸಿಟಿ ಸಪ್ಲೈ ಇಲ್ಲದೆಯೆ ರೈತರು ರೊಚ್ಚಿಗೆದ್ದು ಅವರ ವಾತಾವರಣದ ಸ್ಥಿತಿ ಏನಿತ್ತು, ಅದು ಜಸ್ಟಿಫೈ ಆಗುತ್ತದಾ ಎನ್ನುವ ದಿಕ್ಕಿನಲ್ಲಿ ಯೋಚಿಸಿ ತೀರ್ಮಾನಿಸುವುದು ನಮಗೆಲ್ಲ ಬಿಟ್ಟಂಥ ವಿಚಾರ. ಆ ಬಗ್ಗೆ ಇಲ್ಲಿ ಸಾಕಷ್ಟು ಚರ್ಚೆ ಆಗಿದೆ. ಆದರೆ ಅದು ಫಲ ಕಾಣಬೇಕು, ಎಂದರು. ನಂತರ ಬರ ಪರಿಹಾರ, ಕೆಪಿಟಿಸಿಎಲ್ ಹಾಗು ಕುಡಿಯುವ ನೀರಿನ ಇಂಟರ್‌ಲಿಂಕ್ ಸಂಬಂಧ, ಬೋರ್‌ವೆಲ್ ರಿಪೇರಿ ಇತ್ಯಾದಿಗಳ ಬಗ್ಗೆ ಮಾನ್ಯ ಘೋರ್ಪಡೆಯವರು ಹೇಳಿದ ವಿಚಾರ, ಕೆಪಿಟಿಸಿಎಲ್ ಬಗ್ಗೆ ರಿವ್ಯೂನ ಅಗತ್ಯ, ಚಾಮರಾಜನಗರ ವಿದ್ಯುತ್ ಪರಿಸ್ಥಿತಿ, ವಿದ್ಯುತ್ ವ್ಯವಸ್ಥೆಯ ಅಭಿವೃದ್ಧಿ, ಪುನಾರಚನೆ, ಬರಗಾಲ ಪರಿಸ್ಥಿತಿ ನಿರ್ವಹಣೆ ಮುಂತಾದ ವಿಷಯಗಳ ಬಗ್ಗೆ ವಿವೇಚನೆ ಇಟ್ಟರು.

ಈ ದಿನದ ಚರ್ಚೆಯಲ್ಲಿ ಸರ್ವಶ್ರೀ ಎಂ.ವೈ.ಘೋರ್ಪಡೆ, ಕೆ.ಜಯಪ್ರಕಾಶ್ ಹೆಗ್ಡೆ, ಅಭಯಚಂದ್ರ, ಸಿ.ಭೈರೇಗೌಡ, ಬಿ.ರಮಾನಾಥರೈ, ಅಪ್ಪಾಜಿ ಎಸ್.ನಾಗೇಗೌಡ, ಸಿ.ಎಂ.ಲಿಂಗಪ್ಪ, ಎ.ಎಂ.ಹಿಂಡಸಗೇರಿ, ಬಿ.ಎಚ್.ಬನ್ನಿಕೋಡ್, ಎಂ.ಪಿ.ಅಪ್ಪಚ್ಚುರಂಜನ್, ಎನ್.ಯೋಗೀಶ್‌ಭಟ್, ಎಸ್.ಪಿ.ಮುದ್ದಹನುಮೇಗೌಡ ಅವರುಗಳೂ ಪಾಲ್ಗೊಂಡಿದ್ದರು.

## ವಿಷಯ 8: ಮುಂಗಾರು ಮಳೆ ವೈಫಲ್ಯ ; ಬರ ಪರಿಸ್ಥಿತಿ; ಬೆಳೆ ವಿಮೆ.

ವಿಧಾನಸಭೆಯ 5ನೇ ಅಧಿವೇಶನದ 9.7.2002ರ ನಡವಳಿಕೆಗಳ[8] ಸಂದರ್ಭದಲ್ಲಿ ವಿರೋಧಪಕ್ಷದ ನಾಯಕ ಶ್ರೀ **ಜಗದೀಶ್ ಶೆಟ್ಟರ್** ಬರಗಾಲದ ಕಾರಣ ಬರಬೇಕಾದ ಬೆಳೆವಿಮೆ ಹಣ ಕುರಿತ ಚರ್ಚೆಗೆ ನಿಲುವಳಿ ಮಂಡಿಸಲು ಅವಕಾಶಕ್ಕೆ ಸಭಾಧ್ಯಕ್ಷರಲ್ಲಿ ವಿನಂತಿಸಿದರು.

ಶ್ರೀ **ಪಿ.ಜಿ.ಆರ್.ಸಿಂಧ್ಯ** ಅವರು ತಾವೂ ನಿಲುವಳಿ ಸೂಚನೆಯನ್ನು ತಮ್ಮ ಪಕ್ಷದ ವತಿಯಿಂದ ಕಳುಹಿಸಿರುವ ಬಗ್ಗೆ ಹೇಳಿ, ಕೇಂದ್ರ ಮತ್ತು ರಾಜ್ಯ ಸರ್ಕಾರದಿಂದ ಬರುವ ಹಣ ಸರಿಯಾಗಿ ವಿತರಣೆ ಆಗಿಲ್ಲ; ರೈತರ ಸಾಲವಸೂಲಾತಿ ಪ್ರಕ್ರಿಯೆಯನ್ನು ಸರ್ಕಾರ ನಿರ್ದಾಕ್ಷಿಣ್ಯವಾಗಿ ಕೈಗೊಳ್ಳಲಾಗಿ ರೈತರು ಬಹಳ ಸಂಕಷ್ಟಕ್ಕೆ ಸಿಲುಕಿದ್ದಾರೆ. ಅಭಾವ ಪರಿಹಾರ ಕಾಮಗಾರಿಗಳಿಗೆ ಹಣ ಬಿಡುಗಡೆ ಆಗಿಲ್ಲ. ರೇಷ್ಮೆ, ಕಬ್ಬು ಹಾಗು ತೆಂಗು ಬೆಳೆಗಾರ ರೈತರು ಬಹಳ ಕಷ್ಟದಲ್ಲಿದ್ದು, ಅವರಿಗೆ ಬೆಳೆ ವಿಮೆ ಹಣವನ್ನು ತಕ್ಷಣ ಪಾವತಿಸಲು ಸರ್ಕಾರದ ಮೇಲೆ ಒತ್ತಾಯ ತರುವ ದೃಷ್ಟಿಯಿಂದ ಚರ್ಚೆಗೆ ಅವಕಾಶ ಮಾಡಿಕೊಡಲು ಅಧ್ಯಕ್ಷರನ್ನು ವಿನಂತಿಸಿದರು.

ಶ್ರೀ **ಕೆ.ಎಚ್.ಹನುಮೇಗೌಡರು** ಮಾತನಾಡಿ, ಮೊದಲ ಎರಡು ಮಳೆ (1.5 ತಿಂಗಳ ಹಿಂದೆ) ಹದವಾಗಿ ಬಂದಾಗ ಅದನ್ನು ನಂಬಿ ರೈತರು ಕೋಟ್ಯಾಂತರ ರೂ.ಸಾಲವನ್ನು ಬ್ಯಾಂಕುಗಳಲ್ಲಿ ಒಡವೆಯನ್ನಿಟ್ಟು ತಂದರು. ಇಲ್ಲಿ ರೈತರ ಅಳಿವು ಉಳಿವಿನ ಪ್ರಶ್ನೆಯಿರುವ ಕಾರಣ, ಅವರಿಗೆ ಏನಾದರೂ ಸಹಾಯ ದೊರೆಯಲು ಚರ್ಚೆಯಾಗಬೇಕೆಂದರು. ಶ್ರೀ ಕೆ.ವಿಶ್ವೇಶ್ವರ ಹೆಗಡೆ ಅವರು ಈ ಮಾತಿಗೆ ದನಿಗೂಡಿಸಿದರು. ಮಾನ್ಯ ಸಚಿವರಾದ ಶ್ರೀ ಡಿ.ಬಿ.ಚಂದ್ರೇಗೌಡರು ಪ್ರಶ್ನೋತ್ತರ ವೇಳೆಯ ನಂತರ ವಿಷಯವನ್ನು ಚರ್ಚೆಗೆ ತೆಗೆದುಕೊಳ್ಳಲು ವಿನಂತಿಸಿದಂತೆ ಅಧ್ಯಕ್ಷರು ಸಮ್ಮತಿ ಸೂಚಿಸಿದರು.

9.7.2002ರ ವಿಧಾನ ಸಭೆಯ 5ನೇ ಅಧಿವೇಶನದಲ್ಲಿ[9] ಎತ್ತಿದ ನಿಲುವಳಿ ಸೂಚನೆಯಲ್ಲಿ ಶ್ರೀ ಜಗದೀಶ್ ಶೆಟ್ಟರ್ ಅವರು ವಿಷಯವನ್ನು ಪ್ರಸ್ತಾಪಮಾಡುತ್ತ; ಕಳೆದ 2 ವರ್ಷಗಳಲ್ಲಿ ಮಳೆ ಇಲ್ಲದೆ ಉಂಟಾದ ಬರಪರಿಸ್ಥಿತಿ, ರೈತರು ಜಾನುವಾರುವಿಗೆ ಮೇವಿಲ್ಲದೆ ಮಾರುವಂಥ ಸಂಕಷ್ಟ ಸ್ಥಿತಿ ಹಾಗು

---

8. (ವಿಧಾನಸಭಾ ನಡವಳಿಕೆಗಳು, ಸಂಪುಟ4(1–5),(9.7.2002),ಪು.28)

9. (ವಿಧಾನಸಭೆಯ ನಡವಳಿಕೆಗಳು, ಸಂಪುಟ (1–5),9.7.2002 ಪು.73–155)

ವಲಸೆಹೋಗುವಂತಾಗಿರುವುದು ; ಮುಂಗಾರು ಮಳೆಯ ವೈಫಲ್ಯ, ಬರಗಾಲದ ಭೀಕರತೆ, ಈ ಬಗ್ಗೆ ಸರ್ಕಾರ ತೆಗೆದುಕೊಳ್ಳಬೇಕಾದ ಮುನ್ನೆಚ್ಚರಿಕೆ ; ಬೆಳೆನಷ್ಟ, ಬರಗಾಲದಿಂದಾಗಿ ಆತ್ಮಸ್ಥೈರ್ಯ ಕಳೆದುಕೊಂಡ ರೈತರ ಆತ್ಮಹತ್ಯೆ ; ರಾಜ್ಯದ ಹವಮಾನ ವರದಿಯ ಸೂಚನೆಯಿಂದ ಮಳೆ ಅಭಾವ, ಬೆಳೆನಷ್ಟ, ಬರಗಾಲ ಪರಿಸ್ಥಿತಿಯ ಸಂದರ್ಭ; 101 ತಾಲೂಕುಗಳಲ್ಲಿ ತೀವ್ರ ಮಳೆಯ ಕೊರತೆ, 44 ತಾಲೂಕುಗಳಲ್ಲಿ ಮಳೆಯೆ ಆಗಿಲ್ಲದಿರುವುದು ; ರಾಜ್ಯದ ಮ್ಯಾಪ್‌ನಲ್ಲಿ ಮುಂದೆ ಮಳೆಆಗದಿರುವ ಪ್ರದೇಶಗಳನ್ನು ಕಪ್ಪು ಬಣ್ಣದಿಂದ ಸೂಚಿಸಿರುವುದು, ಈ ಕುರಿತೆಲ್ಲ ಹೇಳಿ, ಈ ಪರಿಸ್ಥಿತಿಯಲ್ಲಿ ರೈತರಿಗೆ ಸರ್ಕಾರ ಒದಗಿಸುವ ರಕ್ಷಣೆ ಹಾಗು ಪರಿಹಾರದ ಕುರಿತು ಹೇಳಬೇಕೆಂದು ಒತ್ತಾಯಿಸಿದರು. ಮುಂದುವರಿದು, ರೈತರ ಸಂಕಷ್ಟ ಸಮಯದಲ್ಲಿ ರೈತರು ಬೆಳೆದ ಬೆಳೆಗೆ ಸರಿಯಾದ ಬೆಲೆ ಸಿಗದಿದ್ದರೆ ಆವರ್ತನಿಧಿ ಸ್ಥಾಪನೆ ಮಾಡಿ, ತನ್ಮೂಲಕ ಬೆಳೆ ಖರೀದಿ ಮಾಡುವ ಸರ್ಕಾರದ ಪುನರಾವರ್ತಿತ ಹೇಳಿಕೆ ; ಬೆಳೆ ವಿಮೆ ಸಲುವಾಗಿ 14 ಕೋಟಿರೂ. ಪ್ರೀಮಿಯಂ ಅನ್ನು ರೈತರು ತುಂಬಿದರೂ ರೈತರಿಗೆ ಸಿಗದ ಬೆಳೆ ವಿಮೆ ಹಣ. ಹಾಗು ಈ ಪರಿಸ್ಥಿತಿಗೆ ಕಾರಣ; ಇನ್‌ಶೂರೆನ್ಸ್ ಕಂಪೆನಿಗೆ ತುಂಬಬೇಕಾದ ರಾಜ್ಯಸರ್ಕಾರದ ಪಾಲು 55 ಕೋಟಿ 27 ಲಕ್ಷ, ಕೇಂದ್ರ ಸರ್ಕಾರವು ತುಂಬಬೇಕಾದ ಹಣ ತುಂಬಿದಾಗ ರೈತರು ಕ್ಲೇಮ್ ಮಾಡಿದ ಒಟ್ಟು 132.93 ಕೋಟಿ ರೂ. ಮುಟ್ಟುವುದರ ಸಾಧ್ಯತೆ ; ಬೆಳೆ ವಿಮೆ ಹಣ ಬಂದಿಲ್ಲದ ಕಾರಣ ಮುಂದಿನ ಸಾಲಿನಲ್ಲಿ ಬೆಳೆವಿಮೆ ಹಣ ತುಂಬದಿರಲು ರೈತರ ವಿಚಾರ ಮಾಡಿರುವುದು; ರೈತರ ಕಷ್ಟಕ್ಕೆ ಆಗಬೇಕಿದ್ದ ಆವರ್ತನಿಧಿಯನ್ನೂ ಸರ್ಕಾರ ಇಟ್ಟಿರುವ ಬಗ್ಗೆ ಸಾಕ್ಷಿ ಕೊಡಬೇಕಿರುವುದು; ಬೆಳೆ ವಿಮೆ ಹಣವು 2–3 ದಿನಗಳಲ್ಲಿ ರೈತರಿಗೆ ಸಿಗುವ ವ್ಯವಸ್ಥೆಮಾಡಬೇಕಿರುವುದು; ರೈತರ ತೊಂದರೆ ಮುಂದುವರಿದು ಆತ್ಮಹತ್ಯೆ ಪ್ರಕರಣ ಹೆಚ್ಚದಂತೆ ನೋಡಿಕೊಳ್ಳುವುದು; ಬರಗಾಲದ ಕಾರಣ ಸಾಲವಸೂಲಾತಿ ನಿಲ್ಲಿಸಿ, ಒಂದು ಅವಧಿಗೆ ರೈತರ ಸಾಲದ ಮೇಲಿನ ಬಡ್ಡಿ ಮನ್ನಾ; ಸಾಲವಸೂಲಾತಿಗೆ ಬಂದು ಪಿ.ಎಲ್.ಡಿ ಬ್ಯಾಂಕ್‌ನವರು ಪ್ರಾರ್ಥಿಸಿದರೂ ಬಿಡದೆ ರೈತರ ಟ್ರಾಕ್ಟರ್ ಆಸ್ತಿಪಾಸ್ತಿ ಮುಟ್ಟುಗೋಲು ಹಾಕಿಕೊಂಡದ್ದು, ಕಂಪೆನಿಗೆ ಬಾಕಿ ಮನ್ನಾ ಮಾಡುವ ಸರ್ಕಾರ ರೈತರ ಬಡ್ಡಿ ಮನ್ನಾ ಮಾಡಲು ಹಿಂದೇಟು, ಮಧ್ಯಮಾವಧಿ ಸಾಲವನ್ನು ದೀರ್ಘಾವಧಿ ಸಾಲವಾಗಿ ಪರಿವರ್ತಿಸುವುದು, ಹಾಗು ಮರುಸಾಲಕೊಡುವುದು; ಧಾರವಾಡದ ಡಿಸಿಸಿ ಬ್ಯಾಂಕಿನ ಅತಂತ್ರ ಸ್ಥಿತಿ ಹಾಗು ರೈತರಂತೆ ಆ ಬ್ಯಾಂಕ್ ನೌಕರರೂ ಆತ್ಮಹತ್ಯೆ ಮಾಡಿಕೊಂಡಿರುವುದು; ಅರ್ಬನ್ ಬ್ಯಾಂಕ್ ಕೂಡ ಮುಚ್ಚಿಹೋಗಿ ಸಾಲಗಳು ಇಲ್ಲದ ಪರಿಸ್ಥಿತಿ; ರಾಜ್ಯದ

ದುರ್ಬಲ ಮುಂಗಾರಿನಿಂದ ಮಳೆ ಅಭಾವ ತತ್ಫಲವಾಗಿ ರೈತರಿಗೆ ಪರ್ಯಾಯ ಬೆಳೆಯೋಜನೆಯತ್ತ ಗಮನ; ಕಳೆದ ವರ್ಷಕ್ಕಿಂತ ಹಾಲಿವರ್ಷದಲ್ಲಿ 6 ಲಕ್ಷ ಹೆಕ್ಟೇರ್ ಪ್ರದೇಶದಲ್ಲಿ ಬಿತ್ತನೆ ಕುಂಠಿತ ಹಾಗು ಬಿತ್ತಿದ ಬೆಳೆಗೆ ಮಳೆ ಬೀಳದೆ ಆಗುವ ಬೆಳೆ ನಾಶ; ನೀರಾವರಿ ಪ್ರದೇಶದಲ್ಲಿಯೂ ನೀರಿಗೆ ಬರ, ಒಣಗಿನಿಂತ ಕಬ್ಬು, ಕೃಷಿಸಾಲ ತೆಗೆದುಕೊಂಡ ರೈತರ ಆಸ್ತಿಯ ಮಾರ್ಟ್‌ಗೇಜ್ ಹಾಗು ರಿಜಿಸ್ಟ್ರೇಷನ್; ಮುದ್ರಾಂಕ ಶುಲ್ಕ ವಿನಾಯಿತಿ; ರಾಜ್ಯದ ರೈತರು ಆಯ್ದು ಬೆಳೆಯುತ್ತಿರುವ 20ಬೆಳೆಗಳು, ಅವುಗಳಿಗೆ ಕನಿಷ್ಠಬೆಂಬಲ ಬೆಲೆ ನೀಡಿ ಖರೀದಿಸುವ ಬಗ್ಗೆ ರಾಜ್ಯಸರ್ಕಾರದ ನಿರ್ಣಯ– ಇತ್ಯಾದಿ ವಿಷಯಗಳ ಬಗ್ಗೆ ಪ್ರಸ್ತಾಪಿಸಿದರು.

ಶ್ರೀ **ಬಿ.ಎಸ್.ಪಾಟಿಲ್** ಸಾಸನೂರು (ಕೃಷಿ ಮಾರುಕಟ್ಟೆ ಸಚಿವರು), ಈ ಮಾತುಗಳಿಗೆ ಪ್ರತಿಕ್ರಿಯಿಸುತ್ತ; ಆವರ್ತನಿಧಿಯಿಂದ ಮಿನಿಮಮ್ ಸಪೋರ್ಟ್ ಪ್ರೈಸ್ ಕೊಟ್ಟಮೇಲೆಯೇ ಕೊಬ್ಬರಿಧಾರಣೆಯಲ್ಲಿ ಆದ ಏರಿಕೆ; ಕೃಷಿ ಉತ್ಪನ್ನಗಳ ಸಹಿತವಾಗಿ ಎಲ್ಲಾ ಖರೀದಿಗಳನ್ನು ಎಪಿಎಂಸಿಗಳ ಮುಖಾಂತರ ಮಾಡುವ ಪ್ರಯತ್ನ ಕುರಿತಾಗಿ ಹೇಳಿದರು. ಶ್ರೀ ಜಗದೀಶ್ ಶೆಟ್ಟರ್ ಅವರು ಅಭಿವೃದ್ಧಿ ಆಯುಕ್ತರು ಹೇಳುವ 20 ಬೆಳೆಗಳ ಉತ್ಪನ್ನ, ಮಾನ್ಯಸಚಿವರು 13 ಬೆಳೆಗಳನ್ನು ಮಾತ್ರ ಆಯ್ಕೆ ಮಾಡಿರುವ ಬಗ್ಗೆ ಹೇಳುವಲ್ಲಿ ವ್ಯತ್ಯಾಸಗಳಿರುವ ಬಗ್ಗೆ ಗಮನಸೆಳೆದರು. ಶ್ರೀ ಬಿ.ಎಸ್.ಪಾಟೀಲ್ ಸಾಸನೂರು ಅವರು ಮಾರುಕಟ್ಟೆಯಲ್ಲಿ ಬೆಳೆಯ ಬೆಲೆ ಕುಸಿತವಾದಾಗ ಆವರ್ತನಿಧಿ ಬಳಸಿ ಸರ್ಕಾರ ಮಧ್ಯ ಪ್ರವೇಶ ಮಾಡಿ ಬೆಂಬಲ ಬೆಲೆ ನಿಗದಿಪಡಿಸಿ ಖರೀದಿ ಮಾಡುವುದೇ ವಿನಾ ಬೆಲೆ ಹೆಚ್ಚು ಇದ್ದಾಗಲೆಲ್ಲ ಎಂದರು. ಶ್ರೀ ಕೆ.ಎಂ.ಕೃಷ್ಣಮೂರ್ತಿ ಅವರು ರೈತರು ಬೆಳೆದ ಯಾವುದೇ ಬೆಳೆಯನ್ನು ನ್ಯಾಫೆಡ್‌ನವರು ವರ್ಷವಿಡೀ ಕೊಳ್ಳುವುದಕ್ಕೆ ಅವಕಾಶ ಮಾಡಿಕೊಟ್ಟರೆ ಒಳಿತು ಎಂದು ಸಲಹೆ ಇಟ್ಟರು. ಶ್ರೀ ಜಗದೀಶ್ ಶೆಟ್ಟರ್ ಅವರು, ರೈತರು ಹೋರಾಟ– ಸತ್ಯಾಗ್ರಹ ಮಾಡಿದಾಗ ಮಾತ್ರ ಖರೀದಿ ಕೇಂದ್ರ ತೆರೆಯುವ ಬದಲು, ರೈತರ ಬೆಳೆ ಕಟಾವು ಆದ ಮಾರನೇ ದಿನವೇ ಸಂಗ್ರಹಣಾ ಕೇಂದ್ರಗಳಿಗೆ ಉತ್ಪನ್ನ ತರಬಹುದಾದ ಬಗ್ಗೆ; ಎಲ್ಲಾ ಕೃಷಿ ಉತ್ಪನ್ನಗಳನ್ನು ನೇರ ಖರೀದಿ ಮಾಡುತ್ತೇವೆಂದಿರುವುದನ್ನು ಅನುಷ್ಠಾನಗೊಳಿಸಿದರೆ ಆಗುವ ರೈತರ ಉದ್ಧಾರ; ಹಾಗು ಆವರ್ತನಿಧಿಯ ಸೂಕ್ತ ವಿವರದ ಅಲಭ್ಯತೆ, ಕುರಿತು ಹೇಳಿದಾಗ ಶ್ರೀ ಬಿ.ಎಸ್.ಪಾಟೀಲ್ ಸಾಸನೂರು ಅವರು, ಕೇಂದ್ರ ಸರ್ಕಾರ ಆವರ್ತನಿಧಿಗೆ ನೀಡಿಲ್ಲದಿರುವ ನೆರವು, ಆವರ್ತನಿಧಿಗೆ ರಾಜ್ಯಸರ್ಕಾರ ಭರಿಸುವ 167ಕೋಟಿ ರೂ.13 ಕೃಷಿ ಉತ್ಪನ್ನಗಳ ಖರೀದಿ ಕುರಿತು

ಹೇಳಿದರು. ಶ್ರೀ ಜಗದೀಶ್ ಶೆಟ್ಟರ್ ಅವರು, ಕೇಂದ್ರ ಹಾಗು ರಾಜ್ಯ ಸರ್ಕಾರ ಆವರ್ತನಿಧಿಗೆ ಕೊಟ್ಟಿರುವ ಹಣದ ಅಂಕಿಅಂಶಗಳ ಬಗ್ಗೆ ಸರ್ಕಾರದ ವಿವರ ಬಯಸಿದರು. ನಂತರ ತೆಂಗಿಗೆ ಹತ್ತಿರುವ ನುಸಿರೋಗ, ಔಷಧಿ ಸಿಂಪರಣೆಯ ಹಗರಣ, ಮರಕ್ಕೆ ಮುಳುವಾದ ನುಸಿ ಔಷಧಿ ಕುರಿತು ಪ್ರಸ್ತಾಪಿಸಿದರು. ರೈತರ ಆತ್ಮಹತ್ಯೆಯ ಬಗ್ಗೆ ಡಾ.ವೀರೇಶ್ ವರದಿ,ವಿವರ ಹಾಗು ವರದಿಗೆ ಒದಗಿರುವ ಜನವಿರೋಧ ಪರಿಹಾರ ಧನವನ್ನು ಕೊಡುವ ಅಗತ್ಯವಿಲ್ಲ ಎಂಬ ವರದಿಯಲ್ಲಿನ ಅಭಿಪ್ರಾಯ, ಈ ದಿಸೆಯಲ್ಲಿ ರಾಜ್ಯ ಸರ್ಕಾರದ ನೀತಿ ಹಾಗು ಪರಿಹಾರಧನದ ಸ್ಪಷ್ಟೀಕರಣದ ಅಗತ್ಯ, ಕುರಿತೆಲ್ಲ ಹೇಳಿದರು. ಅಂತರ್‌ಜಲಮಟ್ಟದ ಕುಸಿತ, ವಾಟರ್‌ಹಾರ್ವೆಸ್ಟ್ ಬಗ್ಗೆ ಸರ್ಕಾರದ ನಿರ್ಲಕ್ಷ್ಯ, ರೈತರ ಸಾಲದ ಮೇಲಿನ ಬಡ್ಡಿ ಮನ್ನಾ, ಕಾವೇರಿ ನದಿ ನೀರಿನ ಸಲುವಾಗಿ ಕೇಂದ್ರಕ್ಕೆ ಸ್ಪಷ್ಟೀಕರಣ ನೀಡಬೇಕಿರುವುದು, ಬೆಳೆ ವಿಮೆ ಬಿಡುಗಡೆ ಮಾಡದಿದ್ದಲ್ಲಿ ರೈತರು ಅನುಭವಿಸುವ ತೀವ್ರ ಸಂಕಷ್ಟ, ಕುರಿತೆಲ್ಲ ಪ್ರಸ್ತಾಪಿಸಿ ತಮ್ಮ ಮಾತನ್ನು ಮುಗಿಸಿದರು.

ಶ್ರೀ **ಸಿ.ಭೈರೇಗೌಡರು,** ಬರ ಪರಿಸ್ಥಿತಿಯ ವಿಷಯವನ್ನು ಪ್ರಸ್ತಾಪಿಸುತ್ತ; ಮುಂಗಾರು ಆರಂಭದ ನಂತರ ಮಳೆಯ ಅಭಾವದಿಂದಾಗಿ ರೈತಾಪಿವರ್ಗದಲ್ಲಿ ಉಂಟಾಗಿರುವ ಭೀತಿ, ಬೆಳೆಗಳ ನಷ್ಟ, ವಿಮಾಹಣವು ಸಕಾಲದಲ್ಲಿ ರೈತರಿಗೆ ಒದಗದಿರುವುದು, ಅನಾವೃಷ್ಟಿ ಅತಿವೃಷ್ಟಿ ಹಾನಿ ಹಾಗು ಅಭಾವ ಎದುರಿಸಲು ಸರ್ಕಾರ ಮಾಡಿಕೊಳ್ಳಬೇಕಾದ ಸಿದ್ಧತೆಯಲ್ಲಿ ವಿಳಂಬ, ಜಲಾಶಯಗಳಲ್ಲಿ ಕಡಿಮೆಯಾಗುತ್ತಿರುವ ನೀರಿನಮಟ್ಟ, ಕುಸಿಯುತ್ತಿರುವ(500ರಿಂದ 1000ಅಡಿ ಆಳಕ್ಕೆ) ಅಂತರ್ಜಲಮಟ್ಟ, ಜಾನುವಾರುಗಳಿಗೆ ಕುಡಿಯುವ ನೀರಿಗೆ ಕಷ್ಟ, ಕೃಷಿ ಕಾರ್ಮಿಕರಿಗೆ ಕೆಲಸ ಸಿಗದಿರುವ ಪರಿಸ್ಥಿತಿ; ನೀರಾವರಿ ಸಮಸ್ಯೆಗಳು; ಜಿಲ್ಲೆ, ತಾಲೂಕು ಹಾಗು ಗ್ರಾಮ ಪಂಚಾಯಿತಿಗಳಿಗೆ ಬಿಡುಗಡೆ ಆಗದಿರುವ ಹಣ, ಕೃಷಿ ವಿಮಾ ಯೋಜನೆಯ ಹೊಸರೂಪ (ರಾಜ್ಯ ಮತ್ತು ಕೇಂದ್ರಗಳ ಜಂಟಿ ಸಹಯೋಗದಲ್ಲಿ ಸಮ ಸಮಭರಿಸುವಿಕೆ) ಸ್ವಾಗತಾರ್ಹವಾಗಿದ್ದರೆ, ರೈತರ ಪೂರ್ಣ ಹಣ ಬಿಡುಗಡೆಯಾಗದಿರುವುದು; ಕೃಷಿ ಸಮಿಟ್ ನಡೆದ ಬಗ್ಗೆ; ಬಾಕಿ ವಿಮೆ ಬೆಳೆಹಣದಿಂದಾಗಿ ರೈತರಿಗೆ ಕಳವಳ, ಮುಂಗಾರು, ಹಿಂಗಾರು, ಬೇಸಿಗೆಯಲ್ಲಿ ರೈತರು ಅನುಭವಿಸಿರುವ ಬೆಳೆನಷ್ಟ, ಹಾಗು ಸರ್ಕಾರ ಈ ದಿಸೆಯಲ್ಲಿ ತೆಗೆದುಕೊಳ್ಳಬೇಕಾದ ಕ್ರಮಗಳ ಕುರಿತು ಮಾತನಾಡಿದರು.

**ಶ್ರೀ ಕೆ.ಹೆಚ್.ಹನುಮೇಗೌಡರು,** ಮಲೆನಾಡು ಪ್ರದೇಶದಲ್ಲಿಯೂ, ಸಾಲಮಾಡಿಕೊಬ್ಬರ ಬೀಜ ಮತ್ತು ಉಳುಮೆಗೆ ಖರ್ಚುಮಾಡಿ ಹಾಕಿದ ಬೆಳೆ, ಮಳೆ ವಿಫಲವಾಗಿ ಹಾನಿಗೊಂಡಿರುವುದು, ರೈತರ ಚಿಂತಾಜನಕ ಸ್ಥಿತಿ, ಹಾಸನ ಜಿಲ್ಲೆಯಲ್ಲಿ 50 ಸಾವಿರ ಎಕರೆ ಪ್ರದೇಶದಲ್ಲಿ ಬಿತ್ತಿದ ಆಲೂಗಡ್ಡೆ, ಮಳೆ ಅಭಾವದಿಂದ ಹಾಳಾಗಿರುವುದು, ಹಾರಂಗಿ, ಹೇಮಾವತಿ, ಕೆ.ಆರ್.ಎಸ್‌ಗೆ ನೀರಿನ ಕೊರತೆ, ದೇಶಕ್ಕೆ ಅನ್ನ ಕೊಡುವ ರೈತನೇ ಉಪವಾಸಕ್ಕೀಡಾಗಿರುವುದು, ಯಾರೋ ಚೀಫ್ ಎಂಜನಿಯರ್‌ರ್ ಅದಕ್ಷತೆಯಿಂದ ರಿಪೇರಿಯಾಗದ ಕೆರೆ ಬಾವಿಗಳು ರೈತನಿಗೆ ಶಾಶ್ವತ ಪರಿಹಾರದ ಯೋಜನೆಗಳತ್ತ ಬೇಕಾದ ಸರ್ಕಾರದ ಗಮನ, ಅಧಿಕಾರಿಗಳಿಂದ ರೈತರಿಗೆ ಆಗುತ್ತಿರುವ ವಂಚನೆ ಹಾಗು ಅವರ ಮೇಲೆ ಜರುಗಿಸಬೇಕಾದ ಕ್ರಮಗಳು, ಯದ್ವಾತದ್ವಾ ತೆಗೆದ ಬೋರ್‌ವೆಲ್‌ಗಳಿಂದ ಆಗಿರುವ ತೊಂದರೆ, ನೀರಿನ ಮಟ್ಟ ಕುಸಿತ, ಹಾಗು ಬೋರ್‌ವೆಲ್ ತೆಗೆಯುವಲ್ಲಿ ಇರಬೇಕಾದ ಅಂತರ ಕುರಿತಾಗಿ ರೈತರಿಗೆ ತಿಳುವಳಿಕೆ ಕೊಡದ ಸರ್ಕಾರದ ಲೋಪ, ಪಕ್ಕದ ರಾಜ್ಯದಲ್ಲಿ ರೈತರು ಬರಗಾಲ ಎದುರಿಸಿರುವ ಹಾಗು ಜೀವನ ಮಾಡುವಂಥ ವ್ಯವಸ್ಥೆಯನ್ನು ತಿಳಿದು ಅನುಸರಿಸುವುದು, ವರ್ಲ್ಡ್‌ಬ್ಯಾಂಕ್‌ನಿಂದ 465ಕೋಟಿ ಹಣವನ್ನು ಸ್ಕೀಮುಗಳಿಗೆಂದು ಪಡೆದು ಖರ್ಚು ಮಾಡಿದರೆ ಮುಂದಿನ ಪೀಳಿಗೆ ಆ ಸಾಲ ಮತ್ತು ಬಡ್ಡಿಯನ್ನು ತೀರಿಸಲು ಸಾಧ್ಯವಾಗಬಲ್ಲುದೆ ? ರೈತರು ಹಾಲಿ ಸಾಲವನ್ನು ಕಂತುಗಳಲ್ಲಿ ವರ್ಷಾಂತರದಲ್ಲಿ ತೀರಿಸಲು ಅವಕಾಶ, ಹಣಕ್ಕಾಗಿ ರೈತರು ನೇಣು ಹಾಕಿಕೊಳ್ಳುತ್ತಾರೆ ಎನ್ನುವಂಥ ವರದಿಯಲ್ಲಿ ರೈತರ ಜೀವನವನ್ನು ಹಗುರವಾಗಿ ತೆಗೆದುಕೊಂಡಂತಿರುವುದು, ಮೆಜೆಸ್ಟೀರಿಯಲ್ ಎನ್‌ಕ್ವೈರಿ ಮಾಡುವ ಅಗತ್ಯವಿದೆಯೆ? ಎಂದು ರೈತರ ಆತ್ಮಹತ್ಯೆಯ ವಿಷಯವಾಗಿ ಪ್ರಶ್ನೆ ; ಅಧಿಕಾರ ಸಿಕ್ಕಿದಾಗ, ತಳಪಾಯದ ಜನರ ಬಗ್ಗೆ ಬೇಕಾದ ಅನುಕಂಪ, ಹೃದಯದ ಸ್ಪಂದನ, ಕೆ.ಆರ್.ಎಸ್.ಕೆಳಗಿನ ಅಚ್ಚುಕಟ್ಟಿಗೆ ಎರಡು ಬೆಳೆಗೆ ನೀರು ಕೊಡುವಲ್ಲಿ ಮೇಲುಗಡೆ ಇರುವ ಜನಕ್ಕೆ ಒದಗದೇ ಇರುವ ಅಂಥ ಅನುಕೂಲ; ಅಂಥಕಡೆ ಅಣ್ಣೆ ಕಟ್ಟೆ ಅಥವಾ ಲಿಫ್ಟಿರಿಗೇಷನ್ ಹಾಕಿಸುವುದು, ಕರ್ನಾಟಕದ ಬೇಸಿನ್‌ನಲ್ಲಿ 3ಲಕ್ಷ ಎಕರೆ ನೀರಾವರಿ ಇದ್ದಾಗ ತಮಿಳುನಾಡಿನಲ್ಲಿ 7ಲಕ್ಷ ಎಕರೆ ನೀರಾವರಿ ಆಗುತ್ತಿದ್ದು ಇಂದು 37 ಲಕ್ಷ ಎಕರೆ ನೀರಾವರಿ ಅಲ್ಲಿದ್ದರೆ ಇಲ್ಲಿ 7ಲಕ್ಷ ನೀರಾವರಿ ಆಗುವ ಹಂತ ತಲುಪಿಲ್ಲದಿರುವುದಕ್ಕೆ ಎಂಜನಿಯರ್‌ಗಳೇ ಕಾರಣವಿರಬಹುದು; ಮೆಟ್ಟೂರು ಜಲಾಶಯಕ್ಕೆ ಹೋಗುವ ನಮ್ಮಿಂದಲ್ಲಿನ ನೀರಿನಲ್ಲಿ 60–70 ಟಿ.ಎಂ.ಸಿ. ನೀರು ಅರಬ್ಬಿ ಸಮುದ್ರಕ್ಕೆ ಹೋಗುವ ಬಗ್ಗೆ ಏಕೆ ಸರ್ಕಾರ ಪ್ರಶ್ನಿಸದು ! ನಮ್ಮ ಪಾಲಿನ ನೀರು ಕಾಪಾಡಿಕೊಳ್ಳುವುದು

ಹೇಗೆ! ಬರಗಾಲಕ್ಕೆ ಶಾಶ್ವತ ಪರಿಹಾರ, ಕರ್ನಾಟಕದ ಬಡವರ ದುಡ್ಡಿನಲ್ಲಿ ಕಟ್ಟಿಕೊಂಡಿರುವ ಡ್ಯಾಂನ ನೀರನ್ನು ಕೇಳಿದಾಗ ನೀರು ಕೊಡುವುದರ ಅಸೂಕ್ತತೆ, ಈ ಕುರಿತೆಲ್ಲ ವಿಶ್ಲೇಷಿಸಿ ತಮ್ಮ ಮಾತನ್ನು ಮುಗಿಸಿದರು. ಈ ಸಂದರ್ಭದಲ್ಲಿ ಶ್ರೀ ಪಿ.ಜಿ.ಆರ್.ಸಿಂಧ್ಯ, ಶ್ರೀ ಎಸ್.ಎಂ.ಕೃಷ್ಣ, ಶ್ರೀ ಡಿ.ಬಿ.ಚಂದ್ರೇಗೌಡ ಅವರು ಜಲಾಶಯ ನೀರಿನ ಸಮಸ್ಯೆ ಇವೆಲ್ಲ ಅಂತರರಾಜ್ಯ ಸಮನ್ವಯ ಚಿಂತನೆಯಾಗಿ ನಡೆಯಬೇಕೆಂಬುದರ ಕುರಿತು ಪ್ರಸ್ತಾಪಿಸಿದರು.

ಶ್ರೀ **ಅರಗಜ್ಞಾನೇಂದ್ರ** ಅವರು; ನೀರು ರಾಜಕಾರಣ ಬಿಟ್ಟು, ರಾಜ್ಯದ ಬರಪರಿಸ್ಥಿತಿಯನ್ನು ಸರ್ವರೂ ಸೇರಿ ಎದುರಿಸಬೇಕು. ಮಲೆನಾಡಿನಲ್ಲಿ ಜುಲೈತಿಂಗಳಲ್ಲಿ ಭೂಮಿಯ ಅಂತರ್ಜಲದ ಮಟ್ಟ ಮೇಲೆ ಬಂದು ನೀರಿನ ಬುಗ್ಗೆ ಏಳುತ್ತಿದ್ದು, ಹೊಳೆ,ಹಳ್ಳ ತುಂಬಿ ಹರಿಯುತ್ತಿದ್ದ ರೀತಿ ಇಂದಿಲ್ಲ. ಜಲಾಶಯಗಳಂತು ಬರಿದೋ ಬರಿದು. 6 ತಿಂಗಳ ಕಾಲ ವರ್ಷದಲ್ಲಿ ಪಂಪ್‌ಸೆಟ್ ಬಳಸದೆ ಇರುತ್ತಿದ್ದ ಮಲೆನಾಡಿನ ಹಳ್ಳಿಗಳಲ್ಲಿ ಪಂಪ್ ಚಾಲೂ ಮಾಡಲೂ ನೀರಿಲ್ಲ. ನೂರಕ್ಕೆ 70–80 ಭಾಗ ಬೆಳೆಗಾರರಿರುವಾಗ ಈ ರೈತರ ಬಗ್ಗೆ, ಸಂಕಷ್ಟ ಕಾಲದಲ್ಲಿ ಕಳಕಳಿ ಬೇಡವೆ? ರೈತರ ಪಾಲಿಗೆ ನಾವು ರಾಕ್ಷಸರಾಗದೆ, ಕ್ರಾಪ್ ಇನ್‌ಶೂರೆನ್ಸ್ ರಿಲೀಸ್ ಮಾಡಬೇಕೆನ್ನುವ ಕಳಕಳಿ ಹೃದಯವಂತಿಕೆ ಅಧಿಕಾರಿಗಳಿಗೆ ಅಗತ್ಯವಿದೆ.

ರೈತರ ಶೋಚನೀಯ ಪರಿಸ್ಥಿತಿಯನ್ನೂ ಬೀಜ, ಗೊಬ್ಬರ, ಪೆಸ್ಟಿಸೈಡ್ ಕಂಪೆನಿಗಳು ಬಳಸಿಕೊಂಡು ಶೋಷಿಸುತ್ತಾರೆ. ಸಾಗರದ ಬೃಹತ್ ರೈತರ ಸಭೆಯಲ್ಲಿ ಮುಖ್ಯಮಂತ್ರಿಗಳು 50ಪರ್ಸೆಂಟ್ ಸಬ್ಸಿಡಿಯನ್ನು ರೈತರ ಬೀಜದ ಭತ್ತಕ್ಕೆ ಕೊಡುವ ಘೋಷಣೆ ಮಾಡಿದರು. ಆದರೆ ಅದು ಬೀಜದ ಭತ್ತವನ್ನು ಇಲಾಖೆಗೆ ಸರಬರಾಜು ಮಾಡುವ ಕಂಪೆನಿಗೆ ಲಾಭವೇ ವಿನಾ ರೈತರಿಗಲ್ಲ. ಇಂಥ ವ್ಯವಸ್ಥೆಯನ್ನು ಕಂಪನಿಯ ಸೆಳೆತಕ್ಕೆ ಒಳಗಾಗಿ ಮಾಡಿಕೊಂಡಿರುವ ಬಗ್ಗೆ ವಿಚಾರಣೆ ಮಾಡಬೇಕು. ಅಲ್ಲದೆ ಬೀಜವನ್ನು ಬೆಳೆದು ಮತ್ತೆ ರೈತರು ಬೀಜವನ್ನು ಹಂಚಿಕೊಳ್ಳಲು ಬರದೆ, ಅದೆಲ್ಲ ಕಂಪನಿ ಹಿಡಿತದಲ್ಲಿದ್ದು, ರೈತರು ಖಾಯಂ ಆಗಿ ಕಂಪನಿಯ ದಾಸರಾಗಿರುವಂತೆ ಮಾಡಲಾಗಿದೆ. ಕ್ವಿಂಟಾಲ್‌ಗೆ 5–8ಸಾವಿರ ರೂ.ಗಳನ್ನು ಮತ್ತೆ ಮತ್ತೆ ಕಟ್ಟಿಕೊಂಡುಬರುವುದಾಗಿದೆ. ನಮ್ಮ ಕಡೆ ರೈತರ ಸಂಪ್ರದಾಯದಲ್ಲಿ, ಹೊಸ ತಳಿಯೊಂದು ಬಂದಾಗ ಅದನ್ನು ಅಭಿವೃದ್ಧಿ ಪಡಿಸಿದ ಪ್ರಗತಿಪರ ರೈತರು ಒಂದು ವರ್ಷ ಆ ಹೊಸ ತಳಿ ಹಾಕಿ, ಆಮೇಲೆ ಹಳ್ಳಿಯಲ್ಲಿ ಎಲ್ಲರೂ ಬೀಜ ಹಂಚಿಕೊಳ್ಳುತ್ತೇವೆ. ಭತ್ತಕ್ಕೆ ಅವರಿಗೆ ಭತ್ತ ಕೊಟ್ಟು ಬೀಜವನ್ನು ಹಂಚಿಕೊಳ್ಳುವ

ಮೂಲಕ ಬೀಜ ಪ್ರಸಾರವೂ ಆಗುತ್ತದೆ. ಆದರೆ ಕಂಪನಿಗಳು ರೈತನ ಕುತ್ತಿಗೆಗೆ ಹಗ್ಗ ಹಾಕಿವೆ. ಇಲಾಖಾ ಅಧಿಕಾರಿಗಳು ಇಂಥ ಬೀಜ ಮಾಡುವುದು **ಹೇಗೆ ಎಂದು ಟೆಕ್ನಿಕ್ ಹೇಳಿ ಕೊಟ್ಟರೆ** ರೈತರು ಬೀಜ ಬೆಳೆದು ಅವರು ಬೀಜಪ್ರಸಾರಮಾಡಲು ಅನುಕೂಲವಾಗುತ್ತದೆ. ಕಂಪನಿಗಳಿಗೆ ಸಹಾಯಧನ ಕೊಡದೆ, ರೈತರ ಸಾಂಪ್ರದಾಯಿಕ ಬೀಜಗಳಿಗೆ ನೀಡಿದರೆ ಮಾತ್ರ ರೈತರಿಗೆ ಬರ ಪರಿಸ್ಥಿತಿಯಲ್ಲಿ ಬಚಾವ್ ಆಗಲು ಸಾಧ್ಯವಾಗುತ್ತದೆ. 'ನೈಸರ್ಗಿಕ ಕೃಷಿ' ಎಂದು ಸಾವಯವ ಗೊಬ್ಬರದ ಬಳಕೆ ಹೆಚ್ಚಿದೆ. 'ಅಗ್ರಿಗೋಲ್ಡ್' ಎಂಬ ಗೊಬ್ಬರವನ್ನು ಬಿಡುಗಡೆ ಮಾಡಿ, ಚೆನ್ನಾಗಿದೆ ಎಂದು ದೃಢೀಕರಿಸಲಾಗಿದೆ. ಸರ್ಕಾರದ ಸಂಸ್ಥೆಯನ್ನು ನಂಬಿ ತೆಗೆದುಕೊಂಡ ರೈತನಿಗೆ ಆ ಬಗ್ಗೆ ಏನೂ ತಿಳುವಳಿಕೆ ಇಲ್ಲ. ಈ ದಿಸೆಯಲ್ಲಿ ಶುರುವಾಗಿರುವ ಕಂಪೆನಿಗಳ ಗೊಬ್ಬರದ ಸ್ಯಾಂಪಲ್ ಅನ್ನು ರೆಗ್ಯುಲರ್ ಆಗಿ ಪಡೆದು ಇಲಾಖೆಯ ತಜ್ಞರ ಮೂಲಕ ಚೆಕ್ ಮಾಡಿಸಬೇಕು. ಕೆಮಿಕಲ್ ಟೆಸ್ಟ್‌ಗೆ ಕಳುಹಿಸಿ ಗುಣಮಟ್ಟವನ್ನು ಸ್ಪೆಸಿಫಿಕೇಷನ್ ಪ್ರಕಾರ ಇರುವ ಬಗ್ಗೆ ಖಾತರಿ ಪಡಿಸಿಕೊಳ್ಳಬೇಕು. ಗೊಬ್ಬರದ ಕಂಪೆನಿಗಳ ಮೇಲೆ ಹಿಡಿತವಿರಬೇಕು. ಇನ್ನು ಔಷಧದ ವಿಚಾರದಲ್ಲಿ ತೊಗರಿ ಬೆಳೆಗೆ ನಷ್ಟವಾಗಿ ರೈತರು ನೇಣುಹಾಕಿಕೊಳ್ಳಲು ಮಾನಸಿಕವಾಗಿ ಬಳಸಲು, ಗೊಬ್ಬರ ಮತ್ತು ಔಷಧಿ ಕಂಪೆನಿಗಳೇ ಕಾರಣವಾಗಿವೆ. ಕೃಷಿ ಕ್ಲಿನಿಕ್–ರೈತ ಸಂಪರ್ಕ ಕೇಂದ್ರಗಳಿಂದ ರೈತನಿಗೆ ಪ್ರಯೋಜನವಾಗುತ್ತಿಲ್ಲ. ಆ ಕೇಂದ್ರಗಳು ಖಾಲಿ ಬಿದ್ದಿವೆ. ಇನ್ನು ಮಳೆನೀರನ್ನು ಇಂಗಿಸಿ ಅಂತರ್ಜಲ ಹೆಚ್ಚಿಸಬೇಕು. ಬರಿ ಪ್ರಚಾರ ಮಾಡಿದರೆ ರೈತನಿಗೆ ನೆಮ್ಮದಿಸಿಗುವುದಿಲ್ಲ. ಕೆರೆಕಾಯಕ, ಕೆರೆಯಲ್ಲಿ ನೀರು ನಿಲ್ಲಿಸುವ ಕೆಲಸ ಜರೂರು ಆಗಬೇಕು. ಎಂದೆಲ್ಲ ತಮ್ಮ ವಿಷಯವನ್ನು ಪ್ರತಿಪಾದಿಸಿದರು.

ಶ್ರೀ **ಎಸ್.ಎಸ್.ಪಾಟೀಲ್** ಅವರು ವಿಷಯವನ್ನು ಚರ್ಚಿಸುತ್ತ, ಬೆಳೆವಿಮೆಯ ರೈತರಿಗೆ ಮಾಡತಕ್ಕಂಥ ಮೋಸವೆನಿಸಿದೆ. ಥ್ರೆಶೋಲ್ಡ್‌ಯೀಲ್ಡ್ ಅಂದರೆ ಹಿಂದಿನ ವರ್ಷದ ಉತ್ಪನ್ನದ ಆಧಾರಿತ 5ವರ್ಷದ ಉತ್ಪನ್ನದ ಸರಾಸರಿ ತೆಗೆದು, ಈ ವರ್ಷದ ಉತ್ಪನ್ನವೆಷ್ಟು? ಎಂಬುದರ ಮೇಲೆ ಇನ್ಶೂರೆನ್ಸ್ ಸಿಗುತ್ತದೆ. ಈ ಬಗ್ಗೆ ಪೂರ್ಣವಿವರ ಬೇಕಿದೆ. ಆದರೆ ಮುಂಡರಗಿಯಂಥ ತಾಲೂಕಿನಲ್ಲಿ 365 ದಿನವೂ ಬರವೆ. ಒಂದು ಎಕರೆಗೆ ಒಂದು ಚೀಲ ಶೇಂಗಾ ಬಿತ್ತಿದಾಗ ಚೀಲದ ಮೇಲೆ ಒಂದು ಕೆ.ಜಿ. ಬಂದರೂ ಅದಕ್ಕೆ ಇನ್ಶೂರೆನ್ಸ್ ಇಲ್ಲ. ಅರೇ ಇದು ಬದಲಾಗಬೇಕು. ಇಲ್ಲವಾದರೆ ರೈತನಿಗೆ ಮೋಸವಾಗುತ್ತದೆ. ಇದು ರಾಜ್ಯದಲ್ಲಿ ಇಡಿಯಾಗಿ ಆಗಿದೆ. ಒಂದು ಜಿಲ್ಲೆಯಲ್ಲಿ ಶೇಂಗಾ ಬೆಳೆ ಆಗಿ, ಇನ್ನೊಂದರಲ್ಲಿ ಆಗದಿದ್ದರೆ ಇನ್ಶೂರೆನ್ಸ್

ಇರುವುದಿಲ್ಲ. ಇದು ಸೂಕ್ತ ಪದ್ಧತಿ ಅಲ್ಲ. ಈ ಅನ್ಯಾಯ ತಡೆಯಲು ಪಕ್ಷಾತೀತವಾಗಿ ಶಾಸಕರು ಲಕ್ಷ್ಯ ಕೊಡಬೇಕಾಗುತ್ತದೆ. ಇಲ್ಲದಿದ್ದರೆ ರೈತ ರೊಚ್ಚಿಗೇಳುತ್ತಾನೆ. ರೈತರು ಒಮ್ಮಿಂದೊಮ್ಮೆಗೆ ದಂಗೆ ಎದ್ದರೆ ಬಹಳ ಕೆಟ್ಟದಾದೀತು. ಹಾಗಾದರೆ ದೇಶ ಉಳಿಯದು. ಹೀಗೆಲ್ಲ ಆದರೆ ರೈತರಿಂದ ಇನ್ಶೂರೆನ್ಸ್ ಹಣವನ್ನು ಏಕೆ ತುಂಬಿಸಿ ಕೊಳ್ಳಬೇಕು ? ಅಧಿಕಾರಿಗಳಿಗೆ ಕೇವಲ ಅಂಕಿಅಂಶಗಳನ್ನು ತರಿಸಿಕೊಂಡು ಗೊತ್ತೇ ವಿನಾ, ಪ್ರತ್ಯಕ್ಷ ಥ್ರೆಶ್‌ಹೋಲ್ಡ್ ಈಲ್ಡ್ ಎಷ್ಟಿದೆ ಎಂಬುದು ತಿಳಿದುಕೊಂಡಿಲ್ಲ. ಇನ್‌ಶೂರೆನ್ಸ್ ಕಂಪೆನಿಯವರು ತಮಗೆ ತಿಳಿದದ್ದನ್ನು ಬರೆಯುತ್ತಾರೆ. ಅಂತಾಗಿ ರೈತರಿಗೆ ಅನ್ಯಾಯವಾಗುವುದನ್ನು ತಪ್ಪಿಸಬೇಕು. ಅವರಿಗೆ ಕೊಡಬೇಕಾದ ಹಣಕ್ಕೆ ಅನ್ಯಾಯ ಮಾಡಬಾರದು. ರೈತನಿಗೆ ಸಾವಿರ ರೂ ಬೆಳೆ ಹಾನಿ ಆಗಿದ್ದರೆ 10ರೂ. ಕೈಗೆ ಕೊಟ್ಟರೆ ಅದೆಂಥ ಇನ್ಶೂರೆನ್ಸ್! ರೈತರಿಗೆ ತೊಂದರೆ ಆದಾಗ, ಬರ ಬಂದಾಗ ಹಣಕೊಡದೆ 6ತಿಂಗಳು ವರ್ಷದ ನಂತರ ಕೊಟ್ಟರೆ ಬಡ್ಡಿಗೆ ಹೋಗುತ್ತದೆ. ಶೇ 5–10ರಷ್ಟು ಇನ್‌ಶೂರೆನ್ಸ್ ಹಣ ಏನು ಕೊಡಲಾಗುತ್ತದೆ ಅದೂ ಬಡ್ಡಿಗೆ ಹೋಗುತ್ತದೆ. ಬೆಳೆ ಬಂದ ತಕ್ಷಣ ವಾಲ್ಯುಯೇಷನ್ ಮಾಡಿ, ಮೌಲ್ಯ ಮಾಪನ ಮಾಡಿ ಒದಗಿಸಬೇಕಾದ ಪರ್ಸೆಂಟ್ ಇನ್‌ಶೂರೆನ್ಸ್ ಅನ್ನು ತಕ್ಷಣ ರೈತನ ಖಾತೆಗೆ ಜಮಾ ಆಗುವಂಥ ವ್ಯವಸ್ಥೆ ಆಗಬೇಕು. ಇದು ರಾಜ್ಯ ಮತ್ತು ಕೇಂದ್ರದ ಹೊಣೆ. ರೈತರಿಗೆ ಬರಬೇಕಾದ 132ಕೋಟಿ ರೂ. ತುಂಬುವಲ್ಲಿ ಏನು ಅನ್ಯಾಯವಾಗಿದೆ ಅದನ್ನು ಸರಿಪಡಿಸಬೇಕು. ಇಡೀ ರಾಜ್ಯದಲ್ಲಿ ವಿಮಾಕಂಪೆನಿಯವರು ಥ್ರೆಶೋಲ್ಡ್ ಈಲ್ಡ್ ಎಂದು ತೆಗೆದು ಮೌಲ್ಯಮಾಪನ ಮಾಡಿ ಮಾಹಿತಿ ಇಟ್ಟು ಕೊಂಡಿರುತ್ತಾರೆ. ಆ ಮಾಹಿತಿಯನ್ನು ತರಿಸಿ ನೇರವಾಗಿ ಎಲ್ಲಾ ಪಂಚಾಯಿತಿ ಮತ್ತು ತಾಲೂಕು ಪಂಚಾಯಿತಿ ಕಛೇರಿಗಳಲ್ಲಿ ಪ್ರಕಟಿಸಿದರೆ ಮಾತ್ರ ಪ್ರಾಮಾಣಿಕ ವಿಮೆ ಆಗುತ್ತದೆ. ಇನ್ನು ರೈತರ ಆತ್ಮಹತ್ಯೆ ಕುರಿತಂತೆ ವಿಶೇಷ ವರದಿಯ ಬಗ್ಗೆ ಚರ್ಚೆ ಆಗಿದೆ. ಆದರೆ ನಿಜವಾಗಿಯೂ ಹಣ ಬರುತ್ತದೆಂದು ವಿಷ ಸೇವಿಸಿ ರೈತನು ಸಾಯಲಾಗುತ್ತದೆಯೆ? ಸಾಯುವ ಕೊನೆಯ ಘಳಿಗೆಯವರೆಗೆ ಒಬ್ಬ ಮನುಷ್ಯ ಉಳಿದುಕೊಳ್ಳಲು ಪ್ರಯತ್ನಿಸುತ್ತಾನೆ. ಮುಂಡರಗಿಯಲ್ಲಿ, ಎರಡು ಎಕರೆ ಜಮೀನು ಒಡೆಯ ರೇಷ್ಮೆ ಹಚ್ಚಿ, ಬಾವಿ ತೆಗೆದು, ಪಂಪ್‌ಸೆಟ್ ಹಾಕಿದ. ಆದರೆ ಭಾವಿ ಒಣಗಿದಾಗ ರೇಷ್ಮೆಯೂ ಒಣಗಿತು. ಲ್ಯಾಂಡ್ ಬ್ಯಾಂಕ್, ಸೊಸೈಟಿ, ಕೈಸಾಲದವರು ಮನೆ ಮುಂದೆ ಬಂದು ನಿಂತಾಗ ನೇಣುಹಾಕಿಕೊಂಡು ಸತ್ತದ್ದು ಲಕ್ಷರೂ ಬರುತ್ತದೆಂಬುದಕ್ಕಲ್ಲ. ರೈತರ ಬಗ್ಗೆ ಕಾಳಜಿ ಇದ್ದರೆ ತಕ್ಷಣ ಬಡ್ಡಿ ಮನ್ನ ಮಾಡಬೇಕು. ಕನ್‌ವರ್ಷನ್ ಮಾಡಿ ಕೊಡಿ. ಇಲ್ಲದಿದ್ದರೆ ವಸೂಲಾತಿ ಆಗದು. ಬ್ಯಾಂಕೂ

ಉಳಿಯದು. ಬರದಲ್ಲಿ ಬಿದ್ದಿರುವ ರೈತರಿಗೆ ಕೊಡಲು ಹಣವಿಲ್ಲ ಎಂದು ಹೇಳಿ ಸಚಿವರ ಸಂಖ್ಯೆಗಳನ್ನು ಹೆಚ್ಚಿಸುವುದು ಮಿತವ್ಯಯ ಎನಿಸುವುದಿಲ್ಲ. ಅಲ್ಲದೆ ಸಂಕಷ್ಟದಲ್ಲಿರುವ ರೈತರ ಸಾಲದ ಮೇಲಿನ ಬಡ್ಡಿ ಮನ್ನಾವನ್ನು ತೀವ್ರವಾಗಿ ತಕ್ಷಣ ಮಾಡಬೇಕು. ಮಧ್ಯಮಾವಧಿ ಸಾಲವನ್ನು ದೀರ್ಘಾವಧಿ ಸಾಲವನ್ನಾಗಿ, ಅಲ್ಪಾವಧಿ ಸಾಲವನ್ನು ಮಧ್ಯಮಾವಧಿ ಸಾಲವನ್ನಾಗಿ ಮಾಡಿ ರೈತರಿಗೆ ಒಳ್ಳೆಯದು ಮಾಡಬೇಕು, ಎಂದೆಲ್ಲ ಹೇಳಿ ತಮ್ಮ ಮಾತಿಗೆ ವಿರಾಮವಿಟ್ಟರು.

ಶ್ರೀ **ವಿ.ಪಾಪಣ್ಣ** ಅವರು ವಿಷಯವನ್ನು ಪ್ರಸ್ತಾಪಿಸುತ್ತ; 180 ದಿವಸಗಳ ಮಳೆಗಾಲ 100ದಿನ ಕಳೆದು ಬಿತ್ತಿದ ಬೀಜವು ಮಳೆ ಇಲ್ಲದೆ ನಾಶವಾಗಿರುವುದು ; ಇಂದು ದಿಕ್ಕೇ ತೋಚದೆ ಕಂಗೆಟ್ಟಿರುವ ರೈತರು; ಬೆಳೆ ಕಳೆದುಕೊಂಡವರಿಗೆ ಸಿಗಬೇಕಿದ್ದ ವಿಮೆ ಹಣ ಇನ್ನೂ ಸಿಗದಿರುವುದು ; 'ನಮ್ಮ ಹೊಲ ನಮ್ಮ ರಸ್ತೆ' ಕಾರ್ಯಕ್ರಮದ ಜೊತೆಗೆ 'ಕೂಲಿಗಾಗಿ ಕಾಳು' ಯೋಜನೆಯ ಮೂಲಕ ಕೆಲಸ ಒದಗಿಸಿ ರೈತರಿಗೆ ಮಾಡಬೇಕಾದ ಅನುಕೂಲ; ಅಂತರ್‌ಜಲ ಕೃಷಿಗೆ ವಿದ್ಯುಚ್ಛಕ್ತಿ ಸಬ್ಸಿಡಿ ಇಲ್ಲ, ಅಂತರ್ಜಲದಿಂದ ಕೃಷಿಗಾರಿಕೆ ಸಲ್ಲ ಎಂಬ ಮಾತುಗಳಿಂದಾಗುವ ಅಪಾಯ; ನೈಸರ್ಗಿಕ ಸಂಪತ್ತಿನ ನಮ್ಮ ರಾಷ್ಟ್ರದಲ್ಲಿ ನೀರಿನ ಬರ ಹೋಗಿಸುವಂಥ ಗಂಗಾಕಾವೇರಿ ಯೋಜನೆಯಂತ ಪರ್ಯಾಯ ವ್ಯವಸ್ಥೆಯನ್ನು 1874ರಲ್ಲಿಯೆ ಯೋಜಿಸಿದ್ದರೂ, ನೀರಿನ ಸದ್ಬಳಕೆಯಲ್ಲಿ ನಾವು ವಿಫಲರಾಗಿರುವುದು ಕುರಿತೆಲ್ಲ ಹೇಳಿ ತಮ್ಮ ಮಾತನ್ನು ಮುಗಿಸಿದರು.

ಶ್ರೀ **ಪಿ.ಜಿ.ಆರ್.ಸಿಂಧ್ಯಾ** ಅವರು ಮಾತನಾಡುತ್ತ; ಶ್ರೀ ಕೆ.ಎಚ್.ಹನುಮೇಗೌಡರು ಗಂಭೀರವಾಗಿರುವ ರೈತರ ಸ್ಥಿತಿಗತಿ ಕುರಿತು ವಿವರಿಸಿದ್ದು ಕರುಳು ಕತ್ತರಿಸುವಂತಿತ್ತು ಎಂದು ಹೇಳಿ, ರೈತರಿಗೆ ಬರಬೇಕಾಗಿರುವ 136ಕೋಟಿ ರೂ.ವನ್ನು ಅವರಿಗೆ ಕೊಟ್ಟಿಲ್ಲದಿರುವ ಬಗ್ಗೆ (ಬಿಡುಗಡೆಯಾಗದಿರುವ ಬಗ್ಗೆ) ತೀವ್ರವಾಗಿ ಪ್ರಶ್ನಿಸಿದರು. ಕರ್ನಾಟಕದ ತೆಂಗು ಬೆಳೆಗಾರರನ್ನು, ನಾಲ್ಕು ಕೋಟಿ ತೆಂಗಿನ ಮರಗಳನ್ನು ಹಾಳು ಮಾಡಿದ್ದೀರಿ ಎಂದು ಸರ್ಕಾರವನ್ನು ಗುರಿ ಮಾಡಿ ನುಡಿದರು. ತೆಂಗಿಗೆ ಬರುತ್ತಿರುವ ನುಸಿಪೀಡೆ ಬೇರೆ ಬೆಳೆಗಳಿಗೆ ಬರುತ್ತಿರುವ ರೋಗಗಳ ಬಗ್ಗೆ ಆಗಬೇಕಾದ ಚರ್ಚೆ; ರೈತರಿಗೆ ಟ್ರೆಜರಿ ಬ್ಯಾನ್ ಮಾಡಿರುವುದು; ಬಿತ್ತನೆ ಸಮಯ ಕಳೆದು ಮೂರು ತಿಂಗಳಾದರೂ, ಎಳ್ಳು, ಶೇಂಗಾದ ಬಿತ್ತನೆ, ಬಯಲು ಸೀಮೆಯಲ್ಲಿ ಭೂಮಿಯಲ್ಲಿ ಉಳುಮೆ ಮಾಡಲಾಗದಿರುವುದು; ಮೂಡಿಗೆರೆಯಲ್ಲಿ ಪ್ರತಿವರ್ಷ ಆಗುತ್ತಿದ್ದ 60 ಇಂಚು ಮಳೆಯಲ್ಲಿ 25 ಇಂಚು ಕೂಡ ಆಗಿಲ್ಲದೆ ಬರದ ಪರಿಸ್ಥಿತಿಯನ್ನು

ಹೇಳಿಕೊಳ್ಳಲು ಬಂದ ಮೂಡಿಗೆರೆಯ ರೈತ ಕಾರ್ಮಿಕರು; ಬರಗಾಲಕ್ಕೆ ಈಡಾದ ಕಾರವಾರದ ಸ್ಥಿತಿಯನ್ನು ಗಂಭೀರವಾಗಿ ತಿಳಿಸಿದಾಗ ಮಾನ್ಯ ದೇಶಪಾಂಡೆ ಅವರು ಹಳಿಯಾಳ ಕ್ಷೇತ್ರಕ್ಕೆ ನಾಲ್ಕುವರೆ ಕೋಟಿ ಬಿಡುಗಡೆ ಮಾಡಿದ ವಿಷಯ; ಕನಕಪುರ ಕ್ಷೇತ್ರದಲ್ಲಿ ಬರಗಾಲ ಬಂದು ಹತ್ತು ಬೋರ್‌ವೆಲ್ ಹಾಕಿಸಲು ರೆವಿನ್ಯೂ ಸೆಕ್ರೆಟರಿ ಬಳಿ ಶಾಸಕರು ದೀನವಾಗಿ ಬೇಡಿಕೊಳ್ಳುವ ಪರಿಸ್ಥಿತಿ; ಅಧಿಕಾರಿಗಳ ಮೇಲೆ ಸರ್ಕಾರದ ಹಿಡಿತವಿಲ್ಲದಿರುವುದು; ಜನರ ಕಷ್ಟವನ್ನು ಮುಖ್ಯಮಂತ್ರಿಯವರಿಗೆ ವಿವರಿಸಿ 25 ಲಕ್ಷರೂ ಬಿಡುಗಡೆಗೆ ವಿನಂತಿಸಿದಾಗ, ಬಿಡುಗಡೆ ಮಾಡಲು ಫೈನಾನ್ಸ್ ಸೆಕ್ರೆಟರಿಯವರು ತುರ್ತಾಗಿ ರಿಲೀಸ್ ಮಾಡಿದ್ದು; ಸರ್ಕಾರವು ಬರಗಾಲವನ್ನು ಎದುರಿಸಲು ವಿಫಲವಾಗಿರುವುದು, ಕುರಿತೆಲ್ಲ ಹೇಳಿದರು.

ಶ್ರೀ **ಆರ್.ವಿ.ದೇಶಪಾಂಡೆ** ಅವರು : ಉತ್ತರ ಕನ್ನಡ ಜಿಲ್ಲೆಯಲ್ಲಿ ಕೆರೆಕೆಲಸಗಳನ್ನು ಗುಣಮಟ್ಟದಿಂದ ಕೂಡಿರುವಂತೆ ಮಾನಿಟರಿಂಗ್ ಮಾಡಿರುವುದನ್ನು ನೋಡಲು ಸದನ ಸಮಿತಿಮಾಡಿ ಅಲ್ಲಿಗೆ ಕಳುಹಿಸಿದರೆ, ಅದು ನೋಡಿ ಮೆಚ್ಚುವ ಆಶಯವನ್ನು ವ್ಯಕ್ತಪಡಿಸಿ, ಸರ್ಕಾರ ದೊಡ್ಡ ಪ್ರಮಾಣದಲ್ಲಿ ಬಿಡುಗಡೆ ಮಾಡಿರುವ ಹಣ ಹಾಗು ಒದಗಿಸಿರುವ ಉದ್ಯೋಗಾವಕಾಶ ಕುರಿತು ಹೇಳಿದರು. ಶ್ರೀ **ವಿಶ್ವೇಶ್ವರ ಹೆಗಡೆ** ಕಾಗೇರಿ ಅವರು ಕೆಲಸ ಕಾಮಗಾರಿಗಳ ಗುಣಮಟ್ಟದ ಬಗ್ಗೆ ವಿಶೇಷ ಗಮನ ಹರಿಸುವ ಅಗತ್ಯವಿದೆ ಎಂದು ನುಡಿದರು. ಆಗ ಶ್ರೀ ದೇಶಪಾಂಡೆಯವರು ಕಾಗೇರಿಯವರ ಕ್ಷೇತ್ರದ ಬಹಳಷ್ಟು ಕೆಲಸಗಳಿಗೆ ಬರಗಾಲ ಸಂದರ್ಭದಲ್ಲಿ ಹಣ ಮಂಜೂರಾತಿ ಮಾಡಿದ್ದರೂ, ಖರ್ಚು ಮಾಡಿಲ್ಲ, ಅಕ್ಕಿ ಹಾಗು ಹಣ ವಾಪಸ್ಸು ಮಾಡಲಾಗಿದೆ ಎಂದರು. ಶ್ರೀ ಕಾಗೇರಿ ಅವರು ಪ್ರತಿಕ್ರಿಯಿಸಿ ಅಧಿಕಾರಿಗಳು ಶ್ರೀ ದೇಶಪಾಂಡೆಯವರ ಮಾತಿಗೂ ಬೆಲೆಕೊಡದೆ ಹಣವನ್ನು ಬೇರೆ ಕಡೆ ಡೈವರ್ಟ್ ಮಾಡಿರುವ ಫಲ ಅದು ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದರು. ಶ್ರೀ ದೇಶಪಾಂಡೆಯವರು : ಸ್ಪಾಟ್‌ನಲ್ಲಿಯೇ ಕೆಲಸಕ್ಕೆ ಹಣ ಮಂಜೂರಾತಿ, ಬರಗಾಲ ಪರಿಸ್ಥಿತಿ ಬಂದಾಗ ಹಣ ಬಿಡುಗಡೆ ಮಾಡಿರುವುದು, ಹಾಗೆಯೇ ಕಾಗೇರಿ ಅವರ ಕ್ಷೇತ್ರದಲ್ಲಿ ಹಣ ಮತ್ತು ಅಕ್ಕಿ ಬಿಡುಗಡೆ ಮಾಡಿದ್ದುದು ಹಾಗೂ ತಾವೇ ರಿವ್ಯೂ ಮಾಡಿದ್ದು; ಆದರೆ ಕೆಲಸಕ್ಕೆ ಕೂಲಿಕಾರ್ಮಿಕರು ಬರದಿದ್ದ ಬಗ್ಗೆ ದಾಖಲೆ ಇರುವ ಬಗ್ಗೆ ಹೇಳಿದರು.

ಶ್ರೀ **ಪಿ.ಜಿ.ಆರ್.ಸಿಂಧ್ಯ** ಅವರು ತಮ್ಮ ಮಾತನ್ನು ಮುಂದುವರಿಸಿ : ಇವತ್ತು ಉತ್ತರ ಕರ್ನಾಟಕದ ಮುಂಡರಗಿ ತಾಲೂಕಿನಲ್ಲಿ ಮಳೆ ಬೆಳೆ ಇಲ್ಲದೆ,

ವಿಮೆಗೂ ದುಡ್ಡಿಲ್ಲದಿರುವುದು, ಅಂತಾಗಿ ರೈತರು ಸಾಯುತ್ತಿರುವುದು; ಬೆಳೆ ವಿಮೆ ಒಂದು Fraud ಆಗಿರುವುದು; ವಿಮಾ ಹಾಗು ಕೃಷಿ ಇಲಾಖೆಯ ಅಸಮರ್ಪಕ ನಿರ್ವಹಣೆ; ಡ್ರೈ ಲ್ಯಾಂಡ್ ಪ್ರದೇಶದ ರೈತರಿಗೆ ಸಹಾಯಮಾಡಲು ಕ್ರಾಪ್ ಪ್ಯಾಟರ್ನ್ ಚೇಂಜ್ ಮಾಡಿ, ಅವರ ಉತ್ಪನ್ನಗಳಿಗೆ ವ್ಯಾಲ್ಯೂ ತೆಗೆದುಕೊಂಡು ವಿಮಾ ಯೋಜನೆ ಜಾರಿಗೆ ತರುವುದು; ಬಿತ್ತನೆ ಬೀಜಗಳನ್ನು ತಕ್ಷಣ ಒದಗಿಸಲು ಸಿದ್ಧವಾಗುವುದು; ಮುಂಗಾರು ಮಳೆ ಇಲ್ಲದೆ ಬಿತ್ತನೆ ಮಾಡಲಾಗಿರುವುದು; ರೈತರ ಬಗ್ಗೆ ಗಮನ ಹರಿಸಲೇಬೇಕಾದ; ಶಾರ್ಟ್‌ಟರ್ಮ್ ಕ್ರಾಪ್ಸ್ ಬಗ್ಗೆ ಕೃಷಿ ಸಚಿವರ ತುರ್ತುಗಮನ; ಗುಣಮಟ್ಟದ ಬೀಜ ಗೊಬ್ಬರ ಸರಬರಾಜಿನ ತುರ್ತು; ಮೇವು ಬ್ಯಾಂಕ್ ನಿರ್ವಹಣೆ; ರೈತರ ಬಡ್ಡಿ ವಸೂಲಾತಿಯ ಸಂಪೂರ್ಣ ರದ್ದಿಯಾತಿ; ಜಲಸಂವರ್ಧನೆ ಮಾಡುವ ಬಗ್ಗೆ ಕಾಳಜಿ; ಬೆಳೆ ವಿಮಾ ಯೋಜನೆಯ 85ಕೋಟಿ ರೂ.ಗಳ ಬಿಡುಗಡೆ; ರೈತರಿಗೆ ಕ್ರಾಪ್ ಇನ್‌ಶೂರೆನ್ಸ್ ಹಣ ನೀಡಿಕೆ; ಹಾಗೂ ಬೆಳೆವಿಮೆಯ ಹಣವನ್ನು ತಕ್ಷಣ ರಿಲೀಸ್ ಮಾಡಲು ಕ್ರಮ; ಬರಗಾಲದ ಆವರ್ತನಿಧಿ ಸೃಷ್ಟಿ ಮಾಡಲು ಶಾಶ್ವತ ಕ್ರಮ; ಶಾಶ್ವತ ನಿಧಿ ಸಂಗ್ರಹ; 67ಲಕ್ಷ ಹಸಿರು ಕಾರ್ಡ್‌ಗಳನ್ನು ಕೂಲಿ ಮಾಡುವಂಥ ಜನಕ್ಕೆ ಕೊಡುವ ಬಗ್ಗೆ; ಪ್ರತಿ ತಿಂಗಳು 10 ಕೆ.ಜಿ. ಅಕ್ಕಿ ಹಾಗು ಒಂದಿಷ್ಟು ಗೋಧಿ ಕೊಡಬೇಕೆಂಬ ಒತ್ತಾಯ; 'ಅಗ್ರಿಕಲ್ಚರಲ್ ಲೇಬರ್ಸ್ ಲಿಸ್ಟ್' ಅನ್ನು ಸೂಕ್ತವಾಗಿ ತಯಾರಿಸುವುದು ಹಾಗು ಅವರಿಗೆ ಹಸಿರು ಕಾರ್ಡುಗಳಿಗೆ ಕಾಳು ನೀಡುವ ಬಗ್ಗೆ, ಸಾಲವಸೂಲಾತಿ ನಿಲುಗಡೆ; ದಿನದಲ್ಲಿ ಕನಿಷ್ಟ 4–5 ಗಂಟೆಗಳ ಕಾಲ ವಿದ್ಯುತ್ ಸರಬರಾಜು; ಚಾತಕ ಪಕ್ಷಿಯಂತೆ ಕಾದಿರುವ ರೈತರಿಗೆ ನೆರವು ಇತ್ಯಾದಿ ವಿಷಯಗಳ ಬಗ್ಗೆ ತಿಳಿಸಿದರು.

ಈ ಚರ್ಚೆಗಳಲ್ಲಿ ಸರ್ವಶ್ರೀ ಮಲ್ಲಿಕಾರ್ಜುನ ಖರ್ಗೆ, ವೈ.ಕೆ.ರಾಮಯ್ಯ, ಎಂ.ಕೃಷ್ಣಮೂರ್ತಿ, ಶ್ರೀನಿವಾಸ ಗೌಡ ಕುದುವನಹಳ್ಳಿ, ಕೆ.ಜಯಪ್ರಕಾಶ್ ಹೆಗಡೆ, ಹೆಚ್.ಎಸ್.ಮಹದೇವ ಪ್ರಸಾದ್, ಮಾನ್ಯ ಮುಖ್ಯಮಂತ್ರಿಗಳಾದ ಎಸ್.ಎಂ.ಕೃಷ್ಣ, ಎಸ್.ಸುರೇಶ್‌ಕುಮಾರ್, ವಿ.ಪಾಪಣ್ಣ, ಡಿ.ಬಿ.ಚಂದ್ರೇಗೌಡ, ಎಂ.ಮಹದೇವ, ಬಿ.ಆರ್.ಯಾವಗಲ್, ಬಸವರಾಜ್ ಹೆಚ್.ಪಾಟೀಲ್, ಬಿ.ರಮಾನಾಥ ರೈ, ಬಿ.ಆರ್.ನೀಲಕಂಠಪ್ಪ ಅವರುಗಳು ಪಾಲ್ಗೊಂಡಿದ್ದರು. ಸನ್ಮಾನ್ಯ ಉಪಾಧ್ಯಕ್ಷರಾದ ಶ್ರೀ ಮನೋಹರ್ ಹೆಚ್.ತಹಸೀಲ್ದಾರ್ ಅವರು ಅಧ್ಯಕ್ಷಪೀಠದಲ್ಲಿದ್ದರು.

10.7.2002ರ ವಿಧಾವಸಭಾ ನಡವಳಿಕೆಗಳಲ್ಲಿ[10] ಬರಪರಿಸ್ಥಿತಿ ಕುರಿತು ನಡೆದ ಚರ್ಚೆಯಲ್ಲಿ ಶ್ರೀ **ಬಿ.ಆರ್.ಯಾವಗಲ್** ಅವರು ಪಾಲ್ಗೊಂಡು, ಕೊಡಗು,

---

10. (ವಿಧಾನಸಭಾ ನಡವಳಿಕೆಗಳು, ಸಂಪುಟ4(1–5) 10.7.2002,ಪು.329–393)

ಶಿವಮೊಗ್ಗ ಜಿಲ್ಲೆಗಳಲ್ಲೂ ಮಳೆ ಇಲ್ಲದೆ ಬರಪರಿಸ್ಥಿತಿ ಉಂಟಾಗಿದೆ. ನಮ್ಮ ಭಾಗವೂ(ಉತ್ತರ ಕರ್ನಾಟಕ) ಬರಗಾಲ ಪ್ರದೇಶ ಎನ್ನುವುದಿದೆ. ನಿರಾವರಿ ಯೋಜನೆಯಿಂದಾಗಿ ಹಲವಾರು ವರ್ಷ ಆ ನೀರನ್ನು ಬಳಸಿ ಆರ್ಥಿಕವಾಗಿ ಚೇತರಿಸಿಕೊಂಡರು ರೈತರು. ಏಕಾಏಕಿಯಾಗಿ ಮಳೆ ಇಲ್ಲದಂಥ ಪರಿಸ್ಥಿತಿಯನ್ನು ಎದುರಿಸಬೇಕಾದಾಗ ಈ ರೈತರಲ್ಲಿ ಒಂದು ವಯಸ್ಸಿನ ಜನಕೆಲಸಕ್ಕೆ ಹೋಗಲಾಗದಿದ್ದವರೂ ಕೆಲಸಕ್ಕೆ ಹೋಗಿದ್ದಾರೆ. ದನಕರುಗಳನ್ನು, ಮನೆಕೆಲಸಗಳನ್ನು ಬಿಟ್ಟು ದನಗಳನ್ನು ಹೊರಗಡೆ ಕಟ್ಟಿ ಅಲ್ಲಿದ್ದವರಿಗೆ ಹೇಳಿ, ಮನೆಯಲ್ಲಿದ್ದವರೆಲ್ಲರೂ ಹೊರಬಂದು ಕಾಳು ಕೂಲಿ ತೆಗೆದುಕೊಂಡು ಜೀವನ ಮಾಡುವ ಪರಿಸ್ಥಿತಿ ಬಂದಾಗ ಸುದೈವದಿಂದ ರೋಹಿಣಿ ಮಳೆ, ಧಾರವಾಡ ಗದಗ, ಹಾವೇರಿ, ಬೆಳಗಾವಿ ಜಿಲ್ಲೆಗಳಲ್ಲಿ ಮಳೆ ಬಂದು ರೈತರು ಹರ್ಷಚಿತ್ತರಾಗಿದ್ದರು.

ಈ ಮಳೆಯಾದರೆ ವಿಶೇಷವಾಗಿ ಅಲ್ಪಕಾಲಾವಧಿ ಬೆಳೆ-ಅಲ್ಪಕಾಲಾವಧಿ ಬೆಳೆಗಳಾದ ಹೆಸರು, ಶೇಂಗಾ ಇವುಗಳಿಂದ ಹೆಚ್ಚು ಬೆಳೆ ಬರುತ್ತದೆ. ಹೆಸರು ಈ ದೃಷ್ಟಿಯಿಂದ ಒಂದೂವರೆ ತಿಂಗಳಲ್ಲಿ ಬೆಳೆ ಕೊಟ್ಟು ಫಲಬಂದ ಮೇಲೆ 2ತಿಂಗಳೊಳಗೆ ಇನ್ನೊಂದು ಪೀಕು ಹಾಕಬಹುದಾದ ಸನ್ನಿವೇಶ. ಇದು ರೈತರಿಗೆ ಅನುಕೂಲ. ಈ ಮಳೆ ಆಸರೆಯೆಂದು 200-300ರೂ ಖರ್ಚುಮಾಡಿ ಬೀಜ ತಂದು ಬಿತ್ತಿದರು. ಸಾಮಾನುಗಳನ್ನು ಒತ್ತೆ ಇಟ್ಟು, ಸಾಲಪಡೆದು, ದೊಡ್ಡಬಡ್ಡಿ ಸಾಲ ಪಡೆದು ಕ್ರಿಮಿನಾಶಕಗಳನ್ನು ತಂದು, ಅಲ್ಪಸ್ವಲ್ಪ ಮಳೆಯಾಗಿ ಬಿತ್ತನೆ ಮಾಡಿದ್ದರು. ಆದರೆ ಮಳೆ ಬಾರದೆ ಬೆಳೆ ಒಣಗುತ್ತಿದೆ. ಹೋದ ವರ್ಷದಂತೆ ಬರುವ ವರ್ಷವೂ ಮಳೆ ಆಶಾದಾಯಕವಾಗಿಲ್ಲವೆನ್ನುವಂತಿದೆ. ಒಂದು ರೀತಿಯಲ್ಲಿ ಮಳೆ ಬಂದರೂ (ಕೆಲವೆಡೆ ಅತಿವೃಷ್ಟಿ) ನಷ್ಟ, ಮಳೆ ಆಗದಿದ್ದರೂ (ಅನಾವೃಷ್ಟಿ) ನಷ್ಟವೆನ್ನುವಂತಾಗಿದೆ. ಜಲಾಶಯಗಳ ನೀರಿನಿಂದ ಬರಿ 34 ದಿವಸ ಮಾತ್ರ ನೀರು ಕೊಡಲು ಸಾಧ್ಯವಾಗಿ, ಒಂದು ಬೆಳೆಗೂ ಅದು ಸಾಕಾಗಲಿಲ್ಲ, ಎಂದು ಹೇಳಿದರು. ಹಾಗು ಬಿತ್ತನೆ ಬೀಜದ ಅಭಾವ, 50ಪರ್ಸೆಂಟ್ ಸಬ್ಸಿಡಿ ಮೇಲೆ ಸರ್ಕಾರ ಕೊಟ್ಟ ಬೀಜದಿಂದ ಭತ್ತ, ಹೆಸರು ಹಾಕಿದರೂ ನಾಶವಾದ ವಿಷಯ, ಅಲ್ಪಸ್ವಲ್ಪ ಮಳೆ ಬಂದರೆ ಬೆಳೆಯಬೇಕಾದ ಬೆಳೆಗಳ ಕುರಿತ ತಿಳುವಳಿಕೆ ನೀಡುವ ವ್ಯವಸ್ಥೆ, ಕೃಷಿ ಕಾರ್ಮಿಕರಿಗೆ ಕೆಲಸ, ರೈತರಿಗೆ ಸಾಲದ ವ್ಯವಸ್ಥೆ, ಸಾಲನೀಡುವ ಬ್ಯಾಂಕ್‌ಗಳ ಪುನಶ್ಚೇತನ, ರೈತರಿಗೆ ಕೃಷಿ ಕುರಿತು ಸೂಕ್ತ ತರಬೇತಿ, ಬೆಳೆವಿಮೆ ಇತ್ಯಾದಿ ಕುರಿತೆಲ್ಲ ವಿಷಯಗಳನ್ನು ಮಂಡಿಸಿದರು.

ಶ್ರೀ **ಕೆ.ಶ್ರೀನಿವಾಸಗೌಡ** ಅವರು ಮಾತನಾಡುತ್ತ : ಅತಿವೃಷ್ಟಿ, ಅನಾವೃಷ್ಟಿ ಸಂದರ್ಭದಲ್ಲಿ ಬೆಳೆಗಳಿಗೆ ಬೆಲೆ ದೊರಕದಿದ್ದಾಗ ಹುಟ್ಟಿಕೊಂಡ ಆವರ್ತನಿಧಿ, ಅನಾವೃಷ್ಟಿಯ ಸಂದರ್ಭದಲ್ಲಿ ವೈಜ್ಞಾನಿಕವಾಗಿ ಮಳೆ ಬರುವಂತೆ ಉಪ್ಪು ಚೆಲ್ಲಿದ ಪ್ರಯತ್ನ ಮಾಜಿ ಮುಖ್ಯಮಂತ್ರಿ ಗುಂಡೂರಾಯರ ಕಾಲದಲ್ಲಿ ನಡೆದ ಪ್ರಯತ್ನ; ಮಳೆ ಬರಿಸುವಲ್ಲಿ ಪ್ರಯತ್ನಿಸಿರುವ ಜಪಾನ್ ಟೆಕ್ನಾಲಜಿ, ಬರಪರಿಹಾರಕ್ಕೆ ಸರ್ಕಾರದಿಂದ ಪ್ರಯತ್ನವಾಗಿ ರೈತರಿಗೆ ತೊಂದರೆ ನಿವಾರಣೆ, ಬೆಳೆ ವಿಮೆ ಚಂದಾದಾರ ರೈತರಿಗೆ ಹಣ ನೀಡಿ ಪರಿಹಾರ, ಹುಣಸೆ ಮಾವಿನ ಫಸಲಿಗೆ ಬಿದ್ದು ಹೋದ ಬೆಲೆ, ತೆಂಗಿಗೆ ತಗುಲಿದ ನುಸಿರೋಗ, ಚೀನಾದ ರೇಷ್ಮೇ ಆಮದಿನಿಂದಾಗಿ ರೇಷ್ಮೆಬೆಳೆಗಾರರ ಪರಿಸ್ಥಿತಿ ಹಾಗು ರೇಷ್ಮೆ ಬೆಲೆ ಬೆಳೆಕುಸಿತ, ತತ್ಫಲವಾಗಿ ಕೋಲಾರ ಜಿಲ್ಲೆಯಲ್ಲಿ ರೇಷ್ಮೇ ಬೆಳೆ ರೈತರು ಸಾಮೂಹಿಕವಾಗಿ ಆತ್ಮಹತ್ಯೆ ಮಾಡಿಕೊಳ್ಳುವ ಪ್ರಯತ್ನ ಹಾಗು ಅದನ್ನು ತಡೆಗಟ್ಟಲು ಕೈಗೊಳ್ಳಬೇಕಾದ ಕ್ರಮದ ಕುರಿತೆಲ್ಲ ವಿಚಾರ ಮಾಡಿದರು.

ಶ್ರೀ **ಪಿ.ಜಿ.ಆರ್.ಸಿಂಧ್ಯ** ಅವರು, ರೇಷ್ಮೆ ಆಮದು ಸಮಸ್ಯೆಯ ಸಂಬಂಧದಲ್ಲಿ ಸರ್ವಪಕ್ಷಗಳ ನಿಯೋಗವು ಪ್ರಧಾನ ಮಂತ್ರಿಗಳ ಬಳಿಗೆ ಹೋಗುವ ವಿಷಯ, ರೇಷ್ಮೆ ಗೂಡಿಗೆ ಬೆಂಬಲಬೆಲೆ, ಬಾಂಗ್ಲಾದಿಂದ ಬರುತ್ತಿರುವ ರೇಷ್ಮೆ, ಕಳ್ಳಸಾಗಾಣಿಕೆ ರೇಷ್ಮೆಗೆ ತಡೆ, ಕುರಿತೆಲ್ಲ ವಿವರಿಸಿ ಸಲಹೆಗಳನ್ನಿಟ್ಟರು. ಶ್ರೀ ಕೆ.ಶ್ರೀನಿವಾಸಗೌಡರು, ತಮ್ಮ ಮಾತನ್ನು ಮುಂದುವರಿಸಿ, ರೇಷ್ಮೆಯು ರೈತ ಬೆಳೆಯುವಂಥ ಗೂಡು ಆದಕಾರಣ, ಬೇರೆ ಬೆಳೆಗಳಿಗೆ ಮಾರ್ಕೆಟ್ ಇಂಟರ್‌ವೆನ್‌ಷನ್ ಮಾಡಿದಂತೆ ಈ ಬೆಳೆಗೂ ಮಾರ್ಕೆಟ್ ಇಂಟರ್‌ವೆನ್‌ಷನ್ ಮಾಡಬೇಕು. ರೇಷ್ಮೆ ಮಾರುಕಟ್ಟೆಗಳಿಗೆ ನೇಮಕವಾದ ಆಫೀಸರುಗಳು ರೇಷ್ಮೆ ಮಾರುಕಟ್ಟೆ ಸಿಸ್ಟಮ್ ಅನ್ನೆ ಹಾಳುಮಾಡಿದರು, ಎಂದೆಲ್ಲ ಹೇಳಿದಾಗ ಮಾನ್ಯ ಸಚಿವ ಶ್ರೀ ಎಂ.ಮಹದೇವ್ ಅವರು ಹೀಗೆ ಪೋಸ್ಟ್ ಮಾಡಿರುವುದರಿಂದ ಮಾರುಕಟ್ಟೆಗಳಲ್ಲಿ ಆಗುತ್ತಿದ್ದ ಶೋಷಣೆ, ದಾಂಧಲೆ ತಪ್ಪಿದೆ, ಎಂದರು. ಎನ್‌ಫೋರ್ಸ್‌ಮೆಂಟ್ ಸಿಬ್ಬಂದಿಯನ್ನು ಕಡಿಮೆ ಮಾಡಲಾಗಿದೆಯೇ ವಿನಾ ಪೂರ್ಣವಾಗಿ ತೆಗೆದಿಲ್ಲ, ಎಂದಾಗ ಶ್ರೀ ಕೆ.ಶ್ರೀನಿವಾಸಗೌಡರು, ಕೋಲಾರದಲ್ಲಿ ಚೆನ್ನಯ್ಯರಂಗಮಂದಿರದಲ್ಲಿ ರೈತರು ಸೇರಿ ಗಲಾಟೆ ಮಾಡಿದ ದಿವಸ, ಅದನ್ನು ವಿತ್‌ಡ್ರಾ ಮಾಡುತ್ತೇನೆ ಎಂದಿರಿ, ಎಂದು ಹೇಳಿ ರೇಷ್ಮೆ ಬೆಳೆಗಾರರಿಗೆ ತೊಂದರೆ ಆಗಿದೆ ಎಂದಾಗ ಶ್ರೀ ಮಹದೇವ್ ಅವರು ರೈತರಿಗೆ ತೊಂದರೆ ಆಗಿಲ್ಲ ಎಂದು ಸಮರ್ಥನೆ ಮಾಡಿಕೊಂಡರು. ಸಭಾಧ್ಯಕ್ಷರು, ಉಭಯತ್ರಯರಿಗೆ ಬರ ಪರಿಸ್ಥಿತಿ ಬಗ್ಗೆಯೇ ಮಾತುಗಳು ಕೇಂದ್ರೀಕೃತಗೊಳ್ಳಲು ತಿಳಿಸಿದರು.

ಶ್ರೀ **ಕೆ.ಶ್ರೀನಿವಾಸಗೌಡರು** ಮಾತನ್ನು ಮುಂದುವರಿಸಿ : ಗೂಡನ್ನು ತೆಗೆಯುವುದು, ರೇಷ್ಮೆಯನ್ನು ಕೊಳ್ಳುವುದು ಎರಡನ್ನು ಕೂಡ ಮಾರ್ಕೆಟ್ ಇಂಟರ್‌ವೆನ್‌ಷನ್ ಸ್ಕೀಮ್ ವ್ಯಾಪ್ತಿಗೆ ತಂದರೆ ಮಾತ್ರ ರೈತರು ಬದುಕುತ್ತಾರೆ. ಇಲ್ಲವೆಂದರೆ ಮುಖ್ಯಮಂತ್ರಿಗಳಿಗೆ ಈಗಾಗಲೆ ಮನವಿಯಲ್ಲಿ ತಿಳಿಸಿರುವಂತೆ ಹುರಿ ಹಾಕಿಕೊಳ್ಳುವುದು ಗ್ಯಾರಂಟಿ. ಹೋದ ಬುಧವಾರ ಕೋಲಾರ ಎಲ್ಲಾ ಬಂದ್ ಆಗಿತ್ತು. ಜಿಲ್ಲಾದ್ಯಂತ ಎಲ್ಲಾಹಳ್ಳಿಗಳಲ್ಲಿಯೂ ಕೂಡ ರೇಷ್ಮೆಗೆ ಸಂಬಂಧಪಟ್ಟಂತೆ ಎಲ್ಲಾ ಚಟುವಟಿಕೆಗಳನ್ನು ಬಂದ್ ಮಾಡಲಾಗಿತ್ತು. ಇದನ್ನು ಅರ್ಥ ಮಾಡಿಕೊಂಡು ಸರ್ಕಾರ ರೈತರ ನೆರವಿಗೆ ಮಾರ್ಕೆಟ್ ಇಂಟರ್‌ವೆನ್‌ಷನ್ ಮೂಲಕ ಬರಬೇಕು. ಕೇಂದ್ರಕ್ಕೆ ನಿಯೋಗ ಹೋಗಿ ತೊಂದರೆ ಹೇಳಿಕೊಳ್ಳಬೇಕು. ಬೆಳೆದಂತ ಬೆಳೆಗಳ ಬೆಲೆ ಕುಸಿತಕ್ಕೆ ಇಟ್ಟಿರುವ ಆವರ್ತನಿಧಿಯನ್ನು ಬರಗಾಲಕ್ಕೆ ಬಳಸುವ ಯೋಜನೆ ಮಾಡಬೇಕು. ಇದಕ್ಕೆ ವೈಜ್ಞಾನಿಕ ಪರಿಹಾರ ಹುಡುಕಬೇಕು. ರೈತರ ಆತ್ಮಹತ್ಯೆಯ ಸಂದರ್ಭದಲ್ಲಿ ದುಡ್ಡು ಕೊಡದಿದ್ದರೂ, ಕನಿಷ್ಠಪಕ್ಷ ಸಾಂತ್ವನ ಹೇಳಲಿಕ್ಕಾದರೂ ಆಂಧ್ರಕ್ಕೆ ಹೋಗಿದ್ದಂತೆ ಕರ್ನಾಟಕ್ಕೆ ರಾಷ್ಟ್ರೀಯ ನಾಯಕರು ಬರಬೇಕಿತ್ತು. ಕರ್ನಾಟಕದಲ್ಲಿ 158ಜನ ರೈತರು ಆತ್ಮಹತ್ಯೆ ಮಾಡಿಕೊಂಡರೂ ಅವರಿಗೆ ಸಾಂತ್ವನ ಕೂಡ ಹೇಳಲಿಲ್ಲ. ನಾವು ಬರದ ಛಾಯೆಯಲ್ಲಿದ್ದೇವೆ. ಇವತ್ತು ರೈತರಿಗೆ ಅಸಲು ಅಥವಾ ಬಡ್ಡಿ ಮನ್ನಾ ಮಾಡುವುದಿದ್ದರೆ ಅದನ್ನು ವೈಜ್ಞಾನಿಕವಾಗಿ ಚಿಂತನೆ ಮಾಡಬೇಕು. ಕೋ ಆಪರೇಟಿವ್ ಕ್ರೆಡಿಟ್ ಸಿಸ್ಟಮ್ ಅನ್ನು ಹಾಳುಮಾಡಬಾರದು. ನಿಜವಾಗಿ ಯಾವ ರೈತನಿಗೆ ಸಾಲ ಕಟ್ಟುವುದಕ್ಕೆ ಆಗುವುದಿಲ್ಲವೋ ಅಂತಹವನಿಗೆ ಅನುಕೂಲವಾಗುವಂತೆ ಮಾಡಬೇಕು. ಬರವನ್ನು ಶಾಶ್ವತ ಪರಿಹರಿಸಲು ಟೈಮ್ ಬಾಂಡ್ ಪ್ರೋಗ್ರಾಮ್ ಹಾಕಿಕೊಂಡು ವಾಟರ್ ಮ್ಯಾನೇಜ್‌ಮೆಂಟ್ ಅನ್ನು ಸ್ಟ್ರಿಕ್ಟಾಗಿ ಮೇಂಟೇನ್ ಮಾಡಬೇಕು. ಡ್ರಿಪ್ ಇರಿಗೇಷನ್ ಅಥವಾ ಸ್ಪ್ರಿಂಕ್ಲರ್ಸ್ ಹಾಕದ ಹೊರತು ಬರವನ್ನು ನೀಗಿಸುವುದು ಸಾಧ್ಯವಿಲ್ಲ. ರೈತರಿಗೆ ಅಗತ್ಯವಾದ ಬಿತ್ತನೆ ಬೀಜದ ಪೂರೈಕೆ, ಗೊಬ್ಬರ ಪೂರೈಕೆ ಕೆಲಸಗಳನ್ನ ಆದ್ಯತೆ ಮೇರೆಗೆ ಸರ್ಕಾರ ಮಾಡಬೇಕು. ಹಾಲಿನ ಉತ್ಪತ್ತಿದಾರರಿಗೂ ಲೀಟರಿಗೆ ಬಂದ ಲಾಭದಲ್ಲಿ ಹೆಚ್ಚಿನ ಉಳಿಕೆ ಹಣವನ್ನು ತಲುಪಿಸಬೇಕು, ಎಂದೆಲ್ಲ ಬರದ ವಿಷಯದಲ್ಲಿ ಹೇಳಿ ಮಾತು ಮುಗಿಸಿದರು.

ಶ್ರೀ **ವಿಶ್ವೇಶ್ವರ ಹೆಗಡೆ ಕಾಗೇರಿ** ಅವರು ಸದ್ಯದ ಚರ್ಚೆಯನ್ನು ಸ್ವಾಗತಿಸುತ್ತ; ಕಳೆದ ವರ್ಷದ ಬರದ ಪರಿಸ್ಥಿತಿಯನ್ನು ಸರ್ಕಾರ ಎದುರಿಸಿದ ಬಗೆ ಕಂಡು ರೈತರಿಗಾಗಿರುವ ಜುಗುಪ್ಸೆ; ಸರ್ಕಾರದ ಬಗ್ಗೆ ನಿರಾಶೆಗೊಂಡು ಮಾಡಿಕೊಂಡ

ಆತ್ಮಹತ್ಯೆ; ಬೇರೆ ರಾಜ್ಯಗಳಿಗೆ ವಲಸೆ ಹೋಗಿ ಕೂಲಿಕೆಲಸಕ್ಕೆ ಅನೇಕರು ನಿಂತಿದ್ದು; ಅಂತಾಗಿ ಅವರಲ್ಲಿ ಆತ್ಮವಿಶ್ವಾಸ ತುಂಬಲು ಕೈಗೊಳ್ಳಬೇಕಾದ ಕೆಲಸ; ತೆಂಗಿಗೆ ತಾಗಿದ ನುಸಿರೋಗದಿಂದಾಗಿ ರೈತರಿಗೆ ಆದ ಆಘಾತ, ಆತ್ಮವಿಶ್ವಾಸಕ್ಕೆ ಹಾನಿ; ಸಚಿವರಿಂದ ರೈತರಲ್ಲಿ ವಿಶ್ವಾಸಮೂಡಿಸುವ ಕಾರ್ಯದಲ್ಲಿ ಲೋಪ ಹಾಗು ಬೇಜವಾಬ್ದಾರಿ ಹೇಳಿಕೆಗಳು; ಕರ್ನಾವಳಿ ಮಲೆನಾಡಿನ ಕ್ಷೇತ್ರಗಳಲ್ಲಿ ಮಳೆ ಅಭಾವದಿಂದ ನಾಟಿ ಹಾಗು ಬಿತ್ತನೆ ಕೆಲಸಕ್ಕೆ ಉಂಟಾಗಿರುವ ಸಮಸ್ಯೆಗಳು; ರೈತರಿಗೆ ಅಂತಾಗಿ ಒದಗಿರುವ ಕಷ್ಟನಿಷ್ಠೂರಗಳು; ಮೇವಿನ ಅಭಾವ; ರೈತರು ಬೆಳೆದ ಬೆಳೆಗೆ ಯೋಗ್ಯ ಬೆಲೆ ದೊರಕದ ಸಂಕಷ್ಟ; ಸಾಲವಸೂಲಾತಿ ಕ್ರಮದಲ್ಲಿ ರೈತರ ಆಸ್ತಿ ಹರಾಜು ಕ್ರಮದ ಔಚಿತ್ಯ; ಬೆಳೆವಿಮೆ ಬಗ್ಗೆ ರೈತರಿಗೆ ಹೆಚ್ಚಿನ ಜಾಗೃತಿ ಹಾಗು ವಿಶ್ವಾಸ ಮೂಡಿಸುವ ಜಾಗೃತಿ ಕಾರ್ಯಕ್ರಮ; ಆಸೀನ ರೈತ ಸಂಪರ್ಕ ಕೇಂದ್ರವಾಗದೆ ಚಲಿಸುವ ರೈತ ಸಂಪರ್ಕಕೇಂದ್ರ ನಿರ್ಮಾಣ (ಕೃಷಿ ಸಹಾಯಕರು ಹಳ್ಳಿಗಳಲ್ಲಿ ಓಡಾಡಿ ರೈತರ ಕಷ್ಟ ನಿಷ್ಠೂರಗಳನ್ನು ಕೇಳುವುದು); ರೈತರಿಗೆ ಬೇಕಾದ ಆರ್.ಟಿ.ಸಿ.ಪಡೆಯಲು ಕಂಪ್ಯೂಟರೀಕರಣದಿಂದ ನಿಗದಿ ಮಾಡಿರುವ 2ರೂ.ಗಳ ಬದಲು 15ರೂ.ಗಳಷ್ಟು ದುಬಾರಿ ಶುಲ್ಕಕ್ಕೆ ಹೆಚ್ಚಿಸಿರುವಲ್ಲಿ ರೈತರಿಗೆ ಆಗಿರುವ ತೀವ್ರತೊಂದರೆ; ದಿನಗೂಲಿ ರೈತನಿಗೆ ಅದರಿಂದಾಗಿರುವ ಕಷ್ಟ; ಬೀಜದ ಭತ್ತಕ್ಕೆ ಕ್ವಿಂಟಾಲ್ ನಿಗದಿಮಾಡಿರುವ 1200ರೂ(ಸಬ್ಸಿಡಿ ಕೊಟ್ಟಿದ್ದು ಆಗಿಯೂ) ಕೊಟ್ಟು ಕೊಳ್ಳಲು ರೈತನಿಗೆ ಅಸಾಧ್ಯವೆನಿಸಿರುವುದು; ರೈತರಿಗೆ ಈ ಕಷ್ಟಕಾಲದಲ್ಲಿ ಬೀಜವನ್ನು ಫ್ರೀಯಾಗಿ ಕೊಟ್ಟು ಸಹಾಯಮಾಡುವುದು. ಬೆಳೆ ವಿಮೆ ಕೊಡಲು ಗ್ರಾಮವನ್ನು ಕೇಂದ್ರಸರ್ಕಾರವು ಒಂದು ಯೂನಿಟ್ ಆಗಿ ಮಂಜೂರಾತಿ ನೀಡಿರುವ ಬಗ್ಗೆ ರೈತನಿಗೆ ಸ್ಪಷ್ಟನೆ ನೀಡಿ ಗೊಂದಲ ಪರಿಹರಿಸುವುದು; ರೈತರಿಗೆ ಸಮರ್ಪಕವಾಗಿ ಹೆಚ್ಚಿನ ವಿದ್ಯುತ್ ಪೂರೈಸಲು ಸರ್ಕಾರ ದೃಢವಾದ ನಿರ್ಧಾರ ತೆಗೆದುಕೊಳ್ಳಬೇಕಾದ ಅಗತ್ಯ; ಆವರ್ತನಿಧಿಯನ್ನು 100ರಿಂದ 400 ಕೋಟಿಗೇರಿಸಿ ಅದನ್ನು ಬಲಪಡಿಸುವ ಬಗ್ಗೆ ಕ್ರಮ; ರೈತನಿಗೆ ಕ್ರಾಪ್‌ಪ್ಯಾಟ್ರನ್ ಬಗ್ಗೆ ವಿಶೇಷ ಅರಿವು ಮೂಡಿಸುವಂಥ ಸಾಮೂಹಿಕ ಜವಾಬ್ದಾರಿ– ಇಷ್ಟು ಇಂಚು ಮಳೆ ಬಿದ್ದರೆ ಇಂಥ ಬೆಳೆ ನಾನು ಬೆಳೆಯಬಹುದು ಎಂದು ರೈತರಿಗೊದಗಬೇಕಾದ ತಿಳುವಳಿಕೆ; ಎಪಿಎಂಸಿಯಲ್ಲಿ ವೆಬ್‌ಸೈಟ್‌ನಲ್ಲಿ ಆನ್‌ಲೈನ್ ಕನೆಕ್ಷನ್ ಕೊಟ್ಟು ಜಗತ್ತಿನ ಯಾವ್ಯಾವ ದೇಶಗಳಲ್ಲಿ ಯಾವ್ಯಾವ ಬೆಳೆ ಯಾವ್ಯಾವ ರೇಟಿಗೆ ಮಾರುತ್ತಿದ್ದಾರೆ ಎಂಬ ಚಿತ್ರವನ್ನು ರೈತರಿಗೆ ನೀಡುವುದು; ರೈತರಿಗೆ ಹವಾಮಾನದ ಕುರಿತು ಸೂಕ್ತ ತಿಳುವಳಿಕೆ (ಅತಿವೃಷ್ಟಿ ಬರಗಾಲದ ಕಾರಣ) ಯನ್ನು ಕೊಡಬೇಕಾದ ಹವಮಾನದ ಇಲಾಖೆ[illegible] ಕುರಿತೆಲ್ಲ ವಿವರವಾಗಿ ವಿಷಯಮಂಡನೆ ಮಾಡಿದರು.

ಶ್ರೀ ಸಿ.**ಗುರುಸ್ವಾಮಿ** ಅವರು ರೈತರ ಸಂಕಷ್ಟಗಳು, ಸಮಸ್ಯೆಗಳ ಬಗ್ಗೆ ಮಾತನಾಡುತ್ತ :ಕಳೆದ ನಾಲ್ಕು ವರ್ಷಗಳಲ್ಲಿ ರಾಜ್ಯದಲ್ಲಿ ಬಿದ್ದಂತಹ ಮಳೆಯ ಪ್ರಮಾಣವನ್ನು ಗಮನಿಸಿದರೆ, ರೈತ ಈ ವರ್ಷಗಳಲ್ಲಿ ಬೆಳದ ಬೆಳೆ ಉತ್ಪನ್ನದ ಕಾಲುಭಾಗ ಮಾತ್ರ ಇಂದು ಒದಗುತ್ತಿರುವುದು (ರೇಷ್ಮೆ, ತೆಂಗು, ಜೋಳ, ರಾಗಿ ಯಾವುದೇ ಬೆಳೆ ಪರಿಚಯವಿರಲಿ); ಬೆಲೆಯ ಪ್ರಮಾಣ ಅರ್ಥಾತ್ ಬೆಳೆದ ಬೆಳೆಗೆ ಪ್ರತಿಫಲದ ಏರಿಕೆ ಆಗದಿರುವುದು; ತತ್ಫಲವಾಗಿ ರೈತರಿಗೆ ಒದಗಿದ ದುರಂತ ಪರಿಸ್ಥಿತಿ; ಬೆಲೆಕುಸಿತ, ಸಂಕಷ್ಟ ಪರಿಸ್ಥಿತಿಯಲ್ಲಿ ರೈತ ತನ್ನ ಬೆಳೆಯ ಉತ್ಪನ್ನಕ್ಕೆ ಖರ್ಚು ಮಾಡಿದಂಥ ಹಣವನ್ನು ವಾಪಸ್ಸು ಪಡೆಯಲು ಆಗದಿರುವುದು; ರೇಷ್ಮೆ ಗೂಡಿನ ಕೆ.ಜಿ.ಬೆಲೆ 120ರೂ.ನಿಂದ 45ರೂ.ಗಳಿಗೆ ಕುಸಿತದಿಂದಾಗಿ ಖರ್ಚು ಹುಟ್ಟದಿರುವುದು; ರೈತರು ಜವಾಬ್ದಾರಿಯುತವಾಗಿ ಸಹಾಯಮಾಡಿರುವಂತೆ ಶೇ.80ರಷ್ಟು ರೈತ ಸಮುದಾಯವು ಕಷ್ಟದಲ್ಲಿರುವಾಗ ಸರ್ಕಾರ ರೈತರ ರಕ್ಷಣೆ ಬರಬೇಕಾದ್ದು; ಹಣಕಾಸಿನ ಪರಿಸ್ಥಿತಿಯನ್ನು, ವೆಚ್ಚದ ಮಿತಿ ಇಟ್ಟು, ಸುಧಾರಿಸಿದರೆ ಬರಪರಿಹಾರ ಕಾಮಗಾರಿಯ ಸಾಧ್ಯತೆ ಕುರಿತೆಲ್ಲ ವಿಷಯಗಳನ್ನು ಮಂಡನೆ ಮಾಡಿದರು.

ಶ್ರೀ **ಕೆ.ಬಿ.ಮಲ್ಲಿಕಾರ್ಜುನ** ಅವರು ಬರ ಪುನರಾವರ್ತಿತಗೊಳ್ಳುತ್ತಿರುವ ಬಗ್ಗೆ ಮಾತನಾಡುತ್ತ: ಮಳೆ ಅಭಾವ, ರೈತರಿಗಾಗಿರುವ ತೊಂದರೆ; ಬರ ಪರಿಹಾರಕ್ಕೆ ಹಣದ ನೆರವು; ಯಾವ ಕಾಮಗಾರಿಯಿಂದ ಬರದ ವಿರುದ್ಧ ರೈತರಿಗೆ ಅನುಕೂಲ; ಸರ್ಕಾರ ಬರಗಾಲ ಎದುರಿಸಲು ಕೃಷಿ ಇಲಾಖೆಯ ಮೂಲಕ ತೆಗೆದುಕೊಳ್ಳಬೇಕಾದ ಕಾರ್ಯಕ್ರಮದ ರೂಪರೇಷೆಯನ್ನು ಮಾಡದಿರುವುದು; ಬರದ ಅವಧಿಯಲ್ಲಿ ಕೈಗೊಂಡ ಕಮಿಟೆಡ್ ವರ್ಕ್ಸ್‌ಗೆ ವಿವಿಧ ಜಿಲ್ಲೆಗಳಿಗೆ ಹಣ ಬಿಡುಗಡೆ ಆಗದಿರುವುದು; ಬೀಜ ಮತ್ತು ಗೊಬ್ಬರಕ್ಕೆ ಕೈಲಿದ್ದ ಹಣಹಾಕಿ ಸದ್ಯ ಬಿದ್ದಷ್ಟು ಮಳೆಯಲ್ಲಿ ಬಿತ್ತನೆ ಮಾಡಿ ಹಣವನ್ನೆಲ್ಲ ಬಳಸಿಬಿಟ್ಟು ಮತ್ತೆ ಹಣವಿಲ್ಲದೆ ಬೇಸಾಯವನ್ನು ರೈತರು ಮಾಡಲಿಕ್ಕೆ ಆಗದಿರುವುದು; ಈ ದಿಸೆಯಲ್ಲಿ ಸರ್ಕಾರದ ಕ್ರಮವೇನು? ರೈತರಿಗೆ ರಿಲೀಫ್ ಏನು? ಕಡಿಮೆ ಅವಧಿಯಲ್ಲಿ ಬೆಳೆ ಬರತಕ್ಕಂಥ ರಾಗಿಯ ಅಥವಾ ಜೋಳದ ಬೀಜ ಅಥವಾ ಭತ್ತವನ್ನು ರೈತರಿಗೆ ಕೊಡಬಹುದಾದ ಬಗ್ಗೆ ಸರ್ಕಾರದ ಚಿಂತನೆ; ತೆಂಗಿನ ಮರಕ್ಕೆ ನುಸಿರೋಗ ಬಂದು ಒಣಗಿಹೋಗುತ್ತಿರುವಲ್ಲಿ, ಸರ್ಕಾರ ಔಷಧಿಯನ್ನು ಸಿಂಪಡಿಸಿದರೂ ಅಂದರೆ ಮಾನೋಕ್ರೋಟೋಪಾಸ್ ಔಷಧಿ ಪ್ರಯೋಜನವಾಗದಿರುವುದು; ಕೃಷಿ ಸಚಿವರು ತಮ್ಮ ತೆಂಗಿನ ತೋಟಗಳಿಗೆ ಆ

ಔಷಧಿಯನ್ನು ಹಾಕದೆ ರೈತರಿಗೆ ಮಾತ್ರ ಆದೇಶಿಸಿರುವುದು; ಬರಗಾಲದಲ್ಲಿ ತೆಂಗಿಗೂ ಬೆಲೆ ಇಲ್ಲದೆ, ತೆಂಗಿನ ಗಿಡಗಳು ಬಿದ್ದು ಹೋಗುತ್ತಿರುವಲ್ಲಿ ರೈತರ ಬದುಕಿನ ಪ್ರಶ್ನೆ; ತೋಟಗಾರಿಕೆ ಇಲಾಖೆಯಲ್ಲಿ ನುಸಿರೋಗದ ಬಗ್ಗೆ ಸರ್ಕಾರದ ಸ್ಪಷ್ಟ ನಿಲುವಿನ ಕುರಿತು ವಿವರಣೆಯ ಅಗತ್ಯ; ಅತೀ ತುರ್ತಾಗಿ ಸರ್ಕಾರ ಒದಗಿಸಬೇಕಾದ ಶಾರ್ಟ್‌ಟರ್ಮ್ ಸೀಡ್ಸ್; ಇತ್ಯಾದಿಗಳ ಬಗ್ಗೆ ಮಾತನಾಡಿ ಸರ್ಕಾರ ಸೂಕ್ತ ಕ್ರಮ ತೆಗೆದುಕೊಳ್ಳಬೇಕು ಎಂದು ಹೇಳಿ ತಮ್ಮ ವಿಷಯವನ್ನು ಮುಕ್ತಾಯಗೊಳಿಸಿದರು.

ಶ್ರೀ **ಸುಭಾಷ್ ಕಲ್ಲೂರ್** ಅವರು ರಾಜ್ಯದ ಕೊನೆಯ ಜಿಲ್ಲೆ ಬೀದರ್ ಜಿಲ್ಲೆಯ ರೈತರು ಗ್ರಾಮಗಳಲ್ಲಿ ಎದುರಿಸುತ್ತಿರುವ, ನೀರು, ಮೇವು, ವೈದ್ಯಕೀಯ ವ್ಯವಸ್ಥೆಯ ಸಮಸ್ಯೆಗಳನ್ನು ಕುರಿತು ಹೇಳಿದರು. ಬೀದರ್ ಜಿಲ್ಲೆಯಲ್ಲಿ ತೆಂಗು, ರಾಗಿ, ಬೆಳೆಯುವುದಲ್ಲದೆ, ಉದ್ದು, ಎಳ್ಳು, ಹೆಸರು, ಶೇಂಗಾ, ಕಬ್ಬು ಇತ್ಯಾದಿ ಬೆಳೆಗಳನ್ನು ಬಿತ್ತನೆ ಮಾಡುವಲ್ಲಿ, ಅದಕ್ಕಾಗಿ ಜಿಲ್ಲೆಗೆ ಕೊಡಬೇಕಿದ್ದ 100ಕೋಟಿ ಪ್ಯಾಕೇಜ್ ಬಗ್ಗೆ ಸರ್ಕಾರದ ನಿರ್ಲಕ್ಷ್ಯ; ಬೆಳೆ ವಿಮೆಯ ಹಣಕ್ಕೆ ರೈತರ ಕೋರಿಕೆ; ಕಾರಂಜಿಡ್ಯಾಮ್ ಕೆಲಸ ಪೂರ್ಣಗೊಳಿಸಬೇಕಾದ ಕಾರ್ಯ; ಕುರಿತು ಹೇಳಿದರು. ಆಗ ಮಾನ್ಯ ಸಚಿವರಾದ ಶ್ರೀ **ಬಸವರಾಜ ಹೆಚ್.ಪಾಟೀಲ್** ಅವರು ಕಾರಂಜಿ ಡ್ಯಾಮ್ ಯೋಜನೆಗೆ ಖರ್ಚಾಗಿರುವ ಮೂರುಕೋಟಿ, ಅಗತ್ಯವಿರುವ ನೂರುಕೋಟಿ, ಕೇಂದ್ರಕ್ಕೆ ಆ ಬಗ್ಗೆ ಹೋಗಿರುವ ಪ್ರಪೋಸಲ್, ಅಧಿಕಾರಿಗಳು ತಿಳಿಸಿರುವಂತೆ 15ಕಿ.ಮೀ ರೈಟ್ ಬ್ಯಾಂಕ್ ಕೆನಾಲ್ ಕೆಲಸ ಮಾತ್ರ ಉಳಿದಿದ್ದು, ಬೇರೆಲ್ಲಾ ಕಾರಂಜಿ ಪ್ರಾಜೆಕ್ಟ್ ಕೆಲಸ ಪೂರ್ತಿಯಾಗಿರುವುದು. ಈ ವಿಷಯಗಳನ್ನು ಮಾನ್ಯ ಶಾಸಕರು ಹಾಗು ಜನತೆಗೆ ತಿಳಿಯಬೇಕೆಂದು ಇಲ್ಲಿ ಹೇಳಿದ್ದೇವೆ, ಎಂದು ನುಡಿದರು.

ಶ್ರೀ **ಸುಭಾಷ್ ಕಲ್ಲೂರ್** ಅವರು ತಮ್ಮ ಮಾತನ್ನು ಮುಂದುವರಿಸಿ, 30ವರ್ಷಗಳಿಂದ ಬಾಕಿ ಇದ್ದ ಈ ದೊಡ್ಡ ಪ್ರಾಜೆಕ್ಟ್ ಬೀದರ್ ಜಿಲ್ಲೆ ರೈತರಿಗೆ ಈಗಲಾದರೂ ಪೂರ್ಣಗೊಳ್ಳುತ್ತಿದೆ ಎಂದರೆ ಸ್ವಾಗತಾರ್ಹ, ಈ ಕಷ್ಟಕಾಲದಲ್ಲಿ ರೈತರಿಗೆ ಸಹಾಯವಾಗದಿದ್ದರೆ ಅವರು ನಮ್ಮ ಕ್ಷಮಿಸುವುದಿಲ್ಲ ಎಂದರು. ನಂತರ ಜಿಲ್ಲೆಯ ಏಕಮಾತ್ರ ಸಹಕಾರಿ ಸಕ್ಕರೆ ಕಾರ್ಖಾನೆ ಇದ್ದು ರೈತರು ಅದಕ್ಕೆ ಕೊಟ್ಟ ಸುಮಾರು 8ಕೋಟಿ 62ಲಕ್ಷರೂ. ಮೌಲ್ಯದ ಕಬ್ಬಿನ ಹಣ ಪಾವತಿಯಾಗದಿರುವುದು; ಎಕ್ಸ್‌ಪಾನ್‌ಷನ್ ಡಿಪಾಸಿಟ್ ಅನ್ನು ಕಾರ್ಖಾನೆ ತೆಗೆದುಕೊಂಡು, ಇಂಟ್ರೆಸ್ಟ್ ಮಾತ್ರ ಕೊಟ್ಟು ಕ್ಯಾಪಿಟಲ್ ಕೊಟ್ಟಿಲ್ಲದಿರುವುದು (ಸುಮಾರು 2ಕೋಟಿರೂ.ಗಳು); ಇದನ್ನೆಲ್ಲ ಕೊಟ್ಟು ರೈತರ ಕಷ್ಟಕ್ಕೆ ಬರಗಾಲದಲ್ಲಿ ನೆರವಾಗಬೇಕಾಗಿರುವುದು; ಇಲ್ಲವಾದರೆ

ಕೆಟ್ಟ ಪರಿಸ್ಥಿತಿ ನಿರ್ಮಾಣವಾಗಿ ಅಲ್ಲೋಲ ಕಲ್ಲೋಲ ವಾತಾವರಣ ಉಂಟಾಗಿ ರೈತರು ಬೀದಿಗಿಳಿದು ಹೋರಾಟ ಮಾಡುವಂತ ಪರಿಸ್ಥಿತಿ; ಹಳೇಬಾಕಿ ಕನಿಷ್ಟ 2ಕೋಟಿ ಕೊಟ್ಟರೂ ರೈತರಿಗೆ ಆಗುವ ಸಂತೋಷ; ಬಿಎಸ್ಸೆನ್ ಕೈಗಾರಿಕೆ ಯವರು (ಸಕ್ಕರೆ ಕಾರ್ಖಾನೆ) ಕಬ್ಬನ್ನು ಸಕ್ಕರೆ ಮಾಡಿ, ಮಾರಿ ಹಣ ಪಡೆದೂ ರೈತರಿಗೆ ಕೊಡಬೇಕಾದ ಹಣವನ್ನು ಕೊಡದಿರುವುದು; ರೈತರಿಗೆ ಬೆಳೆ ವಿಮಾ ಹಣವನ್ನು ಕೊಡದಿರುವುದು; ಕುರಿತೆಲ್ಲ ವಿಷಯವನ್ನು ಮಂಡಿಸಿ ರೈತರಿಗೆ ಬೇಗನೆ ಎಲ್ಲ ಬಾಕಿ ಹಣವನ್ನು ಕೊಡತಕ್ಕಂಥ ವ್ಯವಸ್ಥೆ ಮಾಡಬೇಕೆಂದು ಹೇಳಿ ಮಾತನ್ನು ಮುಕ್ತಾಯಗೊಳಸಿದರು.

ಶ್ರೀ **ಹೆಚ್.ಎಸ್.ಮಹದೇವ ಪ್ರಸಾದ** ಅವರು : ಗುಂಡ್ಲುಪೇಟೆ ಪ್ರದೇಶದಲ್ಲಿ ಎದುರಿಸಬೇಕಾದ ಶಾಶ್ವತ ಬರಗಾಲ, ಜೊತೆಗೆ ಅಲ್ಲಿಯ ಆಗಾಗಿನ ತೀವ್ರ ಬರಗಾಲ, ಮುಂಗಾರುಮಳೆ ಪೂರ್ಣಬಾರದೆ 40 ಸಾವಿರ ಹೆಕ್ಟೇರ್ ಭೂಪ್ರದೇಶದಲ್ಲಿ ಬಿತ್ತಿದ 30ಸಾವಿರ ಹೆಕ್ಟೇರ್ ಪ್ರದೇಶದ ಬಿತ್ತನೆ ನಾಶವಾಗಿ ರೈತರು ಕಂಗಾಲಾಗಿರುವುದು; ಚಾಮರಾಜನಗರ ಜಿಲ್ಲೆಯಲ್ಲಿ 1ಲಕ್ಷ 31ಸಾವಿರ ಹೆಕ್ಟೇರ್ ಪ್ರದೇಶದಲ್ಲಿ ಕೇವಲ 48ಸಾವಿರ ಹೆಕ್ಟೇರ್ ಪ್ರದೇಶದ ಬಿತ್ತನೆ ಕಾರ್ಯವಾಗಿರುವುದು; ಇದ್ದ ಅಲ್ಪಸ್ವಲ್ಪ ಆದಾಯದ ಹಣವನ್ನು ಬಿತ್ತನೆ ಕಾರ್ಯಕ್ಕೆ ತೊಡಗಿಸಿ ಕೈಬರಿದು ಮಾಡಿಕೊಂಡಿರುವ ರೈತರಿಗೆ ಬಿತ್ತನೆ ವಿಫಲವಾಗಿರುವುದು; ಬೆಳೆ ವಿಮೆಯೋಜನೆಯಲ್ಲಿ ಪಾಲ್ಗೊಂಡೂ, ರೈತರಿಗೆ ಬೆಳೆ ವಿಮೆಹಣ ಒದಗಿಲ್ಲದಿರುವುದು (ವಿಶೇಷತಃ ಸಣ್ಣ ಮತ್ತು ಅತಿ ಸಣ್ಣ ರೈತರಿಗೆ); ವಿಮಾಹಣ ಬಂದಿದ್ದರೂ ರೈತರು ಬ್ಯಾಂಕುಗಳಿಗೆ ಹೋಗಿ ಪಡೆದುಕೊಳ್ಳಲು ಮಾಹಿತಿಯನ್ನು ಕೃಷಿ ಇಲಾಖೆ ತಿಳಿಸಿಲ್ಲದಿರುವುದು, ಹಿಗಾಗಿ ರೈತರಿಗೆ ಉಂಟಾಗಿರುವ ಗೊಂದಲ; ರೈತರು ಸ್ವಂತ ಆಸಕ್ತಿಯಿಂದ ಬೆಳೆದಿರುವ ಕೆಲವೊಂದು ಕಮರ್ಷಿಯಲ್ ಕೃಷಿ ಉತ್ಪನ್ನ , ಬೆಳೆಗಳಿಗೂ ಇನ್ಶೂರೆನ್ಸ್ ಅಪ್ಲೈ ಆಗತಕ್ಕಂಥ ವ್ಯವಸ್ಥೆ ಮಾಡಬೇಕಿರುವುದು; ಕ್ರಾಪ್ ಇನ್ಶೂರೆನ್ಸ್‌ನಲ್ಲಿ ಕಳೆದ 5ವರ್ಷದಲ್ಲಿ ಕ್ರಾಪ್ ಪ್ಯಾಟರನ್‌ನಿಂದ ಎಷ್ಟು ಯೀಲ್ಡ್ ಬಂದಿದೆ ಎನ್ನುವಂಥ ಆವರೇಜ್ ಲೆಕ್ಕ ಹಾಕುವಲ್ಲಿ ನಾಲ್ಕೈದು ವರ್ಷಗಳ ಅಭಾವ, ಬರಗಾಲದ ಪರಿಸ್ಥಿತಿಯಲ್ಲಿ ಆ ಬಗೆಯ ಲೆಕ್ಕದಲ್ಲಿ ಇರುವ ನ್ಯೂನ್ಯತೆಗಳು, ರೈತರಿಗೆ ಅಂತಾಗಿ ಅನುಕೂಲ ರೀತಿಯಲ್ಲಿ ಇನ್‌ಶೂರೆನ್ಸ್ ಪಾಲಿಸಿ ಮಾಡುವುದು; ಬೆಳೆ ವಿಮೆಯೋಜನೆಯ ಸರಳೀಕರಣ; ರೈತಕಾಯಕ ಕೆರೆ–ಕೆರೆ ಹೂಳು ತೆಗೆಯುವ ಕಾರ್ಯದ ಅಪೂರ್ಣ ಸಿದ್ಧತೆ ಹಾಗು ಕಾರ್ಯ ಸ್ಥಗಿತ, ತೆಂಗಿನ ಮರಗಳಿಗೆ ನುಸಿರೋಗ ತಡೆಗಟ್ಟುವಲ್ಲಿ ವ್ಯವಸ್ಥೆಯ ವೈಫಲ್ಯದಿಂದ

ತೆಂಗಿನ ಬೆಳೆಗಾರರಿಗೆ ಆಗಿರುವ ತೀವ್ರ ತೊಂದರೆ; ಮಳೆ ವಿಫಲವಾಗಿ ಕೆರೆಕಟ್ಟೆಗಳಲ್ಲಿ ನೀರಿಲ್ಲದಿರುವ ಕಾರಣ, ಕಡಿಮೆ ವೆಚ್ಚದಲ್ಲಿ ಹೆಚ್ಚಿನ ಕೊಳವೆ ಭಾವಿಗಳನ್ನು ಹಾಕಿ ನೀರು ತರಿಸುವುದು; ಕುಂತೂರು ಸಕ್ಕರೆ ಕಾರ್ಖಾನೆಯಿಂದ ರೈತರಿಗೆ ಬರಬೇಕಾದ ಆರು ಕೋಟಿ ಹಣದ ಬಾಕಿ ಬರದೆ ಕಂಗಾಲಾಗಿರುವ ರೈತರು– ಈ ಕುರಿತೆಲ್ಲ ಹೇಳಿ ಸೂಕ್ತ ವ್ಯವಸ್ಥೆ ಮಾಡಬೇಕೆಂದು ಕೋರಿ ತಮ್ಮ ಮಾತನ್ನು ನಿಲ್ಲಿಸಿದರು.

ಶ್ರೀ **ಹೆಚ್.ಸಿ.ಬಸವರಾಜು** ಅವರು ಚರ್ಚೆಯಲ್ಲಿ ವಿಷಯಗಳನ್ನು ಮಂಡಿಸುತ್ತ: ಈ ಹಿಂದಿನ ಬರಗಾಲಗಳಿಗೂ ಇಂದು ಬಂದಿರುವ ಬರಗಾಲಕ್ಕೂ ಇರುವ ವ್ಯತ್ಯಾಸ, ರೈತರು ಬ್ಯಾಂಕ್ ಸಾಲ ಮಾಡಿ ಗೊಬ್ಬರ ತಂದು ಬಿತ್ತಿದ ಭೂಮಿಗೆ ಹಾಕಿ ಕೃಷಿ ಚಟುವಟಿಕೆಯಲ್ಲಿ ತೊಡಗಿದ್ದರೂ, ಬಾರದ ಮಳೆಯಿಂದಾಗಿ ಹಾನಿಗೊಂಡ ಬೆಳೆಯಿಂದಾಗಿ ರೈತರ ಪರಿಸ್ಥಿತಿ; ಸರ್ಕಾರ ಅವರ ನೆರವಿಗೆ ಬಂದು ಸಮಸ್ಯೆ ಪರಿಹರಿಸಬೇಕಾದ ರೀತಿ; ಹೊಗೆಸೊಪ್ಪಿನ ರೈತರಿಗೆ ಕಮರ್ಷಿಯಲ್ ಕ್ರಾಪ್ ಎಂದು ಬೆಳೆ ವಿಮೆ ಅನುಸರಣೆ ಇಲ್ಲದೆ ರೈತರಿಗೊದಗದ ಪರಿಹಾರ ಹಾಗು ಸುಂಟಿ ಬೆಳೆಗೆ ಇದು ಅನ್ವಯವಾಗಿರುವುದು; ಕಾಫಿಇನ್‌ಶ್ಯೂರೆನ್ಸ್ ರೈತರಿಗೂ ಪರಿಹಾರ ಅಲಭ್ಯವಾಗಿರುವುದು; ಇನ್‌ಡಿವಿಜುಯಲ್ ಫಾರ್ಮರ್ಸ್ ಬೆಳೆಯುವ ಎಲ್ಲಾ ಬೆಳೆಗಳಿಗೂ ಇನ್‌ಶ್ಯೂರೆನ್ಸ್ ಕವರ್ ಆಗಬೇಕಿದ್ದು, ರೈತರು ಕಟ್ಟುವ ಕಂತಿನ ಹಣವನ್ನು ರಾಜ್ಯ ಸರ್ಕಾರ ಭರಿಸುವುದು (ಸಣ್ಣ ಮತ್ತು ಅತಿಸಣ್ಣ ರೈತರಿಗೆ); ಜಮೀನು ರಿಜಿಸ್ಟ್ರೇಷನ್ ಛಾರ್ಜನ್ನು ಸಾಲ ಪಡೆಯುತಕ್ಕಂಥ ರೈತನಿಗೆ ಕಡಿಮೆಮಾಡುವುದು; ಇಂಥ ಸಂದರ್ಭದಲ್ಲಿ ಅಲ್ಪಾವಧಿ ಸಾಲವನ್ನು ದೀರ್ಘಾವಧಿ ಸಾಲವನ್ನಾಗಿ ಮಾಡುವುದು; ಕೆರೆ ಹೂಳು ತೆಗೆದು ಅಂತರ್ಜಲ ವೃದ್ಧಿಗೊಳಿಸುವುಕೆ; ಈ ದಿಸೆಯಲ್ಲಿ ತಮಿಳುನಾಡು ತಲೆ ತೂರಿಸಲೆಳೆಸುವುದರ ವಿರುದ್ಧ ಖಂಡನೆ ಮಾಡುವುದು, ಕುರಿತೆಲ್ಲ ಮಾತನಾಡಿ ತಮ್ಮ ಸಲಹೆಗಳನ್ನು ಮುಂದಿಟ್ಟರು.

ಶ್ರೀ **ರಾಜೇಂದ್ರವರ್ಮ** ಅವರು ತಮ್ಮ ವಿಷಯವನ್ನು ಮಂಡಿಸುತ್ತ: ಕಳೆದ ವರ್ಷ ಅತಿವೃಷ್ಟಿ, ಈ ವರ್ಷ ಅನಾವೃಷ್ಟಿಯಿಂದಾಗಿ ಹಾಳಾಗಿರುವ ಬೆಳೆ; ಈ ಸಂದರ್ಭದಲ್ಲಿ ರೈತನ ಸಂಕಷ್ಟಕ್ಕೆ ನಿಜವಾಗಿ ನೆರವಾಗುವುದು; ರೈತ ಹೊರರಾಜ್ಯಗಳಿಗೆ ಹೋಗಿ ಭಿಕ್ಷೆ ಬೇಡುವಂಥ ಸಂದರ್ಭ, ಜಾನುವಾರುಗಳಿಗೆ ಮೇವಿನ ಬರ; ಬೀದರ್ ಸಹಕಾರ ಸಕ್ಕರೆ ಕಾರ್ಖಾನೆಯಿಂದ ಬರಬೇಕಾದ ಬಾಕಿ ಬಗ್ಗೆ ಉಸ್ತುವಾರಿ ಸಚಿವರು ತೋರಬೇಕಾದ ಕಾಳಜಿ ಕುರಿತೆಲ್ಲ ಹೇಳಿದರು. *ಈ ದಿನದ ಚರ್ಚೆಯಲ್ಲಿ ಸರ್ವಶ್ರೀ ಶ್ರೀ ಕರಿಯಣ್ಣ, ಅರಗ ಜ್ಞಾನೇಂದ್ರ, ಕೆ.ಜಯಪ್ರಕಾಶ್ ಹೆಗಡೆ, ಡಿ.ವಿ.ಸದಾನಂದಗೌಡ, ಕಾಗೋಡು ತಿಮ್ಮಪ್ಪ, ಮಲ್ಲಿಕಾರ್ಜುನ ಖರ್ಗೆ, ಎಸ್.ಪಿ.ಮುದ್ದಹನುಮೇಗೌಡ, ಹೆಚ್.ಎಂ.ರೇವಣ್ಣ, ಎಂ.ಮಹದೇವ್, ಎಂ.ಪಿ.ಅಪ್ಪಚ್ಚುರಂಜನ್, ಡಿ.ಕೆ.ಶಿವಕುಮಾರ್, ಡಿ.ಬಿ.ಚಂದ್ರೇಗೌಡ, ಎಸ್.ಎಸ್.ಪಾಟೀಲ್ ಅವರುಗಳು ಭಾಗವಹಿಸಿದ್ದರು.*

## ರಾಜ್ಯದಲ್ಲಿ ಬರಪರಿಹಾರದ ಬಗ್ಗೆ ಮಾನ್ಯ ಕೃಷಿಸಚಿವರ ಉತ್ತರ.

ಮಾನ್ಯ ಕೃಷಿಸಚಿವರಾದ ಶ್ರೀ ವಿ.ಎಸ್.ಕೌಜಲಗಿ ಅವರು 11.7.2002ರ ವಿಧಾನಸಭಾಧಿವೇಶನದಲ್ಲಿ[11] ಕೃಷಿ ಸಂದರ್ಭದಲ್ಲಿ ರೈತರ ಸಮಸ್ಯೆಗಳ ಆದ ಚರ್ಚೆಯ ಅಂಶಗಳಿಗೆ ಉತ್ತರಿಸುತ್ತ : ನಮ್ಮ ಆರ್ಥಿಕ ಪರಿಸ್ಥಿತಿ ಮಳೆಯನ್ನು ಅವಲಂಬಿಸಿದ್ದು, ಬೆಳೆ ಹಾನಿ ತಡೆಯುವ ಬಗ್ಗೆ, ಪ್ರಯತ್ನ ಪರ್ಯಾಯಗಳನ್ನು ಹುಡುಕುತ್ತಿದ್ದೇವೆ. ಗಂಗೆಯನ್ನು ಗೋದಾವರಿಗೆ ಕೂಡಿಸಿ ನೀರಿನ ಅಭಾವ ತಡೆಯುವ ಯೋಜನೆಯೂ ಕಾರ್ಯಗತವಾಗಬೇಕಿದೆ. ಈವೊತ್ತು ಎದುರಿಸಲಾಗದ ಪರಿಸ್ಥಿತಿ ಎಂದರೆ ಪ್ರತಿವರ್ಷದ ಬರಗಾಲ. ಬರಗಾಲ ಕಾಮಗಾರಿ, ರೈತ ಕಾರ್ಮಿಕರಿಗೆ ಉದ್ಯೋಗ, ಇವಕ್ಕೆ ಬೇಡಿಕೆ ಇದೆ. ಇದಕ್ಕೆಲ್ಲ ಒಂದು ಖಾಯಂ ವ್ಯವಸ್ಥೆ ಬೇಕು. ಮಲೆನಾಡಿನಿಂದ ಬಯಲು ಸೀಮೆಯವರೆಗೆ ಮಳೆಯ ಪ್ರಮಾಣ ಬೇರೆ ಬೇರೆ ಹಂತದಲ್ಲಿರುವಲ್ಲಿ ಅದಕ್ಕನುಗುಣವಾಗಿ ಬೆಳೆಯಬೇಕಾದ ಬೆಳೆಯ ಬಗ್ಗೆ ರೈತಾಪಿ ಜನಗಳಿಗೆ ತಿಳಿಸುವ ಕಾರ್ಯ ಮಹತ್ವದ್ದಾಗಿದೆ. ಬೆಳೆದ ಬೆಳೆಗೆ ಯೋಗ್ಯ ಬೆಲೆ ಸಿಗುತ್ತಿಲ್ಲ. ಅಂತೇ ಕೃಷಿ ಆಧಾರಿತ ಔದ್ಯೋಗಿಕರಣವಾದಾಗಲೇ ರೈತರ ಬೆಳೆಗೆ ಯೋಗ್ಯ ಬೆಲೆ ಸಿಗುತ್ತದೆ. ನಿರಂತರವಾಗಿ ಕನಿಷ್ಠ ಬೆಲೆಯಾದರೂ ಸಿಗುವಂತಾಗಬೇಕು. ಗೋಕಾಕ್‌ನ ಗೋವಿನ ಜೋಳವನ್ನು ಗುಜರಾತ್ ಮುಂತಾದ ಕಡೆ ಕಳುಹಿಸುವುದನ್ನು ಬಿಟ್ಟು, ಸ್ಟಾರ್ಚ್, ಡೆಕ್ಸ್‌ಟ್ರೋಸ್ ಮಾಡಲು ಬಳಸಿರುವಲ್ಲಿ ವಿದೇಶಿ ವಿನಿಮಯ ಸಿಗುತ್ತಿದೆ. ಇದರಿಂದ ರೈತರಿಗೆ ಆತ್ಮವಿಶ್ವಾಸ ಒದಗಿ ಯೋಗ್ಯ ಬೆಲೆ ದೊರೆಯಲನುಕೂಲವಾಗುತ್ತದೆ. ಮಾನ್ಯ ಸದಸ್ಯರಿಂದ ಬಂದ ಟೀಕೆ ಟಿಪ್ಪಣಿ, ಸಲಹೆಗಳಿಗೆ ಸ್ವಾಗತವಿದೆ. ಜಲಾನಯನ ಪ್ರದೇಶಗಳಲ್ಲಿ ಬಿದ್ದ ಮಳೆಗೆ ಬ್ಯಾರೇಜುಕಟ್ಟಿ, ನೀರನ್ನು ಭೂಮಿಯಲ್ಲಿ ಇಂಗಿಸಿ ಅಂತರ್ಜಲ ಅಭಿವೃದ್ಧಿಗೆ ಕಾರ್ಯಕ್ರಮ ಕೈಗೊಳ್ಳಲಾಗಿದೆ. 175ತಾಲೂಕುಗಳ ಪೈಕಿ 120 ತಾಲೂಕುಗಳಲ್ಲಿ ಕಡಿಮೆ ಮಳೆ ಆಗಿ ಸುಮಾರು 20ಲಕ್ಷ ಹೆಕ್ಟೇರ್‌ನಲ್ಲಿ ಬಿತ್ತನೆ ಆಗಿದೆ. ಅನುಗುಣ ಯೋಜನೆಯೂ ತಯಾರಾಗಿದೆ. ಕೃಷಿ ವಿಮಾ ಯೋಜನೆ ವಿಷಯವಾಗಿ ಹೇಳಿದರೆ ಸುಮಾರು 6,11,027 ರೈತರು ಸಾಲ ಪಡೆದವರು; ಒಟ್ಟು 8,00,088 ಲಕ್ಷ ಹೆಕ್ಟೇರ್‌ಗಳಲ್ಲಿ ಬೆಳೆದಂಥ ಬೆಳೆಗೆ ವಿಮಾಕಂತನ್ನು ಕಟ್ಟಿದ್ದಾರೆ. ನಮ್ಮ ಅಂದಾಜು ಕೃಷಿ ವಿಮೆಯ ಹಣ ಸುಮಾರು 132.93ಕೋಟಿ ರೂ. ಬಾಕಿಯಲ್ಲಿ ಕೊಟ್ಟಿರುವ ಹಣ ಸುಮಾರು 55ಕೋಟಿ. ಉಳಿದದ್ದು ಕೊಡಬೇಕಿದೆ. ಅದು ತಾಲೂಕು ಮಟ್ಟದಲ್ಲಿ ಇನ್‌ಶ್ಯೂರೆನ್ಸ್ ಕಂಪೆನಿಯಿಂದ ಬ್ಯಾಂಕು, ನಂತರ ಕ್ರೆಡಿಟ್ ಸೊಸೈಟಿಯವರಿಗೆ

---

11. ವಿಧಾನಸಭಾ ನಡವಳಿಕೆಗಳು, ಸಂಪುಟ4(1–5),(11.7.2002) ಪು.566–627

ಹೋಗುವುದರಲ್ಲಿ ಆಗಿರುವ ತುಸು ವಿಳಂಬವನ್ನು ಸರಿಪಡಿಸಲಾಗುತ್ತದೆ. ರೈತರಿಗೆ ನಮ್ಮಿಂದ ಪೂರ್ಣ 132ಕೋಟಿ ರೂ. ಸಂದಾಯವಾಗುತ್ತದೆ, ಎಂದೆಲ್ಲ ಹೇಳಿದರು.

ಶ್ರೀ **ಜಗದೀಶ್ ಶೆಟ್ಟರ್** ಅವರು ಮಾತನಾಡುತ್ತ : ಮಾನ್ಯ ಸಚಿವರಿಂದ ರೈತರಿಗೆ ಏನಾದರೂ ಒಂದು ಪರಿಹಾರ ದೊರಕೀತು, ಎಂಬ ನಮ್ಮ ಕಲ್ಪನೆಗೆ ಸೂಕ್ತ ಪ್ರತಿಕ್ರಿಯೆ ದೊರೆಯಲಿಲ್ಲ. ಸರ್ಕಾರ, ಫೈನಾನ್ಷಿಯಲ್ ಪೊಜಿಷನ್ ತಿಳಿಸಿಲ್ಲ. ಆದರೆ ರೈತರಿಗೆ ಕೊಡುವಂಥ ಬೆಳೆ ವಿಮೆಹಣಕ್ಕೆ ಕೊರತೆ ಆಗಬಾರದು. ಬ್ಯಾಲೆನ್ಸ್ ಅಮೌಂಟ್ ರಿಲೀಸ್ ಮಾಡುವುದಕ್ಕೆ ಸರ್ಕಾರಕ್ಕೆ ಆಗಿರುವ ತೊಂದರೆ ಏನು? ರೈತರು ಸಂಕಷ್ಟದಲ್ಲಿರುವಾಗ ಬೆಳೆ ವಿಮೆ ಕೊಟ್ಟಿದ್ದರೆ ಅವರು ಉದ್ಧಾರವಾಗುತ್ತಿದ್ದರು. ತಮಿಳುನಾಡು, ಆಂಧ್ರದಲ್ಲಿ ಬಡ್ಡಿಮನ್ನಾ ಬಗ್ಗೆ ಘೋಷಣೆ ಆಗಿದೆ. ಇಲ್ಲಿನ ರೈತರ ಬಗ್ಗೆಯೂ ಆ ಬಗ್ಗೆ ಘೋಷಣೆ ಆಗಬೇಕು. ಸರ್ಕಾರ ಸ್ಪಂದಿಸಿಲ್ಲ. ರೈತರು ಆತ್ಮಹತ್ಯೆ ಮಾಡಿಕೊಂಡಿದ್ದಾರೆ. ಅವರಿಗೆ ಪರಿಹಾರ ಕೊಡುವ ವಿಷಯ ಸ್ಪಷ್ಟವಾಗಿಲ್ಲ. ಡಾ.ವಿರೇಶ್ ವರದಿ ಪ್ರಕಾರ ನಡೆದುಕೊಳ್ಳುತ್ತೇವೆ, ರೈತರ ಕುಟುಂಬಗಳಿಗೆ, ಆತ್ಮಹತ್ಯೆ ಮಾಡಿಕೊಂಡ ರೈತರ ಕುಟುಂಬಗಳಿಗೆ ಪರಿಹಾರಧನ ಕೊಡಲು ಆಗುತ್ತಿಲ್ಲ. ಎಂಬ ಬಗ್ಗೆಯಾದರೂ ಹೇಳಲಿ, ಎಂದು ಅಭಿಪ್ರಾಯವಿಟ್ಟರು.

ಶ್ರೀ **ವಿ.ಎಸ್.ಕೌಜಲಗಿ** ಅವರು ನುಡಿಯುತ್ತ : ಬೆಳೆ ವಿಮೆಹಣ ಕಳುಹಿಸಿರುವುದು; ವರದಿಯಾಗಿರುವ 135 ರೈತರ ಆತ್ಮಹತ್ಯೆ ಪ್ರಕರಣಗಳು; ಡಾ.ವೀರೇಶ್ ವರದಿ ಹಾಗು ಆತ್ಮಹತ್ಯೆ ಪ್ರಕರಣದ ರೈತರ ಕುಟುಂಬಗಳಿಗೆ ಪರಿಹಾರಧನ ಕುರಿತು ಕಾಬಿನೆಟ್ ಸಬ್‌ಕಮಿಟಿ ಪರಿಶೀಲನೆ; ರೈತರ ಆತ್ಮಹತ್ಯೆ ಕುರಿತು ಪರಿಶೀಲನೆ ಮಾಡಿದ ಜಂಟಿಸದನ ಸಮಿತಿಯ ವರದಿರೀತ್ಯಾ, 1997–98ನೇ ಸಾಲಿನಲ್ಲಿ ಆದ ಬೆಳೆನಷ್ಟ ಮತ್ತು ಆತ್ಮಹತ್ಯೆಯ ಸನ್ನಿವೇಶಗಳು ಸೃಷ್ಟಿಯಾಗಲು ಕಾರಣವಾದ ಒಳಗಿನ ಮತ್ತು ಹೊರಗಿನ ವಿಷಯಗಳ ಬಗ್ಗೆ ಕೂಲಂಕಷ ಅಧ್ಯಯನದ ಅಗತ್ಯ; ಸಾಮಾಜಿಕ ವಿಜ್ಞಾನಿ, ಮನೋವಿಜ್ಞಾನಿ, ಆರ್ಥಿಕ ವಿಜ್ಞಾನಿಗಳ ತಂಡದಿಂದ ಅಂಥ ಅಧ್ಯಯನ ನಡೆಸುವುದು; ಆತ್ಮಹತ್ಯೆ ಸಂದರ್ಭದ ರೈತರ ಕುಟುಂಬಕ್ಕೆ ಹೆಚ್ಚಿನ ಪ್ರಮಾಣದ ಪರಿಹಾರದ ಘೋಷಣೆಯಿಂದ ಉಂಟಾಗುವ ಅನ್ಯಪರಿಣಾಮಗಳು, ಸ್ವಾಭಿಮಾನ ಸ್ವಾವಲಂಬನೆ ಬೆಳೆಸುವ ಕಾರ್ಯಕ್ರಮಗಳ ಬಗ್ಗೆ ಹೇಳಿರುವುದು, ಇತ್ಯಾದಿ ವಿಷಯಗಳನ್ನು ವಿವರಿಸಿದರು.

ಶ್ರೀ ಜಗದೀಶ್ ಶೆಟ್ಟರ್ ಅವರು ಈ ದಿಸೆಯಲ್ಲಿ ತಮ್ಮ ಮಾತನ್ನು ಮುಂದುವರಿಸಿ: ಜಂಟಿ ಸದನ ಸಮಿತಿಯ ರೈತರ ಆತ್ಮಹತ್ಯೆಯ ಸಂದರ್ಭದ ಕುಟುಂಬಗಳಿಗೆ ತಾವೂ ಸೇರಿದಂತೆ ಇತರ ಸದಸ್ಯರೊಡನೆ ನಡೆಸಿದ ಭೇಟಿ, ನಂತರ ಸಹಕಾರಕ್ಕೆ ಸೂಚಿಸಿದ ಸಲಹೆಗಳು; ಪರಿಹಾರಧನ ನೀಡುವ ಬಗ್ಗೆ ಹೋರಾಟ ಮಾಡಿದಾಗ ಈ ಸದನ ಸಮಿತಿ ರೂಪುಗೊಂಡದ್ದು; ಡಾ.ವಿರೇಶ್ ಅಪೂರ್ಣವಾಗಿ ಮಾಡಿದ ಕುಟುಂಬಗಳ ಭೇಟಿ, ರೈತಮುಖಂಡರ ನಿಯೋಗಕ್ಕೆ ಅವರು ಗಮನ ನೀಡದ ವಿಷಯ ಹಾಗು ಅವರ ವರದಿಗೂ, ಜಂಟಿ ಸದನ ಸಮಿತಿ ವರದಿಗೂ ಇರುವ ವ್ಯತ್ಯಾಸ, ಆತ್ಮಹತ್ಯಾಪ್ರಕರಣದ ಪ್ರತಿ ರೈತ ಕುಟುಂಬಕ್ಕೂ ತಲಾ 1ಲಕ್ಷರೂ. ಪರಿಹಾರ ಧನ ನೀಡಬೇಕಾದ ಅಗತ್ಯ, ಡಾ.ವಿರೇಶ್ ಕಮಿಟಿ ರಿಪೋರ್ಟ್, ಮ್ಯಾಜಿಸ್ಟ್ರಿಯಲ್ ಎನ್‌ಕ್ವೈರಿ, ಡಿಸ್ಟ್ರಿಕ್ಟ್‌ಜಡ್ಜ್ ಎನ್‌ಕ್ವೈರಿ ನಂತರವೂ ಈಗ ಕ್ಯಾಬಿನೆಟ್ ಸಬ್–ಕಮಿಟಿ ಎಂದು ಹೇಳುತ್ತಿರುವುದು, ಇತ್ಯಾದಿ ವಿಷಯಗಳನ್ನು ವಿವರವಾಗಿ ಮಂಡಿಸಿ, ಸರ್ಕಾರ ಈ ದಿಸೆಯಲ್ಲಿ ನೀಡಿದ ಉತ್ತರ ಸರಿಯಲ್ಲ ಎಂದರು.

ಈ ಸಂದರ್ಭದಲ್ಲಿ ಮಾನ್ಯಮುಖ್ಯಮಂತ್ರಿಗಳಾದ ಶ್ರೀ **ಎಸ್.ಎಂ.ಕೃಷ್ಣ** ಅವರು ಮಾತನಾಡಿ, ಕೃಷಿ ಸಚಿವರ ಮಾತನ್ನು ವಿವರಿಸುತ್ತ ಅನುಕಂಪದ ಆಧಾರದ ಮೇಲೆ ಯಾರೆಲ್ಲ ರೈತರಿಗೆ ಉತ್ತೇಜನ ಕೊಡುವ ಬದಲು, ಅವರ ಆತ್ಮಾಭಿಮಾನ, ಸ್ವಾಭಿಮಾನಗಳಿಗೆ ಶಕ್ತಿಯನ್ನು ತಂದುಕೊಡಬೇಕೆಂಬುದಾಗಿ ಹೇಳಿ ವಿರೋಧ ಪಕ್ಷದ ನಾಯಕರು ಸದನಸಮಿತಿ ವರದಿಗೆ ಬದ್ಧರಾಗಿರುವ ಬಗ್ಗೆ ಖಚಿತ ಪಡಿಸಿಕೊಂಡರು.

ಸಚಿವ ಶ್ರೀ **ಡಿ.ಬಿ.ಚಂದ್ರೇಗೌಡ** ಅವರೂ ಕೂಡ, ಜಂಟಿ ಸದನಸಮಿತಿಯ ಶಿಫಾರಸ್ಸಿಗನುಗುಣವಾಗಿ ಫ್ಯಾಕ್ಟ್‌ಫೈಂಡಿಂಗ್ ಕಮಿಟಿಯನ್ನು ರೈತರ ಆತ್ಮಹತ್ಯೆ ಪ್ರಕರಣಗಳ ಸಂಬಂಧವಾಗಿ ಮಾಡಿ ಅದು ಕೊಟ್ಟ ವರದಿಯನ್ನು ಸರ್ಕಾರ ಅಧ್ಯಯನ ಮಾಡಲಿರುವುದರ ಬಗ್ಗೆ ಹೇಳಿದರು.

ಶ್ರೀ **ಪಿ.ಜಿ.ಆರ್.ಸಿಂಧ್ಯ** ಅವರು ಗಂಗಾ–ಗೋದಾವರಿ ನದಿಗಳ ಜೋಡಣೆ, ಬಗ್ಗೆ ಕೇಂದ್ರ ಸರ್ಕಾರದ ನಿಲುವು, ಬೆಳೆವಿಮೆ, ಜಲಾನಯನ ಪ್ರದೇಶಾಭಿವೃದ್ಧಿ, ರೈತರ ಆತ್ಮಹತ್ಯೆ ವಿಚಾರದಲ್ಲಿ ಶಾಸಕರಿಗೆ ಪರಿಹಾರ ಕೇಳುವ ನೈತಿಕ ಹಕ್ಕು; ರೈತರ ಪರವಾಗಿದ್ದ ಹಿಂದಿನ ಸರ್ಕಾರದ ನಿಲುವು ಹಾಗಾಗಿ 1ಲಕ್ಷರೂ.ಗಳ ಪರಿಹಾರವನ್ನು ರೈತರಿಗೆ ಕೊಟ್ಟಿದ್ದುದು; ಡಾ|| ವೀರೇಶ್ ವರದಿಯ ಟರ್ಮ್ ಆಫ್ ರೆಫರೆನ್ಸ್, ಸರ್ಕಾರದ ಪ್ರತಿನಿಧಿಗಳಾಗಿ ತಹಸೀಲ್ದಾರರು ಸತ್ತ ರೈತನ ಮನೆಗೆ ಹೋಗಿ ವಿಚಾರಿಸದೆ

ಪರಿಹಾರಧನಕ್ಕೆ ಅಡ್ಡಿಯಾದದ್ದು; ಆತ್ಮಹತ್ಯೆಯಲ್ಲ, ಅನ್‌ನ್ಯಾಚುರಲ್ ಡೆತ್ ಕೇಸ್ ಎಂದು ನೂರಾರು ರೈತರ ಕುಟುಂಬಗಳಿಗೆ ತಲಾ ಲಕ್ಷರೂಪಾಯಿಗಳನ್ನು ತಡೆ ಹಿಡಿಯದೆ ಅನುಕೂಲಮಾಡುವುದು; ಬಿತ್ತನೆ ಬೀಜ(ಶೇಂಗಾ)ದ ಅಭಾವ; ಷಾರ್ಟ್‌ಟರ್ಮ್ ಕ್ರಾಪ್ ಬಗ್ಗೆ ತೆಗೆದುಕೊಂಡ ಸರ್ಕಾರದ ನಿರ್ಧಾರ; ರೈತರು ಇನ್‌ಶೂರೆನ್ಸ್ ಹಣ ಕೊಟ್ಟಿರುವಲ್ಲಿ ಅವರಿಗೆ ಸಲ್ಲಬೇಕಾದ ಹಣದ ಬಿಡುಗಡೆ; ಬರ ಪರಿಹಾರ ನಿಧಿಸ್ಥಾಪನೆ ತಡೆಹಿಡಿದಿರುವ ಹಸಿರು ಕಾರ್ಡ್; ರೈತರಿಗೆ ಬಿಡುಗಡೆ ಮಾಡಬೇಕಾದ 55 ಕೋಟಿ ರೂ.ಬಾಕಿ; ಸಾಲವಸೂಲಾತಿ ನಿಲುಗಡೆ ಹಾಗು ಸಾಲದ ಬಡ್ಡಿ ಮನ್ನಾ ಕುರಿತೆಲ್ಲ ವಿಷಯ ವಿವೇಚನೆ ಮಾಡಿದರು.

ಶ್ರೀ **ಎ.ನಾಗರಾಜ್** ಅವರು ಸ್ಪಷ್ಟನೆಯೊಂದನ್ನು ಬಯಸುತ್ತ: ರೈತರು ಬೆಳೆ ವಿಮೆ ಪ್ರಯೋಜನ ಪಡೆಯಲು, ಕೋಲಾರ ಜಿಲ್ಲೆಯಲ್ಲಿ ಆಗಸ್ಟ್ ಮೊದಲವಾರದಲ್ಲಿ 15ನೇ ತಾರೀಖಿನೊಳಗೆ ಬಿತ್ತನೆ ಮಾಡುವ ಕಾರಣ ಕಟ್ ಆಫ್ ಡೇಟನ್ನು ಆಗಸ್ಟ್ 31ರವರೆಗೆ ವಿಸ್ತರಿಸಲು ಸರ್ಕಾರ, ಕೇಂದ್ರದ ಮೇಲೆ ಒತ್ತಡ ತರುವುದೇ? ಎಂದು ಕೇಳಿದರು.

ಸಚಿವ ಶ್ರೀ **ವಿ.ಎಸ್.ಕೌಜಲಗಿ** ಅವರು ಶಾಸಕರ ಪ್ರಶ್ನೆಗಳಿಗೆ ಉತ್ತರವೀಯುತ್ತ: ರೈತರಿಗೆ ತಿಂಗಳ ಕೊನೆಗೆ ಬಾಕಿ ಇರುವ ಹಣ ತಲುಪುವ ಬಗ್ಗೆ; 30ಸಾವಿರ ಕ್ವಿಂಟಾಲ್ ಬೀಜಗಳನ್ನು ಬಿತ್ತನೆಗಾಗಿ ರೈತ–ಮಿತ್ರ ಕೇಂದ್ರ ಇಟ್ಟಿದ್ದು, ಬಳಕೆಯಾಗಿರುವ ಪ್ರಮಾಣ ಕುರಿತೆಲ್ಲ ಹೇಳಿದರು.

ಶ್ರೀ **ಸಿ.ಭೈರೇಗೌಡರು,** ಬಿತ್ತನೆ ತಡವಾದ ಕಾರಣ ಸಹಕಾರ ಸಂಘಗಳಲ್ಲಿ ರೈತರಿಗೆ ಸಿಗದ ಸಾಲ; ರೈತರು ಹಾಕಿದ ಬಂಡವಾಳ ನಾಶ ಹಾಗಾಗಿ ಹಿಂದಿನ ಬಾಕಿ ಉಳಿದಿರುವುದು; ಬರಗಾಲದ ಪರಿಣಾಮಗಳು, ರೈತರಿಗೆ ತಲುಪದಿರುವ ಬೆಳೆ ವಿಮೆ ಹಣ, ತತ್ಫಲವಾಗಿ ರೈತರಿಗೆ ಸಹಕಾರ ಸಂಘ, ಬ್ಯಾಂಕು ಸಾಲ ತೀರಿಸಲಾಗದೆ ಹೋದದ್ದು; ಬಿತ್ತನೆಗೆ ಬಂಡವಾಳವಿಲ್ಲದಿರುವುದು; ರೈತರಿಗೆ ಹೇಗಾದರೂ ಮಾಡಿ ತಕ್ಷಣವೆ ಬ್ಯಾಂಕು (ಡಿ.ಸಿ.ಸಿ ಅಥವಾ ವಾಣಿಜ್ಯ ಬ್ಯಾಂಕು)ಗಳಿಂದ ಸಾಲ ಕೊಡಿಸಬೇಕು. ರೈತರಿಗೆ ಸಕಾಲದಲ್ಲಿ ಸಾಲ ಕೊಡುವುದು, ಇತ್ಯಾದಿ ವಿಷಯಗಳನ್ನು ಕುರಿತು ತಮ್ಮ ಅನಿಸಿಕೆಗಳನ್ನು ವ್ಯಕ್ತಪಡಿಸಿದರು.

ಶ್ರೀ **ಹೆಚ್.ಎಸ್.ಮಹದೇವ ಪ್ರಸಾದ್** ಅವರು ನುಡಿಯುತ್ತ, ರೈತರಿಗೆ ಕೇಂದ್ರದಿಂದ ಇನ್‌ಶೂರೆನ್ಸ್ ಹಣವು ಚೆಕ್ ಮೂಲಕ ಬಂದಿರುವ ಬಗ್ಗೆ ಅವರಿಗೆ

ತಿಳಿಸುವುದಾಗಲಿ, ಪಡೆದುಕೊಳ್ಳುವುದಕ್ಕೆ ಸೂಕ್ತವ್ಯವಸ್ಥೆ ಇಲ್ಲದಿರುವ ಕಾರಣ ಈ ದಿಸೆಯಲ್ಲಿ ಸರ್ಕಾರ ಮಧ್ಯೆ ಪ್ರವೇಶಿಸಿ ಅನೂಕೂಲ ಮಾಡಿಕೊಡಲು ಕೋರಿದರು.

ಶ್ರೀ **ಅರಗ ಜ್ಞಾನೇಂದ್ರ** ಅವರು ಬರಗಾಲದ ಕಾಮಗಾರಿ ನಿಭಾಯಿಸಲು ಸರ್ಕಾರದ ಸಿದ್ಧತೆ, ಬಿಡುಗಡೆಯಾಗದಿರುವ ಭತ್ತದ ಬೀಜ, ಕಂಪೆನಿ ಬೀಜಕ್ಕೆ ಅನಗತ್ಯವಾಗಿ ಹಣ ಸುರಿದು ಬೀಜ ಪಡೆಯುವ ಬದಲು, ರೈತರ ಬಳಿ ಇರುವ ಬೀಜದ ಮಾಹಿತಿ ಪಡೆಯುವಿಕೆ; ರೈತರಿಗೆ ಮಾನ್‌ಸೂನ್‌ಗಳಲ್ಲಿ ಬೆಳೆಯಬೇಕಾದ ಬೆಳೆಯ ಬಗ್ಗೆ ಕೃಷಿ ಸಹಾಯಕರು ಹೋಗಿ ಮಾಹಿತಿ ಕೊಡುವಿಕೆ; ಬೆಳೆ ವಿಮಾ ಹಣ ಬಿಡುಗಡೆ ಮಾಡದಿರುವುದು; ಕೇಂದ್ರವು ಕೊಟ್ಟಿರುವ ಅಕ್ಕಿಯನ್ನು ಹಳ್ಳಿಗಳಲ್ಲಿ ಬಳಕೆಗೆ ಕೊಡದಿರುವುದು ಹಾಗೂ ಅದರಿಂದ ಕೃಷಿ ಕಾರ್ಮಿಕರಿಗೆ ಆಗಿರುವ ಅನ್ಯಾಯ ಇತ್ಯಾದಿ ವಿಷಯಗಳನ್ನು ಮಂಡಿಸಿದರು. ಈ ವಿಷಯಕ್ಕೆ ಸಂಬಂಧಿಸಿದಂತೆ ಸಚಿವ ಶ್ರೀ ವಿ.ಎಸ್.ಕೌಜಲಗಿ ಅವರು ರೈತರ ಮನೆಗೆ ಮಾಹಿತಿ ಮುಟ್ಟಿಸಲು ಕೃಷಿ ಸಹಾಯಕರನ್ನು ಬಳಸಿಕೊಳ್ಳುವ ಬಗ್ಗೆ, ಭತ್ತದ ಬೀಜ ಕೊಡುವ ವ್ಯವಸ್ಥೆ ಮಾಡುವ ಬಗ್ಗೆ ತಿಳಿಸಿದರು. ಶ್ರೀ ವಿಶ್ವೇಶ್ವರ ಹೆಗಡೆ ಕಾಗೇರಿ ಅವರು ರೈತರಿಗೆ ಸಹಕಾರಿ ಸಂಘಗಳ ಮೂಲಕ ಸಹಾಯಸಿಗಬೇಕು, ಸಾಲದ ಮೇಲೆ ಬಡ್ಡಿಮನ್ನಾ ಮಾಡಬೇಕು ಎಂದರು. ಶ್ರೀ ಎಸ್.ಎಸ್.ಪಾಟೀಲ್ ಅವರು ಹೋಬಳಿವೈಸ್ ತ್ರೆಶ್‌ಹೋಲ್ಡ್ ಯೀಲ್ಡ್ ಅನ್ನು ಯಾವ ಬೆಳೆ ಬಗ್ಗೆ ಮಾಡಲಾಗಿದೆ? ಎಂದು ಪ್ರಶ್ನಿಸಿದಾಗ ಶ್ರೀ ಕೌಜಲಗಿ ಉತ್ತರಿಸಿದರು. ಶ್ರೀ ಎಚ್.ಎಸ್.ಮಹದೇವ್ ಪ್ರಸಾದ್ ಅವರು ಫಸಲು ರಾಜ್ಯಾದಂತ ಕಳೆದ ಐದು ವರ್ಷಗಳಲ್ಲಿ ಅಷ್ಟೇನೂ ಚೆನ್ನಾಗಿ ಆಗಿಲ್ಲದಿರುವುದರಿಂದ ಆವರೇಜ್ ತೆಗೆದುಕೊಂಡರೆ ಈ ಬಾರಿಯೂ ರೈತರಿಗೆ ಇನ್‌ಶೂರೆನ್ಸ್ ಹಣ ಬರುವುದಿಲ್ಲ ಎಂದರು.

ಶ್ರೀ **ಕೆ.ಎಚ್.ಹನುಮೇಗೌಡರು** ತಮ್ಮ ವಿಚಾರ ಮಂಡನೆಯಲ್ಲಿ ಉತ್ತರಕರ್ನಾಟಕದಲ್ಲಿ ಬಿದ್ದಂಥ ಮಳೆಯ ಸೂಕ್ತ ಬಳಕೆಯಾದರೆ ಕ್ಷಾಮದಿಂದ ಬಿಡುಗಡೆಗೆ ಅನುಕೂಲವಾಗುವುದು; **ಕೃಷ್ಣ ಜಲಭಾಗ್ಯ** ನಿಗಮದ ಮೂಲಕ ಬಾಂಡ್‌ಗಳನ್ನು ಎತ್ತಿ ಜಲಾನಯನ ಪ್ರದೇಶಗಳಿಗೆ (ಕೃಷ್ಣಾಬೇಸಿನ್‌ನವು) ಪ್ರಾಜೆಕ್ಟ್ ಪೂರೈಸಿದಂತೆ, ಕಾವೇರಿ ಬೆಸಿನ್‌ನಲ್ಲಿ ಯೋಜನೆಗಳನ್ನು **ಕಾವೇರಿ ಜಲಭಾಗ್ಯ ನಿಗಮ** ಮಾಡಿ ಬಾಂಡ್ ಬಿಡುಗಡೆ ಆದರೆ ಪೂರ್ಣಗೊಳಿಸಬಹುದಾದ ಸಾಧ್ಯತೆ; ಯಗಚಿ ಪ್ರಾಜೆಕ್ಟ್ ಡ್ಯಾಮ್ ಕೆಲಸಗಳು-ಕಾಲುವೆ ತೋಡುವುದು-ನಿಂತಿರುವುದು ಕುರಿತೆಲ್ಲ ಹೇಳಿ ಅವನ್ನೆಲ್ಲ ಶೀಘ್ರವೇ ಪೂರೈಸಲು ಆಗ್ರಹಿಸಿದರು.

ಶ್ರೀ **ಕೆ.ಶ್ರೀನಿವಾಸಗೌಡ** ಅವರು, ಬರಪರಿಸ್ಥಿತಿಯನ್ನು ಆಯಾ ಜಿಲ್ಲೆಗಳಲ್ಲಿ ಆಣೇವಾರಿ ಲೆಕ್ಕದಲ್ಲಿ ಅಳತೆಮಾಡಿ ಅಸೆಸ್ ಮಾಡಲಾಗುತ್ತಿದೆ; ಬರಪರಿಹಾರಕ್ಕೆ ಕೈಗೊಂಡ ಕಾರ್ಯಕ್ರಮ ಕುರಿತು ಮಾಹಿತಿ ಬೇಕಾಗಿರುವ ಬಗ್ಗೆ, ಮಳೆ ಇಲ್ಲದಿರುವ ಸಂದರ್ಭವಾಗಿರಲು ಬಿತ್ತನೆ ಬೀಜದ ಒದಗಣೆ, ಗೊಬ್ಬರ, ರೈತರ ಉಳುಮೆ, ಬರಪರಿಹಾರಕ್ಕೆ ಶಾಶ್ವತ ಆವರ್ತನಿಧಿ, ಬ್ಯಾಂಕುಗಳಲ್ಲಿ ಸಾಲ ಕೊಡುವಂಥ ಪರಿಸ್ಥಿತಿ ಇಲ್ಲದಿರುವುದು, ಆಯಾ ಜಿಲ್ಲೆಗಳಿಗೆ ಬೇಕಾದ ಗೊಬ್ಬರ, ಅಗತ್ಯ ಬಿತ್ತನೆ ಬೀಜ,ಗೊಬ್ಬರದ ಅಗತ್ಯತೆ, ರೈತರಿಗೆ ಆಕ್ಸಿಡೆಂಟಲ್ ಇನ್‌ಶೂರೆನ್ಸ್ ಲಾಂಚಿಂಗ್, ವಿವಿಧ ವಿಮೆಗಳನ್ನು ಮಾಡುವ ಸಾಧ್ಯತೆಯ ಬಗ್ಗೆ, ವಿಮಾ ಕಂಪೆನಿಯವರೊಡನೆ ಸಮಾಲೋಚನೆ ಕುರಿತೆಲ್ಲ ಹೇಳಿದರು. ಶ್ರೀ ವಿ.ಎಸ್,ಕೌಜಲಗಿ ಅವರು ಶ್ರೀನಿವಾಸಗೌಡರ ಸಲಹೆಗಳನ್ನು ಸ್ವಾಗತಿಸಿ ಜಾರಿಗೆ ತರುವ ಬಗ್ಗೆಯೂ ತಿಳಿಸಿದರು.

ಶ್ರೀ **ಕರಡಿ ಸಂಗಣ್ಣಅಮರಪ್ಪ** ಅವರು ತಮ್ಮ ವಿಚಾರಗಳನ್ನು ಮಂಡಿಸುತ್ತ ಮಾನ್ಯ ಕೃಷಿಸಚಿವರಿಂದ ಷಾರ್ಟ್ ಟರ್ಮ್ ಕ್ರಾಪ್ ಅನ್ನು ಮುಂಗಾರು ವೈಫಲ್ಯದ ಹಿನ್ನಲೆಯಲ್ಲಿ ಬೆಳೆಸುವ ಬಗ್ಗೆ; ಬೀಜಕ್ಕೆ ದೊರಕುವ ಸಹಾಯಧನ; ಅಂತರ್‌ಜಲ ಹೆಚ್ಚಿಸುವ ಕಾರ್ಯಕ್ರಮಗಳು; ಬೋರ್‌ವೆಲ್ ಹಾಗು ಕೊಳವೆಭಾವಿಗಳ ಸುತ್ತ 10–12 ಅಡಿಗಳಲ್ಲಿ ಪಿಟ್ಸ್ ಹೊರಡಿಸಿ ಕಂಕರ್ ತುಂಬಿಸಿ, ವಾಟರ್ ಡೈವರ್ಟ್ ಮಾಡಿದರೆ ನೀರಿಗೆ ಅಡ್ಡಿಯಾಗದೆ ವಾಟರ್‌ಸೋರ್ಸ್ ಸಿಗುವ ಸಾಧ್ಯತೆಯ ಬಗ್ಗೆ ಇಲಾಖಾ ಆಯುಕ್ತರೊಡನೆ ಚರ್ಚೆ ಮಾಡುವುದು ಹಾಗು ಐಪಿ ಸೆಟ್ ಇರುವಂಥ ಜಾಗದಲ್ಲಿ ಜಿಯಾಲಜಿಸ್ಟ್‌ಗಳನ್ನು ನೇಮಿಸಿ ಈ ಕಾರ್ಯಕ್ರಮ ಕೈಗೊಳ್ಳುವ ಬಗ್ಗೆ ಉತ್ತರ ಬಯಸಿದರು. ಆ ಬಗೆಗೆಲ್ಲ ಪರಿಶೀಲಿಸುವ ಕುರಿತು ಶ್ರೀ ವಿ.ಎಸ್.ಕೌಜಲಗಿ ತಿಳಿಸಿದರು.

ಶ್ರೀ ಕೆ.ಬಿ.ಮಲ್ಲಿಕಾರ್ಜುನ ಅವರು ಬೀಜಗಳನ್ನು ಒದಗಿಸುವ, ಸಬ್ಸಿಡಿಯ ನೀಡಿಕೆ ಪ್ರಮಾಣದ ಬಗ್ಗೆ ರೈತರಿಗೆ ಮಾಹಿತಿ ಇಲ್ಲವೆಂದು ಪ್ರಸ್ತಾಪಿಸುತ್ತ, ಪಟ್ಟಾ ಪುಸ್ತಕವನ್ನು ಆಧಾರವಾಗಿಟ್ಟುಕೊಂಡು ರೈತರಿಗೆ ಬೀಜ ಮತ್ತು ಗೊಬ್ಬರವನ್ನು ಕೊಟ್ಟರೆ ಕೃಷಿ ಮಾಡಲು ಅನುಕೂಲವಾಗುತ್ತದೆ; ಇವನ್ನು ಉಚಿತ ಕೊಡುವುದಾಗಿದ್ದರೆ ಶೇ 50ರಷ್ಟು ಸಬ್ಸಿಡಿ ಮೂಲಕ ಉಳಿದ ಶೇ50ರಷ್ಟು ಸಾಲದ ರೂಪದಲ್ಲಿ ಕೊಡಬೇಕು, ಎಂದೆಲ್ಲ ಸಲಹೆ ನೀಡಿ ಉತ್ತರವನ್ನು ಕೃಷಿ ಸಚಿವರಿಂದ ಬಯಸಿದರು.

ಸಚಿವ ಶ್ರೀ ಹೆಚ್.ಎಂ.ರೇವಣ್ಣ ಅವರು ರೇಷ್ಮೆ ಬೆಳೆ ಸಂಬಂಧ ರಾಜ್ಯದ ರೈತರ ಪರಿಸ್ಥಿತಿ ಹಾಗು ಸಂಕಷ್ಟಗಳ ಬಗ್ಗೆ ಬಂದ ಪ್ರಸ್ತಾಪಗಳಿಗೆ ಉತ್ತರಿಸುತ್ತ :

ಕೇಂದ್ರದ ಆಮದು ನೀತಿಯಡಿಯಲ್ಲಿ ಚೈನಾರೇಷ್ಮೆ ಬರುತ್ತಿರುವುದು; ನೇಪಾಳ ಮತ್ತು ಬಾಂಗ್ಲಾದೇಶಗಳಿಂದ ಕಳ್ಳ ಸಾಗಾಣಿಕೆ ಆಗುತ್ತಿರುವುದು, ಇವುಗಳಿಂದಾಗಿ ರೇಷ್ಮೆ ಬೆಲೆ ಕುಸಿತ; ಕೇಂದ್ರಸರ್ಕಾರದ ಬಳಿ ರಾಜ್ಯದ ಸರ್ವಪಕ್ಷಗಳ ನಿಯೋಗ ಹೋಗುವುದು ಹಾಗು ಆಹಾರಧಾನ್ಯಗಳಿಗೆ, ಆರ್ಥಿಕ ಬೆಳೆಗಳಿಗೆ ಕೊಟ್ಟಿರುವ ಬೆಂಬಲ ಬೆಲೆಗಾಗ್ಗಿ ರೈತರ ಸಂತೋಷ ಕುರಿತೆಲ್ಲ ಹೇಳಿ ತಮ್ಮ ಮಾತು ಮುಗಿಸಿದರು.

ಶ್ರೀ **ಸಿ.ಭೈರೇಗೌಡರು** ಮಾತನಾಡಿ, ರೇಷ್ಮೆಗೂಡಿನ ಬೆಲೆ ರೂ. 150–70 ಇದ್ದದ್ದು 40–50ರೂ ಗಳಿಗೆ ಇಳಿದಾಗ ರಾಜ್ಯದ ಎಲ್ಲ ಕಡೆಯ ರೈತರೂ ಬೀದಿಗಿಳಿದು ಹೋರಾಟ ಮಾಡಿದ್ದಾರೆ. ಬರಹದಲ್ಲಿ ಮನವಿ ಸಲ್ಲಿಸಿದ್ದಾರೆ. ಬಂದ್, ರಸ್ತೆ ತಡೆ ಕಾರ್ಯಕ್ರಮಗಳನ್ನು ಮಾಡಿದ್ದಾರೆ. ಮಂತ್ರಿ ಮತ್ತು ಮುಖ್ಯಮಂತ್ರಿಗಳನ್ನು ಭೇಟಿ ಮಾಡಿದ್ದಾರೆ. ನುಸಿರೋಗ ತಗುಲಿದ, ತೆಂಗಿನ ಮರಗಳನ್ನು ಕಡಿಯುತ್ತಿದ್ದಾರೆ. ಹಿಪ್ಪುನೇರಳೆಯನ್ನು ಕೀಳುತ್ತಿದ್ದಾರೆ. ಆ ತೋಟ ಬೆಳೆಸಲು ಕನಿಷ್ಠ 2ವರ್ಷ ಬೇಕು. ಇದನ್ನೆಲ್ಲ ಸರ್ಕಾರ ಗಮನಿಸಬೇಕು. ರೇಷ್ಮೆಗೂಡಿನ ಬೆಲೆ ಏರುವಂತೆ ಸರ್ಕಾರ ಮಾಡಲಿ. ರೈತರ ಕಣ್ಣಲ್ಲಿ ರಕ್ತ ಸುರಿಯುವುದನ್ನು ತಪ್ಪಿಸಲಿ. ಸಿಲ್ಕ್ ಇಂಡಸ್ಟ್ರೀಸ್ ಕಾರ್ಪೊರೇಷನ್‌ನಂಥ ಸಂಸ್ಥೆಗಳು ನಿದ್ದೆ ಬಿಟ್ಟು, ರೈತರ ನೆರವಿಗೆ ಬರದಿದ್ದರೆ ಅಂಥ ಸಂಸ್ಥೆಗಳು ಏಕೆ ಬೇಕು. ಮಾರುಕಟ್ಟೆಗೆ ಮಾನ್ಯಮಂತ್ರಿಗಳು ಹೋಗಿ ಗೂಡನ್ನು ಹರಾಜಿನಲ್ಲಿ ಕೂಗಲು ನಿರ್ದೇಶನ ನೀಡಿದರೆ ಗೂಡಿನ ಬೆಲೆ ತಾನಾಗಿ ಏರುತ್ತದೆ, ಎಂದು ನುಡಿಯುವಲ್ಲಿ ರೇಷ್ಮೆ ಸಚಿವರು ಆ ಬಗ್ಗೆ ತೀವ್ರ ಪರಿಶೀಲನೆ ಮಾಡಿ ತಜ್ಞರ ಉನ್ನತ ಮಟ್ಟದ ಸಮಿತಿಯನ್ನು ರಚಿಸಿದೆ ಎಂದು ಉತ್ತರಿಸಿದರು.

ಶ್ರೀ **ಪಿ.ಜಿ.ಆರ್.ಸಿಂಧ್ಯಾ** ಅವರು, ಸರ್ಕಾರ ಮಾರ್ಕೆಟ್ ಇಂಟರ್‌ವೆನ್‌ಷನ್ ಮಾಡಿ ಸಾಧ್ಯವಾದಷ್ಟು ಗೂಡುಗಳನ್ನು ಪರ್ಚೇಸ್ ಮಾಡಿದರೆ ಬೆಲೆ ಏರಬಲ್ಲದು. ಬರಗಾಲ ಪರಿಸ್ಥಿತಿ ಇರುವಲ್ಲಿ, 90ಲಕ್ಷ ಜನ ರೇಷ್ಮೆ ವ್ಯವಸಾಯ ಅವಲಂಬಿಸಿರುವಲ್ಲಿ ಬಾಕಿ ಇರುವ 58 ಕೋಟಿ ರೂ ಬಿಡುಗಡೆ ಮಾಡದಿರುವುದು, ಕಂಟೆಮ್ಟ್ ತರಲವಕಾಶವಾಗುತ್ತದೆ. ಆ ಬಗ್ಗೆ ನಿರ್ಧಾರ ತೆಗೆದುಕೊಳ್ಳಬೇಕೆಂದು ಒತ್ತಾಯವಿಟ್ಟರು. ಶ್ರೀ **ಕೆ.ಶ್ರೀನಿವಾಸಗೌಡ** ಅವರೂ ಈ ಮಾತುಗಳಿಗೆ ದನಿಗೂಡಿಸಿ ಮಾರ್ಕೆಟ್ ಫೀ ತೆಗೆದುಕೊಂಡು, ಆ ಹಣದಿಂದ ಮೊದಲು ಮಾರ್ಕೆಟ್ ಇಂಟರ್‌ವೆನ್‌ಷನ್ ಮಾಡಿದರೆ ಕೆ.ಜಿ.ಗೂಡಿಗೆ 150ರೂ ನಿಂದ 180ರೂಗೆ ಏರುತ್ತದೆ. ಅದು ರೈತರಿಗೆ ಸಂತೋಷ ತರುತ್ತದೆ. ಸರ್ಕಾರದ ಹಣಕ್ಕೆ(ಕ್ಯಾಬಿನೆಟ್‌ಗೆ ಹೋಗಿ) ಅಂಗಲಾಚುವ ಬದಲು ರೈತರ ಹಣ, ರೀಲರ್ಸ್ ಹಣವೇ ಆದ ಇಲಾಖೆಯಲ್ಲಿರುವ ಹಣದಿಂದ ಮಾರ್ಕೆಟ್

ಇಂಟರ್‌ವೆನ್‌ಷನ್ ಮಾಡಿದರೆ ಮಾತ್ರ ರೈತ ಉಳಿಯಬಲ್ಲ, ತೀರ್ಮಾನ ತೆಗೆದುಕೊಳ್ಳಿ ಎಂದು ಸರ್ಕಾರವನ್ನು ಆಗ್ರಹಿಸಿದರು. ಅದಕ್ಕೆ ಶ್ರೀ **ಹೆಚ್.ಎಂ.ರೇವಣ್ಣನವರು** ಉತ್ತರಿಸಿ ರೇಷ್ಮೆ ದಾಸ್ತಾನು ಕೊಂಡಿರುವ ಬಗ್ಗೆ, ಸಲಹೆಗಳನ್ನು ಗಮನಿಸಿರುವ ಬಗ್ಗೆ ಹಣಕಾಸಿನ ವಿಚಾರವಾದ ಕಾರಣ ಮುಖ್ಯಮಂತ್ರಿಗಳೊಡನೆ ಚರ್ಚಿಸಲು ಬೇಕಾದ ಕಾಲಾವಕಾಶದ ಬಗ್ಗೆ ತಿಳಿಸಿದರು.

ಶ್ರೀ **ಹೆಚ್.ಸಿ.ಶ್ರೀಕಂಠಯ್ಯ** (ಕಂದಾಯ ಸಚಿವರು) ಮಾತನಾಡಿ ಬರಗಾಲ ಪರಿಸ್ಥಿತಿ ಹಾಗು ಇತರ ಸಮಸ್ಯೆಗಳ ಪರಿಹಾರಕ್ಕಾಗಿ ಮಾನಿಟರಿಂಗ್ ಕಮಿಟಿ ನೇಮಿಸುವ ಕುರಿತು ಹಾಗು ಅದರ ಕಾರ್ಯಕ್ರಮಗಳು, ಸಾಧಕಬಾಧಕಗಳು, ಹಿಂದೆ ಬರಗಾಲ ಬಂದಾಗ 1ಲಕ್ಷ ಟನ್ 'ಕೂಲಿಗಾಗಿ ಕಾಳು' ಅನ್ನು ಪುಕ್ಕಟೆ ಕೊಟ್ಟಾಗ ಅನುಕೂಲವಾದದ್ದು ಈ ಬಗೆಗೆಲ್ಲ ತಿಳಿಸಿದರು. ಅದಕ್ಕೆ ಬಂದ ಪ್ರತಿಕ್ರಿಯೆಗಳಿಗೂ ಉತ್ತರ ನೀಡಿದರು.

ಶ್ರೀ **ಜಗದೀಶ್ ಶೆಟ್ಟರ್** ಅವರು ಮಾತನಾಡುತ್ತ, ರಾಜ್ಯ ಸರ್ಕಾರ ಕೇಂದ್ರದಿಂದ ಹೆಚ್ಚಿಗೆ ಆಹಾರಧಾನ್ಯ ತೆಗೆದುಕೊಳ್ಳಲು ಮ್ಯಾಚಿಂಗ್ ಗ್ರಾಂಟ್ ಕೊಡಲಿಕ್ಕೆ ಆಗದ ಕಾರಣ, ಅದು ಸಾಧ್ಯವಾಗಿಲ್ಲ; ಹಾಗು 'ಕೂಲಿಗಾಗಿ ಕಾಳು' ಯೋಜನೆಯಡಿ ಕೊಟ್ಟಂಥ ಅಕ್ಕಿಯನ್ನು ಅಧಿಕಾರಿಗಳು ಖರ್ಚುಮಾಡಲಾಗದಿದ್ದ ಬಗ್ಗೆ ಹೇಳಿದರು. ಸರ್ಕಾರ ಈ ಬರಗಾಲದ ಬಗ್ಗೆ ಗಂಭೀರವಾಗಿ ಗಮನಿಸಿಲ್ಲ. ರೈತರ ಸಂಕಷ್ಟದ ಬಗ್ಗೆ ಕಳಕಳಿ ಇಲ್ಲ. ಬೆಳೆ ವಿಮೆಹಣ ಇನ್ನೂ 55ಕೋಟಿ ರೂ. ಸರ್ಕಾರ ಕೊಡಬೇಕಿದ್ದು, ಸಾಲವಸೂಲಾತಿ ನಿಲ್ಲಿಸಲು ಹೇಳಿದ್ದರೂ, ಅದು ದೊಡ್ಡ ಪ್ರಮಾಣದಲ್ಲಿ ನಡೆಯುತ್ತಿದೆ. ರೈತರು ಬಿತ್ತನೆಗೆ ಹೊಲಕ್ಕೆ ಹೋಗುವಂಥ ಪರಿಸ್ಥಿತಿ ಇಲ್ಲ. ಟ್ರಾಕ್ಟರುಗಳನ್ನು ಸೀಜ್ ಮಾಡಲಾಗುತ್ತಿದೆ. ಮಧ್ಯಮಾವಧಿಸಾಲವನ್ನು ದೀರ್ಘಾವಧಿ ಸಾಲವಾಗಿ, ಅಲ್ಪಾವಧಿ ಸಾಲವನ್ನು ಮಧ್ಯಮಾವಧಿಸಾಲವಾಗಿ ಪರಿವರ್ತನೆ ಮಾಡಲು ಕೇಳಿಕೊಂಡರೂ ಸರ್ಕಾರದಿಂದ ಸ್ಪಂದನೆಯಿಲ್ಲ. ಪೂರ್ತಿ ಚರ್ಚೆಯಾಗಿಲ್ಲ, ತೀರ್ಮಾನಕ್ಕೆ ಬಂದಿಲ್ಲ. ಕಾಮಗಾರಿಯನ್ನು ಗಂಭೀರವಾಗಿ ಗಮನಿಸಿಲ್ಲ. ಬೆಳೆ ವಿಮೆಹಣ ಕೂಡಲೆ ಬಿಡುಗಡೆ ಮಾಡಲು ತೊಂದರೆ ಇದ್ದರೆ ಸರ್ಕಾರ ಸ್ಪಷ್ಟಪಡಿಸಿ ನೀಡಬೇಕು. ರೈತರು ಆತ್ಮಹತ್ಯೆ ಮಾಡಿಕೊಳ್ಳುತ್ತಿದ್ದಾರೆ; ಅವರ ಕುಟುಂಬಗಳಿಗೆ ಪರಿಹಾರ ಕೊಡುವ ಬಗ್ಗೆ ಒತ್ತಾಯ ಮಾಡಿದರು. ಆಗ ಶ್ರೀ ಹೆಚ್.ಸಿ. ಶ್ರೀಕಂಠಯ್ಯ ಅವರು, ಮಾತನಾಡಿ, 45ತಾಲೂಕು, 11ಜಿಲ್ಲೆಗಳಲ್ಲಿ ಕ್ರಾಪ್‌ಕಟಿಂಗ್ ಎಕ್ಸ್‌ಪರಿಮೆಂಟ್ಸ್ ಮಾಡಿ 45 ತಾಲೂಕಿಗೆ ರೆವನ್ಯೂ ಮನ್ನಾ ಮಾಡಿದೆ ಎಂದರು.

ಶ್ರೀ **ಜಗದೀಶ್ ಶೆಟ್ಟರ್** ಅವರು ಮಾತು ಮುಂದುವರಿಸಿ ಕಂಪನಿಗೆ ಕೋಟಿಗಟ್ಟಲೆ ಹಣಕೊಟ್ಟು, ಮನ್ನಾ ಮಾಡಲಿಕ್ಕೆ ಆಗುತ್ತದೆ; ಅದೇ ಆತ್ಮಹತ್ಯೆಯ ರೈತರ ಕುಟುಂಬಕ್ಕೆ ಪರಿಹಾರವಿಲ್ಲ, ಸಾಲವಸೂಲಾತಿ ನಿಲ್ಲಿಸಲು ಹೇಳಿಲ್ಲ, ಬಡ್ಡಿ ಮನ್ನಾ ಮಾಡುತ್ತಿಲ್ಲ. ಸಾಲದ ಅವಧಿ ವಿಸ್ತರಣೆ ಮಾಡಲು ಸಿದ್ದವಿಲ್ಲ. ಈ ರೈತ ವಿರೋಧಿ ಧೋರಣೆ ಪ್ರತಿಭಟಿಸಿ ಸಭಾತ್ಯಾಗ ಮಾಡುತ್ತೇವೆ ಎಂದು ಹೇಳಿ ತಮ್ಮ ಪಕ್ಷದ ಸದಸ್ಯರೊಡನೆ ಸದನದಿಂದ ಹೊರನಡೆದರು.

ಶ್ರೀ **ಬಿ.ಸೋಮಶೇಖರ್** ಅವರು, ಬರಗಾಲ ಪರಿಸ್ಥಿತಿಗೆ ಸಂಬಂಧಿಸಿ ಆಗಿರುವ ಕೆಲಸ, 'ಕೂಲಿಗಾಗಿ ಕಾಳು ಯೋಜನೆ'ಯಲ್ಲಿ ಬಿಡುಗಡೆಯಾದ ಆಹಾರಧಾನ್ಯ; ಮೇವು ಗೋವುಗಳಿಗೆ ಒದಗಿಸಿದ ಬಗ್ಗೆ ಕೇಳಿದರು. ಗೋಶಾಲೆಗಳನ್ನು ನಿರ್ಮಿಸಿ, ಭತ್ತ ಬೆಳೆಯುವ ರೈತರಿಂದ ಹುಲ್ಲು ಪಡೆದು ಮೇವು ಒದಗಿಸಿದ್ದೀರಾ ಎಂದು ಪ್ರಶ್ನಿಸಿ ಮಾಹಿತಿ ಬಯಸಿದರು. ಶ್ರೀ ಹೆಚ್.ಸಿ.ಶ್ರೀಕಂಠಯ್ಯ ಅವರು ಬರಪರಿಹಾರಕ್ಕೆ ಏನೇನು ಅವಶ್ಯಕ ಕ್ರಮ ತೆಗೆದುಕೊಳ್ಳಬೇಕೋ ಅದನ್ನೆಲ್ಲ ಮಾಡಿದೆ ಎಂದರು.

ಶ್ರೀ **ಎಚ್.ಎಸ್.ಪುಟ್ಟರಂಗನಾಥ್** ಅವರು ಹಾಸನಜಿಲ್ಲೆಯಲ್ಲಿ 40 ಕೋಟಿರೂ.ವೆಚ್ಚ ಮಾಡಿ ಆಲೂಗಡ್ಡೆ ಬಿತ್ತಿದ್ದು ಮಳೆ ಇಲ್ಲದೆ ಅದೆಲ್ಲ ನಾಶವಾಗಿರುವುದು; ಆ ಹಿನ್ನೆಲೆಯಲ್ಲಿ ಬೆಳೆವಿಮೆಹಣ, ಪರಿಹಾರ ಕೊಡುವಿರಾ? ಎಂದು ಪ್ರಶ್ನಿಸಿದರು. ಈ ಅಂಶಕ್ಕೆ ದನಿಗೂಡಿಸಿ ಶ್ರೀ ಸಿ.ಭೈರೇಗೌಡರು ತಮ್ಮ ಊರಿನಲ್ಲಿ ಇಂಥದೇ ಸಮಸ್ಯೆ ಇದ್ದು, ಟ್ಯಾಂಕರ್ ಮೂಲಕ ಆಲೂಗಡ್ಡೆ ಬಿತ್ತನೆಗೆ ನೀರು ಹಾಕುತ್ತಿದ್ದಾರೆ ಎಂದರು. ಶ್ರೀ **ಮಲ್ಲಿಕಾರ್ಜುನ ಖರ್ಗೆ** ಅವರು ಇದಕ್ಕೆಲ್ಲ ಪ್ರತಿಕ್ರಿಯಿಸಿ ಎಲ್ಲಾಹಣ ನೇರವಾಗಿ ಇನ್‌ಶೂರೆನ್ಸ್ ಕಂಪನಿಗೆ ಹೋಗಿದೆ. ಟ್ರೆಜರಿಯಿಂದ ಕೊಡುವಂಥದ್ದು ಯಾವುದೂ ಬಾಕಿ ಇಲ್ಲ. ಕಂಪನಿ ಈಗಾಗಲೇ ಹಣ ಹಂಚುತ್ತಿದೆ. ಪ್ರೀಮಿಯಂ ಹಣ ಇನ್‌ಶೂರೆನ್ಸ್ ಕಂಪನಿಯಲ್ಲಿಯೇ ಇದ್ದು ಅದನ್ನು ಹಂಚಲು ಬರುವುದಿಲ್ಲ ಅದರಲ್ಲಿ ಸರ್ಕಾರದ್ದು, ರೈತರದ್ದು ತಲಾ 50 ಭಾಗ ಇರುತ್ತದೆ. ತನ್ನ ಭಾಗದ 55ಕೋಟಿ ರೂಗಳಲ್ಲಿ ಈಗಾಗಲೇ 53.27ಕೋಟಿ ಬಿಡುಗಡೆ ಮಾಡಿದ್ದು ಉಳಿದ 1.90 ಲಕ್ಷರೂಗಳನ್ನು ನಾಳೆ–ನಾಡಿದ್ದು ಕಂಪನಿಗೆ ತುಂಬುತ್ತೇವೆ. ಹೀಗಾಗಿ ಸರ್ಕಾರ ಏನೂ ಮಾಡಿಲ್ಲವೆಂಬ ಮಾಹಿತಿ ಸರಿಯಲ್ಲ ಎಂದರು. ಇದಕ್ಕೆ ಹಿನ್ನಲೆಯಾಗಿ ಬೆಂಬಲಸೂಚಿಸುತ್ತ ಶ್ರೀ ಡಿ.ಆರ್.ಪಾಟೀಲರು ಈ ಸರ್ಕಾರ ಬಂದ ಒಂದು ವರ್ಷದಲ್ಲಿಯೇ 132ಕೋಟಿ ರೂ. ಗಳ ಕ್ರಾಪ್ ಇನ್‌ಶೂರೆನ್ಸ್ ಮಾಡಿ ಹಿಂದಿಗಿಂತ

ಹೆಚ್ಚಿನ ರೈತರ ಹಿತರಕ್ಷಣೆ ಮಾಡಿದೆ ಎಂದರು. ಇದಕ್ಕೆ ಶ್ರೀ ಸಿ.ಭೈರೇಗೌಡರು ಬೇರೆಯೇ ವಿವರಣೆ ನೀಡಿ, ಮಿತಿಯನ್ನೂ ತಿಳಿಸಿದರು; ಇದಲ್ಲದೆ ಮಳೆ ಮುಂದಕ್ಕೆ ಹೋಗಿರುವ ಕಾರಣ ಬಿತ್ತನೆ ತಡವಾಗಿದ್ದು ರೈತರಿಗೆ ಸಾಲದ ಅಗತ್ಯವಿದೆ. ಅದನ್ನು ಕೊಡುವ ಬಗ್ಗೆ ಉತ್ತರ ಬೇಕು ಎಂದರು. ಶ್ರೀ ಮಲ್ಲಿಕಾರ್ಜುನ ಖರ್ಗೆ ಅವರು, ಬರಗಾಲ ಪರಿಸ್ಥಿತಿ ಬಗ್ಗೆ ಮೆಮೊರಾಂಡಮ್ ಕೊಟ್ಟಿದ್ದು ಅದು ಕಾನೂನು ಆಗುವ ಮುಂಚೆಯೆ ಸಾಲಮಾಫಿ, ಬಡ್ಡಿ ಮಾಫಿ ಮಾಡಿ ಎಂದರೆ ಹೇಗೆ? ಎಂಬ ಪ್ರಶ್ನೆ ಇಟ್ಟರು.

ಶ್ರೀ **ಪಿ.ಜಿ.ಆರ್.ಸಿಂಧ್ಯ** ಅವರು, ಸದ್ಯದ ಚರ್ಚೆ ಬರಪರಿಹಾರದ ಬಗ್ಗೆ ಆಗಿ ಸರ್ಕಾರ ಸ್ವಲ್ಪ ಮಟ್ಟಿನ ಪರಿಹಾರ ಕೊಟ್ಟಿದೆ; ರೈತರ ಬೆಳೆ ವಿಮೆ ವಿಚಾರದಲ್ಲಿ ಸ್ವಲ್ಪ ಮಟ್ಟಿಗೆ ಮಾತ್ರ ಸ್ಪಂದಿಸಿದೆ. ರೈತ ಸಾಲವನ್ನು ವಾಪಸ್ಸು ಕೊಡುವ ಸ್ಥಿತಿಯಲ್ಲಿ ಇಲ್ಲ. ಸಾಲವಸೂಲಾತಿ ನಿಲ್ಲಿಸಬೇಕು. ಬಡ್ಡಿಯನ್ನು ತಾತ್ಕಾಲಿಕವಾಗಿ ರದ್ದು ಮಾಡಬೇಕು. ರೈತರ ಆತ್ಮಹತ್ಯೆಗಳ ಬಗ್ಗೆ ಸರಿಯಾದ ಲೆಕ್ಕಾಚಾರ ಆಗಿಲ್ಲ. ಆ ರೈತರ ಕುಟುಂಬಗಳಿಗೆ ಒಂದು ಲಕ್ಷರೂಗಳ ಪರಿಹಾರ ಕೊಡಬೇಕೆಂದು ನನ್ನ ಒತ್ತಾಯವಿದೆ. ಅದನ್ನು ಕೊಡಲು ತೊಂದರೆ ಏನು ಎಂಬುದು ಅರ್ಥವಾಗಿಲ್ಲ. ರೇಷ್ಮೆ ವಿಷಯದಲ್ಲಿ ಬೆಂಬಲಬೆಲೆ ನಿಗದಿಯಾಗದೆ ರೈತರು ಬಹಳ ಕಷ್ಟಕ್ಕೆ ಸಿಲುಕಿದ್ದಾರೆ. ರೈತರ ಪಾಲಿಗೆ ಸರ್ಕಾರದ ಧೋರಣೆಗಳು ಅನುಕೂಲವಾಗಿಲ್ಲ. ಡಾ.ವೀರೇಶ್ ವರದಿಯನ್ನು ತಿರಸ್ಕಾರ ಮಾಡಿ. ಟರ್ಮ್ಸ್ ಆಫ್‌ರೆಫರೆನ್ಸ್‌ನಲ್ಲಿ ಬಹಳ ಬುದ್ಧಿವಂತಿಕೆಯಿಂದ ಮಾಡಿದ್ದೀರಿ. ಅದನ್ನು ತಿರಸ್ಕರಿಸಿ. ಆತ್ಮಹತ್ಯೆಯ ರೈತರ ಕುಟುಂಬಗಳಿಗೆ ದುಡ್ಡು ಒದಗಲೇಬೇಕು. ಶಾಶ್ವತವಾದ ಬರ ಪರಿಹಾರ ನಿಧಿ ಮಾಡಬೇಕು. 67ಲಕ್ಷ ಏನು ಹಸಿರು ಕಾರ್ಡುಗಳಿವೆ ಅವುಗಳಿಗೆ ಮತ್ತೆ ಜೀವಕೊಡಬೇಕು. ಸರ್ಕಾರ ರೈತ ವಿರೋಧಿ ಧೋರಣೆತಾಳಿದೆ. ಅದನ್ನು ವಿರೋಧಿಸಿ ಸಭಾತ್ಯಾಗ ಮಾಡುತ್ತೇವೆ ಎಂದು ಹೇಳಿ ತಮ್ಮ ಪಕ್ಷದ ಸದಸ್ಯರೊಡನೆ ಸಭಾತ್ಯಾಗ ಮಾಡಿದರು.

ಸಚಿವ ಶ್ರೀ **ಮಲ್ಲಿಕಾರ್ಜುನ** ಅವರು, ಆತ್ಮಹತ್ಯೆ ಮಾಡಿಕೊಂಡ ರೈತರ ಕುಟುಂಬಕ್ಕೆ ಏನು ಪರಿಹಾರ ಕೊಡಬೇಕು ಎಂಬ ಬಗ್ಗೆ, ಶಾಸಕರ ನೇತೃತ್ವದಲ್ಲಿ ಮಾಡಿದ್ದ ಸಮಿತಿಯು ತನ್ನ ವರದಿಯಲ್ಲಿ ತೊಗರಿಬೆಳೆಗೆ ಹಾನಿಯಾಗಿ, ರೈತರಿಗೆ ಆಗಿದ್ದ ತೊಂದರೆ, ಪ್ರತಿ ಎಕರೆಗೆ ಕೊಡಬೇಕಾದ ಪರಿಹಾರ ಕುರಿತೆಲ್ಲ ಶಿಫಾರಸ್ಸು ಮಾಡಿತ್ತು. ಆದರೆ ಹಿಂದಿನವರು ಅದನ್ನು ಒಂದು ಚೂರೂ ಇಂಪ್ಲಿಮೆಂಟ್

ಮಾಡಲಿಲ್ಲ. ಉತ್ತರ ಕರ್ನಾಟಕದಲ್ಲಿ ಖಾರಿಫ್‌ಕ್ರಾಪ್ ಮೇಲೆ ಅವಲಂಬಿಸಿದವರು ಅದು ಹೋಗಲಾಗಿ ಇವತ್ತು ಬಹಳ ನಿರಾಶರಾಗಿದ್ದಾರೆ. ಈ ದಿಸೆಯಲ್ಲಿ ಸಿ.ಆರ್.ಫಂಡ್ ಬಳಕೆ, ಕೇಂದ್ರದ ನೆರವು, ಬೀಜ ವ್ಯವಸ್ಥೆ, ಮೇವಿನ ವ್ಯವಸ್ಥೆ ಎಂಬ ಬಗೆಗೆಲ್ಲ ಚಿಂತನೆ ಮಾಡಿ ಮಾನ್ಯ ಸದಸ್ಯರು ಸಲಹೆಯನ್ನು ಕೊಡಬಹುದಿತ್ತು. ನಾವು ಆದಷ್ಟು ಪ್ರಾಮಾಣಿಕ ಪ್ರಯತ್ನ ಮಾಡಿ ರೈತರ ನೋವಿಗೆ ಸ್ಪಂದಿಸಬೇಕು ಎಂದು ಸರ್ಕಾರದ ಸರ್ವಪ್ರಯತ್ನವಾಗಿದೆ. ಇದಕ್ಕೆ ಮಂತ್ರಿಗಳಾದ ಶ್ರೀ **ಡಿ.ಬಿ.ಚಂದ್ರೇಗೌಡರೂ** ಬೆಂಬಲ ವ್ಯಕ್ತಮಾಡಿ, ಯಾವ ಕಾಲಕ್ಕೂ ಮಾಡದೇ ಇರುವಷ್ಟು ಪರಿಹಾರವನ್ನು ಈಗ ರೈತರಿಗೆ ನಾವು ಒದಗಿಸಿದ್ದೇವೆ. ಉಳಿದ ವಿಷಯಗಳಲ್ಲಿ ಪೂರ್ವಸಿದ್ಧತೆಗಳನ್ನು ಮಾಡಿಕೊಳ್ಳಲಾಗಿದೆ, ಎಂದರು.

*ಈ ದಿನದ ಚರ್ಚೆಯಲ್ಲಿ ಸರ್ವಶ್ರೀ ಎಸ್.ಎಸ್.ಪಾಟೀಲ್, ಶ್ರೀಮತಿ ಮೋಟಮ್ಮ, ಕೆ.ಹೆಚ್.ಹನುಮೇಗೌಡ, ಪಿ.ಹೆಚ್.ಪೂಜಾರ್, ಉಮೇಶ್ ವಿ.ಕತ್ತಿ, ಕೆ.ಷಡಕ್ಷರಿ, ಡಿ.ಆರ್.ಪಾಟೀಲ್, ಎನ್.ಎಸ್.ಬೋಸರಾಜು ಅವರುಗಳೂ ಪಾಲ್ಗೊಂಡಿದ್ದರು.*

15.7.2003ರ ವಿಧಾನ ಸಭಾಧಿವೇಶನದಲ್ಲಿ[12] ರಾಜ್ಯದಲ್ಲಿ ಮಳೆಯ ಅಭಾವದಿಂದಾಗಿ ಒದಗಿದ ಭೀಕರ ಬರಗಾಲದ ಕುರಿತ ಚರ್ಚೆ ಮುಂದುವರಿಯಿತು. ಈ ಚರ್ಚೆಯಲ್ಲಿ ಪಾಲ್ಗೊಂಡು ಶ್ರೀ **ಕೆ.ಎಂ.ಕೃಷ್ಣಮೂರ್ತಿ** ಅವರು : ಬರಗಾಲದಿಂದಾಗಿ ಬವಣೆಗೊಂಡಿರುವ ಜನ, ನದಿಗಳು ಹರಿಯುವ ಬಯಲು ಪ್ರದೇಶ, ಶೃಂಗೇರಿ, ಕೊಪ್ಪ, ಉತ್ತರ ಕನ್ನಡ, ದಕ್ಷಿಣ ಕನ್ನಡ ಇತ್ಯಾದಿ ಮಳೆ ಬೀಳುವ ಪ್ರದೇಶದಲ್ಲಿ ಮಳೆ ಅಭಾವ, ಕೆರೆಕಟ್ಟೆಗಳಲ್ಲಿ ನೀರಿನ ಅಭಾವ, ರಾಜರ ಕಾಲದ ಪರಿಸ್ಥಿತಿಯಲ್ಲಿ, ಪರಿಹಾರವನ್ನೂ, ದವಸ ಧಾನ್ಯವನ್ನು, ಮೇವನ್ನು ಒದಗಿಸಿದ್ದುದು ಇತಿಹಾಸವಾಗಿದೆ ಎಂಬ ಸಂಗತಿ, ಸರ್ಕಾರ ಮುಂದುವರೆದ ಬರಗಾಲವನ್ನೂ ಎದುರಿಸುವ ಬಗ್ಗೆ, ಕೂಲಿಗಾಗಿ ಕಾಳು ಕೊಡಲಾಗಿದೆ ಎನ್ನುವ ಸರ್ಕಾರ ಸಮರ್ಥವಾಗಿ ಬರಗಾಲವನ್ನು ಸರ್ಕಾರ ನಿರ್ವಹಿಸಿಲ್ಲ ಎಂಬ ಬಗ್ಗೆ, ಸರ್ಕಾರ ಕೊಟ್ಟಂಥ ಹಣ ಖರ್ಚುಮಾಡದ ಬಗ್ಗೆ ಹಾಗು ಕೊಟ್ಟಂಥ ಕಾಳು ಧೂಳು ಹಿಡಿದಿರುವುದು, ಮಾನವ ಉತ್ಪಾದನಾದಿನಗಳು, ಕುರಿತೆಲ್ಲ ಪ್ರಸ್ತಾಪಿಸಿದರು. ಶ್ರೀ **ಎಸ್.ಪಿ.ಮುದ್ದಹನುಮೇಗೌಡರು,** ಬರಪರಿಹಾರ ಕಾಮಗಾರಿ ಟಾಸ್ಕ್‌ಫೋರ್ಸ್‌ನ ಮೇಲುಸ್ತುವಾರಿ, ಕಾರ್ಯಕ್ರಮದ ಅನುಷ್ಠಾನವು ಶ್ರೀ ಕೃಷ್ಣಮೂರ್ತಿ ಅವರ ಕ್ಷೇತ್ರದಲ್ಲಿ ನಡೆದಿರುವ ಬಗ್ಗೆ ತಿಳಿಸಿದರೆ

12. ವಿಧಾನಸಭೆಯ ನಡವಳಿಕೆಗಳು, ಸಂಪುಟ5(1-5),15.7.2003 ಪು.730-737

ಲೋಪದೋಷಗಳನ್ನು ತಿದ್ದಿಕೊಳ್ಳಲು ಅನುಕೂಲವಾಗುವ ಕುರಿತು ಹೇಳಿದರು. ಮಾಹಿತಿಗಾಗಿ ಬಯಸಿದರು.

ಶ್ರೀ **ಕೆ.ಎಂ.ಕೃಷ್ಣಮೂರ್ತಿ** ಅವರು ಮಾತನ್ನು ಮುಂದುವರಿಸಿ, ಬರಗಾಲದ ಭೀಕರತೆಯಿಂದಾಗಿ ರೈತನು ಬಿತ್ತಿದ ಬೀಜ, ಹಾಕಿದ ಗೊಬ್ಬರ ಶ್ರಮಕ್ಕೆ ಸಿಗದಫಲ, ಸಾಲಗಾರನಾಗಿ ಸಾಲ ತೀರಿಸಲಾಗದೆ ಮಾಡಿಕೊಂಡಿರುವ ಜೀವಹಾನಿ, ಇವೆಲ್ಲ ಆಗಿಯೂ ರೈತನಿಗೆ ಒದಗದ ಪರಿಹಾರ; 'ಕೂಲಿಗಾಗಿ ಕಾಳು' ಯೋಜನೆಯ ಮೂಲಕ ಮಾನವ ಉತ್ಪಾದನಾ ದಿನವನ್ನು ಆಚರಿಸುವ ಬಗ್ಗೆ ಸರ್ಕಾರದ ಹೇಳಿಕೆ ಹಾಗು ಅನ್ವಯ; ರಾಷ್ಟ್ರೀಯ ಗ್ರಾಮಾಂತರ ಕುಡಿಯುವ ನೀರಿನ ಯೋಜನೆ ಮತ್ತು ಕಿರು ನೀರು ಸರಬರಾಜು ಯೋಜನೆಗಳ ವೈಫಲ್ಯ, ಬೋರ್‌ವೆಲ್ ವೈಫಲ್ಯ; ಹ್ಯಾಂಡ್ ಪಂಪ್ ಕೊಡುವ ಬಗ್ಗೆ ಅನುಮತಿ ನೀಡದ ಸರ್ಕಾರದ ಆದೇಶ; ತಮ್ಮ ಕ್ಷೇತ್ರದ 38 ಕೆರೆ, 122ಕಟ್ಟೆ ಹಾಗು ವೇದಾನದಿ ಒಣಗಿ ಜಾನುವಾರುಗಳಿಗೆ ನೀರಿನ ಬರ; ಎತ್ತಿಗೆ ರೈತ ನೀರು ಕುಡಿಸಲು ಬೋರ್‌ವೆಲ್ ಅನ್ನು ಆಶ್ರಯಿಸಿದರೂ, ವಿದ್ಯುತ್ತಿಲ್ಲದೆ ಆ ನೀರೆತ್ತಲೂ ಸಾಧ್ಯವಾಗದಿರುವುದು; ಮುಂಗಾರು ಬೆಳೆ–ಎಳ್ಳು, ಉದ್ದು, ಇತ್ಯಾದಿ ಯಾವುದೇ ಬೆಳೆಯು 4–5 ವರ್ಷಗಳಿಂದ ಬರದ ಕಾರಣ ಆಗದೆ, ಪರಿಹಾರವೂ ಸಿಗದಿರುವುದು; ಕಪ್ಪುತಲೆ ಹುಳುವಿನಿಂದಾಗಿ, ವಾಡಿಕೆ ಪ್ರಮಾಣದ ಮಳೆ ಕಡಿಮೆಯಿಂದಾಗಿ ತಮ್ಮ ವಿಧಾನಸಭಾ ಕ್ಷೇತ್ರದಲ್ಲಿ (ಕಡೂರು) ಸುಮಾರು 2ಲಕ್ಷ ತೆಂಗಿನ ಮರಗಳು ಒಣಗಿರುವುದು; ಸಾವಿರ ತೆಂಗಿನಗಿಡ ಇರುವವನೂ ಕಾಫಿ ತೋಟಗಳಿಗೆ ಕೂಲಿಗೆ ಹೋಗುವಂಥ ಪರಿಸ್ಥಿತಿ; ಕೇಂದ್ರಸರ್ಕಾರದ ನೀತಿಯಿಂದಾಗಿ ಕಾಫಿ ಬೆಳೆಗಾರರಿಗೂ ಆಗಿರುವ ತೊಂದರೆ ಹಾಗೂ ಕೂಲಿಗೆ ತೆಗೆದುಕೊಳ್ಳಲು ಸಾಧ್ಯವಿಲ್ಲವೆನ್ನುವ ಅವರ ಪರಿಸ್ಥಿತಿ; ಒಂದು ಹೊತ್ತಿನ ಊಟಕ್ಕೆ ರೈತರಿಗೆ ಒದಗಿರುವ ಯೋಚನೆ; ಕೊಬ್ಬರಿ ಮಾರಾಟ ಕೇಂದ್ರ ತೆರೆಯುವಲ್ಲಿ ಅಧಿಕಾರಿಗಳಿಂದಾಗಿ ರೈತರಿಗೆ ಆದ ಅನ್ಯಾಯ; ತೆಂಗಿನ ಮರಕ್ಕೆ ಕನಿಷ್ಠ 2ಸಾವಿರ ರೂ.ಗಳ ಪರಿಹಾರ ನೀಡಿ ತೆಂಗು ಬೆಳೆಗಾರರಿಗೆ ನೆರವು; ಜಾನುವಾರುಗಳನ್ನು ಕಸಾಯಿ ಖಾನೆಗೆ ಮಾರುವಂಥ ರೈತರು ಕಣ್ಣೀರು ಹಾಕುವ ಪರಿಸ್ಥಿತಿ; ಸೆಪ್ಟಂಬರ್, ಅಕ್ಟೋಬರ್ ಮಳೆಬಾರದಿದ್ದರೆ 15ಸಾವಿರ ಬೋರ್‌ವೆಲ್‌ಗಳು ಒಣಗಿಹೋಗುವ ಪರಿಸ್ಥಿತಿ; 750 ಅಡಿ ಕೊರೆದ ಮೇಲೆ ನೀರು ಸಿಕ್ಕಿರಲು, ನಮ್ಮ ಅಂತರ್ಜಲ ಮಟ್ಟದ ಪರಿಸ್ಥಿತಿ; ತಮ್ಮ ಕ್ಷೇತ್ರದಲ್ಲಿ ಒಣಗಿ ಹೋಗಿರುವ ಒಂದುವರೆ ಸಾವಿರ ಎಕರೆ ಅಡಿಕೆ ತೋಟ ಇತ್ಯಾದಿ ವಿಷಯಗಳ ಕುರಿತೆಲ್ಲ ವಿಷಯ ಮಂಡನೆ ಮಾಡಿದರು.

ಈ ಸಂದರ್ಭದಲ್ಲಿ ಅಧ್ಯಕ್ಷಪೀಠದಲ್ಲಿ ಉಪಾಧ್ಯಕ್ಷ ಶ್ರೀ **ಮನೋಹರ್ ಹೆಚ್.ತಹಸೀಲ್ದಾರ್** ಅವರು ಇದ್ದರು.

***ಮಂಥನ :*** *ಬರಪರಿಸ್ಥಿತಿ ಕುರಿತಂತೆ ವಿಧಾನಸಭೆಯಲ್ಲಿ ನಡೆದ ಚರ್ಚೆಗಳು ಸಮಸ್ಯೆಯ ಆಳವನ್ನು ತೆರೆದು ತೋರಿವೆ. ಪ್ರಾಕೃತಿಕ ದುರ್ಭರ ಸನ್ನಿವೇಶವಾಗಿ ಮಳೆಹಾನಿಯಿಂದ ಅರ್ಥಾತ್ ಅತಿವೃಷ್ಟಿ,ಅನಾವೃಷ್ಟಿಗಳಿಂದ ಆಗುವ ಬೆಳೆಗಾಗಿ ನೀರಿನ ಅಭಾವ ಮತ್ತು ಪ್ರವಾಹ ಒಂದು ಕಡೆ; ತತ್ಪರಿಣಾಮ ಮಾನವ ನಿರ್ಮಿತ ಸನ್ನಿವೇಶವಾದ ವಿದ್ಯುತ್ ಒದಗಣೆಗೂ ಅಭಾವ, ಇಲ್ಲವೆ ವೋಲ್ಟೇಜ್ ಸಮಸ್ಯೆಗಳು, ಕಡಿಮೆ ಅವಧಿಯ ವಿದ್ಯುತ್ ಸರಬರಾಜು, ಪಂಪ್‌ಸೆಟ್‌ಗಳಿಗೆ ಒದಗಿಸುವ ವಿದ್ಯುತ್ ಕಡಿತ, ವಿದ್ಯುತ್ ಶುಲ್ಕದ ಹೆಚ್ಚಳ, ಮೇವಿನ ಕೊರತೆ, ಗುಳೇ ಹೋಗುವ ರೈತರು, ಬರಪರಿಹಾರಕ್ಕೆ ಬಿಡುಗಡೆ ಮಾಡಿದ ಹಣ ರೈತರಿಗೆ ತಲುಪದಿರುವುದು, ಸಾಲವಸೂಲಾತಿಯಲ್ಲಿ ಉಗ್ರಕ್ರಮಗಳು, ಬೆಳೆಯ ವಿಮಾಹಣವು ಪಾವತಿಯಾಗದಿರುವುದು, ವಿದ್ಯುತ್ ವಲಯದಲ್ಲಿ ಡಾರ್ಕ್ ಮತ್ತು ಗ್ರೇ ಏರಿಯಾಗಳಲ್ಲಿ, ಅಕ್ರಮ ವಿದ್ಯುತ್ ಸಂಪರ್ಕಗಳ, ಅಕ್ರಮ-ಸಕ್ರಮ ಸಮಸ್ಯೆಗಳು, ರೈತ ಕಾಯಕ ಕೆರೆ ಯೋಜನೆ, ಇಂಡಸ್ಟ್ರೀಗೆ ಕೊಟ್ಟ ಉತ್ತೇಜನ ಕೃಷಿಗೆ ದಕ್ಕದಿರುವುದು, ಗ್ರಾಮಾಂತರ ಪ್ರದೇಶಗಳಲ್ಲಿ ಲೋಡ್‌ಶೆಡ್ಡಿಂಗ್ ಅನ್ವಯದ ಕಾರಣ, ರೈತರಿಗೆ ತೊಂದರೆ, ದನಕರುಗಳಿಗೆ ಮೇವಿಲ್ಲದೆ ಕಟುಕರಿಗೆ ಮಾರಾಟ, ಬತ್ತಿದ ಕೆರೆಗಳಲ್ಲಿ ಹೂಳು ತೆಗೆದು ಪುನರುಜ್ಜೀವನ ಕಾರ್ಯಕ್ರಮ, ಗೋಶಾಲೆ ತೆಗೆದು ಜಾನುವಾರುಗಳನ್ನೂ ರಕ್ಷಿಸಬೇಕಾದ ಕ್ರಮಗಳು ಅಲ್ಪಾವಧಿ ಸಾಲಗಳನ್ನು ದೀರ್ಘಾವಧಿ ಸಾಲಗಳನ್ನಾಗಿ ಪರಿವರ್ತಿಸುವುದು, ಸಾಲದ ಮೇಲಿನ ಬಡ್ಡಿ ಮನ್ನಾ, ಆವರ್ತನಿಧಿ, ಬತ್ತಿದ ಬೋರ್‌ವೆಲ್‌ಗಳ ಅಂತರ್ಜಲ ಸೆಲೆಯತ್ತ ಕೊಡಬೇಕಾದ ಗಮನ, ಕೇಂದ್ರದಿಂದ ಬರಬೇಕಾದ ಬರ ಪರಿಹಾರದ ಹಣ, ಜಲಸಂವರ್ಧನ ಕಾರ್ಯಗಳು, ನೀರು, ವಿದ್ಯುತ್, ಕೂಲಿ, ಮೇವು ಇತ್ಯಾದಿಗಳ ಬರವಿರುವಲ್ಲಿ ಅವನ್ನು ಎದುರಿಸುವ ಬಗೆಗಳು, ಕೃಷಿ ಬೆಲೆಗಳ ಆಯೋಗ ರಚನೆ ಹಾಗು ಶಿಫಾರಸ್ಸುಗಳ ಅನುಷ್ಠಾನ, ಕೃಷಿವಲಯದಲ್ಲಿ ತಂತ್ರಜ್ಞಾನದ ಬಳಕೆಯ ಅವಶ್ಯಕತೆ, ರೈತಮಿತ್ರ ಯೋಜನೆ, ರೈತ ಮಾಹಿತಿ ಬ್ಯಾಂಕ್, ಸಾಲ ನೀಡುವ ಬ್ಯಾಂಕ್‌ಗಳ ಪುನಶ್ಚೇತನ, ರೈತರಿಗೆ ಕೃಷಿ ಕುರಿತು ಸೂಕ್ತ ತರಬೇತಿ, ತೆಂಗಿಗೆ ತಗುಲಿದ ನುಸಿರೋಗ, ಚೀನಾದ ರೇಷ್ಮೆ ಆಮದಿನಿಂದಾಗಿ ನಮ್ಮ ರೇಷ್ಮೆ ಬೆಳೆಗಾರರ ಪರಿಸ್ಥಿತಿ, ಬೆಲೆ ಮತ್ತು ಬೆಳೆ ಕುಸಿತ, ತತ್ಪರಿಣಾಮವಾಗಿ ರೈತರ ರೈತರ ಸಾಮೂಹಿಕ ಆತ್ಮಹತ್ಯೆಯ ಪ್ರಯತ್ನ ಹಾಗು ಅದನ್ನು ತಡೆಗಟ್ಟಲು ಕ್ರಮಗಳು, ಮಾರ್ಕೆಟ್*

*ಇಂಟರ್‌ವೆನ್‌ಶನ್, ಬೀಜ ಭತ್ತದ ಸರಬರಾಜು ಹಾಗು ಸಬ್ಸಿಡಿ, ಸಹಕಾರಿ ಸಕ್ಕರೆ ಕಾರ್ಖಾನೆಗಳು ರೈತರಿಗೆ ಹಣ ಪಾವತಿ ಮಾಡದಿರುವುದು, ಕ್ರಾಪ್‌ಪ್ಯಾಟರನ್, ಕುರಿತ ಚಿಂತನೆಗಳು ಜಲಭಾಗ್ಯ ನಿಗಮದ ಬಾಂಡ್‌ಗಳು, ರೈತರಿಗೆ ಆಕ್ಸಿಡೆಂಟ್ ಇನ್ಶೂರೆನ್ಸ್ ಲಾಂಚಿಂಗ್ 'ನಮ್ಮ ಹೊಲ ನಮ್ಮ ರಸ್ತೆ' ಕಾರ್ಯಕ್ರಮ 'ಕೂಲಿಗಾಗಿ ಕಾಳು' ಯೋಜನೆ ಇತ್ಯಾದಿ ಕುರಿತೆಲ್ಲ ಚರ್ಚೆ, ಸಲಹೆ, ವಾಗ್ವಾದಗಳು ಈ ಅಧಿವೇಶನಗಳ ನಡವಳಿಕೆಗಳಲ್ಲಿ ಕಂಡು ಬರುತ್ತದೆ. ಈ ನಡುವೆ ರೈತರ ಆತ್ಮವಿಶ್ವಾಸ ಹಾರಿಹೋಗಿ ಆತ್ಮಹತ್ಯೆ ಮಾಡಿಕೊಂಡ ಬಗ್ಗೆ ಅಧ್ಯಯನ ವರದಿಗಳ ಕುರಿತೂ ಚರ್ಚೆಯಾಗಿವೆ. ಈ ಸಮಸ್ಯೆಗಳ ಹಿನ್ನೆಲೆಯಲ್ಲಿ ರೈತರ ಸಂಘರ್ಷ ಬೆಳೆದು ಚಳುವಳಿ ಪ್ರೇರಕವಾಗಿ, ಬರ ಪರಿಸ್ಥಿತಿಯೂ ಹೇಗೆ ಕಾರಣವಾಗುತ್ತದೆ, ಎಂಬುದು ಈ ಚರ್ಚೆಗಳಿಂದ ವ್ಯಕ್ತವಾಗುತ್ತದೆ. ಜೊತೆಗೆ ಸದನದ ಸದಸ್ಯರ ಕಾಳಜಿಯೂ ವಿಶೇಷವಾಗಿ ಆ ಬಗ್ಗೆ ವ್ಯಕ್ತವಾಗಿ ಪರಿಹಾರ ಸೂಚಿಗಳೂ ಕಾಣಬರುವುದು ಗಮನಾರ್ಹ. ಅಲ್ಲಲ್ಲಿ ರಾಜಕೀಯ ವಾಸನೆಗಳಿದ್ದರೂ ಅವೆಲ್ಲ ಗೌಣ.*

## ವಿಷಯ 9 : ಕರ್ನಾಟಕ ರಾಜ್ಯದ ಭೀಕರ ಬರಗಾಲ ಪರಿಸ್ಥಿತಿ ಕುರಿತ ಚರ್ಚೆ

ವಿಧಾನಪರಿಷತ್ತಿನಲ್ಲಿ 23.7.2001ರ 9ನೇ ಅಧಿವೇಶನದಲ್ಲಿ[13] ರಾಜ್ಯದ ಬರಗಾಲ ಪರಿಸ್ಥಿತಿ ಕುರಿತಂತೆ ಶ್ರೀ **ಡಿ.ಎಲ್.ಜಗದೀಶ್** ಅವರು ಮಾತನಾಡುತ್ತ: ರಾಜ್ಯದ ಮೂರು ಜಿಲ್ಲೆಗಳನ್ನುಳಿದು ಉಳಿದ ಎಲ್ಲಾ ಜಿಲ್ಲೆಗಳು ಬರಗಾಲ ಪೀಡಿತ ಪ್ರದೇಶವಾಗಿದೆ. ತುಮಕೂರು ಜಿಲ್ಲೆ ಬರಪೀಡಿತವಾಗಿದ್ದು, ಸರ್ಕಾರ ರೈತರ ರಕ್ಷಣೆಗೆ ಬರುತ್ತಿಲ್ಲ. ಮೆಕ್ಕೆಜೋಳ, ತೆಂಗಿನ ರೈತರೂ ಕಂಗೆಟ್ಟಿದ್ದಾರೆ. ನುಸಿರೋಗಕ್ಕೆ ಕೋಟಿಗಟ್ಟಲೆ ಹಣ ಖರ್ಚು ಮಾಡಿ ಬಳಸಿದ 'ಮಾನೋಕ್ರೋಟೋಪಾಸ್' ಔಷಧಿ ಫಲಕಾರಿ ಆಗಿಲ್ಲ. ಬರಗಾಲದ ಛಾಯೆ ಯಾವ ಜಿಲ್ಲೆ ಯಾವ ತಾಲೂಕಿನಲ್ಲಿಲ್ಲ! ಪ್ಯಾಟ್ರನ್ ಆಫ್ ಕ್ರಾಪ್ ವಿಚಾರ ತಿಳಿದು ಯಾವ ಬೆಳೆಯಿಂದ ರೈತರು ಸಂಕಷ್ಟಕ್ಕೆ ಒಳಗಾಗಿದ್ದಾರೆ ಎಂಬುದರ ಅರಿವುಬೇಕು. ಯಾರು ರೈತರ ಹಿತವನ್ನು ಕಾಪಾಡುತ್ತಾರೆಯೋ ಅಂತಹವರ ನಾಯಕತ್ವವನ್ನು ಹುಡುಕಿಕೊಳ್ಳುವ ಶಕ್ತಿ ರೈತರಲ್ಲಿದೆ. ಅದಾಗಿ ರೈತರನ್ನು ಕಂಗೆಡಿಸಬಾರದು. ತೆಂಗು ನುಸಿರೋಗಕ್ಕೆ ಒಳಗಾಗಿ ಶೇ.60ರಿಂದ 70 ಭಾಗ ಬೆಳೆ ನಷ್ಟವಾಗಿದೆ. ಅಪೆಕ್ಸ್‌ಬ್ಯಾಂಕ್ ಮುಖಾಂತರ ಖರೀದಿ ಎಂದೆಲ್ಲ ಭರವಸೆ ಕೊಟ್ಟಿರುವಲ್ಲಿ, ನಫೆಡ್‌ನವರು, ವೇರ್‌ಹೌಸ್ ಕಾರ್ಪೊರೆಷನ್‌ನವರು ಕಂಡಿಷನ್ ಹಾಕಿ, ಹಣ

13. ವಿಧಾನಪರಿಷತ್ತಿನ ನದವಳಿಕೆಗಳು, ಸಂಪುಟ 305 (1–3), ಭಾಗ1, 23.7.2001 ಪು.108–159

ಬಿಡುಗಡೆ ಮಾಡದೆ ರೈತರು ತುಂಬ ತೊಂದರೆಗೀಡಾಗಿದ್ದಾರೆ. ಆವರ್ತನಿಧಿಯಿಂದ ಅಥವಾ ಬ್ಯಾಂಕ್ ಮುಖಾಂತರ ಪೇಮೆಂಟ್ ಮಾಡಿಸುವ ಬಗ್ಗೆ ಹೇಳಿಯೂ ಆ ಕೆಲಸವಾಗಿಲ್ಲ. ಆವರ್ತನಿಧಿಯ ಹಣ 75ಕೋಟಿಯೆ? 200ಕೋಟಿಯೇ? ಎಂಬ ನಿಗದಿ ಬಗ್ಗೆ ಸ್ಪಷ್ಟನೆ ಬಯಸಿದರು. ಈ ಬಗ್ಗೆ ಶ್ರೀ **ಟಿ.ಬಿ.ಜಯಚಂದ್ರ** ಅವರು ಉತ್ತರಿಸುತ್ತ 200ಕೋಟಿ ರೂ.ನಿಗದಿ ಮಾಡಿರುವಲ್ಲಿ ಆವರ್ತನಿಧಿ ಮೂಲಕ 88ಕೋಟಿ ರೂ.ಅನ್ನು ಖರ್ಚು ಮಾಡಲಾಗಿದೆ. ಆದರೆ ಇದು ರಿವಾಲ್ವಿಂಗ್ ಫಂಡ್. ಹಣದ ಪ್ರಾವಿಷನ್ ಮಾಡಿರುವಾಗ ಆಪರೇಷನ್‌ಗೆ ಬರುತ್ತದೆ, ಎಂದರು.

ಶ್ರೀ **ಎಂ.ಸಿ.ನಾಣಯ್ಯ** ಅವರು ಚರ್ಚೆಯಲ್ಲಿ ಪಾಲ್ಗೊಂಡು, ಆವರ್ತನಿಧಿಗೆ ಬಜೆಟ್‌ನಲ್ಲಿ, ರಾಜ್ಯದ 23ಜಿಲ್ಲೆಗಳಲ್ಲಿ ಬರ ಕಾಣಿಸಿಕೊಂಡಿರುವಾಗ 200ಕೋಟಿ ರೂ.ನಿಂದ 400ಕೋಟಿ ರೂ.ಗೆ ಹೆಚ್ಚಿಸಿರುವ ಬಗ್ಗೆ ಹೇಳಿರುವ ಮುಖ್ಯಮಂತ್ರಿಗಳ ಈ ಮಾತನ್ನು ಸರ್ಕಾರ ಸ್ಪಷ್ಟವಾಗಿ ಜಾರಿ ಮಾಡಬೇಕು. ಪ್ರೈಸ್ ಇಂಟರ್‌ವೆನ್‌ಶನ್ ಆಗುವುದು ಬೆಲೆಗಳ ಕುಸಿತವಾದಾಗ ಎನ್ನುವ ಮಾತನ್ನು ಒಪ್ಪುವುದಕ್ಕೆ ಆಗದು. ಆದರೆ ರೂ 400 ಕೋಟಿ ಆವರ್ತನಿಧಿ ಬಳಕೆ ಬರದ ಸಂಬಂಧದ ಮೇವಿಗೆಯೇ? ರೈತರಿಗೆ ಯಾವ ಕೆಲಸಕ್ಕೆ? ಎಂಬುದನ್ನು ನಿಖರವಾಗಿ ಹೇಳಬೇಕು ಎಂಬ ಅಭಿಪ್ರಾಯವನ್ನು ವ್ಯಕ್ತಮಾಡಿದರು.

**ಡಾ.ಎಂ.ಆರ್. ತಂಗಾ** ಅವರು ಮಾತನಾಡಿ, ಮ್ಯಾಚಿಂಗ್ ಗ್ರಾಂಟ್ ಕೇಂದ್ರದಿಂದ ಬಂದರೆ 400ಕೋಟಿಗಳಿಗೆ ಏರಿಸಲಾಗುತ್ತದೆ ಎಂದು ಹೇಳಿ ಮುಖ್ಯಮಂತ್ರಿಗಳು ಕೇಂದ್ರದ ನೆರವು ಕೇಳುತ್ತೇವೆ ಎಂದರೆ ಆ ಬಗ್ಗೆ ವಾದ ಮಾಡಲು ಅವಕಾಶವಿಲ್ಲ ಎಂದರು. ಶ್ರೀ **ಟಿ.ಬಿ.ಜಯಚಂದ್ರ** ಅವರು ಈ ಮಾತಿಗೆ ಪ್ರತಿಕ್ರಿಯಿಸುತ್ತ, ಶ್ರೀ ಪಿ.ರಾಮಯ್ಯ ಅವರು ಹೇಳಿದಂತೆ ಎಪಿಎಂಸಿ ಯಿಂದ ಬಂದ 55 ಕೋಟಿ ರೂ.ಹಂಚಿರುವಲ್ಲಿ ಅದನ್ನು 200ಕೋಟಿ ರೂ.ಗಳಿಗೆ ಹೆಚ್ಚಿಸಿ 'ರೈತ ಕಲ್ಯಾಣನಿಧಿ'ಗೆ ನೀಡಿ, ತಕ್ಷಣವೇ 200ಕೋಟಿ ರೂ.ಗಳೊಂದಿಗೆ ಆ ನಿಧಿಯನ್ನು ಆರಂಭಿಸುತ್ತಿದ್ದೇವೆ. 400 ಕೋಟಿ.ರೂಗಳವರೆಗೆ ಬೆಳೆಸುವುದು ನಮ್ಮ ರೈತ ಪರ ನಿಲುವಾಗಿದೆ ಎಂಬ ಅಭಿಪ್ರಾಯವಿಟ್ಟು ನುಡಿದರು; ಈವರೆಗೆ ಆವರ್ತನಿಧಿಯಿಂದ 88ಕೋಟಿ.ರೂ ಬಿಡುಗಡೆ ಮಾಡಿದ್ದೇವೆ, ಎಂದರು. ಈ ಬಗ್ಗೆ ಶ್ರೀ ಡಿ.ಎಲ್.ಜಗದೀಶ್ ತಮ್ಮ ಪ್ರತಿಕ್ರಿಯೆಯಲ್ಲಿ, ರೈತರಿಗೆ ಹಣದ ಖರ್ಚನ್ನು ಕೋಟಿ ಲೆಕ್ಕದಲ್ಲಿ ತೋರಿಸಿ ರೈತರನ್ನು ಕಗ್ಗತ್ತಲಲ್ಲಿಡಲಾಗಿದೆ. ಬರಗಾಲ ನಿಭಾಯಿಸುವ ಕಾರ್ಯಸೂಚಿ ತಿಳಿದಿಲ್ಲ. ಒಂದೆಡೆ 'ರೈತರ ಕಲ್ಯಾಣನಿಧಿ'ಯನ್ನು ಬೆಳೆಸುತ್ತೇವೆ ಎನ್ನುವುದು, ರೈತರ ಎಲ್ಲಾ

ಸಾಲಮನ್ನಾ ಮಾಡಿದೆ ಎನ್ನುವುದು, ಇನ್ನೊಂದೆಡೆ 400ಕೋಟಿ ರೂ. ರೈತರಿಗೆ ಕೊಟ್ಟಿದೆ ಎಂದರೆ, ತಾಳೆ ಹೇಗೆ? ಎಂಬ ಧ್ವನಿಯಲ್ಲಿ ನುಡಿದರು. ಮುಂದುವರಿದು, ಪ್ರಮುಖ ಪತ್ರಿಕೆಗಳಿಂದ ಬರಗಾಲದ ಪರಿಸ್ಥಿತಿ ಪ್ರಕಟಣೆ, ದನಗಳಿಗೆ ಮೇವು ಇಲ್ಲದಿರುವುದು, ರಾಯಚೂರು ಜಿಲ್ಲೆಯಲ್ಲಿ ಲಕ್ಷಾಂತರ ಜನ, 475 ಹಳ್ಳಿಗಳಿಂದ ವಲಸೆ ಹೋಗುವ ಪರಿಸ್ಥಿತಿ–ಇವೆಲ್ಲ ಪ್ರಕಟಗೊಂಡಿವೆ. ಸರ್ಕಾರ ರೈತರ ಸಮಸ್ಯೆಗಳಿಗೆ ಸ್ಪಂದಿಸುತ್ತಿರುವ ರೀತಿ ಬೇಜವಾಬ್ದಾರಿಯದು, ನಿರ್ಲಕ್ಷದ್ದು. ರೈತರಲ್ಲಿ ಸಮರ್ಥರಿದ್ದರೂ ದೇಶದಲ್ಲಿ ಸಂಘಟನೆ ಇಲ್ಲದಂಥ ಶಕ್ತಿ ಎನಿಸಿದ್ದಾರೆ. ರೈತರನ್ನು ಒಡೆದು ಆಳಿರುವ ಕಾರಣ ಅವರು ವಂಚಿತರಾಗಿದ್ದಾರೆ. ಮಾರುಕಟ್ಟೆ ಮಧ್ಯೆಪ್ರವೇಶಮಾಡಿ ರೈತರ ರಕ್ಷಣೆಗೆ ಬರುತ್ತೇವೆಂದು ಹೇಳಿದ ಸರ್ಕಾರ ಇವೊತ್ತಿನವರೆಗೂ ರಾಜ್ಯದ ತೆಂಗು ಬೆಳೆಗಾರರಿಗೆ ಸ್ಪಂದಿಸಿಲ್ಲ. ಮೆಕ್ಕೆಜೋಳದ ಖರೀದಿಗೆ 45–50ಕೋಟಿ ರೂ.ಬಿಡುಗಡೆ ಮಾಡಿ ತೋರಿದ ಕಳಕಳಿಯನ್ನು ತೆಂಗು ಬೆಳೆಗಾರರ ಬಗ್ಗೆ ತೋರಿಲ್ಲ. ಡಿಸ್‌ಆನರ್ ಆದ ಚೆಕ್ ಹಿಡಿದುಕೊಂಡು ತೆಂಗು ಬೆಳೆಗಾರರು ಭಿಕ್ಷೆ ಬೇಡುವಂತೆ ಮಾಡಲಾಗಿದೆ. ಭೂಮಿಗೆ ಹನಿಮಳೆ ಇಲ್ಲ. ಬೆಳೆದಿರುವ ಅಲ್ಪ ತೆಂಗು ಬೆಳೆಗೂ ಸರಿಯಾದ ಬೆಲೆ ಇಲ್ಲ. ಒಂದು ಕಡೆ ಆವರ್ತನಿಧಿಯಿಂದ ಹಣ ಕೊಡುವುದಿಲ್ಲ. ಇನ್ನೊಂದು ಕಡೆ ತೆಂಗಿಗೆ ನೀರಾ ಕಟ್ಟುವುದಕ್ಕೂ ಬಿಡುವುದಿಲ್ಲ. ಅಂತಾಗಿ ಆವರ್ತನಿಧಿಯಿಂದ ಬೆಳೆಗಾರರ ಕೊಬ್ಬರಿಯನ್ನು ಖರೀದಿ ಮಾಡಬೇಕು. ಬರಗಾಲದ ಹೆಸರಿನಲ್ಲಿ ಹಣ ಲೂಟಿಯಾಗುತ್ತಿದೆ. ಬರಗಾಲವಿರುವೆಡೆ ರೈತರಿಗೆ ಸ್ಪಂದಿಸಿ ಕೆಲಸಮಾಡುತ್ತಿಲ್ಲ. ಒಂದುಕಡೆ ನುಸಿರೋಗಕ್ಕೆ ಔಷಧಿ ಕಂಡುಹಿಡಿದಿಲ್ಲ, ಇನ್ನೊಂದು ಕಡೆ ನೀರಾ ಕಟ್ಟಲು, ಪರ್ಮಿಷನ್, ಪ್ರಾವಿಷನ್ ಮಾಡುತ್ತೇವೆ. ರೈತರ ರಕ್ಷಣೆಗೆ ಸರ್ಕಾರ ಬರುತ್ತದೆಂದು ಸ್ಪಷ್ಟ ಪಡಿಸಬೇಕು, ಎಂದರು. ಮಳೆ ಇಲ್ಲ, ಬಿತ್ತನೆ ಸಹ ಇಲ್ಲ. ಹಾಗಾಗಿ ಎರಡು ವರ್ಷಕಾಲ ನೀರಾ ಕಟ್ಟಲು ಪ್ರಾವಿಶನ್ ಮತ್ತು ಕೌಂಟರ್‌ಸೇಲ್‌ಗೆ ಅವಕಾಶ; ರೈತರ ಸಾಲಮನ್ನಾ, ಕೊಬ್ಬರಿ ಬೆಳೆಗಾರರಿಗೆ ನೀರಾ ಕಟ್ಟಲು ಅವಕಾಶ ಹಾಗು ಹೆಚ್ಚು ಹಣ ಬಿಡುಗಡೆ ಕುರಿತೆಲ್ಲ ನುಡಿದರು.

ಶ್ರೀ **ಕೆ.ವಿ.ಸುಬ್ಬಾರೆಡ್ಡಿ** ಅವರು ತಮ್ಮ ವಿಚಾರಗಳನ್ನು ಮಂಡಿಸುತ್ತ, ಕೋಲಾರ ಜಿಲ್ಲೆಯಲ್ಲಿರುವ 3.5 ಲಕ್ಷ ಕೊಳವೆ ಭಾವಿಗಳ ಪೈಕಿ ಸರ್ವಿಸ್ ಮಾಡಬೇಕಾದ 1 ಲಕ್ಷ ಕೊಳವೆ ಭಾವಿಗಳಿಗೆ ಹಿಂದೆ 10 ಸಾವಿರ ಸರ್ವೀಸ್ ಛಾರ್ಜು ಇದ್ದದ್ದು ಈಗ ಮಿನಿಮಂ 25 ಸಾವಿರ ಮಾಕ್ಸಿಮಂ 1 ಲಕ್ಷ ಎಂದಿರುವುದು ರೈತರ ಬೆನ್ನು ಮೂಳೆ ಮುರಿಯುವ ಕೆಲಸ. ಕೋಲಾರ ಜಿಲ್ಲೆಯಲ್ಲಿ ನದಿ ನಾಲಾ ಸೌಕರ್ಯವಿಲ್ಲದ ಕಾರಣ

ಕೊಳವೆ ಭಾವಿ ಮೂಲಕವೇ ಜೀವನ ನಡೆಸಬೇಕಾದ ಕಾರಣ ಹಿಂದಿನಂತೆ 10 ಸಾವಿರ ರೂ.ಸರ್ವೀಸ್ ಛಾರ್ಜು ಹಾಗು ರಿಯಾಯಿತಿಗಳಿರಲಿ ಎಂದರು. ಇದಕ್ಕೆ ಉತ್ತರವಿತ್ತ ಶ್ರೀ ಟಿ.ಬಿ.ಜಯಚಂದ್ರ ಅವರು 25 ಸಾವಿರ ರೂ ಸರ್ವಿಸ್ ಛಾರ್ಜ್ ಆದೇಶದ ವಾಪಾಸಾತಿ ಆಣತಿ ಡಾರ್ಕ್ ಅಂಡ್ ಗ್ರೇ ಭೂಮಿಗೂ ಸಹ ಸರ್ವೀಸ್‌ಕೊಡಲು ಕೆ.ಇ.ಬಿ.ಗೆ ನಿರ್ದೇಶನ ಮಾಡಿರುವ ಬಗ್ಗೆ ತಿಳಿಸಿದರು. ಆದರೆ ಶ್ರೀ ಕೆ.ಎನ್.ರಾಜಣ್ಣ ಅವರು, ಇದು ತತ್‌ಕಾಲ ಸ್ಕೀಂ ಆಗಿರುವುದರಿಂದ, ಡಾರ್ಕ್, ಗ್ರೇ ಇರುವಂತಹ ತಾಲೂಕುಗಳಲ್ಲಿ ಜಾರಿ ಇರುವ ಬಗ್ಗೆ ಸ್ಪಷ್ಟ ನಿರ್ದೇಶನ ಸರ್ಕಾರದಿಂದ ಬರಲಿ ಎಂದು ಬಯಸಿದರು. ಶ್ರೀ ಕೆ.ವಿ.ಸುಬ್ಬಾರೆಡ್ಡಿಯವರು ಮಾತನ್ನು ಮುಂದುವರಿಸಿ, ದನಕರುಗಳಿಗೆ ಮೇವು ಇಲ್ಲ, ಮಳೆ ಇಲ್ಲ, ಜನಕ್ಕೆ ಅನ್ನ ಇಲ್ಲ; ಇಂಥ ಸಮಯದಲ್ಲಿ ಕೋಲಾರ ಜಿಲ್ಲೆಯಲ್ಲಿ ಹಾಲಿನ ಉತ್ಪನ್ನ ಹೆಚ್ಚು ಮಾರುಕಟ್ಟೆಯಲ್ಲಿ ಬೇಡಿಕೆ ಇಲ್ಲ ಎಂದು ಎಂದು ಹೇಳಿ ರೈತರಿಗೆ ಲೀಟರ್ ಹಾಲಿಗೆ 50 ಪೈಸೆ ಕಡಿಮೆ ಮಾಡಿಕೊಂಡರೆ, ಅದು ದುರಾದೃಷ್ಟದ ಸಂಗತಿ. ಅದಾಗಿ ಬೆಂಗಳೂರು ಮಾರುಕಟ್ಟೆಯಲ್ಲಿ ಹಾಲಿನ ರೀಟೇಲ್ ವ್ಯಾಪಾರಕ್ಕೆ ಅಪ್ಪಣೆ ಕೊಡಲಿ ಸರ್ಕಾರ ಎಂದು ಕೇಳಿಕೊಂಡರು. ಇದಲ್ಲದೆ ರೈತರು ಕಷ್ಟದಲ್ಲಿರುವ ಕಾರಣ, ಸರ್ಕಾರ ರೈತರ ಹೆಸರಿನಲ್ಲಿ ಬಡ್ಡಿ ಮತ್ತು ಸುಸ್ತಿ ಬಡ್ಡಿಯನ್ನು ಬ್ಯಾಂಕಿನಲ್ಲಿ ಕಟ್ಟುವುದು; ಕಟ್ಟಬೇಕಾದ ಅಸಲನ್ನು ಬೆಳೆ ಬರುವವರೆವಿಗೂ ಸಮಯ ನೀಡಿ ಕಂತುಗಳಲ್ಲಿ ಕಟ್ಟಲು ಅವಕಾಶ ನೀಡುವುದು; ಕೊಳವೆ ಭಾವಿಗಳನ್ನು ಹಾಕಿರುವುದಕ್ಕೆ ಕೊಡಬೇಕಾದ 6 ಕೋಟಿ ರೂ.ಗಳಲ್ಲಿ ಶೇ.75 ಭಾಗವನ್ನಾದರೂ ಬಿಡುಗಡೆ ಮಾಡುವುದು; ಮೇವಿನ ಬ್ಯಾಂಕ್‌ಗಳ ಸ್ಥಾಪನೆ; ಹಸಿರು ಕಾರ್ಡ್ ಇರುವವರಿಗೆ ಆಹಾರ ಪದಾರ್ಥಗಳನ್ನು ಕೊಟ್ಟು, ಸುಗ್ಗಿಯಲ್ಲಿ ವಾಪಸ್ ಪಡೆಯುವಿಕೆ; ಕೋಲಾರ ಜಿಲ್ಲೆಯಲ್ಲಿ ಕೆರೆಗಳಲ್ಲಿ ಹೂಳೆತ್ತುವ ಕಾರ್ಯಕ್ರಮಕ್ಕೆ ಹೆಚ್ಚಿನ ಆದ್ಯತೆ–ಈ ಬಗೆಗೆಲ್ಲ ಬೇಡಿಕೆಗಳನ್ನೂ, ಸಲಹೆಗಳ ಸಹಿತ ಮುಂದಿಟ್ಟರು.

ಶ್ರೀ ವಿ.ಆರ್.ಸುದರ್ಶನ್ ಅವರು ತಮ್ಮ ಪ್ರವಾಸದಲ್ಲಿ ಗ್ರಾಮಾಂತರ ಪ್ರದೇಶದ ಬರದ ಪರಿಸ್ಥಿತಿಯನ್ನು ಕಂಡ ಹಿನ್ನೆಲೆಯಲ್ಲಿ ತಮ್ಮ ಮಾತುಗಳನ್ನು ಮುಂದಿಟ್ಟರು: ಮನಸ್ಸಿಗೆ ನೋವಾಗುವಂತ ಪರಿಸ್ಥಿತಿ 175 ತಾಲೂಕುಗಳ ಪೈಕಿ 100 ತಾಲೂಕುಗಳಲ್ಲಿ ಎದ್ದು ಕಾಣುವುದು, ಕೋಲಾರದ ರೇಷ್ಮೆ ಅಥವಾ ರಾಗಿ ಬೆಳೆಗಾರರು, ರಾಯಚೂರಿನ ಹತ್ತಿ ಬೆಳೆಗಾರರು, ಗುಲ್ಬರ್ಗದ ತೊಗರಿ ಬೆಳೆಗಾರರು, ಬೆಳಗಾಂ ಮತ್ತು ಮಂಡ್ಯದ ಕಬ್ಬು ಬೆಳೆಗಾರರು, ಹಾಗು ತೆಂಗು ಬೆಳೆಗಾರರು ಸಂಕಷ್ಟದಲ್ಲಿರುವುದಾಗಿದೆ;

ಕಂಗಾಲಾಗಿರುವ ರೈತರ ನೋವಿಗೆ ಸ್ಪಂದಿಸಬೇಕಾದ ಸರ್ಕಾರದ ನೈತಿಕ ಜವಾಬ್ದಾರಿ ಇದೆ ಎಂದು ಹೇಳಿದರು. ಮುಂದುವರಿದು ಹಿಂದೆ ಯಾವುದೇ ಹಳ್ಳಿಗಳಲ್ಲಿ ಕೆರೆ, ರಸ್ತೆ, ದೇಗುಲ, ಚರ್ಚು, ಮಸೀದೆ ಇರುತ್ತಿದ್ದು ಕೆರೆ ಪಕ್ಕದಲ್ಲಿ ಗುಂಡುತೋಪು ಇದ್ದು ವ್ಯವಸಾಯಕ್ಕೆ ಹಾಗು ತಮಗೆ ಉಪಯೋಗವಾಗುವಂಥ ಎಲ್ಲಾ ರೀತಿಯ ಮರಗಳ ಬೆಳಸು, ಗಿಡಮೂಲಿಕೆಗಳ ಬೆಳಸು, ಜಾನುವಾರುಗಳಿಗೆ ಗೋಮಾಳ, ಇರುತ್ತಿದ್ದು ಇಂದು, ಕೃಷಿ ಹಾಗು ನೀರಾವರಿ ಇಲಾಖೆಗಳಿದ್ದರೂ ಹಳ್ಳಿಗಳಲ್ಲಿ 10 ಎಕರೆಯಷ್ಟು ಗೋಮಾಳ ಪ್ರದೇಶವಿಲ್ಲ. ರಾಜ್ಯದ ನಾರ್ಮಲ್ ಮಳೆ 1139ಮಿ.ಮೀ. ಇರುತ್ತಿದ್ದುದು ಇಂದು ಸುಮಾರು 100–115 ಮಿ.ಮೀ.ನಷ್ಟು ಮಳೆ ನೀರು ಕೂಡ ಒದಗಲಿಲ್ಲ. ಬರಗಾಲದ ಸಮಯದಲ್ಲಿ ಕುಡಿಯುವ ನೀರಿನ ಸಮಸ್ಯೆ ಎದುರಾಗುತ್ತದೆ. ಕರ್ನಾಟಕದಲ್ಲಿ ದೊಡ್ಡ ಪ್ರಮಾಣದಲ್ಲಿ ಬರ ಆವರಿಸಿದೆ. ಕೇಂದ್ರವು, ನಮಗೆ ನೆರವು ನೀಡಬೇಕು. ಗ್ರಾಮಾಂತರ ಪ್ರದೇಶದ ಕೃಷಿಕರು, ಮಹಿಳೆಯರು ಹಾಗು ಮಕ್ಕಳ ಪೋಷಣೆಗೆ ಮುಂದಾಗುವ ಕಾರ್ಯದಲ್ಲಿ ತೊಡಗಬೇಕು, ಎಂದರು.

ಶ್ರೀ **ವಿ.ಡಿ.ಹೆಗ್ಗಡೆ** ಅವರು ಮಾತನಾಡಿ, ಉತ್ತರ ಕನ್ನಡ ಸೇರಿದಂತೆ ಕರ್ನಾಟಕದ 5–6 ಜಿಲ್ಲೆಗಳಲ್ಲಿಯ ಬರಗಾಲ; ದ.ಕನ್ನಡದ ಐದು ತಾ.ನಲ್ಲಿಯ ಅತಿವೃಷ್ಟಿಯಿಂದ ಆಗಿರುವ ಹಾನಿ ಅಡಿಕೆಗೆ ದರ ಸಿಗುತ್ತಿಲ್ಲವಾದ ಕಾರಣ ಅಡಿಕೆ ಬೆಳೆಗಾರರ ನಿರಾಸಕ್ತಿ; ತೆಂಗಿನ ದರದ ಕುಸಿತ; ಭತ್ತದ ಬಿತ್ತನೆಗೆ ಮಳೆಕಾರಣ ತೊಂದರೆ ಹಾಗು ಜೊತೆಗೆ ಬೆಳೆದ ಹುಲ್ಲಿನ ಹಾವಳಿ ಹಾಗು ಆ ಕಳೆ ತೆಗೆಯಲು ಎಕರೆಗೆ 5 ಸಾವಿರ ಖರ್ಚು; ಹತ್ತಿ ಹಾಗು ಕಬ್ಬಿನ ಕುಂಠಿತ ಇಳುವರಿ; ರೈತರಿಗೆ ಸದ್ಯ ಅಗತ್ಯವಾದ ಗೊಬ್ಬರ ಸರಬರಾಜಿನ ನೆರವು; ರೈತರ ಸಾಲ ಮನ್ನಾ; ಸಾಲ ಮರುಪಾವತಿ ಮಾಡಿರುವ ರೈತರಿಗೆ ಒಂದು ವರ್ಷ ಅವಧಿಗೆ ಬಡ್ಡಿರಹಿತ ಸಾಲ ನೀಡಿಕೆ ಕುರಿತೆಲ್ಲ ವಿಷಯವನ್ನು ಪ್ರಸ್ತಾಪಿಸಿದರು. ಈ ಸಂದರ್ಭದಲ್ಲಿ ಶ್ರೀ ವಿ.ಆರ್.ಸುದರ್ಶನ್ ಅವರು ಶ್ರೀ ವಿ.ಡಿ.ಹೆಗ್ಗಡೆ ಅವರ ರೈತರ ಸಾಲ ಮನ್ನಾ ಕುರಿತ ಸಲಹೆಗೆ ಬೆಂಬಲ ಸ್ವಾಗತ ನೀಡಿ, ಸಾಲಮನ್ನಾ ಮಾಡುವ ಅವಧಿಯನ್ನು 36 ತಿಂಗಳು, 26 ತಿಂಗಳು ಒಳಗಿನ ರೈತರು ಎಂದು ಅವಧಿ ಆಧಾರದ ವರ್ಗೀಕರಣ ಬಿಟ್ಟು, ಡಿಸಂಬರ್‌ವರೆಗೆ ವಿಸ್ತರಿಸಬೇಕು ಎಂದರು.

ಶ್ರೀ **ಡಿ.ವಿ.ಹೆಗ್ಗಡೆ** ಅವರು ಮಾತನ್ನು ಮುಂದುವರಿಸಿ, ಸಾಲ ತುಂಬಿ ಮತ್ತೆ ಸಾಲ ಪಡೆವ ರೈತರಿಗೆ ಬಡ್ಡಿರಹಿತ ಸಾಲ ನೀಡಿಕೆ; ಶೇ 25ರಷ್ಟು ಸಾಲ

ಬಾಕಿಯ ರೈತರಿಗೂ ಹೊಸದಾಗಿ ಬಡ್ಡಿ ರಹಿತ ಸಾಲ ನೀಡಿಕೆ; ಬೀಜ ಗೊಬ್ಬರದ ಸರ್ಕಾರಿ ಸಹಾಯ ಕೃಷಿ ಕಾರ್ಮಿಕರಿಗೆ ಮಾತ್ರ ನೀಡಿರುವ, ಹಸಿರು ಕಾರ್ಡ್; ರೈತರಿಗೆ ನೀಡಿರುವ ಹಳದಿ ಕಾರ್ಡ್; ಹತ್ತಿ ಬೆಳೆಯುವ ರೈತರಿಗೆ ನಿಧಾನವಾಗಿ ಹಣಪಾವತಿ ಎಂದು ಎಪಿಎಂಸಿಯವರು ನೀಡುವ ಉದರಿ ಸರ್ಟಿಫಿಕೇಟ್ ಹಾಗು ಹತ್ತಿವ್ಯಾಪಾರಿಯಿಂದ ಉದರಿ ಖರೀದಿಯಾಗುವ ಸಂದರ್ಭದಲ್ಲಿ ಒದಗುವ ಅಪಾಯ; ಬಾಂಡ್ ಆಧಾರದ ಮೇಲೆ ರೈತರ ಹತ್ತಿಯ ಮಾರಾಟ; ಕಬ್ಬಿನ ರೈತರಿಗೆ ಕಾರ್ಖಾನೆಗಳಿಂದ ಪಾವತಿಯಾಗದ ಹಣ; ಸಕ್ಕರೆ ಚೆನ್ನಾಗಿ ಬಂದರೂ ರೈತರಿಗೆ ಕಾರ್ಖಾನೆಗಳು ನೀಡುವ ಅಲ್ಪ ಹಣ; ಹಾಳಾಗಿರುವ ಹಳ್ಳಿ ರಸ್ತೆಗಳ ರಿಪೇರಿ–ಇತ್ಯಾದಿ ವಿಷಯಗಳ ಬಗ್ಗೆ ವಿಶ್ಲೇಷಿಸಿ ಹೇಳಿದರು.

ಶ್ರೀ **ಎಸ್.ಡಿ.ಕರ್ಪೂರ್ ಮಠ್** ಅವರು ಬಿಜಾಪುರ ಜಿಲ್ಲೆಯ ಬರಗಾಲ ಪರಿಸ್ಥಿತಿಯನ್ನು ವಿವರಿಸುತ್ತ: ದನಕರುಗಳಿಗೆ ಮೇವು, ದುಡಿಯುವ ಕೈಗಳಿಗೆ ಕೆಲಸ ಇಲ್ಲದೆ ಕಂಗಾಲಾಗಿರುವ ರೈತರು; ಬೆಳೆದ ಯಾವ ಬೆಳೆಗೂ ಬೆಂಬಲ ಬೆಲೆ ಸಿಗದೆ ಆತ್ಮಹತ್ಯೆ ಮಾಡಿಕೊಂಡಿರುವ ರೈತರು; ನಿಜವಾದ ವಿಶಾಲಮನೋಭಾವದ ಸಮಾಜವಾದಿ ನಮ್ಮ ರೈತ–ಅಂಥವನ ಕಷ್ಟಕ್ಕೆ ಸರ್ಕಾರ ಗಮನಹರಿಸಿ ನೀಡಬೇಕಾದ ನೆರವು; ರೈತರ ನೆರವಿಗೆ ಬರದಿದ್ದರೆ ಆಗುವ ಪರಿಣಾಮ; ರೈತರಿಗೆ ಸುಸ್ತಿ ಬಡ್ಡಿ ಮನ್ನಾ; ಹಿಂದಿನ ಬರಗಾಲದ ಸಮಯದಲ್ಲಿ ಸರ್ಕಾರ ಗೋಶಾಲೆ ತೆರೆದು ರೈತರಿಗೆ ಮಾಡಿದ ಸಹಾಯ; ಒಂದು ಕಡೆ ಗ್ಯಾಟ್ ಒಪ್ಪಂದ, ಮತ್ತೊಂದು ಕಡೆ ನುಸಿರೋಗ ಇವೆರಡರ ನಡುವೆ ಫುಟ್‌ಬಾಲ್‌ನಂತೆ ಒದೆಸಿಕೊಳ್ಳುತ್ತಿರುವ ರೈತನ ಕುರಿತು ತಮ್ಮ ವಿಷಯಗಳನ್ನು ಮಂಡಿಸಿದರು.

ಶ್ರೀ **ಎಂ.ಎಸ್.ಸಿದ್ಧರಾಜು** ಅವರು, ಗ್ಯಾಟ್ ಒಪ್ಪಂದಕ್ಕೆ ಸಹಿ ಹಾಕಿದ ಕೇಂದ್ರಸರ್ಕಾರ, ಜಾಗತಿಕ ಸ್ಪರ್ಧಾತ್ಮಕ ಜಗತ್ತಿಗೆ ಕಾಲಿಡುತ್ತಿರುವ ಬಗ್ಗೆ ಸಾಮಾನ್ಯ ರೈತರಿಗೆ ತಿಳುವಳಿಕೆ ಕೊಡದೆ ಹೋದದ್ದು; ತೆಂಗಿಗೆ ತಗುಲಿರುವ ನುಸಿಪೀಡೆ; ನೀರಾ ಇಳಿಕೆಯಿಂದ ನುಸಿಬಾಧೆ ತತ್ಕಾಲಕ್ಕಾದರೂ ಕಡಿಮೆಗೊಳ್ಳುವಿಕೆ; ನೀರಾ ಇಳಿಸುವಿಕೆಯ ಹೊಣೆಗಾರಿಕೆ ಕೊಡುವಲ್ಲಿ ಸಹಕಾರಿ ಸಂಘ ಹಾಗು ಅಬಕಾರಿ ಇಲಾಖೆಯ ಪಾತ್ರ; ರೈತನ ಬಗ್ಗೆ ರೂಪಿಸಿಕೊಳ್ಳಬೇಕಾದ ವ್ಯವಸ್ಥಿತ ವ್ಯವಸ್ಥೆ ಕುರಿತೆಲ್ಲ ಹೇಳಿದರು.

ಶ್ರೀ **ಬಿ.ಎಲ್.ಶಂಕರ್** ಅವರು ನೀರಾ ವಿಷಯವು ತಾಂತ್ರಿಕವಾಗಿರುವಲ್ಲಿ ಕೃಷಿ ಮತ್ತು ತೋಟಗಾರಿಕಾ ಇಲಾಖೆಯು ಕೊಡುವ ತಾಂತ್ರಿಕ ವರದಿಯ ಮೇಲೆ ಸರ್ಕಾರ ತೆಗೆದುಕೊಳ್ಳಬೇಕಾದ ನಿರ್ಧಾರ, ಇಳಿಕೆಗೆ ಕೊಡುವ ಅನುಮತಿ ಹಾಗು ಬಳಕೆಯ ಬಗ್ಗೆ ಕುರಿತು ಮಾತನಾಡಿದರು. ಶ್ರೀ ಬಿ.ಎಸ್.ಹೊರಟ್ಟಿ ಅವರು ನೀರಾ ಇಳಿಕೆ ಹಾಗು ನುಸಿಪೀಡೆ ಕುರಿತ ಇಲಾಖಾ ಸಮಸ್ಯೆಗಳು ವಿವರಿಸಿದರು. ಶ್ರೀ ಕೆ.ಮಲ್ಲಪ್ಪ ಅವರು 10 ವರ್ಷಗಳ ಹಿಂದೆ ತೆಂಗಿನ ಮರದಿಂದ ಹೆಂಡ ಇಳಿಸಿ ಮಾರಾಟ ಮಾಡಲು ಅವಕಾಶ ಕೊಟ್ಟ ಸರ್ಕಾರ, ನೀರಾ ಇಳಿಕೆ ಆದದ್ದೂ ತಿಳಿದು ಇಂದು ಆ ಬಗ್ಗೆ ಸ್ಪಷ್ಟ ನಿಲುವನ್ನು ತಿಳಿಸದಿರುವುದೇಕೆ? ಎಂದು ಪ್ರಶ್ನಿಸಿ ರಾಜ್ಯಾದಾದ್ಯಂತ ಈ ಬಗ್ಗೆ ರೈತರು ಸಾಕಷ್ಟು ಚಳುವಳಿ ಮಾಡುತ್ತಿರುವಲ್ಲಿ ನೀರಾ ಇಳಿಕೆಗೆ ಅವಕಾಶ ಮಾಡಿಕೊಡಬೇಕು ಎಂದರು. ಶ್ರೀ ಬಿ.ಎಲ್.ಶಂಕರ್ ಅವರ ಪ್ರಶ್ನೆ ಈ ಸಂದರ್ಭದಲ್ಲಿ, ತೆಂಗಿನ ಮರದ ಉತ್ಪತ್ತಿಗಳಾದ ಎಳನೀರು, ತೆಂಗಿನಕಾಯಿ, ಕೊಬ್ಬರಿ ಇವನ್ನು ಮಾರಬಹುದಾದರೆ, ನೀರಾ ಒಂದಕ್ಕೆ ಮಾತ್ರ ಏಕೆ ಅನುಮತಿ ಬೇಕು? ಎಂಬುದಾಗಿತ್ತು. ಅದು ಅಲ್ಕೋಹಾಲ್ ಹೌದೋ ಅಲ್ಲವೋ ಎಂಬ ಬಗ್ಗೆ ಶ್ರೀ ರಾಮಚಂದ್ರಗೌಡರು ವಿವರ ತಿಳಿಯಬಯಸಿದರು. ಈ ಸಂದರ್ಭದಲ್ಲಿ ವೈಸ್ ಛೇರ್ಮನ್ ಅವರು ನೀರಾ ಕುರಿತು ವಿವರಗಳನ್ನು ಸೇಂದಿಗಿಡ ಹಾಗು ತೆಂಗಿನ ಮರಕ್ಕೆ ಸಂಬಂಧಿಸಿದಂತೆ ನೀಡಿದರು.

ಶ್ರೀ **ಎಂ.ಎಸ್. ಸಿದ್ದರಾಜು** ಅವರು ನೀರಾ ಇಳಿಕೆಯಿಂದ ಆಗುವ 200ಕೋಟಿ ರೂ. ನಷ್ಟ, ಮೂರುವರ್ಷದಿಂದ ತೆಂಗಿಗೆ ತಗುಲಿರುವ ನುಸಿರೋಗ, ಆದರಿಂದ ರೈತರಿಗಾಗಿರುವ 6ಸಾವಿರ ಕೋಟಿ ರೂ.ನಷ್ಟ, ಹಾಗು ಆ ರೈತರ ಪರಿಸ್ಥಿತಿ, ರಾಜ್ಯದಲ್ಲಿ ಬಂದಿರುವ ಬರ, ರೈತರಿಗೆ ಕೊಡಬೇಕಾದ ಬೆಲೆ ಹಾಗು ಸವಲತ್ತು, ಕೆರೆಗಳಲ್ಲಿ ಹೂಳೆತ್ತುವಿಕೆ. ಕಾವೇರಿ ನಾಲಾಬಯಲು ಪ್ರದೇಶದಲ್ಲಿ ಹೂಳೆತ್ತಲು ತಮಿಳುನಾಡಿನ ಸರ್ಕಾರದ ಆಕ್ಷೇಪ, ಹೂಳೆತ್ತಿದರೆ ವಿಶ್ವಬ್ಯಾಂಕ್ ಸಾಲಕ್ಕೆ ಪರವಾನಗಿಗೆ ಕೇಂದ್ರದ ನಕಾರದ ಸಾಧ್ಯತೆ, ಕಾವೇರಿ ಜಲಾನಯನ ಪ್ರದೇಶದಲ್ಲಿ ಜಲಸಂವರ್ಧನೆ ಯೋಜನೆಯ ಸ್ಥಗಿತ ಮಾಡುವ ರಾಜ್ಯಸರ್ಕಾರದ ನಿರ್ಧಾರಕ್ಕೆ ಸಕಾರಾತ್ಮಕ ನಿಲುವು ಎಂದು ಕೇಂದ್ರದ ವರ್ಣನೆ ಕುರಿತೆಲ್ಲ ಚರ್ಚಿಸಿದರು. ಈ ಬಗ್ಗೆ ಪ್ರತಿಕ್ರಿಯಿಸಿದ ಸಚಿವ ಶ್ರೀ **ಹೆಚ್.ಕೆ.ಪಾಟೀಲ್** ಅವರು, ಜಲಾನಯನ ಪ್ರದೇಶದಲ್ಲಿ ಕೆರೆ ಹೂಳೆತ್ತುವ ಕೆಲಸಕ್ಕೆ ರಾಜ್ಯದ ಜಲಸಂಪನ್ಮೂಲ ಇಲಾಖೆಗೆ 25 ಕೋಟಿರೂಗಳನ್ನು ಕೊಡಲು ಮುಖ್ಯಮಂತ್ರಿಗಳ ಸಮ್ಮತಿ ಹಾಗು ಕೇಂದ್ರದ ಜಲಸಂಪನ್ಮೂಲ ಇಲಾಖೆ ಹೂಳೆತ್ತುವ

ರಾಜ್ಯದ ಕಾರ್ಯಕ್ರಮಕ್ಕೆ ತೆಗೆದುಕೊಂಡಿರುವ ನಿಲುವಿಗೆ, ರಾಜ್ಯದ ಪ್ರತಿಭಟನಾಪತ್ರವನ್ನು ಪ್ರಧಾಮಂತ್ರಿಯವರಿಗೆ ಬರೆದಿರುವುದು, ಕೆರೆಗಳನ್ನು ಒರಿಜಿನಲ್ ಕೆಪಾಸಿಟಿಗೆ ಹೂಳೆತ್ತಿ, ರೆಸ್ಟೋರ್ ಮಾಡುವ ಬಗ್ಗೆ, ಅದಕ್ಕಾಗಿ ಯಾವ ಪರವಾನಗಿಯೂ ಅನಗತ್ಯವಾಗಿರುವುದು, ಕುರಿತೆಲ್ಲ ವಿವರಿಸಿದರು. ಆದರೆ ಶ್ರೀ ಎಂ.ಸಿ.ನಾಣಯ್ಯ ಅವರು ಈ ವಾದವನ್ನು ಒಪ್ಪದೆ ಶ್ರೀ ಸಿದ್ದರಾಜು ಅವರ ಮಾತನ್ನು ಬೆಂಬಲಿಸಿ ಸರ್ಕಾರದ ಅಧಿಕೃತ ಹೇಳಿಕೆ ಹೂಳೆತ್ತುವಿಕೆ ಬಗ್ಗೆ ಬಂದಿಲ್ಲ ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದರು.

ಶ್ರೀ ಎಂ.ಎಸ್.ಸಿದ್ದರಾಜು ಅವರು ತಮ್ಮ ಮಾತನ್ನು ಮುಂದುವರಿಸಿ ಕೆರೆಗಳ ಇತಿಹಾಸದತ್ತ ಗಮನ ಸೆಳೆದು, ಪ್ರಾಕೃತಿಕವಾಗಿ ತುಂಬುವ ಕೆರೆಗಳು, **ಸೀಪೇಜ್ ವಾಟರ್**ನಿಂದ ತುಂಬುವ ಕೆರೆಗಳು, ಹಿಂದಿನವರು ತ್ಯಾಗ ಮತ್ತು ಬಲಿದಾನದಿಂದ ಕಟ್ಟಿದ ಕೆರೆಗಳು, ಕಾವೇರಿ ನದಿ ವಿವಾದಕ್ಕೂ ಕೆರೆಗಳ ವಿಷಯಕ್ಕೂ ಸಂಬಂಧವಿಲ್ಲದ ವಿಷಯ ತಿಳಿಸಿ ವಿಶ್ವಬ್ಯಾಂಕ್ ಹಣ ತರಬಹುದಾಗಿದ್ದ ಸರ್ಕಾರದ ಪ್ರಯತ್ನ, ಕೆರೆ ಹೂಳೆತ್ತಿ ನೀರಿನ ಸಂಗ್ರಹವಾಗಿದ್ದರೆ ಸದ್ಯದ ಬರಪರಿಸ್ಥಿತಿಯನ್ನು ಎದುರಿಸಲು ಆಗುತ್ತಿದ್ದ ಅನುಕೂಲ ಬರಗಾಲದ ಬಗ್ಗೆ ತಕ್ಷಣವೇ ಕೇಂದ್ರಕ್ಕೆ ಕಳುಹಿಸಬೇಕಾಗಿದ್ದ ಮಾಹಿತಿ, ರೈತರ ಬಗ್ಗೆ ನಿಜವಾದ ಕಾಳಜಿವಹಿಸಬೇಕಾದ ಸರ್ಕಾರದ ಹೊಣೆ ಕುರಿತೆಲ್ಲ ಮಾತನಾಡಿದರು.

ಶ್ರೀಮತಿ **ಜಲಜಾನಾಯಕ್** ಅವರು ಚರ್ಚೆಯಲ್ಲಿ ಭಾಗವಹಿಸುತ್ತ; ಇವತ್ತು ಬಂದಿರುವ ಬರಗಾಲದ ಪರಿಣಾಮ, ರೈತಾಪಿಜನ ಬೆಳೆದ ಬೆಳೆಯಿಂದ ಗಂಜಿಯನ್ನೋ, ಅಂಬಲಿಯನ್ನೋ ಮನೆಯವರಿಗೆ ಕುಡಿಸಿ ಮನೆಕಾಯ್ದುಕೊಳ್ಳುವಂಥ ರೈತ ಮಹಿಳೆಯ ಮೇಲೆ ಆಗುತ್ತದೆ, ಆದರೆ ಆಕೆಗೆ ಸರ್ಕಾರದ ಯೋಜನೆಗಳು ಇರುವ ಬಗ್ಗೆ, ಪರಿಮಿತಿಯ ಬಗ್ಗೆ ಗೊತ್ತಾಗುತ್ತಿಲ್ಲ. ಗಂಡ ಆತ್ಮಹತ್ಯೆ ಮಾಡಿಕೊಂಡಾಗ, ಬ್ಯಾಂಕ್‌ನವರು ಅವನ 40 ಸಾವಿರರೂ.ಸಾಲದ ಬಗ್ಗೆ ತಿಳಿದಾಗ ಸಾಲದ ಪರಿಮಿತಿ, ರೀತಿ ನೀತಿ ಗೊತ್ತಿಲ್ಲದಿದ್ದ ಕಾರಣ ಮಕ್ಕಳನ್ನು ಬಿಟ್ಟು ನೇಣುಹಾಕಿಕೊಂಡ ಸನ್ನಿವೇಶವೂ ಕಾಣಬಂದಿದೆ. ಇದಕ್ಕೆಲ್ಲ ಕಾರಣ ಸರ್ಕಾರದ ಯೋಜನೆಗಳು ರೈತರಿಗೆ ತಲುಪದಿರುವುದು ಆಗಿದೆ. ಹಳ್ಳಿಗಳಲ್ಲಿ ರಸ್ತೆ ಅಗಲೀಕರಣ ಕಾರ್ಯದಲ್ಲಿ ಕೂಲಿಗಾಗಿ ಕಾಳು ಯೋಜನೆಯಲ್ಲಿ, **ಸ್ತ್ರೀಶಕ್ತಿ ಯೋಜನೆಯಡಿ**ಯಲ್ಲಿ ರೈತ ಹೆಣ್ಣುಮಕ್ಕಳಿಗೆ ಕೆಲಸ ಕಾರ್ಯಕೊಡುವುದಾಗಬೇಕು. ಗೋಶಾಲೆ ಸೌಲಭ್ಯ, ದನಕರುಗಳಿಗೆ ಮೇವಿನ ಸೌಲಭ್ಯ ಒದಗಿಸಿ ಬರಪರಿಹಾರಕ್ಕಾಗಿ ಈ ಎಲ್ಲಾ ಕಾರ್ಯಕ್ರಮಗಳೂ ರೈತರಿಗೆ

ತಲುಪುವಂತಾಗುವುದು ಸೂಕ್ತ ಎಂದು ಅಭಿಪ್ರಾಯ ಪಟ್ಟು, ಸರ್ಕಾರದಿಂದ ಆಗಿರುವ ಕೆಲವು ಕೆಲಸಗಳಿಗಾಗಿ ಮೆಚ್ಚುಗೆಯನ್ನು ವ್ಯಕ್ತಮಾಡಿದರು.

ಶ್ರೀ **ಹೆಚ್.ಎಸ್.ಶಾಂತವೀರಪ್ಪಗೌಡರು,** ರಾಜ್ಯದಲ್ಲಿ ಬರಗಾಲದ ಪರಿಸ್ಥಿತಿಯಿಂದಾಗಿ, ಸರ್ಕಾರ ಕೈಗೊಂಡಿರುವ ಪರಿಹಾರ ಕಾಮಗಾರಿ, ಬರಗಾಲ ಪರಿಹಾರದ ಕಾರ್ಯಕ್ರಮದ ಬಗ್ಗೆ ಯಾವ ಜಿಲ್ಲೆಯಿಂದಲೂ ವರದಿ ಬಂದಿಲ್ಲ; ರೈತರಿಗೆ ಕೂಲಿ ಕಾರ್ಮಿಕರಿಗೆ ವಿಶೇಷ ಸೌಲಭ್ಯ ಒದಗಿಸುವಂಥ ಕಾರ್ಯಕ್ರಮ ರೂಪುಗೊಂಡಿಲ್ಲ, ಎಂದರು. ನಂತರ ರೈತರ ಸಾಮೂಹಿಕ ಆತ್ಮಹತ್ಯೆ ಕುರಿತೂ ಸರ್ಕಾರದ ನಿರ್ಲಕ್ಷ್ಯ, ಹಿಂದೆ 1998ರಲ್ಲಿ ಆದ ಅತಿವೃಷ್ಟಿ, ಅನಾವೃಷ್ಟಿ ಸಂದರ್ಭದಲ್ಲಿ ಸರ್ಕಾರ ನಡೆದುಕೊಳ್ಳಬೇಕಾದ ಬಗ್ಗೆ ಬಂದ ಉಭಯಸದನಗಳ ಸಮಿತಿಯ ವರದಿ, ಸಂಪರ್ಕ ಮಾಧ್ಯಮಗಳೇ, ಮಾಹಿತಿ ಕೊಡುವಲ್ಲಿ ಸರ್ಕಾರಿ ವ್ಯವಸ್ಥೆಗಿಂತ ಮುಂದಾಗಿರುವುದು, ಜನ ಮತ್ತು ಜಾನುವಾರುಗಳಿಗೆ ಕುಡಿಯುವ ನೀರಿನ ಯೋಜನೆಯನ್ನು ವಿಶ್ವಬ್ಯಾಂಕ್, ಜಿಲ್ಲಾ ಪಂಚಾಯತ್ ಎಂಜನಿಯರಿಂಗ್, ಕರ್ನಾಟಕ ಲ್ಯಾಂಡ್ ಆರ್ಮಿ ಯೋಜನೆಗಳ ಮೂಲಕ ಮಾಡಿದರೂ, ಶೇ.90 ಭಾಗ ಯೋಜನೆಗಳು ನಗರ ಮತ್ತು ಗ್ರಾಮಾಂತರ ಪ್ರದೇಶದ ಜನರಿಗೆ ನೀರನ್ನೂ ಒದಗಿಸದಿರುವ ಪರಿಸ್ಥಿತಿ; ದೀರ್ಘಾವಧಿ ಬೆಳೆಗಳ ಬಿತ್ತನೆ ಬೀಜಗಳ ಸಿದ್ಧಪಡಿಸಿಟ್ಟುಕೊಳ್ಳುವಿಕೆ ಹಾಗು ನಡೆಯಬೇಕಾದ ಕೆಲವು ತಳಿಗಳ (ಮೆಣಸಿನಕಾಯಿ) ಸಂಶೋಧನೆ; ಕೆರೆಗಳ ಕೋಡಿ ಮತ್ತು ತೂಬುಗಳ ಹಾಗು ಹೂಳೆತ್ತುವ ಅಸಮರ್ಪಕ ವ್ಯವಸ್ಥೆ; ರೈತರ ಕಷ್ಟಗಳ ಖಾಯಂ ಪರಿಹಾರಕ್ಕೆ ವಿಲೇಜ್ ಪಂಚಾಯತ್ ಯೂನಿಟ್ ಮಾಡಿ ಬೆಳೆ ವಿಮೆಯೋಜನೆ ಜಾರಿ, 1992–93ರ ಆಣೆವಾರಿಯನ್ನು ಮೇ 1998ರಲ್ಲಿ ಘೋಷಣೆ ಮಾಡಿದ ಕಾರಣ ರೈತರಿಗೆ ಆಗುವ ತೀವ್ರ ತೊಂದರೆ; ಬದಲು ತ್ರೈವಾರ್ಷಿಕ ಅಣೆವಾರಿ ಘೋಷಣೆ, ಸಾಲದ ಮೇಲಿನಬಡ್ಡಿ, ಸುಸ್ತಿಬಡ್ಡಿ ಮನ್ನಾ, ಕೋಕೋಕೋಲ, ಪೆಪ್ಸಿ ಕಂಪೆನಿಗಳಿಗೆ 250 ಕೋಟಿ ರೂ.ತೆರಿಗೆ ಮನ್ನಾ ಮಾಡುವ ಸರ್ಕಾರ ರೈತರ ಕೃಷಿ ಸಾಲಗಳ ಮೇಲಿನ ಬಡ್ಡಿಗಳನ್ನು ಮನ್ನಾ ಮಾಡಲು ತಳೆಯಬೇಕಾದಂಥ ಐತಿಹಾಸಿಕ ನಿಲುವು; ಬೆಳೆ ಸಾಲದ ಬಡ್ಡಿಯನ್ನು ನಬಾರ್ಡ್ ಮತ್ತು ರಿಸರ್ವ್ ಬ್ಯಾಂಕ್‌ಗಳು ಎಂಟೂವರೆ ಪರ್ಸೆಂಟ್‌ಗೆ ನಿಗದಿಗೊಳಿಸಿರುವಲ್ಲಿ, ರೈತರಿಗೆ ಏಳು ಪರ್ಸೆಂಟ್‌ನಂತೆ ಬೆಳೆಸಾಲ ಕೊಟ್ಟು, ಉಳಿದ ಹೆಚ್ಚಿನ ಬಡ್ಡಿಯನ್ನು ಸರ್ಕಾರ ಭರಿಸುವುದು; ಮಳೆ ಬಿದ್ದಾಗ ಮತ್ತೆ ಹೊಸ ಸಾಲ ವಿತರಿಸುವಿಕೆ ಇತ್ಯಾದಿ ಕುರಿತೆಲ್ಲ ವಿಷಯವನ್ನು ಮಂಡಿಸಿದರು. ಈ ನಡುವೆ ಶ್ರೀ **ಎಂ.ಸಿ.ನಾಣಯ್ಯ** ಅವರು

ಬಡ್ಡಿ ಮನ್ನಾ ಮಾಡುವ ಬಗ್ಗೆ ತೀರ್ಮಾನವನ್ನು ನಬಾರ್ಡ್ ಮಾರ್ಗದರ್ಶನದ ಮೂಲಕವೇ ತೆಗೆದುಕೊಳ್ಳಬೇಕಿದೆ ಎಂದರು. ಶ್ರೀ **ಡಿ.ಎಚ್.ಶಂಕರಮೂರ್ತಿ** ಮತ್ತು ಶ್ರೀ **ಕೆ.ಎನ್.ರಾಜಣ್ಣನವರು** ರೈತರ ಕೃಷಿಸಾಲದ ಮೇಲಿನ ಬಡ್ಡಿಯನ್ನು ರಾಜ್ಯಸರ್ಕಾರ ಮಾಡಲಿ ಎಂಬ ಸಲಹೆಯನ್ನು ಮುಂದಿಟ್ಟರು. ರೈತರಿಗೆ ಮಾನಸಿಕ ಸ್ಥೈರ್ಯ ಬರುವಂತೆ ಸರ್ಕಾರ ಸೂಕ್ತವಾದ ದಿಟ್ಟ ಹೆಜ್ಜೆ ಇಡಬೇಕೆಂದು ಶ್ರೀ ಶಂಕರಮೂರ್ತಿಯವರ ಅಪೇಕ್ಷೆಯಾಗಿತ್ತು. ಶ್ರೀ ಹೆಚ್.ಎಸ್.ಶಾಂತವೀರಪ್ಪಗೌಡರು, ಮಾತು ಮುಂದುವರಿಸಿ 10 ಎಕರೆ ಹೊಂದಿರುವ ರೈತರು ಕಂದಾಯ ಕಟ್ಟಬೇಕಿಲ್ಲ ಎಂದು ಮುಖ್ಯಮಂತ್ರಿಗಳ ಹೇಳಿಕೆ, ಆಣೆವಾರಿ ಡಿಕ್ಲೇರ್ ಮಾಡಲು ವಿಳಂಬ ಮಾಡುತ್ತಿರುವುದು, 30 ವರ್ಷಗಳಿಗೊಮ್ಮೆ, ಕೆಪಿಟಿಸಿಎಲ್‌ನವರು ಕಂದಾಯ ಇಲಾಖೆಯವರು ಮಾಡುವ ಆಕಾರಬಂದ್, ಲೈನ್‌ಮೆನ್ ಹೋಗಿ ಕರೆಂಟ್ ಬಿಲ್ಲನ್ನೂ 600ರೂ.ಗಳಿಗೆ ಫಿಕ್ಸ್‌ಮಾಡಿರುವುದು, ರೈತರು ಮತ್ತು ಕೂಲಿ ಕಾರ್ಮಿಕರನ್ನು ಸದ್ಯದ ಭೀಕರ ಬರಗಾಲದಲ್ಲಿ ರಕ್ಷಿಸುವುದು, ಇತ್ಯಾದಿ ಕುರಿತು ತಮ್ಮ ನುಡಿಗಳನ್ನಿಟ್ಟರು.

ಶ್ರೀ **ಎಂ.ಡಿ.ರಮೇಶ್‌ರಾಜು** ಅವರು ತಮ್ಮ ಮಾತುಗಳನ್ನು ಮುಂದಿಟ್ಟು: ರಾಜ್ಯಕ್ಕೆ ಒದಗಿ ಬಂದಿರುವ ಬರ; ಪರಿಹಾರ ಕಾರ್ಯಕ್ರಮಕ್ಕೆ ಬಿಡುಗಡೆ ಮಾಡಿರುವ 85ಕೋಟಿ ರೂ; ಬರ ಪ್ರದೇಶಗಳಿಗೆ ಆಹಾರಧಾನ್ಯಗಳ ವ್ಯವಸ್ಥೆ ಕೆರೆಗಳ ಹೂಳೆತ್ತಲು 25 ಕೋಟಿ.ರೂ ನೀಡಿರುವುದು; ಮಂಡ್ಯ ಜಿಲ್ಲೆಯ ರೈತರುಗಳ ಬಗ್ಗೆ ಮಾನ್ಯ ಮುಖ್ಯಮಂತ್ರಿಗಳಿಗಿರುವ ಕಾಳಜಿ, ಮಂಡ್ಯ ಜಿಲ್ಲೆಯ ಮೂರು ಸಕ್ಕರೆ ಕಾರ್ಖಾನೆಗಳಿಗೆ ಗ್ಯಾರಂಟಿ ಕೊಟ್ಟು 25 ಕೋಟಿ ರೂ.ಬಿಡುಗಡೆ ಮಾಡಿ ರೈತರಿಗೆ ಕಬ್ಬಿನ ಬೆಲೆ ವಿಷಯದಲ್ಲಿ ಸರ್ಕಾರ ಪರಿಹಾರ ಕೊಟ್ಟು, ಕಾರ್ಖಾನೆಗಳನ್ನು ನಡೆಯುವಂತೆ ಮಾಡಿರುವುದು; ಕೇಂದ್ರ ಸರ್ಕಾರದ ಸಕ್ಕರೆ ನೀತಿಯಿಂದ ಕಂಗಾಲಾಗಿರುವ ರೈತರು; ಕೋಟ್ಯಾಂತರ ರೂ.ಬೆಲೆ ಬಾಳುವ ಸಕ್ಕರೆ ದಾಸ್ತಾನು ಇದ್ದೂ ಸಕಾಲಕ್ಕೆ ಬಿಡುಗಡೆ ಮಾಡದ ಕಾರಣ ಕಾರ್ಖಾನೆ ಲಾಸ್‌ನಲ್ಲಿ ನಡೆಯುತ್ತಿರುವುದು ತತ್ಫಲವಾಗಿ ಮಂಡ್ಯರೈತರಿಗೆ ತೊಂದರೆ ಆಗಿದ್ದಾಗ ಸರ್ಕಾರ ಗ್ಯಾರಂಟಿ ನಿಂತು ರೈತರಿಗೆ ಹಣ ಕೊಡಿಸಿದ್ದು; ರೈತರಿಗೆ ಸೊಸೈಟಿ ಮತ್ತು ಶೆಡ್ಯೂಲ್ಡ್ ಬ್ಯಾಂಕ್ ಮುಖೇನ ಕೊಟ್ಟ ಸಾಲ; ಶೆಡ್ಯೂಲ್ ಬ್ಯಾಂಕ್‌ಗಳು ಕೋಟ್ಯಾಂತರ ರೂ.ಲಾಭ ಸಂಪಾದಿಸಿರುವಲ್ಲಿ ರೈತರ ಸಾಲದ ಮೇಲಿನ ಬಡ್ಡಿ ಮನ್ನಾ ಮಾಡಬೇಕಾದ ಅಗತ್ಯ; ಅದಕ್ಕೆ ನಬಾರ್ಡ್‌ನ ನಾರ್ಮ್ಸ್‌ನಿಂದಾಗಿ ಒದಗಿರುವ ತೊಡಕು; ಕೇಂದ್ರ ಸರ್ಕಾರದ ಮೇಲೂ ಈ ಬಗೆಗೆಲ್ಲ ಇರುವ ಹೊಣೆ; ರೈತರ ಸಾಲದ ಮೇಲೆ ಬಡ್ಡಿ ಮನ್ನಾ ಮಾಡಲು

ರಾಜ್ಯವು 350 ಕೋಟಿ.ರೂಗಳನ್ನು ನೀಡಲು ಕೇಂದ್ರಕ್ಕೆ ಒತ್ತಾಯ ಮಾಡುವುದು, ಕುರಿತೆಲ್ಲ ಹೇಳಿ ರಾಜ್ಯ ಸರ್ಕಾರದ ಈ ದಿಸೆಯ ಕಾರ್ಯಕ್ರಮಗಳ ಬಗ್ಗೆ ಮೆಚ್ಚುಗೆಯನ್ನು ವ್ಯಕ್ತಪಡಿಸಿದರು.

*ಈ ದಿನದ ಚರ್ಚೆಯಲ್ಲಿ ಸರ್ವಶ್ರೀ ಡಾ.ಎಂ.ಆರ್.ತಂಗಾ, ಪಿ.ರಾಮಯ್ಯ, ಜಿ.ಮಧುಸೂದನ್, ಡಾ.ಎಂ.ಪಿ.ನಾಡಗೌಡ, ಡಾ.ವಿ.ಎಸ್.ಆಚಾರ್ಯ, ಕೆ.ಮಲ್ಲಪ್ಪ, ಬಿ.ಎಸ್.ಹೊರಟ್ಟಿ, ಬಿ.ಬಿ.ಚಿಮ್ಮನಕಟ್ಟಿ, ರಾಮಚಂದ್ರಗೌಡ, ಹೆಚ್.ಕೆ.ಪಾಟೀಲ್, ಕೆ.ಎಚ್.ಶ್ರೀನಿವಾಸ್, ಡಿ.ಬಿ.ಚಂದ್ರೇಗೌಡ, ಕೆ.ಬಿ.ಶಾಣಪ್ಪ ಅವರುಗಳು ಪಾಲ್ಗೊಂಡಿದ್ದರು.*

**ವಿಷಯ 10: ರಾಜ್ಯದ ಭೀಕರ ಬರಗಾಲ ಮುಂದುವರಿದ ಚರ್ಚೆ;**

9.7.2002 ರಂದು ನಡೆದ ವಿಧಾನ ಪರಿಷತ್ ಅಧಿವೇಶನದಲ್ಲಿ[14] ಶ್ರೀ **ಬಿ.ಎಸ್.ಯಡಿಯೂರಪ್ಪನವರು** ಮಾತನಾಡುತ್ತ; ರಾಜ್ಯದಲ್ಲಿ ಹಿಂದಿಗಿಂತ ಈ ಬಾರಿ ಮತ್ತೆ ಭೀಕರ ಬರಗಾಲ ಪರಿಸ್ಥಿತಿಯನ್ನು ರೈತನು ಎದುರಿಸುತ್ತಿರುವುದು; ಸಕಾಲಕ್ಕೆ ಮಳೆ ಬಂದು ಒಳ್ಳೆಯ ಬೆಲೆ ಸಿಗುವ ನಿರೀಕ್ಷೆಯಲ್ಲಿದ್ದ ರೈತರು ಅನುಭವಿಸಿದ್ದು ದಾರುಣ ಪರಿಸ್ಥಿತಿ; ಅಂತರ್ಜಲ ಮಟ್ಟ ಕುಸಿದಿರುವುದು ಕಾರಣ 14–15 ಲಕ್ಷ ಪಂಪ್‌ಸೆಟ್‌ಗಳಿಂದ ನೀರು ಎತ್ತುವುದನ್ನು ನಿಲ್ಲಿಸಿದ್ದಾರೆ. ಬೋರ್‌ವೆಲ್‌ಗಳು ಒಣಗಿವೆ. ಮಳೆ ಇಲ್ಲದೆ ಬೆಳೆಗಳು ನಾಶವಾಗುವಂಥ ಪರಿಸ್ಥಿತಿ. ನೀರಿನ ಕೊರತೆಯಿಂದ ಲಿಂಗನಮಕ್ಕಿ ಅಣೆಕಟ್ಟೆಗೆ ಹರಿದು ಬರುವ ನೀರಿನ ಪ್ರಮಾಣ ಕಡಿಮೆ ಆಗಿ ಕೆಳಭಾಗದ ರೈತರು ಕಂಗಾಲಾಗುತ್ತಿದ್ದಾರೆ. ಮುಂಗಾರು. ಮಳೆ ವೈಫಲ್ಯದಿಂದ ಕೃಷಿ ಚಟುವಟಿಕೆಗಳು ಸಂಪೂರ್ಣ ನಿಂತು ಹೋಗಿವೆ. ಬಿತ್ತನೆ ಮಾಡಿದ ಕಡೆ ಯೆಲ್ಲವೂ ಒಣಗಿ ಹೋಗಿದೆ. ಹಾಸನ ಜಿಲ್ಲೆಯಲ್ಲಿ ಮಳೆ ಇಲ್ಲದೆ ನೀರು ಸಿಗದೆ ಹೋದರೆ ಆಲೂಗಡ್ಡೆ ಬಿತ್ತನೆಯ ರೈತರೆಲ್ಲ ಕೋಟ್ಯಾಂತರ ರೂ ನಷ್ಟ ಅನುಭವಿಸಿ ಬೀದಿ ಪಾಲಾಗಬೇಕಾಗುತ್ತದೆ. ಬಿತ್ತನೆ ಪ್ರದೇಶವು 6ಲಕ್ಷ ಹೆಕ್ಟೇರ್‌ನಷ್ಟು ಕಳೆದ ವರ್ಷಕ್ಕೆ ಹೋಲಿಸಿದರೆ ಕಡಿಮೆ ಆಗಿದೆ. 18.87 ಲಕ್ಷ ಹೆಕ್ಟೇರ್‌ನಲ್ಲಿ ಮಾತ್ರ ಬಿತ್ತನೆ ಆಗಿದೆ. ಮುಸುಕಿನ ಜೋಳವೂ ಬಿತ್ತನೆಗೊಂಡಿದ್ದು, ಮಳೆ ಬರದಿದ್ದರೆ ಸಂಪೂರ್ಣ ನಾಶವಾಗುತ್ತದೆ, ಎಂದರು.

14. ವಿಧಾನ ಪರಿಷತ್ತಿನ ನಡವಳಿಕೆಗಳು, ಸಂಪುಟ 311 (1–5), 9.7.2002 ಪು.202–243

ವಿದ್ಯುತ್ ಉತ್ಪಾದನೆ ಮಾಡತಕ್ಕಂಥ ಜಲಾಶಯಗಳಲ್ಲಿ ನೀರು ಕಡಿಮೆ ಆಗಿದೆ. ಅದನ್ನು ತುಂಬುವ, ಅಂತರ್ಜಲ ಹೆಚ್ಚಿಸುವ ಸಲಹೆಗಳಿದ್ದರೆ ಹೇಳಿ ಎಂದು ಶ್ರೀ **ಎಂ.ಸಿ.ನಾಣಯ್ಯ** ಅವರು ನುಡಿದರು.

ಶ್ರೀ ಬಿ.ಎಸ್.ಯಡಿಯೂರಪ್ಪನವರು ಮಾತನ್ನು ಮುಂದುವರಿಸಿ, ಕಳೆದ ಭೀಕರ ಬರಗಾಲದ ಸಮಯದಲ್ಲಿ, ರೈತನ ಬೆಳೆಗೆ ಸಿಗದ ಸರಿಯಾದ ಬೆಲೆ, ಆಗ ರೈತನ ನೆರವಿಗೆ ಸರ್ಕಾರ ಹೋಗುವ ಪ್ರಯತ್ನ ಮಾಡದಿದ್ದು, ಕೇಂದ್ರಕ್ಕೆ ಕೇಳಿರುವ 700–800 ಕೋಟಿ ರೂ ಪರಿಹಾರ; 150ಕ್ಕೂ ಹೆಚ್ಚು ರೈತರು ಆತ್ಮಹತ್ಯೆ ಮಾಡಿಕೊಂಡಿರುವುದು, ಹಾಗು ಅವರ ಕುಟುಂಬಗಳಿಗೆ ಮಾನಸಿಕ ಸ್ಥೈರ್ಯ ತುಂಬಿ ಪರಿಹಾರ ಕೊಡಬೇಕಿದ್ದ ಬಗ್ಗೆ, ಹಾಗು ಕೇವಲ 15–16 ಜನರಿಗೆ ಮಾತ್ರ ಪರಿಹಾರ ನೀಡಿರುವ ಬಗ್ಗೆ; ಜಲಾಶಯ, ಕೆರೆ ಕಟ್ಟೆಗಳಲ್ಲಿ ನೀರಿನ ಕೊರತೆ, ಹಾಸನ ರೈತರ ಸಂಕಷ್ಟ, ರೈತರು ಬರಗಾಲಕ್ಕೆ ತುತ್ತಾಗಿ, ವಿಷ ಸೇವಿಸಿ, ನೇಣಿಗೆ ಕೊರಳೊಡ್ಡಿ ಆತ್ಮಹತ್ಯೆ ಮಾಡಿಕೊಂಡಿರುವುದು; ಈ ಕುರಿತು ಬಂದ ವರದಿಯಲ್ಲಿರುವ ರೈತ ವಿರೋಧಿನೀತಿ; ರೈತರಿಗೆ ಪರಿಹಾರ ಕೊಡಲು ಸರ್ಕಾರ ಸಿದ್ಧವಿಲ್ಲದಿರುವುದು; ಆ ವಿಳಂಬದಿಂದಾಗಿ ರೈತರು ಬಿತ್ತನೆ ಬೀಜ, ಗೊಬ್ಬರ ಕೊಳ್ಳಲು ಸಾಲ ಮಾಡಬೇಕಾದುದು; ಕೇಂದ್ರ ಸರ್ಕಾರ ಬೆಳೆವಿಮೆ ಹಣವನ್ನು ಪೂರ್ತಿ ಪಾವತಿ ಮಾಡಿದ್ದರೂ, ಸರ್ಕಾರ ರೈತರಿಗೆ ವಿತರಿಸುವಲ್ಲಿ ನಿರ್ಲಕ್ಷ್ಯ; ನೀರಾವರಿ ಪ್ರದೇಶದ ಭತ್ತಕ್ಕೆ ಮಾತ್ರ ಪರಿಹಾರವಿದ್ದು; ಖುಷ್ಕಿ ಬೆಳೆಗಿಲ್ಲದಿರುವುದು ಅಂತಾಗಿ ರೈತರ ಆಕ್ರೋಶ; ಬೆಳೆವಿಮೆಗಾಗಿ ಪಡೆದ ಸಾಲ; ಕ್ರಾಪ್ ಕಟಿಂಗ್ ಎಕ್ಸ್‌ಪರಿಮೆಂಟ್ ಮಾಡಿ ಬೆಳೆ ವಿಮೆ ಕೊಡಲು ಮಾಡಬೇಕಿರುವ ಪ್ರಾದೇಶಿಕ ಘಟಕಗಳು;, ಆ ಕುರಿತು ಸರ್ಕಾರದ ಭರವಸೆ ಏನು? ಎಂದೆಲ್ಲ ತಮ್ಮ ವಿಷಯ ಮಂಡನೆಯಲ್ಲಿ ಹೇಳಿದರು. ಶ್ರೀ **ಡಿ.ಎಚ್.ಶಂಕರಮೂರ್ತಿ** ಅವರು ಈ ಕುರಿತೆಲ್ಲ ರಾಜ್ಯ ಸರ್ಕಾರದ, ನಿಲುವನ್ನು ತಿಳಿಯಲೆತ್ನಿಸಿದರು. ಶ್ರೀಬಸವರಾಜ ಬೊಮ್ಮಾಯಿ ಅವರು ತಮ್ಮ ನುಡಿಗಳನ್ನಿಟ್ಟು, ರೈತರ ಬೆಳೆ ಯೋಜನೆ ಒಂದು ಹೊಸ ಯೋಜನೆ, ಹಾಗಾಗಿ ಆ ಬಗ್ಗೆ ಬೆಳಕು ಚೆಲ್ಲಿದರೆ ರೈತರಿಗೆ ಅನುಕೂಲಿಸುವುದು; ರೈತರಿಗೆ ಬೆಳೆ ವಿಮೆ ಇನ್‌ಶೂರೆನ್ಸ್ ಕಂಪನಿಯಿಂದ ಬಂದಿಲ್ಲದಿರುವುದು, ರಾಜ್ಯ ಸರ್ಕಾರ ಕೊಡಬೇಕಿರುವ ಪ್ರೀಮಿಯಂ ಬಾಕಿ ಉಳಿದಿರುವುದು; ಗ್ರಾಮವನ್ನು ಘಟಕವನ್ನಾಗಿ ಮಾಡುವ ಬಗ್ಗೆ; ರೈತರಿಗೆ ವಿಮೆ ಹಣ ದೊರೆಯದಿದ್ದರೆ ಬೆಳೆ ವಿಮೆಗೆ ಅರ್ಥವಿಲ್ಲದಂತಾಗುವುದು, ಎಂದೆಲ್ಲ ವಿಷಯ ಪ್ರಸ್ತಾಪ ಮಾಡಿದರು.

ಶ್ರೀ ಬಿ.ಎಸ್. ಯಡಿಯೂರಪ್ಪನವರು ಮುಂದುವರಿದು : ಹಳ್ಳಿಯನ್ನು, ವಿಮಾ ಘಟಕವಾಗಿ ಅಧಿಸೂಚಿಸುವಲ್ಲಿ ಒಂದು ಯೂನಿಟ್ ಆಗಿ ಹೋಬಳಿ

ಬದಲು ಮಾಡಿ ರೈತರ ಸಹಾಯಕ್ಕೆ ಸರ್ಕಾರ ಬರಬೇಕಾದುದು; ಬೆಳೆ ವಿಮೆ ನಿಗದಿ; ಹಾವೇರಿ ಗುಲಬರ್ಗಾ, ಗದಗ್, ಶಿವಮೊಗ್ಗ, ಹಾನಗಲ್‌ನ ತಾಲೂಕುಗಳಲ್ಲಿ ಬಗೆಹರಿಯದ ಬೆಳೆ ವಿಮಾ ಸಮಸ್ಯೆಗಳು, ಕುರಿತೆಲ್ಲ ಹೇಳುತ್ತಿರವಲ್ಲಿ ಶ್ರೀ **ಹೆಚ್.ಎಸ್. ಶಾಂತವೀರಪ್ಪ ಗೌಡರು,** ಈ ಬಗ್ಗೆ ಮಾಹಿತಿ ನೀಡುತ್ತ, ಶೇ 100 ರಿಂದ 200 ರಷ್ಟು ಬೆಳೆ ವಿಮೆ ಮಾಡಿಸಬಹುದಾದ ಕಾರಣ ರೈತರು ಎರಡೆರಡು ಕಡೆ ಕಟ್ಟಿ ತುಸು ಗೊಂದಲಕ್ಕೊಳಗಾಗಿರಬಹುದೆಂದರೆ, ಸರ್ಕಾರ ಮಧ್ಯೆ ನಿಂತು ಸಮಸ್ಯೆ ಪರಿಹರಿಸುವ ಬಗೆಗೆಲ್ಲ ಹೇಳಿದರು. ಆಗ ಶ್ರೀ.ಬಿ.ಎಸ್.ಯಡಿಯೂರಪ್ಪ ನವರು, ಜುಲೈ 9 ಕಳೆದರೂ ರೈತರಿಗೆ ಬೆಳೆ ವಿಮೆ ಹಣ ತಲುಪದಿರುವುದು; ಬೆಳೆ ವಿಮಾ ಕಂತನ್ನು ಪಾವತಿಮಾಡುವ ಕೊನೆ ದಿನಾಂಕವನ್ನು ಜುಲೈ 31 ರಿಂದ ಆಗಸ್ಟ್ ಕೊನೆಯವರೆಗೆ ವಿಸ್ತರಿಸಬೇಕಾದುದು; ಹವಾಮಾನದ ವಾಸ್ತವಿಕ ಸ್ಥಿತಿಯನ್ನು ದೂರದರ್ಶನ ಮತ್ತು ಆಕಾಶವಾಣಿ ಮೂಲಕ ರೈತರು ಅನುಸರಿಸಬೇಕಾದ ಪರ್ಯಾಯ ಬೆಳೆ. (ಷಾರ್ಟ್ ಟರ್ಮ್ ಕ್ರಾಪ್) ವಿಧಾನ; ಬೇರೆಲ್ಲ ಅಭಿವೃದ್ಧಿ ಕಾರ್ಯಗಳನ್ನು ಈ ಪ್ರಕೃತಿ ವಿಕೋಪ ಕಾಲದಲ್ಲಿ ಬದಿಗಿಟ್ಟು ರೈತರ ನೆರವಿಗೆ ಹೋಗಿ ಸಾಲ ಮನ್ನಾ ಮಾಡುವುದು; ಅಲ್ಪಾವಧಿ ಬೆಳೆ ಬಿತ್ತನೆ ಮಾಡಿರುವ ರೈತರನ್ನು ದೊಡ್ಡ ಹಾಗು ಸಣ್ಣ ರೈತರೆಂದು ಲ್ಯಾಂಡ್ ರಿಫಾರ್ಮ್ಸ್ ಆಕ್ಟ್ ಪ್ರಕಾರ ದೊಡ್ಡ ಜಮಿನ್ದಾರರನ್ನು ಬಿಟ್ಟು ರೈತರ ನೆರವಿಗೆ ಬರುವುದು; ಕೃಷಿ ಸಾಲಕ್ಕೆ ಆಸ್ತಿ ಅಡವು ಮಾಡುವಲ್ಲಿ ಮುದ್ರಾಂಕ, ನೋಂದಣಿ ಶುಲ್ಕಕ್ಕೆ ಅವಧಿ ವಿಸ್ತರಣೆ ಆಜ್ಞೆಯ ವಿಳಂಬ; ಅಲ್ಪಾವಧಿ ಸಾಲವನ್ನು ಮಧ್ಯಮಾವಧಿ ಹಾಗು ದೀರ್ಘಾವಧಿ ಸಾಲವಾಗಿ ಪರಿವರ್ತಿಸದಿರುವ ಸರ್ಕಾರದ ರೈತರ ಕುರಿತ ಕಳಕಳಿ ರಾಹಿತ್ಯ; ಸಣ್ಣ ಮತ್ತು ಅತಿ ಸಣ್ಣ ರೈತರಿಗೆ ಬರಗಾಲದ ರಿಯಾಯಿತಿ ಎಂದು ಕೊಟ್ಟಿರುವ ಕೇವಲ ಶೇ.50 ರಷ್ಟು ರಿಯಾಯಿತಿ; ರಾಜ್ಯದ ರೈತರಿಗೆ ತುರ್ತು ಒದಗಿಸಬೇಕಾದ ಬಿತ್ತನೆ ಬೀಜ ಮತ್ತು ರಸಗೊಬ್ಬರ; ಪೂರ್ಣ ವಿತರಣೆ ಆಗದ ಪ್ರಕೃತಿ ವಿಕೋಪ ಪರಿಹಾರ ನಿಧಿ; ರೈತ ಕಾಯಕದ ಕೆರೆಯ ಹೊಳೆತ್ತುವ ಕಾರ್ಯ, ಅಂತರ್ಜಲ ಸಂವರ್ಧನೆ ಕಾರ್ಯಕ್ರಮ; ಲ್ಯಾಂಡ್ ಆರ್ಮಿಗೆ ಏನೂ ಹಣದ ಬಿಡುಗಡೆ ಆಗದಿರುವಿಕೆ; ಶ್ರೀ ಎಂ.ಸಿ.ನಾಣಯ್ಯ ಅವರು ಜಾಗತಿಕ ಬ್ಯಾಂಕ್‌ನಿಂದ 900 ಕೋಟಿರೂ. ಜಲಸಂವರ್ಧನೆ ಕಾರ್ಯಕ್ರಮಕ್ಕೆ ಬಂದಿರುವ ವಿಷಯ ಹೇಳಿದುದಕ್ಕೆ ಸಮ್ಮತಿ; ಬೃಹತ್ ನೀರಾವರಿ ಯೋಜನೆಯಾದ ಭದ್ರಾ ಜಲಾಶಯದ ನೀರನ್ನು ಸಚಿವರ ಸೊಂಡೂರು ಮ್ಯಾಂಗನೀಸ್‌ಗೆ ಕೊಟ್ಟು ರೈತನಿಗೆ ನೀರಿಲ್ಲದೆ ಬೆಳೆ ನಾಶವಾಗುತ್ತಿರುವುದು; ರೈತರಿಗೆ ಹಾಗು, ನದಿ ತೀರದಲ್ಲಿ ವಿದ್ಯುತ್ ಉತ್ಪಾದನೆ ಮಾಡಲು ಅವಕಾಶ; ರೈತರಿಗೆ ಉಚಿತವಾಗಿ ಕೊಡಬೇಕಾದ

24 ಗಂಟೆಗಳ ವಿದ್ಯುತ್ತು; ಬದಲು ಅವರ ವಿದ್ಯುತ್ ಸಂಪರ್ಕದ ಕಡಿತ ಸಂಕಷ್ಟ ಸ್ಥಿತಿಯಲ್ಲಿ ಸಿಲುಕಿದ ರೈತರಿಗೆ ವಿಶ್ವಾಸ ಬರುವ ರೀತಿಯಲ್ಲಿ ಅವರ ನೆರವಿಗೆ ಬರುವುದು; ಅಲ್ಪಾವಧಿ ಬೆಳೆ ಬೆಳೆಯಲನುಕೂಲಿಸಲು ಬಿತ್ತನೆ ಬೀಜ, ರಸಗೊಬ್ಬರ ಇತ್ಯಾದಿಗಳನ್ನು ಉಚಿತವಾಗಿ ಮಧ್ಯಮ, ಸಣ್ಣ ಮತ್ತು ಅತಿ ಸಣ್ಣ ರೈತರಿಗೆ ಹಂಚುವ ವ್ಯವಸ್ಥೆ; ಸರ್ವಬಗೆಯ ರೈತರಿಗೆ ಬೆಳೆ ವಿಮೆ ಮಾಡಿ ಪರಿಹಾರ ಒದಗಿಸುವುದು; ಜಾನುವಾರುಗಳಿಗೆ ಮೇವಿನ ಬ್ಯಾಂಕ್ ವ್ಯವಸ್ಥೆ; ಬೆಳೆ ವಿಮೆ ಸೌಲಭ್ಯ ರೈತನಿಗೆ ಒದಗುವಂತೆ ಕೇಂದ್ರಕ್ಕೆ ರಾಜ್ಯ ಸರ್ಕಾರ ಒತ್ತಡ ಹಾಕುವ ಪತ್ರ ಬರಹ; ಇತ್ಯಾದಿ ವಿಷಯಗಳ ಕುರಿತೆಲ್ಲ ಮಂಡಿಸಿದರು.

ಶ್ರೀ ಎಚ್.ಎಸ್. ಶಾಂತವೀರಪ್ಪಗೌಡರು, ಮಾತು ಮುಂದುವರಿಸಿ, ರೈತರು ಪ್ರಾರಂಭದ ಮಳೆಗೆ ಭೂಮಿಯನ್ನು ಹದಗೊಳಿಸಿ ಬಿತ್ತನೆ ಮಾಡಿ, ಸಿದ್ಧ ಮಾಡಿಕೊಂಡರೂ ಮುಂದೆ ಮಳೆ ಕುಸಿತವಾಗಲು ಬೆಳೆನಾಶವಾಯಿತು; ಐಪಿ ಸೆಟ್‌ಗಳ ಬಳಕೆಗಾಗಿ ಕಟ್ಟಬೇಕಾದ ಕರೆಂಟ್ ಬಿಲ್ ಮನ್ನಾ ಮಾಡಲು ಕೋರಿಕೆ; ನೀರಿಲ್ಲದ ಬೋರ್‌ವೆಲ್, ಚಾಲನೆಗಿರದ ಪಂಪ್‌ಸೆಟ್‌ನ ಸಂದರ್ಭದಲ್ಲಿ ಸರ್ಕಾರ ರೈತನಿಗೆ ನೆರವಾಗುವುದು; ಮಳೆ ಅಭಾವದಿಂದಾಗಿ ರೈತನೇ ಇವೊತ್ತು ಕೂಲಿಗೆ ಹೋಗುವ ಪರಿಸ್ಥಿತಿ; ರಾಷ್ಟ್ರೀಯ ಕೃಷಿ ವಿಮಾಯೋಜನೆಯ ಬಳಕೆ, ಸಹಕಾರ ಸಂಘಗಳಲ್ಲೂ ಬೆಳೆವಿಮೆ ಸೌಲಭ್ಯ ಸಿಗುತ್ತಿರುವ ಬಗ್ಗೆ ರೈತರಿಗೆ ಮಾಹಿತಿ ನೀಡುವುದು, ಕೆರೆ ಆಶ್ರಯ, ಮಳೆ ಆಶ್ರಯದಿಂದ ಬೆಳೆ ಬೆಳೆಯುವ ರೈತರಿಗೆ ತುರ್ತಾಗಿ ಬೆಳೆ ವಿಮೆ ಕಳುಹಿಸಿ ಕೊಡುವ ವ್ಯವಸ್ಥೆ; ಕೂಲಿಗಾಗಿ ಕಾಳು ಯೋಜನೆಯಲ್ಲಿ ರೈತಕಾಯಕ, ಜಲಸಂವರ್ಧನೆ ಯೋಜನೆ ಪ್ರಾರಂಭಿಸಬೇಕಾದ ಅಗತ್ಯ; ನೀರಾವರಿ ಪ್ರದೇಶದಲ್ಲಿಯೂ ಕಬ್ಬಿಗೆ ಬೆಂಕಿ ಹಾಕುವ ಪರಿಸ್ಥಿತಿಗೆ ಮುಟ್ಟಿರುವ ರೈತ, ಕಾಫಿ ತೋಟದಲ್ಲಿ ಬೆಳೆ ಸರಿಯಾಗಿ ಸಿಗದೆ ತೋಟಕ್ಕೆ ಬೆಂಕಿ ಹಾಕುವ ಸ್ಥಿತಿಗೆ ಬಂದಿರುವ ರೈತ; ಬೆಳೆ ನಷ್ಟವಾಗಿರುವ ಬಗ್ಗೆ ವರದಿಯ ಅರ್ಪಣೆ, ಆಣೇವಾರಿ ಬೆಳೆ ನಷ್ಟದ ವರದಿ ಕಳುಹಿಸಿದರೆ ಕನ್‌ವರ್ಷನ್ ಮಾಡಲು ಅನುಕೂಲ ಕುರಿತೆಲ್ಲ ಪ್ರಸ್ತಾಪಿಸಿದರು.

ಶ್ರೀ **ಬಿ.ಎಸ್. ಯಡಿಯೂರಪ್ಪನವರು** : ಈ ಮಾತುಗಳಿಗೆ ಪ್ರತಿಕ್ರಿಯಿಸಿ, ಬರಗಾಲಕ್ಕೆ ಕೊಡುತ್ತಿರುವ ಗರಿಷ್ಠ ಪರಿಹಾರ ಎಂಬುದು ಬುಕ್ ಅಡ್ಜಸ್ಟ್‌ಮೆಂಟ್ ಆಗಿರುವ ವಿಷಯ; ಸಾಲತೆಗೆದುಕೊಂಡ ರೈತನ ಮುಗ್ಧತೆಯನ್ನು ಬಳಸಿ ಕೊಂಡಿರುವುದು, ತತ್ಫಲವಾಗಿ ಸಾಲ ಮರುಪಾವತಿ ಮಾಡಿದ್ದರೂ; ಬಡ್ಡಿ ಏರಿರುವುದು, ಕುರಿತೆಲ್ಲ ಹೇಳಿದರು. ಶ್ರೀ **ಡಿ.ಬಿ.ಇನಾಂದಾರ್** ಅವರು; ಮಾತನಾಡಿ ಹಂಚಿಕೆಯಾದ

ಧಾನ್ಯದ ಕುರಿತು ಹೇಳಿದರು. ಶ್ರೀ **ಅಣ್ಣ ವಿನಯ ಚಂದ್ರ** ಅವರು, ಕೆರೆ ಹೂಳು ಎತ್ತುವಲ್ಲಿ ಕೂಲಿ ಕಾರ್ಮಿಕರೂ ಕೆಲಸ ಮಾಡಬೇಕಾಗುತ್ತದೆ. ಮಾನ್ಯುಯಲ್ ಲೇಬರ್ ಹೆಸರಿನಲ್ಲಿ ಎಸ್ಟಿಮೇಟ್ ಮಾಡಿ ಜೆ.ಸಿ.ಬಿ ಮೂಲಕ ಕೆರೆಯ ಹೂಳು ತೆಗೆದರೆ ಲಾಭ ಕಾರ್ಮಿಕರಿಗಲ್ಲ, ಶೇ.50 ರಷ್ಟು ಉಳಿಯುವಲ್ಲಿ ಜೆ.ಸಿ.ಬಿ ಓನರ್‌ಗೆ ಲಾಭ. ಕೂಲಿ ಕಾರ್ಮಿಕರಿಗೆ ಅಂತಾಗಿ ಹೆಚ್ಚು ಹಣ ಕೊಡಬೇಕು ಎಂದರು. ಶ್ರೀ ಹೆಚ್.ಎಸ್.ಶಾಂತವೀರಪ್ಪ ಗೌಡರು ಆಂಧ್ರ, ತಮಿಳುನಾಡು, ಕೇರಳ, ಅಲ್ಲೆಲ್ಲ ಅತಿ ಸಣ್ಣ ರೈತರಿಗೆ ಉಚಿತ ವಿದ್ಯುತ್ ಕೊಡುತ್ತಿರುವಾಗ. ನಮ್ಮ ರೈತರ ಬಗ್ಗೆ ಸಮಗ್ರವಾಗಿ ಯೋಚಿಸಬೇಕಿದೆ. ಬರಗಾಲ ಪರಿಹಾರಕ್ಕಾಗಿ ನಾವು ಹೇಳುವ ಮುನ್ನವೆ, ರೈತರು ಕೂಲಿಕಾರರ ಹಿತ ದೃಷ್ಟಿಯಿಂದ, ಸರ್ಕಾರ ಹೇಗೆ ಸಜ್ಜಾಗುತ್ತಿದೆ ಎಂಬ ವಿವರ ಬೇಕಿದೆ ಎಂದರು.

**ಡಾ.ವಿ.ಎಸ್.ಆಚಾರ್ಯ** ಅವರು ಮಾತನಾಡುತ್ತ 126 ತಾಲೂಕುಗಳಲ್ಲಿ ಪೈಕಿ ಒಂದರಲ್ಲೂ ಕಳೆದ ವರ್ಷದ ಅರ್ಧದಷ್ಟೂ ಮಳೆ ಆಗಿಲ್ಲ. ರಾಜ್ಯದ ರೈತರಿಗೆ ನಾವೆಲ್ಲ ಒಟ್ಟು ಸೇರಿ ಸಹಾಯ ಮಾಡಬೇಕು. ದ.ಕನ್ನಡ, ಉಡುಪಿ, ಕಾರವಾರ ಜಿಲ್ಲೆಗಳಲ್ಲಿ ಮಳೆ ಇಲ್ಲದೆ ಕುಡಿಯುವ ನೀರಿಗೂ ತಾಪತ್ರಯವಾಗಿದೆ. ಪರಿಸ್ಥಿತಿಯ ಗಂಭೀರತೆಯನ್ನು ಸರ್ಕಾರ ಅರಿತುಕೊಳ್ಳಬೇಕು ಎಂದರು.

*ಈ ದಿನದ ಚರ್ಚೆಯಲ್ಲಿ ಸರ್ವಶ್ರೀ ಹೆಚ್.ಸಿ.ಶ್ರೀಕಂಠಯ್ಯ, ರಾಮಚಂದ್ರಗೌಡ, ಶ್ರೀಮತಿ ಉಮಾಶ್ರೀ, ಡಾ.ಎಂ.ಆರ್. ತಂಗಾ, ಕಾಗೋಡು ತಿಮ್ಮಪ್ಪ, ಸಿ.ಆರ್. ಸಗೀರ್ ಅಹಮದ್, ಕೆ.ಬಿ.ಶಾಣಪ್ಪ, ಸಿ.ರಮೇಶ್, ಬಿ.ಎಸ್.ಹೊರಟ್ಟಿ, ಕೆ.ಎನ್.ರಾಜಣ್ಣ, ಡಾ.ಎಂ.ಪಿ. ನಾಡಗೌಡ, ಜಿ.ಮಧುಸೂದನ್, ಎಂ.ಪಿ.ಪ್ರಕಾಶ್, ಎಂ.ಎಸ್.ಸಿದ್ದರಾಜ, ಡಿ.ಬಿ.ಇನಾಂದಾರ್ ಅವರುಗಳೂ ಪಾಲ್ಗೊಂಡಿದ್ದರು.*

**ಮಂಥನ :** *ವಿಧಾನಸಭೆಯಲ್ಲಿ ರಾಜ್ಯದ ಬರದ ಪರಿಸ್ಥಿತಿ ಕುರಿತು ನಡೆದ ಚರ್ಚೆಗಳಿಗೆ ಸಂವೇದನಾ ಶೀಲವಾಗಿ ವಿಧಾನಪರಿಷತ್ತಿನಲ್ಲಿ ಮಗದೊಂದು ಆಯಾಮ ದೊರಕಿದೆ. ಉಭಯಸದನದ ಎರಡು ಚರ್ಚೆಗಳನ್ನು ಗಮನಿಸಿದರೆ ರೈತ ಸಮಸ್ಯೆಗಳ ಚಿತ್ರಣ ಸ್ಪಷ್ಟವಾಗಿ ಒದಗುತ್ತದೆ. ವಿಶೇಷ ಮಾಹಿತಿಗಳೂ ದೊರಕುತ್ತವೆ. ಬರ ಪರಿಸ್ಥಿತಿಯಿಂದಾಗಿ ಆವರ್ತನಿಧಿಯ ಹೆಚ್ಚಳವಾಗಬೇಕಿರುವುದು, ಅದರ ಸಾಮಯಿಕ ಸೂಕ್ತ ಬಳಕೆ ಕುರಿತೂ ಚರ್ಚೆಯಾಗಿದೆ. ಅಲ್ಲದೆ ಅದರ ಜಾರಿ ಅಧಿಕಾರಿಗಳಿಂದ ಸರ್ಕಾರದ ಆದೇಶಪಾಲನೆಯಂತೆ ಆಗಬೇಕಿರುವುದರ ಸಂದರ್ಭವೂ ಕಾಣಬರುತ್ತದೆ. ನಬಾರ್ಡ್ ನಫೆಡ್ ಇತ್ಯಾದಿ ಸಂಸ್ಥೆಗಳಿಂದ ನಿಧಿನೆರವಿಗಿರುವ ಷರತ್ತುಗಳ ಬಗ್ಗೆಯೂ*

ಇಲ್ಲಿ ಗಮನಿಸಿ ಸರ್ಕಾರದ ಹೊಣೆಯನ್ನೂ ಎಚ್ಚರಿಸಲಾಗಿದೆ. ಡಾರ್ಕ್ ಅಂಡ್ ಗ್ರೇ ಏರಿಯಾಗಳಲ್ಲಿ ವಿದ್ಯುತ್ ಒದಗಿಸುವ ನಿಯಮ ಹಾಗು ಸಮಸ್ಯೆಗಳನ್ನು ಪರಿಶೀಲಿಸಲಾಗಿದೆ. ಆದರೆ ಹೀಗೆ ಅಂತರ್ಜಲ ನೀರೊದಗಣೆಯಲ್ಲಿ ವಿದ್ಯುತ್ ಪೂರೈಕೆಗೆ ಆಧುನಿಕ ಶೋಧಗಳನ್ನು ಗಮನಿಸಿದಂತೆ ಕಾಣುವುದಿಲ್ಲ. ಅಲ್ಪ ನೀರಿನಲ್ಲಿ ಹೆಚ್ಚು ಬೆಳೆತೆಗೆಯುವ ಅಂದರೆ ಕಡಿಮೆ ವಿದ್ಯುತ್ ಬಳಕೆಯಿಂದ, ಬೆಳೆ ತೆಗೆಯುವ ವಿಧಾನಗಳತ್ತವೂ ಗಮನ ಹೋಗಬೇಕಿದೆ. ಸರ್ಕಾರದ ಯೋಜನೆಗಳಲ್ಲಿ ರೈತಕಾಯಕ ಕೆರೆ, ಕೂಲಿಗಾಗಿ ಕಾಳು ಯೋಜನೆ, ಹಸಿರು ಮತ್ತು ಹಳದಿ ಕಾರ್ಡು ವಿತರಣೆ ಇತ್ಯಾದಿ ಕಾರ್ಯಕ್ರಮಗಳು ಗಮನಾರ್ಹವಾಗಿವೆ. ಬೆಳೆಯ ಬೆಲೆ ಕುಸಿತವಾದಾಗ ಸರ್ಕಾರದಿಂದ ಮಾರ್ಕೆಟ್ ಇಂಟರ್‌ವೆನ್ಷನ್ ಬಗ್ಗೆ ತೀವ್ರವಾಗಿ ಚರ್ಚೆ ನಡೆದು ಅದರ ಹಿನ್ನೆಲೆ ಮುನ್ನಲೆ, ಇತಿಮಿತಿಗಳನ್ನು ಗಮನಿಸಿರುವುದು ವಿಶೇಷ. ಹಾಲಿನ ಉತ್ಪನ್ನಗಳಿಗೆ ಬೆಲೆ ಇಳಿಕೆ, ರೇಷ್ಮೆ, ರಾಗಿ, ತೊಗರಿ ಬೆಳೆಗಾರರ ಸಂಕಷ್ಟಗಳು, ಗೋಶಾಲೆ ನಿರ್ಮಾಣ, ಮೇವು ಒದಗಣೆ-ಮೇವು ಬ್ಯಾಂಕ್, ಸರ್ಕಾರದ ಯೋಜನೆಗಳು ನಡೆದುಕೊಳ್ಳಬೇಕಾದ ರೀತಿಯ ಬಗ್ಗೆ ವರದಿ, ಕೃಷಿ ಸಾಲಗಳು, ಸಾಲದ ಮೇಲಿನ ಬಡ್ಡಿ ಮನ್ನಾ, ಸಕ್ಕರೆ ಕಾರ್ಖಾನೆಗಳಂಥ ಉದ್ಯಮಗಳಿಗೆ ಕೊಡುವ ಸಾಲ ಹಾಗೂ ಗ್ಯಾರಂಟಿಯು ರೈತರ ಬೆಳೆಗೆ ಕೊಡಬೇಕಾದ ಹಣಕ್ಕೆ ಒದಗದಿರುವುದು, ಬೆಂಬಲ ಬೆಲೆಗಳ ಏರುಪೇರು, ಬೆಳೆವಿಮೆ ಪಾವತಿಗೆ ನಿರ್ಲಕ್ಷ್ಯ ಸಣ್ಣ ಮತ್ತು ಅತಿ ಸಣ್ಣ ರೈತರಿಗೆ ಒದಗದಿರುವ ಸೂಕ್ತರಿಯಾಯಿತಿ, ಕೇಂದ್ರಕ್ಕೆ ಬರಗಾಲದ ನೆರವಿನ ಹೆಚ್ಚಳಕ್ಕೆ ರಾಜ್ಯ ಸರ್ಕಾರ ಹಾಕಬೇಕಾದ ಒತ್ತಡ ಇತ್ಯಾದಿ ಕುರಿತೆಲ್ಲ ಚರ್ಚೆಗಳು ದಟ್ಟವಾಗಿ ನಡೆದಿರುವುದು ಸಮಸ್ಯೆಗಳ ಕುರಿತಂಥ ಮಂಡನೆಯಾಗಿದೆ. ರೈತರ ಆತ್ಮಹತ್ಯೆಗಳು ಇಲ್ಲಿನ ಸಮಸ್ಯೆಗಳ ಹಿನ್ನೆಲೆಯಲ್ಲಿ ಹೇಗೆ ಮುಟಗೊಳ್ಳುತ್ತವೆ ಎಂಬುದರ ಚಿತ್ರವೂ ಇಲ್ಲಿ ದೊರಕುತ್ತದೆ. ಬರಗಾಲ ರೈತರನ್ನು ಸಂಕಷ್ಟಕ್ಕೆ ದೂಡುವಂತೆಯೇ, ಅವರ ಮಾನಸಿಕ ಸ್ಥೈರ್ಯ, ಆತ್ಮವಿಶ್ವಾಸಕ್ಕೆ ಧಕ್ಕೆಯಾಗುವಂಥ ಸನ್ನಿವೇಶವನ್ನು ಸೃಷ್ಟಿಸುತ್ತದೆ, ಎಂಬುದು ಸದಸ್ಯರ ಕಾಳಜಿಯುಕ್ತ ಚರ್ಚೆಗಳಿಂದ ಗಮನಕ್ಕೆ ಬರುತ್ತದೆ. ಇದಲ್ಲದೆ ಪ್ರತಿಭಟನೆಯ ಬೀಜಗಳನ್ನು ಬರಗಾಲವು, ಸರ್ಕಾರ ಕಾರ್ಯಯೋಜನೆಗಳು ಸೂಕ್ತವಾಗಿ ಚಾಲನೆಗೊಳ್ಳದಿದ್ದರೆ, ಹೇಗೆ ಬಿತ್ತುತ್ತದೆ ಎಂಬುದೂ ಇಲ್ಲಿನ ಸುಳುವಾಗಿದೆ. ಹಿರಿಯರ ಮೇಲ್ಮನೆಯ ಚರ್ಚೆಗಳಲ್ಲಿ ಹೀಗೆಯೇ ಸಮಸ್ಯೆಗಳ ವಿವಿಧ ಆಯಾಮಗಳು, ಚಾಲ್ತಿಯಮಿತಿಗಳು, ಸಲಹೆಗಳ ಜಾರಿಗೆ ಒತ್ತಾಯ, ಪರಿಹಾರದ ಬಂಧವನ್ನು ಕಟ್ಟಿಕೊಡುವ ಸಂದರ್ಭಗಳು ಕಾಣಬರುತ್ತವೆ.

# ಅಧ್ಯಾಯ–15

# ಬೆಳೆಹಾನಿ ಸಮಸ್ಯೆಗಳು

## ವಿಷಯ 1 : ಬೀದರ್ ಜಿಲ್ಲೆಯಲ್ಲಿ ನೈಸರ್ಗಿಕ ವಿಪತ್ತಿನಿಂದ ಬೆಳೆಹಾನಿ; ರೈತರಿಗೆ ತೊಂದರೆ

ಶ್ರೀ **ಭೀಮಣ್ಣ ಖಂಡ್ರೆ** ಅವರು 12.4.2000ದ ವಿಧಾನ ಪರಿಷತ್ ಅಧಿವೇಶನದಲ್ಲಿ[1], ಮಾತನಾಡುತ್ತ: ಬೀದರ್ ಗುಲ್ಬರ್ಗಾದಲ್ಲಿ ಬೆಂಕಿ ಮಳೆಬಿದ್ದು ರೈತರ ಫಸಲು ನಾಶವಾಗಿ ಪರಿಹಾರ ಸಿಗದಿರುವುದು; 7.3.1998ರಲ್ಲಿ ಸುಮಾರು 70 ಸಾವಿರ ರೈತರು ಹೊಲದ ಒಣಗಿದ್ದ ಬೆಳೆ ಹೊರೆ ಹೊತ್ತು ಡೆಪುಟಿ ಕಮೀಷನರ್ ಕಛೇರಿಗೆ ಮೆರವಣಿಗೆಯಲ್ಲಿ ಬಂದು ಮೆಮೊರಾಂಡಮ್ ಕೊಟ್ಟು ಧರಣಿ ಕುಳಿತ ಸರ್ಕಾರದ ಗಮನ ಸೆಳೆಯಲು ಮಾಡಿದ ಪ್ರಯತ್ನಕ್ಕೆ ಸರ್ಕಾರದ ನಿರ್ಲಕ್ಷ್ಯ; ಪರಿಣಾಮವಾಗಿ ರೈತರು ಬೀಜ ಗೊಬ್ಬರಕ್ಕೆ ಬ್ಯಾಂಕಿನಿಂದ ಮಾಡಿದ ಸಾಲವನ್ನು ಮರುಪಾವತಿಸಲಾಗದೆ ಬೀದರ್ ಜಿಲ್ಲೆಯಲ್ಲಿ 23 ಜನ ಮಾಡಿಕೊಂಡ ಆತ್ಮಹತ್ಯೆ; ಈ ಸಂಬಂಧ ರೂಪುಗೊಂಡ ಜಂಟಿಸದನ ಸಮಿತಿ ಕ್ಷೇತ್ರಾಧ್ಯಯನ ಮಾಡಿ 24.4.1998ರಲ್ಲಿ ಸಲ್ಲಿಸಿದ ವರದಿ; ಖರಾಬ್ ಬೆಳೆ ಮತ್ತು ರಬಿ ಬೆಳೆ ಲಾಸ್ ಆಗಿರುವ ಕಾರಣ ಎಕರೆಗೆ 500 ರೂ ನಂತೆ 5 ಎಕರೆಯವರೆಗೆ ಪರಿಹಾರ ನೀಡಿಕೆಯ ಶಿಫಾರಸು; ವಾಸ್ತವದಲ್ಲಿ 250 ಕೋಟಿ ರೂ. ಮೌಲ್ಯದ ಬೆಳೆ ನಾಶವಾಗಿದ್ದರೂ, ವರದಿಯಲ್ಲಿ ಯಾವ ರೈತರಿಗೂ 3 ಸಾವಿರ ರೂ. ಮೀರಿದ ಪರಿಹಾರ ಬೇಡ ಎಂದಿದ್ದರು; ಸರ್ಕಾರ ತೊಗರಿಬೆಳೆ ನಾಶವಾಗಿದ್ದೆಡೆ ಮಾತ್ರ ಪರಿಹಾರ, ಖರಾಬ್ ಬೆಳೆಗೆ ಇಲ್ಲವೆಂದುದು; ವಾಸ್ತವದಲ್ಲಿ ರೈತರು ಬೆಳೆದ ಫಸಲೆಲ್ಲ ನಾಶವಾಗಿರುವುದು; ಇಡೀ ದೇಶದಲ್ಲಿ ನ್ಯಾಷನಲ್ ಕಮಿಷನ್ ಹಾಗೂ ಹ್ಯೂಮನ್ ರೈಟ್ಸ್ ಕಮಿಷನ್ ನೀಡಿರುವ ಹಲವಾರು ರಿಪೋರ್ಟ್‌ಗಳು ಇಂಪ್ಲಿಮೆಂಟ್ ಆಗಿದ್ದರೂ, ನಮ್ಮ ರೈತರಿಗೆ ದುರ್ದೈವದಿಂದ ಸಿಗದ ನೆರವು; ಈ ಬಗೆಗೆಲ್ಲ ಅನ್ಯಾಯದೆದುರು, ಸರ್ಕಾರದ ನಿರ್ಲಕ್ಷ್ಯದೆದುರು. ಪ್ರತಿಭಟಿಸಿದರೂ, ಅಸೆಂಬ್ಲಿಯಲ್ಲಿ ಅವಿಶ್ವಾಸ ನಿರ್ಣಯ ತಂದರೂ, ಹೋರಾಟ ಮಾಡಿ ಎರಡು ದಿನ ಧರಣಿ ಕುಳಿತಿದ್ದರೂ ಸರ್ಕಾರ ಮಾನ್ಯ ಮಾಡಿಲ್ಲ. ರೈತರ ಆತ್ಮಹತ್ಯೆ ಸಂಬಂಧ ಪಾರ್ಲಿಮೆಂಟಿನಲ್ಲಿಯೂ ನಾಲ್ಕುಗಂಟೆಗಳ ಕಾಲ ಚರ್ಚೆಯಾದರೂ ಪರಿಹಾರಸಿಗಲಿಲ್ಲ ಎಂದು ನಾವು

---

1. ವಿಧಾನ ಪರಿಷತ್ತಿನ ನಡವಳಿಕೆಗಳು, ಸಂಪುಟ 293 (1–5), (12.4.2000) ಪು. 944–51

ಧರಣಿ ಕುಳಿತರೂ ಸರ್ಕಾರ ತೋರಿದ ನಿರ್ಲಕ್ಷ್ಯ; ತೊಗರಿ ಅಥವಾ ಯಾವುದೇ ಬೆಳೆ ಆಗದೆ ತೊಂದರೆಗೀಡಾದ ರೈತರಿಗೆ ಜಿಲ್ಲಾಧಿಕಾರಿಗಳ ವರದಿಯ ರೀತ್ಯಾ ಶೇ. 50ಕ್ಕಿಂತಲೂ ಹೆಚ್ಚು ಬೆಳೆ ಹಾನಿಯಾಗಿರುವಲ್ಲಿ, ಸದನ ಸಮಿತಿ ವರದಿ ಮಾನವ ಹಕ್ಕುಗಳ ಆಯೋಗದ ವರದಿಯ ಹಿನ್ನೆಲೆಯಲ್ಲೂ, ಕೇವಲ 10 ಜನರಿಗೆ ಮಾತ್ರ 1 ಲಕ್ಷ ರೂ ತಲಾ ಕೊಟ್ಟು ಬೇರೆಯವರಿಗೆ ನೀಡದೆ ತೋರಿದ ರೈತ ವಿರೋಧಿ ಕ್ರಮ, ಪಕ್ಷಭೇದ ಮರೆತು ಮಾಡಿದ ಈ ದಿಸೆಯ ಸತ್ಯಾಗ್ರಹ, ಹೋರಾಟಕ್ಕೆ ಬೆಲೆಗೊಡದಿದ್ದುದು; ಸರ್ಕಾರದ ಬಜೆಟ್‌ನಲ್ಲಿ 56 ಕೋಟಿ ನ್ಯಾಚುರಲ್ ಕೆಲಾಮಿಟಿ ರಿಲೀಫ್ ಫಂಡ್‌ನಲ್ಲಿ ಮೀಸಲಿದ್ದು, ಪ್ರಧಾನಿ ನಿಧಿಯಿಂದ ಬಂದ 50 ಕೋಟಿ, ಕ್ರಾಪ್ ಕಾಂಪೆನ್ಸೇಷನ್ ಎಂದು ಕೊಟ್ಟ 106 ಕೋಟಿ ರೂ. ಇದ್ದರೂ ಸರ್ಕಾರ 18 ಕೋಟಿ ರೂ.ಗಳನ್ನು ಕೇವಲ ತೊಗರಿ ಬೆಳೆಗಷ್ಟೇ ನೀಡಿರುವುದು; ಟೈಮ್ ರಿಲೀಫ್ ಕೊಡದಿರುವುದು; ಕಾಂಪೆನ್ಸೇಷನ್ ಎಂದು ಇರುವ 30 ಕೋಟಿ ರೂ. ಗಳನ್ನಾದರೂ ಕೊಡಲು ಕೃಷಿ ಸಚಿವರು ಮಾಡಬೇಕಾದ ನಿಶ್ಚಯ; ರೈತರು ಸಾಲದ ಬಡ್ಡಿ ಕಟ್ಟಲೂ ಆಗದ ಸ್ಥಿತಿಯಲ್ಲಿರುವುದು; ಅತ್ಯಂತ ಹಿಂದುಳಿದ ಜಿಲ್ಲೆ ಬೀದರಿನ ರೈತರ ಕಷ್ಟಗಳಿಗೆ ಸರ್ಕಾರ ಸ್ಪಂದಿಸಬೇಕಾದ ಅಗತ್ಯದ ಕುರಿತು ಎಳೆ ಎಳೆಯಾಗಿ ಬಿಡಿಸಿ ಸದನದಲ್ಲಿ ಹೇಳಿದರು.

3.5.2000 ದಂದು ನಡೆದ ವಿಧಾನ ಪರಿಷತ್ತಿನ ಅಧಿವೇಶನದಲ್ಲಿದೆ[2] ಬೀದರ್ ಜಿಲ್ಲೆಯ ಬೆಳೆ ಹಾನಿ ಕುರಿತ ಚರ್ಚೆಯನ್ನು ಮುಂದುವರಿಸುತ್ತ **ಶ್ರೀ ಭೀಮಣ್ಣ ಖಂಡ್ರೆ** ಅವರು, 1997–98ನೇ ಸಾಲಿನಲ್ಲಿ ನೈಸರ್ಗಿಕ ವಿಪತ್ತಿನಿಂದ ಆದ ಕೋಟ್ಯಾಂತರ ರೂ ಮೌಲ್ಯ ಬೆಳೆ ಹಾನಿ, 33 ರೈತರ ಆತ್ಮಹತ್ಯೆ, ಆ ರೈತರಿಗೆ ಸರ್ಕಾರ ನೀಡದ ಪರಿಹಾರ ಶ್ರೀಮತಿ ಸೋನಿಯಾ ಗಾಂಧಿಯವರು ಭಾಲ್ಕಿಗೆ ಬಂದು ಪರಿಸ್ಥಿತಿ ನೋಡಿ ಪರಿಹಾರ ನೀಡಲು ಸಲಹೆ ಸೂಚಿಸಿದರೂ, ಕೇಳದ ಸರ್ಕಾರ, ಜಂಟಿಸದನ ಸಮಿತಿ ಬೀದರ್–ಗುಲ್ಬರ್ಗಕ್ಕೆ ಭೇಟಿ ನೀಡಿ ಸಲ್ಲಿಸಿದ ವರದಿ, ಹಾನಿಗೊಂಡ ಖಾರಿಫ್ ಮತ್ತು ರಬಿ ಬೆಳೆಗೆ ನೀಡಬೇಕಿದ್ದ ಪೂರ್ಣ ಪರಿಹಾರ, ಆಗ ಕೇವಲ ತೊಗರಿ ಬೆಳೆಗೆ ಮಾತ್ರ ಪರಿಹಾರ ನೀಡಿ ಪಕ್ಷಪಾತ ಮಾಡಿದ್ದು, ರಾಷ್ಟ್ರೀಯ ಮಾನವ ಹಕ್ಕುಗಳ ಆಯೋಗವೂ ಜಂಟಿಸದನ ಸಮಿತಿಯ ವರದಿಯನ್ನು ಸಮ್ಮತಿಸಿ ರೈತರಿಗೆ ಪರಿಹಾರ ಕೊಡಬೇಕೆಂದರೂ, ಅದು ಬಿಡುಗಡೆ ಆಗದಿರುವುದು, ಅದರ ಆಯೋಗದ ಡೈರೆಕ್ಷನ್ ಅನ್ನು ಇಡಿ ದೇಶವೇ ಒಪ್ಪಿರುವಲ್ಲಿ

2. ವಿಧಾನ ಪರಿಷತ್ತಿನ ನಡವಳಿಕೆಗಳು., ಸಂಪುಟ 295)(4–6), ಭಾಗ – 2, (3.5.2000), ಪು. 1030.32

ರಾಜ್ಯ ಸರ್ಕಾರವು ಒಪ್ಪಲೇಬೇಕಾದ ತಾತ್ವಿಕ ಹೊಣೆ ಕುರಿತೆಲ್ಲ ಹೇಳಿದರು. ಇದಕ್ಕೆ ಸಭಾನಾಯಕರಾದ ಶ್ರೀ **ಎಚ್.ಕೆ.ಪಾಟೀಲರು** ಪ್ರತಿಕ್ರಿಯಿಸಿ ಹೇಳಿದ್ದ ಮತ್ತು ಇಲ್ಲಿ ಕೆಲವು ಕೋಟಿ ರೂ.ಗಳ ಪರಿಹಾರದ ಪ್ರಶ್ನೆ ಎನ್ನುವುದಕ್ಕಿಂತ This is a question of principles. This is the question of our commitment, ಎಂಬುದು ಮುಖ್ಯ. ಹಾಗು ಪರಿಹಾರ 39 ಕೋಟಿಯೆ? ಅಥವಾ ತಮಗೆ ತಿಳಿದಿದ್ದಂತೆ 33 ಕೋಟಿಯೆ? ಯಾವುದು ಸರಿ? ಎಂಬುದನ್ನು ಡೆಪ್ಯುಟಿ ಕಮೀಷನರ್ ಅವರಿಂದಲೋ. ಅನುಗುಣ ರಿಕಾರ್ಡಿನಿಂದಲೋ ತಿಳಿದುಕೊಡಬೇಕಿದೆ, ಎಂದೂ ತಿಳಿಸಿದ್ದರು. ಅದನ್ನು ನೆನಪಿಸುತ್ತ ರೈತರಿಗೆ ಬೇಗ ಹಣ ಬಿಡುಗಡೆ ಮಾಡಲು ಶ್ರೀ ಖಂಡ್ರೆ ಅವರು ವಿನಂತಿಸಿದರು. **ಶ್ರೀ ಎಚ್.ಕೆ.ಪಾಟೀಲರು,** ಈ ಸಂಬಂಧದಲ್ಲಿ ಕೃಷಿ ಸಚಿವರಿಂದ ಮಧ್ಯಾಹ್ನದ ಸಭೆಯಲ್ಲಿ ಉತ್ತರ ಕೊಡಿಸುವ ಬಗ್ಗೆ ಹೇಳಿದರು.

30.10.2000ದಂದು ನಡೆದ ವಿಧಾನಪರಿಷತ್ತಿನ ಅಧಿವೇಶನದಲ್ಲಿ[3] **ಡಾ.ಎ.ಎಚ್.ಶಿವಯೋಗಿ ಸ್ವಾಮಿಗಳು** ತುಮಕೂರು, ಚಿತ್ರದುರ್ಗ ಜಿಲ್ಲೆಗಳಲ್ಲಿ ಕೆಂಪು ತಲೆ ಕಂಬಳಿಹುಳುರೋಗದಿಂದ ಶೇಂಗಾ ಬೆಳೆಗೆ ಹಾನಿಯಾಗಿರುವ ಬಗ್ಗೆ ಕೃಷಿ ಸಚಿವರ ಸೆಳೆದಾಗ ಸಚಿವ **ಶ್ರೀ ಟಿ.ಬಿ.ಜಯಚಂದ್ರ** ಅವರು ಮಾತನಾಡಿ:

ತುಮಕೂರು ಜಿಲ್ಲೆ ಪಾವಗಡ ತಾ.ನ 52 ಗ್ರಾಮಗಳಲ್ಲಿ 23,560 ಹೆಕ್ಟೇರು ಪ್ರದೇಶದ ಶೇಂಗಾ ಬೆಳೆಗೆ ಕೆಂಪುತಲೆ ಕಂಬಳಿಹುಳುಗಳ ಬಾಧೆ ತಗುಲಿ 22,360 ರೈತರಿಗೆ ಆಗಿರುವ ಬೆಳೆಗೆ ಹಾನಿ, ಹಾಗು ತೆಗೆದುಕೊಂಡ ಹತೋಟಿ ಕ್ರಮಗಳು, ಗ್ರಾಮ ರೈತಸಭೆ ಏರ್ಪಾಟು, ಸಮಗ್ರ ಕೀಟ ಹತೋಟಿ ಕುರಿತ ತಿಳುವಳಿಕೆಯ ಕರಪತ್ರ ಹಂಚಾಣಿಕೆ, ಬೆಂಕಿ ಹಾಗು ಪೆಟ್ರೋಮ್ಯಾಕ್ಸ್ ದೀಪಗಳಿಂದ ಚಿಟ್ಟೆಗಳನ್ನು ಆಕರ್ಷಿಸಿ ನಾಶಪಡಿಸಿದ್ದು, ಶೇ.50ರ ರಿಯಾಯಿತಿ ದರದಲ್ಲಿ ಸಸ್ಯ ಸಂರಕ್ಷಣಾ ಔಷಧಿ ಮತ್ತು ಉಪಕರಣಗಳ ವಿತರಣೆ, ಕೈಯಿಂದ ನಾಶಪಡಿಸಿದ ಹುಳುಗಳು, ಆಂಧ್ರ ಹಾಗು ಕರ್ನಾಟಕ ಗಡಿ ಪ್ರದೇಶದ ಹಳ್ಳಿಗಳಲ್ಲಿ ರೈತರಿಗೆ ಕೃಷಿ ಇಲಾಖಾ ವತಿಯಿಂದ ಕೀಟಬಾಧೆ ನಿಯಂತ್ರಣ, ಕೀಟ ನಿರ್ವಹಣೆ ಬಗ್ಗೆ ತಾಂತ್ರಿಕ ತಿಳುವಳಿಕೆಯ ಕರಪತ್ರಗಳ ಹಂಚಾಣಿಕೆ; ಈ ಬಗೆಗೆಲ್ಲ ತಿಳಿಸಿದರು.

ಡಾ॥ಎ.ಹೆಚ್.ಶಿವಯೋಗಿಸ್ವಾಮಿ ಅವರು ಸಚಿವರ ಉತ್ತರದ ಬಗ್ಗೆ ಹೇಳುತ್ತ, ಪಾವಗಡ ತಾಲೂಕಿನ 64 ಸಾವಿರ ಹೆಕ್ಟೇರ್ ಪ್ರದೇಶದ ಶೇಂಗಾ ಬೆಳೆಗೆ ಹುಳುವಿನಿಂದ

---

3. ವಿಧಾನ ಪರಿಷತ್ತಿನ ನಡವಳಿಕೆಗಳು., ಸಂಪುಟ 296 (1–5), (30.10.2000) ಪು. 737–740

ಶೇ.30 ರಷ್ಟು, ಬೇರೆ ರೋಗಗಳ ಕಾರಣ ಶೇ.30ರಷ್ಟು ಹಾನಿ ತಗುಲಿ ರೈತರಿಗೆ ಸಂಕಷ್ಟವಾಗಿರುವುದು, ಸಚಿವರಿಂದಲೇ ವಿದಿತಗೊಂಡಿರುವುದು; ಶೇಂಗಾ ಕಾಳು ಬಳಸುವ ಎಣ್ಣೆಗಿರಣಿಗಳೂ ಸಮಸ್ಯೆಯಾಗಿ ರೈತರಿಗೆ ತೊಂದರೆ ಆಗಿರುವುದು; ಪ್ರತಿಸಾರಿ ಒಂದೇ ಬೆಳೆ ಬದಲು ಬೆಳೆ ಬದಲಾವಣೆ ಮಾಡಿ ಭೂಸಾರ ಹೆಚ್ಚಿಸುವಂಥ ಬೆಳೆಪದ್ಧತಿ ರೂಪಿಸುವಂಥ ತಜ್ಞರ ಸಮಿತಿಯ ರಚನೆ, ಹಾಗು ಅದರ ವ್ಯಾಪ್ತಿ ಕುರಿತಂತೆ ವಿವರದ ಅಗತ್ಯ; ಆಂಧ್ರದಲ್ಲಿ ಅನಂತಪುರ ಜಿಲ್ಲೆ ಗಡಿ ರೈತರಿಗೆ ಎಕರೆಗೆ 400 ರೂ ಗಳಂತೆ ಕೊಟ್ಟಿರುವ ಪರಿಹಾರದಂತೆ ನಮ್ಮಲ್ಲಿ ಒದಗಿಸದಿರುವುದು; ಆಂಧ್ರದಲ್ಲಿ ಕೆಂಪುತಲೆ ಹುಳುವಿನ ಕಾಯಿಲೆ ನಿವಾರಣೆಗೆ ಮೋನೊಕ್ರೋಟೋಪಾಸ್ ಅನ್ನು ರೈತರಿಗೆ ಉಚಿತ ಹಂಚಿಕೆ ಮಾಡಿರುವಂತೆ ನಮ್ಮಲ್ಲೂ ಹಂಚಬೇಕಾಗಿರುವುದು; 52 ಹಳ್ಳಿಗಳಲ್ಲಿ 6 ಕೋಟಿ 57 ರೂ ನಿಗದಿ ಮಾಡಿ ಆದರ ಸೂಕ್ತ ನಿರ್ವಹಣೆ ಆಗಿದೆಯೆ? ಎಂಬುದರ ವಿವರದ ಆಗತ್ಯ; ಈ ರೋಗದ ಪರ್ಮನೆಂಟ್ ಪ್ರಿವೆಂಟೀವ್ ಟ್ರೀಟ್‌ಮೆಂಟ್ ಬಗ್ಗೆ ತೆಗೆದು ಕೊಂಡಿರುವ ಕ್ರಮವೇನು? ಎಂಬುದರ ವಿವರ, ಬಯಸಿ ಮಾತನಾಡಿದರು.

ಕೃಷಿ ಸಚಿವ ಶ್ರೀ **ಟಿ.ಬಿ.ಜಯಚಂದ್ರ** ಅವರು ವಿವರಗಳನ್ನು ನೀಡುತ್ತ : ಮಳೆಬಂದ ತಕ್ಷಣ ಕೆಂಪು ತಲೆಯ ಕಂಬಳಿಹುಳು ಚಿಟ್ಟೆಯಾಗಿ ನಂತರ ಗಂಡು ಹೆಣ್ಣು ಚಿಟ್ಟೆ ಸೇರಿ 15 ದಿನಗಳೊಳಗೆ ಮೊಟ್ಟೆಯಿಟ್ಟು ಮತ್ತೆ ಹುಳುಗಳು ಬರುವುದು; ಮನೋಕ್ರೋಟೋಪಾಸ್ ಅನ್ನು ಬೆಲ್ಲ ಅಥವ ಬೆಲ್ಲದ ಹೊಟ್ಟಿನಲ್ಲಿ ಹಾಕಿ ಚೆಲ್ಲಿದಾಗ ದನಗಳು ಸ್ವಲ್ಪ ಅದನ್ನು ತಿಂದರೂ ಸಾಯುವ ಸಂದರ್ಭವಾಗುವಲ್ಲಿ ಸ್ಥಳೀಯ ವಿರೋಧದ ಕಾರಣವಾಗಿ ಇವುಗಳನ್ನು ರಾತ್ರಿ ಹೊತ್ತು ರೈತರಿಂದ ಬೆಂಕಿ, ಪೆಟ್ರೋಮಾಕ್ಸ್ ದೀಪವಿಟ್ಟು ಆಕರ್ಷಿಸಿ ನಾಶಮಾಡುವುದನ್ನೇ ಆರಿಸಿಕೊಂಡದ್ದು; ಹುಳುಗಳು ಫೈನಲ್ ಸ್ಟೇಜ್‌ನಿಂದ 3ನೇ ಸ್ಟೇಜಿಗೆ ಬಂದಾಗ ಕೈಯಿಂದಲೇ ಹುಳುಗಳನ್ನು ಆಯಬೇಕಾಗುವುದು, ಹುಳು ಬಿದ್ದ ಗಿಡವು ಫ್ಲವರಿಂಗ್ ಆರಂಭವಾಗುವುದರೊಳಗಾಗಿ ಎರಡು ದಿನದೊಳಗೆ ತಿನ್ನಲ್ಪಡುವುದು; ಈ ಮೊದಲು ಮೋನೋಕ್ರೋಟೋಪಾಸ್ ಮತ್ತು ಸ್ಟ್ರೇನ್‌ಲಿಬೋ-7 ಅನ್ನು ಕೂಡ ಶೇ. 50ರ ಸಬ್ಸಿಡಿ ದರದಲ್ಲಿ ಕೊಟ್ಟಿದ್ದನ್ನು ರೈತರು ಪ್ರಯೋಗ ಮಾಡಿದ್ದರಿಂದ ಸ್ವಲ್ಪ ಮಟ್ಟಿಗಾದರೂ ಹುಳುಗಳು ನಾಶವಾದುದು; ಹೂ ಬಿಡುವ ಹಂತದಲ್ಲಿಯೇ ಮೊಗ್ಗು ಮತ್ತು ಎಲೆಗಳನ್ನು ಹುಳುಗಳು ನಾಶಮಾಡುವ ಮುಂಚೆಯೇ, ವಿಶೇಷ ಕಾರ್ಯಾಚರಣೆ ಮಾಡಿ ಹುಳುಗಳನ್ನು ಬೆಂಕಿಗೆ ಹಾಕಿರುವುದು, ಆಂಧ್ರದಲ್ಲಿ ಮುಂಜಾಗ್ರತಾ ಕ್ರಮವನ್ನು ಕಂಬಳಿ ಹುಳುಗಳು 3ನೇ

ಸ್ಟೇಜ್ ತಲುಪಿದ ಮೇಲೆ ತೆಗೆದುಕೊಳ್ಳಲಾಗಿ ನಿಯಂತ್ರಣ ಸಾಧ್ಯವಾಗದೆ ಹೋದದ್ದು, ಆದ್ದರಿಂದ ಲಕ್ಷಾಂತರ ಎಕರೆ ಬೆಳೆ ಅಲ್ಲಿ ಹಾನಿ ಆದದ್ದು; ನಮ್ಮಲ್ಲಿ ಮುನ್ನೆಚ್ಚರಿಕೆ ಕ್ರಮವನ್ನು ಇಲಾಖೆಯು ಸೂಕ್ತ ಕಾಲದಲ್ಲಿ ತೆಗೆದುಕೊಂಡು ರೋಗ ನಿಯಂತ್ರಣ ಮಾಡಿ ಬೆಳೆಹಾನಿ ತಪ್ಪಿಸಿದುದು, ಜೊತೆಗೆ ಬೇರುಕೊಳೆಯುವ ರೋಗ ಬಂದುದಾದರೂ ಅದು ಹೆಚ್ಚು ಆಗದಿದ್ದುದು, ಈ ಬಗೆಗೆಲ್ಲ ಶಾಶ್ವತ ಪರಿಹಾರಕ್ಕೆಂದು 'ವರ್ಲ್ಡ್‌ನ ಮಲ್ಟಿ ಡಿಸಿಪ್ಲಿನರಿ ಟೀಮ್' ಅನ್ನು ವಿಶ್ವವಿದ್ಯಾಲಯದ ಮಟ್ಟದಲ್ಲಿ ಪರಿಶೀಲಿಸಿ ಕಾರ್ಯಾಚರಣೆಯನ್ನು ಮಾಡಿಸಲೆಳಸಿರುವುದು; ಆ ಕಾರ್ಯಾಚರಣೆಯಲ್ಲಿ ಕಡಲೇಕಾಯಿಯನ್ನು ಸಂಪೂರ್ಣ ಕಿತ್ತ ನಂತರ ಒಂದು ಸಾರಿ ಆಳವಾಗಿ ಉಳುವುದು, ಅದರಿಂದ ಪ್ಯೂಪ್ ಅನ್ನು ಪಕ್ಷಿಗಳು ತಿನ್ನಲು ಅವಕಾಶ ಮಾಡುವುದು, ಸರ್ಕಾರದಿಂದ ಸಂಪೂರ್ಣವಾಗಿ ಬೀಜವನ್ನು ಸಬ್ಸಿಡಿ ದರದಲ್ಲಿ (ಪಾವಗಡ ಮಧುಗಿರಿ, ಶಿರಾ, ಚಳ್ಳಕೆರೆ ಭಾಗದಲ್ಲಿ ಸುಮಾರು 22 ಸಾವಿರ ಕ್ವಿಂಟಾಲ್‌ನಷ್ಟು) ಕೊಟ್ಟಿರುವುದು, ಶೇಕಡ 30ರಷ್ಟಾದರೂ ಪರ್ಯಾಯ ಬೆಳೆಯಾಗಿ ಹರಳನ್ನು ಹಾಕಿಸಲಾಗಿ ಅದು ಚೆನ್ನಾಗಿ ಬಂದಿರುವುದು; ಈ ಕಾರ್ಯಾಚರಣೆ ಕೈಗೊಳ್ಳಲು ರೈತರಿಗೆ ಪ್ರೋತ್ಸಾಹ ಮತ್ತು ತಿಳುವಳಿಕೆ ನೀಡುವ ಕೆಲಸ ಮಾಡುತ್ತಿರುವುದು, ಸಂಬಂಧಪಟ್ಟ ನೆರೆರಾಜ್ಯದ ಸಚಿವರೊಡನೆ ಮಾತುಕತೆ ನಡೆಸಿ ಒಗ್ಗೂಡಿ ಕಾರ್ಯಾಚರಣೆ ನಡೆಸುವ ತೀರ್ಮಾನವಾಗಿರುವುದು; ಕ್ರಾಪಿಂಗ್ ಪ್ಯಾಟರ್ನ್ ಬದಲಾವಣೆ ಮಾಡಿದರೆ ಮಾತ್ರ ರೋಗದ ಸಂಪೂರ್ಣ ನಿಯಂತ್ರಣ ಸಾಧ್ಯವಿರುವುದು, ಎಂದೆಲ್ಲ ಸಚಿವರು ತಿಳಿಸಿದರು. ಡಾ.ಎ.ಹೆಚ್.ಶಿವಯೋಗಿ ಸ್ವಾಮಿಯವರು ಸಚಿವರ ಉತ್ತರವನ್ನು ಗಮನಿಸಿ, ಆಂಧ್ರದಲ್ಲಿ ಬೆಳೆ ಪರಿಹಾರಧನವನ್ನು ತಾಲೂಕುವಾರು ನಿಗದಿಮಾಡಿ ಬಿಡುಗಡೆ ಮಾಡಿರುವಂತೆ, ನಮ್ಮಲ್ಲಿಯೂ ನಷ್ಟಗೊಂಡಿರುವ ರೈತರಿಗೆ ನೀಡಬೇಕು; ಶೇಂಗಾ ಬೆಳೆಗಲ್ಲದೆ ಗುಲ್ಬರ್ಗಾ ಭಾಗದ ತೊಗರಿಬೇಳೆ, ದಾವಣಗೆರೆ ಚಿತ್ರದುರ್ಗ ಭಾಗದ ಮೆಕ್ಕೆಜೋಳದ ಬೆಳೆಹಾನಿಗೂ ಪರಿಹಾರ ನೀಡಲು ಸರ್ಕಾರದ ಗಮನ ಹರಿಯಲಿ ಎಂದು ವಿನಂತಿಸಿದರು.

**ಡಾ॥ ಎಂ.ಆರ್.ತಂಗಾ** ಅವರು, ತೊಗರಿ ಬೆಳೆಗೆ ಹರಡಿರುವ ರೋಗವನ್ನು ನಿಯಂತ್ರಿಸಲು (ಆಂಧ್ರದಲ್ಲಿ ಸೈಕ್ಲೋನ್ ಆರಂಭವಾದ ಕೂಡಲೇ ಗುಲ್ಬರ್ಗ ಜಿಲ್ಲೆಯ ತೊಗರಿ ಹಾಳಾಗುವ ಕಾರಣ) ಏರೋಸ್ಪ್ರೇ ಮಾಡಿಸುವ ತಂಡ ಬರುತ್ತದೆ ಎಂಬ ಸಚಿವರ ಆಶ್ವಾಸನೆ ನಂಬಿ ನಿರೀಕ್ಷಿಸುತ್ತಿರುವ ರೈತರ ಬೆಳೆ ಹಾಳಾಗುವ ಮುನ್ನ, ಕಾರ್ಯ ಕೈಗೊಳ್ಳಬೇಕು; ತುಮಕೂರು ಜಿಲ್ಲೆಯಲ್ಲಿನ ನೆಲಗಡಲೆ ಬೆಳೆಗೆ ತಗುಲುವ

ರೋಗದ ನಿಯಂತ್ರಣದ ಬಗ್ಗೆ ವಹಿಸಿರುವ ಆಸಕ್ತಿಯನ್ನು ರಾಜ್ಯ 22 ಜಿಲ್ಲೆಗಳ ರೈತರ ಬೆಳೆಗಳಿಗೂ ತೋರಿಸಬೇಕು ಎಂದರು. **ಶ್ರೀ ಹೆಚ್.ಎಸ್.ಶಾಂತವೀರಪ್ಪಗೌಡರು,** ಬಿತ್ತನೆ ಬೀಜದ ಸಮಸ್ಯೆಯಾಗಿ ರೈತರಿಂದ ರೈತರು ಕೊಂಡುಕೊಳ್ಳಲು ಬಿತ್ತನೆ ಬೀಜ ಸಿಗದಿರುವಲ್ಲಿ, ಮುಂಚಿತವಾಗಿಯೇ ಯಾವ ರೀತಿಯಿಂದಾದರೂ ಬಿತ್ತನೆ ಬೀಜ ಸಂಗ್ರಹಿಸಿಟ್ಟುಕೊಳ್ಳುವಂಥ ವ್ಯವಸ್ಥೆಯನ್ನು ಮಾಡಿಕೊಳ್ಳಲು ಸರ್ಕಾರ ತಿಳಿಸಬೇಕಿತ್ತು ಎಂದರು. **ಶ್ರೀ ಬಿ.ಎಸ್.ಯಡಿಯೂರಪ್ಪ** ಅವರು ಆಂಧ್ರದಲ್ಲಿ ಮಾನೋಕ್ರೋಟೋಪಾಸ್ ಔಷಧಿಯನ್ನು ಹಂಚಿರುವಲ್ಲಿ ನಮ್ಮಲ್ಲಿ ಶೇ. 50ರಷ್ಟು ರಿಯಾಯಿತಿ ದರದಲ್ಲಿ ಸರಬರಾಜು ಮಾಡುವುದರ ಬದಲು ಸಂಪೂರ್ಣ ರಿಯಾಯಿತಿದರದಲ್ಲಿ ಸರಬರಾಜು ಮಾಡಿದ್ದಿದ್ದರೆ ರೈತರಿಗೆ ತೊಂದರೆ ತಪ್ಪುತ್ತಿತ್ತು. ಹುಳುಹಾವಳಿಯಿಂದ ಶೇ.50 ರಷ್ಟು ಹೆಚ್ಚು ಪ್ರಮಾಣದ ಬೆಳೆ ನಾಶವಾಗಿದೆ. 23 ಲಕ್ಷ ರೂ. ಪರಿಹಾರ ನೀಡಲಾಗಿದೆ ಎಂದು ಹೇಳಿಕೆ ಇದ್ದರೂ, ಪರಿಹಾರಧನದಲ್ಲಿ ಶೇ. 25ರಷ್ಟು ಕೂಡ ಹುಳು ಹಿಡಿದು ತಂದವರಿಗೆ ಪರಿಹಾರ ಸಿಗಲಿಲ್ಲ. ಶೇ.35 ಕ್ಕೂ ಹೆಚ್ಚು ಭಾಗ ಹಣ ದುರುಪಯೋಗವಾಗಿದೆ. ಹಣ ವಿತರಣೆಯ ಕ್ರಮದ ವಿವರಬೇಕು ಎಂದರು. **ಶ್ರೀ ಟಿ.ಬಿ.ಜಯಚಂದ್ರ** ಅವರು ಉತ್ತರಿಸುತ್ತ ಆಂಧ್ರದಲ್ಲಿ ಹುಳು ಹಾವಳಿಯ ಸ್ಟೇಜ್ ಗಮನಿಸದೆ ಔಷಧಿ ಸಿಂಪಡಿಸಿ ನಿರಂತರವಾಗಿ ಅದಕ್ಕಾಗಿ ಹಣ ಖರ್ಚು ಮಾಡಿದರೂ ಅಲ್ಲಿ ಪ್ರಯೋಜನವಾಗದೆ ಲಕ್ಷಾಂತರ ಎಕರೆಯ ಬೆಳೆ ಹಾಳಾಯಿತು. ನಮ್ಮಲ್ಲಿ ಎಂಟು ಕೇಂದ್ರಗಳನ್ನು ತೆರೆದು, ಕ್ಯಾಂಪ್ ನಡೆಸಿ, ರೈತರು, ರೈತರ ಮಕ್ಕಳು ತಂದ ಕೆಂಪುತಲೆ ಕಂಬಳಿ ಹುಳುಗಳನ್ನು ತೂಕಮಾಡಿ, ಪೇಮೆಂಟ್ ಮಾಡಿ ಹುಳುಗಳನ್ನು ನಮ್ಮೆದುರಿನಲ್ಲಿಯೇ ಬೆಂಕಿಗೆ ಹಾಕುವ ವ್ಯವಸ್ಥೆ ಮಾಡಲಾಗಿತ್ತು.

ರೈತರೆದುರಿಗೆ ಕುಳಿತುಮಾಡಿರುವ ಸಮರೋಪಾದಿಯ ಕೆಲಸದ ಕಾರಣ ಕಂಬಳಿ ಹುಳದ ಹಾವಳಿ ನಿಯಂತ್ರಿಸಲು ಸಾಧ್ಯವಾಯಿತು. ಅಲ್ಲದೆ ಅದೃಷ್ಟವಶಾತ್ ಮಳೆಬಂದಕಾರಣ, ಹುಳುಗಳು ಭೂಮಿಯೊಳಕ್ಕೆ ಹೋಗಿ, ನಂತರ ಕಡಿಮೆಯಾಗಿ, ಹಾವಳಿ ನಿಯಂತ್ರಿಸಲು ಸಾಧ್ಯವಾಯಿತು. ಎಲ್ಲ ಪಕ್ಷಗಳ ಮುಖಂಡರನ್ನು ಸಹ ಕರೆದುಕೊಂಡು ಹೋಗಿ ಮಾಡಿರುವ ಕೆಲಸ ತೋರಿಸಿದಾಗ ಮೆಚ್ಚುಗೆಯೂ ವ್ಯಕ್ತವಾಗಿದೆ. 27 ಲಕ್ಷ ರೂ. ಖರ್ಚುಮಾಡಿ ಕೋಟ್ಯಾಂತರ ರೂ ಮೌಲ್ಯದ ಬೆಳೆಯನ್ನು ಉಳಿಸಲಾಗಿದೆ. ಮಳೆ ಬಿದ್ದುದರಿಂದ ನಷ್ಟದಿಂದ ಬಚಾವ್ ಆಗಿದ್ದೇವೆ. ಆದರೂ ಡಾ॥ ಶಿವಯೋಗಿಸ್ವಾಮಿಯವರು ಪರಿಹಾರ ನೀಡುವ ಬಗ್ಗೆ ಹೇಳಿರುಲ್ಲಿ,

ನಷ್ಟ ಎಷ್ಟಾದರೂ ಆಗಿರಲಿ ಪರಿಹಾರ ನೀಡುವುದಕ್ಕೆ ಹಿಂದೆ ಮುಂದೆ ನೋಡುವುದಿಲ್ಲ. ಡಾ॥ ತಂಗಾ ಅವರು ಹೇಳಿದ ವಿಚಾರ ಬಗ್ಗೆ ಹೇಳಬೇಕೆಂದರೆ ಬೆಳೆಗೆ ರೋಗ ಬರುವ ಬಗ್ಗೆ ಆಂಟಿಸಿಪೇಟ್ ಮಾಡಿ ರೈತರಿಗೆ ಎಚ್ಚರಿಕೆ ಕೊಡುವಂಥ ಹೊಣೆ ಇದೆ. ಕಮಿಷನರ್ ವರದಿಯಲ್ಲಿ ಹುಳಬೆಳೆದು ಅಡ್ವಾನ್ಸ್ ಸ್ಟೇಜ್ ತಲುಪಿದ್ದು ಕೂಡಲೇಕ್ರಮ ತೆಗೆದುಕೊಳ್ಳಲು ಹೇಳಿದ್ದಂತೆ 20 ಲಕ್ಷ ರೂ ಬಿಡುಗಡೆ ಮಾಡಿ ಮಾನೋಕ್ರೋಟೋಪಾಸ್ ಔಷಧಿ ಹಾಗು ಮಿಸ್ಟ್ ಪೌಡರ್ ಕೊಂಡು ರೋಗ ನಿಯಂತ್ರಣ ಮಾಡಲಾಗಿದೆ. ಗುಲ್ಬರ್ಗ ರೈತರಿಗೂ ತಿಳುವಳಿಕೆ ಕೊಡುವ ಕೆಲಸ ಮಾಡಲಾಗಿದೆ. ಪುಣ್ಯಕ್ಕೆ ಮಳೆ ಮತ್ತೆ ಬರದ ಕಾರಣ ಈಲಿಯೋಥೀಸಿಸ್ ರೋಗವನ್ನು ನಿಯಂತ್ರಿಸಲು ಸಾಧ್ಯವಾಗಿದೆ. ಔಷಧಿಯನ್ನು ಸಿಂಪರಣೆ ಮಾಡಲಾಗಿದೆ. ತುಂಬಾ ಹಾನಿಯಾಗುವ ಸಂಭವವಿದ್ದರೆ 'ಮಾಸ್‌ಸ್ಪ್ರೇ' ಮಾಡಿಸುವ ಬಗ್ಗೆ ಅಧಿಕಾರಿಗಳೊಡನೆ ಚರ್ಚಿಸಲಾಗಿದೆ. ಗುಲ್ಬರ್ಗದ 7 ಲಕ್ಷ ಎಕರೆ ತೊಗರಿ ಬೆಳೆಗೆ ಸರ್ಕಾರ 'ಮಾಸ್‌ಸ್ಪ್ರೇ' ಮಾಡಿಸುವ ಚಿಂತನೆ ಮಾಡಿದೆ. 'ಏರಿಯಲ್ ಸ್ಪ್ರೇ' ಮಾಡಿಸುವ ಬಗ್ಗೆ ಎಲ್ಲಿಯೂ ಸರ್ಕಾರ ಹೇಳಿಲ್ಲ ಎಂದರು. ಈ ಬಗ್ಗೆ ಡಾ. ಎಂ.ಆರ್.ತಂಗಾ ಹಾಗೂ ಶ್ರೀ.ಟಿ.ಬಿ.ಜಯಚಂದ್ರ ಅವರ ನಡುವೆ ಮತ್ತಷ್ಟು ವಿಚಾರ ವಿನಿಮಯವಾಯಿತು.

## ವಿಷಯ :2 ಅತಿವೃಷ್ಟಿಯಿಂದ ರೈತರಿಗೆ ತೊಂದರೆ

8.11.2000 ರಂದು ನಡೆದ ವಿಧಾನಪರಿಷತ್ತಿನ ಅಧಿವೇಶನದಲ್ಲಿ[4] **ಶ್ರೀ ಕೆ.ಎನ್.ಸುಬ್ಬಾರೆಡ್ಡಿ** ಅವರು ಆಡಿದ ಮಾತುಗಳಲ್ಲಿ: ಅತಿ ಹೆಚ್ಚಿನ ಮಳೆಯ(ಸರಾಸರಿ 24 ಇಂಚು) ಕಾರಣ ಜಾನುವಾರುಗಳ ಸಾವು ನೋವು, ರೈತರ ಬೆಳೆನಾಶ, ಕೆರೆ–ಕುಂಟೆಗಳು ಒಡೆದು ಹೋಗಿರುವಿಕೆ, ರಾಜ್ಯದಲ್ಲಿ ರೈತರಿಗೆ 400 ಕೋಟಿಯಷ್ಟು ನಷ್ಟ, ಶಾಸಕರು ಅತಿವೃಷ್ಟಿ ನಷ್ಟದ ತಪಾಸಣೆ ಮಾಡಿ ಕೊಟ್ಟ ವರದಿಗನುಗುಣವಾಗಿ ರೈತರಿಗೆ ಈವರೆಗೆ ಕೊಟ್ಟಿಲ್ಲದ ಪರಿಹಾರ, ರಸಗೊಬ್ಬರಗಳ ತುಟ್ಟಿ ಬೆಲೆ, ರೈತರ ಬೆಳೆಗೆ ಸಿಕ್ಕದ ಸೂಕ್ತ ಬೆಲೆ, ರೈತರ ಸಂಕಟ ಹಾಗೂ ಗೋಳಿನ ಪರಿಸ್ಥಿತಿ, ಚಿಂತಾಮಣಿ ತಾಲೂಕಿನಲ್ಲಿ ಕ್ವಿಂಟಾಲ್ ರಾಗಿಗೆ 300 ರೂ ಕೂಡ ಹುಟ್ಟದಿರುವುದು, ವ್ಯವಸಾಯದ ಮೇಲೆ ಹೂಡಿರುವ ಹಣದಲ್ಲಿ 50% ನಷ್ಟೂ ವಾಪಸ್ ಬರದಿರುವುದು ಸರ್ಕಾರದಿಂದ ರೈತರಿಗೆ ಶೇ. 25 ರಷ್ಟಾದರೂ ನೆರವು ಕೊಟ್ಟರೆ ಒದಗುವ ಅನುಕೂಲ; ರೈತನಿಗೆ 25 ಸಾವಿರ ನಷ್ಟವಾಗಿರುವ ಕಡೆ 1 ಸಾವಿರ ಕೊಟ್ಟರೆ ನಿಷ್ಪ್ರಯೋಜಕವಾಗುವುದು, ಪಾಣಿ ತೆಗೆದುಕೊಂಡು ರೆಕಾರ್ಡ್ ಮಾಡಿಹೋಗುವುದರೊಳಗೆ 500–600 ರೂ

4. ವಿಧಾನ ಪರಿಷತ್ತಿನ ನಡವಳಿಕೆಗಳು, ಸಂಪುಟ 297 (1–3), ಭಾಗ–1 (8.11.2000), ಪು.492–525.

ಖರ್ಚಾಗಿ ಕೇವಲ 200-300 ರೂ ಕೈಗೆ ಬಂದರೆ ಯಾವ ಪ್ರಯೋಜನವೂ ಆಗದ ಸಂಗತಿ, ಜಿಲ್ಲಾಧಿಕಾರಿಗಳಿಂದ ಬೆಳೆ ಹಾನಿ ವಿವರ ತರಿಸಿಕೊಂಡು ಶೇ.50 ಭಾಗದಷ್ಟಾದರೂ ನಿಧಿ ನೆರವನ್ನು ಕೋಲಾರ ಜಿಲ್ಲೆಗೆ ಬಿಡುಗಡೆ ಮಾಡುವುದರಿಂದ ರೈತರಿಗೆ ಒಂದಷ್ಟು ಒದಗುವ ಪರಿಹಾರ, ಒಡೆದುಹೋಗಿರುವ ಕೆರೆಕಟ್ಟೆಗಳ ರಿಪೇರಿ, ಹಳ್ಳಿ ರಸ್ತೆಗಳ ಅಭಿವೃದ್ಧಿ ಮಳೆಹಾನಿಯಿಂದ ಸತ್ತ ರೈತನ ಮನೆಯವರಿಗೆ 2 ಲಕ್ಷ ರೂಗಳ ಪರಿಹಾರ ನೀಡುವುದು, ಎಲ್ಲಾ ಬೆಳೆಗಳಿಗೆ ಬೆಳೆ ವಿಮಾ ಯೋಜನೆ ಅನ್ವಯ ಮಾಡುವಿಕೆ. (ಕಾರಣ ರೇಷ್ಮೆ, ಕಡ್ಲೆಕಾಯಿ, ದ್ರಾಕ್ಷಿ ಹಾಳಾಗಿರುವುದು), ಜೋಳಕ್ಕಿದ್ದಂತೆ ರಾಗಿಗೂ ರೇಟ್ ಫಿಕ್ಸ್ ಮಾಡುವುದು ಇತ್ಯಾದಿ ವಿಷಯಗಳ ವಿವರಣೆಗಳಿದ್ದುವು. **ಶ್ರೀ ಹೆಚ್.ಎಸ್.ಶಾಂತವೀರಪ್ಪಗೌಡರು** ಕೃಷಿ ಉತ್ಪನ್ನಗಳ ಬೆಲೆಕುಸಿತ, ರೈತರ ಬೆಳೆಗಳಿಗೆ ಬೆಂಬಲ ನಿಗದಿ, ರೈತ ಸಮಸ್ಯೆಗಳು ಕುರಿತಂತೆ ಪ್ರಸ್ತಾಪಿಸುತ್ತ; ಅತಿವೃಷ್ಟಿ ಪ್ರವಾಹದಿಂದ ಕೃಷಿ ಕೂಲಿಗಾರರು, ರೈತರು ಬೀದಿಪಾಲಾಗಿರುವುದು, ಕೈಗಾರಿಕೆಗಳಿಗೆ ಸಿಕ್ ಇಂಡಸ್ಟ್ರೀ ಎಂದು ಘೋಷಿಸಿದಂತೆ ಸರ್ಕಾರ 'ಸಿಕ್ ಫಾರ್ಮರ್' ಎಂದು ಗುರುತಿಸಿಲ್ಲದಿರುವುದು, ಬೆಳೆನಾಶ, ಜಾನುವಾರುಗಳು ಕೊಚ್ಚಿಕೊಂಡು ಹೋಗಿರುವುದು, ಕೆಲಾಮಿಟಿ ರಿಲೀಫ್ ಫಂಡ್‌ನಿಂದ ರಾಜ್ಯಕ್ಕೆ ಈವರೆಗೆ ಬಂದಿರುವ ಹಣ ಹಾಗು ಖರ್ಚಾಗಿರುವ ಹಣದ ವಿವರವನ್ನು ಸರ್ಕಾರವು ನೀಡಬೇಕಿದ್ದು, ಅತಿ ಮಳೆಯ ಕಾರಣ ಉಂಟಾದ ಜಾಗಿನಿಂದ ನಾಶವಾಗಿರುವ ಬೆಳೆ, ರಾಜ್ಯದ 175 ತಾಲೂಕುಗಳಲ್ಲಿ 40 ಅಗ್ರಿಕಲ್ಚರಲ್ ಅಸಿಸ್ಟೆಂಟ್ಸ್ ಇರಬೇಕಾದ ಕಡೆ ಕನಿಷ್ಠ 15 ಅಸಿಸ್ಟೆಂಟ್ಸ್ ಕೂಡ ಇಲ್ಲದಿರುವುದು, 168 ತಾಲೂಕುಗಳಲ್ಲಿ ಸಹಾಯಕ ಕೃಷಿ ನಿರ್ದೇಶಕರಿಲ್ಲದಿರುವುದು, ರೈತನಿಗೆ ಬೆಳೆಹಾನಿ ಮಾಹಿತಿಗಳನ್ನು ಈ ಕಾರಣದಿಂದಾಗಿ ನೀಡುವವರಿಲ್ಲದಿರುವುದು, ರೈತನ ಬೆಳೆಹಾನಿ ಕಾರಣ ಹೋಬಳಿ ಮಟ್ಟದಲ್ಲಿ ಪ್ರಕೃತಿ ವಿಕೋಪ ಪರಿಹಾರ ಕೇಂದ್ರವನ್ನು ಆರಂಭಿಸಲಾಗುತ್ತಿರುವುದು, ಮೆಣಸಿನ ಕಾಯಿ ಬೆಳೆಯ ಬೆಲೆ ಕುಸಿತ, ಸಕಾಲಕ್ಕೆ ಅಣೆವಾರಿಯನ್ನು ಬೆಳೆ ಪೂರ್ಣ ನಾಶವಾಗಿರುವಲ್ಲಿ ಮಾಡದೆ ಎರಡು ವರ್ಷದ ಹಿಂದಿನ ಅಣೆವಾರಿಯನ್ನು ಸರ್ಕಾರ ಘೋಷಿಸುವ ಔಚಿತ್ಯ, ಬಿತ್ತನೆ ಬೀಜವನ್ನು ಗೊಬ್ಬರವನ್ನು ಉಚಿತವಾಗಿ ಅಥವಾ ಸಬ್ಸಿಡಿ ಮೂಲಕ ನೀಡಬೇಕಾದ್ದು, ಬೆಳೆ ಹಾನಿಯಿಂದಾಗಿ ಪುನಃ ಸಾಲ ಪಡೆದು ಬೆಳೆಯುವ ಪರಿಸ್ಥಿತಿ ಇಲ್ಲದಿರುವಾಗ ಆ ಸಾಲವನ್ನು ಕನ್‌ವರ್ಷನ್ ಮಾಡಿ ಪುನಃ ರೈತನಿಗೆ ಸಾಲ ನೀಡುವ ಸಲುವಾಗಿ ಸರ್ಕಾರ ಅಣೆವಾರಿಯನ್ನು ಡಿಕ್ಲೇರ್ ಮಾಡಿರುವುದು, ಅದರಿಂದಾಗಿ ಇನ್ನು ಅನೇಕ ಅನುಕೂಲಗಳನ್ನು ಒದಗಿಸಿ ಕೊಡಬೇಕಾಗುವುದು. ಜಿಲ್ಲಾಧಿಕಾರಿಗಳಿಗೆ ವಿಳಂಬ ತಪ್ಪಿಸಲು ಅಣೆವಾರಿ ಡಿಕ್ಲೇರ್

ಮಾಡುವ ಅಧಿಕಾರ ಕೊಡುವುದು, ಕೇಂದ್ರವು ರಾಷ್ಟ್ರೀಯ ಬೆಳೆ ಕೃಷಿ ವಿಮಾ ಯೋಜನೆಯಡಿ ಬೆಳೆ ವಿಮಾ ನೀತಿ ಮಂಜೂರು ಮಾಡಿದರೂ ರಾಜ್ಯ ಸರ್ಕಾರ ಹಳೆ ಪದ್ಧತಿಯನ್ನೆ ಅನುಸರಿಸಿ ಬೆಳೆ ವಿಮಾ ಯೋಜನೆಯನ್ನು ಗ್ರಾಮ, ಮಂಡಲ ಪಂಚಾಯಿತಿ, ಹೋಬಳಿ, ಸರ್ಕಲ್ ಕಿರ್ಕಾಗಳ ಬದಲು ತಾಲೂಕು ಪಂಚಾಯಿತಿ ಘಟಕವಾಗಿ ನಿರ್ಮಿಸಿ ಒಲ್ಲದ ಮನಸ್ಸಿನಿಂದ ಜಾರಿಗೆ ತಂದಿರುವುದು, ಬೆಳೆವಿಮಾ ಪ್ರೀಮಿಯಂ ಅನ್ನು ಕಳೆದ ಬೇಸಿಗೆಯಲ್ಲಿ ಕಟ್ಟಿಸಿಕೊಳ್ಳದಿರುವುದು, ಜನರಲ್ ಇನ್ಷೂರೆನ್ಸ್ ಕಾರ್ಪೋರೇಷನ್ ಆಫ್ ಇಂಡಿಯಾ ಕಂಪೆನಿಯಿಂದ ನಮ್ಮ ರೈತರಿಗೆ ಬೆಳೆ ವಿಮೆಯನ್ನೂ ಪಡೆಯಲವಕಾಶವಿದ್ದರೂ ಸರ್ಕಾರಕ್ಕೆ ಆ ಬಗ್ಗೆ ಆಸಕ್ತಿ ಇಲ್ಲದಿರುವುದು, ಆಂಧ್ರದಲ್ಲಿ ಬೆಳೆಹಾಳಾದಾಗ ಮುಖ್ಯಮಂತ್ರಿಗಳು ರಿಸರ್ವ್ ಇಂಡಿಯಾದ ವೈಸ್ ಛೇರ್ಮನ್‌ರೊಡನೆ ಮಾತಾಡಿದ್ದು ಸಣ್ಣ ಮತ್ತು ಅತಿಸಣ್ಣ ರೈತರಿಗೆ ಬ್ಯಾಂಕ್ 4 ಪರ್ಸೆಂಟ್ ಮಾದರಿಯಲ್ಲಿ ಸಾಲ ಕೊಡುವಂತಾಗಬೇಕಾಗಿರುವುದು, ರೈತರ ಮೇಲೆ ನಡೆಯುವ ಶೋಷಣೆ ತಪ್ಪಿಸುವುದು, ಹನಿ ನೀರಾವರಿಗೆಂದು ಕೇಂದ್ರವು ನೀಡಿದ ಹಣವನ್ನೂ (ಸು. 212 ಲಕ್ಷ) ಏಕೆ ಖರ್ಚು ಮಾಡುತ್ತಿಲ್ಲ ಎಂಬುದು; ಒಡೆದಿರುವ ಕೆರೆ ಕಟ್ಟೆಗಳು, ರೈತರು ಅನುಭವಿಸುತ್ತಿರುವ ತೊಂದರೆಗಳು; ಬೀದಿ ಪಾಲಾಗಿರುವ ರೈತರಿಗೆ ಕಾಮಗಾರಿಕೆಲಸ ಕೊಡದೆ ಕಂಟ್ರಾಕ್ಟರ್‌ಗಳಿಗೆ ಅಧಿಕಾರಿಗಳು ಕೊಡುತ್ತಿರುವ ಬಗ್ಗೆ ಸರ್ಕಾರದ ಲಕ್ಷ್ಯ ಹೋಗಬೇಕಿರುವುದು ಭತ್ತ, ರಾಗಿ, ಜೋಳ, ಕಬ್ಬು, ಉದ್ದು, ಹೆಸರು, ಹುರುಳಿ, ತೆಂಗು, ಈರುಳ್ಳಿ, ಆಲೂಗೆಡ್ಡೆ ಬೆಳೆಗಾರರ ಹೀನಾಯ ಪರಿಸ್ಥಿತಿ ಕುರಿತೆಲ್ಲ ಹೇಳಿ ವಿವರವಾದ ಉತ್ತರವನ್ನು ಸರ್ಕಾರದಿಂದ ಬಯಸಿದರು.

**ಶ್ರೀ ಡಿ.ಎಲ್.ಜಗದೀಶ್** ಅವರು : ಮಳೆಯಿಂದಾಗಿ ಯಾವ ಯಾವ ಜಿಲ್ಲೆಯಲ್ಲಿ ಬೆಳೆ ನಷ್ಟದ ಪ್ರಮಾಣದ ಸರ್ಕಾರ ಸ್ಪಷ್ಟವಾಗಿ ಹೇಳಿಲ್ಲದಿರುವುದು; ಪರಿಹಾರಧನವನ್ನು ಯಾವ ಬೆಳೆಗೆ ಯಾವ ಜಿಲ್ಲೆಗೆ ಬಿಡುಗಡೆ ಮಾಡಿರುವ ಬಗ್ಗೆ ಮಾಹಿತಿಯ ಅಗತ್ಯ. ಆ ಬಗ್ಗೆ ತುರ್ತಾಗಿ ಸರ್ಕಾರ ಕೈಗೊಂಡ ಕಾರ್ಯಕ್ರಮ; ಕೆರೆ ಒಡೆದಿರುವಲ್ಲಿ ರಿಪೇರಿಗೆ ನೀಡಿರುವ ಹಣ; ಸತ್ತ ರೈತರ ಕುಟುಂಬಗಳಿಗೆ ಬಿಡುಗಡೆ ಮಾಡಿದ ಒಂದು ಲಕ್ಷ ರೂ.ಗಳ ಪರಿಹಾರ ಆ ಕುಟುಂಬಗಳಿಗೆ ತಲುಪಿರುವ ಬಗ್ಗೆ ಮಾಹಿತಿಯ ಅಗತ್ಯ; ಬೆಳೆ ಹಾನಿಗೆ, ಕೆರೆಗಳ ರಿಪೇರಿಗೆ ಸರ್ಕಾರ ತೆಗೆದುಕೊಳ್ಳುವ ಕಾರ್ಯಕ್ರಮ; ಕೇಂದ್ರದಿಂದ ಪಡೆಯಬೇಕಾದ ಹೆಚ್ಚಿನ ಸಹಾಯ ಕುರಿತೆಲ್ಲ ಹೇಳಿತಮ್ಮ ಮಾತನ್ನು ಮುಗಿಸಿದರು.

**ಶ್ರೀ ಪಿ.ರಾಮಯ್ಯ** ಅವರು ಮಾತನಾಡುತ್ತ, ನಾಗಮಂಗಲ ತಾಲೂಕಿನಲ್ಲಿ ರೈತರ ಜಮೀನಿಗೆ ನೀರು ನುಗ್ಗಿ ಬೆಳೆಹಾಳಾಗಿರುವುದು, ಕೆರೆಯಲ್ಲಿ ಹೂಳುತುಂಬಿ ಮಳೆ ನೀರು ಅಗಾಧ ಬಿದ್ದು ಕೆರೆಗಳು ಒಡೆದಿರುವುದು, ಮಳೆನಂತರ ಕೀಟಗಳ ಹಾವಳಿ ಹೆಚ್ಚಿರುವ ಬಗ್ಗೆ ಹೇಳಿ ಕೇಂದ್ರ ಸರ್ಕಾರ ಹಣವನ್ನು ಗ್ರಾಂಟ್ ರೂಪದಲ್ಲಿ ಕೊಡದೆ ಪರಿಹಾರಕ್ಕೆ ಸಾಲವಾಗಿ ಕೊಡುವ ಕಾರಣ ಅದನ್ನು ಅವಲಂಬಿಸುವ ಅಗತ್ಯವಿಲ್ಲ. ಎಂದೂ ಹೇಳಿದರು. **ಶ್ರೀ ವಿ. ಆರ್. ಸುದರ್ಶನ್** ಅವರು ತಮ್ಮ ಮಾತನ್ನು ಮುಂದಿಟ್ಟು, ಕೆಲಾಮಿಟ ರಿಲೀಫ್ ಪ್ರಕಾರ ಒಂದೊಂದು ರಾಜ್ಯಕ್ಕೆ ಒಂದೊಂದು ರೀತಿಯ ಧೋರಣೆಯನ್ನು ಕೇಂದ್ರ ಸರ್ಕಾರ ತೆಗೆದುಕೊಳ್ಳಬಾರದು. ಹಾನಿಯ ಪ್ರಮಾಣದ ಆಧಾರದ ಮೇಲೆ ನೆರವನ್ನು ಕೊಡುವುದು ಸರಿಯಾದ ಕ್ರಮ ಎಂದರು. **ಶ್ರೀ. ಡಿ.ಎಚ್. ಶಂಕರಮೂರ್ತಿ** ಅವರು ಮಾತನಾಡಿ ಕೆಲಾಮಿಟಿ ರಿಲೀಫ್ ಫಂಡ್ ಬಗ್ಗೆ ರಾಜ್ಯ ಸರ್ಕಾರ ರಾಂಗ್ ಮೆಸೇಜ್ ಕೊಡದೆ, ಪರಿಹಾರಕ್ಕೆ ಟೊಂಕಕಟ್ಟಿ ಮುಂದೆ ನಿಲ್ಲಬೇಕು, ಎಂದರು. ಕಂದಾಯ ಸಚಿವ **ಶ್ರೀ.ಎಚ್.ಸಿ.ಶ್ರೀಕಂಠಯ್ಯ** ಅವರು, ನಮ್ಮ ಪಾಲು ಕಾಲುಭಾಗವಾದರೆ ಕೇಂದ್ರ ಸರ್ಕಾರ ಮುಕ್ಕಾಲುಭಾಗವನ್ನು ಇರುವ ನೀತಿಯಂತೆ ನೀಡಬೇಕು, ಎಂದಾಗ, ಶ್ರೀ. ಡಿ.ಎಚ್. ಶಂಕರಮೂರ್ತಿ ಅವರು ರಾಜ್ಯ ಸರ್ಕಾರದ ಪಾತ್ರ ಹಾಗೂ ಪರಿಹಾರ ಕಾರ್ಯ ಎಷ್ಟು ನಡೆದಿದೆ ಎಂಬುದು ಮುಖ್ಯ ಎಂಬ ಅಭಿಪ್ರಾಯವಿಟ್ಟರು. ನಂತರ ಶ್ರೀ.ಪಿ.ರಾಮಯ್ಯ ಅವರು ಮುಂದುವರಿದು, ಮಳೆಗಾಲದ 2–3 ತಿಂಗಳಲ್ಲಿ ಬೆಳೆದಿದ್ದ ರೈತರ ಬೆಳೆಗೆ ಬೆಲೆ ಬಂದಿಲ್ಲ, ಹುರುಳಿಕಾಯಿ ಬೂಷ್ಟು ಹಿಡಿದು ಹಾಳಾಗಿಹೋಯಿತು: ಅಂಥ ರೈತರು ತಮ್ಮ ಬೆಳೆಯ ಮೇಲೆ ತೆಗೆದುಕೊಂಡ ಸಾಲವನ್ನು ವಾಪಸ್ಸು ಕಟ್ಟಲು ಕಷ್ಟವಾದ ಕಾರಣ, ಸಾಲವಸೂಲಿಗೆ ಒತ್ತಾಯ ಮಾಡದೆ, ವಸೂಲಾತಿಯನ್ನು ಮುಂದಕ್ಕೆ ಹಾಕಬೇಕು. ಕ್ರಾಪ್ ಇನ್‌ಶೂರೆನ್ಸ್ ಸ್ಕೀಮ್ ಅನ್ನು ತಂದಿದ್ದರೂ, ಅದನ್ನು ರೈತರಿಗೆ ಮೂಡಿಸುವುದಕ್ಕೆ ಕಂಪೆನಿಗಳು ಹಿಂದೇಟು ಹಾಕಿ, ಖುಷ್ಕಿ ಬೆಳೆ ಎಂದು ಆ ಇನ್‌ಶೂರೆನ್ಸ್ ಕೊಡಲು ಹೆದರುತ್ತವೆ. ಖುಷ್ಕಿ ಮತ್ತು ತರಿ ಬೆಲೆಯನ್ನು ಕಂಬೈಂಡ್ ಮಾಡಿ ಇನ್‌ಶೂರ್ ಮಾಡಿಸಿದರೆ ಮುಂದೆ ಬಂದಾರು. ಅಂತಾಗಿ ಕ್ರಾಪ್ ಇನ್‌ಶೂರೆನ್ಸ್ ಅನ್ನು ಆಮೂಲಾಗ್ರ ಪರಿಷ್ಕರಣೆ ಮಾಡಬೇಕು, ರೈತರಿಗೆ ಅನುಕೂಲವಾಗುವಂತೆ. ಬೆಟರ್‌ಮೆಂಟ್ ಲೆವಿ, ವಾಟರ್ ರೇಟ್ ಹಾಕಿ ನಿಧಿ ಸ್ಥಾಪಿಸಿ ಸಂಪನ್ಮೂಲ ರೂಢಿಸಿಕೊಂಡು ರೈತರ ಕಷ್ಟಕ್ಕೆ ಪರಿಹಾರ ಕೊಡಬೇಕು.

ರಿವಾಲ್ವಿಂಗ್ ಫಂಡಿಗೆಂದು 150 ಕೋಟಿ ರೂ ಕೊಟ್ಟಿರುವುದು ಏನೇನೂ ಸಾಲದು. ಬೆಳೆ ಎಲ್ಲ ಆದ ಮೇಲೆ ರೈತ ಹಾನಿಗೊಂಡ ಮೇಲೆ ಮಾರ್ಕೆಟ್ ಇಂಟರ್‌ವೆನ್ಷನ್ ಮಾಡಿ ಅಲ್ಪಸ್ವಲ್ಪ ಪರ್ಚೇಸ್ ಮಾಡಿದರೆ ಅನುಕೂಲವೇನು! ಮಾರ್ಕೆಟ್ ಇಂಟೆಲಿಜನ್ಸ್ ವಿಂಗ್ ಇಟ್ಟುಕೊಂಡು ರೈತನ ಬೆಳೆ ತಿಳಿದು ಯಾವ ರೀತಿಸಹಾಯ ಮಾಡಬಹುದು ಎಂದು ಹೇಳುವುದು ಅವಶ್ಯಕ. ಲಾಭದಾಯಕ ಬೆಲೆ, ಬೆಳೆದ ಬೆಳೆಗೆ ಸಿಗುವುದಾದರೆ ರೈತ ವಾಟರ್ ರೇಟ್, ಬೆಟರ್‌ಮೆಂಟ್ ಲೆವಿ, ಕರೆಂಟ್ ಚಾರ್ಜ್ ಎಲ್ಲ ಕೊಡುತ್ತಾನೆ. ಕೀಟಗಳ ಹಾವಳಿ ಇರುವೆಡೆ ಕೀಟನಾಶಕಗಳನ್ನು ಸಬ್ಸಿಡೈಸ್ಡ್ ರೇಟಿನಲ್ಲಿ ಒದಗಿಸಿಕೊಡಬೇಕು ಎಂದೆಲ್ಲ ಹೇಳಿ ಮಾತು ಮುಕ್ತಾಯ ಮಾಡಿದರು.

**ಡಾ॥ ಎ.ಎಚ್.ಶಿವಯೋಗಿಸ್ವಾಮಿ** ಅವರು, ದಾವಣಗೆರೆ ಜಿಲ್ಲೆಯಲ್ಲಿ ಬೇರೆಡೆಗಿಂತ ಬಹಳ ಹೆಚ್ಚಿನ ಹಾನಿಯಾಗಿರುವ ಬಗ್ಗೆ ತಿಳಿಸುತ್ತಾ, ಚಿತ್ರದುರ್ಗ ಜಿಲ್ಲೆಯ ದೊಡ್ಡಕೆರೆಯಾದ ಕಾತರಾಳ ಕೆರೆ ಅತಿ ಮಳೆಯ ಕಾರಣ ತೊಂದರೆಗೊಂಡಿದೆ. ಆ ಕೆರೆಯ ಕಾಮಗಾರಿ ಆಗಬೇಕು ಎಂದರು. **ಶ್ರೀ ಎಂ.ಪಿ.ಪ್ರಕಾಶ್** ಅವರು ಮಾತನಾಡುತ್ತ, ಅತಿವೃಷ್ಟಿ ಅಥವಾ ಅನಾವೃಷ್ಟಿ ಕಾರಣದಿಂದ ಬೆಳೆಹಾನಿಗೆ ಒಳಗಾಗಿರತಕ್ಕ ರೈತರ ಸಂಕಷ್ಟವನ್ನು ಪರಿಹಾರ ಮಾಡಲು ಸಹಕಾರಿ ಸಾಲಗಳನ್ನು ಪುನರ್ ಹೊಂದಾಣಿಕೆ ಮಾಡತಕ್ಕಂಥದ್ದು ಇದೆ. ಅಂದರೆ ಈ ಅಲ್ಪಾವಧಿ ಸಾಲವನ್ನು ದೀರ್ಘಾವಧಿ ಸಾಲವನ್ನಾಗಿ ಪರಿವರ್ತಿಸಿ, ದೀರ್ಘಾವಧಿ ಸಾಲದ ಮೇಲೆ ಇರುವ ಬಡ್ಡಿಯನ್ನು ಕಡಿಮೆ ಮಾಡುವುದು; ಇದರ ಬದಲು ಗಾಯದ ಮೇಲೆ ಉಪ್ಪು ಹಾಕುವಂಥ ವಸೂಲಾತಿ ಕ್ರಮ ರೈತನ ಮೇಲೆ ಗಧಾಪ್ರಹಾರದ ರೀತಿಯದಾಗಿರುವುದು, ಮರುಪಾವತಿ ಸಾಲವನ್ನು ಬೇರೆ ರೀತಿ ಪುನರ್‌ವಿಮರ್ಶೆ ಮಾಡುವುದು; ಸಾಧ್ಯವಾದರೆ ನಬಾರ್ಡ್ ಬೇಡಿಕೆಯನ್ನು ಮೀರಿ, ಷರತ್ತು ಮೀರಿ ರೈತರಿಗೆ ಬಡ್ಡಿಯನ್ನು ಮನ್ನಾ ಮಾಡುವಂಥ ರಾಜಕೀಯ ಇಚ್ಛಾಶಕ್ತಿ ಮುಖ್ಯವಿರುವುದು. ಎಂಬ ಬಗೆಗೆಲ್ಲ ಹೇಳಿದರು.

**ಶ್ರೀ ಹೆಚ್.ಎಸ್.ಶಾಂತವೀರಪ್ಪ** ಗೌಡರು, ಭಾರತೀಯ ರಿಸರ್ವ್‌ಬ್ಯಾಂಕ್‌ನ ಸಭೆಯಲ್ಲಿ ಪ್ರಕೃತಿ ವಿಕೋಪಕ್ಕೆ ಸಿಕ್ಕ ರೈತರ ಕಷ್ಟಗಳನ್ನು ನಿವಾರಿಸಲು ಪರಿಹಾರವನ್ನು ಆಂಧ್ರ ಪ್ರದೇಶಾನ್ವಯವಾಗಿ ನೀಡಿರುವುದನ್ನು ತಿಳಿಸುತ್ತಾ, ಬೆಳೆಸಾಲ ಮತ್ತು ಬಡ್ಡಿ ವಸೂಲಾತಿಯನ್ನು 2 ವರ್ಷಕಾಲ ನಿಲ್ಲಿಸುವುದು, ಹಾಲಿ ಇರುವ ಸಾಲವನ್ನು ಏಳು ವರ್ಷಗಳ ಕಾಲದಲ್ಲಿ ಕಂತಿನಲ್ಲಿ ಪಾವತಿ ಮಾಡಲು ಇರುವ ಅವಕಾಶ

ಕುರಿತು ಹೇಳಿದರು. ನಬಾರ್ಡ್ ಹಾಗು ರಿಸರ್ವ್ ಬ್ಯಾಂಕಿನವರು ಬಡ್ಡಿ ಬಿಡಬೇಕು, ಬಡ್ಡಿದರ ಕಡಿಮೆ ಮಾಡಿ ಸಾಲ ಕೊಡಬೇಕು. ಆಂಧ್ರದಲ್ಲಿ 6 ಪರ್ಸೆಂಟ್, 4 ಪರ್ಸೆಂಟ್ ದರದಲ್ಲಿ ರೈತರಿಗೆ ಸಾಲ ಕೊಡಿಸಲಾಗಿದೆ ಎಂದೂ ನುಡಿದರು. ಶ್ರೀ ಎಂ.ಪಿ.ಪ್ರಕಾಶ್ ಅವರು, ಸರ್ಕಾರ ರೈತರ ಪರವಾಗಿ ಅವರ ಸಂಕಷ್ಟದ ಈ ದಿನಗಳಲ್ಲಿ ಬಡ್ಡಿ ಮನ್ನಾ ಮಾಡುವ ಎದೆಗಾರಿಕೆ ತೋರಿದರೆ ಕೇಂದ್ರ ಸರ್ಕಾರ ಕೂಡ ಅಡ್ಡಬರಲಾರದು ಎಂದರು.

ಈ ದಿನದ ಕಲಾಪಗಳಲ್ಲಿ ಸರ್ವ ಶ್ರೀ ಡಾ॥ ಎಂ.ಪಿ.ನಾಡಗೌಡ, ಕೆ.ಎಸ್.ಶ್ರೀನಿವಾಸ್, ಎಸ್.ಚನ್ನಬಸವಯ್ಯ, ಎಂ.ಸಿ.ನಾಣಯ್ಯ, ಶಶಿಲ್‌ಜಿ.ನ.ಮೋಶಿ, ಬಿ.ಎಸ್.ಯಡಿಯೂರಪ್ಪ ಅವರುಗಳು ಪಾಲ್ಗೊಂಡಿದ್ದರು.

## ವಿಷಯ 3: ಮಂಡ್ಯ ಜಿಲ್ಲೆ ಭತ್ತದ ಬೆಳೆಗೆ ಕಂದುಜಿಗಿಹುಳು ರೋಗ

13.11.2000ದ ವಿಧಾನ ಪರಿಷತ್ತಿನ ಅಧಿವೇಶನದಲ್ಲಿ[5] **ಶ್ರೀ ಎಚ್.ಹೊನ್ನಪ್ಪ** ಅವರು ಮಾತನಾಡುತ್ತ, ಸಾವಿರಾರು ಎಕರೆ ಜಮೀನಿನ ಭತ್ತದ ಬೆಳೆಗೆ ಕಂದುಜಿಗಿ ಮತ್ತು ಕುತ್ತಿಗೆ ರೋಗ ಬಂದಿರುವುದು; ರೈತರು ಬೆಳೆಯುತ್ತಿರುವ ಹೊಸತಳಿ ಭತ್ತವನ್ನು ಕೊಯ್ಯುವ ಸಮಯದಲ್ಲಿ ಈ ರೋಗದಿಂದ ಹಾನಿಯಾಗಿರುವುದು; ಸಹಕಾರ ಸಂಘ ಹಾಗು ಬೇರೆ ಸಂಘಗಳಿಂದ ಸಾಲ ತೆಗೆದು ಭತ್ತ, ಕಬ್ಬು ಬೆಳೆಯುತ್ತಿದ್ದು, ಬೆಳೆ ಬರದಿದ್ದರೆ ಆಗುವ ತೊಂದರೆ, ವರ್ಷೇ ವರ್ಷೇ, ತಪ್ಪದೇ ಬರುತ್ತಿರುವ ಈ ರೋಗಕ್ಕೆ ವಿಜ್ಞಾನಿಗಳು ರೋಗ ನಿರೋಧಕವನ್ನು ಕಂಡುಹಿಡಿದಿಲ್ಲದಿರುವುದು; ಮಾಹಿತಿ ತಂತ್ರಜ್ಞಾನದ ಉದಾಸೀನ; ಈ ಹಿನ್ನೆಲೆಯಲ್ಲಿ ಮಾಡಬೇಕಾದ ರೈತರ ಸಾಲ ಮನ್ನಾ; ಕಳೆದ ವರ್ಷ ಪರಿಹಾರವಾಗಿ ನೂರಿನ್ನೂರು ಕೊಟ್ಟು ಕೈತೊಳೆದುಕೊಂಡಂತಲ್ಲದೆ, 5–6 ಸಾವಿರ ರೂ ವರೆಗೆ ಪರಿಹಾರ ನೀಡಿ, ಸೊಸೈಟಿ ಸಾಲ, ನೀರಿನ ತೆರಿಗೆ, ಕಂದಾಯ ತೆರಿಗೆ ಮನ್ನಾ ಮಾಡುವುದು, ರೋಗ ನಿವಾರಣೆಗೆ ಸಂಶೋಧನೆ ಮಾಡಿಸಿ ರೈತರಿಗೆ ನೆರವಾಗುವುದು ಇತ್ಯಾದಿ ವಿಷಯಗಳ ಕುರಿತು ಪ್ರಸ್ತಾಪಿಸಿದರು. **ಶ್ರೀ ಎಂ.ಎಸ್.ಸಿದ್ಧರಾಜು** ಅವರು ರೈತರು ಬೆಳೆದ ಬೆಳೆಗೆ ದರ ನಿಗದಿ ಮಾಡಿ ಹೆಚ್ಚಿನ ಪರಿಹಾರ ಕೊಡುವ ನಿರ್ಣಯವು ಸದನದಲ್ಲಿ ಆಗಬೇಕೆಂದು ಮನವಿ ಮಾಡಿದರು. **ಶ್ರೀ ಮರಿತಿಬ್ಬೇಗೌಡರು,** ರೈತರು ಬೆಳೆದ ಭತ್ತದ ಬೆಳೆಗೆ ಕೀಟದ ಬಾಧೆಯಿಂದಾಗಿ ಬೆಳೆ ಹಾಳಾಗಿರುವಲ್ಲಿ, ಅಂಥ

5. ವಿಧಾನ ಪರಿಷತ್ತಿನ ನಡವಳಿಕೆಗಳು, ಸಂಪುಟ 297 (4–5) ಭಾಗ II (13.11.2000) ಪು. 1348–1354

ಜಮೀನುಗಳನ್ನು ಸರ್ವೆ ಮಾಡಿಸಿ ರೈತರ ಸಾಲಮನ್ನಾ ಮಾಡಿ ಸೂಕ್ತಪರಿಹಾರ ನೀಡಬೇಕು ಎಂದರು. ಕೃಷಿ ಸಚಿವ **ಶ್ರೀ ಟಿ.ಬಿ.ಜಯಚಂದ್ರ** ಅವರು; ಮಂಡ್ಯ ಜಿಲ್ಲೆಯಲ್ಲಿ ಭತ್ತದ ಬುಡಕ್ಕೆ ಹುಳು ತಗುಲಿ ಬೆಳೆ ಪೂರ್ತಿ ಹಾಳಾದ ಮೇಲೆ ಗಮನಕ್ಕೆ ಬರುವ **ಕಂದುಜಿಗಿ ಹುಳು ರೋಗವು** ಈಗ ಸರ್ಕಾರದ ಲಕ್ಷ್ಯಕ್ಕೆ ಬಂದಿದೆ. ಪ್ಲಾಂಟ್ ಪ್ರೊಟೆಕ್ಷನ್ ಕಾರ್ಯಕ್ರಮದ ವ್ಯಾಪ್ತಿಯಲ್ಲಿರುವ ಹಣದ ಬಿಡುಗಡೆ, ಪೆಸ್ಟಿಸೈಡ್‌ಗಳನ್ನು ಅಗ್ರೋ ಇಂಡಸ್ಟ್ರೀಸ್ ಕಾರ್ಪೋರೇಷನ್ ಮೂಲಕ ಸಬ್ಸಿಡಿ ದರದಲ್ಲಿ ಕೊಡುವ ವಿಚಾರ, ಮಾನೋಕ್ರಾಪಿಂಗ್ ಪ್ಯಾಟರ್ನ್ ಬಳಕೆ, ಯೂರಿಯ ಗೊಬ್ಬರದ ವಿಪರೀತ ಬಳಕೆ, ವಾತಾವರಣದಲ್ಲಿ ಮೋಡ ಜಾಸ್ತಿಯಾಗುವಿಕೆ, ಲೇಟ್ ಸೋಯಿಂಗ್ ಇತ್ಯಾದಿ ಕಾರಣಗಳಿಂದ ಕಾಣಿಸಿಕೊಂಡಿರುವ ಕಂದುಜಿಗಿ ಹುಳು ರೋಗ; 1600 ಹೆಕ್ಟೇರ್ ಪ್ರದೇಶದಲ್ಲಿ ಹುಳು ಬಾಧೆಯಿಂದ ಬೆಳೆನಷ್ಟ. ರೈತರಿಗೆ ಈ ಬಗ್ಗೆ ತರಬೇತಿ ಹಾಗೂ ಮಾಹಿತಿ ಕೀಟನಾಶಕವನ್ನು ಸ್ಪ್ರೇ ಮಾಡಲು, ಮೊದಲು ಗದ್ದೆಯ ನೀರು ಖಾಲಿ ಮಾಡಿ ಮೋನೋಕ್ರೋಫಾಸ್ ಮತ್ತು ಫ್ಯೂರಿಡಾನ್ ಹರಳು ಹಾಕಿ ರೋಗ ನಿಯಂತ್ರಣ ಮಾಡುವುದು; ಈ ಮಾಹಿತಿಯನ್ನು ರೈತರು ಅಳವಡಿಸಿಕೊಳ್ಳುತ್ತಿರುವುದು; ಕಾನೂನಿನ ವ್ಯಾಪ್ತಿಯಲ್ಲಿ ಸಾಧ್ಯವಿರುವ ಪರಿಹಾರ ನೀಡುವುದು, ಕುರಿತೆಲ್ಲ ಹೇಳಿದರು. ಶ್ರೀ ಎಂ.ಎಸ್.ಸಿದ್ದರಾಜು ಅವರು ಮುಂಜಾಗರೂಕತಾ ಕ್ರಮವನ್ನು ಹೀಗೆ ಅಧಿಕಾರಿಗಳು ತೆಗೆದುಕೊಳ್ಳಬೇಕು ಎಂಬ ಆದೇಶ ಪಾಲನೆ ಆಗ್ಬೇಕು ಎಂದರು. ಶ್ರೀ ಎಚ್.ಹೊನ್ನಪ್ಪನವರು ರೈತರ ಪರವಾಗಿ ಕಾನೂನನ್ನು ಮಾಡಿ ಅನುಕೂಲ ಮಾಡಿಕೊಡಬೇಕು ಎಂದರು. ಶ್ರೀ ಟಿ.ಬಿ.ಜಯಚಂದ್ರ ಅವರು, ಈ ರೋಗ ಬೇರೆ ಬೇರೆ ಕಡೆಯಲ್ಲೂ ಹರಡಿರುವಲ್ಲಿ ನಷ್ಟದ ಅಂದಾಜು ತರಿಸಿ ನ್ಯಾಚುರಲ್ ಕೆಲಾಮಿಟಿ ಅಡಿಯಲ್ಲಿ ಕಾನೂನಿನ ವ್ಯಾಪ್ತಿಯಲ್ಲಿ ಪರಿಹಾರವನ್ನೆಷ್ಟು ಕೊಡಬಹುದೋ ಅಷ್ಟೆಲ್ಲ ಕೊಡುವ ಬಗ್ಗೆ ಕೇಂದ್ರ ಹಾಗೂ ರಾಜ್ಯ ಸರ್ಕಾರ ಎರಡೂ ಕಲೆತು ತೀರ್ಮಾನ ಮಾಡಬೇಕಾಗುತ್ತದೆ ಎಂದು ಉತ್ತರಿಸಿದರು.

## ವಿಷಯ 4: ಬಿಜಾಪುರ ಜಿಲ್ಲೆ ಇಂಡಿ ತಾಲೂಕಿನ ಗ್ರಾಮಗಳಲ್ಲಿ ಆಲಿಕಲ್ಲು ಮಳೆಯಿಂದ ಫಸಲುನಾಶ

22.1.2002ರ ವಿಧನ ಪರಿಷತ್ತಿನ ಅಧಿವೇಶನದಲ್ಲಿ[6] **ಶ್ರೀ ಬಿ.ಜಿ.ಪಾಟೀಲ್** ಅವರು ಮಾತನಾಡಿ, ಇಂಡಿ ತಾಲೂಕಿನಲ್ಲಿ ಆಲಿಕಲ್ಲು ಮಳೆಯಿಂದ 1120 ಎಕರೆ

6. ವಿಧಾನಪರಿಷತ್ತಿನ ನಡವಳಿಕೆಗಳು, ಸಂಪುಟ 308 (1–4), (22.1.2002) ಪು. 278–79

ಜಮೀನಿನಲ್ಲಿ ರೈತರ ಬೆಳೆಗಳು ನಾಶವಾಗಿರುವುದು, ದಾಳಿಂಬೆ, ದ್ರಾಕ್ಷಿ ಹಣ್ಣಿನ ಗಿಡಗಳು, ಹಿಂಗಾರು ಬೆಳೆಗಳಾದ ಜೋಳ, ಹತ್ತಿ ಮತ್ತು ಗೋಧಿ ನಾಶವಾಗಿರುವುದನ್ನು ಸಚಿವರು ಹಾಗೂ ತಾವು ನೋಡಿ ಬಂದಿರುವ ಬಗ್ಗೆ, ಜಿಲ್ಲಾಧಿಕಾರಿಗಳು ಮತ್ತು ತೋಟಗಾರಿಕಾ ಇಲಾಖಾ ಅಧಿಕಾರಿಗಳು ಸರ್ಕಾರಕ್ಕೆ ಈ ಬಗ್ಗೆ ವರದಿ ನೀಡಿದ್ದರೂ ಪರಿಹಾರ ಕಾರ್ಯವನ್ನೇ ಕೈಗೊಂಡಿಲ್ಲದಿರುವುದು ಕುರಿತು ಹೇಳಿದರು ಬಿಜಾಪುರದವರೆಗೆ ಪರಿಹಾರ ದೊರಕಿಲ್ಲ ಎಂದರು.

**ಶ್ರೀ ಎಚ್.ಕೆ.ಪಾಟೀಲರು,** ಆಲಿಕಲ್ಲು ಮಳೆಯಿಂದಾದ ಬೆಳೆನಾಶಕ್ಕೆ ಸರ್ಕಾರ ಪರಿಹಾರ ನೀಡುತ್ತದೆಯೇ ವಿನಾ, ಬೇರೆ ಸಂದರ್ಭಕ್ಕಲ್ಲ, ಎಂದರು. ಸದಸ್ಯರು ಹಾಲಿ ವಿಷಯ ಬಿಟ್ಟು ಬೇರೆ ವಿಷಯಗಳಿಗೆ ಹೋಗುತ್ತಿದ್ದಾರೆ ಎಂದರು.

**ಸಭಾಪತಿಯವರು,** ಪಾಟೀಲರ ಮಾತನ್ನು ಗಮನಿಸಿದರೆ ಗುಲ್ಬರ್ಗಾ ಜಿಲ್ಲೆಗೆ ತಕ್ಷಣ ನೀಡಿದ ಪರಿಹಾರದಂತೆ, ವಿಜಾಪುರಕ್ಕೆ ನೀಡದಿರುವುದರ ಬಗ್ಗೆ ಮಾನ್ಯ ಸದಸ್ಯರು ತೋರಿದ ಕಳಕಳಿಯಾಗಿದೆ. ಬೆಳೆಹಾನಿ ಮತ್ತು ಸರ್ಕಾರ ನೀಡಿರುವ ಪರಿಹಾರದ ಬಗ್ಗೆ ಬೆಳೆಹಾನಿ ಬಗ್ಗೆ ಮಾನ್ಯ ಸಭಾನಾಯಕರು, ತಮ್ಮಲ್ಲಿರುವ ಮಾಹಿತಿಯನ್ನು ನೀಡುತ್ತಾರೆ ಎಂದರು.

## ವಿಷಯ 5: ರಾಜ್ಯದಲ್ಲಿ ರೇಷ್ಮೆ ಕೃಷಿಯ ಅವನತಿ

15.7.2002ರ ವಿಧಾನ ಸಭಾ ಕಲಾಪಗಳಲ್ಲಿ[7] ಶ್ರೀ **ಎಸ್.ಪಿ. ಮುದ್ದಹನುಮೇಗೌಡರು** ರಾಜ್ಯದ ರೇಷ್ಮೆ ಕೃಷಿಯ ಸ್ಥಿತಿ ಕುರಿತು ಸಚಿವರ ಗಮನಸೆಳೆದಾಗ ರೇಷ್ಮೆ ಮತ್ತು ಜವಳಿ ಸಚಿವರಾದ ಶ್ರೀ **ಹೆಚ್.ಎಂ.ರೇವಣ್ಣನವರು** ಉತ್ತರಿಸುತ್ತ : ರಾಜ್ಯದ 1.16 ಲಕ್ಷ ಹೆಕ್ಟೇರ್‌ನಲ್ಲಿ ಹಿಪ್ಪುನೇರಳೆ ವ್ಯವಸಾಯವಿರುವುದು, 2.56 ಲಕ್ಷ ಕುಟುಂಬಗಳು ಮತ್ತು 12,000 ರೇಷ್ಮೆ ಡೀಲರ್‌ಗಳು ಈ ಉದ್ಯಮವನ್ನವಲಂಬಿಸಿರುವುದು, ರಾಷ್ಟ್ರದ 14500 ಮೆಟ್ರಿಕ್ ಟನ್ ಕಚ್ಚಾ ರೇಷ್ಮೆ ಉತ್ಪನ್ನದಲ್ಲಿ ರಾಜ್ಯದ ಕೊಡುಗೆ 8700 ಮೆಟ್ರಿಕ್ ಟನ್ ಇರುವುದು, ಹೆಚ್ಚು ಇಳುವರಿ ಹಾಗು ಗುಣಮಟ್ಟದ ರೇಷ್ಮೆ ಉತ್ಪಾದಿಸುವ ಹೊಸ ದ್ವಿತಳಿ ಅಭಿವೃದ್ಧಿ, ನೂತನ ತಾಂತ್ರಿಕ ಪ್ರಸರಣೆ ಮೂಲಕ ರೇಷ್ಮೆ ಬೆಳೆಗಾರರಿಗೆ ಗುಣಮಟ್ಟದ ಅರಿವು ಮೂಡಿಸುವುದು, ಚೈನಾದ ರೇಷ್ಮೆಯ ಆಮದು ಪ್ರಮಾಣ ಹೆಚ್ಚಿ, 2001–02 ನೇ ಸಾಲಿನಲ್ಲಿ ರೇಷ್ಮೆ ದರ 24 ಡಾಲರ್ ಇದ್ದುದು ಪ್ರಸಕ್ತ ವರ್ಷ 13–14 ಡಾಲರ್‌ಗೆ

7. ವಿಧಾನ ಸಭೆಯ ನಡವಳಿಕೆಗಳು, ಸಂಪುಟ 5 (1–2) ಭಾಗ I (15.7.2002) ಪು. 84–124

ಇಳಿದಿರುವುದು, ಓ.ಜಿ.ಎಲ್ ಆಧಾರದಲ್ಲಿ ರೇಷ್ಮೆ ಆಮದು, ರಫ್ತಾಗುವ ಪ್ರತಿ ಕೆ.ಜಿ.ರೇಷ್ಮೆ ಜವಳಿಗೆ 1750 ಗ್ರಾಂ. ರೇಷ್ಮೆ ಆಮದಿಗೆ ಇರುವ ಅವಕಾಶ, ಕೇಂದ್ರ ಸರ್ಕಾರ ಸುಂಕವನ್ನು ಶೇ. 35 ರಿಂದ 2002–03ನೇ ಸಾಲಿನಲ್ಲಿ ಶೇ. 30ಕ್ಕೆ ಇಳಿಸಿರುವುದು, ಡೂಟಿ ಎಕ್ಸೆಮ್ಷನ್, ಡೂಟಿ ರೆಮಿಷನ್, ಡೂಟಿ ಫ್ರೀ ರಿಪ್ಲೆನಿಷ್‌ಮೆಂಟ್ ಸರ್ಟಿಫಿಕೇಟ್, ಡ್ಯೂಟಿ ಎಂಡೋಮೆಂಟ್‌ಪಾಸ್ ಬುಕ್, ಎಕ್ಸ್‌ಪೋರ್ಟ್ ಎಕ್ಸ್‌ಪೋರ್ಟ್ ಓರಿಯಲ್ ಯೂನಿಟ್, ಎಕ್ಸ್‌ಪೋರ್ಟ್ ಪ್ರಾಸೆಸಿಂಗ್ ಝೋನ್, ಎಕ್ಸ್‌ಪೋರ್ಟ್ ಪ್ರಮೋಷನ್ ಕ್ಯಾಪಿಟಲ್ ಗೂಡ್ಸ್ ಸ್ಕೀಮುಗಳಡಿ ಸುಂಕರಹಿತ ರೇಷ್ಮೆ ಆಮದು ಹಾಗು ಗಡಿರಾಷ್ಟ್ರ ನೇಪಾಳ, ಬಾಂಗ್ಲಾ ಮೂಲಕ ರೇಷ್ಮೆ ನಮ್ಮಲ್ಲಿಗೆ ಕಳ್ಳ ಸಾಗಾಣಿಕೆ ಆಗುತ್ತಿರುವುದು; ಇದರಿಂದ ನಮ್ಮ ರೇಷ್ಮೆ ಬೆಳೆಗಾರರಿಗೆ ಒದಗಿರುವ ಸಂಕಷ್ಟ; ಆಮದು – ರಫ್ತು ನೀತಿಯಲ್ಲಿ ಸೂಕ್ತಕ್ರಮವಾಗಿ ಕೇಂದ್ರವು, ರಫ್ತು ಮಾಡುವ ಜವಳಿ ತಯಾರಿಕೆಗೆ ಬಳಸುವ ಪ್ರಮಾಣ ಮತ್ತು ಗುಣಮಟ್ಟದ ರೇಷ್ಮೆ ಆಮದಿಗೆ ಅವಕಾಶ ನೀಡುವುದು, ಆಮದು ಸುಂಕ ಹೆಚ್ಚಳ, ಕಳ್ಳಸಾಗಾಣಿಕೆ ಸ್ಥಗಿತ, ನೈಜ ರಫ್ತುಗಾರರಿಗೆ ಮಾತ್ರ ಆಮದು ಅವಕಾಶದ ಸೌಲಭ್ಯ, ಕರ್ನಾಟಕ ರೇಷ್ಮೆ ಮಾರಾಟ ಮಂಡಳಿಗೆ ರೇಷ್ಮೆ ಖರೀದಿಸಲು, ರೇಷ್ಮೆ ಉದ್ಯಮ ನಿಗಮಕ್ಕೆ ಗೂಡು ಖರೀದಿಸಲು ಕಡಿಮೆ ಬಡ್ಡಿದರದಲ್ಲಿ ಷೇರು ಬಂಡವಾಳದ ಒದಗಣೆ, ಸಾಂಪ್ರದಾಯಿಕ ಜಿಲ್ಲೆಗಳ ರೇಷ್ಮೆ ಬೆಳೆಗಾರರು ರಾಸ್ತಾ ರೋಕೋ, ಪತ್ರಿಕಾಪ್ರಕಟಣೆ ಮತ್ತು ವಿಚಾರ ಸಂಕಿರಣಗಳ ಮೂಲಕ ಚಳುವಳಿ ಆರಂಭಿಸಿರುವುದು, ತಜ್ಞರ ಸಮಿತಿಯು, ಚರಕರೇಷ್ಮೆಗೆ ಕೆ.ಜಿ.ಗೆ 860 ರೂ ಮತ್ತು 20:22 ಡೀನಿಯರ್ ಫಿಲೇಚರ್ ರೇಷ್ಮೆಗೆ ಸಾವಿರ ರೂ ನೀಡಲು ಶಿಫಾರಸು ಮಾಡಿರುವುದು ಕುರಿತೆಲ್ಲ ಹೇಳಿದರು.

ಶ್ರೀ ಎಸ್.ಪಿ.ಮುದ್ದಹನುಮೇಗೌಡರು, ರೇಷ್ಮೆ ಬೆಳೆಗಾರರ ಸಂಖ್ಯೆ ಹಾಗೂ ರೇಷ್ಮೆ ಉತ್ಪಾದನೆಯಲ್ಲಿ ಗಣನೀಯ ಇಳಿಮುಖ, ಚೈನಾದಿಂದ ಅಗತ್ಯಕ್ಕಿಂತ ಹೆಚ್ಚಾಗಿ ರೇಷ್ಮೆ ಆಮದು ಹಾಗು ಕಳ್ಳಸಾಗಾಣಿಕೆಯಿಂದ ನಮ್ಮ ಕೃಷಿಗೆ ಬಿದ್ದಿರುವ ದೊಡ್ಡ ಪೆಟ್ಟು; ಕೃಷಿ ಮತ್ತು ರೇಷ್ಮೆ ಉದ್ಯಮವನ್ನು ನಂಬಿಕೊಂಡಿರುವ 30 ಲಕ್ಷ ಕುಟುಂಬಗಳು; ಶೇ. 70 ರಷ್ಟು ರಾಷ್ಟ್ರದ, ಕರ್ನಾಟಕದ ಪಾಲು ರೇಷ್ಮೆ ಉತ್ಪಾದನೆಯಲ್ಲಿ ಇರುವುದು, ಚೈನಾದ ಕಚ್ಚಾ ರೇಷ್ಮೆಯನ್ನು ತರಿಸುವುದನ್ನು ಕಡ್ಡಾಯವಾಗಿ ನಿಲ್ಲಿಸುವುದು; ಅದಕ್ಕೆ ರಾಜ್ಯದಿಂದ ಕೇಂದ್ರದ ಮೇಲೆ ಬೀಳಬೇಕಾದ ಒತ್ತಡ. ರೇಷ್ಮೆ ಕೃಷಿಗಾರರಿಗೆ ಬೇರೆ ವ್ಯವಸಾಯ ಗೊತ್ತಿಲ್ಲದಿರುವುದು; ರೈತರಿಗೆ

ಮನೆಕಟ್ಟಲು ಸರ್ಕಾರದ ನೆರವು; ರೋಗ ರಹಿತ ರೇಷ್ಮೆ ಗೂಡು ಬೆಳೆಯುವಲ್ಲಿ ಹೆಚ್ಚಿಗೆ ಕಾನ್‌ಸೆಂಟ್ರೇಷನ್ ಬೇಕಾಗಿರುವಲ್ಲಿ ಮಹಿಳೆಯರನ್ನು ಆರಿಸಿ ಅವರಿಗೆ ಹೆಚ್ಚಿಗೆ ತರಬೇತಿಯನ್ನು ಸರ್ಕಾರದ ಮಟ್ಟದಲ್ಲಿ ನೀಡಬೇಕಾದುದು; ಬೆಳೆಯುವ ಹಾಗು ಮಾರುಕಟ್ಟೆಗೆ ಹಾಕುವ ರೇಷ್ಮೆ ಗೂಡು, ತಿಂಗಳಿಗೆ ಅದರಿಂದ ಬರುವ ಆದಾಯ ಇತ್ಯಾದಿ ಮಾಹಿತಿಯ ಕಾಂಪ್ರೆಹೆನ್ಸೀವ್ ಡಾಕ್ಯುಮೆಂಟ್ ಆದ ಪಾಸ್‌ಬುಕ್ ಅನ್ನು ಪ್ರತಿ ರೇಷ್ಮೆ ಬೆಳೆಗಾರರಿಗೆ ಕೊಡುವುದು, ಪಾಸ್‌ಬುಕ್ ಆಧಾರದ ಮೇಲೆ ಬ್ಯಾಂಕಿನಲ್ಲಿ ಸಾಲ ದೊರಕುವ ಸೌಲಭ್ಯದ ವ್ಯವಸ್ಥೆ ಮಾಡುವುದು ಕುರಿತೆಲ್ಲ ಹೇಳಿದರು. ಈ ಮಾತಿಗೆ ಪ್ರತಿಕ್ರಿಯಿಸುತ್ತ ಶ್ರೀ ಹೆಚ್.ಎಂ.ರೇವಣ್ಣನವರು, 50 ಪರ್ಸೆಂಟ್ ಸಹಾಯಧನದ ಅಡಿಯಲ್ಲಿ ರೇಷ್ಮೆ ಬೆಳೆಗಾರರಿಗೆ ಮಾಡಿಕೊಡುತ್ತಿರುವುದು; ಹಾಗೂ ಡ್ರಿಪ್ ಇರಿಗೇಷನ್ 90 ಪರ್ಸೆಂಟ್ ಸಹಾಯಧನದ ಅಡಿಯಲ್ಲಿ ಹನಿ ನೀರಾವರಿಗೆ ಸೌಲಭ್ಯ ಕೊಡುತ್ತಿರುವ ಬಗ್ಗೆ ಹೇಳಿದರು. ಶ್ರೀ **ಕೆ.ಶ್ರೀನಿವಾಸಗೌಡರು,** ಮಹಿಳೆಯರಿಗೆ 90 ಪರ್ಸೆಂಟ್ ಸಹಾಯಧನ ಕೊಡುವಂತೆ ಬಡತನದ ರೇಖೆಯಿಂದ ಕೆಳಗೆ ಇರುವವರಿಗೂ ಕೊಡಬೇಕು ಎಂದರು. ಅದಕ್ಕೆ ಶ್ರೀ ಹೆಚ್.ಎಂ.ರೇವಣ್ಣನವರು ಮಹಿಳೆಯರಿಗೆ ತರಬೇತಿ ಕಾರ್ಯಸೂಚಿ, ಪಾಸ್‌ಬುಕ್ ಕೊಡುವ ಹಾಗು ಸಾಲ ನೀಡುವ ವ್ಯವಸ್ಥೆ ಬಗ್ಗೆ ಇಲಾಖೆಯವರೊಡನೆ ಚರ್ಚಿಸಿ ಕ್ರಮಕೈಗೊಳ್ಳುವ ಬಗ್ಗೆ ತಿಳಿಸಿದರು. ಚೈನಾದಿಂದ ಬರುತ್ತಿರುವ ಕಚ್ಚಾ ರೇಷ್ಮೆಯಿಂದಾಗಿ ದೇಶೀಯ ಮಾರುಕಟ್ಟೆ ಹಾಗು ಕೃಷಿಯ ಮೇಲೆ ಬೀಳುತ್ತಿರುವ ದೊಡ್ಡಪೆಟ್ಟು ಕುರಿತಂತೆ ಹೇಳಿದ ಶ್ರೀ ಎಸ್.ಪಿ.ಮುದ್ದಹನುಮೇಗೌಡರಿಗೆ, ಕೇಂದ್ರವು ಆ ಬಗ್ಗೆ ತೆಗೆದುಕೊಳ್ಳಬೇಕಾದ ಕ್ರಮ, ಹಾಗು ರಾಜ್ಯದ ಎನ್‌ಫೋರ್ಸ್‌ಮೆಂಟ್ ಅಡಿಯಲ್ಲಿ ಅನಧಿಕೃತ ರೇಷ್ಮೆ ಸಾಗಾಣಿಕೆಯನ್ನು ತಡೆಯಬಹುದಾದಷ್ಟು ತಡೆಯುವ ಬಗ್ಗೆ ತಿಳಿಸಿದರು.

ಶ್ರೀ **ವೈ.ಕೆ.ರಾಮಯ್ಯ** ಅವರು : ಅಪಾಯದ ಅಂಚಿಗೆ ರೇಷ್ಮೆ ಉದ್ಯಮ ಹೋಗುತ್ತಿರುವುದು, ಬೆಲೆ ಕುಸಿತವಾಗುವ ಕೃಷಿ ಬೆಳೆಯುನ್ನು ರೈತ ಬೆಳೆಯಲಿಚ್ಛಿಸದಿರುವುದು; ಸ್ವಾತಂತ್ರ್ಯ ಬಂದ ಮೇಲೂ ಹೊರದೇಶಗಳಿಂದ ಬ್ರಿಟಿಷರಿಂದ ಬಂದ ಅನಿಷ್ಟ ಪದ್ಧತಿಯಾದ ರೇಷ್ಮೆ ಆಮದುವಿನಿಂದಾಗಿ ನಮ್ಮ ಉತ್ಪಾದನೆಗೆ ಕಾಸು ಸಿಗುವ ಅವಕಾಶವನ್ನು ಹಾಳು ಮಾಡಿಕೊಂಡಿರುವುದು; ಡಬ್ಲ್ಯುಟಿಓದ ಕಾರಣ ಅಂತರಾಷ್ಟ್ರೀಯ ಮಾರುಕಟ್ಟೆಯಿಂದ ಕಚ್ಚಾ ರೇಷ್ಮೆಯಆಮದನ್ನು ತಡೆಯಲಾಗದಿರುವುದು; ಹಾಗೂ ರೇಷ್ಮೆಯ ಕೊರತೆಯ ಕಾರಣ ಆಮದು ಎಂಬ ನೆಪ ಹೇಳಿರುವುದು; ದುಡ್ಡು ಕೊಟ್ಟರೆ ಕಚ್ಚಾ ರೇಷ್ಮೆ ಇಲ್ಲಿಯೇ ದೊರಕುವುದು;

ಗುಣಮಟ್ಟ ನಮ್ಮ ರೇಷ್ಮೆಯಲ್ಲಿಲ್ಲದಿದ್ದರೆ ರೈತರಿಗೆ ಇನ್‌ಸೆಂಟೀವ್ ಕೊಟ್ಟು ಕ್ವಾಲಿಟೇಟೀವ್ ಇಂಪ್ರೂವ್‌ಮೆಂಟ್ ಮಾಡಲು ಕೇಂದ್ರ ಹಾಗೂ ರಾಜ್ಯ ಸರ್ಕಾರ ಕಾರ್ಯಕ್ರಮ ಹಾಕಿಕೊಳ್ಳಬೇಕಾಗಿರುವುದು, ಉದ್ದಿಮೆ ಉಳಿಸಬೇಕಾಗಿರುವುದು; ಹೊರದೇಶದ ಕಚ್ಚಾರೇಷ್ಮೆಯ ಮೇಲೆ ಕೇಂದ್ರವು ಇಂಪೋರ್ಟ್ ಡ್ಯೂಟಿಯನ್ನು ಹಚ್ಚಿಸಲು ರಾಜ್ಯ ಒತ್ತಡ ಹಾಕಬೇಕಿರುವುದು, ಈ ಬಗ್ಗೆ ಪಾರ್ಲಿಮೆಂಟ್ ಮುಂದೆ ಸತ್ಯಾಗ್ರಹಕ್ಕೆ ಪಕ್ಷಭೇದ ಮರೆತು ಕೂರುವುದು; ನಮ್ಮ ಉತ್ಪತ್ತಿಯ ಗುಣಮಟ್ಟವನ್ನು ಹೆಚ್ಚಿಸಿಕೊಳ್ಳಬೇಕಾದ ಅನಿವಾರ್ಯತೆ, ಕರ್ನಾಟಕದ ರೇಷ್ಮೆ ಮೊಟ್ಟೆಯ ಗುಣಮಟ್ಟವು 1985–86ರಲ್ಲಿ ಶೇ. 36 ಇದ್ದುದು ಇಂದು ಶೇ. 18ಕ್ಕೆ ಇಳಿದಿರುವುದು; ರೇಷ್ಮೆ ಗೂಡಿನ ಗುಣಮಟ್ಟ ಹೆಚ್ಚಿಸುವುದು; ಮೊಟ್ಟೆಯ ಉತ್ಪತ್ತಿ ಮೊದಲಿಗೆ 80 ಇದ್ದುದು ಈಗ 15ಕ್ಕೆ ಇಳಿದಿರುವುದು; ಬರಿ ಇಂಪೋರ್ಟನಿಂದಷ್ಟೇ ಅಲ್ಲದೆ, ನಿರ್ಲಕ್ಷ್ಯದಿಂದಲೂ ರೇಷ್ಮೆ ಉದ್ಯಮ ನಾಶಗೊಳ್ಳುವ ಅಪಾಯವಿರುವುದು – ಈ ಕುರಿತೆಲ್ಲ ಮಾತನಾಡಿದರು.

ಶ್ರೀ **ಎನ್.ಎಚ್.ಶಿವಶಂಕರರೆಡ್ಡಿಯವರು,** ಚೈನಾದಿಂದ ಇಂಪೋರ್ಟ್ ಮಾಡಿಕೊಳ್ಳುತ್ತಿರುವ ರೇಷ್ಮೆಯಲ್ಲಿ ಎರಡು ಪರ್ಸೆಂಟ್ ಮಾತ್ರ ಇಂಪೋರ್ಟ್ ಡ್ಯೂಟಿಗೆ ಒಳಪಡುತ್ತಿರುವುದು; ಕಳೆದ ಮಾರ್ಚ್‌ಗೆ ಸುಮಾರು 6780 ಮೆಟ್ರಿಕ್‌ಟನ್ ಸಿಲ್ಕ್ ಇಂಪೋರ್ಟ್ ಆಗಿದ್ದು ಶೇಕಡ 2 ಪರ್ಸೆಂಟ್‌ಗೆ ಮಾತ್ರ ಇಂಪೋರ್ಟ್ ಡೂಟಿ ಹಾಕಿರುವುದು; ಕೇಂದ್ರದ ಕೆಲವು ಸ್ಕೀಂಗಳ ಮೂಲಕ ಅನ್ವಯಿಸಿರುವ ಪಾಲಿಸಿಯಿಂದಾಗಿ, ವಿತೌಟ್ ಡ್ಯೂಟಿ 98 ಪರ್ಸೆಂಟ್ ಬರುತ್ತಿರುವುದು; ಈ ಓ.ಜಿ.ಎಲ್.ಸ್ಕೀಂ ಅನ್ನು ನಿಲ್ಲಿಸಿದರೆ ಬಹುಶಃ ಇಂಪೋರ್ಟ್ ಡ್ಯೂಟಿ ತಪ್ಪಿಸಿಕೊಂಡು ಬರುವ ಚೈನಾ ಸಿಲ್ಕ್ ಕಡಿಮೆಯಾಗುವಿಕೆ; ಸಿಲ್ಕ ಎಕ್ಸ್‌ಪೋರ್ಟರ್ಸ್‌ಗೆ ಒಂದು ಕೆ.ಜಿ.ಸಿಲ್ಕ್ ಬಟ್ಟೆ ಎಕ್ಸ್‌ಪೋರ್ಟ್ ಮಾಡಿದರೆ 1.75 ಕೆ.ಜಿ. ಕಚ್ಚಾ ಸಿಲ್ಕ್ ಅನ್ನು ಆಮದು ಮಾಡಿಕೊಳ್ಳುವ ಅವಕಾಶವಲ್ಲದೆ ಯಾವುದೇ ಪ್ರಾಡಕ್ಟ್ ಕಳುಹಿಸಿದರೂ ಹೀಗೆಯೇ ಕಚ್ಚಾ ಸಿಲ್ಕ್ ಅನ್ನು ಇಂಪೋರ್ಟ್ ಮಾಡಿಕೊಳ್ಳುವ ಅವಕಾಶವಿರುವುದು ಈ ಬಗೆಗೆಲ್ಲ ಹೇಳಿದರು. ಡಬ್ಲ್ಯುಟಿ.ಓದಲ್ಲಿ ಆ್ಯಂಟಿ ಡಂಪಿಂಗ್ ಆಕ್ಟ್ ಇರುವಲ್ಲಿ ಮುನ್ನೂರು ಪರ್ಸೆಂಟ್ ಇಂಪೋರ್ಟ್ ಡ್ಯೂಟಿಯನ್ನು ಇಂಪೋಸ್. ಮಾಡುವುದಕ್ಕೆ ಅವಕಾಶವಿರುವಲ್ಲಿ ಕೇಂದ್ರ ಅದನ್ನು ಮಾಡಲು ಒತ್ತಾಯ ಹಾಕಬೇಕು; ಸರ್ಕಾರ ಮಾರ್ಕೆಟ್ ಇಂಟರ್‌ವೆನ್‌ಷನ್ ಮಾಡಿ ಸಿಲ್ಕ್ ಪರ್ಚೇಸ್ ಮಾಡಬೇಕು ಎಂದು ಒತ್ತಾಯಪೂರ್ವಕ ನುಡಿಗಳನ್ನಿಟ್ಟರು.

**ಶ್ರೀ ಸಿ.ಬೈರೇಗೌಡ** ಅವರು, ಕೋಲಾರ ಜಿಲ್ಲೆಯಲ್ಲಿ ರೇಷ್ಮೆ ಬೆಳೆಯಿಂದ ರೈತರಿಗೆ ಹಾಳಿ ಹಣ ಬರುತ್ತಿದೆ. ಬೆಳೆ ಬೆಲೆ ಕಡಿಮೆ ಆಗಿ ಅಪಾಯ ಒದಗಲು ಕೇಂದ್ರ ಸರ್ಕಾರ ಹಾಗು ನಮ್ಮ ದೇಶದಲ್ಲಿರುವ ಲಾಬಿಗಳೇ ಕಾರಣವಾಗಿವೆ. ಬನಾರಸ್ ಮತ್ತು ಬಾಂಬೆಯಲ್ಲಿರುವ ಲಾಬಿಗಳಿಗೆ ಒಳಗಾಗಿ ಹೊರಗಿನಿಂದ ಆಮದಿಗೆ ಶೇ. 60 ಇದ್ದ ಶುಲ್ಕವನ್ನು ಶೇಕಡ 32ಕ್ಕೆ ಇಳಿಸಿರುವುದಾಗಿದೆ. ಇದಕ್ಕೆ ನಡೆದಿರುವ ಒಳವ್ಯವಹಾರವೂ ಕಾರಣವಾಗಿದೆ. ಮೊದಲಿದ್ದ ತನಿಖಾದಳವನ್ನು ಸ್ಥಗಿತಗೊಳಿಸಲಾಗಿದೆ. ಕೆ.ಜಿ.ರೇಷ್ಮೆ ಗೂಡಿಗೆ 150 ರೂ ಇದ್ದದ್ದು 50–60 ರೂಗಳಿಗೆ ಇಳಿದಿದೆ. ಹೀಗಾದರೆ ರೈತರು ಹೇಗೆ ಬದುಕಬೇಕು? ನೂರಾರು ಎಕರೆ ಇರುವಂಥ ಹಿಪ್ಪು ನೇರಳೆಯನ್ನು ರೈತರು ಇವೊತ್ತು ಕಿತ್ತು ಹಾಕುತ್ತಿದ್ದಾರೆ. ವಿದ್ಯುತ್ ಅಭಾವವೂ ಇದೆ. ರೈತರ ತಲೆಯ ಮೇಲೆ ಬಂಡೆ ಎಳೆಯುವ ಕೆಲಸ ರಾಜ್ಯ ಸರ್ಕಾರ ಹಾಗೂ ಕೇಂದ್ರ ಸರ್ಕಾರದಿಂದ ಆಗುತ್ತಿದೆ. ಕೇಂದ್ರ ಸರ್ಕಾರಕ್ಕೆ ನಿಯೋಗ ಹೋಗುವುದಾದರೆ ನಾವೂ ಬರುತ್ತೇವೆ. ರೇಷ್ಮೆ ಬೆಳೆಗಾರರ ನೆರವಿಗೆ ರಾಜ್ಯ ಸರ್ಕಾರ ಬರಬೇಕಾದಂಥ ಅವಶ್ಯಕತೆ ತುಂಬಾ ಇದೆ. ನಮ್ಮ ರಾಜ್ಯದಲ್ಲಿಯೂ ಚೈನಾದೇಶದ ಗುಣಮಟ್ಟದ ರೇಷ್ಮೆ ಉತ್ಪಾದನೆ ಆಗುತ್ತಿದೆ, ಎಂದೆಲ್ಲ ಹೇಳಿದರು. (ನಂತರ ಧರಣಿಗಳೂ ಸದನದಲ್ಲಿ ನಡೆದುವು).

ವಿರೋಧಪಕ್ಷದ ನಾಯಕ ಶ್ರೀ **ಜಗದೀಶ ಶೆಟ್ಟರ್** ಅವರು, ಈವರಿಗೆ ಮಾನ್ಯ ಸದಸ್ಯರು ರೇಷ್ಮೆ ಕುರಿತು ಆಡಿದ ಮಾತುಗಳನ್ನೆಲ್ಲ ಸ್ಮರಿಸುತ್ತ: ಆಮದು ರೇಷ್ಮೆ ವಿಷಯದಲ್ಲಿ ಕೇಂದ್ರ ಹಾಗು ರಾಜ್ಯ ಸರ್ಕಾರದ ಜವಬ್ದಾರಿ ಇದೆ. ನಮ್ಮ ರೇಷ್ಮೆ ಬೆಳೆಗಾರರ ರೈತರ ಸಂಕಷ್ಟಗಳನ್ನು ನಿವಾರಿಸುವುದು ಆದ್ಯ ಕರ್ತವ್ಯವಾಗಿದೆ. ಆಮದು ಶುಲ್ಕವನ್ನು ಹೆಚ್ಚು ಮಾಡುವ ಪ್ರಯತ್ನದ ಬಗ್ಗೆ ಕೇಂದ್ರ ಸಚಿವರು ಬೆಂಗಳೂರಿಗೆ ಬಂದಾಗ ಭರವಸೆ ಕೊಟ್ಟು ಹೋಗಿದ್ದಾರೆ. ರಾಜ್ಯ ಸರ್ಕಾರ ತಕ್ಷಣವೇ ಮಾರ್ಕೆಟ್ ಇಂಟರ್‌ವೆನ್ಷನ್ ಮಾಡಿದರೆ, ಬೆಂಬಲ ಬೆಲೆ ದೊರೆತ ರೇಷ್ಮೆ ರೈತರ ಸಂಕಷ್ಟವು ಕಡಿಮೆಯಾಗುವ ಸಾಧ್ಯತೆ ಇದೆ. ಕಳ್ಳತನದಿಂದ ಚೈನಾ ಸಿಲ್ಕ್ ನಮ್ಮ ರಾಜ್ಯದಲ್ಲಿ ಎಂಟ್ರಿ ಆಗುತ್ತಿದೆ ಎಂದರೆ, ಅದನ್ನು ಪತ್ತೆ ಹಚ್ಚಿ ಕಟ್ಟು ನಿಟ್ಟಿನ ಕ್ರಮ ಕೈಗೊಂಡರೆ ಸಮಸ್ಯೆ ಉದ್ಭವಿಸದು. ಯಾವ್ಯಾವ ವರ್ಷದಲ್ಲಿ ಇದ್ದ ಕೇಂದ್ರ ಸರ್ಕಾರಗಳು ಹಾಗು ಆಮದು ಶುಲ್ಕದ ವರ್ಷಾವಾರು ವಿವರಗಳನ್ನು ಮಾನ್ಯ ಸದಸ್ಯರು (ಶ್ರೀ ವೈ.ಕೆ.ರಾಮಯ್ಯ) ಹೇಳಿದರೆ ಕೇಂದ್ರ ಸರ್ಕಾರಕ್ಕೆ ಹೋಗುವ ನಿಯೋಗದಲ್ಲಿ ಮಾತನಾಡಿ ರೇಷ್ಮೆ ಬೆಳೆಗಾರರ ಸಮಸ್ಯೆಗಳನ್ನು ಹೇಳಿ ಪರಿಹಾರ

ಹುಡುಕಲು ಸಾಧ್ಯವಾದೀತು. ಬೆಂಬಲ ಬೆಲೆಯನ್ನು ಎಂದಿ ಮಾಡುವುದು ಚಾಲೂ ಆಗಬೇಕು, ಎಂದು ನುಡಿದರು.

**ಶ್ರೀ ಎಸ್.ಪಿ.ಮುದ್ದ ಹನುಮೇಗೌಡರು,** ರೇಷ್ಮೆ ಬೆಳೆಗಾರರ ಸಂಕಷ್ಟಗಳ ಬಗ್ಗೆ ರೇಷ್ಮೆ ಅಗತ್ಯತೆಗಿಂತ ಹೆಚ್ಚು ರೇಷ್ಮೆಯನ್ನು ಚೈನಾವು ಕಳ್ಳಸಾಗಾಣಿಕೆ ಮೂಲಕ ನಮ್ಮ ರಾಷ್ಟ್ರಕ್ಕೆ ಹೇರುತ್ತಿರುವುದರಿಂದ ನಮ್ಮ ಬೆಳೆಗಾರರಿಗೆ ಪೆಟ್ಟು ಬೀಳುತ್ತಿದೆ. ಅದನ್ನು ನಿಲ್ಲಿಸಿ ಬೆಳೆಗಾರರಿಗೆ ಹೇಗೆಲ್ಲ ನೆರವಾಗಬೇಕೆಂಬುದರ ಬಗ್ಗೆ ಬೆಳಕು ಚೆಲ್ಲಿದರೆ ಸ್ವಾಗತಾರ್ಹ ಎಂದರು. ಈ ಮಧ್ಯೆ ಸಚಿವ ಶ್ರೀ ವಿ.ಮುನಿಯಪ್ಪ ಅವರು, ರೇಷ್ಮೆಯ ಬಗ್ಗೆ ಹೇಳಿದರೆ, ಅದು ರಿಸ್ಟ್ರಿಕ್ಟೆಡ್ ಐಟಂ (ನಿರ್ಬಂಧಿತ ವಸ್ತು) ಎಂದು ಹೇಳಿ ಡಬ್ಲ್ಯುಟಿಓ ಬಂದರೂ ಆ ವರ್ಗದಲ್ಲಿಯೇ ಉಳಿದಿತ್ತು. ಅದನ್ನು ಜಾರಿಗೆ ತಂದು ನಮ್ಮ ಎಕ್ಸೈಸ್ ಡ್ಯೂಟಿಯನ್ನು ಜಾಸ್ತಿ ಮಾಡಿರುವುದನ್ನು ತೆಗೆಯದೆ ಹೋಗಿ ರೇಷ್ಮೆ ಬೆಳೆ ಬೆಲೆ ಕುಸಿದಿದೆ. ಅದಕ್ಕಾಗಿ ನಾವೆಲ್ಲ ಒಟ್ಟಿಗೆ ಸೇರಿ ಹೋರಾಟ ಮಾಡಬೇಕಿದೆ, ಎಂದರು. ನಂತರ ಶ್ರೀ ಎಸ್.ಪಿ.ಮುದ್ದ ಹನುಮೇಗೌಡರು ಮಾತು ಮುಂದುವರಿಸಿ, ಇವೊತ್ತು ಮೂಲಭೂತವಾಗಿರುವ ಪ್ರಶ್ನೆ ಎಂದರೆ ಈ ಆಮದು ನೀತಿ ಮತ್ತು ರೇಷ್ಮೆ ಆಮದು ನೀತಿ ಬದಲಿಸಿ ಈ ಬಗ್ಗೆ ನಾವೆಲ್ಲ ಒಟ್ಟಾಗಿ ಕೇಂದ್ರದ ಮೇಲೆ ಒತ್ತಡ ಹೇರಿ, ಅದನ್ನು ನಿಲ್ಲಿಸಿ. ದೇಶೀಯ ಉದ್ದಿಮೆಯನ್ನು ಉಳಿಸುವಂಥ ಕೆಲಸ ಮಾಡಬೇಕು ಎಂದು ಹೇಳಿ ತಮ್ಮ ಮಾತನ್ನು ಮುಗಿಸಿದರು.

**ಶ್ರೀ ಪಿ.ಜಿ.ಆರ್.ಸಿಂಧ್ಯ** ಅವರು : ರೇಷ್ಮೆ ಉದ್ಯಮ ಅವನತಿ ದಾರಿ ಹಿಡಿದಿರುವುದರಿಂದ ರೇಷ್ಮೆ ಬೆಳೆಗಾರ, ನೂಲು ಬಿಚ್ಚಣಿಕಾರ ನೇಕಾರರು ಎಲ್ಲರೂ ಸಂಕಷ್ಟಕ್ಕೆ ಸಿಲುಕಿದ್ದಾರೆ. ಸದ್ಯ ಸುಮಾರು 500 ಕೋಟಿಗೂ ಹೆಚ್ಚು ಹಣವನ್ನು ವಿಶ್ವಬ್ಯಾಂಕ್ ಯೋಜನೆಯಲ್ಲಿ ನಾವು ತೆಗೆದುಕೊಂಡು ರೇಷ್ಮೆ ಬೆಳೆ ಉತ್ಪಾದನೆಯನ್ನು ಹೆಚ್ಚಿಸಿ, ಖರ್ಚು ಕಡಿಮೆ ಮಾಡುವ ಪ್ರಯತ್ನ ಮಾಡಿದೆ. ಹಾಗಾಗಿ ಮುಖ್ಯ ಮಂತ್ರಿಗಳ ನಾಯಕತ್ವದಲ್ಲಿ ಕೇಂದ್ರ ಸರ್ಕಾರಕ್ಕೆ ನಿಯೋಗ ಹೋಗುತ್ತಿರುವಲ್ಲಿ ಆಮದು ಶುಲ್ಕ ಹೆಚ್ಚು ಮಾಡಲು ಕ್ರಮತೆಗೆದುಕೊಳ್ಳಲು ಒತ್ತಾಯ ಮಾಡಬೇಕಾಗುತ್ತದೆ. ಕಳ್ಳತನದಲ್ಲಿ ನೇಪಾಳ, ಬಾಂಗ್ಲಾಮೂಲಕ ಬಂಗಾಳಕ್ಕೆ, ಆಂಧ್ರ, ಮಧ್ಯಪ್ರದೇಶ, ತಮಿಳುನಾಡಿಗೆ ಬರುವ ಚೈನಾ ರೇಷ್ಮೆಯನ್ನು ತಡೆಗಟ್ಟಲು ಅಕ್ರಮ ದಾಸ್ತಾನು ಮಾಡಿರುವ ರಾಜ್ಯಗಳ ಮೇಲೂ ಕೇಂದ್ರವು ಕ್ರಮ ಕೈಗೊಳ್ಳಲು ಒತ್ತಾಯ ಮಾಡಬೇಕಾಗುತ್ತದೆ. ಆಂಧ್ರದವರು ಚೈನಾದಿಂದ ಬರುವ ರೇಷ್ಮೆ ಹಾಗೂ ನಮ್ಮ ರಾಜ್ಯದಿಂದ ಹೋಗುವ ರೇಷ್ಮೆಯ ಮೇಲು ಕಣ್ಣಿಟ್ಟಿದ್ದಾರೆ. ಆದಾಗಿ ಆಂಧ್ರದೊಡನೆ

0-1002-17

ಸಮಾಲೋಚನೆ ಮಾಡಬೇಕು. ತಾತ್ಕಾಲಿಕವಾಗಿ ನಿಲುಗಡೆ ಆಗಿರುವ ಸಿರಿಕಲ್ಚರ್ ಲಾ ಎನ್‌ಫೋರ್ಸ್‌ಮೆಂಟ್ ಅನ್ನು ಸ್ಟ್ರಿಕ್ಟ್ ಆಗಿ ಮಾಡಬೇಕು. ಆಕ್ಟ್ ಅಮೆಂಡ್‌ಮೆಂಟ್ ಆಗಬೇಕು. ರೇಷ್ಮೆ ಬೆಳೆಗಾರರೂ ಅದನ್ನು ಹೇಳುತ್ತಾರೆ. ಎನ್‌ಫೋರ್ಸ್‌ಮೆಂಟ್ ಕಾನೂನನ್ನು ನಿಲ್ಲಿಸಿದ್ದುದನ್ನು ವಾಪಸ್ ತೆಗೆದುಕೊಂಡರೆ, ಒಳಿತು ಎಂದೆಲ್ಲ ನುಡಿದರು.

**ಶ್ರೀ ಚನ್ನಿಗಪ್ಪ** ಅವರು ಮಾತನಾಡುತ್ತ, ರೇಷ್ಮೆ ಬೆಳೆಗಾರರು ನಲವತ್ತು ಐವತ್ತು ಸಾವಿರ ಖರ್ಚು ಮಾಡಿದ್ದು, ಬೆಳೆ ರಕ್ಷಣೆಗಾಗಿ ಔಷಧಿ ಹೊಡೆಯಲು ಹಣವಿಲ್ಲದೆ ಬೆಳೆ ಕಿತ್ತುಹಾಕುವ ಮಟ್ಟಕ್ಕೆ ಹೋಗಿದ್ದಾನೆ. ಸರ್ಕಾರ ಮಧ್ಯ ಪ್ರವೇಶ ಮಾಡಿ ಬೆಂಬಲ ಬೆಲೆ ಕೊಟ್ಟು ಬೆಳೆ ಬೆಳೆಯಲು ಅನುಕೂಲ ಮಾಡಿಕೊಡಬೇಕು. ಪೆನುಗೊಂಡ, ಹಾಗು ಆಂಧ್ರದ ಬೇರೆ ಬೇರೆ ಭಾಗಗಳಿಂದ ರೇಷ್ಮೆ ಸೀರೆಗಳನ್ನು ಕದ್ದು ತಂದು ಟ್ಯಾಕ್ಸ್ ಇಲ್ಲದ ಹಾಗೆ ಚಿಕ್ಕಪೇಟೆಯಲ್ಲಿ ಮಾರಿ ನಮ್ಮ ರೇಷ್ಮೆ ಬಟ್ಟೆಗೆ ಬೆಲೆ ಇಲ್ಲದ ಹಾಗೆ ಮಾಡಿರುವ ಕಾರಣ, ರಾಜ್ಯದಲ್ಲಿ ಕೆ.ಜಿ.ಗೆ 65-70 ರೂ.ನಷ್ಟು ಬೆಲೆ ಕಡಿಮೆಯಾಗಿದೆ. ಇದನ್ನೆಲ್ಲ ಚೆಕ್‌ಮಾಡಿ, ಬರುವಂಥ ರೇಷ್ಮೆಯನ್ನು ರಿಸ್ಟ್ರಿಕ್ಟ್ ಮಾಡಿ ನಮ್ಮ ರಾಜ್ಯದ ರೈತರಿಗೆ ಟ್ಯಾಕ್ಸ್ ಅನುಕೂಲವನ್ನು ಮಾಡಿಕೊಡಬೇಕು. ರೇಷ್ಮೆ ಬೆಳೆಯುವಂಥವರಲ್ಲ ಎಸ್.ಸಿ; ಎಸ್.ಟಿ ಜನಾಂಗದವರಿದ್ದಾರೆ. ಅವರಿಗೆ ಪರಿಕರಗಳನ್ನು ಮೊದಲಿಂದ ಕೊಡುತ್ತಿದ್ದುದನ್ನು ಈಗ್ಯೆ 3 ವರ್ಷಗಳ ಹಿಂದೆ ನಿಲ್ಲಿಸಲಾಗಿದೆ. ಹಾಗಾಗಿ ಅವರು ಬೆಳೆಯುವಂಥ ರೇಷ್ಮೆಗೆ ಬೆಂಬಲ ಬೆಲೆ ಕೊಟ್ಟು ಪ್ರೋತ್ಸಾಹಿಸಬೇಕೆಂದು ಕೇಳಿಕೊಂಡು ಮಾತನ್ನು ಮುಗಿಸಿದರು.

**ಶ್ರೀ ವೈ.ಕೆ.ರಾಮಯ್ಯ** ಅವರು ಮಾತನಾಡುತ್ತ: ನಮ್ಮೆಲ್ಲರ ಆಸೆ ಗುರಿಯು ರಾಜ್ಯದ ರೇಷ್ಮೆ ಬೆಳೆಗಾರರಿಗೆ ನಾಲ್ಕು ಕಾಸ್ ಜಾಸ್ತಿ ಸಿಗಬೇಕು ಎಂಬುದಾಗಿದೆ. ರಾಷ್ಟ್ರದಲ್ಲಿ ರಾಜ್ಯದಲ್ಲಿ ಗೂಡಿನ ಬೆಲೆ ಕಡಿಮೆ ಆಗಲು, ಆಮದು ನೀತಿ, ಕಳ್ಳಸಾಗಾಣಿಕೆಯಿಂದ ಭಾರತಕ್ಕೆ ಹೊರ ರೇಷ್ಮೆ ಬರುತ್ತಿರುವುದರ ಕಾರಣ ಸರಿ. ಇವೆರಡೂ ಕೆಲಸ ಸಂಪೂರ್ಣವಾಗಿ ನೂರಕ್ಕೆ ನೂರರಷ್ಟು ಕೇಂದ್ರ ಸರ್ಕಾರದ ವ್ಯಾಪ್ತಿಗೆ ಬರುವಂಥ ಕರ್ತವ್ಯ. ಡಬ್ಲ್ಯುಟಿಓಗೆ ಮಾನ್ಯ ನರಸಿಂಹರಾವ್ ಅವರ ಕಾಲದಲ್ಲಿ ರುಜುಬಿತ್ತು. ಮೊದಲಬಾರಿಗೆ ಜಾರ್ಜ್ ಫರ್ನಾಂಡಿಸ್ ಅವರು 1997-98ರಲ್ಲಿ ಚೈನಾದಿಂದ ಸಿಲ್ಕ್ ತರಿಸಿಕೊಂಡು ಭಾರತದಿಂದ ಹೊಗೆಸೊಪ್ಪನ್ನು ಕಳುಹಿಸಬೇಕು ಎಂದು ಬಾರ್ಟರ್ ಸಿಸ್ಟಮ್ ಅನ್ನು ಇಂಟ್ರಡ್ಯೂಸ್ ಮಾಡುವ ಪ್ರಯತ್ನ ಮಾಡಿದರು. ಆದರೆ It was not so rigid. ಓ.ಜಿ.ಎಲ್‌ಯಲ್ಲಿ ಅದು

ಇರಲಿಲ್ಲ. ನೆಗಟಿವ್ ಲಿಸ್ಟ್‌ನಲ್ಲಿ ಇತ್ತು. ರೇಷ್ಮೆ ಕೂಡ ಅದರಲ್ಲಿ ಇತ್ತು. ಆ ಕಾರಣವೆ ಈ ದಿಸೆಯಲ್ಲಿ ಕಟ್ಟುನಿಟ್ಟಿನ ಕ್ರಮ ತೆಗೆದುಕೊಳ್ಳುವುದು ಕೇಂದ್ರ ಸರ್ಕಾರಕ್ಕೆ ಸೇರಿದ್ದು ಹೊರದೇಶದಿಂದ ರೇಷ್ಮೆಯನ್ನು ತರಿಸಿಕೊಳ್ಳುವುದಕ್ಕೆ ಕೊಡುವಂಥ ಪ್ರಬಲ ಪ್ರಮುಖ ಕಾರಣವೆಂದರೆ. to manufacture and export, quality, fabric. This is the pretext. ಸೆಂಟ್ರಲ್ ಸಿಲ್ಕಬೋರ್ಡ್ ಛೇರ್ಮನ್‌ರಾಗಿದ್ದ ಶ್ರೀ.ಬಿ.ಬಸವಯ್ಯ ಅವರು ಹೇಳಿದಂತೆ, ಹೊರದೇಶಕ್ಕೆ ಕಳುಹಿಸುವ ಬಟ್ಟೆಯನ್ನು ತಯಾರಿಸಲು ಇಂಪೋರ್ಟ್ ಮಾಡಿಕೊಳ್ಳುವಂಥ ಸಿಲ್ಕ್‌ನಲ್ಲಿ 98 ಭಾಗ ಕಳ್ಳಸಂತೆಯಲ್ಲಿ ಭಾರತದಲ್ಲಿ ಮಾರಾಟವಾಗುತ್ತದೆ. ಹೀಗಾಗಿ ನುಸುಳಿಬಂದ ಕಾಳಸಂತೆಯಲ್ಲಿ ರಾಜ್ಯದಲ್ಲಿ ಮಾರಾಟ ಮಾಡದಂತೆ ಖದೀಮರನ್ನು ಮೆಟ್ಟಿ ಹಾಕುವಂಥ ಜವಾಬ್ದಾರಿ ನಮ್ಮ ಸರ್ಕಾರದ್ದು; ಗಡಿಯಲ್ಲಿ ಬರುವಂಥ ಸಿಲ್ಕನ್ನು ತಡೆಯುವಂಥ ಪೂರ್ಣ ಹೊಣೆ ಕೇಂದ್ರದ್ದು. ಆಮದು ಶುಲ್ಕ ಹಾಕತಕ್ಕ ಸಮಸ್ಯೆ ಬಂದದ್ದು ಡಬ್ಲ್ಯುಟಿ.ಓ ಬಂದಾದ ಮೇಲೆಯೆ. ಅದೂ ಫೈನಲ್ ಅಗ್ರಿಮೆಂಟ್ ಆದ ಮೇಲೆಯೇ ಆಮದು ಶುಲ್ಕ ಹಾಕುವಂಥ ಪ್ರಶ್ನೆ ಬಂದದ್ದು. The maximum import duty that can be levied is 300%. They were levying 40% It has been reduced to 35%. ಇದಕ್ಕೆ ಕಾರಣ ಬೇಕಲ್ಲವೆ! ಏನೇ ಆಗಲಿ ಆಮದು ಶುಲ್ಕವನ್ನು ಹೆಚ್ಚಿಸಿ ಎಂದು ಪ್ರಾರ್ಥಿಸಿ ತಮ್ಮ ಮಾತುಗಳಿಗೆ ವಿರಾಮವಿತ್ತರು.

**ಡಾ.ಜಿ.ಪರಮೇಶ್ವರ್** ಅವರು, ನಿಯೋಗವು ದೆಹಲಿಗೆ ಹೋಗಿ ಪ್ರಧಾನ ಮಂತ್ರಿ ಮಾನ್ಯ ನರಸಿಂಹರಾಯರನ್ನು ಭೇಟಿ ಮಾಡಿದ ಮೇಲೆ, ಓ.ಜಿ.ಎಲ್‌ನಲ್ಲಿ ಅದನ್ನು ಸ್ಪೆಶಲ್ ಆಗಿ ಆವತ್ತೇ ಆ್ಯಂಟಿ ಡಂಪಿಂಗ್ ಆ್ಯಕ್ಟನ್ನು ರಿವೋಕ್ ಮಾಡಿದ್ದು, ಅದಕ್ಕಾಗಿ ಈ ಪ್ರೈಸ್ ಜಾಸ್ತಿಯಾಯಿತು, ಎಂಬ ಮಾತನ್ನು ಈ ಸಂದರ್ಭದಲ್ಲಿ ನೆನಪಿಗೆ ತಂದರು. **ಶ್ರೀ.ಸಿ.ಬೈರೇಗೌಡರು,** ಆಮದು ಶುಲ್ಕ ಮೊದಲು ಇರಲಿಲ್ಲ ಎಂಬ ಮಾತನ್ನು ಒಪ್ಪದೆ, ಯಾವಾಗ ಈ ಸರಕು ಬರಲು ಆರಂಭವಾಯಿತು ಆವತ್ತಿನಿಂದಲೇ ಆಮದು ಶುಲ್ಕವಿದೆ. ಶೇ. 60 ಇದ್ದದ್ದು ಈಗ ಶೇ. 30ಕ್ಕೆ ಇಳಿದಿರುವುದು ನಿಜ ಎಂದರು. **ಶ್ರೀ. ವಿ.ಮುನಿಯಪ್ಪನವರು** ಈ ಮಾತಿಗೆ ಪ್ರತಿಕ್ರಿಯಿಸಿ, ಆಗ ಆಮದು ಶುಲ್ಕವಿರದೆ **ಗೆಟ್‌ಬ್ಯಾಕ್‌ಸಿಸ್ಟಂ** ಇತ್ತು. 100% ಎಕ್ಸ್‌ಪೋರ್ಟ್ ಯೂನಿಟ್ಸ್ ಹೊಂದಿದ್ದವರು ಮಾತ್ರ ತರಿಸಿಕೊಳ್ಳಬೇಕಿತ್ತು. ಬದಲಾಗಿ ಅದನ್ನು ಕನ್‌ವರ್ಟ್ ಮಾಡಿ ಫ್ಯಾಬ್ರಿಕ್ ಮಾಡಿ ಕಳುಹಿಸುವ ವ್ಯವಸ್ಥೆ ಇತ್ತು. ರೇಷ್ಮೆಗೆ ಎಕ್ಸೈಸ್ ಡ್ಯೂಟಿ ಇರಲಿಲ್ಲ.

ಶ್ರೀ ವೈ.ಕೆ.ರಾಮಯ್ಯನವರು ಮಾತನ್ನು ಮುಂದುವರಿಸಿ, ಇಂಪೋರ್ಟ್ ಡ್ಯೂಟಿಯು ಹಿಂದೆ ಇರಲಿಲ್ಲ. ಕಾರಣ ಆ ಸರಕು Negative ಲಿಸ್ಟನಲ್ಲಿತ್ತು. ಅಂತು ಸ್ವಾತಂತ್ರ್ಯ ಬಂದ ದಿವಸದಿಂದಲೇ ಎಲ್ಲ ರಾಜ್ಯ ಸರ್ಕಾರಗಳು ಪಕ್ಷಾತೀತವಾಗಿ ಆಮದನ್ನು ವಿರೋಧ ಮಾಡಿದ್ದಾರೆ. ಮಾನ್ಯ ರಾಮಕೃಷ್ಣ ಹೆಗಡೆಯವರೂ ಆಮದಿನಿಂದ ಆಗುವಂಥ ಅನಿಷ್ಟಗಳನ್ನು ಕುರಿತು ಪತ್ರ ಬರೆದಿದ್ದಾರೆ. ಮತ್ತೆ ಆಮದು ಮಾಡಿಕೊಳ್ಳಬೇಕೆಂದು ಆಜ್ಞೆ ಕೊಟ್ಟಂಥ ಪತ್ರವೂ ಇದೆ. ರಾಷ್ಟ್ರದ ರೇಷ್ಮೆ ಉತ್ಪತ್ತಿಯಲ್ಲಿ 70 ರಿಂದ 75 ಭಾಗ ಕರ್ನಾಟಕದ್ದು, ಆದರೆ ಕೇಂದ್ರ ರೇಷ್ಮೆ ಮಂಡಳಿಯಿಂದ ಶೇ.70 ರಷ್ಟು ಹಣವು ನಮ್ಮ ರಾಜ್ಯಕ್ಕೆ ಒದಗಿದೆಯೇ? ಎರಡನೆಯದಾಗಿ ರೇಷ್ಮೆಗೂ ಬೆಂಬಲ ಬೆಲೆಯನ್ನು ಕೊಡುವಂಥ ವ್ಯವಸ್ಥೆ ಆಗಬೇಕು. ಒಂದು ಆವರ್ತನಿಧಿ (ರಿವಾಲ್ವಿಂಗ್ ಫಂಡ್) ಎಂದೋ ಕರೆದು ಕೇಂದ್ರ ಸರ್ಕಾರ 500–900 ಕೋಟಿ ರೂ, ರಾಜ್ಯ ಸರ್ಕಾರ 100 ಕೋಟಿ ರೂ ಕೊಟ್ಟು ಸ್ಥಾಪಿಸಲಿ. ರೇಷ್ಮೆಗೂಡಿನ ಬೆಲೆ ಕಡಿಮೆಯಾದಾಗ ಮಾರ್ಕೆಟ್ ಇಂಟರ್‌ವೆನ್‌ಷನ್ ಮಾಡಿ ಗೂಡು ಕೊಳ್ಳುವಂಥ ವ್ಯವಸ್ಥೆ ಆಗಲಿ, ಆಮದು ಶುಲ್ಕವು ಹೆಚ್ಚಾಗಲಿ. ಇಡೀ ಪ್ರಪಂಚದಲ್ಲಿ ಮೊಟ್ಟಮೊದಲಿಗೆ ಸಿಲ್ಕ್ ಫಿಲೇಚರನ್ನು ಎಷ್ಟಾಬ್ಲಿಷ್ ಮಾಡಿದವರು ಮೈಸೂರಿನ ಮಹಾರಾಜರು. ವ್ಯಾಪಾರಸ್ಥರು ರೈತರನ್ನು ಕೈಬಿಟ್ಟಾಗ ಅಂತಹ ಸಂದರ್ಭದಲ್ಲಿ ಗೂಡನ್ನು ಕೊಂಡು ರೈತರನ್ನು ರಕ್ಷಿಸಲಿ ಎಂದು ಮೈಸೂರು ಮಹಾರಾಜರ ಕಾಲದಿಂದ ಈ ವರೆಗೂ ರಾಜ್ಯ ಸರ್ಕಾರ ಗಾರ್ನ್‌ಮೆಂಟ್ ಸಿಲ್ಕ್ ಫಿಲೇಚರನ್ನು ನಿರ್ವಹಣೆ ಮಾಡಿಕೊಂಡು ಬಂದಿದೆ. ಈ ಹಿನ್ನೆಲೆಯಲ್ಲಿ ಮಾರ್ಕೆಟ್ ಇಂಟರ್‌ವೆನಷನ್, ಸಾಧ್ಯವಾದರೆ ಬ್ಯಾನಿಂಗ್ ದಿ ಇಂಪೋರ್ಟ್, ಸಪೋರ್ಟ ಪ್ರೈಸ್ ನೀಡಿಕೆ – ಇವು ಇರುವಂಥ ಮೂರು ಪರಿಹಾರಕ್ಕೆ ಯಾರಿಗೂ ವಿವಾದವಿಲ್ಲದ ಕಾರಣ ಒಟ್ಟಾಗಿ ಕೆಲಸ ಮಾಡಲು ತೀರ್ಮಾನ ಮಾಡಬೇಕೆಂದು ಪ್ರಾರ್ಥಿಸಿ ತಮ್ಮ ಮಾತನ್ನು ಮುಗಿಸಿದರು.

ಶ್ರೀ.ಬಿ.ಸೊಮಶೇಖರ್ ಅವರು, ಹೊರದೇಶದಿಂದ ರೇಷ್ಮೆಯನ್ನು ಆಮದು ಮಾಡಿಕೊಂಡದ್ದರಿಂದ ಸಂಪೂರ್ಣವಾಗಿ ಬೆಲೆ ವಿಫಲವೆನ್ನುವುದು ಸಮಂಜಸವಲ್ಲ. ಚೈನಾದಿಂದ ಆಮದು ಮಾಡಿಕೊಂಡಂಥ ರೇಷ್ಮೆ ಅಷ್ಟೇ ಪ್ರಮಾಣದಲ್ಲಿ ಬಟ್ಟೆ ತಯಾರು ಮಾಡಿ ರಫ್ತು ಮಾಡಬೇಕೆಂಬುದು ಕೇಂದ್ರದ ನೀತಿಯಾಗಿದೆ; ಹಾಗೆ ಆಮದು ಮಾಡಿಕೊಂಡ ರೇಷ್ಮೆಗೆ ಹೆಚ್ಚು ಕಸ್ಟಮ್ಸ್ ಡ್ಯೂಟಿ ಕೊಡಬೇಕೆಂದು ನಿಗದಿಯಾಗಿದೆ. ಆಮದು ಮಾಡಿಕೊಂಡ ರೇಷ್ಮೆ ಮತ್ತು ಸ್ವದೇಶ ರೇಷ್ಮೆಗೂ ಸರಿಸಮಾನ

ಬೆಲೆ ಎಂದು ನಿಗದಿಯಾಗಿತ್ತು. ಹೀಗಾದ ಮೇಲೂ ನೇಪಾಳ, ಕೊರಿಯಾದಿಂದ ರೇಷ್ಮೆ ಕಳ್ಳಸಾಗಾಣಿಕೆ-ಆಗಲು, ರೇಷ್ಮೆ ವಿನಿಮಯ ಕೇಂದ್ರದಲ್ಲಿದ್ದ ಎನ್‌ಫೋರ್ಸ್‌ಮೆಂಟ್ ಸೆಲ್ ಅದನ್ನೂ ತಡೆಗಟ್ಟುತ್ತಿತ್ತು. ಈ ಕಾಯ್ದೆ ತಿದ್ದುಪಡಿ ತರುವ ಸುದ್ದಿ ಬಂದಾಗ ಕದ್ದು ಮಾರಾಟ ಮಾಡುವುದು ಶುರುವಾಯಿತು. ಸದ್ಯ ಈ ತಿದ್ದುಪಡಿ ನಿಲ್ಲಿಸಿದ್ದು ನಮ್ಮೆಲ್ಲರ ಒತ್ತಾಯದ ಕಾರಣವಾಗಿದೆ. ಇಂಪೋರ್ಟ್‌ಡ್ಯೂಟಿ ಹೆಚ್ಚಿಸುವ ನಿರ್ಣಯ ಮಾಡಿ ಕೇಂದ್ರಕ್ಕೆ ಕಳುಹಿಸಿ, ಬೆಂಬಲ ಬೆಲೆ ನೀಡಬೇಕು ಸರ್ಕಾರ, ಎಂದು ಹೇಳಿ ಮಾತು ಮುಗಿಸಿದರು.

ಮಾನ್ಯ ಸಚಿವ ಶ್ರೀ **ಹೆಚ್.ಎಂ ರೇವಣ್ಣನವರು,** ಉತ್ತರ ನೀಡುತ್ತ ಕರ್ನಾಟಕದ ರೇಷ್ಮೆಯ ಹಿರಿಮೆಯನ್ನು ಉಳಿಸುವ ಚಿಂತನೆ ಎಲ್ಲ ಸದಸ್ಯರ ಇಚ್ಛೆ ಆಗಿದೆ. ಮಾರ್ಕೆಟ್ ಇಂಟರ್‌ವೆನ್‌ಷನ್ ಮಾಡಿ ಕೆ.ಎಸ್.ಐ.ಸಿ.ಯು ಈಗಾಗಲೇ 28 ಕೋಟಿ ದಾಸ್ತಾನು ಕೊಂಡಿದೆ. 2001-02 ರಲ್ಲಿ 222 ಟನ್ ಖರೀದಿಸಿದ್ದು ಈ ವರ್ಷ 312 ಟನ್‌ನಷ್ಟು ಖರೀದಿಸಲಾಗಿದೆ. ಕೇಂದ್ರ ಸರ್ಕಾರದ ಸಿ.ಎಸ್.ಪಿ. ಯಿಂದ 1.5 ಕೋಟಿ ರೂ, ಕರ್ನಾಟಕ ಸರ್ಕಾರದಲ್ಲಿ 1.5 ಕೋಟಿ ರೂಗಳಿಗೆ ಬೇಡಿಕೆ ಇಡಲಾಗಿದೆ. ಈಗ ಇರುವ 28 ಕೋಟಿ ರೂ.ಜೊತೆಗೆ ಮತ್ತು 5 ಕೋಟಿ ರೂ.ಗೆ ಮನವಿ ಇಡಲಾಗಿದೆ. ಬೆಳೆಗಾರರ ಹಿತಕ್ಕಾಗಿ ಸಿಲ್ಕ್ ಆಕ್ಟ್ ಅಮೆಂಡ್‌ಮೆಂಟ್ ಆಗಬೇಕೆಂದು ಹೇಳುತ್ತಿರುವಲ್ಲಿ ಪರಿಶೀಲಿಸಲಾಗುತ್ತಿದೆ; ಎನ್‌ಫೋರ್ಸ್‌ಮೆಂಟ್ ಬಗ್ಗೆಯೂ ಒತ್ತುಕೊಡಬೇಕೆನ್ನುವುದಿದೆ. ಚೈನಾ ರೇಷ್ಮೆಯು ನಮ್ಮ ರಾಜ್ಯಕ್ಕೆ ಬರದ ರೀತಿಯಲ್ಲಿ ಕಟ್ಟುನಿಟ್ಟಿನ ಕ್ರಮ ಕೈಗೊಂಡು ಸರ್ಕಾರಿ ಆಜ್ಞೆಯ ಮೂಲಕ ಜಾರಿಗೆ ತರಲಾಗಿದೆ. ಫಿಲೇಚರ್ ವಿಭಾಗವು ಸಂಕಷ್ಟದಲ್ಲಿದ್ದು ಕೆ.ಎಸ್.ಐ.ಸಿ ಅಧೀನದಲ್ಲಿರುವ ಕಾರಣ ಬಿ.ಐ.ಎಫ್.ಆರ್ ರವರು ಮುಚ್ಚಲು ಸೂಚನೆ ಕೊಟ್ಟಿದೆ. ರೇಷ್ಮೆ ಬೆಳೆಗಾರರಿಗೆ ಬಂದ ಸಂಕಷ್ಟವನ್ನು ಎದುರಿಸಬೇಕಾಗಿದೆ. 18ನೇ ತಾರೀಖಿನಂದು ಸರ್ವಪಕ್ಷದ ನಿಯೋಗವು ಕೇಂದ್ರಕ್ಕೆ ಹೋಗಿ ಆಮದು ಶುಲ್ಕ ಹೆಚ್ಚಿಸುವಂತೆ ಮನನಿಸಬೇಕಿದೆ. ಕೇಂದ್ರದ ರೇಷ್ಮೆ ಹಾಗು ಜವಳಿ ಸಚಿವರಾದ ಶ್ರೀ **ಬಸವನಗೌಡ ಪಾಟೀಲ್ ಯತ್ನಾಳ್** ಅವರೂ ರೈತರ ಹಿತರಕ್ಷಣೆಗಾಗಿ ಪ್ರಯತ್ನ ಮಾಡಿದ್ದಾರೆ. ಎಂದೆಲ್ಲ ಹೇಳಿದರು. ಶ್ರೀ **ಪಿ.ಜಿ.ಆರ್.ಸಿಂಧ್ಯಾ** ಅವರು ಮಾತನಾಡಿ ಫಿಲೇಚರ್ ವಿಭಾಗವು ಸಿಕ್ ಇಂಡಸ್ಟ್ರಿ ಎಂದು ಬಿ.ಐ.ಎಫ್.ಆರ್‌ಗೆ ರೆಫರ್ ಮಾಡುವ ಬದಲು ಸಿರಿಕಲ್ಚರ್ ಡಿಪಾರ್ಟ್‌ಮೆಂಟ್‌ಗೆ ತೆಗೆದುಕೊಂಡು ನಡೆಸಬೇಕೆಂದು ಆಯಿತು. ಕಾಲಾನುಕಾಲದಲ್ಲಿ ಅದು ಕೂಡ ನಷ್ಟದಲ್ಲಿಯೇ ಇತ್ತು. ಗೂಡಿನ ರೇಟ್ ಕಡಿಮೆಯಾಗತಕ್ಕಂಥ

ಸಂದರ್ಭದಲ್ಲಿ ಹೆಚ್ಚಾದಂಥ ಸಂದರ್ಭದಲ್ಲಿ ರೆಗ್ಯುಲೇಷನ್ ಹಾಗು ಪ್ರೊಟೆಕ್ಷನ್ ಕೂಡ ಸಿಗಬೇಕೆಂದು ಅದನ್ನು ಉಳಿಸಿಕೊಳ್ಳಲಾಗಿದೆ. ಐದು ಫಿಲೇಚರ್‌ಗಳೇನಿವೆ ಅವನ್ನು ಸರ್ಕಾರ ವಹಿಸಿಕೊಳ್ಳದಿದ್ದರೆ ಕರ್ನಾಟಕ ರಾಜ್ಯದಲ್ಲಿ ಸಿರಿಕಲ್ಚರ್ ಇಂಡಸ್ಟ್ರೀಸ್ ಕೊಲ್ಯಾಪ್ಸ್ ಆಗುತ್ತದೆ. ರೇಷ್ಮೆಗೆ ಡಿಮ್ಯಾಂಡ್ ಜಾಸ್ತಿಯಾಗುತ್ತದೆ. ಹೀಗಾಗಿ ಸಿರಿಕಲ್ಚರ್ ಮಿನಿಸ್ಟರ್‌ಗೆ ಸಹಾಯ ಮಾಡಬೇಕು. ಅಫಿಲೇಚರ್‌ಗಳನ್ನು ಡಿಪಾರ್ಟ್‌ಮೆಂಟ್‌ಗೆ ತೆಗೆದುಕೊಂಡು ರನ್ ಮಾಡಬೇಕೆಂದು ಒತ್ತಾಯಿಸಿದರು.

**ಶ್ರೀ ಸಿ.ಬೈರೇಗೌಡರು** ಮಾತನಾಡಿ ರಾಜ್ಯ ಸರ್ಕಾರದ ವಶದಲ್ಲಿರುವ ಕಾರ್ಖಾನೆಗಳು, ಫಿಲೇಚರ್‌ಗಳನ್ನು ರೈತರಲ್ಲಿಗೆ ಹೋಗಿ ಕೊಂಡುಕೊಂಡರೆ ಒಂದು ದಿವಸದಲ್ಲಿ ರೈತರಿಗೆ ಒಂದೆರಡು ರೂಪಾಯಿಗಳ ದರವಾದರೂ ಹೆಚ್ಚಿಗೆ ಸಿಕ್ಕರೂ ಅದೇ ದೊಡ್ಡ ಮೊತ್ತವಾಗುತ್ತದೆ. ಸರ್ಕಾರ ಈ ಕೆಲಸ ಮಾಡಿದರೆ ರೈತರಿಗೆ ಅನುಕೂಲ ಎಂದರು. ಶ್ರೀ **ಕೆ.ಎಚ್.ರಂಗನಾಥ್** ಅವರು ಸಿಲ್ಕ್ ಅಥವಾ ಕಾಟನ್ ಇಂಡಸ್ಟ್ರಿ ಇರಲಿ ರಾಷ್ಟ್ರಮಟ್ಟದಲ್ಲಿ ಹೆಚ್ಚು ಗಮನ ಹರಿಸಬೇಕು; ರಿವಾಲ್ವಿಂಗ್ ಫಂಡ್ ಇಡಬೇಕು. ರೇಷ್ಮೆ ಹಾಗು ಹತ್ತಿಯ ಒಟ್ಟು ಉತ್ಪನ್ನವೆಷ್ಟಿದೆ? ಹಣವೆಷ್ಟುಬೇಕು? ಎಂಬ ವಿವರಗಳೂ ಅಗತ್ಯವಿದೆ ಎಂದರು. ಸಿ.ಬೈರೇಗೌಡರು ಇರುವ 50 ಕೋಟಿ ರೂಗಳು ಆ್ಯಕ್ಟ್ ರೀತ್ಯಾ ಸಿರಿಕಲ್ಚರ್ ಇಂಡಸ್ಟ್ರೀಗೆ ಬಳಕೆಯಾಗಬೇಕೆಂದಿದ್ದರೂ ಜನರಲ್ ಪೂಲ್‌ಗೆ ಹೋಗುತ್ತಿದೆ. ಅದನ್ನು ಬಳಸಿಕೊಳ್ಳಬಹುದು ಎಂದು ಸಲಹೆ ಇತ್ತರು.

**ಶ್ರೀ ಎಚ್.ಎಂ.ರೇವಣ್ಣನವರು,** ಸೆಂಟ್ರಲ್ ಸಿಲ್ಕ್ ಬೋರ್ಡಿನಿಂದ ಯಾವುದೇ ಬೆಂಬಲ ಬೆಲೆ ಕೊಡಲು ಸಾಧ್ಯವಿಲ್ಲ, ಹಣನಿಗದಿ ಮಾಡಿಲ್ಲ ಆದರೆ ಸಾಫ್ಟ್ ಲೋನ್ ಕೊಡಲು ಸಹಾಯ ಮಾಡಬಹುದು ಎಂಬ ಪತ್ರ ಬಂದಿದೆ. ರಾಜ್ಯ ಸರ್ಕಾರ ಬೆಂಬಲ ಕೊಡುವ ಬಗ್ಗೆ, ಸಂಕಷ್ಟದಲ್ಲಿರುವ ರೈತ ಬೆಳೆಗಾರರ ಪರ ತೀರ್ಮಾನವನ್ನು ಮುಖ್ಯಮಂತ್ರಿಗಳ ಜೊತೆ ಮಾತನಾಡಿ ತೆಗೆದುಕೊಳ್ಳಲು ಎಲ್ಲ ಸೇರಿ ಪ್ರಯತ್ನ ಮಾಡೋಣವೆಂದರು.

**ಶ್ರೀ ಜಗದೀಶ್ ಶೆಟ್ಟರ್** ಅವರು, ನಿಯೋಗವು ದೆಹಲಿಗೆ ಹೋಗಿ ಬರುವವರೆಗೆ ರೈತನ ಗತಿ ಏನು! ಸತ್ತು ಹೋಗುತ್ತಾನೆ. ಅವನ ಬಗ್ಗೆ ಕಾಳಜಿಯಿಂದ ಸರ್ಕಾರ ಇಂಟರ್‌ವೀನ್ ಮಾಡಬೇಕು. ಈಗಾಗಲೇ ಮಾರ್ಕೆಟ್ ಇಂಟರ್‌ವೆನ್‌ಶನ್ ತಕ್ಷಣ ಮಾಡಿ ರೇಷ್ಮೆ ಬೆಳೆಗಾರರ ಸಹಾಯಕ್ಕೆ ಬರಬೇಕಾಗಿತ್ತು. ಎನ್‌ಫೋರ್ಸ್‌ಮೆಂಟ್

ಸೆಲ್ ಅನ್ನು ಮುಚ್ಚಿ ವರ್ಷವಾದರೂ ತೆರೆದಿಲ್ಲ. ಎಂದೆಲ್ಲ ಹೇಳಿ ಭಾಜಪ ಸದಸ್ಯರೊಡನೆ ಸಭಾತ್ಯಾಗ ಮಾಡಿದರು.

**ಶ್ರೀ ಪಿ.ಜಿ.ಆರ್.ಸಿಂಧ್ಯಾ** ಅವರು ಮಾತನಾಡಿ ಕರ್ನಾಟಕದ ರೇಷ್ಮೆ ಬೆಳೆಗಾರರು ಕೇಂದ್ರ ಸರ್ಕಾರ ಎನ್‌ಫೋರ್ಸ್‌ಮೆಂಟ್ ಆರ್ಡರ್ ಮಾಡಿದ್ದನ್ನು ಸಡಿಲ ಮಾಡಿದ್ದೀರಿ. ಅದಾಗಿರದಿದ್ದರೆ ಬೆಲೆ ಕಡಿಮೆ ಆಗುತ್ತಿರಲಿಲ್ಲ. ಬೇರೆ ಬೆಳೆಗಳಲ್ಲಿ ಮಾರ್ಕೆಟ್ ಇಂಟರ್‌ವೆನ್‌ಶನ್ ಮಾಡಿರುವ ಕಾರಣ ಕೇಂದ್ರ ಸರ್ಕಾರ ಆ ಹಣವನ್ನು ರಿ – ಇಂಬರ್ಸ್ ಮಾಡುತ್ತದೆ. ನೀವೇನು ಕೊಡುವಂಥದ್ದಲ್ಲ. ಟೆಂಪರರಿಯಾಗಿ ಅಡ್ವಾನ್ಸ್ ಮಾಡುತ್ತೀರಿ ಅಷ್ಟೆ. ಅದೇ ರೀತಿ ರೇಷ್ಮೆ ಬೆಳೆಗಾರರಿಗೆ ಯಾಕೆ ಕೊಡಬಾರದು? ಅಂದರೆ ರೇಷ್ಮೆ ಬೆಳೆಗಾರರ ಪರವಾಗಿ ಸರ್ಕಾರ ಇಲ್ಲವೆಂದು ಹೇಳುತ್ತಿದ್ದೇನೆ. ನೀವು ಅವರನ್ನು ರಕ್ಷಿಸಲು ವಿಫಲರಾಗಿದ್ದೀರಿ. ಇಂಟರ್‌ವೀನ್ ಮಾಡದೆ ಹೋಗಿರುವುದನ್ನು ಪ್ರತಿಭಟಿಸಿ ಹೊರ ಹೋಗುತ್ತಿದ್ದೇವೆ ಎಂದು ಹೇಳಿ ಜನತಾದಳ(ಯು) ಸದಸ್ಯರೊಡನೆ ಸಭಾತ್ಯಾಗ ಮಾಡಿದರು.

**ಶ್ರೀ ವೈ.ಕೆ.ರಾಮಯ್ಯ** ಅವರು ಮಾರ್ಕೆಟ್ ಇಂಟರ್‌ವೆನ್‌ಶನ್ ಮಾಡಬೇಕು, ಬೆಂಬಲ ಬೆಲೆ ಕೊಡಬೇಕು ಎಂದು ಮಾನ್ಯ ಸದಸ್ಯರ ವಾದವನ್ನು ಒಪ್ಪುತ್ತಲೇ, ಬೆಂಬಲ ಬೆಲೆ ಕೊಟ್ಟು ಕೊಳ್ಳುವುದಾಗಲಿ, ಹೊರದೇಶದಿಂದ ಸಲೀಸಾಗಿ ತರಿಸುವುದಾಗಲಿ ಎರಡೂ ಸಾಧ್ಯವಲ್ಲದ ಕೆಲಸ. ಕೇಂದ್ರ ಸರ್ಕಾರ ಸಂಪೂರ್ಣವಾಗಿ ಕಳ್ಳಸಾಗಾಣಿಕೆ ಮತ್ತು ಆಮದು ತಡೆಯುವಂಥ ಹೊಣೆ ಹೊರಲಿ. ಬೆಲೆ ಆಮೇಲೆ ಕಡಿಮೆಯಾದರೆ ರಾಜ್ಯ ಸರ್ಕಾರ ನಿಭಾಯಿಸುತ್ತದೆ ಎಂದು ನುಡಿದರು.

**ಶ್ರೀ.ಎ.ನಾಗರಾಜು** ಅವರು ವಿರೋಧ ಪಕ್ಷದವರು ಪ್ರತಿಭಟನೆ ಮಾಡಿ ಆಚೆ ಹೋಗಿರುವಲ್ಲಿ ಸರ್ವಪಕ್ಷಗಳ ನಿಯೋಗವನ್ನು ಏತಕ್ಕೆ ತೆಗೆದುಕೊಂಡು ಹೋಗಬೇಕು? ಎಂಬ ಮಾತಿಟ್ಟರು. **ಶ್ರೀ ಡಿ.ಬಿ.ಚಂದ್ರೇಗೌಡರು** (ಕಾನೂನು ಸಚಿವರು) ಮಾನ್ಯ ವಿರೋಧಪಕ್ಷದವರು ಬಂದ ಮೇಲೆ ರೂಲಿಂಗ್ ಕೊಡಲು ಅಧ್ಯಕ್ಷರಿಗೆ ತಿಳಿಸಿದರು. ಸಭಾಧ್ಯಕ್ಷರು ಅದಕ್ಕೆ ಒಪ್ಪಿದರು. ವಿರೋಧಪಕ್ಷದವರೂ ಆಗಮಿಸಿದ ಮೇಲೆ ರೂಲಿಂಗ್ ಕೊಟ್ಟರು.

ಈ ದಿನದ ಕಾರ್ಯಕಲಾಪಗಳಲ್ಲಿ ಸರ್ವಶ್ರೀ ಕೆ.ಶ್ರೀನಿವಾಸಗೌಡ, ಅರಗಜ್ಞಾನೇಂದ್ರ, ಅಪ್ಪಾಜಿ ಎಸ್.ನಾಡಗೌಡ, ಬಿ.ಎನ್.ಬಚ್ಚೇಗೌಡ, ಬಿ.ಆರ್.ನೀಲಕಂಠಪ್ಪ ಅವರುಗಳೂ ಪಾಲ್ಗೊಂಡಿದ್ದರು.

## ವಿಷಯ 6: ಹಾಸನ ಜಿಲ್ಲೆಯಲ್ಲಿ ಆಲೂಗಡ್ಡೆ ಬೆಳೆನಾಶ; ಬೆಳೆ ವಿಮೆಗೆ ಕಾಲಾವಕಾಶ ಕೋರಿಕೆ

31.7.2002ರ ವಿಧಾನ ಸಭಾಧಿವೇಶನದಲ್ಲಿ[8] **ಶ್ರೀ ಕೆ.ಎಚ್.ಹನುಮೇಗೌಡರು** ವಿಷಯವನ್ನು ಮಂಡಿಸುತ್ತ 60 ಸಾವಿರ ಎಕರೆಗೂ ಮೀರಿ ಬೆಳೆಸುತ್ತಿರುವ ಆಲೂಗಡ್ಡೆ ಮಳೆ ಇಲ್ಲದೆ ನಾಶವಾಗಿರುವುದು, ಎಕರೆ ಬೆಳೆಗೆ, ಗೊಬ್ಬರ ಬೀಜ ಸೇರಿ 10 ಸಾವಿರ ರೂ ಖರ್ಚು ಬರುವುದು, ಬೆಳೆ ವಿಮೆ ಗಡುವು ರೈತರ ಗಮನಕ್ಕೆ ಬರದೆ ಹೋದುದು. ತತ್ಫಲವಾಗಿ ಹಾಸನ ಜಿಲ್ಲೆ ಕೆಲವು ಬ್ಯಾಂಕ್ ಮುಂದೆ ಲಾಟಿಛಾರ್ಜ್ ಆಗಿರುವುದು, 1 1/2 ಸಾವಿರ ಜನರ ಬೆಳೆ ವಿಮೆಗೆ ಅರ್ಜಿ ಸಲ್ಲಿಕೆ, ಬೆಳೆ ವಿಮೆಗೆ ಕನಿಷ್ಟ ಒಂದು ತಿಂಗಳ ಅಥವಾ ಎರಡುವಾರ ಕಾಲದಷ್ಟು ಕಾಲಾವಕಾಶ, ಬೆಳೆನಾಶದ ಕಾರಣ ಒಡವೆಗಳನ್ನು ಅಡವಿಟ್ಟು ಸಾಲತಂದವರ ಗತಿ, ಬೆಳೆ ಚೆನ್ನಾಗಿ ಬಂದಾಗ ಲೆವಿ ವಿಧಿಸಿ ದಿನಸಿ ಕೊಂಡು ದೇಶಕ್ಕೆಲ್ಲ ಹಂಚುವಂತೆಯೇ, ರೈತರ ಸದ್ಯದ ಕಷ್ಟಕ್ಕೆ ಮುಂದಾಗಿ ಬಂದು ಬೆಳೆ ವಿಮೆಗೆ ಅವಕಾಶ ನೀಡಿ ಏನಾದರೂ ಮಾಡಿ ರೈತರನ್ನು ಉಳಿಸುವುದು, ಮುಖ್ಯ ಎಂದರು.

**ಶ್ರೀ ಪಿ.ಜಿ.ಆರ್.ಸಿಂಧ್ಯಾ** ಅವರೂ ಈ ಮಾತಿಗೆ ಬೆಂಬಲಿಸಿ ಹೇಳಿದಾಗ ಕಂದಾಯ ಸಚಿವ **ಶ್ರೀ ಹೆಚ್.ಸಿ.ಶ್ರೀಕಂಠಯ್ಯ** ಅವರು ಪ್ರತಿಕ್ರಿಯಿಸಿ ಎಲ್ಲರಿಗೂ ಇನ್‌ಶೂರೆನ್ಸ್ ಹಣಕಟ್ಟಲು ರಾತ್ರಿ 12ರ ವರೆಗೂ ಅವಕಾಶ ನೀಡಲು ಜಿಲ್ಲಾಧಿಕಾರಿಗಳಿಗೆ ಆದೇಶ ನೀಡಿರುವ ಬಗ್ಗೆ ಹೇಳಿದರು. ರೈತರ ಕಷ್ಟವನ್ನು ಕಡಿಮೆಗೊಳಿಸುವ ಬಗ್ಗೆಯೂ ಹೇಳಿದರು. **ಚನ್ನಗಿರಿ ಹಾಗು ಇತರ ತಾಲೂಕುಗಳನ್ನು ಬರಪೀಡಿತವೆಂದು ಘೋಷಿಸುವ** ಬಗ್ಗೆ **ಶ್ರೀ ಕರಿಯಣ್ಣ** ಅವರು ಸಚಿವರಲ್ಲಿ ವಿನಂತಿಸುತ್ತ, ಕಳೆದ ವರ್ಷ ಹಾಗು ಹಾಲಿ ವರ್ಷದಲ್ಲಿ ಮಳೆಬರದೆ ಭೀಕರ ಬರಗಾಲ ಬಂದಿರುವುದನ್ನು ವಿವರಿಸಿದರು. ದನಕರುಗಳಿಗೂ ಕುಡಿಯಲು ನೀರಿಲ್ಲದಿರುವ ಬಗ್ಗೆ, ಫಸಲುಗಳನ್ನು ಬಿತ್ತನೆ ಮಾಡಲಾಗದಿರುವಂಥ ಸ್ಥಿತಿಯನ್ನು ಮುಂದಿಟ್ಟರು. **ಶ್ರೀ ವಡ್ನಾಳ್ ರಾಜಣ್ಣನವರು** ಈ ಮಾತುಗಳಿಗೆ ಒತ್ತುಕೊಡುತ್ತ ಚನ್ನಗಿರಿಯಲ್ಲಿ ಕುಡಿಯುವ ನೀರಿನ ಅಭಾವ, ಒಣಗಿಹೋಗಿರುವ ಪೈರು, ದನಕರುಗಳಿಗಿಲ್ಲದ ಮೇವು ಕುರಿತು ಹೇಳಿ ಬರಪೀಡಿತ ಪ್ರದೇಶ ಎಂದು ಘೋಷಣೆ ಮಾಡಲು ವಿನಂತಿಸಿದರು.

---

8. ವಿಧಾನಸಭಾ ನಡವಳಿಕೆಗಳು, ಸಂಪುಟ 7 (1–5), (31–7–2002), ಪು.380.83

ಶ್ರೀ ಎಂ. ಮಲ್ಲಿಕಾರ್ಜುನ ನಾಗಪ್ಪ ಅವರು ಡಿ.ಸಿ.ಯವರ ಪ್ರಸ್ತಾವನೆ ಅನುಸರಿಸಿ ಬರಗಾಲ ಪೀಡಿತ ಪ್ರದೇಶಗಳೆಂದು ಘೋಷಿಸಿರುವ, ಘೋಷಿಸುವ ಬಗ್ಗೆ ಸಭಾಧ್ಯಕ್ಷರು ಕೇಳಿದಾಗ ತಿಳಿಸಿದರು.

ಇಂದಿನ ನಡವಳಿಕೆಗಳಲ್ಲಿ ಸರ್ವಶ್ರೀ ಡಿ.ಜಿ.ಶಾಂತನಗೌಡ, ಸಿ.ಭೈರೇಗೌಡ, ವಿ.ಮುನಿಯಪ್ಪ, ಬಿ.ಎನ್.ಬಚ್ಚೇಗೌಡ, ಎಂ.ಡಿ.ಲಕ್ಷ್ಮೀನಾರಾಯಣ, ಎಂ.ಚಂದ್ರಪ್ಪ ಅವರೂ ಪಾಲ್ಗೊಂಡಿದ್ದರು. ಸಚಿವ ಹೆಚ್.ಸಿ.ಶ್ರೀಕಂಠಯ್ಯ ಅವರು ಈ ಕುರಿತು ಅಂತಿಮ ತೀರ್ಮಾನವನ್ನು ಕ್ಯಾಬಿನೆಟ್ ಸಬ್ ಕಮಿಟಿಯಲ್ಲಿ ತೆಗೆದುಕೊಂಡು ವ್ಯವಸ್ಥೆ ಮಾಡುವ ಬಗ್ಗೆ ತಿಳಿಸಿದರು.

## ವಿಷಯ 7: ಕಳಪೆ ಸೂರ್ಯಕಾಂತಿ ಬೀಜದ ಪೂರೈಕೆ

11.7.2003 ರ ವಿಧಾನಸಭಾಧಿವೇಶನದಲ್ಲಿ[9] ಶ್ರೀ ಪಾಟೀಲ್ ಶಿವಾನಂದ ಸಿದ್ಧರಾಮಗೌಡ ಅವರು : ಕಳಪೆ ಸೂರ್ಯಕಾಂತಿ ಬೀಜವನ್ನು ಕಳೆದ ವರ್ಷ ಪೂರೈಸಿರುವುದು ಸರ್ಕಾರದ ಗಮನಕ್ಕೆ ಬಂದಿರುವ ಬಗ್ಗೆ, ಕುಷ್ಟಗಿ ತಾ. ತಳವಗೇರಾ ರೈತರಿಗೆ ಈ ತರಹ ಬೀಜ ಪೂರೈಸಿರುವುದು; ರೈತರು ಬೀಜ ಮಾರಾಟಗಾರರ ಹಾಗು ಅಧಿಕಾರಿಗಳ ವಿರುದ್ಧ ಧರಣಿ ನಡೆಸಿದ ವಿಷಯ, ಹಾಗೂ ಸರ್ಕಾರ ತೆಗೆದುಕೊಂಡಿರುವ ಕ್ರಮ; ಕಳಪೆ ಬೀಜ ಬಿತ್ತನೆ ಮಾಡಿ ಹಾನಿಗೊಂಡಿರುವ ರೈತರಿಗೆ ನೀಡಿದ ಪರಿಹಾರ, ಪೂರೈಕೆದಾರರ ವಿರುದ್ಧ ಕಟ್ಟು ನಿಟ್ಟಿನ ಜರುಗಣೆ; ಕುರಿತೆಲ್ಲ ಪ್ರಶ್ನಿಸಿದರು.

ಕೃಷಿ ಸಚಿವ ವಿ.ಎಸ್.ಕೌಜಲಗಿ ಅವರು ಉತ್ತರಿಸುತ್ತ 2002ರ ಮುಂಗಾರಿನಲ್ಲಿ ಕೊಪ್ಪಳ ಜಿಲ್ಲೆಯಲ್ಲಿ ಸೂರ್ಯಕಾಂತಿ ಬೆಳೆಗೆ ನಂಜಾಣು ರೋಗದ ತೀವ್ರತೆಯಾಗಿ ಬೆಳೆ ನಿಫಲವಾದುದು; ಗ್ರಾಮಸ್ಥರಿಂದ ಆ ಬಗ್ಗೆ ದೂರು ಬರಲು ಕೃಷಿ ಇಲಾಖಾ ಅಧಿಕಾರಿಗಳು ಹಾಗು ಕೃಷಿ ವಿಶ್ವವಿದ್ಯಾಲಯದ ಅಧಿಕಾರಿಗಳು, ತಜ್ಞರ ತಂಡದೊಂದಿಗೆ ತಾಲೂಕುಗಳಿಗೆ ಭೇಟಿ, ಖುಷ್ಕಿ ಪ್ರದೇಶದಲ್ಲಿ ಮುಂಗಾರಿನ ವೈಫಲ್ಯದ ಕಾರಣ, ತೇವಾಂಶದ ಕೊರತೆಯಾಗಿ ಇಳುವರಿ ಕಡಿಮೆಯಾಗಿರುವುದು; ಒಟ್ಟಾರೆ ಕಳಪೆ ಬೀಜದಿಂದ ಬೆಳೆ ಹಾನಿಯಾಗಿರಬಹುದಾದ ಸಂಗತಿ; ಬೀಜ ಸಂಸ್ಥೆಯ ಮೇಲೆ ಕಾಯಿದೆಗಳನ್ವಯ ಇಲಾಖೆಯವತಿಯಿಂದ ದಾವೆ ಹೂಡುವುದರ ಪರಿಶೀಲನೆ; ಹಾನಿಗೊಳಗಾದ ರೈತರು ನಷ್ಟ ಪರಿಹಾರ ಪಡೆಯಲು ಗ್ರಾಹಕರ ವೇದಿಕೆಗೆ ಹೋಗಲು ಅವಕಾಶವಿದ್ದು ಸೂಕ್ತ ಮಾರ್ಗದರ್ಶನದ ನೀಡಿಕೆ, ಬೀಜ ಮಾರಾಟಮಾಡಿದ ಶ್ರೀ ಓಂ ಶಕ್ತಿ ಫರ್ಟಿಲೈಸರ್ಸ್ ಹನುಮ ಸಾಗರ ಇವರ ಬೀಜಪರವಾನಗಿ ಪತ್ರವನ್ನು ಅಮಾನತ್ತಿನಲ್ಲಿ ಇಟ್ಟಿದ್ದುದು, ಕುರಿತೆಲ್ಲ ವಿವರಿಸಿದರು.

---

9. ವಿಧಾನ ಸಭೆಯ ನಡವಳಿಕೆಗಳು, ಸಂಪುಟ 5 (1–5), (11–7.2003) ಪು.178–79)

## ವಿಷಯ 8: ಬಿಜಾಪುರ ಜಿಲ್ಲೆಯಲ್ಲಿ ಮಳೆ ಅಭಾವ; ದ್ರಾಕ್ಷಿ, ಲಿಂಬೆ, ದಾಳಿಂಬೆ ಬೆಳೆಗೆ ಹಾನಿ

**ಶ್ರೀ ಬಿ.ಜಿ.ಪಾಟೀಲ್** ಅವರು 24.7.2003ರ ವಿಧಾನಪರಿಷತ್ತಿನ ಅಧಿವೇಶನದಲ್ಲಿ[10] ಮಾತನಾಡುತ್ತ, ರಾಜ್ಯದಲ್ಲಿ ಕಳೆದ ಮೂರುವರ್ಷಗಳಿಂದ ಬರಗಾಲ ಪರಿಸ್ಥಿತಿ ಇದ್ದು ವಿಶೇಷತಃ ಬಿಜಾಪುರ, ಬಾಗಲಕೋಟೆ ಜಿಲ್ಲೆಗಳು ಇದಕ್ಕೆ ಒಳಗಾಗಿವೆ. ಇವು ಏಷ್ಯಾ ಖಂಡದಲ್ಲಿಯೇ ಉತ್ಕೃಷ್ಟವಾದ ದ್ರಾಕ್ಷಿ, ದಾಳಿಂಬೆ, ನಿಂಬೆಹಣ್ಣಿನ, ಬೆಳೆಯುವಂಥ ಪ್ರದೇಶಗಳಾಗಿವೆ. ಒಂದು ಎಕರೆ ದ್ರಾಕ್ಷಿ ಬೆಳೆ ಬೆಳೆಯಲು ಕನಿಷ್ಠ 1 1/2 ಲಕ್ಷದಿಂದ ಮೂರು ಲಕ್ಷ ಹಣ ಬೇಕು. (2 ವರ್ಷಗಳಲ್ಲಿ ಫಲ ಕೊಡುವಂಥದ್ದು). ಒಂದು ಎಕರೆ ದಾಳಿಂಬೆ ಬೆಳೆಯಲು ಡ್ರಿಪ್ ಮತ್ತು ಮೇಂಟೆನೆನ್ಸ್ ಸಹಿತ 1 ಲಕ್ಷ ರೂ ಬೇಕು. ದಾಳಿಂಬೆ ಮೂರು ವರ್ಷಗಳ ಮೇಲೆ ನಿಂಬೆ ಅರು ವರ್ಷಗಳ ಮೇಲೆ ಫಲ ಕೊಡುತ್ತವೆ. ಇಲ್ಲಿ ನಿಂಬೆಹಣ್ಣು ಬಡರೈತನ ಕಲ್ಪವೃಕ್ಷ. ಭೀಮಾನದಿ ಬತ್ತಿಹೋಗಿ, ಅಂತರ್ಜಲವೆಲ್ಲ ಕುಸಿದು ಹೋಗಿ, ಭಾವಿಗಳೆಲ್ಲ ಒಣಗಿವೆ. ರೈತರು 1000 ಅಡಿ ಕೊರೆಸಿದ ಬೋರ್‌ವೆಲ್‌ನಲ್ಲಿಯೂ ನೀರು ಬರಲಿಲ್ಲ. ನಮ್ಮ ಭಾಗದ ವಾತಾವರಣ ತೋಟಗಾರಿಕೆ ಬೆಳೆಗಳಿಗೆ ಸೂಕ್ತವಿದ್ದು ಒಳ್ಳೆಯ ರುಚಿಕಟ್ಟಿನ ಹಣ್ಣು ದೊರೆಯುತ್ತದೆ. ನಮ್ಮಲ್ಲಿಯ ರೈತರು ಇಂದು ರಾಷ್ಟ್ರೀಕೃತ ಬ್ಯಾಂಕ್‌ನಲ್ಲಿ ಸಾಲ ಮಾಡಿರುವ ಪರಿಸ್ಥಿತಿಯಲ್ಲಿದ್ದಾರೆ. ಎಂದರು. ಈ ನಡುವೆ ಇಟಗಿಯ **ಶ್ರೀ ಬಸವರಾಜ ಪಾಟೀಲ್** ಅವರು ಮಧ್ಯೆ ಮಾತನಾಡಿ ಬಿಜಾಪುರದ ಟೆಂಪರೇಟ್ ಕ್ಲೈಮೇಟ್ ಚೆನ್ನಾಗಿದ್ದು ಹಣ್ಣು ರುಚಿಕರ. ಆದರೆ ಕೋಲ್ಡ್ ಕ್ಲೈಮೇಟ್‌ನಲ್ಲಿ ನಮ್ಮಲ್ಲಿಯಷ್ಟು ರುಚಿ ಟೆಂಪರೇಟ್ ಕ್ಲೈಮೇಟ್ ಹಣ್ಣಿನ ರುಚಿ ಇರುವುದಿಲ್ಲ ಎಂದರು. **ಶ್ರೀ ಬಿ.ಜಿ. ಪಾಟೀಲ್** ತಮ್ಮ ಮಾತನ್ನು ಮುಂದುವರಿಸಿ, ಸರ್ಕಾರ ನಮ್ಮಲ್ಲಿಯ ಹಣ್ಣನ್ನು (ದ್ರಾಕ್ಷಿ, ಲಿಂಬೆ, ಬಾರೆಹಣ್ಣು ಅಂದರೆ ಎಲಚಿಹಣ್ಣು) ಕಂಡಿಲ್ಲ. ರೈತರ ಪರವಾಗಿ ವಾದ ಮಾಡುವುದಿಲ್ಲ; ಸರ್ಕಾರಕ್ಕೆ ಅದು ಗೊತ್ತೂ ಇಲ್ಲ. 2003–04 ರ ಬಜೆಟ್‌ನಲ್ಲಿ ಬಿಜಾಪುರ ಜಿಲ್ಲೆಗೆ ಶೇ ನೂರರಷ್ಟು ಸಬ್ಸಿಡಿ ಕೊಡುತ್ತೇವೆಂದವರು ಆರು ತಿಂಗಳಾದರೂ ಒಂದು ಆದೇಶದ ಸುತ್ತೋಲೆ ಹೋಗಿಲ್ಲ. ರೈತರ ಬಗ್ಗೆ ಈ ರೀತಿ ಕಾಳಜಿ ತೋರಿದರೆ ಹೇಗೆ? ಎಂದು ಪ್ರಶ್ನಿಸಿದರು.

ಬಿಜಾಪುರ ಜಿಲ್ಲೆಯ 12 ಸಾವಿರ ಹೆಕ್ಟೇರ್ ದ್ರಾಕ್ಷಿ ಬೆಳೆಯಲ್ಲಿ 65% ನಷ್ಟು ಬೆಳೆ ಒಣಗಿ ಹೋಗಿದ್ದು ರೈತನಿಗೆ 15% ಆದಾಯವೂ ಕೂಡ ದಕ್ಕಿಲ್ಲ. 20 ಸಾವಿರ ಹೆಕ್ಟೇರಿನಲ್ಲಿರುವ ದಾಳಿಂಬೆ ಬೆಳೆಯಲ್ಲಿ 30% ಒಣಗಿ ಹೋಗಿದೆ. 17 1/2 ಸಾವಿರ

10. ವಿಧಾನ ಪರಿಷತ್ತಿನ ನಡವಳಿಕೆಗಳು, ಸಂಪುಟ 323 (1–2). (24.7.2003) ಪು. 398–403

ಹೆಕ್ಟೇರ್ ಲಿಂಬೆ ಬೆಳೆ ಇದೆ. ಇಂಡಿ ತಾಲೂಕಿನಲ್ಲಿ 60% ಲಿಂಬೆ ಹಣ್ಣಿನ ಉತ್ಪಾದನೆ ಇದೆ. ಆದರೆ ರೈತನ ಪರಿಸ್ಥಿತಿ ಎಂದರೆ ಆರು ವರ್ಷದ ಗಿಡ ಒಣಗಿ ಹೋದರೆ ಮತ್ತೆ ಗಿಡ ಬೆಳೆಯಲು 6 ವರ್ಷ ಕಾಯಬೇಕು. ರೈತರ ಬಗ್ಗೆ ಕಳಕಳಿ ಇದ್ದರೆ ಆ ಭಾಗದ ಜನರ ಪರಿಸ್ಥಿತಿ ಕಣ್ಣಾರೆ ಕಂಡು ಬರಬೇಕು. ಕೋ ಕೋ ಕೋಲಾ ತಂಪು ಪಾನೀಯದವರಿಗೆ ನೂರಾರು ಕೋಟಿ ಸಬ್ಸಿಡಿ ನೀಡಿ, ಅಬಕಾರಿಯಲ್ಲಿ ಬಡ್ಡಿ ಮನ್ನಾ ಮಾಡುವ ಸರ್ಕಾರಕ್ಕೆ ತುತ್ತು ಕೊಡುವ ರೈತನಿಗೆ ಬಡ್ಡಿ ಮನ್ನಾ ಮಾಡಿ, ನೆರವಿಗೆ ಬರುವ ಕರ್ತವ್ಯವಿದೆ; ಎಂದರು ಬೋರ್ ವಿಫಲತೆ ಕುರಿತು ಹೇಳಿದರು.

ಈ ಸಂದರ್ಭದಲ್ಲಿ **ಸಭಾಪತಿಯವರು** ಒಂದು ಎಕರೆಯಲ್ಲಿ ಇಷ್ಟು ಬೋರ್‌ವೆಲ್ ಹಾಕಿದರೆ ಮಾತ್ರ ನೀರು ಸಿಗುತ್ತದೆ ಎಂಬ ವೈಜ್ಞಾನಿಕ ಮಾಹಿತಿಯನ್ನು ಅನುಸರಿಸಬೇಕಲ್ಲದೆ ನಗರದ ಪ್ರತಿ ಸೈಟುಗಳಲ್ಲಿ ಬೋರ್‌ವೆಲ್ ಹಾಕಿಸುವಂಥ ಲೆಕ್ಕಾಚಾರವಾಗಬಾರದಲ್ಲವೆ? ಎಂಬ ಪ್ರಶ್ನೆ ಇಟ್ಟರು.

**ಶ್ರೀ ಕೆ.ವಿ.ಸುಬ್ಬಾರೆಡ್ಡಿ** ಅವರು, ಮಾಹಿತಿ ನೀಡುತ್ತಾ ಅರ್ಧ ಎಕರೆಯಲ್ಲಿ 6 ಬೋರ್‌ವೆಲ್, 10 ಗಂಟೆ ಜಮೀನು, 20 ಗುಂಟೆ ಜಮೀನು ಇರುವ ರೈತರು ಬೋರ್‌ವೆಲ್ ಹಾಕಿಸಿರುವ ಕಾರಣ ಜೀವನ ನಿರ್ವಹಣೆಗಾಗಿದೆ. ಅಂತಾಗಿ 900 ಅಡಿ ಆಳ ಕೊರೆದರೂ ನೀರು ಸಿಗದಂಥ ಪರಿಸ್ಥಿತಿ ಇದೆ ಎಂದರು. **ಶ್ರೀ ವಿ.ಆರ್.ಸುದರ್ಶನ್** ಅವರು 10 ಎಕರೆ ಜಮೀನಿನಲ್ಲಿ 19 ಬೋರ್‌ವೆಲ್ ಹಾಕಲು ಅವಕಾಶ ಕೊಡಬಾರದು ಎಂದರೆ, **ಶ್ರೀ ಬಿ.ಎಸ್.ಯಡಿಯೂರಪ್ಪ** ಅವರು ಬೋರ್‌ವೆಲ್ ಹಾಕುವ ಸ್ಪರ್ಧೆಯಿಂದ ಅಂತರ್ಜಲ ಮಟ್ಟ ಕುಸಿಯುತ್ತಿದೆ; ರೈತರೂ ಉದ್ಧಾರವಾಗುತ್ತಿಲ್ಲ. ಇದಕ್ಕೆ ನಿರ್ಬಂಧ ಹಾಕದಿದ್ದರೆ ಮತ್ತೊಂದು ರಾಜಾಸ್ಥಾನವಾದೀತು ಎಂಬ ಚಿಂತನೆಯೂ ಹೊರಬಿದ್ದಿದೆ ಎಂದರು. **ಶ್ರೀ ಬಿ.ಜಿ.ಪಾಟೀಲ್** ಅವರು ಮಾತು ಮುಂದುವರಿಸಿ, ಬೋರ್‌ವೆಲ್ ನೀರಿಲ್ಲದ ಕಾರಣ ಟ್ಯಾಂಕರುಗಳಿಂದ ನೀರು ಸಾಗಿಸಿ ದ್ರಾಕ್ಷಿ ಬೆಳೆಗೆ ನೀರುಣಿಸುತ್ತಿರುವುದು, ಬರಗಾಲದ ಛಾಯೆ ರೈತರುಗಳಿಗೆ ಮಾತ್ರ ಬಡಿದಿರುವುದು, ತಂಬ್ಸಪ್, ಕೋಕೋಕೋಲಾ, ಎಕ್ಸೈಸ್ ಕಂಟ್ರಾಕ್ಟರುಗಳಿಗೆ ಸಬ್ಸಿಡಿ ಕೊಡುವ ಸರ್ಕಾರ ರೈತರಿಗೆ ಸಹಾಯವೆಂದರೆ ಹಿಂದಾಗುವುದು ಎಂದೆಲ್ಲ ಅಭಿಪ್ರಾಯವಿಟ್ಟರು. ಕೆ.ಜಿ.ಗೆ 2800 ರೂ ಬೆಲೆಯ ಬೆಲ್ಟಾನ್ ಔಷಧಿ, ಕೆ.ಜಿ.ಗೆ 24 ಸಾವಿರ ರೂ ಬೆಲೆಯ ಜಿ.ಎ. ಎನ್ನುವ ಔಷಧಿ, ರುಚಿಕಟ್ಟಾದ ದ್ರಾಕ್ಷಿ ಬರಲು ಬೇಕಾದ ಎಸ್.ಒ.ಪಿ, ಇವನ್ನೆಲ್ಲ ಸಿಂಪರಣೆ

ಮಾಡಬೇಕಾಗುತ್ತದೆ. ಆದರೆ ಕೆ.ಜಿ.ಒಣದ್ರಾಕ್ಷಿಗೆ ಸಿಗುವ ಬೆಲೆ ಕೇವಲ 60 ರೂಪಾಯಿ. ಕೃಷ್ಣಾ ಮೇಲ್ದಂಡೆ ಯೋಜನೆಯಲ್ಲಿ ಬಾಗಲಕೋಟೆ ನಗರ, 2 1/2ಲಕ್ಷ ಎಕರೆ ಜಮೀನು, 160 ಹಳ್ಳಿಗಳು ಹೋದುವು. ಕೃಷ್ಣಾ ನದಿ ನೀರಿಗೆ ಭೀಮಾ ನದಿ ನೀರಿಗೆ (ಮಹಾರಾಷ್ಟ್ರ) ಅನ್ಯರಾಜ್ಯದವರು ಕಣ್ಣುಹಾಕಿದ್ದಾರೆ. ನಮ್ಮ ಭಾಗದಲ್ಲಿ ನೀರಾವರಿ ಅಭಿವೃದ್ಧಿ ಮಾಡುವ ಬಗ್ಗೆ ಗಮನ ಹರಿಸಿಲ್ಲ. ಸಿಂಡಿಕೇಟ್ ಬ್ಯಾಂಕಿನಿಂದ 1 1/2ಲಕ್ಷ ಸಾಲ ಮಾಡಿ 2 ಎಕರೆ ಜಮೀನಿನಲ್ಲಿ ಕೆಳಕೋಟೆ ಗ್ರಾಮದ ಮಾಯಪ್ಪ ದಂಡಿನ ಅವರು ಬೆಳೆದ ದ್ರಾಕ್ಷಿಗಿಡಗಳು ಒಣಗಿಹೋಗಿವೆ. ಅಂಥವರಿಗೆ ಸರ್ಕಾರ ನೆರವು ನೀಡಬೇಕು. ರೈತರು 8–10 ವರ್ಷ ಕಾಪಾಡಿ ಬೆಳೆಸಿದಂಥ ನಿಂಬೆ ಹಣ್ಣಿನ ಗಿಡಗಳು ಒಣಗಿ ನಿಂತಿವೆ. ರಾಷ್ಟ್ರೀಕೃತ ಬ್ಯಾಂಕು, ಗ್ರಾಮೀಣ ಬ್ಯಾಂಕಿನಲ್ಲಿ, ಸೊಸೈಟಿಗಳಿಂದ ಸಾಲಪಡೆದಿರುವ ರೈತರಿಗೆ, ಎಲ್ಲಸಾಲ ಮತ್ತು ಬಡ್ಡಿಯನ್ನು ಮನ್ನಾ ಮಾಡದಿದ್ದರೆ ಅವರಿಗೆ ಆತ್ಮಹತ್ಯೆಯೊಂದೇ ದಾರಿ ಆಗಿರುವಂತಿದೆ. ಇಲ್ಲವೆ ಅವರು ಜಮೀನು ಮಾರಿಕೊಳ್ಳಬೇಕಾಗುತ್ತದೆ. ಈ ರೈತರ ಹಿತರಕ್ಷಣೆ ಮಾಡಬೇಕೆಂದಿದ್ದರೆ ಅವರಿಗೆ ಪರಿಹಾರ ಮತ್ತು ಸಾಲಮನ್ನಾ ಮಾಡುವ ಹೇಳಿಕೆ ನೀಡಿ, ಸರ್ಕಾರ ನೆರವಾಗಲಿ, ಎಂದು ನುಡಿದರು. ಶ್ರೀ ವಿ.ಆರ್.ಸುದರ್ಶನ್ ಅವರು ಸರ್ಕಾರಕ್ಕೆ ನಿಜವಾದ ಕಾಳಜಿ ಇದ್ದರೆ ಬಿಜಾಪುರ, ಕೋಲಾರ ಜಿಲ್ಲೆಗಳನ್ನು ತೋಟಗಾರಿಕಾ ಬೆಳೆಗಳ ಜಿಲ್ಲೆ ಎಂದು ಘೋಷಿಸಿ ಬೇಕಾದ ಕಾರ್ಯಕ್ರಮಗಳನ್ನು ಕೈಗೊಳ್ಳಬೇಕು ಎಂದರು. ಶ್ರೀ ಹೆಚ್.ಕೆ.ಪಾಟೀಲರೂ ಈ ಸಂದರ್ಭದಲ್ಲಿ ತಮ್ಮ ಅಭಿಪ್ರಾಯಗಳನ್ನು ಮಂಡಿಸಿದರು.

## ವಿಷಯ : 9 ಶಿರಹಟ್ಟಿ ತಾಲೂಕಿನಲ್ಲಿ ಅತಿವೃಷ್ಟಿ; ರೈತರಿಗೆ ಬೆಳೆನಷ್ಟ

28.6.2004ರ ವಿಧಾನ ಸಭಾಧಿವೇಶನದಲ್ಲಿ[11] ಶ್ರೀ ಜಿ.ಎಸ್.ಗಡ್ಡದೇವರಮಠ ಅವರು ತಮ್ಮ ಕ್ಷೇತ್ರದಲ್ಲಿ ಈಚೆಗೆ ಬಿದ್ದ ವಿಪರೀತ ಮಳೆಯ ಕಾರಣ ಸುಮಾರು 5–6 ಹಳ್ಳಿಯ ರೈತರು ಬೆಳೆದ ಭತ್ತ, ಬಾಳೆ ಪೂರ್ಣವಾಗಿ ಲುಕ್ಸಾನು ಗೊಂಡಿರುವುದು; ಕಂದಾಯ ಅಧಿಕಾರಿಗಳು ಇದನ್ನು ಸರ್ಕಾರದ ಗಮನಕ್ಕೆ ತಂದಿದ್ದರೂ, ಪರಿಹಾರ ನೀಡಿಕೆ ವಿಳಂಬವಾಗಿರುವುದು; ಕಳೆದ ಮೂರು ವರ್ಷದಿಂದ ಬರಗಾಲಕ್ಕೆ ಸಿಕ್ಕಿದ್ದ ರೈತಾಪಿ ಜನರು, ಮಳೆ ಬಿದ್ದಕಾರಣ ಸಾಲಸೋಲ ಮಾಡಿ ಹಣತಂದು ಬಿತ್ತನೆ ಮಾಡಿರತಕ್ಕಂಥ 3 ಸಾವಿರ ಎಕರೆ ಹೆಸರು ಬೆಳೆಗೆ ಹೊಸ ನಮೂನೆಯ ಕೀಟ ಬಂದು ಬೆಳೆ ಮೇಯ್ದಿರುವುದು; ರೈತರು ಯಾವ ರೀತಿಯ ಬೆಳೆವಿಮೆಯನ್ನು

11. ವಿಧಾನ ಸಭಾಧಿವೇಶನದ ನಡವಳಿಕೆಗಳು; ಸಂಪುಟ 5 (1–4), (28.6.2004) ಪು. 154–57

ಕೂಡ ಮಾಡಿಲ್ಲದಿರುವುದು; ಶೇಂಗಾ ಬೆಳೆಗೂ ಕೀಟ ಬಿದ್ದ ಪ್ರಸಂಗವಿದ್ದು ಅದಕ್ಕೂ ರೈತರು ಬೆಳೆವಿಮೆ ಮಾಡಿಲ್ಲದಿರುವುದು; 65ನೇ ದಿವಸಕ್ಕೆ ಕಟಾವಿಗೆ ಬರುವ ಹೆಸರು ಬೆಳೆಯನ್ನು ಬಿತ್ತನೆ ಮಾಡಿದ 15–20 ದಿವಸದೊಳಗೆ ಮೇಯ್ದು ಹೋಗಿರುವ ಪ್ರಸಂಗವಿರುವುದು; ವಿಪರೀತ ಮಳೆಯ ಕಾರಣ 500–600 ಎಕರೆ ಪ್ರದೇಶದಲ್ಲಿ ಬೆಳೆದಿರುವ ಭತ್ತದ ಬೆಳೆಯನ್ನು ಕಿತ್ತು ಹೊಕ್ಕುವುದಕ್ಕೂ ಆಗದಿರುವುದು; ಆಗಿರುವ 2–3 ಚೀಲ ಭತ್ತ ಕೂಡ ಕಪ್ಪು ಹಿಡಿದು ಮಾರಾಟಗೊಳ್ಳದಿರುವುದು; ಪರಿಹಾರದ ನಿರೀಕ್ಷೆಯಲ್ಲಿ ಇರುವ ರೈತರು, ಈ ಕುರಿತೆಲ್ಲ ಮಾತನಾಡಿ ರೈತರಿಗೆ ಸಹಾಯವಾಗುವ ಬಗ್ಗೆ ಸದನದಿಂದ ಸಂದೇಶ ಹೋಗಲಿ ಎಂದು ಆಶಿಸಿದರು.

ಕಂದಾಯ ಸಚಿವ ಶ್ರೀ **ಎಂ.ಪಿ.ಪ್ರಕಾಶ್** ಅವರು ಮಾತನಾಡುತ್ತ, ವಿಪರೀತಮಳೆಯಿಂದ ಹಾನಿಗೊಂಡ ರೈತರ ಬೆಳೆಯ ಅಂದಾಜು ಮಾಡಿ, ಪ್ರಕೃತಿ ವಿಕೋಪ ನಿಧಿಯಿಂದ ಪರಿಹಾರ ಕೊಡಲು ಸರ್ಕಾರದ ಆದೇಶ ಕೊಟ್ಟಿರುವ ಬಗ್ಗೆ; ಶಿರಹಟ್ಟಿ ಕ್ಷೇತ್ರದ ಭತ್ತದ ಬೆಳೆ ನಷ್ಟಕ್ಕೆ ಪರಿಹಾರಕ್ಕೆ ಕೊಡಲು ಜಿಲ್ಲಾಧಿಕಾರಿಗಳಿಗೆ ನೀಡಿರುವ ಸೂಚನೆ ಹಾಗೂ ಪ್ರಕೃತಿ ವಿಕೋಪ ನಿಧಿಯಿಂದ ಪರಿಹಾರ ಕೊಡಲು ಹಣದ ಅಭಾವವಿದ್ದರೆ ಪ್ರಸ್ತಾವ ಕಳುಹಿಸಿದರೆ ಅಷ್ಟು ಹಣವನ್ನು ಬಾಳೆ, ಭತ್ತ ಮೊದಲಾದವುಗಳಿಗೂ ಗದಗ್ ಜಿಲ್ಲೆಗೆ ಸಂಬಂಧಿಸಿದಂತೆ ಅದಕ್ಕೂ ಕೊಡುವ ಬಗ್ಗೆ ತಿಳಿಸಿದರು.

ಶ್ರೀ ಜಿ.ಎಸ್.ಗಡ್ಡದೇವರಮಠ ಅವರು ಮತ್ತೆ ಮಾತನಾಡಿ ಸುಮಾರು ಮೂರುವರ್ಷ ಕಾಲ ಬರಗಾಲ ಎದುರಿಸಿರುವ ನಮ್ಮಲ್ಲಿ ಸಣ್ಣ ರೈತರಿಗಿಂತ ದೊಡ್ಡ ರೈತರಿಗೆ ಕಷ್ಟ ಪರಿಸ್ಥಿತಿ ಒದಗಿದೆ. 40–50 ಎಕರೆ ಜಮೀನುದಾರರೂ ಗುದ್ದಲಿ ಹಿಡಿದು ಬದುವು ಹಾಕುವುದಕ್ಕೆ ಹೊರಡುವ ಪ್ರಸಂಗವಿದೆ. ಹೀಗಾಗಿ ಸಣ್ಣ ಮತ್ತು ದೊಡ್ಡ ರೈತರೆಂದು ಬೀಜ ಕೊಡುವಂಥ, ಪರಿಹಾರ ಕೊಡುವಂಥ ಸಂದರ್ಭದಲ್ಲಿ ಬೇರ್ಪಡಿಸದೆ, ಸರ್ಕಾರ ಅವರ ನೆರವಿಗೆ ಬರಬೇಕೆಂದು ಆಗ್ರಹಿಸಿದರು. ಶ್ರೀ ಎಂ.ಪಿ.ಪ್ರಕಾಶ್ ಅವರು ಈ ವಿಷಯವನ್ನು ಸಹಾನುಭೂತಿಯಿಂದ ಪರಿಶೀಲಿಸಿ ಕ್ರಮ ಕೈಗೊಳ್ಳುವ ಬಗ್ಗೆ ತಿಳಿಸಿದರು.

***ಮಂಥನ :*** *ಬೆಳೆ ಹಾನಿ ಪ್ರಕೃತಿ ವಿಕೋಪ ಅಥವಾ ನೈಸರ್ಗಿಕ ವಿಪತ್ತಿನಿಂದ ಅಂದರೆ ಅತಿವೃಷ್ಟಿ, ಅನಾವೃಷ್ಟಿ, ಹವಾಮಾನದ ವೈಪರೀತ್ಯ ಹಾಗು ಹುಳುವಿನ ರೋಗ, ಕೀಟ ಹಾವಳಿ, ಜಿಂಕೆ, ಆನೆಗಳಿಂದ ಒದಗಬಹುದು; ಬರಗಾಲವೂ ಇದಕ್ಕೆ ಒಂದು ಕಾರಣ, ಜೊತೆಗೆ ಒಣಗಿದ ಬೆಳೆ, ಬೋರ್ ಭಾವಿಗಳ ವೈಫಲ್ಯ,*

ಅಂತರ್ಜಲ ಕುಸಿತವೂ ಬೆಳೆಹಾನಿ ಕಾರಣೀಭೂತವಾಗುವುದುಂಟು. ಇದೆಲ್ಲ ರೈತರ ಆದಾಯಕ್ಕೆ ಬದುಕಿಗೆ ಅಪಾಯ ತರುವುದುಂಟು. ಹಾಗೂ ರೈತರ ಚಳುವಳಿಗೆ ಪ್ರೇರಕ ಪರಿಸರವನ್ನು ಬೆಳೆಸುವಂಥವಾಗುತ್ತವೆ.

ಉಭಯ ಸದನದ ಶಾಸಕರು ಮಾಡಿರುವ ಚರ್ಚೆಗಳಲ್ಲಿ; ಹೊಲದ ಒಣಗಿದ ಬೆಳೆಯ ಹೊರೆ ಹೊತ್ತು ಜಿಲ್ಲಾಧಿಕಾರಿಗಳ ಕಛೇರಿಗೆ ಮೆರವಣಿಗೆ ಹೋಗಿ ಧರಣಿ ಕುಳಿತ ರೈತರು, ಸಾಲ ಪಾವತಿಸಲಾಗದೆ ಮಾಡಿಕೊಂಡ ಆತ್ಮಹತ್ಯೆಯ ರೈತರು, ಕೆಲವೇ ಬೆಳೆಗಳಿಗೆ ಸರ್ಕಾರ ನೀಡಿದ ಪರಿಹಾರ, ಕೀಟ ಹತೋಟಿಗೆ ಅನುಸರಿಸಿದ ಕ್ರಮಗಳು, ಶೇಂಗಾ ಬೆಳೆಗೆ ತಗುಲಿರುವ ರೋಗ, ನೆರೆರಾಜ್ಯಗಳಲ್ಲಿ ರೋಗ ನಿಯಂತ್ರಣಕ್ಕೆ ಮಾಡಿರುವ ಉಪಾಯಗಳು ಹಾನಿಗೊಂಡ ಬೆಳೆಗಳು, ಬಿತ್ತನೆ ಬೀಜದ ಅಸಮರ್ಪಕ ಸರಬರಾಜು, ರೈತರಿಗೆ ಬೆಳೆರೋಗಗಳ ಬಗ್ಗೆ ವೈಜ್ಞಾನಿಕ ತಿಳುವಳಿಕೆ ಕೊಡುವುದು, ಔಷಧಿ ಸಿಂಪರಣೆ 'ಮಾಸ್‌ಸ್ಪ್ರೇ', ಅತಿವೃಷ್ಟಿಯಿಂದಾಗಿ ಜಾನುವಾರುಗಳ ಸಾವು-ನೋವು, ಕೆರೆ – ಕಟ್ಟೆಗಳು ಒಡೆದುಹೋಗಿರುವಿಕೆ, ಅಣೆವಾರಿ ಘೋಷಣೆ, ಕೃಷಿ ವಿಮಾಯೋಜನೆ, ಸಣ್ಣ ಮತ್ತು ಅತಿಸಣ್ಣ ರೈತರಿಗೆ ಕೊಡುವ ಕೃಷಿ ಸಾಲಗಳು, ಖುಷ್ಕಿ ಬೆಳೆಗಳಿಗೆ ಕ್ರಾಪ್ ಇನ್‌ಶೂರೆನ್ಸ್ ಕೊಡಲು ಕಂಪೆನಿಗಳ ಹಿಂದೇಟು, ರಿವಾಲ್ವಿಂಗ್ ಫಂಡ್ (ಆವರ್ತನಿಧಿ)ಗೆ ಕೊಡುವ ಅಸಮರ್ಪಕ ಅಥವಾ ಕೊರತೆಯ ಹಣ, ಅಲ್ಪಾವಧಿ ಸಾಲವನ್ನು ದೀರ್ಘಾವಧಿಗೆ ಪರಿವರ್ತನೆ, ಧೀರ್ಘಾವಧಿ ಸಾಲದ ಮೇಲಿನ ಬಡ್ಡಿ ಕಡಿತ, ಬೆಳೆಗೆ ತಗುಲುವ ರೋಗಗಳ ಬಗೆ ಹಾಗು ವಿವರ, ಹಿಂಗಾರು ಬೆಳೆಗಳ ನಾಶ, ರೇಷ್ಮೆ ಕೃಷಿಯ ಅವನತಿ, ವಿದೇಶ ಕಚ್ಚಾರೇಷ್ಮೆಯ ಕಳ್ಳಸಾಗಾಣಿಕೆ, ಆಮದು ಸುಂಕ ಹೆಚ್ಚಳ ಮಾಡಿದರೂ ಕಳ್ಳಸಾಗಾಣಿಕೆಯ ಶಕ್ತಿಗಳ ಲಾಬಿಯ ಸಮಸ್ಯೆ, ರೇಷ್ಮೆ ಮೊಟ್ಟೆಯ ಗುಣಮಟ್ಟ, ರೇಷ್ಮೆಗೆ ರಿಸ್ಟ್ರಿಕ್ಟ್ ಮಾಡಿ ರೈತರಿಗೆ ಅನುಕೂಲಿಸುವುದು, ಬೆಂಬಲ ಬೆಲೆಯನ್ನು ಕಾರ್ಯೋನ್ಮುಖವಾಗಿಸುವ ಭರವಸೆ, ಫಿಲೇಚರ್‌ಗಳ ಪುನರುಜ್ಜೀವನ, ಇಲಾಖೆಯ ಅಧಿಕಾರಿಗಳ ಮಾರುಕಟ್ಟೆ ಪ್ರವೇಶ, ಬೆಳೆ ವಿಮೆಗೆ ಕಾಲಾವಕಾಶ ವಿಸ್ತರಣೆ, ಹಣ್ಣುಗಳನ್ನು ಬೆಳೆಯುವಿಕೆ ಹಾಗು ರೈತರಿಗೆ ಪರ್ಯಾಯ ಬೇಸಾಯದ ತಿಳುವಳಿಕೆ ಕುರಿತೆಲ್ಲ ಶಾಸಕರು ಮಾತನಾಡಿದ್ದಾರೆ.

ಇದಲ್ಲದೆ 2006 ರಲ್ಲಿಯೂ ಮಳೆ ಕೊರತೆಯಾದ ತಾಲೂಕುಗಳು 118ಕ್ಕೆ ಏರಿವೆ. ಹಿಂಗಾರು ಕೈಕೊಟ್ಟು 17 ಜಿಲ್ಲೆಗಳಲ್ಲಿ ಬಿಸಿಲು ಎಗ್ಗುಸಿಗ್ಗಿಲ್ಲದೆ ಹೆಚ್ಚಿದೆ. ಮುಂಗಾರು ಸಹಕರಿಸಲಿಲ್ಲ. ಹಿಂಗಾರಿನದೂ ಅದೇ ಹಾದಿಯಾಗಿ ರೈತರಿಗೆ

ತಲ್ಲಣವಾಗಿದೆ. ಹಿಂಗಾರು ಸಮಯದಲ್ಲಿ ಶೇ. 25 ಭಾಗ ಬಿತ್ತನೆಗೊಂಡಿದೆ. ಮಳೆ ಆಶ್ರಿತ ಪ್ರದೇಶದಲ್ಲಿ ಆಹಾರಧಾನ್ಯ 5.28 ಲಕ್ಷ ಹೆಕ್ಟೇರ್ ಎಣ್ಣೆ ಕಾಳು 2.37 ಲಕ್ಷ ಹೆಕ್ಟೇರ್, ವಾಣಿಜ್ಯ ಬೆಳೆಗಳು 1.31 ಲಕ್ಷ ಹೆಕ್ಟೇರ್ ಬಿತ್ತನೆ ಆಗಿದ್ದು, ಮಳೆ ಅಭಾವದಿಂದ ಹಿಂಗಾರು ಹಂಗಾಮಿನಲ್ಲಿ ಆಹಾರಧಾನ್ಯದ ಬೆಳೆ ಪ್ರಮಾಣ ಕುಸಿತವಾಗಲಿದೆ. ಮಳೆ ಅಭಾವದಿಂದ ಜಲಾಶಯಗಳ ನೀರಿನ ಮಟ್ಟ ಕುಸಿದು ಬೆಳೆಗಳ ಮೇಲೆ ಪರಿಣಾಮ ಬೀರುತ್ತದೆ. ಹಿಂಗಾರು ಬಿತ್ತನೆಗೆ ರೈತರಿಗೆ ಶೇ. 75ರ ಸಬ್ಸಿಡಿ ದರದಲ್ಲಿ ಬೀಜ ಪೂರೈಸಿ, ರಸಗೊಬ್ಬರದ ಅಭಾವ ಸೃಷ್ಟಿಯಾಗದಂತೆ ಅಧಿಕಾರಿಗಳಿಗೆ ಸೂಚನೆ ಏನೋ ಇದೆ. ಆದರೆ ಕೃತಕ ಅಭಾವ ಸೃಷ್ಟಿಸುವವರ ಬಗ್ಗೆ ಎಚ್ಚರ ಬೇಕು. ನಿಗಾವಹಿಸಬೇಕಿದೆ. ಅಡಕೆ ಬೆಳೆಗೆ ಹಳದಿರೋಗ, ಬೇರು ರೋಗ ಮತ್ತು ಕೊಳೆರೋಗಗಳಲ್ಲದೆ, ದರಕುಸಿತವೂ ಆಗಿದೆ. ಹಳದಿ ರೋಗವನ್ನು ಶೃಂಗೇರಿ–ಕೊಪ್ಪಭಾಗದಲ್ಲಿ ತೊಂಡೆರೋಗವೆನ್ನುವುದುಂಟು.

ಸ್ಟೈರೋಪ್ಲಾಸ್ಮಾ ತರುವುದೆನ್ನಲಾದ ಮಾರಕ ಹಳದಿರೋಗ ಅಡಕೆ ಮರವನ್ನೆ ಒಣಗಿಸಿದರೆ, ಬೇರುರೋಗ ಬೇರನ್ನು ತಿಂದುಹಾಕಿ ಬಿಡುತ್ತದೆ. ಈ ರೋಗಗಳ ಹಾವಳಿಯಿಂದ 10 ಎಕರೆಯಲ್ಲಿ 100 ಕ್ವಿಂಟಾಲ್ ಅಡಕೆ ಬೆಳೆಯುವಲ್ಲಿ ಅದು 4–5 ಕ್ವಿಂಟಾಲ್‌ಗೆ ಇಳಿದಿದೆ. ವಾರ್ಷಿಕ ಆದಾಯ 25.30 ಸಾವಿರಕ್ಕಿಳಿದಿದೆ. ಅಡಕೆ ಬೆಳೆಗಾರರಲ್ಲಿ ಇದು ದೊಡ್ಡ ಆತಂಕ ಸೃಷ್ಟಿಸಿದೆ. ಸಕಾಲಕ್ಕೆ ಮಳೆ ಬರದೆ ಅರೇಬಿಕಾ ಕಾಫಿ ಗಿಡಗಳು ಬಿಳಿಕಾಂಡ ಕೊರಕ ರೋಗಕ್ಕೆ ಈಡಾದರೆ, ರೋಬಸ್ಟಾ ಕಾಫಿ ಗಿಡಗಳಿಗೆ ಶಾಟ್ ಹೋಲ್ ಬೋರರ್ ಮತ್ತು ಬೆರ್ರಿ ಬೋರರ್ ರೋಗ ಕೂಡ ಹರಡಿತು. ಅದಾಗಿ ಇಳುವರಿಯಲ್ಲಿ ತೀವ್ರ ಕುಸಿತವಾಯಿತು. ಬೆಳೆಗಾರ ಆತ್ಮಹತ್ಯೆಗಳೆಸಗಿದ. (15.11.2006 ವಿ.ಕೆ)

ಕೊಪ್ಪಳ ಜಿಲ್ಲೆ ದಾಳಿಂಬೆ ಬೆಳೆಯಲ್ಲಿ ಮೊದಲ ಸ್ಥಾನದಲ್ಲಿದ್ದು, ಆ ಬೆಳೆಗೆ ದುಂಡಾಣು ರೋಗ ತಗುಲಿದೆ. ಅದರಿಂದ ದಾಳಿಂಬೆ ರಫ್ತು ಗಣನೀಯವಾಗಿ ಕುಸಿಯುವ ಸಂಭವವಿದೆ. ಕುಷ್ಟಗಿ ತಾಲೂಕಿನಲ್ಲಿ ಈ ಬೆಳೆ ಶೇ. 60–70 ರಷ್ಟು, ರೋಗದಿಂದ ಹಾಳುಗೊಂಡಿದೆ. ರೋಗ ಬಂದ ಗಿಡಗಳನ್ನು ಕಿತ್ತುಹಾಕುತ್ತ ಬಂದರೂ, ಲಕ್ಷಾಂತರ ರೂ ಸಾಲಮಾಡಿ ಔಷಧಿ ಸಿಂಪರಣೆ ಮಾಡಿದ್ದರೂ ರೋಗ ನಿಯಂತ್ರಣಗೊಂಡಿಲ್ಲ. ಕಟಾವಿನವರೆಗೆ ಉತ್ತಮ ಹುಲುಸಿನಲ್ಲಿ ಬಂದ ದಾಳಿಂಬೆ ನಂತರ ರೋಗಕ್ಕೆ ತುತ್ತಾಗಿ ಸಂಪೂರ್ಣ ಹಾನಿಗೊಂಡಿದೆ. ರೈತರು ಜಿಲ್ಲಾಧಿಕಾರಿಯ ಮುಂದೆ ಗೋಳು ತೋಡಿಕೊಳ್ಳುತ್ತಿದ್ದಾರೆ. ಸರ್ಕಾರ ಈ ಜಿಲ್ಲೆಗೆ ತಜ್ಞರನ್ನು ಕಳುಹಿಸಿ

ಅಧ್ಯಯನದ ವರದಿ ಪಡೆದು ನಿವಾರಣಾ ಕ್ರಮವನ್ನು ಕೈಗೊಳ್ಳಬೇಕಿದೆ. ಇಲ್ಲವಾದರೆ ರೈತರಿಗೂ ನಷ್ಟ, ದಾಳಿಂಬೆ ರಫ್ತಿಗೂ ಕಷ್ಟ. ಈ ಸಂದರ್ಭದಲ್ಲಿ ಕುಷ್ಟಗಿ ತಾ. ಶಾಖಾಪುರ ಗ್ರಾಮದ ರೈತ ಬಡಿಗೇರ ಮಾನಪ್ಪ ಸಾಂಪ್ರದಾಯಿಕವಾಗಿ ಕೃಷಿಯಾಗಿ ಹುರುಳಿ, ಸಜ್ಜೆ ಬೆಳೆಯುತ್ತಿದ್ದವರು, ದಾಳಿಂಬೆ ಗಿಡ–ಕಾಯಿಕಡೆ ಗಮನಕೊಟ್ಟು, ಹಣ್ಣು ಎಲೆಗಳಲ್ಲಿ ಏನೇ ದೋಷಕಂಡುಬಂದರು ತಜ್ಞರ ಸೂಚನೆಯಂತೆ ಆರೈಕೆ ಮಾಡಿ ಬೆಳೆಸಿ ವಿದೇಶಗಳಿಗೆ ರಫ್ತು ಮಾಡುತ್ತಿರುವ ಬಗ್ಗೆ ತಿಳಿದು ಬಂದಿದೆ. (ವಿ.ಕ.30.8.06)

ಕೋಲಾರ ಜಿಲ್ಲೆಯಲ್ಲಿ ಆಲೂಗೆಡ್ಡೆ ಒಂದು ಆರ್ಥಿಕ ಬೆಳೆ. ಟೊಮೆಟೊ ಮುಂತಾದ ತರಕಾರಿ ಬೆಳೆಯಲ್ಲಿ ನಷ್ಟವಾದಾಗ ಆಲೂಗೆಡ್ಡೆಯ ಮಾರಾಟ ಅವರಿಗೆ ರಕ್ಷೆಯಾಗಿರುತ್ತಿತ್ತು. ಈ ಬಾರಿ ಅಲೂಗೆಡ್ಡೆಗೆ 'ಅಂಗಮಾರಿ' ಎಂಬ ರೋಗ ತಗುಲಿ ಬಿತ್ತನೆ ಗಡ್ಡೆ ಭೂಮಿಯಲ್ಲೆ ಸತ್ತು ರೈತರಿಗೆ ತೀವ್ರ ಬೆಳೆ ಹಾನಿ ಆಗಿದೆ. ಈ ರೋಗ ತಡೆಗೆ ಸೂಕ್ತ ಔಷಧಿ ಇಲ್ಲ ಎನ್ನಲಾಗಿದೆ. ಸರ್ಕಾರ ನೀಡಿದ ಔಷಧವು ಸಬ್ಸಿಡಿ ದರದಲ್ಲಿ ರೈತರಿಗೆ ಸೇರುವ ಬದಲು ಗೊಬ್ಬರದ ಅಂಗಡಿಗೆ ಸೇರಿದ ಬಗ್ಗೆ ಆರೋಪ ಕೇಳಿಬಂತು. ಪರಿಶೀಲಿಸಲಾಗಿ ಅಧಿಕಾರಿಗಳ ಅವ್ಯವಹಾರ ಬೆಳಕಿಗೆ ಬಂದು, ಅವರನ್ನು ಅಮಾನತುಗೊಳಿಸಲಾಯಿತು. ಎಕರೆ ಬೆಳೆಗೆ 35–40 ಸಾವಿರ ರೂ ಖರ್ಚು ಬರುವ ಈ ಬೆಳೆಯನ್ನು ಸೆಪ್ಟೆಂಬರ್‌ನಿಂದ ಡಿಸೆಂಬರ್ ಅವಧಿಯಲ್ಲಿ ಸುಮಾರು 25 ಸಾವಿರ ಎಕರೆ ಪ್ರದೇಶದಲ್ಲಿ ಬಿತ್ತನೆ ಮಾಡಲಾಗುತ್ತದೆ. ಕೊಳವೆ ಬಾವಿಯ ನೀರಿನಿಂದ ಈ ಬೆಳೆ ಬೆಳೆಯುವಲ್ಲಿ, ರಾತ್ರಿ ವಿದ್ಯುತ್ ಸರಬರಾಜು ಆಗುವಲ್ಲಿ ನಿದ್ದೆಗೆಟ್ಟು ರೈತರು ಈ ನೀರು ಪಡೆದು ಬೇಸಾಯ ಮಾಡುತ್ತಾರೆ. ಸರ್ಕಾರದ ಶೇ.4 ರ ಬಡ್ಡಿದರದ ಸಾಲದ ಯೋಜನೆ ಜಿಲ್ಲೆಯ ರೈತರಿಗೆ ದೊರೆತಿಲ್ಲವಾಗಿ ಖಾಸಗಿಯವರ ಬಳಿ ಹೆಚ್ಚಿನ ಬಡ್ಡಿ ಕೈ ಸಾಲ ತೆಗೆದುಕೊಂಡು ಆಲೂಗೆಡ್ಡೆ ಬೆಳೆಯಲು ಖರ್ಚುಮಾಡಿದ್ದಾರೆ ಹವಾಮಾನ ವೈಪರೀತ್ಯ ಎಂದು ಈ ಅಂಗಮಾರಿ ರೋಗದ ಹಾವಳಿಗೆ ತೋಟಗಾರಿಕೆ ಇಲಾಖೆ ಹೇಳಿಕೆ ನೀಡಿದೆ. ಆದರೆ ರೈತರ ಆರ್ಥಿಕ ಅಂಗಗಳಿಗೇ ಇದು ಹಾನಿಮಾಡಿದೆ. ಬೆಳೆ ವಿಮೆ ಪಟ್ಟಿಯಲ್ಲೂ ಈ ಬಾರಿ ಈ ಬೆಳೆಯನ್ನು ಸೇರಿಸಿಲ್ಲ. ರೈತರಿಗೆ ತಾಂತ್ರಿಕ ನೆರವನ್ನು ನೀಡಿಲ್ಲ ಎಂದು ರೈತ ಮುಖಂಡರು ಮಾಡುವ ಆರೋಪದ ಬಗ್ಗೆ ಶ್ರೀ ಬಿ.ಸುರೇಶ್ ಗಮನಸೆಳೆಯುತ್ತಾರೆ (ಕ.ಪ್ರ.2.1.07) ಅಂದರೆ ನೆರವು, ತಾಂತ್ರಿಕ ಸಲಹೆಗಳ ಕೊರತೆಯಾದಾಗ, ಪ್ರಯೋಗ ಕ್ಷೇತ್ರದ ಅನುಭವದ ರೂವಾರಿ ರೈತನಿಗೆ ಸಾಲದ ಭರದಿಂದ ಸಾವಿಗೆ ಶರಣಾಗುವ ವೇದಿಕೆ ನಿರ್ಮಾಣವಾಗುತ್ತ ಹೋದರೆ ಪ್ರಯೋಜನವೇನು?

ಸದ್ಯದ ಮೆಲ್ಲೂಚಿತ ಉದಾಹರಣೆ. ಇಂಥ ಅನೇಕ ಘಟನೆಗಳು ಒಂದು ಪ್ರತಿನಿಧಿ ಅಷ್ಟೆ. ಹೀಗಾಗಿ ಹಾನಿ, ಕಷ್ಟ ನಿಷ್ಠುರಗಳ ನಡುವೆಯೂ ಸರಕಾರ ಹಾಗು ತಜ್ಞರ ನೆರವು ಸಲಹೆಗಳಿದ್ದಾಗ ಮಾತ್ರ ಬೆಳೆಯುವಲ್ಲಿ ಹಾನಿಯ ಬದಲು ಲಾಭ ಪಡೆಯುವ ಹಾದಿಯಾಗುತ್ತದೆ. ವಿವಿಧ ಮೂಲಗಳಿಂದ ಗಮನಕ್ಕೆ ಬರುವ 2006-07ರ ಈ ಸಂಗತಿಗಳು ರೈತರ ಸಂಕಷ್ಟಗಳು ಹಾಗು ಪರಿಹಾರದ ಕ್ರಮಗಳನ್ನು ಸೂಚಿಸಿರುವುದು ಗಮನಾರ್ಹ. ಪತ್ರಿಕಾ ಮಾಧ್ಯಮಗಳಲ್ಲಿ ಕೃಷಿ ವಿಷಯದ ಈ ಬಗ್ಗೆಯ ವಾರ್ತೆಗಳು ಬೇರೆಡೆಯ ಬೆಳೆಗಾರರಿಗೆ ಒಂದು ನೀತಿ ಪಾಠವೂ ಆದೀತು; ಪ್ರಾದೇಶಿಕ ಸಂಗತಿಗಳನ್ನು ಅನುಸರಿಸಿ ಕೃಷಿಕಾರ್ಯಗಳನ್ನು ಅನ್ವಯಿಸಿಕೊಳ್ಳುವುದು ಅಗತ್ಯವೆನಿಸುತ್ತದೆ. ಈ ಬಾರಿಯ ಅತಿವೃಷ್ಟಿ ಹಾಗು ಭೀಕರ ಪ್ರವಾಹಗಳಿಂದಾಗಿ ಕೊಚ್ಚಿ ಹೋಗಿರುವ ಬೆಳೆಗಳು, ಕಬ್ಬಿನ ತೋಟಗಳು ಇಂಥ ಎಚ್ಚರಿಕೆಯನ್ನು ನೀಡಿವೆ ಎನ್ನಬೇಕು. ಸಹಕಾರದ ಅಗತ್ಯವನ್ನು ನೆರವಿನ ಅಗತ್ಯವನ್ನು ಅವು ತೋರಿವೆ. ಸಮಸ್ಯೆಗಳು ನಿರಂತರವಿರುವಂತೆ ಪರಿಹಾರವೂ ನಿರಂತರ ಒದಗಬೇಕು ಎಂಬುದು ಇಲ್ಲಿ ಗಮನಕ್ಕೆ ಬರುವ ಅಂಶವಾಗಿದೆ. ಕೆಲವೆಡೆ ಬೆಳೆ ನಷ್ಟದ ಸಂದರ್ಭದಲ್ಲಿ ಸರ್ಕಾರ ರೈತರಿಗೆ ಪರಿಹಾರದ ಬಗ್ಗೆ ವಿಮಾ ಕಂಪೆನಿಗೆ ವರದಿ ನೀಡಿದ್ದರೂ ವಿಮಾ ಕಂಪೆನಿ ವಿಮೆ ಹಣ ಬಿಡುಗಡೆಮಾಡದೆ ಮೋಸ ಮಾಡುವುದೂ ಬೆಳೆ ಹಾನಿಯ ಒಂದು ಸಮಸ್ಯೆಯಾಗಿದೆ.

# ಅಧ್ಯಾಯ-16

# ಬೆಳೆಯ ಬೆಲೆ ಕುಸಿತದ ಸಮಸ್ಯೆಗಳು

## ವಿಷಯ 1: ಕೃಷಿ ಉತ್ಪನ್ನಗಳ ಬೆಲೆ ಕುಸಿತ; ಬೆಂಬಲ ಬೆಲೆ ನಿಗದಿಯಾಗದೆ ರೈತರಿಗೆ ಸಮಸ್ಯೆ.

7.11.2000ದ ವಿಧಾನ ಪರಿಷತ್ತಿನ ಕಾರ್ಯಕಲಾಪಗಳಲ್ಲಿ[1] ಪಾಲ್ಗೊಂಡು ಶ್ರೀ **ಕೆ.ಎಚ್.ಶ್ರೀನಿವಾಸ್** ಅವರು; ತೊಗರಿ, ನೆಲಗಡಲೆ, ತೆಂಗಿನಕಾಯಿ, ಕಾಫಿ, ಅಡಿಕೆ, ಜೋಳ ಇತ್ಯಾದಿ ಎಲ್ಲ ಬೆಳೆಗಳ ಬೆಲೆ ಕುಸಿತ; ಅದನ್ನು ತಡೆಯಲು ರೈತರು ಮಾಡುತ್ತಿರುವ ಒತ್ತಾಯದ ಉಗ್ರರೂಪ; ಮಂತ್ರಿಮನೆ ಮುತ್ತಿಗೆ, ಗಾಳಿಯಲ್ಲಿ ಗುಂಡು, ಗಂಗಾವತಿಯಲ್ಲಿ ರೈತರ ಮೇಲೆ ಲಾಠಿ, ಗಾಳಿಯಲ್ಲಿ ಗುಂಡು ಇತ್ಯಾದಿಯಾಗಿ ಪರಿಸ್ಥಿತಿ ವಿಕೋಪ, ಬೆಳೆ ಸಂಬಂಧವಾಗಿ ರೈತನ ಸಹನೆ ಕುಗ್ಗುತ್ತಿರುವುದು, ಬೇರೆ ಬಾಬಿಗೆ ನಿಗದಿತವಾದ ನೂರಾರು ಕೋಟಿ ರೂಗಳನ್ನು ಕಡಿತಮಾಡಿ ರೈತರ ನೆರವಿಗೆ ಹೋಗಬೇಕಾದ್ದು, ಬೆಲೆ ಕಡಿತವಿರಲು ರೈತರ ನೆರವಿಗೆ ಹೋಗಬೇಕಾದ್ದು, ಕಾರಣ ನಿಲುವಳಿ ಸೂಚನೆ ಮಾಡಿ ಮುಂದಿನ ಕ್ರಮಕ್ಕೆ ಅಣಿಯಾಗಬೇಕು ಎಂದರು. ರೈತರು ಬೆಳೆದ ಬೆಳೆಗೆ ಬೆಲೆ ಕುಸಿತದ ಬಗ್ಗೆ ರೈತರು ಕಂಗಾಲಾಗಿರುವ ಕಾರಣ ಚರ್ಚೆ ಆಗಬೇಕೆಂದು ಎಂದೂ ಶ್ರೀ **ಬಿ.ಎಸ್.ಯಡಿಯೂರಪ್ಪನವರು** ಹೇಳಿದರು.

17.11.2000 ದಂದು ನಡೆದ ವಿಧಾನ ಪರಿಷತ್ತಿನ ಚರ್ಚೆಯಲ್ಲಿ[2] **ಡಿ.ಎಲ್.ಜಗದೀಶ್** ಅವರು ಮಾತನಾಡಿ : ಕೈಗಾರಿಕೆ ಕ್ಷೇತ್ರ ಹಾಗೂ ಬೇರೆ ವರ್ಗಕ್ಕೆ ಕೊಡುತ್ತಿರುವ ಆದ್ಯತೆ ರೈತವರ್ಗಕ್ಕಿಲ್ಲದಿರುವುದು; ಕಳೆದ 2-3 ವರ್ಷಗಳಿಂದ ರೈತ ಚೇತರಿಸಿಕೊಳ್ಳಲಾಗಲಾರದೆ ಭಾರವಾದ ಅವನ ಆರ್ಥಿಕ ಪರಿಸ್ಥಿತಿ; 3 ಕೋಟಿ ಆವರ್ತನಿಧಿ ಹಾಗು ಬೆಲೆಕುಸಿತದ ಸಂದರ್ಭಕ್ಕಾಗಿ ಇಟ್ಟಿರುವ 20 ಕೋಟಿ ರೂಗಳ ಕ್ರೋಢೀಕರಣ ಹೇಗೆ? ಎಂಬ ಬಗ್ಗೆ, ಸರ್ಕಾರದ ಸ್ಪಷ್ಟನೆ ಹಾಗು ಖರೀದಿ ಮಾಡಿರುವ ಬೆಳೆಗಳ ವಿವರ; ರಾಜ್ಯದಿಂದ ಮಹಾರಾಷ್ಟ್ರಕ್ಕೆ ಹೋಗುತ್ತಿರುವ ತೊಗರಿಯಿಂದಾಗಿ ಆಗುವ ನಷ್ಟ ಹಾಗು ರೈತರಿಗೆ ತೊಂದರೆ; 15-20 ದಿನಗಳಿಂದ ರಾಜ್ಯದಲ್ಲಿ ರೈತರು ಆರಂಭಿಸಿರುವ ದೊಡ್ಡ ಗಲಾಟೆ; ಗಂಗಾವತಿ, ಕೊಪ್ಪಳ, ಧಾರವಾಡ, ನರಗುಂದ, ನವಲಗುಂದದಲ್ಲಿ ನಡೆಯುತ್ತಿರುವ ಪ್ರತಿಭಟನೆ, ರೈತರು

10. ವಿಧಾನ ಪರಿಷತ್ತಿನ ನಡವಳಿಕೆಗಳು; ಸಂಪುಟ 297 (1-3), ಭಾಗ I, (3.11.2000), ಪು. 280-85
11. ವಿಧಾನಪರಿಷತ್ತಿನ ನಡವಳಿಕೆಗಳು; ಸಂಪುಟ 298 (1-5), (17.11.2000), ಪು. 721-29

ಇಲ್ಲೆಲ್ಲ ಹಿಡಿದಿರುವ ಚಳುವಳಿಯ ಹಾದಿ: ಪ್ರಥಮ ಬಾರಿಗೆ ಸಂಘಟಿತರಾಗಿ, ತಮಗೆ ಆಗಿರುವ ಅನ್ಯಾಯದ ವಿರುದ್ಧ ಧ್ವನಿ ಎತ್ತಿ ರೈತರು ಮಾಡುತ್ತಿರುವ ಪ್ರತಿಭಟನೆ, ಸರ್ಕಾರ ಈ ಕುರಿತೆಲ್ಲ ಹೊಣೆಯಿಂದ ವರ್ತಿಸಿಲ್ಲದಿರುವುದು ಈ ಬಗ್ಗೆ ಅಂಕಿ ಅಂಶಗಳನ್ನು ಸರ್ಕಾರ ನೀಡುವಿಕೆ ಇತ್ಯಾದಿ ವಿಷಯಗಳ ಬಗ್ಗೆ ಹೇಳಿದರು. ಅವರು ಮಾತನಾಡುವ ಮಧ್ಯದಲ್ಲಿ ಅದನ್ನು ಕೇಳಿಸಿಕೊಳ್ಳಬೇಕಾದ ಕೃಷಿ ಸಚಿವರ ಹಾಜರಿ ಇರಬೇಕೆಂದು ಶ್ರೀ ಬಿಎಸ್.ಹೊರಟ್ಟಿ, ಎಂ.ಸಿ.ನಾಣಯ್ಯನವರು ಅಭಿಪ್ರಾಯ ವ್ಯಕ್ತಪಡಿಸಿದಾಗ ಅವರು ಕೆಳಮನೆಯಲಿದ್ದು ಉತ್ತರಿಸುತ್ತಿರುವ ಬಗ್ಗೆ ಹೇಳಿ ಶ್ರೀ ಎಚ್.ಕೆ.ಪಾಟೀಲ್, ಶ್ರೀ ಧರ್ಮಸಿಂಗ್ ಸಮಾಧಾನ ಹೇಳಿದರು. ಶ್ರೀ ಡಿ.ಎಲ್.ಜಗದೀಶ್ ಅವರ ಮಾತುಗಳ ನಂತರ **ಶ್ರೀ ಎಚ್.ಕೆ.ಪಾಟೀಲರು** ಪ್ರತಿಕ್ರಿಯಿಸುತ್ತ ಜೋಳದ ಬೆಲೆ 1100 ರೂಗಳಿಂದ 350–70ರೂಗಳಿಗೆ ಕುಸಿದಿರುವುದು, ಗೋವಿನ ಜೋಳ, ಬಟಾಣಿಗೆ ಖರೀದಿದಾರರಿಲ್ಲದಿರುವುದು, ಉಳ್ಳಾಗಡ್ಡಿ ಬೆಲೆ ಕುಸಿತ ಕುರಿತು ಸಚಿವ ಸಂಪುಟ ದೊಡ್ಡ ಪ್ರಮಾಣದಲ್ಲಿ ಆವರ್ತನಿಧಿಯನ್ನು ಮಾಡುವ ಬಗ್ಗೆ ಚಿಂತನೆ ನಡೆಸಿರುವ ವಿಚಾರ, ಗೋವಿನಜೋಳದ ವಿಚಾರದಲ್ಲಿ ಪಂಜಾಬಿನಲ್ಲಿ ಮಾಡಿರುವ ವ್ಯವಸ್ಥೆಯನ್ನು ಅಧ್ಯಯನ ಮಾಡಿರುವುದು, ಕುರಿತೆಲ್ಲ ಹೇಳಿ ಮಾನ್ಯ ಜಗದೀಶ್ ಅವರ ಮಾತು ಮುಂದುವರಿಸಲು ಹೇಳಿದರು. ಶ್ರೀ ಕೆ.ಎಚ್.ಶ್ರೀನಿವಾಸ ಅವರು ರೈತರ ಸಹಾಯಕ್ಕೆ, ಮಾರುಕಟ್ಟೆ ಮಧ್ಯಪ್ರವೇಶಕ್ಕೆ ಸರ್ಕಾರದ ಪ್ರಯತ್ನ ತಿಳಿಯುವ ಆಸಕ್ತಿ ತಮಗಿರುವಲ್ಲಿ ಕೃಷಿ ಸಚಿವರು ಬರುವ ತನಕ ಈ ಚರ್ಚೆಯನ್ನು ಮುಂದೂಡಬಹುದು ಎಂದು ಅಭಿಪ್ರಾಯ ಪಟ್ಟರು.

**ಶ್ರೀ ಎಚ್.ಎಸ್.ಶಾಂತವೀರಪ್ಪಗೌಡರು**, ತೆಂಗಿನ ಕಾಯಿ ಕುರಿತು ನಡೆದ ಹಿಂದಿನ ಚರ್ಚೆಯನ್ನು ನೆನಪಿಸುತ್ತ, ಇವತ್ತು ರೈತರು ಸಾವಿರಗಟ್ಟಲೆ ತೆಂಗಿನಕಾಯಿಯನ್ನು ಸುಟ್ಟು ಹಾಕುತ್ತಿರುವುದು, ರೈತರಿಗೆ ವಿಶ್ವಾಸ ತುಂಬದಿರುವ ಕಾರಣ ಆತ್ಮಹತ್ಯೆಗಳಿಂದ ಸತ್ತಿರುವುದು ಕುರಿತೆಲ್ಲ ಹೇಳಿದಾಗ ಚರ್ಚೆಯಲ್ಲಿ ಆವೇಶ ಬೇಡ ಎಂದು ವೈಸ್ ಛೇರ್ಮನ್ ನುಡಿದರು. **ಶ್ರೀ ವಿ.ಆರ್.ಸುದರ್ಶನ್** ಅವರು; ಹಾಲು, ಹಣ್ಣು ತರಕಾರಿ ರೇಷ್ಮೆ ಭತ್ತ ರಾಗಿ, ಕಬ್ಬು ಬೆಳೆಗಾರರು ಸಂಕಷ್ಟದಲ್ಲಿರುವುದಕ್ಕೆ ಕೇಂದ್ರ ಸರ್ಕಾರದ ಇಂಪೋರ್ಟ್ ಅಂಡ್ ಎಕ್ಸ್‌ಪೋರ್ಟ್, ಪಾಲಿಸಿಯ ಪರಿಣಾಮ ರಾಜ್ಯದ ರೈತರ ಮೇಲಾಗಿರುವುದೇ ಕಾರಣ ಎಂದರು. ಶ್ರೀ ಡಿ.ಎಲ್.ಜಗದೀಶ್ ಅವರು, ರೈತರ ಸಮಸ್ಯೆ ವಿಶ್ಲೇಷಣೆ ಮಾಡುವಲ್ಲಿ ರೈತರ ಆತ್ಮಹತ್ಯೆ, ರಾಜ್ಯಸರ್ಕಾರ ರೈತರ ಬಗ್ಗೆ ರೂಪಿಸಿರುವ ಕಾರ್ಯಕ್ರಮ, ಆಂಧ್ರ, ಪಂಜಾಬ್, ಹಿಮಾಚಲ

ಇತ್ಯಾದಿ ರಾಜ್ಯಗಳ ಬಗ್ಗೆ ಕೇಂದ್ರದ ಧೋರಣೆ, ಕುರಿತೆಲ್ಲ ತಿಳಿಸುವ ಆಶಯವನ್ನು ವ್ಯಕ್ತಪಡಿಸಿದರು.

ವಿಧಾನಪರಿಷತ್ತಿನ ಈ ದಿನದ ನಡವಳಿಕೆಗಳಲ್ಲಿ ಸರ್ವಶ್ರೀ ಬಿ.ಎಲ್.ಶಂಕರ್, ಬಿ.ಎಸ್.ಯಡಿಯೂರಪ್ಪ, ಡಾ.ಎ.ಎಚ್.ಶಿವಯೋಗಿ ಸ್ವಾಮಿ, ಪಿ.ರಾಮಯ್ಯ ಅವರು ಪಾಲ್ಗೊಂಡಿದ್ದರು.

1.3.2001ರ ವಿಧಾನ ಪರಿಷತ್ತಿನಲ್ಲಿ[3] ಕೃಷಿ ಉತ್ಪನ್ನಗಳ ಬೆಲೆ ತೀವ್ರಕುಸಿತ, ಹಾಗು ಇತರ ಸಮಸ್ಯೆಗಳಿಂದ ರೈತರು ಹತಾಶೆಗೊಂಡಿರುವ ಹಿನ್ನೆಲೆಯಲ್ಲಿ ನಡೆದ ಚರ್ಚೆಯಲ್ಲಿ ಶ್ರೀ **ಬಿ.ಎಸ್.ಯಡಿಯೂರಪ್ಪನವರು** ಮಾತನಾಡುತ್ತ; ಸುಮಾರು 75–80 ಸಾವಿರ ರೈತರು ರಾಜ್ಯದ ಮೂಲೆ ಮೂಲೆಗಳಿಂದ ಪಕ್ಷಭೇದ ಮರೆತು ಬಂದು ಮೆರವಣಿಗೆ, ಚಳುವಳಿ ಮಾಡಿದ್ದಕ್ಕೆ ಹೋಗಿ ಭೇಟಿ ಮಾಡಿ ರೈತ ಸಮಸ್ಯೆಗೆ ಪರಿಹಾರ ಒದಗಿಸಬೇಕು ಎಂಬ ಗುರಿ ಸರ್ಕಾರಕ್ಕೆ ಇಲ್ಲವಲ್ಲ ಎಂದೆನಿಸುತ್ತದೆ. ಸನ್ಮಾನ್ಯ ಮುಖ್ಯಮಂತ್ರಿಗಳು ಡಬ್ಲ್ಯುಟಿಓಗೆ ಸಂಬಂಧಿಸಿದ ಜಂಟಿ ಸಭೆಯಲ್ಲಿ. ನಮ್ಮೆಲ್ಲರ ಅಭಿಪ್ರಾಯದ ಪ್ರತಿನಿಧಿಯಾಗಿ ಹೇಳಿದ್ದು – ಕೃಷಿ ಉತ್ಪನ್ನಗಳಿಗೆ ಸರಿಯಾದ ಬೆಲೆ ಸಿಗದೇ ಇದ್ದರೆ ಬೆಳೆಯನ್ನು ಯಾರಿಗಾಗಿ ಬೆಳೆಯಬೇಕು ಎಂಬುದು ರೈತರ ಪ್ರಶ್ನೆ ಆಗಿದೆ. ಇದಕ್ಕೆ ಉತ್ತರ, ಪರಿಹಾರ ಕೇಂದ್ರಸರ್ಕಾರದಲ್ಲಿ ಇರಬಹುದು. ಎಂದಿದ್ದಾರೆ. ಇದಲ್ಲದೆ ನಮ್ಮೊಡನೆ, ಚೈನಾಕೂಡ ವಿಶ್ವವ್ಯಾಪಾರ ಸಂಘಟನೆಯ ಸದಸ್ಯತ್ವ ಪಡೆಯಲು ಆಸಕ್ತಿ ತೋರಿರುವಾಗ, 186 ರಾಷ್ಟ್ರಗಳ ಜೊತೆ ದ್ವಿಪಕ್ಷೀಯ ಒಪ್ಪಂದವನ್ನು W.T.O ಒಪ್ಪಂದದಿಂದ ಹೊರಬಂದು ಮಾಡಿಕೊಳ್ಳುವುದು ಅಷ್ಟು ಸುಲಭದ ಕೆಲಸವಲ್ಲ, ಎಂದಿದ್ದಾರೆ. ರೈತನ ಉತ್ಪನ್ನಗಳಾದ ಜೋಳ, ಭತ್ತ, ಮುಸುಕಿನ ಜೋಳ, ಆಲೂಗೆಡ್ಡೆ, ಟೊಮ್ಯಾಟೊ ಅಥವಾ ಈರುಳ್ಳಿ ಇತ್ಯಾದಿ ಬೆಳೆಗಳಿಗೆ ಕನಿಷ್ಠ ಬೆಂಬಲ ಬೆಲೆ ಕೊಟ್ಟು ಖರೀದಿ ಮಾಡಿದರೆ ಕೇಂದ್ರ ಸರ್ಕಾರ ಆ ಹಣವನ್ನು ಕೊಡುತ್ತೇನೆಂದರೂ ರಾಜ್ಯ ಸರ್ಕಾರ ಎಫ್.ಸಿ.ಐ ಹಾಗೂ ಇತರ ಸಬ್ ಏಜೆನ್ಸಿಗಳ ಮೂಲಕವೂ ಮಾಡದೆ ಸುಮ್ಮನಿದ್ದುದೇಕೆ? ಕ್ವಿಂಟಾಲ್ ಮುಸುಕಿನ ಜೋಳದ ಖರೀದಿಗಾಗಿ ಕೇಂದ್ರವು 445 ರೂ ಗಳನ್ನು ಕೊಟ್ಟು ಸಾರಿಗೆ ವೆಚ್ಚ, ಹಮಾಲ, 3 ತಿಂಗಳ ಬಡ್ಡಿ ಹಾಗೂ ಚೀಲಗಳನ್ನು ಕೊಳ್ಳುವ ವ್ಯವಸ್ಥೆ ಮಾಡುತ್ತೇನೆಂದರೂ, 2 ತಿಂಗಳಿಂದ ರೈತ ಒಕ್ಕಲು ಮಾಡಿದಂಥ ಮೆಕ್ಕೆಜೋಳವನ್ನು ಎ.ಪಿ.ಎಂ.ಸಿ

12. ವಿಧಾನ ಪರಿಷತ್ತಿನ ನಡವಳಿಕೆಗಳು, ಸಂಪುಟ 300 (1–5), (1.3.2001), ಪು. 501–47

ಯಾರ್ಡ್‌ನಲ್ಲಿ ತಂದಿಟ್ಟು ಕಾದಿದ್ದರೂ ಕೊಳ್ಳದಿದ್ದುದೇಕೆ? ಹೀಗೆ ಖರೀದಿಸಿದ್ದನ್ನು ಪಡಿತರ ವ್ಯವಸ್ಥೆಯಲ್ಲಿ ಮಾರಿದರೆ ಆಗುವ ನಷ್ಟವನ್ನು ತುಂಬಿಕೊಡುವ ಬಗ್ಗೆ ಕೇಂದ್ರವು ಹೇಳಿತ್ತು. 'ಫುಡ್ ಫಾರ್ ವರ್ಕ್ಸ್' ಯೋಜನೆಯಡಿ ವಿತರಣೆ ಮಾಡಿದರೂ ಬೇಕಾದ ಸವಲತ್ತು ಒದಗಿಸಲು ಕೇಂದ್ರವು ಒಪ್ಪಿದೆ. ಆಹಾರ ಧಾನ್ಯದ ಖರೀದಿಗಾಗಿ 200 ಕೋಟಿ ರೂ. ಕೊಡುವ ಬಗ್ಗೆಯೂ ಹೇಳಿದ್ದಾರೆ. ಆದರೆ ನಮ್ಮ ಅಧಿಕಾರಿಗಳು ದಿವಸಕ್ಕೆ 5–10 ಸಾವಿರ ಕ್ವಿಂಟಾಲ್ ಖರೀದಿ ಬದಲಿಗೆ ಕೇವಲ 500–600 ಚೀಲಗಳನ್ನು ಖರೀದಿ ಮಾಡಿ ರೈತರ ಜೊತೆಗೆ ಚೆಲ್ಲಾಟವಾಡುತ್ತಿದ್ದಾರೆ.

ಬಡರೈತ ಎರಡು ತಿಂಗಳಿಂದ ಮಾರುಕಟ್ಟೆಯಲ್ಲಿಯೇ ಇದ್ದು ಊಟವಿಲ್ಲದೆ ಬವಣೆ ಪಡುತ್ತಿರುವಲ್ಲಿ, ಅವನ ಧಾನ್ಯಗಳ ಖರೀದಿಯನ್ನು ಅಧಿಕಾರಿಗಳು ಸರಿಯಾಗಿ ಮಾಡುತ್ತಿಲ್ಲ. ಇದು ರಾಜ್ಯದ ರೈತರಿಗೆ ದ್ರೋಹ ಮಾಡಿದಂತೆ, ಎಂದರು. ನಂತರ ಶೇಕಡ 30–35ರಷ್ಟು ಭಾಗದ ರೈತರು ಬಹಿರಂಗ ಮಾರುಕಟ್ಟೆಯ ಬೆಲೆ 445ರೂ ಇದ್ದರೂ ಕೇಂದ್ರದ ಪ್ರಪೋಸಲ್ ಕ್ವಿಂಟಾಲ್‌ಗೆ 400 ರೂ.ನಂತೆ ಇದ್ದರೂ ಎ.ಪಿ.ಎಂ.ಸಿ ಅಧಿಕಾರಿಗಳ ವರ್ತನೆಯಿಂದಾಗಿ ವಾಪಸು ಮನೆಗೆ ಕೊಂಡು ಹೋಗಿ 325 ರೂಗಳಿಗೆ ರೈತರು ಮೆಕ್ಕೆಜೋಳ ಮಾರಿಕೊಂಡದ್ದು, ಬೇರೆ ಜಿಲ್ಲೆಯಲ್ಲೂ ಈ ಸಂಬಂಧ ಆಗಿರುವ ಗೋಲಿಬಾರ್, ಪೋಲೀಸ್ ಹಾಗು ರೈತರ ಹತ್ಯೆ, ರೈತನಿಗೆ ಬೇರೆ ದಾರಿ ಕಾಣದಿದ್ದಾಗ ಅನಿವಾರ್ಯವಾಗಿ ಕಾನೂನು ಬಾಹಿರ ಚಟುವಟಿಕೆ ನಡೆಸಲು ಅಪ್ರತ್ಯಕ್ಷವಾಗಿ ಸರ್ಕಾರವೇ ಸಹಕಾರ ನೀಡಿದಂತಾಗಿರುವುದು; ಉತ್ತಮ ಭತ್ತಕ್ಕೆ ಕ್ವಿಂಟಲ್‌ಗೆ 540ರೂ, ಮಧ್ಯಮ ವರ್ಗಕ್ಕೆ 510 ರೂ. ಭತ್ತಕ್ಕೆ ಬೆಂಬಲ ಬೆಲೆ ನಿಗದಿಯಾಗಿದ್ದರೂ ಯಾರೂ ಖರೀದಿಸದೆ ಬದಲು ಕ್ವಿಂಟಾಲ್‌ಗೆ 475–480ಕ್ಕೆ ಕೇಳಿರುವುದು; ರೈತರ ಸಂಕಷ್ಟಕ್ಕೆ ಉಪಾಯಕಾಣದಾಗಿದೆ ಎಂಬ ಮುಖ್ಯಮಂತ್ರಿಗಳ ಮಾತಿನ ಹೊಣೆಗಾರಿಕೆಯ ರೀತಿ, ಕೆ.ಪಿ.ಟಿ.ಸಿ.ಎಲ್ ಇಲಾಖೆಯವರು ರೈತನಿಗೆ ರಾತ್ರಿ 2–3 ಗಂಟೆಗಳ ಕಾಲ ಮಾತ್ರ ವಿದ್ಯುತ್ ಕೊಟ್ಟರೂ 2–3 ಬಾರಿ ವಿದ್ಯುತ್ ವ್ಯತ್ಯಯವಾಗುವುದು, 5 ಹೆಚ್.ಪಿ ಇರುವ ರೈತ 2–3 ಎಕರೆಗಳಲ್ಲಿ ಬೆಳೆ ಬೆಳೆದಿದ್ದರೆ ಅದು ಒಣಗಿ ರೈತನು, ಕಣ್ಣೀರು ಹಾಕುತ್ತಿರುವುದು; ಶಿಕಾರಿಪುರದ ಕೆ.ಪಿ.ಟಿ.ಸಿ.ಎಲ್ ಕಛೇರಿಗೆ ಮುತ್ತಿಗೆ ಹಾಕಿ ರೈತರ ಪ್ರತಿಭಟನೆ; ಕೆ.ಪಿ.ಟಿ.ಸಿ.ಎಲ್ ಅಧಿಕಾರಿ ಹೇಳಿಕೆಯಂತೆ ಅಗತ್ಯವಿರುವ 14 ಮೆಗಾವಾಟ್ ವಿದ್ಯುತ್ತಿಗೆ ಬದಲಾಗಿ 10 ಮೆಗಾವ್ಯಾಟ್ ಸಪ್ಲೈ ಆಗುತ್ತಿದ್ದು, ಸದ್ಯ 6 ವಿದ್ಯುತ್ ಮೆಗಾವ್ಯಾಟ್‌ಗೆ ಇಳಿದು ಲೋಡ್ ತಡೆಯಲಾಗದೆ ಹೋಗಿ ರೈತರಿಗೆ ತೊಂದರೆ ಆಗಿರುವುದು; ರೈತನ ಬೆಳೆಗಳು ಹಾಗೂ ಮುಸುಕಿನ

ಜೋಳವನ್ನು ಎ.ಪಿ.ಎಂ.ಸಿ ಪ್ರಾಂಗಣದಲ್ಲಿರಲಿ, ರೈತನ ಮನೆಯಲ್ಲಿರಲಿ ತಿಂಗಳಾಂತ್ಯದೊಳಗೆ ಕೇಂದ್ರವೋ, ರಾಜ್ಯವೋ ಖರೀದಿ ಮಾಡಲೇಬೇಕಿರುವುದು; 14 ಲಕ್ಷ ನೀರಾವರಿ ಅನುಕೂಲವಿಲ್ಲದಿರುವ ರೈತರ ಐ.ಪಿ.ಸೆಟ್‌ಗಳಿಗೆ ಕನಿಷ್ಠ ದಿನವೊಂದಕ್ಕೆ 10 ಗಂಟೆಯಾದರೂ ವಿದ್ಯುತ್ ಸೌಲಭ್ಯ ನೀಡುವ ಅವಶ್ಯಕತೆ; ಹಳೆದರವನ್ನು ರೈತರ ಪಂಪ್‌ಸೆಟ್‌ಗಳಿಗೆ ನಿಗದಿ ಮಾಡುವುದು; ಏರಿಸಿರುವ ವಿದ್ಯುತ್ ದರದಲ್ಲಿ ಶೇ. 50 ರಷ್ಟಾದರೂ ಇಳಿಸಬೇಕಿರುವುದು; ರೈತನ ಬೆಳೆ ಹಾಗು ಬೇರೆ ಸಾಲಗಳ ಬಡ್ಡಿ ಮನ್ನಾ ಮಾಡುವುದು; ಜಾಹೀರಾತು, ಎಲೆಕ್ಟ್ರಾನಿಕ್ ಮೀಡಿಯಾಗೆ ಹಣ ಕಟ್ಟುವ ಕೋಕೋ ಕೋಲಾ ಕಂಪೆನಿಗೆ 12% ಸೇಲ್ಸ್ ಟ್ಯಾಕ್ಸ್ ಅನ್ನು 8 ವರ್ಷ ಮನ್ನಾ ಮಾಡಲು ಸಾಧ್ಯವಾದರೆ, ಕಾರ್ಖಾನೆ ತೆಗೆದವನಿಗೆ ಪರ್ಚೇಸ್ ತೆರಿಗೆ, ಸೇಲ್ಸ್ ಟ್ಯಾಕ್ಸ್, ಬಾರಾಖೂನ್ ಮಾಫಿ ಮಾಡಿ ನೀರು, ಜಮೀನು, ವಿದ್ಯುತ್ ಎಲ್ಲವನ್ನು ಕೊಡುತ್ತಿರುವಲ್ಲಿ ರೈತನ ಎಲ್ಲ ಸಾಲಗಳ ಮೇಲಿನ ಬಡ್ಡಿ ಮನ್ನಾ, ಅಲ್ಪಾವಧಿಯನ್ನು ಮಧ್ಯಮಾವಧಿಯದನ್ನಾಗಿ, ಮಧ್ಯಮಾವಧಿಯದನ್ನು ದೀರ್ಘಾವಧಿಯದನ್ನಾಗಿ ಮಾಡಬೇಕಿರುವುದು; ಸದನದಲ್ಲಿ ಈ ಬೇಡಿಕೆಯ ಪೂರೈಕೆಯ ಬಗ್ಗೆ ವರದಿಕೊಡುವ ಅಗತ್ಯ; ಆವರ್ತ ನಿಧಿಗೆ ನೂರು ಕೋಟಿ ಇಡುವ ಬಗ್ಗೆ ಹೇಳಿದ್ದು ಸರ್ಕಾರ ಕಳೆದ ವರ್ಷದಲ್ಲಿ ಉಳಿದಿದ್ದ 8–10 ಕೋಟಿ ಹಣವನ್ನೆ ಆವರ್ತನ ನಿಧಿಗೆ ಖರ್ಚು ಮಾಡಿರುವುದು ಇತ್ಯಾದಿ ವಿಷಯಗಳ ಮೇಲೆಲ್ಲ ಹೇಳಿ ರೈತನಿಗೆ ನ್ಯಾಯ ಒದಗಿಸಬೇಕೆಂದು ಹೇಳಿ ತಮ್ಮ ಮಾತನ್ನು ಮುಗಿಸಿದರು; ಹಾಗು ತಮ್ಮ ಬೇಡಿಕೆಗಳಿಗೆ ಉತ್ತರ ಬರುವವರಿಗೆ ನಿಂತಿರುತ್ತೇನೆಂದು ಹೇಳಿ ನಿಂತೇ ಇದ್ದರು.

**ಶ್ರೀ ಎಂ.ಪಿ.ಪ್ರಕಾಶ್** ಅವರು, ಶ್ರೀ ಯಡಿಯೂರಪ್ಪನವರು ತಮ್ಮ ಆಗ್ರಹವನ್ನು ಸತ್ಯಾಗ್ರಹ ರೂಪದಲ್ಲಿ ವ್ಯಕ್ತಪಡಿಸಿ ಬಹಳ ತೀವ್ರವಾಗಿ ರೈತರ ಸಮಸ್ಯೆಗೆ ಪ್ರತಿಕ್ರಿಯಿಸಿದ್ದಾರೆ. ಸರ್ಕಾರದ ಸೂಕ್ತ ಪ್ರತಿಕ್ರಿಯೆಗೆ ಅವರು ಕಾಯ್ದು ಸಮಾಧಾನವಾಗದಿದ್ದರೆ ತೀರ್ಮಾನ ಅವರದು ಎಂದರು. ಶ್ರೀ.ಡಿ.ಎಲ್ ಜಗದೀಶ್ ಅವರೂ ಆ ಮಾತಿಗೆ ಬೆಂಬಲ ಸೂಚಿಸಿ ನಮ್ಮ ಮಾತುಗಳನ್ನು ಕೇಳಿಸಿಕೊಳ್ಳಲಿ, ಆವರೆಗೆ ಸ್ವಸ್ಥಾನದಲ್ಲಿ ಕುಳ್ಳಿರಲಿ ಎಂಬ ಪ್ರಾರ್ಥನೆ ಇಟ್ಟರು.

ಕೃಷಿ ಸಚಿವ **ಶ್ರೀ ಟಿ.ಬಿ.ಜಯಚಂದ್ರ** ಅವರು : ಶ್ರೀ ಯಡಿಯೂರಪ್ಪ ನವರು ಸೇರಿದಂತೆ ನಾವೆಲ್ಲ ಗ್ರಾಮೀಣ ಪ್ರದೇಶದ ರೈತಪ್ರತಿನಿಧಿಗಳಾಗಿ ಒಂದೇ ಬೇರಿನಿಂದ ಬಂದವರಾಗಿ ರೈತರ ಸಮಸ್ಯೆಗಳಿಗೆ ಸ್ಪಂದಿಸಬೇಕಾಗುತ್ತದೆ, ಎಂದರು. ಮುಂದುವರೆದು ರೈತರು ಬೆಳೆದದ್ದನ್ನು ಕೊಳ್ಳಲು ರಾಜ್ಯ ಮತ್ತು ಕೇಂದ್ರ ಸರ್ಕಾರದ

ಹೊಣೆ ಇರುವುದು; ರಾಜ್ಯದಲ್ಲಿ ಬೆಳೆದ ಮೆಕ್ಕೆ ಜೋಳದ ಪ್ರಮಾಣ ಹೆಕ್ಟೇರಿಗೆ 32 ಕ್ವಿಂಟಾಲಿನಂತೆ 220 ಲಕ್ಷ ಕ್ವಿಂಟಾಲ್‌ಗೂ ಮೀರಿ ಇರುವುದು; ರೈತರ ಸಮಸ್ಯೆಗಳನ್ನು ಬಗೆಹರಿಸಲು ಎಲ್ಲರೂ ಜೊತೆಗೂಡುವುದು, ಕುರಿತೆಲ್ಲ ಹೇಳಿದರು. ಶ್ರೀ ಯಡಿಯೂರಪ್ಪನವರು ಬೇಡಿಕೆ ಈಡೇರಿಕೆಗೆ ನಿಂತು ಸತ್ಯಾಗ್ರಹ 'ಮಾಡುತ್ತಿರುವ' ಬಗ್ಗೆ ಶ್ರೀ **ಬಸವರಾಜ ಬೊಮ್ಮಾಯಿ** ಅವರು ರೈತರು ಇಷ್ಟು ಕಷ್ಟದಲ್ಲಿರುವಾಗ ಸರ್ಕಾರ ಸ್ಪಂದಿಸಲಿ ಎನ್ನುವ ಕಾರಣಕ್ಕೆ ವಿರೋಧ ಪ್ರಕಟನೆಗೆ ಅಸ್ತ್ರವಾಗಿ ಅದರ ಪ್ರಯೋಗವನ್ನು ಕಳಕಳಿಯಿಂದ ಮಾಡಿದ್ದಾರೆ ಎಂದು ಭಾವನೆಯನ್ನು ವ್ಯಕ್ತಮಾಡಿದರು. ಶ್ರೀ ಯಡಿಯೂರಪ್ಪನವರು ಉಳಿದ ಸದಸ್ಯರ ಮನವಿಗೆ, ಸರ್ಕಾರದ ಕೈಯಲ್ಲಿ ಸಾಧ್ಯವಾಗುವಂಥ ಕೆಲವು ಬೇಡಿಕೆಗಳನ್ನು ರೈತರಿಗೆ ಸಂಬಂಧಿಸಿದಂತೆ ಇಟ್ಟಿರುವಲ್ಲಿ ಅದು ಚರ್ಚೆಯಾಗಿ, ಸರ್ಕಾರ ಉತ್ತರಕೊಡಲಿ, ಆವರೆಗೆ ನೆಮ್ಮದಿಯಿಂದ ನಿಂತಿರಲು ಅವಕಾಶವಾಗಲಿ ಎಂದು ಕೇಳಿಕೊಂಡರು.

ನಂತರ ಅನೇಕ ಸದಸ್ಯರು ಮತ್ತೆ ಮನವಿ ಮಾಡಿದ ಮೇಲೆ ಸ್ವಸ್ಥಾನಕ್ಕೆ ಬಂದು ಕುಳಿತುಕೊಂಡಮೇಲೆ ಶ್ರೀ ಎಂ.ಪಿ.ಪ್ರಕಾಶ್ ಅವರಿಗೆ ಧನ್ಯವಾದಗಳನ್ನು ಅರ್ಪಿಸಿ ಮಾತನಾಡಿದ್ದು; ಸುಮಾರು 20 ಲಕ್ಷ ಕ್ವಿಂಟಲ್ ಮೆಕ್ಕೆ ಜೋಳವನ್ನು ಬೆಳೆದಿರುವಲ್ಲಿ ಮಾರಾಟ ಮಾಡುವಲ್ಲಿ ಯಾವ ರೀತಿಯಾಗಿ ಉಪಯೋಗ ಮಾಡಿಕೊಳ್ಳಬಹುದು? ಜವಳಿ ಕಾರ್ಖಾನೆಗಳು ಮುಚ್ಚಿ ಹೋಗಿರುವುದು; ಮೆಕ್ಕೆಜೋಳದಲ್ಲಿರುವ ಕರಿಮೂತಿಯಲ್ಲಿರುವ 0.7 ರಷ್ಟು ಎಣ್ಣೆಯ ಅಂಶವನ್ನು ಔಷಧಿಗಾಗಿ ಬಳಸಿಕೊಳ್ಳುವಂಥ ಉದ್ಯಮ ನಮ್ಮಲ್ಲಿ ಆರಂಭ ಮಾಡಿಲ್ಲದಿರುವುದು; ಇಂಥ ಆಹಾರ ಧಾನ್ಯದ ಪರಿಷ್ಕರಣಕ್ಕೆ ಮಹತ್ವ ಕೊಟ್ಟಿಲ್ಲದಿರುವುದು; ಕೋಳಿಗೆ ಪೌಷ್ಟಿಕ ಆಹಾರಕ್ಕೆ ಬಳಸುವುದರ ವಿನಾ ಬೇರೆ ಬಳಕೆಯನ್ನು ಮಾಡದಿರುವುದು; ಮೆಕ್ಕೆ ಜೋಳದ ಹಳದಿ ಬಣ್ಣದ ಸಿಪ್ಪೆಯಲ್ಲಿ ಗ್ಲೈಕೋಟೋನ್ ಆಗಿ ಮಾಡಿ ಅದನ್ನು ಬಳಸಿಕೊಳ್ಳುವ ಉದ್ಯಮವನ್ನು ಮಾಡಿಲ್ಲದಿರುವುದು; ಧಾನ್ಯ ಖರೀದಿಗೆ ಕೇಂದ್ರ ಹಣ ಕೊಡುವ ಮಾತಿದ್ದರೂ ಕಾರ್ಯೋನ್ಮುಖವಾಗಲು ತಾಂತ್ರಿಕವಾದ ಕೆಲವು ದೋಷಗಳ ಕಾರಣ ಖರೀದಿ ನಿಲ್ಲಿಸಿರುವುದು; ಹೋರ್ಡಿಂಗ್ ಛಾರ್ಜ್ ಎಂದು ಆಹಾರ ನಿಗಮದವರು ಕೊಡುವ 18–20 ರೂ.ಗಳಲ್ಲಿ ಗೋಡೌನ್‌ಗೆ ಬಂದು ಮುಟ್ಟಲು ಆಗುವ ಖರ್ಚು 16 ರೂ ಎಂದಿರುವಾಗ ಖರೀದಿಗೆ ಅವಕಾಶ ಇಲ್ಲದಿರುವುದು; ಹಮಾಲಿಗಳಿಗೆ ಕೇವಲ 6 ರೂ ಮಾತ್ರ ಸಿಗುವುದು; ಎ.ಪಿ.ಎಂ.ಸಿ.ಯ ಪ್ರತಿ ಹಮಾಲನೂ ಕ್ವಿಂಟಾಲ್‌ಗೆ 2 ಕೆ.ಜಿ.ಯಷ್ಟು ಬೀಳುವ **ತಳದ ಕಾಳನ್ನು**

ರೈತರು ಬಿಟ್ಟು ಹೋಗಲು ಬಯಸುವುದು; ಎಸ್.ಎಸ್.ಐ ನವರಾಗಲಿ, ಎಫ್.ಸಿ.ಐ ಆಹಾರ ನಿಗಮದ ಅಧಿಕಾರಿಗಳಾಗಲಿ, ಉಗ್ರಾಣ ನಿಗಮದ ಅಧಿಕಾರಿಗಳಾಗಲಿ, ಹಮಾಲರಿಗೆ ನ್ಯಾಯವಾಗಿ ಸಲ್ಲಬೇಕಾದ ಹಣವನ್ನು ಕೊಡದಿರುವುದು; ಶೋಷಿತನಾಗಿರುವ, ತುಳಿತಕ್ಕೆ ಒಳಗಾಗಿರುವ ರೈತನ ತೆನೆಗಳನ್ನು ರಾಜಕಾರಣಿಗಳು, ವ್ಯಾಪಾರಸ್ಥರು, ಹಕ್ಕಿ ಪಕ್ಷಿಗಳು, ಕಳ್ಳಕಾರರು ಲಪಟಾಯಿಸುವಲ್ಲಿ ಅವನ ಆತ್ಮಹತ್ಯೆಗೆ ಕಾರಣವಾಗುವುದು; ರೈತನನ್ನು ನಷ್ಟದಿಂದ ಪಾರುಮಾಡುವಂಥ ಬೆಳೆಯನ್ನು ಬೆಳೆಯಲು ಸಾಧ್ಯವಾಗಿಲ್ಲದಿರುವುದು; ಕೃಷಿಯ ಯಾವ ಬೆಳೆಯೂ ಲಾಭದಾಯಕವಾಗದಿರುವುದು; ಒಂದೆ ನೂರು ಸೇರು ಜೋಳ (ಒಂದುಪಲ್ಲ) ತೆಗೆದುಕೊಂಡವರು ಸುಗ್ಗಿಕಾಲದಲ್ಲಿ ಇನ್ನೂ 25 ಸೇರು, ಸೇರಿಸಿ 125 ಸೇರು ಜೋಳವನ್ನು ವಾಪಸ್ ಕೊಡುವಂಥ **ವಾತಪದ್ಧತಿ** ಅಥವಾ ಪಲ್ಲಾಬಡ್ಡಿ ಎಂಬುದು ಇದ್ದುದು; ಹಸಿರು ಕಾರ್ಡುದಾರರು ಪಲ್ಲಾಬಡ್ಡಿ ಪದ್ಧತಿಯಂತೆ ಆಹಾರಧಾನ್ಯ ತೆಗೆದುಕೊಳ್ಳುವುದಾದರೆ ಅದನ್ನು ಗಮನಿಸುವುದು; ಆ ಮೆಕ್ಕೆ ಜೋಳದ ದಾಸ್ತಾನನ್ನು ಹಾಸ್ಟೆಲ್, ಆಸ್ಪತ್ರೆ, ಅನಾಥಾಶ್ರಮ, ವೃದ್ಧಾಶ್ರಮಗಳಿಗೆ ಕೊಡುವುದು, ಮೆಕ್ಕೆಜೋಳದ ರವೆ ಉಪ್ಪಿಟ್ಟು ಮಾಡಿಕೊಡುವುದು; ರೈತರ ಕಷ್ಟವನ್ನು ನೋಡಿರುವಂಥ ಆರ್ಥಿಕ ತಜ್ಞರ ಅವಶ್ಯಕತೆ; ಕರ್ನಾಟಕದಲ್ಲಿ 'ಕೂಲಿಗಾಗಿ ಕಾಳು' ಎನ್ನುವಂಥ ಖರೀದಿ ಮಾಡುವ ವ್ಯವಸ್ಥೆಯ ಹೆಚ್ಚಳ; ಡಬ್ಲ್ಯು.ಟಿ.ಓ ದಿಂದ ಆಗಿರುವ ಪರಿಣಾಮಗಳನ್ನು ಸರಿಪಡಿಸುವಿಕೆ; ಕ್ವಿಂಟಾಲ್ ಜೋಳವನ್ನು 400 ರೂಗಳಿಗೆ ರೈತರಿಂದ ಕೊಂಡು ಉಗ್ರಾಣ ದಾಸ್ತಾನು ಮಾಡಿ ಎಫ್ ಸಿ ಐ (ಫುಡ್ ಕಾರ್ಪೊರೇಷನ್ ಆಫ್ ಇಂಡಿಯಾ) ಅಧಿಕಾರಿಗಳು, ಮಧ್ಯವರ್ತಿಗಳು ಕೂಡಿ ರಸೀದಿ ಬದಲಾಯಿಸಿ 445 ರೂ ನಂತೆ ಕೊಳ್ಳುವಿಕೆ ತೋರಿಸಿ ಮಾಡುವ ಮೋಸ; ಮಧ್ಯವರ್ತಿಗಳು ಹಳ್ಳಿಗಳಲ್ಲಿ ಕ್ವಿಂಟಾಲ್ ಮೆಕ್ಕೆ ಜೋಳವನ್ನು 320–360 ರೂಗಳಿಗೆ ಖರೀದಿಸಿ ರೈತರುಗಳ ಹೆಸರಿನ ಮೇಲೆ ಪಹಣಿ. ಪಟ್ಟಿಕೊಟ್ಟು 445 ರೂ.ಗೆ ಕೊಂಡಿರುವಂತೆ ತೋರಿಸಿ ಮಾಡುವ ಮೋಸ; ಐ.ಎ.ಎಸ್ ಅಧಿಕಾರಿಗಳು, ಮಧ್ಯವರ್ತಿಗಳು ಕೂಡಿ ರಸೀದಿ ಬದಲಾಯಿಸಿ 445 ರೂನಂತೆ ಕೊಳ್ಳುವಿಕೆ ತೋರಿಸಿ ಮಾಡುವ ಮೋಸ; ಮಧ್ಯವರ್ತಿಗಳು ಹಳ್ಳಿಗಳಲ್ಲಿ ಕ್ವಿಂಟಾಲ್ ಮೆಕ್ಕೆ ಜೋಳವನ್ನು 320–360 ರೂಗಳಿಗೆ ಖರೀದಿಸಿ ರೈತರುಗಳ ಹೆಸರಿನ ಮೇಲೆ ಪಹಣಿ. ಪಟ್ಟಿಕೊಟ್ಟು 445 ರೂ.ಗೆ ಕೊಂಡಿರುವಂತೆ ತೋರಿಸಿ ಮಾಡುವ ಮೋಸ; ಐ.ಎ.ಎಸ್ ಅಧಿಕಾರಿಗಳ ದೂರವಾಣಿ ವೆಚ್ಚ ಹಾಗು ಇತರ ಖರ್ಚಿನ ಬಗೆಗಿನ ಪ್ರಶ್ನೆಗೆ ಸರ್ಕಾರ ಉತ್ತರ ಕೊಡದೆ, ರಾಜಕಾರಣಿಗಳಿಗೆ ಸಂಬಂಧಿಸಿದ ವಿಚಾರ ಬಂದಾಗ ತಕ್ಷಣ ಉತ್ತರ ದೊರಕುವುದು

-This reflects the malady of the soceity- ಖಳನಾಯಕರೆಂದರೆ ಸಾರ್ವಜನಿಕ ಜೀವನದಲ್ಲಿ ಕೆಲಸ ಮಾಡುವವ, ಉಳಿದಂಥ ಎಲ್ಲರೂ ಸಜ್ಜನರು ಎಂಬಂಥ ವಾತಾವರಣ ಸೃಷ್ಟಿಯಾದರೆ. ಪ್ರಜಾಪ್ರಭುತ್ವದಲ್ಲಿ ವಿಶ್ವಾಸಾರ್ಹತೆ ಕಳೆದುಕೊಳ್ಳುವ ಜನತೆ; ರಾಜ್ಯದಲ್ಲಿರುವ ಶೇ 70 ರಷ್ಟು ಒಣಬೇಸಾಯಗಾರರು ಹಾಗು ಅವರು ಬಳಸುವ ರಸಗೊಬ್ಬರದ ಮೇಲೆ ಕೊಡುವ 5600 ಕೋಟಿ ರೂ ಸಬ್ಸಿಡಿ; ನೀರಾವರಿ ಪಂಪ್‌ಸೆಟ್ ಮೇಲೆ ವಿಧಿಸಿರುವ ಅವೈಜ್ಞಾನಿಕವಾದ ಶುಲ್ಕ. ತಿಂಗಳೊಂದಕ್ಕೆ ಒಂದು ಅಶ್ವಶಕ್ತಿಗೆ 45 ರೂನಂತೆ ನಿಗದಿ ಇರಲು ವರ್ಷಕ್ಕೆ ಈ ಮೊದಲಿದ್ದ 300 ರೂಗಳ ಬದಲು 540 ರೂಗಳಾಗುವಲ್ಲಿ ಹಳೆ ಪಂಪುಸೆಟ್‌ದಾರರಿಗಿಂತ ಹೊಸದಾಗಿ ಎನರ್ಜೈಸ್ ಆಗುವ ಪಂಪ್‌ಸೆಟ್‌ದಾರರು 240 ರೂ ಹೆಚ್ಚು ಹಣ ತೆರಬೇಕಾಗಿರುವುದು; ಮೀಟರ್ ಅಳವಡಿಸದೆಯೆ ರೈತರ ಮೇಲೆ ಹೆಚ್ಚು ದರ ವಿಧಿಸುವಲ್ಲಿನ ಅವೈಜ್ಞಾನಿಕತೆ; ಬೋರ್‌ವೆಲ್ ಹೊಂದಿರುವ ಒಣಬೇಸಾಯಗಾರನಿಗೂ ವಿದ್ಯುತ್ ಯೂನಿಟ್ 1ಕ್ಕೆ 1 ರೂ. 70 ಪೈಸೆ ಕೊಡಬೇಕೆಂದು ವಿದ್ಯುಚ್ಛಕ್ತಿ ನಿಯಂತ್ರಣ ನಿಗಮದ ವರದಿ ಕೊಟ್ಟಿರುವುದರ ಅಸೂಕ್ತತೆ; ರೈತರನ್ನು ಎಲ್ಲರೂ ಶೋಷಿಸುತ್ತಿರುವುದು; ಕೃಷಿ ವಲಯ ಉಪೇಕ್ಷೆಗೊಳಗಾಗಿರುವುದು; ಸಂಪನ್ಮೂಲಗಳನ್ನು ಕೃಷಿವಲಯಕ್ಕೆ ಒದಗಿಸಿಕೊಟ್ಟು ಸರ್ಕಾರ ರೈತರ ಪರವಾಗಿರುವ ಸರ್ಕಾರವೆನ್ನಿಸುವುದು ಇತ್ಯಾದಿ ವಿಷಯಗಳನ್ನು ಎಳೆಎಳೆಯಾಗಿ ಬಿಡಿ ಹೇಳಿದರು.

ಶ್ರೀ **ಡಿ.ಎಲ್.ಜಗದೀಶ್** ಅವರು ಮಾತನಾಡುತ್ತ, ರಾಜ್ಯದ ಯಾವುದೆ ಬೆಳೆ – ತೋಟಗಾರಿಕೆ ಬೆಳೆ, ದವಸಧಾನ್ಯ, ಎಣ್ಣೆಕಾಳು ಇತ್ಯಾದಿ ಯಾವುದೇ ಬೆಳೆಗಳ ಬೆಲೆ ಕುಸಿತದ ಕಾರಣ ತತ್ತರಿಸಿರುವ ರೈತರ ಸಂಕಷ್ಟ ಪರಿಹಾರಕ್ಕೆ ಸರ್ಕಾರ ಪ್ರಾಮಾಣಿಕ ಪ್ರಯತ್ನದ ಅಗತ್ಯ; ರೈತರ ಬೆಲೆ ಕುಸಿತದ ಸಂಕಷ್ಟದಲ್ಲಿ ರಕ್ಷಿಸಲು ನೂರು ಕೋಟಿ ರೂ.ಗಳನ್ನು ಆವರ್ತನಿಧಿಯಾಗಿ ಒದಗಿಸಿಕೊಡುವ ಬಗ್ಗೆ ಮಾಡಿದ ಸರ್ಕಾರದ ಪ್ರಕಟಣೆಯ ಗತಿ; ಈ ವರೆಗೆ ಬಂದ ಸರ್ಕಾರಗಳು ರೈತರಿಗೆ ಏನು ಮಾಡಿವೆ ಎಂಬುದರ ಬಗ್ಗೆ ಹೊರಡಿಸಬೇಕಾದ ಶ್ವೇತಪತ್ರ; ಬೆಲೆ ಕುಸಿತದ ಪರಿಣಾಮ ರಾಜ್ಯದ ಎ.ಪಿ.ಎಂ.ಸಿ ಮಾರುಕಟ್ಟೆಗಳಿಗೆ 50 ಕೋಟಿ ರೂ ಮೊಬಲೈಸ್ ಮಾಡುವಲ್ಲಿ ರಾಜ್ಯ ಸರ್ಕಾರದ ಪಾಲು 25 ಕೋಟಿ ರೂ. ಇರುವುದು ಹಾಗೂ ಅಷ್ಟರಿಂದಲೇ ಸಮಸ್ಯೆ ಬಗೆಹರಿಯಬಲ್ಲುದೇ ಎಂಬುದು; ನ್ಯಾಫೆಡ್ ಯೋಜನೆ ಅಡಿಯಲ್ಲಿ ಕೇಂದ್ರ ಸರ್ಕಾರವು ಕೊಬ್ಬರಿಯನ್ನು ಖರೀದಿಸುವ ಯೋಜನೆ ಮಾಡಿರುವುದು; ಆ ಬಾಬ್ತು 8 ಕೋಟಿ ರೂ. ಇನ್ನು ಬಿಡುಗಡೆ ಆಗದಿರುವ ಬಗ್ಗೆ ರಾಜ್ಯ ಸರ್ಕಾರ, ಕೇಂದ್ರ ಸೆಳೆದಿದೆಯೇ? ಎಂಬ ಬಗ್ಗೆ ಸ್ಪಷ್ಟನೆಯ ಅಗತ್ಯ ಕುರಿತೆಲ್ಲ ಹೇಳಿದರು.

ಕೃಷಿ ಸಚಿವ **ಶ್ರೀ ಟಿ.ಬಿ.ಜಯಚಂದ್ರ** ಅವರು, ರೈತರಿಗೆ ವಿತರಣೆ ಆಗಬೇಕಾದ 8 ಕೋಟಿ, ನ್ಯಾಫೆಡ್ ಮುಖಾಂತರ ನಮ್ಮ ಕೆ.ಜಿ.ಎಫ್.ನವರಿಗೆ ಕೊಡಬೇಕಾದ 12 ಕೋಟಿ ಬಿಡುಗಡೆ ಮಾಡಲು ಕೇಂದ್ರ ಕೃಷಿ ಸಚಿವರಿಗೆ ತಾವು ಹಾಕಿದ ಒತ್ತಾಯ; ತಿಪಟೂರಿನಲ್ಲಿ ಪ್ರೊಕ್ಯೂರ್‌ಮೆಂಟ್ ನಿಲ್ಲಿಸದಿರಲು ಜಿಲ್ಲಾಧಿಕಾರಿಗಳಿಗೆ ನೀಡಿರುವ ಸೂಚನೆ ಕುರಿತು ಹೇಳಿದರು.

ಶ್ರೀ ಡಿ.ಎಲ್.ಜಗದೀಶ್ ಅವರು ಮಾತು ಮುಂದುವರಿಸಿ: ಸರ್ಕಾರ ರಾಜಕೀಯ ಇಚ್ಛಾಶಕ್ತಿಯಿಂದ ರೈತರಿಗೆ ನೆರವು ಕೊಡಬೇಕೆಂದಾಗ ಯಾರೂ ಅಡ್ಡ ಬರುವುದಿಲ್ಲ. ಈ ಹಿಂದೆ 1996ರಲ್ಲಿ ಸರ್ಕಾರವು 240 ಕೋಟಿ ರೂ. ರೈತರ ಸಾಲವನ್ನು ಮನ್ನಾ ಮಾಡಿದ ವಿಷಯವಿದೆ. ಇಂದು ವಿರೋಧ ಪಕ್ಷದ ನಾಯಕರೂ ರೈತರಿಗೋಸ್ಕರ 500 ಕೋಟಿ ರೂ. ಹಣ ತೆಗೆದಿಟ್ಟರೆ ಅಗತ್ಯವಿರುವ ಎಲ್ಲಾ ಸಹಕಾರ ನೀಡುವುದಾಗಿ ಹೇಳಿದ್ದಾರೆ. ನನ್ನ ಮೊದಲ ಒತ್ತಾಯವೆಂದರೆ ತಿಪಟೂರು ತಾ. ತೆಂಗು ಬೆಳೆಗಾರರು ತುಂಬಾ ನಷ್ಟದಲ್ಲಿದ್ದು ಬೆಳೆ ಪರಿಹಾರವಿಲ್ಲದಿದ್ದರೆ ಹೋಗಲಿ, ಸಾಲದ ಮೇಲಿನ ಬಡ್ಡಿ ಮನ್ನಾ, ಸುಸ್ತಿ ಬಡ್ಡಿ ಮನ್ನಾ ಅಥವಾ ಕೋ ಆಪರೇಟಿವ್ ಇನ್ಸ್‌ಟಿಟ್ಯೂಶನ್‌ನಿಂದ ತೆಗೆದುಕೊಂಡಿರುವ ಹಣದ ಮೇಲಿನ ಬಡ್ಡಿ ಮನ್ನಾ ಮಾಡಬೇಕೆಂಬುದು; ಎರಡನೆಯದು ಇಂದಿನ ಮಾಹಿತಿ ತಂತ್ರಜ್ಞಾನ ಯುಗದ ಪರಿಣಾಮವಾಗಿ ರೈತರು, ರೈತರು ವಲಸೆ ಬಂದು, ಕೃಷಿ ಕೆಲಸಗಾರರು ಸಿಗದೆ, ವ್ಯವಸಾಯವನ್ನೆ ನಂಬಿ ಬದುಕಲು ಸಾಧ್ಯವಿಲ್ಲ ಎಂಬ ಭಾವನೆ ಬಂದಿರುವಲ್ಲಿ ಯುವಕರ ವಲಸೆ ತಡೆದು, ಕೃಷಿ ಕುಟುಂಬಗಳು ವ್ಯವಸ್ಥಿತವಾಗಿ ಬದುಕುವಂತೆ ಮಾಡುವ ಬಗ್ಗೆ ಸರ್ಕಾರ ಚಿಂತನೆ ಮಾಡಬೇಕು; ಕೃಷಿ ಇಲಾಖೆ ಅಧಿಕಾರಿಗಳು ಹಾಗು ಸರ್ಕಾರ ರೈತರ ರಕ್ಷಣೆ ಮಾಡುವಲ್ಲಿ ವಿಫಲವಾಗಿವೆ. ಆಂಧ್ರ, ಕೇರಳದಲ್ಲಿ ಭತ್ತ, ತೆಂಗು ಬೆಳೆಗಾರರಿಗೆ ಹಣಬಿಡುಗಡೆ ಮಾಡಿ ನಮ್ಮ ರಾಜ್ಯಕ್ಕೆ ಮಲತಾಯಿಧೋರಣೆಯನ್ನು ಕೇಂದ್ರವು ತೋರಿ, ನಮ್ಮ ಕೃಷಿ ಬೆಳವಣಿಗೆಗೆ ಕುಂಠಿತವಾಗಿದೆ. ಇದು ರಾಷ್ಟ್ರದ ಒಕ್ಕೂಟ ನಿರ್ವಹಣೆಗೆ ಸಾಧುವಲ್ಲ, ಎಂದರು.

**ಶ್ರೀ ಡಿ.ಎಚ್. ಶಂಕರ್ ಮೂರ್ತಿ** ಅವರು, ಕೇಂದ್ರ ಸರ್ಕಾರದ ಮೇಲೆ ಅಪಾದನೆ ಮಾಡಲು ವೇದಿಕೆ ಇಲ್ಲಿ ಆಗುವುದಾದರೆ ಚರ್ಚೆ ಮಾಡೋಣ; ಕೇಂದ್ರದ ಆಹಾರ ಸಚಿವರು ಭೇಟಿ ಮಾಡಿದಾಗ, ಖರೀದಿ ಮಾಡಿದ ಎಷ್ಟೆಲ್ಲ ಮೆಕ್ಕೆ ಜೋಳಕ್ಕೂ ಹಣ ಕೊಡುತ್ತೇವೆಂದು ಅವರು ಹೇಳಿರುವ ಅರ್ಥವೇನು? ಗಮನಿಸಬೇಕು ಎಂದರು **ಶ್ರೀ ಹೆಚ್.ಕೆ ಪಾಟೀಲ್** ಅವರು, ಕೇಂದ್ರ ಸರ್ಕಾರ ನಮ್ಮ ರಾಜ್ಯಕ್ಕೆ ಸಾಕಷ್ಟು

ಹಣಕಾಸಿನ ಸಹಾಯ ಮಾಡುತ್ತಿದೆ. ದಿಟ. ಆದರೆ ಪಂಜಾಬ್, ಹರಿಯಾಣದಲ್ಲಿ ಬೆಳೆಯುವ ಗೋಧಿ ಮತ್ತು ಭತ್ತದ ಪ್ರೊಕ್ಯೂರ್‌ಮೆಂಟ್‌ಗೆ ಲಾಸ್ಟ್‌ಡೇಟ್ ಇಲ್ಲದೆ ನಾವು ಬೆಳೆದಿರುವ ಗೋವಿನಜೋಳಕ್ಕೆ ಕೊನೆಯ ದಿನಾಂಕವನ್ನು ಘೋಷಿಸಿರುವಲ್ಲಿ ನಮಗೇನೆನ್ನಿಸುತ್ತದೆ? ಆ ಸಂದೇಶವನ್ನು ಕೇಂದ್ರ ಸರ್ಕಾರಕ್ಕೆ ಕಳುಹಿಸಲು ಶ್ರೀಜಗದೀಶ್ ಅವರು ಆಡಿರುವ ಮಾತಷ್ಟೆ, ಎಂದರು.

ಡಿ. ಎಚ್. ಶಂಕರ್ ಮೂರ್ತಿ ಅವರು, ನಮ್ಮ ರೈತರಿಗೆ ನೆರವಿನ ಪ್ರಶ್ನೆ ಬಂದಾಗ, ಪಕ್ಷಭೇದ ಮರೆತು ಕೇಂದ್ರದೊಡನೆ ಮಾತನಾಡುವುದು ಸರಿ. ಅನ್ಯಾಯವಾಗಿದ್ದರೆ ಚರ್ಚೆ ಮಾಡಬೇಕಾಗುತ್ತದೆ. ಕೇಂದ್ರ ಸರ್ಕಾರದಿಂದ ಬರಬೇಕಾದ ಸವಲತ್ತು, ಬೇರೆ ರಾಜ್ಯಗಳಿಗಿಂತ ಹೆಚ್ಚಿನ ಸೌಲಭ್ಯವನ್ನು ಪಡೆದುಕೊಂಡಿರುವುದರ ಜೊತೆಗೆ ಬರಲಿಲ್ಲವೆಂದರೂ ಅಷ್ಟಕ್ಕೇ ಮಲತಾಯಿ ಧೋರಣೆ ಎನ್ನುವುದು ಕಷ್ಟ ಎಂದರು.

ಶ್ರೀ ಡಿ.ಎಲ್ ಜಗದೀಶ್ ಅವರು, ಮತ್ತೆ ಮಾಡನಾಡುತ್ತ ಅಸಂಘಟಿತ ರೈತರ ವರ್ಗವನ್ನು ಸಮಸ್ಯೆಗೆ ಸಿಲುಕಿಸಬಾರದು; ಹಿಂದೆ ವಿದ್ಯುತ್ ಪಂಪ್ ಸೆಟ್ಟುಗಳಿಗೆ ಬಳಸುವ ವಿದ್ಯುಚ್ಛಕ್ತಿಗೆ ಸಬ್ಸಿಡಿಯನ್ನು ಕೊಟ್ಟಿತ್ತು. ಆ ಪಂಪ್ ಸೆಟ್ಟುಗಳಿಗೆ ಹಣಕಟ್ಟಲು ಕೊನೆ ದಿನಾಂಕವನ್ನು ವಿಸ್ತರಿಸಬೇಕು, ರೈತರ ಸಾಲದ ಬಡ್ಡಿ ಮನ್ನಾ, ಹಾಲಿ ವಿದ್ಯುತ್ ಪಂಪ್ ಸೆಟ್ಟುಗಳ ಮೇಲಿನ ಸಬ್ಸಿಡಿ ಮುಂದುವರಿಕೆ, ಅನಧಿಕೃತ ವಿದ್ಯುತ್ ಪಂಪ್ ಸೆಟ್ಟುಗಳಿಗೆ ನೀಡಿರುವ ಕಟ್ ಅಫ್‌ಡೇಟ್‌ನ ವಿಸ್ತರಣೆ ಇವನ್ನೆಲ್ಲ, ಮಾಡಿ ರೈತರ ಕಷ್ಟಗಳಿಗೆ ಸರ್ಕಾರ ಸ್ಪಂದಿಸ ಬೇಕೆಂದು ಹೇಳಿ ತಮ್ಮ ಮಾತನ್ನು ಮುಗಿಸಿದರು.

ಶ್ರೀ **ಪಿ. ರಾಮಯ್ಯ** ಅವರು ಮಾತನಾಡಿ, ಈ ವರೆಗೆ ಬಂದಂಥ ಸರ್ಕಾರಗಳು ಉತ್ಪಾದನೆಯ ಕಡೆ ಗಮನ ಹರಿಸಿದವೇ ಹೊರತು ಉತ್ಪಾದನೆಯ ಬಳಕೆಯ ರೀತಿಯತ್ತ ನಿಗಾವಹಿಸಲಿಲ್ಲ. ಆಗ್ರೋ ಬೇಸ್ಡ್ ಇಂಡಸ್ಟ್ರಿಗಳನ್ನು ರಾಜ್ಯದಲ್ಲಿ ಅಭಿವೃದ್ಧಿ ಮಾಡದಿದ್ದರೆ ಹಣ್ಣು ಬೆಳೆಗಾರರಾಲಿ ದಿನಸಿ –ಧಾನ್ಯ ಬೆಳೆಗಾರರಾಗಲಿ ಸಂಕಷ್ಟಕ್ಕೆ ಸಿಲುಕುತ್ತಿರಲಿಲ್ಲ. ಹೋದ ವರ್ಷ ಟೊಮೋಟೊ, ಈರುಳ್ಳಿ ಬೆಳೆ ಹೆಚ್ಚಿದ್ದು, ಈ ವರ್ಷ ಮೆಕ್ಕೆಜೋಳ, ತೆಂಗು ಬೆಳೆ ಹೆಚ್ಚಾಗಿ ರೈತ ಈ ವರ್ತುಲದಲ್ಲಿ ಸಿಕ್ಕಿ ಸಂಕಷ್ಟಕ್ಕೆ ಒಳಗಾಗಿದ್ದಾನೆ ಹೀಗಾಗಿ ರೈತನನ್ನು, ಇದರಿಂದ ಪಾರು ಮಾಡಲು ದೀರ್ಘಾವಧಿ ಯೋಜನೆ ಬೇಕು ಎಂದರು. ಮುಂದುವರಿದು ಎಪಿಎಂಸಿಗಳಿಂದ ಬಂದಿರುವ 21 ಕೋಟಿ ರೂ ಹಣ; ಸರ್ಕಾರದಿಂದ ಬರಲಿ 5 ಕೋಟಿ ನಿರೀಕ್ಷಿತ ಹಣ;

ಆಲೂಗೆಡ್ಡೆಯನ್ನು ಪ್ರೊಕ್ಯೂರ್ ಮಾಡಿ 15–20 ದಿನಗಳಾಗಿದ್ದು ಕೋಲ್ಡ್ ಸ್ಟೋರೇಜನಲ್ಲಿಟ್ಟಿದ್ದು ಬಳಕೆ ಆಗದಿದ್ದರೆ ಆಗುವ ಆರು ಕೋಟಿ ರೂ ನಷ್ಟ; ಅಂಕಿಅಂಶಗಳು ರೀತ್ಯಾ ಬಂದಿರುವ ಮೆಕ್ಕೆ ಜೋಳ ಲೆವಿ ರೈಸ್, ರಾಗಿ ಬಾಜರಾವನ್ನು ವಿತರಣೆ ಮಾಡುವ ಬಗ್ಗೆ ಡಬ್ಲ್ಯೂಟಿಓ ಅಥವಾ ವರ್ಲ್ಡ್ ಬ್ಯಾಂಕ್ ಮೂಲಕ ಶ್ರೀಮಂತ ರಾಷ್ಟ್ರಗಳು ನಮ್ಮ ಮೇಲೆ ಆರ್ಥಿಕ ಗುಲಾಮಗಿರಿ ಹೇರ ಹೊರಟಿರುವುದು; ವರ್ಲ್ಡ್ ಬ್ಯಾಂಕ್‌ನವರು ಹಾಕುವ ಷರತ್ತುಗಳಿಂದಾಗಿ ನಮಗೆ ಆಗುವ ಸಂಭವನೀಯ ಅನಾಹುತ; ಹೂಡುವ ಹಣದಿಂದ ಹೆಚ್ಚು ಪ್ರತಿಫಲ ನಿರೀಕ್ಷಿಸಬೇಕಾಗಿರುವುದು ಹಾಗು ಇದರ ಬಗ್ಗೆ ಇರಬೇಕಾದ ಎಚ್ಚರ, ಗ್ರೀನ್ ರೆವೆಲ್ಯೂಷನ್ ಅಂತ ಹೇಳಿ ಅಲ್ಲಿಂದ ಹಾರ್ಟಿಕಲ್ಚರ್ ಕ್ರಾಪ್ ಕಡೆ ಹೋಗಿ ಹಣ ಹೆಚ್ಚು ಸಿಗುತ್ತದೆ ಎಂದು ರೈತನ ಮನಸ್ಸನ್ನು ಆ ಕಡೆ ಜಾಸ್ತಿ ತಿರುಗಿಸಿರುವ ಕಾರಣ ಅವನು ಕಮರ್ಷಿಯಲ್ ಕ್ರಾಪ್ಸ್ ಕಡೆಗೆ ತಿರುಗಿರುವುದು; ಆವರ್ತನಿಧಿಯನ್ನು ಮತ್ತೆ ಮತ್ತೆ ಜಾಸ್ತಿ ಮಾಡಿಕೊಂಡೇ ಹೋಗಬೇಕಿರುವುದು; ರೈತರು ಒಂದು ಲಕ್ಷ ಟನ್ ಕ್ವಿಂಟಾಲ್‌ನಷ್ಟು ಬೆಳೆಯನ್ನು ತಂದು ಹಾಕಿಕೊಂಡು ಕಾಯುತ್ತ ಕುಳಿತಿರುವುದು ಹಾಗು ಸರ್ಕಾರ ಅವರಿಗೆ ಆಶ್ವಾಸನೆ ಕೊಟ್ಟು ಪರಿಸ್ಥಿತಿ ಸುಧಾರಿಸುವುದು, ಕುರಿತೆಲ್ಲ ಹೇಳಿ ಮಾತು ಮುಕ್ತಾಯ ಮಾಡಿದರು.

2.3.2001 ರಂದು ನಡೆದ ವಿಧಾನ ಪರಿಷತ್ತಿನ ನಡವಳಿಕೆಗಳಲ್ಲಿ[4] ಕೃಷಿ ಉತ್ಪನ್ನಗಳ ಬೆಲೆ ತೀವ್ರ ಕುಸಿತ, ರೈತರ ಹತಾಶೆಗೆ ಸಾಂತ್ವನ ಕ್ರಮಗಳ ಬಗ್ಗೆ ಬಂದ ಚರ್ಚೆಯಲ್ಲಿ **ಡಾ. ಎಂ ಆರ್. ತಂಗಾ** ಅವರು ಭಾಗವಹಿಸುತ್ತ: ಮಾಧ್ಯಮದಲ್ಲಿ ಎಲೆಕ್ಟ್ರಾನಿಕ್ ಮೀಡಿಯಾ, ಪ್ರಿಂಟ್ ಮೀಡಿಯ, ರಾಜಕಾರಣಿಗಳ ಮಾತಿನಲ್ಲಿ ಸದನದ ಶಾಸಕರ ಮಾತಿನಲ್ಲಿ, ಪಕ್ಷಾತೀತವಾಗಿ ರೈತರು ಸಂಕಷ್ಟದಲ್ಲಿದ್ದು ನೆರವಾಗಬೇಕೆಂದು ಹೇಳಿರುವುದು; ಪ್ಲಾನಿಂಗ್ ಕಮಿಷನರ್‌ಗಳ ತಪ್ಪುಗಳಿಂದ, ಹೊರರಾಷ್ಟ್ರಗಳ ಅನುಕರಣೆಯನ್ನು ನಾವು ಪ್ರಾರಂಭಿಸಿದಾಗಿನಿಂದ ರೈತರ ಹಿತಕ್ಕೆ ಕುಂದು ಬಂದಿರುವುದು; ಕೃಷಿಯಿಂದ ಗ್ರಾಮಾಂತರ ಪ್ರದೇಶದಲ್ಲಿ 100 ಕ್ಕೆ 70ರಷ್ಟು ಉದ್ಯೋಗ ಸಿಗುವ ಬಗ್ಗೆ ಸದನದ ಸದಸ್ಯರೆಲ್ಲರ ಬಾಯಿಂದ ಬಂದಿರುವ ವಿಷಯ; ನೀರು ಇದ್ದರು ಎಲ್ಲಾ ರೈತಾಪಿ ಜನರ ಹೊಲಕ್ಕೆ ನೀರು ಕೊಡಲಾಗಿಲ್ಲದಿರುವುದು; ಸರ್ಕಾರದಿಂದ ಬ್ಯಾರೇಜುಗಳ ಪೂರ್ಣಗೊಳಿಸಿ ಭೀಮಾನದಿಗೆ ಸಂಬಂಧಿಸಿದಂತೆ ನೀರೊದಗಿಸಲು ಯಾವ ಸರ್ಕಾರದಿಂದಲೂ ಸಾಧ್ಯವಾಗದಿರುವುದು; ಗೊಬ್ಬರದ

4. ವಿಧಾನ ಪರಿಷತ್ತಿನ ನಡವಳಿಕೆಗಳು; ಸಂಪುಟ 300., (1–5), (2.3.2001), ಪು. 696–99)

ಒದಗಣೆ ದೃಷ್ಟಿಯಿಂದ, ಪಾಶ್ಚಿಮಾತ್ಯದೇಶದಲ್ಲಿ ಬರ ಇರುವುದರಿಂದ ಸಾವಯವ ಕೃಷಿಗೆ ಅವಕಾಶವಾಗದಿರುವುದು; ಕೃಷಿ ಮತ್ತು ಕೋಲಾ ಸಂಬಂಧ ಜಾಹೀರಾತುಗಳ ಬಗ್ಗೆ ಎಚ್ಚರ, ಬೇಕಿರುವುದು, ಶಿವಮೊಗ್ಗ ಜಿಲ್ಲೆಯಲ್ಲಿ ಸಾವಯವ ಕೃಷಿ ಮಾಡಿ ಅದ್ಭುತ ಫಲಿತಾಂಶ ಪಡೆದಿರುವುದು, ಕುರಿತೆಲ್ಲ ಮಾತನಾಡಿದರು.

7.3.2001ರ ವಿಧಾನ ಪರಿಷತ್ತಿನ ಅಧಿವೇಶನದಲ್ಲಿ[5] ಕೃಷಿ ಉತ್ಪನ್ನಗಳ ಬೆಲೆಯ ತೀವ್ರ ಕುಸಿತ ರೈತರ ಹತಾಶೆಗೆ ಸಾಂತ್ವನ ಪ್ರಕ್ರಿಯೆಗೆ ಸಂಬಂಧಿಸಿದ ಚರ್ಚೆಯಲ್ಲಿ ಮುಂದುವರಿದಾಗ ಮಾತನಾಡಿದ ಶ್ರೀ **ಕೆ.ಎನ್. ರಾಜಣ್ಣ** ಅವರು ರೈತರು ಬೆಳೆಯುವ ಉತ್ಪನ್ನಗಳಿಗೆ ಸರಿಯಾದ ಬೆಲೆ ದೊರೆಯುತ್ತಿಲ್ಲ ಎಂಬ ಸರ್ವೇ ಸಾಮಾನ್ಯ ದೂರು ಬೆಲೆ ಕುಸಿತದಿಂದಾಗುವ ಸಂಕಷ್ಟ; ರೈತನು ಬೆಳೆಯುವ ಬೆಳೆಗೆ ತಗಲುವ ವೆಚ್ಚವನ್ನು ಕಡಿಮೆ ಮಾಡುವಿಕೆ; ಬಳಸುವ ಗೊಬ್ಬರಕ್ಕೆ ತಗಲುವ ಹಣದ ಮೇಲೆ ಬೀಳುವ ಬಡ್ಡಿ ಇತ್ಯಾದಿಯಾಗಿ ರೈತನಿಗೆ ತಗಲುವ ಇನ್ ಪುಟ್ ಅನ್ನು ಕಡಿಮೆ ದರದಲ್ಲಿ ಒದಗಿಸುವಿಕೆ; ಬೆಳೆಯಲು ಮಾಡುವ ವೆಚ್ಚ ಅಧಿಕವಾಗಿ ಮಾರುಕಟ್ಟೆಯಲ್ಲಿ ಅನುಗುಣ ಬೆಲೆ ಸಿಗದಿರುವುದು; ಕೃಷಿ ಉದ್ದೇಶಕ್ಕೆ ಬಳಸುವಂಥ ಹಣವನ್ನು ನಬಾರ್ಡ್ 4 ಪರ್ಸೆಂಟ್‌ನಂತೆ ಬಡ್ಡಿ ದರ ನಿಗದಿ ಮಾಡಿದ್ದರೂ ಅದು ವಿವಿಧ ಸಂಸ್ಥೆಗಳ ಮೂಲಕ 16 ಪರ್ಸೆಂಟ್‌ನಂತೆ ರೈತನಿಗೆ ತಲುಪುವುದರ ಬದಲು ಕಡಿಮೆ ದರದ ಬಡ್ಡಿಯಲ್ಲಿ ದೊರೆಯಬೇಕಾಗಿರುವುದು; ರಾಸಾಯನಿಕ ಗೊಬ್ಬರದ ವ್ಯವಸ್ಥೆ ಬದಲಿಸಿ ಮಧ್ಯವರ್ತಿಗಳ ಶೋಷಣೆ ತಪ್ಪಿಸುವುದು; ಉತ್ಪಾದನಾ ಹೆಚ್ಚಳವನ್ನು ಕಡಿಮೆ ಬಂಡವಾಳದಿಂದ ಮಾಡುವ ವಿಧಾನವನ್ನು ರೈತರಿಗೆ ಮಾರ್ಗದರ್ಶನ ಮಾಡುವುದು; ಕಳಪೆ ಗುಣಮಟ್ಟದ ಕ್ರಿಮಿನಾಶಕ (ರಾಸಾಯನಿಕ) ಬರದಂತೆ ನೋಡಿಕೊಳ್ಳುವುದು; ಕೊಬ್ಬರಿಯನ್ನು ಕೊಳ್ಳುವಂಥ ನ್ಯಾಫೆಡ್ ಅಧಿಕಾರಿಗಳ Liason ಸರಿ ಇಲ್ಲದಿರುವುದು; ಎಫ್. ಸಿ. ಐ ನವರು ಮೆಕ್ಕೆ ಜೋಳವನ್ನು ಖರೀದಿಸುವಲ್ಲಿ ಸರ್ಕಾರಕ್ಕೆ ಯಾವ ಹತೋಟಿ ಇಲ್ಲದ ಕಾರಣ ಇಂತಿಷ್ಟು ಪ್ರೊಕ್ಯೂರ್ ಮಾಡಲೇಬೇಕೆಂಬ ನಿಬಂಧನೆ ಹೇರದಿದ್ದರೆ ಖರೀದಿ ಕಡಿಮೆಯಾಗಿ ರೈತರ ಅಸಮಾಧಾನ ಸ್ಫೋಟವಾಗುವ ಸಂಭವ; 225 ಲಕ್ಷ ಕ್ವಿಂಟಾಲ್ ಮೆಕ್ಕೆ ಜೋಳ ಬಂದಿರುವಲ್ಲಿ ಎಫ್. ಸಿ ಐ ನವರು ಕೇವಲ 20 ಲಕ್ಷ ಕ್ವಿಂಟಾಲ್ ಮಾತ್ರ ಖರೀದಿ ಮಾಡಿರುವುದು ಅದು ಡಿಸ್ಟ್ರಸ್ ಸೇಲ್ ಎಂದು ರೈತರು ಉಂಟಾಗುವ ಭಾವನೆ ಕೊಬ್ಬರಿ ಕೊಳ್ಳತಕ್ಕ ನ್ಯಾಫೆಡ್‌ವತಿಯಿಂದ ಕ್ವಿಂಟಾಲ್‌ಗೆ 3500 ರೂ ಇರುವುದನ್ನು

5. ವಿಧಾನ ಪರಿಷತ್ತಿನ ನಡವಳಿಕೆಗಳು; ಸಂಪುಟ 301 (1–2) ಭಾಗ–I (7–3–2001) ಪು.188–201)

ರೈತರ ಹೆಸರಿನಲ್ಲಿ ವರ್ತಕರು ದುರ್ಲಾಭ ಮಾಡಿಕೊಳ್ಳುತ್ತಿರುವುದು; ರೈತರಿಗೆ ಸರಿಯಾದ ಗುಣಮಟ್ಟದ ವಿದ್ಯುಚ್ಛಕ್ತಿ ಪೂರೈಕೆಯಾಗದಿರುವುದು; ಬಾಕಿ ಉಳಿಸಿಕೊಂಡ ರೈತರ ವಿದ್ಯುಚ್ಛಕ್ತಿ ಬಿಲ್ ವಸೂಲಾತಿಗೆ ಬಳಸುವ ಉಗ್ರಕ್ರಮಗಳಾಗಿ 24% ಬಡ್ಡಿಹಾಕಿ ರೈತರಿಗೆ ಡಿಮ್ಯಾಂಡ್ ನೋಟೀಸ್ ಕಳುಹಿಸಿರುವುದು ಕಾಲಾವಧಿಯೊಳಗೆ ಕಟ್ಟಿದರೆ ಬಡ್ಡಿ ಮನ್ನಾ ಮಾಡುವ ಮಾಹಿತಿಯೆ ರೈತರಿಗೆ ಗೊತ್ತಿಲ್ಲದಿರುವುದು; ಸಹಕಾರಿ ಕ್ಷೇತ್ರದಲ್ಲಿರುವ ಹಾಗೂ ಬೇರೆ ಬೇರೆ ವಲಯದಲ್ಲಿರುವ ಸುಮಾರು ಒಟ್ಟು 35 ಸಕ್ಕರೆ ಕಾರ್ಖಾನೆಗಳ ಸಕ್ಕರೆ ಉತ್ಪಾದನೆಯಿಂದ ಬರುವ ತೆರಿಗೆಗಳನ್ನು ಗಮನದಲ್ಲಿಟ್ಟು ಕೊಳ್ಳುವುದು ಹಾಗೂ ಅದರಲ್ಲಿ ರೈತರಿಗೆ 1%,2% ಸೆಸ್ ಅನ್ನು ಲೆವ್ವಿ ಮಾಡಿ ವಿದ್ಯುಚ್ಛಕ್ತಿ ಮಂಡಳಿಗೆ ಭರಿಸುವ ಕಾರ್ಯಕ್ರಮ ಹಾಕಿಕೊಳ್ಳುವುದು; ರೈತರ ಐ ಪಿ ಸೆಟ್‌ಗ್ ವಿದ್ಯುತ್ ಬಾಕಿ ತುಂಬಲು ಸಮಯ ಕೊಡುವುದು; ಟ್ರಾನ್ಸ್‌ಮಿಷನ್ ಮತ್ತು ಡಿಸ್ಟ್ರಿಬ್ಯೂಷನ್ ಲಾಸ್ ಎನ್ನುವುದು 16ರಿಂದ 38% ಗೆ ಹೋಗಿ ಒಂದು ಸಾವಿರ ಕೋಟಿ ನಷ್ಟ ಎಂದರೆ ಆ ಲೂಪ್ ಹೋಲ್‌ನೆಲ್ಲ ಸರ್ಕಾರ ಪ್ಲಗ್ ಮಾಡಬೇಕಿರುವುದು; ಅದರಿಂದ ಹಣ ಉಳಿತಾಯ ಮಾಡಿ ಕೆ. ಇ. ಬಿಯನ್ನು ಲಾಭದಾಯಕ ಮಾಡುವ ದಿಸೆಯಲ್ಲಿ ಯೋಚಿಸುವುದು ; ಅದು ಬಿಟ್ಟು 24% 40%, ಪುಕ್ಕಟೆ ವಿದ್ಯುತ್ ಕೊಡುವುದರಿಂದ ಲಾಸ್ ಆಗುತ್ತದೆ ಎಂಬ ಅಭಿಪ್ರಾಯವನ್ನು ಸರ್ಕಾರ ತಳೆಯುವ ಅಗತ್ಯವಿಲ್ಲದಿರುವುದು; ಬೆಳೆ ವಿಮೆಗೆ ಶೇ 25ಕ್ಕಿಂತ ಕಡಿಮೆ ಬೆಳೆ ಆಗಿದ್ದರೆ ಮಾತ್ರ ಪರಿಹಾರ ಎಂಬ ಇನ್ಸೂರೆನ್ಸ್ ಆಕ್ಟ್ ಅನ್ನು ತಿದ್ದುಪಡಿ ಮಾಡಲು ಕೇಂದ್ರಕ್ಕೆ ರಾಜ್ಯಸರ್ಕಾರ ಇತ್ತಾಯ ಮಾಡಬೇಕಿರುವುದು; ಕೃಷಿ ವಿಸ್ತರಣಾಧಿಕಾರಿಗಳಿಗೆ ರೈತರಿಗೆ ಸೂಕ್ತ ಮಾರ್ಗದರ್ಶನ ದೊರೆಯದಿರುವುದು; ಅಡಿಕೆ ಸಂಬಂಧದಲ್ಲಿ ಕಾಂಪ್ಕೋ ಅನುಭವಿಸಬಹುದಾದ 40 ಕೋಟಿ ರೂ. ನಷ್ಟ ಅಡಿಕೆ ಮೇಲೆ ಹಾಕಿದಂಥ ಇಂಪೋರ್ಟ ಡೂಟಿ ತಪ್ಪಿಸಿಕೊಳ್ಳಲು ಡ್ರೈಫ್ರೂಟ್ ಹೆಸರಿನಲ್ಲಿ ಆಮದು ಮಾಡಿಕೊಳ್ಳುತ್ತಿರುವ ಕಾರಣ ಅಡಿಕೆ ಮೇಲಿನ ರೇಟು ಏರು ಪೇರಾಗಿತ್ತಿರುವುದು ಕುರಿತೆಲ್ಲ ಹೇಳಿದರು.

ಶ್ರೀ ಕೆ. ವಿನಯಚಂದ್ರ ಅವರು ಈ ಸಂದರ್ಭದಲ್ಲಿ ಮಾತನಾಡಿ : ಕಾಂಪ್ಕೋ ಕುರಿತಂತೆ ತಪ್ಪು ಮಾಹಿತಿ ವ್ಯಕ್ತವಾಗಿದೆ ಎಂದು ಹೇಳುತ್ತ ಕಾಂಪ್ಕೋ ಒಂದು ಲೋಡ್ ಅಡಿಕೆ ಕಳುಹಿಸಲು ಒಟ್ಟು 6 ಪರ್ಸೆಂಟ್ ಟ್ಯಾಕ್ಸ್ ಹಾಕುವುದು ಎಂದರೆ ಒಂದು ಲೋಡಿನ ಮೇಲೆ 30 ಸಾವಿರ ರೂಗಳನ್ನು ಸರ್ಕಾರಕ್ಕೆ ಕ್ಯಾಂಪ್ಕೋ ಹೆಚ್ಚುವರಿಯಾಗಿ ಕೊಡುತ್ತಿರುವುದಾಗಿದೆ; 6 ಪರ್ಸೆಂಟ್ ಟ್ಯಾಕ್ಸ್ ಅನ್ನು ಮನ್ನಾಮಾಡಿ ರೇಟ್ ಬರುವವರಿಗೆ ಅಡಿಕೆಯನ್ನು ಇಟ್ಟಿರಬೇಕು ಎಂದರು.

ಶ್ರೀ ಕೆ. ಎಸ್ ರಾಜಣ್ಣ ಅವರು ಮಾತು ಮುಂದುರಿವಸಿ ಅಸಲನ್ನು ಮನ್ನಾ ಮಾಡಿದಾಗ ನಬಾರ್ಡ್‌ನಿಂದ ಪುನಃ ಸಹಾಯ ಪಡೆಯುವಂಥ ಪರಿಸ್ಥಿತಿ ಬರದಂತೆ ಸರ್ಕಾರದಿಂದ ಕನಿಷ್ಠ ಬಡ್ಡಿಯನ್ನು ರೈತರಿಗೆ ಭರಿಸಿಕೊಟ್ಟರೆ ಸರ್ಕಾರ ರೈತರ ನೆರವಿಗೆ ಬಂದಿದೆ ಎಂಬ ಭರವಸೆ ಮೂಡುವಂತೆ ಮಾಡಬೇಕಿರುವುದು; ರೈತರು ಎಪಿಎಂಸಿ ಮಾರಾಟ ಅಥವಾ ಖರೀದಿಕೇಂದ್ರಗಳಲ್ಲಿ ಕಾನೂನನ್ನು ಕೈಗೆತ್ತಿ ಕೊಳ್ಳವಂಥ ವಿಕೋಪಕ್ಕೆ ಹೋಗುವುದನ್ನು ತಪ್ಪಿಸಿ ರೈತರ ರಕ್ಷಣೆಗೆ ಹೋಗಬೇಕಿರುವುದು; ರೈತರ ಆತ್ಮಹತ್ಯೆಯ ಕುಟುಂಬದವರಿಗೆ ಕೊಡುವ ಪರಿಹಾರವನ್ನು ಪತ್ರಿಕೆಗಳಲ್ಲಿ ಚಿತ್ರಸಹಿತ ಹಾಕುವಂಥ ದುರ್ದೈವದ ಸಂಗತಿ; ರೈತ ಮಾರುಕಟ್ಟೆಗೆ ಒಯ್ದು ಮಾಲಿಗೆ ತೃಪ್ತಿಕರ ಬೆಲೆ ದೊರಕದ ಸಂದರ್ಭದಲ್ಲಿ ಮಾರಾಟ ಮಾಡದೇ ಅಲ್ಲಿಯೇ ಇಟ್ಟುಕೊಳ್ಳುವಂತೆ ಸಂಸ್ಥೆಗಳಿಗೆ, ಸಾಲಕೊಟ್ಟು ರೈತರಿಗೆ ಅಡವುಸಾಲ ಕೊಟ್ಟು ರೈತರ ರಕ್ಷಣೆಗೆ ಹೋಗುವುದು; ಇಲ್ಲವೆಂದರೆ ಟೊಮೋಟೊ ತಂದ ರೈತನಿಗೆ ಸರಿಯಾದ ಬೆಲೆ ದೊರಕದೆ ರಸ್ತೆಯಲ್ಲಿ ಚೆಲ್ಲಿ ಟ್ರಾಕ್ಟರ್ ಓಡಿಸುವ ದೃಶ್ಯಗಳು; ಇದಕ್ಕಾಗಿ ಕೋಲ್ಡ್ ಸ್ಟೋರೇಜುಗಳನ್ನು ಕಟ್ಟುವವರಿಗೆ ಸಬ್ಸಿಡಿಯನ್ನು ಕೊಡುವುದು; ವಿದ್ಯುಚ್ಛಕ್ತಿಯನ್ನು ಕೂಡ ಸಬ್ಸಿಡಿದರದಲ್ಲಿ ಕೊಡುವಂಥದು; ರೈತನ ಮುಖಸ್ತುತಿಗೆಂದು ಪ್ರಯತ್ನ ಮಾಡದಿರುವುದು ಕುರಿತೆಲ್ಲ ಹೇಳಿದರು.

**ಶ್ರೀ ಜಿ. ಮಧುಸೂದನ್** ಅವರು ಎ.ಪಿ.ಎಂ.ಸಿ ಯಾರ್ಡ್‌ನಲ್ಲಿಯ ಕೋಲ್ಡ್ ಸ್ಟೋರೇಜ್ ಬಗ್ಗೆ ಹೇಳಿ, ನಮ್ಮಲ್ಲಿಯ ಕೋಲ್ಡ್ ಸ್ಟೋರೇಜ್ ಟೆಕ್ನಾಲಜಿ ಬೇರೆ ರೀತಿಯ ದವಸಧಾನ್ಯ, ಹಣ್ಣು ಹಂಪಲು ತರಕಾರಿಗೆ ಬಳಕೆಯಾಗುವಂಥ ಟೆಕ್ನಾಲಜಿ ಅಲ್ಲದಿರುವುದು, ಕೋಲ್ಡ್ ಸ್ಟೋರೇಜನಲ್ಲಿಟ್ಟ ತರಕಾರಿಯನ್ನು ಹೊರಗೆತೆಗೆದ 2 ಗಂಟೆಯೊಳಗೆ ಮಾರಾಟ ಮಾಡಬೇಕಿರುವ ತಾಂತ್ರಿಕ ಸಮಸ್ಯೆ; ಇಲ್ಲವಾದರೆ ಅವು ಬತ್ತಿ ಹೋಗುವ ಸಂಗತಿ; ಅಂತಾಗಿ ಬಹಳ ಹೈಟೆಕ್ ಕೋಲ್ಡ್ ಸ್ಟೋರೇಜನ್ನು ಕೃಷಿ ಉತ್ಪನ್ನಕ್ಕನುಗುಣವಾಗಿ ಟೆಂಪರೇಚರ್ ನಿರ್ವಹಣೆಗೊಳ್ಳುವಂಥದ್ದು ಅಗತ್ಯವಿರುವುದು, ಅದಕ್ಕೆ ತಗಲುವ ವೆಚ್ಚ ಕುರಿತೆಲ್ಲ ಚರ್ಚೆ ಆಗಬೇಕಿದೆ ಎಂದರು. ಇದಕ್ಕೆ ವೈಸ್ ಚೇರ್ಮನ್ ಅವರು ಮಾತನಾಡುತ್ತ: ಕೋಲ್ಡ್ ಸ್ಟೋರೇಜ್ಗೆ ದೊಡ್ಡ ಬಂಡವಾಳದ ಅಗತ್ಯವಿಲ್ಲ. ನಮ್ಮ ರೈತರಿಗೆ ಅದರ ಅಭ್ಯಾಸವಾದರೆ ಬೆಳೆದಂಥ ಪದಾರ್ಥಗಳನ್ನು ಅಲ್ಲಿ ಇಡಲಿಕ್ಕೆ ಸಾಧ್ಯವಾಗುತ್ತದೆ. ಸಾಂಪ್ರದಾಯಿಕ ಪದಾರ್ಥಗಳನ್ನು ಸಹಾ ಇಟ್ಟುಕೊಳ್ಳಲು ಬೇಕಾದ ತಂತ್ರಜ್ಞಾನವನ್ನು ಮೈಸೂರಿನ ಸಿ.ಎಫ್.ಟಿ ಆರ್.ಐ ನವರೇ ಕೊಡಬಲ್ಲರು ಎಂದರು.

ಶ್ರೀ **ಎಸ್.ಆರ್.ಪಾಟೀಲ್** ಅವರು ಬಾಗಲಕೋಟೆಯಲ್ಲಿರುವ 1 ಸಾವಿರ ಟನ್ ಸಾಮರ್ಥ್ಯದ ಕೋಲ್ಡ್‌ಸ್ಟೋರೇಜ್ ಇರುವುದು; ಕೋಲ್ಡ್‌ಸ್ಟೋರೇಜ್‌ನಲ್ಲಿ ಪ್ರಿಕೂಲಿಂಗ್ ಯೂನಿಟ್ ಆಪರೇಟ್ ಮಾಡಿ, ಪದಾರ್ಥಗಳಿಗನುಗುಣವಾಗಿ ಟೆಂಪರೇಚರ್ ರೆಡ್ಯೂಸ್‌ಮಾಡಿ ಕೋಲ್ಡ್ ಸ್ಟೋರೇಜ್‌ನಲ್ಲಿ ಇಡಬೇಕು. ಅದಕ್ಕೆ ಕೋಲ್ಡ್ ಚೈನ್ ಬೇಕು. ರಿಫ್ರಿಜರೇಟರ್ ವ್ಯಾನ್‌ಬೇಕು. ಲಂಡನ್ನಿನಲ್ಲಿ ಗ್ರಾಹಕರು ಕೊಳ್ಳುವವರೆವಿಗೆ ಪದಾರ್ಥಗಳನ್ನು ಕೋಲ್ಡ್‌ಸ್ಟೋರೇಜ್ನನಲ್ಲಿಡಲಾಗುತ್ತದೆ. ಈ ಬಗ್ಗೆ ವೈಸ್ ಛೇರ್ಮನರು ಮಾತನಾಡಿ ಕೃಷಿ ಇಲಾಖೆಯು ರೆಫ್ರಿಜರೇಟರ್‌ನಲ್ಲಿಡಲಾಗುತ್ತದೆ. ಈ ಬಗ್ಗೆ ವೈಸ್ ಛೇರ್ಮನರು ಮಾತನಾಡಿ ಕೃಷಿ ಇಲಾಖೆಯು ರೆಫ್ರಿಜರೇಟರ್ ವ್ಯಾನ್‌ಕೊಳ್ಳುವವರಿಗೆ 2 ಲಕ್ಷರೂಗಳ ಸಬ್ಸಿಡಿ ಕೊಡುತ್ತಿದ್ದರೂ ಯಾರೂ ಅದರ ಉಪಯೋಗವನ್ನು ಪಡೆದುಕೊಳ್ಳದಿರುವ ಬಗ್ಗೆ ಮಾನ್ಯ ರಾಜಣ್ಣನವರು ಪ್ರಸ್ತಾಪಿಸಿದ್ದಾರೆ, ಎಂದರು. ಶ್ರೀ **ಕೆ.ಎನ್.ರಾಜಣ್ಣನವರು,** ಕೃಷಿಕ್ಷೇತ್ರದಲ್ಲಿ ಲಭ್ಯವಿರುವ ಸೌಲಭ್ಯಗಳ ಬಗ್ಗೆ ಮಾಹಿತಿಯನ್ನು ಸರ್ಕಾರ ರೈತರಿಗೆ ನೀಡುತ್ತಿಲ್ಲ ಎನ್ನುತ್ತ ಗ್ರಾಮಾಂತರ ಪ್ರದೇಶದವರಿಗೆ ಕೋಲ್ಡ್ ಸ್ಟೋರೇಜ್ ಮತ್ತು ಮಾರುಕಟ್ಟೆ ವ್ಯವಸ್ಥೆ ಬಗ್ಗೆ ಸಹಾ ಹೆಚ್ಚು ಮಾಹಿತಿ ಒದಗಿಸುವಲ್ಲಿ ವೈಫಲ್ಯವಿರುವುದು, ಖಾಸಗಿಯವರು ಕೋಲ್ಡ್‌ಸ್ಟೋರೇಜ್ ವ್ಯವಸ್ಥೆ ಮಾಡಿರುವಂತೆ ಸಹಕಾರ ಸಂಘಗಳು ಮಾಡಬೇಕಾದ ಪ್ರಯತ್ನ; ಫುಡ್ ಪ್ರೊಸೆಸ್ ಮಾಡಿ ಸಂಗ್ರಹ ಮಾಡಬೇಕೆಂಬ ಕಲ್ಪನೆಯನ್ನು ರೈತನಿಗೆ ಕೊಡಬೇಕಾದ ಅಗತ್ಯ; ಹಾಗು ಮಾಡಬೇಕಾದ ಮಾರ್ಗದರ್ಶನ; ಉತ್ಪಾದನಾ ವೆಚ್ಚ ಕಡಿಮೆಯಾಗಿ, ಮಧ್ಯವರ್ತಿಗಳ ಹಾವಳಿ ತಪ್ಪಿಸಿ ಬೆಳೆದ ಬೆಳೆಗೆ ಸೂಕ್ತ ಬೆಲೆ ಲಭ್ಯವಾಗುವಿಕೆ, ಸಕಾಲಕ್ಕೆ ರೈತನಿಗೆ ಮಾಹಿತಿ ಒದಗಿಸಿ ವಿವಿಧ ಟ್ಯಾಕ್ಸ್‌ಗಳ ತಾತ್ಕಾಲಿಕ ನಿಲುಗಡೆ ವಿದ್ಯುತ್ ಶುಲ್ಕದ ಮೇಲಿನ ಬಡ್ಡಿ ಮನ್ನಾ ಇತ್ಯಾದಿಗಳೆಲ್ಲ ಆಗಬೇಕಾದ ಬಗ್ಗೆ ಹೇಳಿದರು.

ಶ್ರೀ **ಕೆ.ವಿ.ಸುಬ್ಬಾರೆಡ್ಡಿ** ಅವರು, ಕೋಲಾರ ಪ್ರದೇಶದಲ್ಲಿ ಕೊಳವೆ ಬಾವಿಗೆ ಲೈನ್ ಹಾಕಿ ಇತರೆ ವ್ಯವಸ್ಥೆಗಳಾಗಿದ್ದರೂ ಸರ್ವೀಸ್‌ಕೊಟ್ಟಿಲ್ಲದಿರುವುದು; ರೈತರ ಬಳಿ ಹಣ ಕಟ್ಟಿಸಿಕೊಂಡೂ ಸರ್ವಿಸ್‌ಕೊಡದೆ ಅಕ್ರಮವೆನ್ನುತ್ತಿರುವುದು; ಅಕ್ರಮ ಪಂಪ್‌ಸೆಟ್‌ಅನ್ನು ಸಕ್ರಮ ಮಾಡಲು ಆರ್ಡರ್ ಆಗಿರುವುದು; ವಾಸ್ತವವಾಗಿ ಈ ಅಕ್ರಮಕ್ಕೆ ಗುತ್ತಿಗೆದಾರರು, ಅಧಿಕಾರಿಗಳೇ ಕಾರಣರಾಗಿರುವುದು; ಯಾವ ವಾಣಿಜ್ಯ ಬೆಳೆಗೂ ಸರಿಯಾದ ಬೆಲೆ ಇಲ್ಲದೆ ಬೆಲೆ ತೀವ್ರ ಕುಸಿತವಾಗಿರುವುದು; ವಿದ್ಯುತ್ ದರದ ಮರುಪಾವತಿಯ ಅವಧಿ ವಿಸ್ತರಣೆ ಹಾಗೂ ವಿದ್ಯುತ್ ದರಕ್ಕೆ ನೀಡಲಾಗುತ್ತಿರುವ

ಬಡ್ಡಿ ವಿನಾಯಿತಿಯ ಮುಂದುವರಿಕೆ; ಮರುಪಾವತಿಯನ್ನು ಕಂತುಗಳ ರೂಪದಲ್ಲಿ ನೀಡಲು ಅವಕಾಶ; ಕೂಡಲೇ ಮರುಪಾವತಿ ಮಾಡಲು ಹೇಳಿ ವಿದ್ಯುತ್ ಸಂಪರ್ಕವನ್ನು ಕಡಿದು ಹಾಕಿದರೆ ನೂರಾರು ರೈತರು ಆತ್ಮಹತ್ಯೆ ಮಾಡಿಕೊಳ್ಳುವಂಥ ಪ್ರಸಂಗ ಇತ್ಯಾದಿ ಕುರಿತು ಮಾತನಾಡಿದರು. ಶ್ರೀ ಕೆ.ಎನ್.ರಾಜಣ್ಣನವರು ರೈತರಿಂದ ಹಣಪಡೆದು ಇಲಾಖೆಯವರೇ ವಿದ್ಯುತ್ ಕಂಬತಂತಿ, ವೈರ್‌ಗಳನ್ನು ಸರಬರಾಜು ಮಾಡಿಯೂ ಬರೆದುಕೊಳ್ಳುವಾಗ ಅನಧಿಕೃತ ವಿದ್ಯುತ್ ಸಂಪರ್ಕವಾಗಿದೆ ಎಂದು ಬರೆದುಕೊಂಡು, ಅಕ್ರಮ–ಸಕ್ರಮ ವಿಚಾರದಲ್ಲಿ ರೈತರನ್ನು ಕಳ್ಳರನ್ನಾಗಿ ಮಾಡುವುದು ಖಂಡನೀಯ ಎಂದರು.

8.3.2001ರ ವಿಧಾನ ಪರಿಷತ್ ಅಧಿವೇಶನದಲ್ಲಿ[6] ಕೃಷಿ ಉತ್ಪನ್ನಗಳ ಬೆಲೆ ಕುಸಿತ, ಅಗತ್ಯ ಕ್ರಮಗಳ ಕುರಿತು ನಡೆದ ಚರ್ಚೆಯಲ್ಲಿ **ಶ್ರೀ ಬಸವರಾಜ ಹೊರಟ್ಟಿಯವರು** ಮಾತನಾಡುತ್ತ; ಕೇಂದ್ರವಾಗಲಿ, ರಾಜ್ಯ ಸರ್ಕಾರವಾಗಲಿ, ರೈತರ ಸಮಸ್ಯೆಗಳನ್ನು ಪರಿಹರಿಸಬೇಕಾದ್ದು ಅವರ ಪರಮ ಕರ್ತವ್ಯವಾಗಿರುವುದು, ಮೆಕ್ಕೆ ಜೋಳದ ಖರೀದಿಯನ್ನು ರೈತರಲ್ಲಿ ತುಸುಮಟ್ಟಿಗೆ ನೆಮ್ಮದಿ ಸಿಗುವಂತೆ ಪ್ರಯತ್ನವನ್ನು ಸರ್ಕಾರ ಮಾಡಿರುವುದು; ಧಾರವಾಡ ಜಿಲ್ಲೆಯಲ್ಲಿ ಬೆಳೆಹಾನಿಯಾದ ಸಂದರ್ಭ ಬಿಟ್ಟು ಬೆಳೆದ ಪದಾರ್ಥಕ್ಕೆ ಬೆಲೆ ಸಿಗದೆ ರೈತರು ಅನುವಂಶಿಕವಾಗಿ ಬೇಸಾಯದಿಂದ ಬದುಕಿಯೂ ಇಂದು ಆತ್ಮಹತ್ಯೆಗೀಡಾದ ಸಂದರ್ಭವಾಗಿರುವುದು; ರೈತರ ಸಮಸ್ಯೆಗಳಿಗೆ ಸ್ಪಂದಿಸುತ್ತಿಲ್ಲವೆನಿಸಿರುವುದು; ಬೋಗಸ್ ಹತ್ತಿ ಬೀಜವೆಂದು ತಿಳಿಯದೆ ನವಿಲುಗುಂದ, ಕುಂದಗೋಳ, ನರಗುಂದದಲ್ಲಿ ಬಿತ್ತಿದಾಗ ಬೆಳೆಯದೆ ಹೋಗಲು ಗೋವಿನ ಜೋಳ ಹಾಕಿ ಫಲ ಪಡೆದು ಸಮಸ್ಯೆ ಇಲ್ಲದೆ ಮಾರುತ್ತಿದ್ದುದು, ಆಯಾ ಪ್ರದೇಶಕ್ಕೆ ನಿರ್ದಿಷ್ಟ ಬೆಳೆ ಬೆಳೆಯಬೇಕೆಂದು ಹಿಂದಿನಿಂದ ಬಂದ ಒಂದು ವೈಜ್ಞಾನಿಕ ಪದ್ಧತಿ ಇರುವಲ್ಲಿ, ಹುಬ್ಬಳ್ಳಿಯಲ್ಲಿ ರೈತನೊಬ್ಬ 6 ಲಕ್ಷ ರೂ.ಗಳ ಈರುಳ್ಳಿ ಬೆಳೆದದ್ದನ್ನು ನೋಡಿ ಎಲ್ಲರೂ ಈರುಳ್ಳಿ ಹಾಕಲು ಈರುಳ್ಳಿ ಪ್ರಮಾಣ ಹೆಚ್ಚಿದುದು, ಬಗ್ಗೆ ರೈತರಿಗೆ ಮಾರ್ಗದರ್ಶಕ ವ್ಯಕ್ತಿಗಳಿದ್ದೂ ಮಾರ್ಗದರ್ಶನ ಮಾಡದೇ ಹೋದುದು; ಹೀಗೆಯೇ ಜೋಳ ತಿನ್ನುವವರಿರುವ ಕಡೆ ಎಲ್ಲರೂ ಕಬ್ಬು ಬೆಳೆದು, ರೈತರ ಸಮಸ್ಯೆ ಬೃಹದಾಕಾರವಾಗಿ ಬೆಳೆಯಲು ಕಾರಣವಾಗಿರುವುದು; ರೈತರು ಆತ್ಮಹತ್ಯೆಯನ್ನು ಮಾಡಿಕೊಳ್ಳಲು, ಪರಿಹಾರ ನೀಡುವಲ್ಲಿ ಗ್ರಾಮ ಲೆಕ್ಕಿಗರು ಕೊಡುವ ತೊಂದರೆ, ಹಾಗೂ ಬಯಸುವ ಲಂಚ ಈ ಬಗ್ಗೆ ಕ್ರಮ ಕೈಗೊಂಡಿಲ್ಲದಿರುವುದು;

6. ವಿಧಾನ ಪರಿಷತ್ತಿನ ನಡವಳಿಕೆಗಳು; ಸರಪುಟ 3.1(1.2) ಭಾಗ–I (8–3–2001)

ಶ್ರೀಮಂತರೆನಿಸುತ್ತಿದ್ದ ಮೆಣಸಿನ ಕಾಯಿ ರೈತರು, ಧಾರವಾಡದ ನವಲೂರಿನ ಪೇರಲೆ ಹಣ್ಣು ಬೆಳೆವ ಜಾಗದಲ್ಲಿ ಆಲೂಗೆಡ್ಡೆ ಬೆಳೆದು ಸಾಲ ತೀರಿಸಲಾಗದ ರೈತ, ಮೆಣಸಿನಕಾಯಿಗೆ ಸರಿಯಾದ ಬೆಲೆ ಸಿಗದ ರೈತ, ಇವರೆಲ್ಲ ಆತ್ಮಹತ್ಯೆ ಮಾಡಿಕೊಂಡಿರುವುದು; ಆ ಹಂತಕ್ಕೆ ಬಂದ ರೈತರ ಪರಿಸ್ಥಿತಿ ಕುರಿತಾಗಿ ಕಾರಣ ಕಂಡುಹಿಡಿದಿಲ್ಲದಿರುವುದು; ಸಣ್ಣ ರೈತರಿಗೆ ಮಾರ್ಗದರ್ಶನ ಮಾಡಬೇಕಿರುವುದು; ಗೋವಿನ ಜೋಳಕ್ಕೆ ಗೋದಾಮುಗಳು, ಥಿಯೇಟರುಗಳು, ಕಲ್ಯಾಣ ಮಂಟಪಗಳು ಸಾಲದೆ, ಸರ್ಕಾರ ಒಂದು ಕಡೆ ಸ್ಟಾಕ್ ಮಾಡುವಲ್ಲಿ ಗೊಬ್ಬರ ಆಗಿ ಲುಕ್ಸಾನ್ ಆಗುವುದು; ಇದರ ಬದಲು ರೈತರಿಗೆ ಇನ್ಸೆಂಟೀವ್ ಕೊಟ್ಟರೆ ಒಳಿತೆನಿಸುವುದು; ಆತ್ಮಹತ್ಯೆಗೆ ಇವೆಲ್ಲ ಕಾರಣಗಳಾಗಿರುವುದು; **ಅತೀ ಕಷ್ಟದ ಪರಿಸ್ಥಿತಿ ಬಂದಾಗಲೂ ಭಾರತದ ರೈತ ಆತ್ಮಹತ್ಯೆ ಮಾಡಿಕೊಳ್ಳುವ** ಪ್ರಯತ್ನ ಮಾಡದಿದ್ದವನು ಇಂದು ಅದು ಅವನಿಗೆ ಅನಿವಾರ್ಯವೆನಿಸುವಂತೆ ಆಗಿರುವುದು; ಸೆಮಿನಾರ್, ರಿಪೋರ್ಟ್, ರೆಸಲ್ಯೂಶನ್ ಎಲ್ಲ ಆದರೂ ಅದು ಇಂಪ್ಲಿಮೆಂಟ್ ಆಗಿರುವ ಬಗ್ಗೆ ಸರ್ಕಾರ ನೋಡಬೇಕಿರುವುದು; ದೇಶದಲ್ಲಿ ಶೇ 75ರಷ್ಟು ರೈತರಿದ್ದು ಅವರ ಗಳಿಕೆ ಪ್ರಾಮಾಣಿಕವಾಗಿರುವುದು; ಇಂದು ಯಾವ ಬೆಳೆಗೂ ಬೆಲೆ ಕುಸಿತವಾಗಿರುವುದು; ಸೋಯಾ ಬೀನ್ ಬೆಳೆಯ ಬೆಲೆ ಹೆಚ್ಚಿದೆ ಎಂದು ಎಲ್ಲರೂ ಮುಂದೆ ಅದೇ ಬೆಳೆದರೆ, ಆಯಿಲ್ ಮಿಲ್‌ಗಳು ಬಂದ್ ಆಗಿರುವಲ್ಲಿ ಅದು ಮುಂದುವರಿದರೆ ಪರಿಸ್ಥಿತಿ ಗಂಭೀರವಾಗುವುದು; ರೈತರ ಬಗ್ಗೆ ಕೇವಲ ಮಾತನಾಡದೆ ಸಮಸ್ಯೆಗಳನ್ನು ಅರಿತು ನಿರ್ದಿಷ್ಟ ಕಾರ್ಯಕ್ರಮಗಳನ್ನು ಜಾರಿಗೆ ತರಬೇಕಾದುದು; ರೈತರು ಪಟ್ಟಣಗಳಿಗೆ ವಲಸೆ ಬರುತ್ತಿರುವುದು; ಚುನಾವಣೆ ಎಂದು ಬೆಳೆ ಸಾಲವನ್ನು ಮರುಪಾವತಿ ಮಾಡದಿದ್ದರೆ ಓಟು ಹಾಕಲು ಅನರ್ಹ ಎಂದು ರೈತರಿಗೆ ಕಿರುಕುಳ ನೀಡದಿರುವುದು; ಸಾಲವಸೂಲಾತಿ ಮಾಡುವಲ್ಲಿಯು ಸ್ವಲ್ಪವಾದರೂ ರಿಯಾಯಿತಿ ತೋರಿಸುವುದು; ವಿದ್ಯುತ್ ಅನಾಹುತವಾದಾಗ ನಷ್ಟವನ್ನು ರೈತರು ಮೇಲೆ ಹಾಕಿದರೆ ಎಷ್ಟೇ ಶ್ರೀಮಂತ ರೈತರಾಗಿದ್ದರೂ ನೂರಕ್ಕೆ ಒಂದು ಪರ್ಸೆಂಟ್‌ನಷ್ಟು ಜನರಿಗೆ ಮಾತ್ರ ಅದನ್ನು ತಡೆದುಕೊಳ್ಳುವಂಥ ಶಕ್ತಿ ಇರುವುದು; ಸಬ್ಸಿಡಿ ಕೊಡುವುದರಲ್ಲಿಯೂ ದುರುಪಯೋಗವಾಗಿರುವುದು; ಈ ದಿಸೆಯಲ್ಲೆಲ್ಲ ಪರಿಹಾರ ಕೊಡದಿದ್ದರೆ ನಾಳೆ ಆತ್ಮಹತ್ಯೆಗಳ ಸರಮಾಲೆಗಳಾಗುವುದು; ಗೋವಿನ ಜೋಳವನ್ನು ತೆಗೆದುಕೊಂಡ ಸರ್ಕಾರ ಆ ಮಾಲಿಗೆ ಕೊಡಬೇಕಾದ ಹಣದಲ್ಲಿ ಶೇ 90ರಷ್ಟು ಕೂಡ ರೈತರಿಗೆ ಕೊಟ್ಟಿಲ್ಲದಿರುವುದು ಕುರಿತೆಲ್ಲ ಹೇಳಿದರು. **ಶ್ರೀ ಕೆ.ವಿ ಸುಬ್ಬಾರೆಡ್ಡಿಯವರು** ಈ ಸಂದರ್ಭದಲ್ಲಿ ಮಾತನಾಡಿ, ಹಿಂದೆ ಬೆಳೆಯುತ್ತಿದ್ದ ಪ್ರಮಾಣದಲ್ಲಿ ತಾವು ರಾಗಿ

ಇಂದು ಬೆಳೆಯಲಾಗದಿರುವುದಕ್ಕೆ ಡಿ.ಐ.ಸಿ ಯೂರಿಯಾ, ಕೂಲಿ, ಸೀಮೆಗೊಬ್ಬರ ಇವುಗಳ ದರ ಹೆಚ್ಚಾಯಿತು ವಿನಾ ಬೆಳೆದ ಬೆಳೆಗೆ ಬೆಲೆ ಹೆಚ್ಚಾಗದೆ ಇರುವ ಕಾರಣವಾಗಿದೆ; ರೈತರ ಬವಣೆ ಹೆಚ್ಚಿದೆ ಎಂದರು. ಶ್ರೀ ಬಸವರಾಜ ಹೊರಟ್ಟಿಯವರು ಮಾತನ್ನು ಮುಂದುವರಿಸಿ ರೈತ ಅನುಭವಿಸುತ್ತಿರುವ ತೊಂದರೆಯನ್ನು ಅವರು ಸಂಘರ್ಷಕ್ಕೆ ಹೋಗುವ ಮೊದಲು ಪರಿಹಾರಕೊಡಬೇಕು ಎಂದು ಹೇಳಿ ಮಾತಿಗೆ ಮುಕ್ತಾಯವಿಟ್ಟರು.

ಶ್ರೀ **ಹೆಚ್. ಎಸ್ ಶಾಂತವೀರಪ್ಪಗೌಡರು,** ಹಿಂದೆ ಗೌರವಯುತವಾಗಿ ಸಾಲತೀರಿಸುತ್ತಿದ್ದಂಥ ಪರಿಸ್ಥಿತಿಯ ಚಿತ್ರವನ್ನು ನೀಡಿ ಇಂದಿನ ದಿನಗಳಲ್ಲಿ ಬೆಳೆದ ಮೆಕ್ಕೆಜೋಳವನ್ನು ಎಪಿಎಂಸಿ ಯಾರ್ಡ್‌ನಲ್ಲಿ ಹಾಕಿಕೊಂಡು ಚೀಲಗಳ ನಿಟ್ಟಿನ ಮೇಲೆ ರೈತರು ಮಲಗುತ್ತಿದ್ದಾರೆ. ಚೀಲಗಳು ಗೆದ್ದಲು ಹತ್ತಿ ಚೀಲ ಜೋಳ ಎರಡೂ ಹೋದ ಪರಿಸ್ಥಿತಿ ಆಗಿದೆ ಎಂದರು, ಮಾತನ್ನು ಮುಂದುವರಿಸಿ ಕೇಂದ್ರ ಸರ್ಕಾರ ಹಣಕಾಸಿನ ಸೌಲಭ್ಯ ಕೊಟ್ಟು ರೈತರ ಮೆಕ್ಕೆ ಜೋಳವನ್ನು ಖರೀದಿಸಲು ಹೇಳಿದರೂ ರಾಜ್ಯ ಸರ್ಕಾರ ಖರೀದಿಸದಿರುವುದು; ಶ್ರೀ ಬಿ.ಎಸ್ ಯಡಿಯೂರಪ್ಪನವರು ಶಿಕಾರಿಪುರದಿಂದ ವಾಪಸು ಬರುವಲ್ಲಿ ಶಿವಮೊಗ್ಗದ ರೈತರ ಗೋಳು ನೋಡಿ ಒಂದೂವರೆ ಲಕ್ಷ ಚೀಲಗಳು ಇರುವಂಥ ಸ್ಥಳದಲ್ಲಿ ಕುಳಿತು ಅಧಿಕಾರಿಗಳ ಹಾಗು ಸರ್ಕಾರದ ಗಮನ ಸೆಳೆದಿರುವುದು; ಈ ವಾರದಲ್ಲಿ ಹೋಳಿಯಲ್ಲಿ ಉಬ್ಬೆ ಮಳೆ ಹುಯ್ದರೆ, ಕಷ್ಟಪಟ್ಟು ಬೆಳೆದ ಲಕ್ಷಾಂತರ ಚೀಲ ಮೆಕ್ಕೆ ಜೋಳ ಎ.ಪಿ.ಎಂ.ಸಿ ಯಾರ್ಡ್‌ನಲ್ಲಿರುವುದೆಲ್ಲ ಪೂರ್ತಿ ಗೊಬ್ಬರವಾಗಿ ಬಿಡುವುದು; ಸರ್ಕಾರ ಖರೀದಿಸಲಿ ಎಂದು ಅನಿವಾರ್ಯವಾಗಿ ರೈತರು ಸತ್ಯಾಗ್ರಹ ಮಾಡುತ್ತಿರುವುದು; ಭತ್ತ ಖರೀದಿ ಮಾಡುತ್ತೇವೆಂದು ರಾಜ್ಯ ಸರ್ಕಾರ ಬ್ಯಾನರ್‌ಗಳನ್ನು ಕಟ್ಟಿದರೇ ಹೊರತು ಇವತ್ತಿನವರೆಗೂ ಭತ್ತ ಖರೀದಿ ಕೇಂದ್ರಗಳಲ್ಲಿ ಭತ್ತದ ಖರೀದಿ ಶುರು ಮಾಡಿಲ್ಲದಿರುವುದು; ಡೈಮಂಡ್ ಸೋನ ಭತ್ತ (ಸೂಪರ್ ಫೈನ್ ಕ್ವಾಲಿಟಿ)ವನ್ನು ಕ್ವಿಂಟಾಲ್ಗೆ 750–900ರೂ. ದರ ಅಕ್ಕಿಯನ್ನು 500–600ರೂ. ಗಳಿಗೆ ಕೇಳುತ್ತಿರುವಲ್ಲಿ 510–540ರೂ. ಬೆಂಬಲ ಬೆಲೆ ಕೊಟ್ಟು ಭತ್ತ ಖರೀದಿ ಮಾಡಿದ್ದಿದ್ದರೆ ರೈತರಿಗೆ ನೆಮ್ಮದಿ ಆಗುತ್ತಿದ್ದುದು; ರೈತರು ಒಕ್ಕಣೆ ಮಾಡುವುದನ್ನು ಖಾಲಿ ಚೀಲವಿಲ್ಲದೆ ನಿಲ್ಲಿಸಿರುವುದು; ಮಳೆಗಾಲ ಆರಂಭವಾಗುತ್ತಿದ್ದರೂ ರೈತರು ಇವೊತ್ತಿನವರೆಗೆ ಒಕ್ಕಲುತನದ ಕೆಲಸ ಪ್ರಾರಂಭ ಮಾಡಿಲ್ಲದಿರುವುದು ಕುರಿತೆಲ್ಲ ಹೇಳಿ ಭತ್ತದ ಖರೀದಿ ಪ್ರಾರಂಭಿಸಲು ಕೇಳಿಕೊಂಡರು. ಶ್ರೀ **ಬಸವರಾಜ ಪಾಟೀಲ್** ಅವರು

ಸರ್ಕಾರ ನೀಡಿರುವ ಬೆಂಬಲ ಬೆಲೆ ಹೊರಗಡೆಯೂ ಇರುವ ಕಾರಣ ರಾಯಚೂರು ಜಿಲ್ಲೆಯ ಖರೀದಿ ಕೇಂದ್ರಕ್ಕೆ ಜಾಸ್ತಿ ಬರುತ್ತಿಲ್ಲ ಎಂದರು. ಶ್ರೀ ಹೆಚ್. ಎಸ್ ಶಾಂತವೀರಪ್ಪ ಗೌಡರು ಮುಂದುವರಿದು, ರೈತನ ಪರಿಸ್ಥಿತಿ ತಾನು ಬೆಳೆದಂಥ ಬೆಳೆಯನ್ನು ಬೆಂಬಲ ಬೆಲೆಗಾದರೂ ತೆಗೆದುಕೊಳ್ಳಬೇಕು ಎಂದು ಅಂಗಲಾಚುವಂತಾಗಿರುವುದು; ಕೇಂದ್ರ ಸರ್ಕಾರ ರೈತನ ಬೆಳೆಯನ್ನು ಖರೀದಿಸುವ ಬಗ್ಗೆ ಭರವಸೆ ನೀಡಿದಂತೆ ಆ ಪ್ರಮಾಣದಲ್ಲಿ ಖರೀದಿ ಮಾಡದಿರುವುದು; ಗ್ರಾಮ ಲೆಕ್ಕಿಗಗರು ಮನೆಯಲ್ಲೇ ಕುಳಿತುಕೊಂಡು ರೈತ ಕಳೆದ ವರ್ಷ ಬೆಳೆದಿದ್ದ ಬೆಳೆಯನ್ನೇ ಈ ವರ್ಷದ ಪಹಣಿ ಪುಸ್ತಕದಲ್ಲಿ ಬರೆಯುತ್ತಿರುವುದು; ಮೆಕ್ಕೆ ಜೋಳ ಸಂಗ್ರಹಕ್ಕೆ ಗೋಡೌನ್ ಸಿಗದ ಕಾರಣ ಖರೀದಿಗೆ ಕಷ್ಟ ಎಂದು ನೆಪ ಹೇಳುವ ಬದಲು ಗೋಡೌನ್‌ಗಳನ್ನೇ ಕಟ್ಟಿಸಿಬಿಡಬಹುದಾಗಿತ್ತು ಎನ್ನುವುದು; ಇನ್ಫ್ರಾಸ್ಟ್ರಕ್ಚರ್ ತಯಾರು ಮಾಡಿಕೊಳ್ಳಬೇಕಾಗಿದ್ದುದು ಕೆ.ಎಸ್.ಎಫ್.ಸಿ ಇತ್ಯಾದಿ ಹಣಕಾಸು ಸಂಸ್ಥೆಗಳಿಂದ 30ಲಕ್ಷ ರೂ ಸಾಲಮಾಡಿ ಪ್ರಾರಂಭ ಮಾಡಿದ ರೈಸ್ ಮಿಲ್‌ಗಳು ಬಾಗಿಲು ಮುಚ್ಚುವ ಸ್ಥಿತಿಗಿಳಿದಿರುವುದು; ಪ್ರೊಸೆಸಿಂಗ್ ಯೂನಿಟ್‌ಗಳ ಮೇಲೆ ಬೇರೆ ಬೇರೆ ದೇಶಗಳಲ್ಲಿ ಶೇ 60–70ರಷ್ಟು ಸಹಾ ಬಂಡವಾಳ ಹೂಡಿಲ್ಲದಿರುವುದು; ಕೇಂದ್ರ ಸರ್ಕಾರ ಬೆಳೆವಿಮೆ ಮಾಡಿಕೊಟ್ಟಿರುವುದು; ಅಣೆವಾರಿ ಡಿಕ್ಲೇರ್ ಆಗಿರಬೇಕಿರುವುದು; ಹೆಚ್ಚಿನ ಪ್ರಮಾಣದಲ್ಲಿ ಬೆಳೆ ಬಂದಿರುವಲ್ಲಿ ಬೆಲೆ ಕುಸಿದಿರುವುದು; ಬಳ್ಳಾರಿ ಜಿಲ್ಲೆಯನ್ನು ಪೈಲೆಟ್ ಪ್ರಾಜೆಕ್ಟ್ ಎಂದು ತೆಗೆದುಕೊಂಡು ಬೇಸಿಗೆ ಬೆಳೆಯನ್ನು ಬೆಳೆವಿಮೆಗೆ ಒಳಪಡಿಸಿರುವುದು ಕುರಿತೆಲ್ಲ ಹೇಳಿದರು.

ಶ್ರೀ **ಕೆ.ಎನ್. ರಾಜಣ್ಣ** ಅವರು ಮಾತನಾಡುತ್ತ ಹಳ್ಳಿಯ ತಗ್ಗು ದಿಣ್ಣೆ ಪ್ರದೇಶದಲ್ಲಿ ನೀರಾವರಿ ಬೆಳೆಯುವಲ್ಲಿ ಸರಾಸರಿಯನ್ನು ಜೆ.ಐ.ಸಿ ಕಾನೂನಿನನ್ವಯ ತೆಗೆದು ಕೊಂಡರೆ ಅದು ನಾಲ್ಕಾಣೆಗಿಂತ ಜಾಸ್ತಿ ಬೆಳೆ ಬಂದಿದೆ ಎಂದು ಹೇಳಿ ಯಾರಿಗೂ ಪರಿಹಾರ ಕೊಡಲು ಸಾಧ್ಯವಿಲ್ಲ ಎಂದಿರುವುದರ ಕಡೆ ಗಮನ ಸೆಳೆದರು. ಮತ್ತು ಬೆಳೆವಿಮೆಯಲ್ಲಿ ಕ್ರಾಪ್ ಇನ್ಶೂರೆನ್ಸ್ ಮತ್ತು ಕ್ರಾಪ್ ಲೋನ್ ಇನ್ಶೂರೆನ್ಸ್ ಎಂಬ ಎರಡು ವಿಧಗಳಿದ್ದು 1983 ರಿಂದ ಕ್ರಾಪ್ ಲೋನ್ ಇನ್ಶೂರೆನ್ಸ್ ಚಾಲ್ತಿಗೆ ಬಂದು ಕ್ರಾಪ್ ಲೋನ್ ತೆಗೆದು ಕೊಂಡಿದ್ದವರಿಗೆ ಮಾತ್ರ ಅನ್ವಯವಾಗಿದೆ ಎಂದರು. ಅದಕ್ಕೆ ಶ್ರೀ ಎಚ್.ಎಸ್ ಶಾಂತವೀರಪ್ಪ ಗೌಡರು ಕ್ರಾಪ್ ಲೋನ್ ತೆಗೆದುಕೊಂಡವರಿಗೂ ಬೆಳೆ ವಿಮೆ ತೆಗೆದುಕೊಳ್ಳದೆ ಇರುವವವರೂ ನೇರವಾಗಿ ಪ್ರೀಮಿಯಮ್ ಕಟ್ಟಿ ಬೆಳೆ ಸಾಲ ವಿಮೆಯನ್ನು ತೆಗೆದುಕೊಳ್ಳಲು ಇರುವ ಅವಕಾಶ;

ಆ ಬಗ್ಗೆ ಸರ್ಕಾರಕ್ಕೆ ಮನಸ್ಸಿಲ್ಲದಿರುವುದು; ಸರ್ಕಾರದಲ್ಲಿ ಇರುವ ಕೃಷಿ ಮಾರುಕಟ್ಟೆ ತೋಟಗಾರಿಕೆ, ಕಂದಾಯ, ಸಹಕಾರ, ಪಶುಸಂಗೋಪನ ರೇಷ್ಮೆ ಗ್ರಾಮಿಣಾಭಿವೃದ್ಧಿ ಮತ್ತು ಪಂಚಾಯಿತಿ ವಿದ್ಯುತ್ ನೀರಾವರಿ ಇತ್ಯಾದಿ ಅನೇಕ ಇಲಾಖೆಗಳು ರೈತರಿಗೆ ಮಾಡಿರುವ ಉಪಕಾರಗಳೇನು? ಎಂದೆಲ್ಲ ಕೇಳಿ ವಿಷಯಗಳನ್ನು ಪ್ರಸ್ತಾಪಿಸಿದರು. ಸಭಾನಾಯಕ ಶ್ರೀ **ಎಚ್. ಕೆ ಪಾಟೀಲ್** ಮೆಕ್ಕೆ ಜೋಳದ ಖರೀದಿ ಕುರಿತಂತೆ ಸದಸ್ಯರ ಹೇಳಿಕೆಗಳನ್ನು ಪ್ರಸ್ತಾಪಿಸಿ ಖರೀದಿ ನಡೆಯುತ್ತಿದೆ ಎಂಬುದಕ್ಕೆ ಉದಾಹರಣೆಯಾಗಿ ಧಾರವಾಡ ಜಿಲ್ಲೆಯಲ್ಲಿ ಒಂದೇ ದಿನದಲ್ಲಿ 23 ಸಾವಿರ ಕ್ವಿಂಟಾಲ್ ಮೆಕ್ಕೆ ಜೋಳವನ್ನು ಸಂಗ್ರಹಿಸಿರುವ ಬಗ್ಗೆ ಹಾಗು ಒಟ್ಟು 8 ದಿವಸಗಳಲ್ಲಿ 1 ಲಕ್ಷ ಕ್ವಿಂಟಾಲ್‌ಗೂ ಮೀರಿ ಮೆಕ್ಕೆಜೋಳ ಸಂಗ್ರಹ ಮಾಡಿದ ಬಗ್ಗೆ ತಿಳಿಸಿದರು.

ಶ್ರೀ ಹೆಚ್. ಎಸ್ ಶಾಂತವೀರಪ್ಪಗೌಡರು ವ್ಯವಸಾಯ ಸೇವಾ ಸಹಕಾರ ಗೋಡೋನ್‌ಗಳಲ್ಲಿ ಪ್ರೊಕ್ಯೂರ್ ಮಾಡಬೇಕಾದ ಮೆಕ್ಕೆಜೋಳ ಹಾಗು ಅದಕ್ಕೆ ಕೇಂದ್ರ ಸರ್ಕಾರ ವಿಸ್ತರಿಸಿರುವ ಅವಧಿ ಸಾಲದ ಅವಧಿಗಳ ಪರಿವರ್ತನೆ; ಮುಂಗಾರು ಬೆಳೆ ಇಡಲನುಕೂಲಿಸಲು ಮತ್ತೆ ಮಂಜೂರು ಮಾಡಿಕೊಡಬೇಕಾದ ಬೆಳೆ ಸಾಲ; ಮಿನಿವಾಟರ್ ಸ್ಕೀಮ್ ಮುಖಾಂತರ ಮಾಡಲಾಗಿರುವ ಬೋರ್ವೆಲ್‌ಗೂ ಕರೆಂಟ್ ಇಲ್ಲದೆ ಉಂಟಾಗಿರುವ ಸಮಸ್ಯೆ; ರೈತರ ಬೆಳೆಗೆ ಅಗತ್ಯ ಕರೆಂಟ್ ಕೊಡಲಾಗದಿದ್ದರೆ ಕೆ.ಪಿ.ಟಿ.ಸಿ.ಎಲ್. ಸಂಸ್ಥೆಯಿಂದ ಪ್ರಯೋಜನವಿಲ್ಲದಿರುವುದು; ಬೇರೆ ವಲಯಗಳಿಗೆ ಉತ್ತಮ ವೋಲ್ಟೇಜ್ ಕರೆಂಟ್ ಒದಗಿಸುತ್ತಿರುವಂತೆ ಹಳ್ಳಿಗಳಿಗೂ ಕನಿಷ್ಠ 10 ಗಂಟೆಯಷ್ಟು ಒದಗಿಸಿಕೊಡುವುದು; ಬೆಲೆ ಕುಸಿದು ಹೋದ ಬೆಳೆಗಳನ್ನು ಸರ್ಕಾರ ಖರೀದಿಸುವ ವ್ಯವಸ್ಥೆ ಮಾಡುವುದು; ಮಳೆ ಬೀಳುವುದರೊಳಗೆ ಎಲ್ಲಾ ಮೆಕ್ಕೆ ಜೋಳವನ್ನು ಖರೀದಿಸುವುದು; ಬೆಳೆಗಳನ್ನು ಬೆಂಬಲ ಬೆಲೆ ನೀಡಿ ಖರೀದಿಸುವುದು ಅಗತ್ಯ ಎಂದೆಲ್ಲ ಹೇಳಿ ತಮ್ಮ ಮಾತುಗಳನ್ನು ಮುಗಿಸಿದರು.

**ಡಾ. ಎಂ.ಪಿ. ನಾಡಗೌಡರು** ಮಾತನಾಡುತ್ತ ಗ್ಯಾಟ್ಗೆ ಸೈನ್ ಮಾಡಿ ತಪ್ಪು ಮಾಡಿದ್ದೇವೆ ಎಂದೆನಿಸುವುದು; ರಾಷ್ಟ್ರದಲ್ಲಿ ಯಾವ ವಸ್ತುಗಳನ್ನು ರಫ್ತು ಆಮದು ಮಾಡಬೇಕೆಂಬ ಬಗ್ಗೆ ನಿರ್ಣಯ ತೆಗೆದು ಕೊಳ್ಳುವ ಬೇರೆ ಜನ ಲೀಟರ್ ಬಿಸ್ಲೆರಿಗೆ 12ರೂ, ಲೀಟರ್ ಹಾಲಿಗೆ 10ರೂ; ಕೆ.ಜಿ ಆಲೂಗಡ್ಡೆ ಚಿಪ್ಸ್ಗೆ 40ರೂ ಕೆ.ಜಿ ಆಲೂಗೆಡ್ಡೆ 2 ರೂ ಮಾತ್ರ ಇರುವ ನಮ್ಮಲ್ಲಿಯ ಸ್ಥಿತಿ; ಮೊದಲು ಸಾವಿರ ಟನ್ ರಫ್ತಾಗುತ್ತಿದ್ದ ಕಡೆ ನಮ್ಮಲ್ಲಿಗೆ ಇಂದು 9 ಸಾವಿರ ಕೋಟಿ ಟನ್ ರಫ್ತಾಗುತ್ತಿರುವುದು, 1997ರಲ್ಲಿ ಹತ್ತಿ ರಫ್ತಿನ ಕಾರಣ ಬೆಲೆ ಕುಸಿದು ಮೊದಲ ಬಾರಿಗೆ ರೈತರ ಆತ್ಮ

ಹತ್ಯೆಯಂಥ ಪ್ರಕರಣ ಮೇಧಕ್‌ನಲ್ಲಿ ಜರುಗಿದುದು; ಅಲ್ಲಲ್ಲಿ ಬೇರೆ ಬೇರೆ ಕಾರಣಗಳು ಇದಕ್ಕಿದ್ದರೂ ಬೆಳೆದ ಬೆಳೆ ಫಲ ನೀಡದೆ ಹೋದದ್ದು ಬೆಲೆ ಕುಸಿತವೇ ಮೂಲ ಕಾರಣವಾದದ್ದು; ಬೆಲೆ ಕುಸಿತಕ್ಕೆ ಕಾರಣ ರೈತ ಉತ್ಪನ್ನಗಳಿಗೆ ತೀರ ಬೆಲೆ ಕಡಿಮೆ ಯಾಗಿರುವುದು, ರೇಷ್ಮೆ ಇಲಾಖೆಯ ಅಧಿಕಾರಿಗಳ ಸಂಖ್ಯೆ ಕುರಿತೆಲ್ಲ ಹೇಳುವಲ್ಲಿ ರೇಷ್ಮೆ ಸಚಿವ **ಶ್ರೀ ಎಂ. ಮಹದೇವ್** ಅವರು ಪ್ರತಿಕ್ರಿಯಿಸಿ ರೈತ ಬದುಕಲು ರೇಷ್ಮೆ ಕ್ಷೇತ್ರ ಮುಖ್ಯ ಎಂದು ಸಿರಿಕಲ್ಚರ್‌ಗೆ ಪ್ರಾಶಸ್ತ್ಯ ಹೆಚ್ಚಿಗೆ ಕೊಡಲಾಗಿದೆ ಎಂದರು. ಅದಕ್ಕೆ ಡಾ.ಎಂ.ಪಿ ನಾಡಗೌಡರು ಅಧಿಕಾರಿಗಳ ಕೆಲಸ ತೃಪ್ತಿಕರವಿಲ್ಲ ಎಂಬ ಅಭಿಪ್ರಾಯವಿಟ್ಟಾಗ ಶ್ರೀ **ಕೆ. ವಿ. ಸುಬ್ಬಾರೆಡ್ಡಿ** ಅವರು ಅಧಿಕಾರಿಗಳನ್ನು ರೇಷ್ಮೆ ಮೊಟ್ಟೆಕೇಳಿದರೆ ಚಾಕಿ ಸೆಂಟರ್‌ನಲ್ಲಿ ಹೋಗಿ ತೆಗೆದುಕೊಳ್ಳಿ ಎನ್ನುತ್ತಾರೆ. ಕಾರಣ ಆ ಸೆಂಟರ್‌ಗಳನ್ನು ಪ್ರತ್ಯೇಕವಾಗಿನಡೆಸುತ್ತಿದ್ದಾರೆ, ಎಂದಾಗ ಶ್ರೀ ಎಂ. ಮಹದೇವ್ ಅವರು ಅಂಥ ಪ್ರಕರಣಗಳ ವಿವರ ನೀಡಿದರೆ ಕ್ರಮ ತೆಗೆದು ಕೊಳ್ಳುವುದಾಗಿ ತಿಳಿಸಿದರು ಡಾ|| ಎಂ. ಪಿ. ನಾಡಗೌಡರು ಮುಂದುವರಿದು ಬಾಗಲಕೋಟೆ ಪ್ರದೇಶದಲ್ಲಿ 300 ಹೆಕ್ಟೇರ್ ಪ್ರದೇಶವನ್ನು ರೈತರು ಸ್ವತಃ ಆಸಕ್ತಿಯಿಂದ ರೇಷ್ಮೆ ಅಭಿವೃದ್ಧಿ ಬೆಳೆಯನ್ನಾಗಿ ಮಾಡಿರುವುದು; ಶೇ 15ರಷ್ಟು ಮಾತ್ರ ಬಡ್ಜೆಟ್ ಅನ್ನು ಹಳ್ಳಿಗಳಿಗೆ ಕೊಟ್ಟು ಶೇ 85ರಷ್ಟನ್ನು ನಗರಗಳಿಗೆ ಕೊಟ್ಟು ಶೇ 85ರಷ್ಟು ಜನ ಗ್ರಾಮಾಂತರ ಪ್ರದೇಶದಲ್ಲಿರುವವರಿಗೆ ಆಗಿರುವ ಪಕ್ಷಪಾತ ಕುರಿತು ಸೂಚಿಸಿದರು. ಎಕನಾಮಿಕಲಿ ಅಕ್ಟಿವೇಟ್ ಆಗುವ ಕಡೆ ವಲಸೆ ಹೋಗುವ ಉದಾ, ಆಗಿ ಬಿಜಾಪುರದಿಂದ ಬೆಂಗಳೂರಿಗೆ ಕೂಲಿಗೆ ಬರುತ್ತಾರೆ. ಗ್ರಾಮಾಂತರ ಪ್ರದೇಶದಲ್ಲಿ ಇನ್‌ಫ್ರಾಸ್ಟ್ರಕ್ಚರ್ ಬೆಳೆಸುವ ಚಿಂತನೆ ಬಿಟ್ಟು ಎಲ್ಲಾ ಹಣವನ್ನು ದೊಡ್ಡನಗರಗಳ ಬೆಳೆವಣಿಗೆಗೆ ತೊಡಗಿಸುತ್ತೇವೆ. ಕೃಷಿಯ ಬಗ್ಗೆ ಎಷ್ಟು ನಿಷ್ಕಾಳಜಿ ಎಂದರೆ ಮಂಡ್ಯದ ಕೃಷಿ ವಿಶ್ವವಿದ್ಯಾಲಯದವರು ಸಮಾರು 2000 ಸ್ಪಿಸೀಸ್ ನಿರ್ವಹಣೆ ಮಾಡುತ್ತಿದ್ದಾರೆ. ಆದರೆ ಅವನ್ನೂ ಕಾಪಾಡಿಕೊಳ್ಳಲು ಹಣವಿಲ್ಲದೆ ಅದು ಹಾಳಾಗಿ ಹೋಗುವ ಸ್ಥಿತಿಗೆ ಬಂದಿದೆ. ಬೆಳೆ 'ಸಿ' (ಎಳೆಯ ಜೋಳ / ಹಾಲು ಜೋಳ) ಯನ್ನು ವೈದ್ಯರು ಹೇಳುವಂತೆ ಕ್ಯಾನ್ಸರ್‌ಗೆ ಪ್ರಿವೆಂಟೀವ್ ಆಗಿದ್ದು, ತಿನ್ನಿರಿ ಎನ್ನುತ್ತಾರೆ. ಅದು ಬಹಳ ವೈಜ್ಞಾನಿಕವಾಗಿದ್ದು ಒಂದು ಎಕರೆಯನ್ನು ಮೀಸಲಾಗಿಟ್ಟ ಹಿಂದೆ ಬೆಳೆದು ತಿನ್ನುತ್ತಿದ್ದುದುಂಟು. ಜೋಳ ಮತ್ತು ರಾಗಿ really good staple food ಆಗಿದ್ದು ಅವುಗಳನ್ನು ಐಡೆಂಟಿಟಿ ಮಾಡಿ ಪ್ರಚಾರ ಮಾಡುತ್ತಿಲ್ಲ. ಒಂದು ವೇಳೆ ಕಡಿಮೆ ಬೆಲೆಯಲ್ಲಿ ಸಾಮಾನ್ಯ ಜನರಿಗೆ ಆಹಾರ ಸಿಗುವುದಿದ್ದರೆ ತೆಗೆದುಕೊಳ್ಳಬೇಡ ಎಂದು ಹೇಳುವ ಅಧಿಕಾರ ಯಾರಿಗೂ ಇಲ್ಲ. ಇವತ್ತು ನಮ್ಮಲ್ಲಿ ಚೈನಾ ಇನ್ವೇಜನ್

ಆಗಿದೆ. ಅದು ಸೇಲ್ಸ್ ಡಂಪ್ ಅನ್ನು ನಮ್ಮಲ್ಲಿ ಹಾಗೂ ಅಮೇರಿಕಾದಲ್ಲಿ ಮಾಡಿದೆ. ಅಮೇರಿಕೆಯಲ್ಲಿ ಬಾರ್ಬಿಡಾಲ್ ಬಗ್ಗೆ ಸೆಂಟಿಮೆಂಟ್ ಇರಲಾಗಿ ಉಳಿಸಿಕೊಂಡರು. ಅವರ ಎಕಾನಮಿ ಅರ್ಥ ಬೇರೆ. ಎಂ.ಸಿ ಭಾಗ್ಲಾ ಹೇಳಿರುವಂತೆ If the people of America don't change their car every alternate year the whole American economy will collapse -- but our country does not depend on car, it depends on farmers and agriculture. ಇಂತಿರುವಲ್ಲಿ ರೈತರಿಗೆ ನಾವು ಏನು ಮಾಡಬೇಕು ಎಂಬ ಬಗ್ಗೆ ಪಕ್ಷಾತೀತವಾಗಿ ಚಿಂತನೆ ಮಾಡಬೇಕು. ಬೆಲೆ ಕುಸಿತ ಕೇವಲ WTO impact ಎನ್ನಲಾಗುವುದಿಲ್ಲ. ಅಮೇರಿಕೆಯಲ್ಲಿಯೂ they subsidise the farmer to the extent of rs. 25000 per hectare. ಕಾರಣ ಸ್ಪರ್ಧೆ ಎಲ್ಲ ವಲಯದಲ್ಲಿದೆ. ಎಲ್ಲರೂ ಕಡಿಮೆ ಬೆಲೆಯಲ್ಲಿ ಮಾರುವಂಥ ಸ್ಥಿತಿಯಲ್ಲಿದ್ದಾರೆ. ನಮ್ಮಲ್ಲಿಯಾದರೋ ಸ್ಯಾಲರಿಗೆ ಶೇ. 72 ರಷ್ಟು ಖರ್ಚು ಮಾಡುವಂಥ ಸ್ಥಿತಿಗೆ ಬಂದಿದ್ದೇವೆ. ಸ್ಯಾಲರಿ ಮತ್ತು ಸರ್ಕಾರದ ವೆಚ್ಚವನ್ನು 15%ಕಟ್ ಮಾಡಬೇಕಿದೆ. ಪಕ್ಷಾತೀತವಾಗಿ ರೈತರನ್ನೂ ಪ್ರವೋಕ್ ಮಾಡಿದ ಮೇಲೆ ಅವರನ್ನು ಉಳಿಸಿದೆ ಹೋದರೆ ಬರಿ ರೈತರಲ್ಲ, The small scale industries and all other industrial will collapse ದೇಶವನ್ನು ರೈತರನ್ನು ಇಂಡಸ್ಟ್ರಿಯನ್ನು ಉಳಿಸುವ ಬಗ್ಗೆ ಚಿಂತಿಸಬೇಕಾಗಿದೆ ಎಂದೆಲ್ಲ ಹೇಳಿ ಮಾತು ಮುಗಿಸಿದರು.

**ಶ್ರೀ ಬಸವರಾಜ ಬೊಮ್ಮಾಯಿ** ಅವರು ಶ್ರೀ ವಿ. ಆರ್. ಸುದರ್ಶನ್ ಅವರನ್ನು ಕುರಿತು ರಾಜ್ಯದ ರೈತರ ಮತ್ತು ಜನರ ಧ್ವನಿಯಾಗಿ ಮಾತನಾಡಲು ತಮಗೆ ಅವಕಾಶ ಸಿಕ್ಕಿರುವಲ್ಲಿ ರಾಜ್ಯದ ಸಮಸ್ಯೆಗಳನ್ನು ನಿರ್ಭಿಡೆಯಿಂದ ಸ್ವತಂತ್ರವಾಗಿ ಮಂಡಿಸುತ್ತೀರೆಂದು ನನ್ನ ನಿರೀಕ್ಷೆ ಎಂದರು. ಅದಕ್ಕೆ ಶ್ರೀ ಬಿ. ಎಸ್ ಹೊರಟ್ಟಿಯವರು ದನಿಗೂಡಿಸಿದರು.

**ಶ್ರೀ ವಿ.ಆರ್. ಸುದರ್ಶನ್**ಅವರು ಸಹ ಶಾಸಕರ ಸ್ಪಂದನೆಗಳನ್ನು ಗೌರವಿಸುತ್ತ ನುಡಿದದ್ದು: ಹಿಂದೆ ರೈತರ ಬಗ್ಗೆ ಕೃಷಿ ಸಮಸ್ಯೆಗಳ ಬಗ್ಗೆ ಬಹಳ ಕಡಿಮೆ ಪ್ರಮಾಣದಲ್ಲಿ ಚರ್ಚೆ ನಡೆಯುತ್ತಿತ್ತು. ಇಂದು ರಾಜ್ಯ ಎಲ್ಲಾ ಭಾಗದ ಸಮಸ್ಯೆಗಳ ಚರ್ಚೆ ಮಾಡುತ್ತಿದ್ದಾರೆ. ರೈತರ ಪರಿಸ್ಥಿತಿ ಅವರ ಉತ್ಪಾದನೆಗೆ ಆಗುತ್ತಿರುವ ಕೃಷಿ ಮಾರುಕಟ್ಟೆಯಲ್ಲಿರುವ ಅನುಕೂಲ ಅನಾನುಕೂಲಗಳೇನು ಎಂಬ ಬಗ್ಗೆ ಸರ್ಕಾರದ ಗಮನ ಸೆಳೆಯಬೇಕು ರೈತ ಪಡೆದ ಸಾಲಕ್ಕೆ 17–18% ಬಡ್ಡಿ ತೀರಿಸಲು ಸಾಧ್ಯವಾಗದಿರುವಲ್ಲಿ ಸಾಲ ಮರುಪಾವತಿ ಹೇಗೆ ಮಾಡಬಲ್ಲ. ರೈತರಿಗೆ ಸಾಧ್ಯವಾದಷ್ಟು

ಕಡಿಮೆ ಪ್ರಮಾಣದಲ್ಲಿ ರೈತರಿಗೆ ಸಾಲ ಒದಗಿಸಬೇಕು. ಅದಕ್ಕೆ ನಬಾರ್ಡ್‌ನ ಸಹಕಾರ ನಮಗೆ ಬೇಕು. ವಿಶೇಷವಾಗಿ ಆರ್.ಬಿ.ಐ ರೈತರ ನೆರವಿಗೆ ಬಂದು 4–5 ಪರ್ಸೆಂಟ್ ಬಡ್ಡಿ ಆಧಾರದಲ್ಲಿ ಸಾಲ ಕೊಟ್ಟು ರೈತ ಹೆಚ್ಚು ಉತ್ಪಾದಿಸಲು ಬೆಳೆಗೆ ಲಾಭದಾಯಕ ಬೆಲೆ ಪಡೆಯಲು ಸಹಕರಿಸಬೇಕು. ಪ್ರೈಮರಿ ಲ್ಯಾಂಡ್‌ಡೆವಲಪ್ ಮೆಂಟ್ ಡಿ.ಸಿ.ಸಿ ಬ್ಯಾಂಕ್ ಹಾಗು ಮಾರ್ಕೆಟ್ ಫೆಡರೇಷನ್ ಎ.ಪಿ.ಎಂ.ಸಿ ಗಳಿದ್ದೂ ರೈತನ ಸಂಕಷ್ಟಗಳು ಪರಿಹಾರಗೊಂಡಿಲ್ಲ. ಎ.ಪಿ.ಎಂ.ಸಿಗಳೇ ದಳ್ಳಾಳಿಗಳ ಕೈಯಲ್ಲಿವೆ. ರೈತರಿಂದ ಶುಲ್ಕ ವಸೂಲಿ ಮಾಡಬಾರದೆಂದರೂ ಅದು ನಿಂತಿಲ್ಲ. ಅವರಿಗೆ ಮಾರುಕಟ್ಟೆ ಒದಗಿಸುವ ಹೊಣೆ ಎ.ಪಿ.ಎಂ.ಸಿಯದೇ ಆಗಿದೆ ಇಂದು ರಾಗಿ ಬೆಲೆ ಕ್ವಿಂಟಾಲ್‌ಗೆ 150 ರಿಂದ 400 ರೂ.ಗೆ ಏರಿದ್ದು, ಗೊಬ್ಬರ, ಬೀಜ, ಮತ್ತು ಕೀಟನಾಶಕಗಳ ಬೆಲೆಯೂ ಹೆಚ್ಚಿ, ಕಾಸ್ಟ್ ಆಫ್ ಕಲ್ಟಿವೇಷನ್ ಹೆಚ್ಚಾಗಿ ಮಾರುಕಟ್ಟೆಯಲ್ಲಿ ಅದಕ್ಕೆ ಸೂಕ್ತ ಬೆಲೆಸಿಗದೆ ಸಾಕಷ್ಟು ನಷ್ಟ ರೈತನಿಗಾಗುತ್ತಿದೆ. ಆದುದರಿಂದ How to equip our farmers to face all these kinds of challenges! ರೈತರಿಗೆ ನೆರವು ನೀಡಲು ಕೇಂದ್ರ ಹಾಗು ರಾಜ್ಯ ಸರ್ಕಾರ ಯಾವ ರೀತಿ ಹೋಗಬೇಕು ಎಂಬುದನ್ನು ಯೋಚಿಸುವುದು ಮುಖ್ಯ. ಸಕ್ಕರೆ, ಹಾಲು, ರೇಷ್ಮೆ ಮತ್ತು ಹಣ್ಣು ಹಂಪಲುಗಳನ್ನು ವಿಪುಲ ಪ್ರಮಾಣದಲ್ಲಿ ಉತ್ಪಾದನೆ ಮಾಡುತ್ತಿರುವಲ್ಲಿ ಡ.ಬ್ಲ್ಯು.ಟಿ.ಓ. ಒಪ್ಪಂದದ ನೆರಳಿನಲ್ಲಿ ಬೇರೆ ದೇಶಗಳಿಂದ ಇಂಪೋರ್ಟ್ ಮಾಡಿಕೊಳ್ಳಲೇಬೇಕಾದಲ್ಲಿ ನಮ್ಮ ರೈತರಿಗೆ ತೊಂದರೆಯಾಗದಂತೆ ನೋಡಿಕೊಳ್ಳಬೇಕಲ್ಲವೆ? ರೀಸರ್ಚ್ ಅಂಡ್ ಡೆವಲಪ್‌ಮೆಂಟ್ ಅನ್ನು ಈ ಬಗ್ಗೆ ಕಡೆಗಣಿಸಿದ ಕಾರಣ ನಮ್ಮ ಸಂಕಷ್ಟಗಳು ಹೆಚ್ಚಾದುವು. ಕಳೆದ 3–4 ವರ್ಷಗಳಿಂದ ರೈತರು ಆತ್ಮಹತ್ಯೆ ಮಾಡಿಕೊಳ್ಳುತ್ತಿರುವುದು ಯಾವುದೇ ಸಮಾಜ, ಸಮುದಾಯಕ್ಕಾಗಲಿ ಗೌರವ ತರುವಂಥದ್ದಲ್ಲ. ಇದೊಂದು ಪಕ್ಷಾತೀತ ಸಮಸ್ಯೆ. ರೈತರಲ್ಲಿ ಆತ್ಮ ವಿಶ್ವಾಸ ಹೆಚ್ಚಿಸುವಂಥ, ಸಂಕಷ್ಟ ಪರಿಹರಿಸುವಂಥ, ನೆಮ್ಮದಿ ತರುವಂಥ ತುರ್ತು ಕಾರ್ಯಕ್ರಮಗಳನ್ನು ಹಾಕಿಕೊಳ್ಳಬೇಕಾಗಿದೆ. ಕೋಲಾರದ ಎ.ಪಿ.ಎಂ.ಸಿ ಮಾರುಕಟ್ಟೆಯಲ್ಲಿ ಕ್ವಿಂಟಾಲ್ ಆಲೂಗೆಡ್ಡೆಗೆ 360 ರೂಪಾಯಿಗಳ ಬೆಂಬಲ ಬೆಲೆಯನ್ನು ಸರ್ಕಾರ ಘೋಷಣೆ ಮಾಡಿದ ತಕ್ಷಣ, ಅಲ್ಲಿನ ದಳ್ಳಾಳಿಗಳು ರೈತರಿಂದ ಕ್ವಿಂಟಾಲ್‌ಗೆ 400 ರೂ.ನಂತೆ ಅದನ್ನು ಖರೀದಿ ಮಾಡಿದರು. ಇದರಿಂದ ಸರ್ಕಾರ ರೈತರ ನೆರವಿಗೆ ಧಾವಿಸಿದಂತೆ ಆಗಿದೆ. ಮೆಕ್ಕೆಜೋಳದ ಪರಿಸ್ಥಿತಿಯೂ ಹದಗೆಟ್ಟು ಅದರ ಖರೀದಿಗೂ, ರಕ್ಷಣೆಗೂ ಗೋದಾಮು, ಕೋಲ್ಡ್ ಸ್ಟೋರೇಜ್ ವ್ಯವಸ್ಥೆಗಾಗಿ ಕೇಂದ್ರ ಹಾಗು ರಾಜ್ಯ ಸರ್ಕಾರದ ಮೇಲೆ ಒತ್ತಡ ತರಲಾಗುತ್ತಿದೆ, ಎಂದೆಲ್ಲ ಹೇಳಿದರು.

ಈ ನಡುವೆ ಶ್ರೀ ಕೆ.ವಿ.ಸುಬ್ಬಾರೆಡ್ಡಿ ಅವರು ಬಜೆಟ್‌ನಲ್ಲಿ 500 ಕೋಟಿ ನಿಗದಿ ಮಾಡಿದೆ ಎಂದರೆ, ದಲ್ಲಾಳಿಗಳು ಬೆದರುತ್ತಾರೆ. ರೈತರ ಬೆಳೆಗೆ ಬೆಲೆ ಸಿಗುತ್ತದೆ ಎಂದರು. ಶ್ರೀ ವಿ.ಆರ್.ಸುದರ್ಶನ್ ಅವರು ಮಾತು ಮುಂದುವರಿಸಿ ರೈತರಿಗೆ ಪ್ರಿಯಾರಿಟಿಕೊಟ್ಟು ಡಿಸ್ಟ್ರೆಸ್‌ಫಂಡ್ ನಿಗದಿ ಮಾಡುವುದು; ಕ್ರಾಪ್ ಪ್ಯಾಟರ್ನ್ ಬಳಕೆ; ಗುಲ್ಬರ್ಗಾದ ಮಣ್ಣಿಗೆ, ನೀರಿಗೆ ಸೂಕ್ತವಾದ ಬೆಳೆಯಾವುದೋ ಅದನ್ನು ಬೆಳೆಯುವುದು; ಕೋಲಾರದಲ್ಲಿ ಅಲ್ಲಿನ ಹವಾಗುಣಕ್ಕೆ ಅನುಗುಣವಾದ ಸಾಂಪ್ರದಾಯಿಕ ರೇಷ್ಮೆ ಬೆಳೆದಂತೆ ಕರಾವಳಿಯಲ್ಲಿ ಅದಾಗದ ಕಾರಣ ಬೇರೆ ಬೆಳೆ ತೆಗೆಯುವುದು; ಕೊಡಗಿನಲ್ಲಿ ಕಾಫಿ ಬೆಳೆಯುವುದು; ಬೋರ್‌ವೆಲ್ ಹಾಕಲು ನಿಯಂತ್ರಣದ ಅಗತ್ಯ–ಕಾರಣ 1980ರಲ್ಲಿ ಗ್ರೌಂಡ್‌ವಾಟರ್ ಲೆವೆಲ್ 30 ಅಡಿಗಳಲ್ಲಿದ್ದುದು, 20 ವರ್ಷಗಳ ನಂತರ 600 ಅಡಿಗಳಿಗೆ ಹೋದರೂ ನೀರು ಸಿಗಲು ಕಷ್ಟವಾಗಿರುವುದು; ಇದಕ್ಕೆ ನೀರನ್ನು ಎಕ್ಸ್‌ಪ್ಲಾಯಿಟ್ ಮಾಡಿರುವ ಕಾರಣವೆ ಆಗಿರುವುದು ಕುರಿತೆಲ್ಲ ಹೇಳಿದರು; ಇದಕ್ಕೆ ನಿಯಂತ್ರಣ ತರದಿದ್ದರೆ ಅತ್ಯಂತೆ ಸಂದಿಗ್ಧ ಪರಿಸ್ಥಿತಿ ಉಂಟಾಗುತ್ತದೆ ಎಂದರು.

**ಶ್ರೀ ಎಂ.ಸಿ.ನಾಣಯ್ಯ** ಅವರು ಮಾತನಾಡಿ 1964ರಿಂದಲೇ ಕೃಷಿ ಸಂಬಂಧದ ನಿಯಂತ್ರಣದ ಕಾನೂನು ಜಾರಿಗಿದ್ದು ಆಹಾರ ಬೆಳೆಯುವ ಜಮೀನಿನಲ್ಲಿ ವಾಣಿಜ್ಯ ಬೆಳೆಗಳನ್ನು ಸರ್ಕಾರದ ಅನುಮತಿ ಇಲ್ಲದೆ ಬೆಳೆದರೆ ಜಮೀನು ಮುಟ್ಟುಗೋಲು ಹಾಕಿಕೊಳ್ಳಲವಕಾಶವಿರುವುದು; ಕೇರಳದಲ್ಲಿ ಭತ್ತದ ಬೆಳೆ ಜಮೀನಿನಲ್ಲಿ ಶುಂಠಿ ಬೆಳೆದಾಗ ಮುಟ್ಟುಗೋಲು ಹಾಕುವ ಪ್ರಯತ್ನ, ಪರಿಣಾಮವಾಗಿ ಬೆಳೆಗಾರರು ಕೊಡಗಿಗೆ ಬಂದು ಶೇ.50ರಷ್ಟು ಭತ್ತಬೆಳೆವ ಭೂಮಿಯನ್ನು ಶುಂಠಿ ಕೃಷಿಗೊಳಗಾಗಿಸಿರುವುದು; ಕೋಲಾರದಲ್ಲಿ ಲಕ್ಷಾಂತರ ಜಮೀನಿನಲ್ಲಿಯ ಬೆಳೆ ಕಿತ್ತು ನೀಲಗಿರಿ ಬೆಳೆದು ಆರ್ಥಿಕ ಪರಿಸ್ಥಿತಿ ಮೇಲೆತ್ತುವ ಚಿಂತನೆ ಇದ್ದರೂ ಅನಿಯಂತ್ರಣ ಒದಗುವ ಪರಿಸ್ಥಿತಿ ಒದಗುವ ಕುರಿತೆಲ್ಲ ಹೇಳಿದರು. ಈ ಸಂದರ್ಭದಲ್ಲಿ ವೈಸ್ ಛೇರ್ಮನ್ ಅವರು ಕೇರಳದಲ್ಲಿ ಶುಂಠಿ ಬದಲು ರಬ್ಬರ್ ಪ್ಲಾಂಟೇಷನ್ ವಿಪುಲವಾಗಿರುವುದು; ರೈತರ ಜೀವನ ಮಟ್ಟವೇರಿಸಲು ಎಲ್ಲಿ ಸುವರ್ಣರೇಖೆಯನ್ನು ಇದಕ್ಕೆಲ್ಲ ಹಾಕಬೇಕು ಎಂಬುದು ಮುಖ್ಯ ಪ್ರಶ್ನೆ ಆಗಿದೆ ಎಂದರು.

**ಶ್ರೀ ಸಿ.ರಾಮ್ಯನವರು,** ಕ್ರಾಪಿಂಗ್ ಪ್ಯಾಟರ್ನ್ ಬಗ್ಗೆ ತಜ್ಞರಲ್ಲಿಯೇ ಭಿನ್ನಾಭಿಪ್ರಾಯವಿದೆ. ಈ ಬಗ್ಗೆ ರಿಓರಿಯಂಟೆಡ್ ಆಗಬೇಕು. 54 ಎಕರೆಗೆ 128 ಜನ ಸತತವಾಗಿ ನಿಂತರೆ ಏನು ಕೆಲಸವಿರುತ್ತದೆ! ಬದಲಾವಣೆ ಮಾಡಬೇಕು, ಎಂದರು.

**ಶ್ರೀ ಕೆ.ವಿ.ಸುಬ್ಬಾರೆಡ್ಡಿ,** ಅವರು ರೈತರ ಯಾವ ಬೆಳೆಗೂ ಇಂದು ಬೆಲೆ ಇಲ್ಲ, ಎಂದರೆ ಶ್ರೀ **ಕೆ.ಮಲ್ಲಪ್ಪ** ಅವರು ರೈತನು ತನ್ನ ಬದುಕನ್ನು ದುಡಿಮೆಯನ್ನು ಬದಲಾವಣೆ ಮಾಡಿಕೊಳ್ಳಬೇಕು ಎಂದರು. ಅವನು ಬೆಳೆದ ಉತ್ಪನ್ನಗಳಿಗೆ ತಕ್ಕ ಬೆಂಬಲ ಸಿಗದಿದ್ದರೆ ಅವನ ಬದುಕೇ ಹಾಳಾಗುತ್ತದೆ ಎಂದರು.

**ಶ್ರೀ ಡಿ.ಎಚ್.ಶಂಕರ್‌ಮೂರ್ತಿಯವರು,** ಕ್ರಾಪಿಂಗ್ ಪ್ಯಾಟ್ರನ್ ಬಗ್ಗೆ ವಿಚಾರ, ಘುಡ್‌ಗ್ರೇನ್ ಷಾರ್ಟೇಜ್ ಇದ್ದಾಗ ಮಾತ್ರ ಬರುತ್ತದೆ. ಎಲ್ಲರೂ ಕ್ಯಾಷ್ ಕ್ರಾಪ್ ಹಾಕಿದರೆ ಗತಿಏನು ಎಂದು ವಿಚಾರ ಮಾಡಬೇಕು. ಎಕನಾಮಿಕ್ ಸಿಚುಯೇಷನ್‌ನಲ್ಲಿ ಸಾಮಾಜಿಕ ಸ್ಥಿತಿಯ ಹಿನ್ನೆಲೆಯಲ್ಲಿ ಬಹಳ ತೊಂದರೆ ಅನುಭವಿಸುತ್ತಿದ್ದೇವೆ. ಇಂದು ಬೆಳೆಗಳು ಜಾಸ್ತಿಯಾಗಿವೆ, ಬೆಲೆಗಳು ಕುಸಿದಿವೆ. ಏನು ಮಾಡಬೇಕು. ಅದು ಮುಂದಿರುವ ಪ್ರಶ್ನೆ ಎಂದರು.

**ವೈಸ್ ಛೇರ್ಮನ್** ಅವರು, ಅಚ್ಚುಕಟ್ಟು ಪ್ರದೇಶದಲ್ಲಿ 11 ತಿಂಗಳೂ ನೀರು ಕೊಡುವ ಪೆರನಿಯಲ್ ವಾಟರ್ ಕ್ರಾಪಿಂಗ್, ಇನ್ನೊಂದು ಕಡೆ ಡ್ರೈ ಕಮ್ ವೆಟ್ ಪ್ಯಾಟರ್ನ್ ಇದೆ. ಅಲ್ಲಿ ಎಲ್ಲರೂ ಭತ್ತ ಹಾಕುತ್ತಾರೆ, ಕಬ್ಬು ಹಾಕುವುದಿಲ್ಲ ಎಂದರು.

**ಶ್ರೀ ಎಂ.ವಿ.ರಾಜಶೇಖರನ್** ಅವರು, ಮಾತನಾಡಿ ನಮ್ಮಲ್ಲಿ 240 ಮಿಲಿಯನ್ ಜನತೆ ಆಹಾರವಿಲ್ಲದ ಕಂಗಾಲು ಸ್ಥಿತಿ ತಲುಪಿದ್ದಾರೆ. The problem is they have no purchasing power. That is why you have got so much of surplus food; ಎಂದರು.

**ಶ್ರೀ ವಿ.ಆರ್.ಸುದರ್ಶನ್** ಅವರು, ಯಾವುದೇ ವ್ಯವಸ್ಥೆಗೆ ಅಗತ್ಯವಿರುವ ನಿಯಂತ್ರಣ ಮತ್ತು ಮಾರ್ಗದರ್ಶನವಿರುವಂತೆ ರೈತರು ಬೆಳೆಧ ಬೆಳೆಗೂ ಇರಬೇಕಾದುದು, ಆ ಬೆಳೆಗಳಿಗೆ ಸ್ವದೇಶಿ ಮಾರುಕಟ್ಟೆಯಲ್ಲಿನ ಬೇಡಿಕೆ, ಹಾಗು ಸುಧಾರಣೆ ಮಾಡಿಕೊಳ್ಳಬೇಕಾದ ಬಗ್ಗೆ ಹೇಳಿದರು ಶ್ರೀ.ಪಿ.ಆರ್.ರಾಮಯ್ಯ ಅವರು, ಕ್ರಾಪಿಂಗ್ ಪ್ಯಾಟರ್ನ್ ಇನ್‌ಸಿಸ್ಟ್ ಮಾಡಿದರೆ ರೈತ ಬೆಳೆಯುವ ಪದಾರ್ಥಗಳಿಗೆ ಮಾರ್ಕ್ ಟೆರಿನ್ ವ್ಯವಸ್ಥೆ ಬೇಕು ಎಂದರು. ಶ್ರೀ ವಿ.ಆರ್.ಸುದರ್ಶನ್ ಅವರು, ಮುಂದುವರಿದು ರೈತರು ದೂರದೃಷ್ಟಿಯಿಂದ ಹೊಂದಿರಬೇಕಾದ ಹೊಣೆ ಸರ್ಕಾರದ ನೆರವು, W.T.O. ಮೇಲೆ ಹಾಕಬೇಕಾದ ಒತ್ತಡ, ಚೈನಾ ಸಹ W.T.O ಅನ್ನು ಸೇರಲಿಚ್ಛಿಸಿರುವುದು, ವ್ಯವಸಾಯದ ಕಷ್ಟ ಸುಖಗಳ ಬಗ್ಗೆ ಸರ್ಕಾರದ ಗಮನ,

ಬ್ಯೂರೋಕ್ರೆಟಿಕ್ ಒಪ್ಪಂದಗಳ ಬಗ್ಗೆ ಎಚ್ಚರಿಕೆ ಕುರಿತೆಲ್ಲ ಹೇಳುತ್ತಿರುವಲ್ಲಿ, ಡಾ॥ ಎಂ.ಸಿ.ನಾಣಯ್ಯನವರು ಚೈನಾದಲ್ಲಿ ರೆಜಿಮೆಂಟ್ ಉಪದೇಶವಿದೆ. ಅದೇ ನಮಗೂ ಅವರಿಗೂ ಇರುವ ವ್ಯತ್ಯಾಸ ಎಂದರು. ಶ್ರೀ ವಿ.ಆರ್.ಸುದರ್ಶನ್ ಅವರು, ಸ್ವದೇಶಿ ಮಾರುಕಟ್ಟೆ ಬಲಗೊಳಿಸಿ ರೈತರ ನೆರವಿಗೆ ಸರ್ಕಾರ ಹೋಗಿ ರೈತರ ಬೆಳೆಗಳಿಗೆ ಹೆಚ್ಚು ಬೆಲೆ ಸಿಗುವಂತೆ ಮಾಡುವುದು, ಸ್ವಲ್ಪ ಮಟ್ಟಿಗಾದರೂ ಬಡ್ಡಿ ಮನ್ನಾ, ಸಹಕಾರಿ ಸಂಸ್ಥೆಗಳ ಶೇ. 15–17ರ ಬಡ್ಡಿ ಪ್ರಮಾಣವನ್ನು ಶೇ. 5ರ ಬಡ್ಡಿ ಆಧಾರದ ಮೇಲೆ ಸಾಲ ನೀಡಲು ಕೇಂದ್ರ ಸರ್ಕಾರದ ಮೇಲೆ, ಒತ್ತಾಯ ತರುವುದು; ಸೀಡ್ಸ್ ಕಾರ್ಪೋರೇಷನ್'ನ ಪರಿಸ್ಥಿತಿ ಸುಧಾರಣೆ ಕುರಿತೆಲ್ಲ ಹೇಳಿದರು. ಡಾ.ಎಂ.ಸಿನಾಣಯ್ಯ ಅವರು, ಸುಮಾರು 2 ಸಾವಿರ ಕೋಟಿ ಸಾಲ ಕೊಟ್ಟಿರುವಲ್ಲಿ ಸಾಲ ಬಡ್ಡಿ ಮನ್ನಾ ಎಂದರೆ 200–250 ಕೋಟಿ ಆಗುವಲ್ಲಿ ನಬಾರ್ಡ್ ನೆರವು ಕಡಿಮೆ ಇರುವಲ್ಲಿ, ಸರ್ಕಾರಕ್ಕೆ 110 ಕೋಟಿ ಹೊರೆ ಆಗುವಲ್ಲಿ ಬೇರೆ ಕಡೆಯಿಂದ ಅದನ್ನು ತುಂಬಿಸುವ ಕೆಲಸವು ಸರ್ಕಾರದಿಂದ ಆಗಬೇಕಿದೆ, . ಎಂದರು. ಶ್ರೀ ವಿ.ಆರ್.ಸುದರ್ಶನ್ ಅವರು ತಮ್ಮ ಮಾತನ್ನು ಮುಂದುವರಿಸಿ, ರೈತರಿಗೆ ಮತ್ತು ರೈತರ ಉತ್ಪನ್ನಗಳಿಗೆ ಅಗತ್ಯವಿರುವ ಸಬ್ಸಿಡಿಯನ್ನು ಮುಂದುವರಿಸುವುದು ರಸಗೊಬ್ಬರಗಳ ತಯಾರಕರ ಮೇಲೆ ಬೇಕಾದ ನಿಯಂತ್ರಣ, ದುಬಾರಿ ಹಣಕೊಟ್ಟು ಕೊಂಡು ಅಗತ್ಯಕ್ಕಿಂತ ಹೆಚ್ಚಾಗಿ ರಸಗೊಬ್ಬರದ ಬಳಕೆ ಮಾಡುತ್ತಿರುವುದರಿಂದ ಭೂಮಿಯ ಫಲವತ್ತತೆ ಹಾಳಾಗುತ್ತಿರುವುದು, ಪ್ರತಿ ಹೋಬಳಿಯಲ್ಲಿರುವ ಕೇಂದ್ರ ಸರ್ಕಾರ ನಿಯೋಜಿತ 'ರೈತ ಮಿತ್ರ' ಕೇಂದ್ರ ಹಾಗು ಅಲ್ಲಿ ಅಗ್ರಿಕಲ್ಚರ್ ಆಫೀಸರ್ ಅವರು ಎಕರೆಯ ಪ್ರಮಾಣ ಅನುಗುಣವಾಗಿ ಬೆಳೆಯುವ ಬೆಳೆ, ಅಗತ್ಯವಿರುವ ರಸಗೊಬ್ಬರ, ಕುರಿತು ಮಾಡಬೇಕಾದ ಮಾರ್ಗದರ್ಶನ, ಸೀಡ್ಸ್ ಡೆವಲಪ್‌ಮೆಂಟ್ ಕಾರ್ಪೋರೇಷನ್‌ನಲ್ಲಿಯ ಬೀಜಗಳ ಮಾರಾಟ ಕೇಂದ್ರದ ಬೀಜಗಳ ಕ್ವಾಲಿಟಿಯಲ್ಲಿನ ಲೋಪ–ಕೇವಲ ಶೇ. 25ರಷ್ಟು ಮಾತ್ರ ಮೊಳಕೆಯೊಡೆಯುತ್ತಿರುವುದು, ರಾಜ್ಯದ 27 ಜಿಲ್ಲಾ ಕೇಂದ್ರಗಳಲ್ಲಿ ಖಾಸಗಿ ಬೀಜ ಮಾರಾಟಗಾರರ ಮೇಲೆ ಅಗತ್ಯವಿರುವ ನಿಯಂತ್ರಣ, ಗೋದಾಮು ಮತ್ತು ಕೋಲ್ಡ್ ಸ್ಟೋರೇಜ್‌ಗಳ ಅಗತ್ಯ, ಹರಿಯಾಣ ರಾಜ್ಯದಲ್ಲಿರುವ 45 ಕೋಲ್ಡ್ ಸ್ಟೋರೇಜುಗಳಿಗೆ ಹೋಲಿಸಿದರೆ ನಮ್ಮ ರಾಜ್ಯದಲ್ಲಿ ಕೇವಲ 10–11 ಕೋಲ್ಡ್ ಸ್ಟೋರೇಜ್ ಇರುವುದು, ರೈತರಿಗೆ ಬೆಳೆ ಬೆಲೆ ಕುಸಿತದ ಸಂದರ್ಭದಲ್ಲಿ ಅದರ ಬಳಕೆಯ ಬಗ್ಗೆ ಸರಿಯಾದ ತಿಳುವಳಿಕೆ ಕೊಟ್ಟಿಲ್ಲದಿರುವುದು, ರೈತ ಬೆಳೆದ ಬೆಳೆಯನ್ನು ಅವುಗಳಲ್ಲಿಟ್ಟಾಗ ಅದರ ಶೇ.50 ಹಣ ಕೊಡುವ ವ್ಯವಸ್ಥೆ

ಹಾಗೂ ಅದರಿಂದ ರೈತನಿಗಾಗುವ ಪ್ರಯೋಜನ, (ಹೆಚ್.ಎಸ್.ಶಾಂತವೀರಪ್ಪ ಗೌಡರು, ಗೋದಾಮಿನಲ್ಲಿಡುವ ಬೆಳೆಗಳಿಗೆ 60-65 ಪರ್ಸೆಂಟ್ ಕೊಡಬೇಕೆಂದು ಹೇಳಿದ್ದುದನ್ನು ಉಲ್ಲೇಖ ಮಾಡಿದರು), ಆತ್ಮಹತ್ಯೆ ಪರಿಸ್ಥಿತಿಯನ್ನು ತೊಡೆದು ಹಾಕಿ ರೈತನಲ್ಲಿ ಆತ್ಮವಿಶ್ವಾಸ ಮೂಡಿಸುವುದು, ಇತ್ಯಾದಿ ಕುರಿತೆಲ್ಲ ಹೇಳಿ ಮಾತು ಮುಗಿಸಿದರು.

ಶ್ರೀಮತಿ **ಜಲಜಾನಾಯಕ್** ಅವರು ರೈತರಂತೆಯೆ ಲಂಬಾಣಿ ಜನತೆಗಿರುವ ಕಷ್ಟಗಳು ಹಾಗೂ ಹೊಂದಿರುವ ಕೇವಲ ಅರ್ಧ ಎಕರೆ ಜಮೀನು, ರೈತ ಮಹಿಳೆಯರು ಸಾಲ ಪಡೆಯುವಲ್ಲಿ ಕೇವಲ ರುಜು ಹಾಕುವ ಅನಕ್ಷರಸ್ಥ ಮಹಿಳೆಯರಾಗಿ, ಸಾಲಕೊಟ್ಟ ಸಂಸ್ಥೆಯ ರೀತಿ ರಿವಾಜು ಅವರಿಗೆ ಗೊತ್ತಿಲ್ಲದಿರುವುದು; ಆತ್ಮಹತ್ಯೆ ಮಾಡಿಕೊಂಡ ರೈತರ ಕುಟುಂಬದ ಮಹಿಳೆಯ ದೀನಾವಸ್ಥೆ; ಇದಕ್ಕೆ ಇಲಾಖೆಯಿಂದ ತಿಳುವಳಿಕೆ ಕೊಡುವ 'ಕೈಪಿಡಿ'ಗಳ ಪ್ರಕಟಣೆ, ಹಾಗು ರೈತ ಮಹಿಳೆಯರಿಗೆ ಆಗುವ ತೊಂದರೆ ನಿವಾರಣೆಗಾಗಿ ಕ್ರಮ; ಮೆಕ್ಕೆ ಜೋಳಕ್ಕೆ ಹುಳು ಬಿದ್ದು ಹಾಳಾಗುವವರಿಗೂ ಕ್ರಮ ಕೈಗೊಳ್ಳದಿರುವುದು, ರೈತರು ಮತ್ತು ರೈತ ಕುಟುಂಬಗಳಿಗೆ ಬರುವಂಥ ತಾಪತ್ರಯ ನಿವಾರಣೆಗೆ ತೆಗೆದುಕೊಳ್ಳಬೇಕಾದ ಮುಂದಾಲೋಚನೆಯ ಕ್ರಮ ಕುರಿತೆಲ್ಲ ಪ್ರಸ್ತಾಪಿಸಿದರು. ಆ ಸಂದರ್ಭದಲ್ಲಿ ವಿರೋಧಪಕ್ಷದ ನಾಯಕ ಶ್ರೀ **ಕೆ.ಎಚ್.ಶ್ರೀನಿವಾಸ** ಅವರು, ರೈತ ಸಮುದಾಯ ಎದುರಿಸುತ್ತಿರುವ ಸಂಕಷ್ಟವನ್ನು ಬಗೆಹರಿಸಲು ಅಸಾಧ್ಯವಾಗಿ ಆಯವ್ಯಯವನ್ನು ಬೇರೆ ರೀತಿಯಲ್ಲಿ ರೂಪಿಸಬೇಕಾದ ಪರಿಸ್ಥಿತಿ; ರೈತ ಬೆಳೆದದ್ದನ್ನು ಖರೀದಿಸಲೇಬೇಕಾದ ಅನಿವಾರ್ಯತೆ ಹಾಗೂ ಅದರಿಂದ ರೈತರು ಬದುಕುವಂಥ, ಚೈತನ್ಯ ಉಳಿಸುವಂಥ ಕಾರ್ಯವಾಗುವುದು; ಸಾಂಪ್ರದಾಯಿಕ ಮಾರ್ಗ ಬಿಟ್ಟು ಕ್ರಾಂತಿಕಾರಕವಾದಂಥ ರೀತಿಯಲ್ಲಿ ಪರಿಸ್ಥಿತಿಯನ್ನು ಎದುರಿಸಬೇಕಾದ ನಮ್ಮ ಮುಂದಿರುವ ಸವಾಲು, ಕುರಿತೆಲ್ಲ ಮಾತನಾಡಿದರು. ಶ್ರೀಮತಿ ಜಲಜಾ ನಾಯಕ್ ಅವರು ಮಾತು ಮುಂದುವರಿಸಿ, ರೈತರ ಸಮಸ್ಯೆಯು ಸಮಸ್ಯೆಯಾಗಿಯೆ ಉಳಿಯದಿರಲಿ. ಉದಾಹರಣೆಗೆ ಚಳ್ಳಕೆರೆ ತಾಲೂಕಿನ ಕೆರೆಯಾಗಲಹಳ್ಳಿಯಲ್ಲಿ ಈರುಳ್ಳಿ ಬೆಳೆ ಬೆಳೆದು ಎರಡು ಮೂರು ಬುಟ್ಟಿ ಇಟ್ಟುಕೊಂಡು ಕಾಯುವಲ್ಲಿ, ಸಿಪ್ಪೆ ಸುಲಿಯಲು 7-8 ದಿನಗಳು, ಮಳೆಯಲ್ಲಿ ಒದ್ದೆಯಾಗದಂತೆ ಒಣಗಿಸಿ ನಂತರ ಒಯ್ದು ಮಾರಲು ಕಾಯ್ದುಕೊಂಡಿರುವ ಸ್ಥಿತಿ, ನಂತರ ಅದನ್ನು ಮಾರಿ ಬಂದ ಹಣದಲ್ಲಿ ಒಂದೆರಡು ಚೀಲರಾಗಿ ಅಥವಾ ಜೋಳ ತಂದು ರಾತ್ರಿ ಮಾತ್ರ ಊಟ ಮಾಡುವ ಪರಿಸ್ಥಿತಿ ಇದನ್ನೆಲ್ಲ ಬಗೆಹರಿಸಬೇಕು ಎಂದು ನುಡಿದು ಮಾತು ಮುಕ್ತಾಯ

ಮಾಡಿದರು. ಡಾ.ಎಂ.ಸಿನ್ನಾಣಯ್ಯ ಅವರು, ಬಜೆಟ್ ಮಂಡನೆ ಇನ್ನು 10 ದಿನಗಳಲ್ಲಿ ಆಗುತ್ತಿರುವಲ್ಲಿ ಈ ಬಗೆಗೆಲ್ಲ ಸರ್ಕಾರದ ಚಿಂತನೆ ಏನು ಎಂಬುದನ್ನು ಸ್ಪಷ್ಟ ಪಡಿಸಿದರೆ, ರೈತರಿಗೆ ಸಂತೋಷ ತರಬಹುದು ಎಂದರು. ಶ್ರೀ ಕೆ.ಎಚ್.ಶ್ರೀನಿವಾಸ್ ಅವರು ಮಾತನಾಡಿ, ಮಾನ್ಯ ಮುಖ್ಯಮಂತ್ರಿಗಳು ಅರ್ಥ ಸಚಿವರೂ ಆಗಿರುವ ಕಾರಣ, ಕೃಷಿ ಮಂತ್ರಿಗಳ ಇತಿಮಿತಿಯೊಳಗಿನ ಇಕ್ಕಟ್ಟಿನ ಉತ್ತರಕ್ಕಿಂತ, ಮುಖ್ಯಮಂತ್ರಿಗಳಿಂದಲೇ ಉತ್ತರ ಬರುವಂತೆ ಸಭಾನಾಯಕರು ಪ್ರಯತ್ನಿಸಲಿ ಎಂದು ಒತ್ತಾಯವಿಟ್ಟರು. ಶ್ರೀ ಹೆಚ್.ಕೆ.ಪಾಟೀಲ್ ಅವರು, ಈ ಸಂದರ್ಭದ ಚರ್ಚೆಯ ಗಾಂಭೀರ್ಯತೆಯನ್ನು ಮುಖ್ಯಮಂತ್ರಿಗಳ ಗಮನಕ್ಕೆ ತರುವ ಬಗ್ಗೆ ತಿಳಿಸಿದರು.

ಈ ದಿನದ ಕಲಾಪಗಳಲ್ಲಿ ಸರ್ವಶ್ರೀ ಕೆ.ವಿನಯಚಂದ್ರ, ಕೆ.ಮಲ್ಲಪ್ಪ, ಬಸವರಾಜ ಪಾಟೀಲ್, ಎಂ.ಮಹದೇವ್, ಡಿ.ಎಲ್.ಜಗದೀಶ್, ಎಂ.ಪಿ.ಪ್ರಕಾಶ್ ಪಾಲ್ಗೊಂಡಿದ್ದರು.

9.3.2001 ನೇ ವಿಧಾನ ಪರಿಷತ್ ಅಧಿವೇಶನದಲ್ಲಿ[7] ಕೃಷಿ ಉತ್ಪನ್ನಗಳ ಬೆಲೆ ಕುಸಿತದ ಸಂಬಂಧದ ಚರ್ಚೆ ಮುಂದುವರಿದು, ಶ್ರೀ ಕೆ.ಎಚ್.ಶ್ರೀನಿವಾಸ್ ಅವರು ಸರ್ಕಾರದ ಉತ್ತರದ (ಮುಖ್ಯಮಂತ್ರಿಗಳಿಂದ) ನಿರೀಕ್ಷೆಯಲ್ಲಿದ್ದೇವೆ ಎಂದರು. ಶ್ರೀ ಬಿ.ಎಸ್.ಯಡಿಯೂರಪ್ಪನವರು ಮಾತನಾಡಿ, ಇವೊತ್ತು ಮೆಕ್ಕೆ ಜೋಳ ಮಾತ್ರವಲ್ಲದೆ ಭತ್ತವನ್ನು ಕೇಳುವವರಿಲ್ಲ. ಫಸ್ಟ್ ಕ್ವಾಲಿಟಿ 540ರೂ. ಸೆಕೆಂಡ್ ಕ್ವಾಲಿಟಿ 510 ಎಂದಿದ್ದರೂ, ರೂ. 480–490 ಕ್ಕೂ ಕೇಳುವವರಿಲ್ಲ. ಶಿಕಾರಿಪುರದ ಕಛೇರಿಯ ಮುಂದೆ ರೈತರ ಸಲುವಾಗಿ ತಾವು ಧರಣಿ ಕುಳಿತಿದ್ದುದು, ಕಾಗೋಡು ತಿಮ್ಮಪ್ಪನವರೇ ಅದನ್ನು ನೋಡಿರುವುದು ಹಾಗೂ ಜಿಲ್ಲಾಧಿಕಾರಿಗಳೊಡನೆ ಗೋಡೌನ್ ಹುಡುಕಿ 20 ಸಾವಿರ ಚೀಲ ಮೆಕ್ಕೆ ಜೋಳವನ್ನು ಅವರು ಖರೀದಿ ಮಾಡಿಸಿರುವುದು; ಧಾರವಾಡದಲ್ಲಿ ಜಿಲ್ಲಾಧಿಕಾರಿಗಳು ಖರೀದಿ ಮಾಡಿಲ್ಲವಾಗಿ, ನೂರಕ್ಕೆ 50 ರಷ್ಟು ರೈತರು ಕಂಗಾಲಾಗಿ ಕ್ವಿಂಟಾಲಿಗೆ 320 ರೂ.ನಂತೆ ಮಾರುತ್ತಿರುವುದು, ಹೀಗಾಗಿ ಮಾನ್ಯ ಮುಖ್ಯಮಂತ್ರಿಗಳಿಂದ ಈ ಬಗ್ಗೆ ಉತ್ತರ ಕೊಡಿಸಬೇಕು ಎಂದರು.

ಶ್ರೀ ಡಿ.ಎಲ್.ಜಗದೀಶ್ ಅವರು, ತುಮಕೂರು ಜಿಲ್ಲೆಯಲ್ಲಿ 2–3 ತಿಂಗಳಿಂದ ತೆಂಗು ಬೆಳೆಗಾರರಿಗೆ ಪೇಮೆಂಟ್ ಮಾಡದಿರುವುದು, ಸರ್ಕಾರ ಮಧ್ಯಪ್ರವೇಶಿಸಿ

---

7. ವಿಧಾನ ಪರಿಷತ್ತಿನ ನಡವಳಿಕೆಗಳು., ಸಂಪುಟ 301 (3–5), ಭಾಗ–1 (9.3.2001) ಪು. 661–671

ಹಣ ಕೊಡಿಸಿ, ನ್ಯಾಪೆಡ್‌ನಿಂದ ರಿಕವರಿ ಮಾಡಿಕೊಳ್ಳುವುದು, ರೈತರಿಗೆ 20 ಕೋಟಿ ರೂ. ಹಣ ಬಾಕಿ ಕೊಟ್ಟಿಲ್ಲದಿರುವುದು ಕುರಿತೆಲ್ಲ ಹೇಳಿ ಕೊಬ್ಬರಿಗೆ ಕನಿಷ್ಟ.. ಬೆಲೆ 3500 ರೂ. ಇದ್ದರೂ 2800–2900 ರೂ.ನಂತೆ ಡಿಸ್ಟ್ರೆಸ್ ಸೇಲ್ ಮಾಡುತ್ತಿರುವ ರೈತರ ರಕ್ಷಣೆಗೆ ಸರ್ಕಾರ ಹಟಮಾಡದೆ ಬರಬೇಕೆಂದು ಕೇಳಿಕೊಂಡರು.

**ಶ್ರೀ ಬಸವರಾಜ್ ಬೊಮ್ಮಾಯಿ** ಅವರು, ಗೋಡೌನ್‌ಗಳೆಲ್ಲ ತುಂಬ ಹೋಗುವಷ್ಟು ಮೆಕ್ಕೆ ಜೋಳವನ್ನು ಬೆಳೆದಿರುವಲ್ಲಿ ಅದನ್ನು ತೆಗೆದುಕೊಂಡು ಬೇರೆ ರೂಪದಲ್ಲಿ ಮಾರಾಟ ಮಾಡಲು ಕಾರ್ಯಕ್ರಮವಿದೆಯೆ? ಎಂದು ಕೇಳಿದರು. ಶ್ರೀ ಡಿ.ಬಿ ಇನಾಂದಾರ್ ಅವರು ಉತ್ತರಿಸುತ್ತ, ಈವರೆಗೆ ಖರೀದಿಸಿರುವ ಮೆಕ್ಕೆ ಜೋಳದ ಪ್ರಮಾಣ ಫುಡ್ ಕಾರ್ಪೋರೇಷನ್ ಆಫ್ ಇಂಡಿಯಾದವರ ವ್ಯಾಪ್ತಿಯಲ್ಲಿದ್ದು, ಎಕ್ಸ್ಪೋರ್ಟ್ ಮಾಡಲು ಬಾಂಗ್ಲ ಶ್ರೀಲಂಕಾದಿಂದ ಆರ್ಡರ್ ಬಂದಿರುವಲ್ಲಿ. Special dispension ಕೊಡಲು ಮುಖ್ಯಮಂತ್ರಿಯವರು ಕೇಂದ್ರ ವಾಣಿಜ್ಯ ಮಂತ್ರಿಗಳೊಡನೆ ಮಾತನಾಡಿರುವುದು, ಆದರಿಂದ 10 ಲಕ್ಷ ಕ್ವಿಂಟಾಲ್ ಮೆಕ್ಕೆ ಜೋಳವನ್ನು ರಫ್ತು ಮಾಡಲು ಅವಕಾಶವಾಗುವುದು, 31ನೇ ತಾರೀಖಿನವರೆಗೂ ಖರೀದಿ ಮಾಡುವುದು ಕುರಿತೆಲ್ಲ ಹೇಳಿದರು. ಶ್ರೀ **ಬಸವರಾಜ್ ಬೊಮ್ಮಾಯಿ** ಅವರು ಮಾತನಾಡುತ್ತ ಖಾಸಗಿಯವರು ರಾಣಿಬೆನ್ನೂರಿನಲ್ಲಿ ಖರೀದಿಸಿ ಕೋಲ್ಕತ್ತಾದಲ್ಲಿ ರೇಕ್ ಗಟ್ಟಳೆ ಲಾಭಕ್ಕೆ ಮಾರಿಕೊಳ್ಳುತ್ತಾರೆ. ಆದ್ದರಿಂದ ಬೆಲೆ ಸ್ವಲ್ಪ ಕಡಿಮೆಯಾದರೂ ಪರವಾಗಿಲ್ಲ. ಅದನ್ನು ಮಾರಾಟ ಮಾಡಬೇಕು ಎಂದರು. ಆಗ **ಶ್ರೀ ಎಚ್.ಕೆ ಪಾಟೀಲರು** ಹಾವೇರಿ ಜಿಲ್ಲೆಯ ವ್ಯಾಪಾರಿಗಳು ರೇಕ್ ಒಂದಕ್ಕೆ 370 ರೂ ಕೊಡುತ್ತೇವೆಂದು ಹೇಳಿದರು, ರೈತರು 42 ರೂ. ಗಿಂತ ಕಡಿಮೆ ಬೆಲೆಗೆ ಕೊಡುವುದಿಲ್ಲವೆಂದ ಕಾರಣ ರೇಕ್ ವಾಪಸಾಯಿತು, ಎಂದರು ಶ್ರೀ ಬಸವರಾಜ್ ಬೊಮ್ಮಾಯಿಯವರು ಖಾಸಗಿಯವರು ಆರ್ಗನೈಸ್ ಮಾಡಿ ರೇಕ್‌ಗಟ್ಟಳೆ ಒಯ್ಯುತ್ತಿರುವಾಗ ಸರ್ಕಾರಕ್ಕೆ ಏಕೆ ಸಾಧ್ಯವಿಲ! ಜೋಳ ಮತ್ತು ಪೌಲ್ಟ್ರಿ ಕೈಗಾರಿಕೆಗಳಿರುವೆಡೆಯಲ್ಲ ಸಂಪರ್ಕ ಬೆಳೆಸಿದರೆ ಭಾರ ಕಡಿಮೆ ಆಗುತ್ತದೆ. ಬರಿ ಖರೀದಿಮಾಡಿ ಗೊಬ್ಬರ ಮಾಡುವುದರಲ್ಲಿ ಅರ್ಥವಿಲ್ಲ, ಎಂದರು ಶ್ರೀ .ಡಿ.ಬಿ.ಇನಾಂದಾರ್ ಅವರು ಜೋಳದ ಕೈಗಾರಿಕೆಯವರೊಡನೆ ನಡೆಸಿರುವ ಚರ್ಚೆ ಭಾರತೀಯ ಆಹಾರ ನಿಗಮದವರು ದಕ್ಷಿಣಾವಲಯಕ್ಕೆ ಇಟ್ಟಿರುವ 2500 ಕೋಟಿ ರೂ. ಯಗ್‌ಯೂಸ್ಡ್ ಆದ ಮೇಲೆ ಕ್ಯಾಷ್‌ಕ್ರೆಡಿಟ್ ಪರಿಮಿತಿಯನ್ನು

ವಿಸ್ತಾರಗೊಳಿಸದಿದ್ದರೆ ಆಗುವ ತೊಂದರೆ ಕುರಿತು ಕೇಂದ್ರ ಮಂತ್ರಿಗಳೊಡನೆ ಮಾಡಿದ ಚರ್ಚೆ, ಕೇಂದ್ರದವರು ಆ ಬಗ್ಗೆ ಆರ್.ಬಿ.ಐ.ಗೆ ನಿರ್ದೇಶನ ಕೊಡುವ ಬಗ್ಗೆ ಈ ಕುರಿತೆಲ್ಲ ವಿವರಿಸಿದರು.

ಶ್ರೀ **ಕೆ.ಎಚ್.ಶ್ರೀನಿವಾಸ್** ಅವರು ಕುಸಿದು ಹೋಗುತ್ತಿರುವ ಕೃಷಿಕ್ಷೇತ್ರವನ್ನು ಮೇಲಕ್ಕೆತ್ತಲು ಮಾಡುವ ಪ್ರಯತ್ನದ ಬಗ್ಗೆ ಮುಖ್ಯಮಂತ್ರಿಗಳ ಉತ್ತರದ ಅಗತ್ಯವಿದೆ ಎಂದರು. ಶ್ರೀ ಡಿ.ಎಚ್.ಶಂಕರಮೂರ್ತಿಯವರು. ಶ್ರೀ ಬಿ.ಎಸ್.ಯಡಿಯೂರಪ್ಪನವರು ಈ ಮಾತಿಗೆ ಸಹಮತ ವ್ಯಕ್ತಪಡಿಸಿದರು. ಶ್ರೀ ಕೆ.ಎಚ್.ಶ್ರೀನಿವಾಸ್ ಅವರು ಮತ್ತೆ ಮಾತನಾಡಿ 3–4 ಇಲಾಖೆಗಳಲ್ಲಿ ಹೆಣೆಗೆಯಾಗಿರುವ ವಿಷವೃತ್ತದಲ್ಲಿ ಕೃಷಿ ಕ್ಷೇತ್ರ ಇದೆ. ರೈತ ಬೆಳೆದದ್ದನ್ನು ಇಡಲು ಜಾಗವಿಲ್ಲ. ಎಲ್ಲಿಗೆ ಒಯ್ಯುವುದು ಗೊತ್ತಿಲ್ಲ. ಮಾರಾಟ ಆಗಿಲ್ಲ. ಸಾಲ ಬೇರೆ ಕಟ್ಟಬೇಕು. ಪರಿಹಾರವಿಲ್ಲ. ಈ ಸಮಸ್ಯೆಗಳಿಗೆ ಮುಖ್ಯಮಂತ್ರಿಗಳೇ ಉತ್ತರಿಸಬೇಕೆಂದು ನನ್ನ ಸಲಹೆ ಇದೆ ಎಂದರು. ಶ್ರೀ ಡಿ.ಬಿ.ಇನಾಂದಾರ್ ಅವರು, ವಿರೋಧಪಕ್ಷ ಹಾಗು ಸರ್ಕಾರ ಸೇರಿ ಪರಿಹಾರ ಹುಡುಕೋಣ ಎಂದರು. ಶ್ರೀ ವಿ.ಆರ್. ಸುದರ್ಶನ್ ಅವರು ರಾಜ್ಯಪಾಲರ ಭಾಷಣದ ಮೇಲಿನ ವಂದನಾ ನಿರ್ಣಯದ ಬಗ್ಗೆ ಚರ್ಚೆ ಮಾಡುತ್ತ, ರೈತಪರವಾದ ಮೂಲಭೂತ ಅವಶ್ಯಕತೆಗಳ ಸೃಷ್ಟಿ, ಹೆಚ್ಚು ಬಂಡವಾಳ ಆಕರ್ಷಿಸುವ ಸಾಮಾಜಿಕ ಆರ್ಥಿಕ ಕಾರ್ಯಕ್ರಮಗಳ ಕುರಿತು ರಾಜ್ಯಪಾಲರ ಭಾಷಣ ಅಗಿದೆ; ಎಂದು ನುಡಿದು ವಿವಿಧ ವಿಷಯಗಳ ಕುರಿತು ವಿವರವಾಗಿ ಪ್ರಸ್ತಾಪಿಸಿದರು.

12.3.2001 ರ ವಿಧಾನ ಪರಿಷತ್ತಿನ ಅಧಿವೇಶನದಲ್ಲಿ[8] **ಶ್ರೀ ಟಿ.ಬಿ ಜಯಚಂದ್ರ** ಅವರು ರೈತರ ಸಮಸ್ಯೆಗಳಿಗೆ ಸರಕಾರ ಸ್ಪಂದಿಸಿ ಏನೆಲ್ಲ ಮಾಡಬೇಕೋ ಅದನ್ನೆಲ್ಲ ಮಾಡಿದೆ ಎಂದು ಕೃಷಿ ಉತ್ಪನ್ನಗಳ ಬೆಲೆ ಕುಸಿತ ರೈತರ ಹತಾಶೆ ಕುರಿತಂತೆ ಚರ್ಚೆಯಲ್ಲಿ ಹೇಳಿದರು; **ಶ್ರೀ ಡಿ.ಎಚ್ ಶಂಕರ ಮೂರ್ತಿ** ಅವರು ಸದ್ಯ ಚರ್ಚೆಯಾಗುತ್ತಿರುವ ವಿಷಯ ಹಣಕಾಸು ಇಲಾಖೆ, ಕಂದಾಯ ಇಲಾಖೆ, ಸಹಕಾರ ಇಲಾಖೆ, ಆಹಾರ ಇಲಾಖೆಗಳಿಗೆ ಇಂಟರ್‌ಲಿಂಕ್ ಆಗಿರುವ ಕಾರಣ ಮಾನ್ಯ ಮುಖ್ಯಮಂತ್ರಿಗಳು ಉತ್ತರಿಸಬೇಕೆಂದು ಬಯಸಿದರು. **ಶ್ರೀ ಬಿ ಎಲ್. ಶಂಕರ್** ಅವರು ಇದನ್ನು ಬೆಂಬಲಿಸಿ ಸಮಗ್ರ ಉತ್ತರದ ಅವಶ್ಯಕತೆ ಇದೆ ಎಂದರು. ಶ್ರೀ ಕೆ.ಎಚ್. ಶ್ರೀನಿವಾಸ

8. ವಿಧಾನ ಪರಿಷತ್ತಿನ ನಡವಳಿಕೆಗಳು: ಸಂಪುಟ 3001(3–5). ಭಾಗ–7,) (12.3.01) ಪು. 823–839

ಅವರು ಇದೇ ನಿಲುವು ತಳೆದು, ಕೊಬ್ಬರಿ ಮಾರಾಟವಾದರೂ ಇಲಾಖೆಯ ಹಣ ಕೊಡದಿರುವುದು ನ್ಯಾಫೆಡ್ ಜೊತೆ ಸರ್ಕಾರದ ಅಸಹಕಾರದ ಕಾರಣ ಬೆಳೆಗಾರರಿಗೆ ಆಗಿರುವ ಅನ್ಯಾಯ ಕುರಿತು ಪತ್ರಿಕಾ ಲೇಖನಗಳು ಬಂದಿರುವುದು, ಸತತವಾಗಿ ಹತಾಶೆಯ ಮಾರಾಟ ನಡೆಯುತ್ತಿರುವುದು ಕುರಿತೆಲ್ಲ ಹೇಳಿದರು. **ಶ್ರೀ ಎಚ್.ಕೆ. ಪಾಟೀಲ್** ಅವರು ನ್ಯಾಫೆಡ್‌ನವರು ಮುನಿಸ್ಟ್ರ ಆಫ್ ಅಗ್ರಿಕಲ್ಚರ್‌ಗೆ ಹಣ ಬಿಡುಗಡೆ ಮಾಡಲು ಮನವಿ ಮಾಡಿ, 3.5 ಕೋಟಿ ರೂ. ನಲ್ಲಿ 2.5 ಕೋಟಿ ರೂ. ಬಿಡುಗಡೆ ಮಾಡಿಸಿಕೊಂಡಿರುವ ಬಗ್ಗೆ ತಿಳಿಸಿದರು. ಶ್ರೀ ಕೆ.ಎಚ್. ಶ್ರೀನಿವಾಸ್ ಅವರು, ಮಾತು ಮುಂದುವರಿಸಿ ಬೆಲೆ ಕುಸಿದಾಗ ಮಾರುಕಟ್ಟೆಯ ಮಧ್ಯಪ್ರವೇಶದ ಸ್ವರೂಪ ಮತ್ತು ಗಾತ್ರ, ಸಮಸ್ಯೆಯನ್ನು ಎದುರಿಸಲು ಬೇಕಾದ ಸಹಕಾರ, ಸಂಘಟನೆ, ಸರ್ಕಾರಕ್ಕೆ ವಿವಿಧ ಇಲಾಖೆಗಳ ಮಾಹಿತಿ ಇರುವ ಕಾರಣ ಮುಖ್ಯಮಂತ್ರಿಗಳು ಈ ಬಗ್ಗೆ ಉತ್ತರಿಸಲಿ ಎಂದು ವಿನಂತಿ ಇಟ್ಟು ಹೇಳಿದರು, ಶ್ರೀ ಬಿ.ಎಸ್ ಯಡಿಯೂರಪ್ಪನವರು, ರೈತರ ಉತ್ಪನ್ನಗಳ ಖರೀದಿ ಅವಧಿ ವಿಸ್ತರಣೆ ಹಾಗು ರಫ್ತುವಿಗೆ ಕೇಂದ್ರವು ಒಪ್ಪಿರುವುದು; ಆದ ಶೇ 40 ರಷ್ಟು ಮಾತ್ರ ಭತ್ತ ಖರೀದಿಯಾಗಿರುವುದು, ಅಲ್ಪಾವಧಿ ಸಾಲವನ್ನು ವಿವಿಧ ಅವಧಿ ಸಾಲವಾಗಿ ಮಾಡಿ ಅವಧಿ ವಿಸ್ತರಣೆಗೆ ಅವಕಾಶ, ರೈತರ ಬಡ್ಡಿ ಮನ್ನಾ ಕುರಿತು ಉತ್ತರ ಬೇಕು ಕೃಷಿ ಸಚಿವರೇ ಉತ್ತರ ಕೊಡುವುದಾದರೆ ಎ.ಪಿ.ಎಂ.ಸಿ ಯಾರ್ಡ್‌ನಲ್ಲಿರುವ ಸ್ಟಾಕ್ ರೈತನ ಮನೆಯಲ್ಲಿ ಉಳಿದಿರುವ ಭತ್ತದ ಪ್ರಮಾಣ ಕುರಿತೆಲ್ಲ ವಿವರ ಕೇಳಿದರು. ಡಾ. **ಎಂ.ಪಿ.ನಾಡಗೌಡ** ಅವರು ರೈತರ ಬಡ್ಡಿ ಅವಧಿ ವಿಸ್ತರಣೆ ಕುರಿತೆಲ್ಲ ವಿವರ ಬಯಸಿದರು.ಮೆಕ್ಕೆಜೋಳ ಒಂದೇ ಅಲ್ಲದೆ ತೆಂಗು, ಟೊಮೋಟೊ, ತೋಟಗಾರಿಕೆ ಎಲ್ಲದರಲ್ಲೂ ಸಮಸ್ಯೆಗಳಿರುವಲ್ಲಿ ಮುಖ್ಯಮಂತ್ರಿಗಳೇ ಉತ್ತರ ಕೊಡಲಿ ಎಂದು ಆಶಿಸಿದರು. ಮುಂದುವರಿದ ಸಹಕಾರಿ ಬ್ಯಾಂಕ್‌ನ ದೀರ್ಘಾವಧಿ ಸಾಲದ ಕುರಿತು ಇಂಟ್ರಸ್ಟ್ ಸ್ಟಡಿ ಮಾಡುವುದು; ತೋಟಗಾರಿಕೆ ಉತ್ಪನ್ನಗಳ ಬೆಲೆ ಕುಸಿತಕ್ಕೆ ಪವರ್ ಟ್ಯಾರಿಫ್ ಲೋ ಮಾಡುವುದು ಕುರಿತೆಲ್ಲ ಮುಖ್ಯಮಂತ್ರಿಗಳು ಹೇಳಲಿ ಎಂದು ಬಯಸಿದರು. ಶ್ರೀ ಹೆಚ್.ಕೆ ಪಾಟೀಲರು ಸದಸ್ಯರು ಮೆಕ್ಕೆ ಜೋಳ ಖರೀದಿ ಕುರಿತು ಹಾಗು ಇತರೆ ಕೃಷಿ ವಿಷಯ ಕುರಿತು ಪ್ರಶ್ನೆ ಕೇಳಿದ್ದಾರೆ. ಇದಕ್ಕೆ ಮುಖ್ಯಮಂತ್ರಿಗಳು ಬಂದು ಉತ್ತರಿಸುವಲ್ಲಿ ಕೃಷಿ ಸಚಿವರು ಆತನಕ ತಮ್ಮ ಉತ್ತರವನ್ನು ನೀಡುತಾರೆ ಎಂದರು. **ಶ್ರೀ ಎಂ.ಎಸ್.ಸಿದ್ದರಾಜು** ಅವರು ಮಾತನಾಡಿ ರೈತರಿಗೆ ಕೊಡಬೇಕಾದ ಹತ್ತು ಕೋಟಿ ರೂ ಹಣದ ಬಾಕಿ ಕೊಡಲು ತಕ್ಷಣ ವ್ಯವಸ್ಥೆ

ಮಾಡಲು ತಿಳಿಸಿದರು. ಶ್ರೀ **ಮರಿತಿಬ್ಬೇಗೌಡರು** ರೈತರು ಅಪಾರವಾಗಿ ಹಾನಿಗೊಂಡು ಕಂಗಾಲಾಗಿರುವುದಕ್ಕೆ ಸಕ್ಕರೆ ಕಾರ್ಖಾನೆ ಆಡಳಿತ ಕಾರಣ ಅದು ತನಿಖೆಯಾಗಲಿ ಎಂದರು. **ಶ್ರೀ ಹೆಚ್ ಹೊನ್ನಪ್ಪನವರು** ಇದಕ್ಕೆ ಬೆಂಬಲ ವ್ಯಕ್ತಪಡಿಸಿ ರೈತರನ್ನು ಸರ್ಕಾರ ಮುಳುಗಿಸದೆ ರಕ್ಷಿಸಬೇಕು ಎಂಬ ಅಭಿಪ್ರಾಯವನ್ನು ವ್ಯಕ್ತ ಮಾಡಿದರು. **ಶ್ರೀ ಎ.ಕೃಷ್ಣಪ್ಪನವರು,** ಹಣದುರುಪಯೋಗ ಅಧಿಕಾರಿಗಳ ಕಾನೂನು ಬಾಹಿರ ಕಾರ್ಯ, ರೈತರಿಗೆ ಹಣಪಾವತಿಯಾಗದೆ ಒದಗಿರುವ ದು:ಖ ಕುರಿತು ಸದಸ್ಯರು ಹೇಳಿದ ಮಾತುಗಳಿಗೆ ಪ್ರತಿಕ್ರಿಯಿಸಿ, ಈ ವಿಷಯಗಳನ್ನು ಸಿ.ಓ.ಡಿ.ಗೆ ವಹಿಸಿದ್ದು ಪರಿಶೀಲನೆ ನಡೆಯುತ್ತಿದೆ. ಸದಸ್ಯರ ಉಳಿದ ಸಲಹೆಗಳನ್ನು ಸರ್ಕಾರ ಪರಿಶೀಲಿಸುತ್ತದೆ ಎಂದರು. ಶ್ರೀ ಹೆಚ್.ಕೆ. ಪಾಟೀಲ್ ಸಿ.ಓ.ಡಿ ತನಿಖೆ ಈ ಪ್ರಕರಣದಲ್ಲಿ ಸೂಕ್ತವೆನಿಸಿದುದರಿಂದ ಮಾಡಲಾಗಿದೆ ಎಂದರು. ಶ್ರೀ.ಎಂ.ಪಿ ಪ್ರಕಾಶ್ ಅವರು ಸಿ.ಓ.ಡಿ ತನಿಖೆಗಿಂತ ನ್ಯಾಯಾಂಗ ತನಿಖೆಯಿಂದ ಸೂಕ್ತ ನಿರ್ಣಯ ಬರುತ್ತದೆ ಎಂದರು. **ಶ್ರೀ ಬಿ.ಎಲ್.ಶಂಕರ್** ಅವರು ಎಲ್ಲಾ ರಾಜಕೀಯ ಪಕ್ಷದವರು ರೈತರ ಪರವಾಗಿ ಮಾತನಾಡಿ ಅಧಿಕಾರಿಗಳ ಬಗ್ಗೆ ವಿಶೇಷ ಪ್ರೀತಿ ತೋರುವುದು ನಮ್ಮ ವ್ಯವಸ್ಥೆಯಲ್ಲಿರುವ ದುರಂತ. ಕಾರ್ಖಾನೆಯ ಬೆಂಕಿಯ ಅನಾಹುತ ಅಕಸ್ಮಿಕ ಅಲ್ಲ; ಉದ್ದೇಶಪೂರ್ವಕ. ಅಲ್ಲಿನ ಅಧಿಕಾರಿಯನ್ನು ದಾಖಲೆಗಳನ್ನು ಮುಚ್ಚಲು ಅವಕಾಶವಾಗದಂತೆ ಅಮಾನತ್ತಿನಲ್ಲಿಟ್ಟು ಸಿ.ಓ.ಡಿ ಎನ್‌ಕ್ವೈರಿ ಆಗಲಿ ಎಂದರು, ಶ್ರೀ ಬಿ.ಎಸ್ ಯಡಿಯೂರಪ್ಪನವರು ನ್ಯಾಯಾಂಗ ತನಿಖೆಗೆ ಬೆಂಬಲ ತಿಳಿಸಿದರು. ಶ್ರೀ ಎಂ.ಎಸ್.ಸಿದ್ದರಾಜು ಅವರು, ಪಾಂಡವಪುರ ಶುಗರ್ ಫ್ಯಾಕ್ಟರಿಗೆ ಬೆಂಕಿ ಬೀಳುವ ಮುನ್ನವೇ ರೈತರಿಗೆ ಕೊಡಬೇಕಿದ್ದ ಬಾಕಿಹಣ ಹತ್ತು ಕೋಟಿ ರೂ ಇದ್ದು ಸಂಕಷ್ಟದಲ್ಲಿ ಇದ್ದುದು; ಸದ್ಯ ಐದು ಕೋಟಿ ರೂಗಳಷ್ಟು ಮೌಲ್ಯದ ಸಕ್ಕರೆ ಬೆಂದು ಹೋಗಿ ನಷ್ಟವಾಗಿರುವುದು ಬೆಂಕಿ ಆರಿಸುವಲ್ಲಿ ಹಾಳಾಗಿರುವ ಸಕ್ಕರೆ, ಕಬ್ಬು ಸರಬರಾಜು ಮಾಡಿರುವ ರೈತರ ಗತಿ ಅವರಿಗೆ ಹಣ ಕೊಡುವ ವ್ಯವಸ್ಥೆ ಆ ಬಗೆಗೆಲ್ಲ ಸಚಿವರಿಂದ ಉತ್ತರ ಬಯಸಿದರು. ವಿರೋಧ ಪಕ್ಷದ ನಾಯಕರಾದ ಶ್ರೀ ಕೆ.ಎಚ್. ಶ್ರೀನಿವಾಸ್ ಅವರು, ಈ ಸಂದರ್ಭದಲ್ಲಿ ಸಿ.ಓ.ಡಿ ಎನ್‌ಕ್ವೈರಿ ಮಾಡುವುದರ ಜೊತೆಗೆ ಸಂಬಂಧ ಪಟ್ಟ ಅಧಿಕಾರಿಯ ಕಾರ್ಖಾನೆ ನಿರ್ವಹಣೆಯಲ್ಲಿ ಅವರ ಪಾತ್ರವೂ ಇರುವಲ್ಲಿ ಸರ್ಕಾರಕ್ಕೆ ಸೂಕ್ತವೆನಿಸುವ ಕ್ರಮವನ್ನು ಅಧಿಕಾರಿಯ ಮೇಲೆ ತೆಗೆದುಕೊಳ್ಳುವ ನಿರ್ಧಾರವನ್ನು ಪ್ರಕಟಣೆ ಮಾಡಬೇಕು ಎಂದರು.

ಈ ದಿನದ ಚರ್ಚೆಯಲ್ಲಿ ಶ್ರೀ ಬಸವರಾಜ್ ಬೊಮ್ಮಾಯಿ ಅವರೂ ಪಾಲ್ಗೊಂಡಿದ್ದರು.

ವಿಧಾನ ಪರಿಷತ್ತಿನ 1.8.2001 ರ ಅಧಿವೇಶನದಲ್ಲಿ[9] ಭತ್ತದ ಬೆಲೆ ಕುಸಿತದ ಬಗ್ಗೆ ಸಚಿವ **ಶ್ರೀ ಡಿ.ಬಿ ಇನಾಂದಾರ್** ಅವರು ಮಾತನಾಡಿ, ಭತ್ತದ ಬೆಲೆ ಕುಸಿದಾಗ ಸರ್ಕಾರ ಸಪೋರ್ಟ್‌ಪ್ರೈಸ್‌ನಲ್ಲಿ ಖರೀದಿ ಮಾಡಲು ತೆರೆದಿರುವ ಖರೀದಿ ಕೇಂದ್ರಗಳು, 11.580 ಕ್ವಿಂಟಾಲ್ ಭತ್ತ ಮಾತ್ರ ಖರೀದಿಸಿರುವುದು, ಎಫ್.ಸಿ.ಐ ನವರು ಅಕ್ಕಿ ಖರೀದಿಗೆ ಲೆವಿ ಸಂಗ್ರಹ ಮಾಡಿರುವ ವ್ಯವಸ್ಥೆಯಿಂದಾಗಿ ಹೆಚ್ಚಿರುವ ಭತ್ತದ ಬೆಲೆ, ಕುಸಿದರೆ ಖರೀದಿ ಮಾಡುವ್ಯವಸ್ಥೆ, ಕುರಿತೆಲ್ಲ ಹೇಳಿದರು. **ಶ್ರೀ ಎಂ.ಎಸ್. ಸಿದ್ದರಾಜು** ಅವರು, ಸರ್ಕಾರ ಮಿಲ್ಲುಗಳಿಂದ ಲೆವಿ ಕೊಂಡುಕೊಂಡರೆ ರೈತರಿಗೆ ಸಿಗದ ಲಾಭ, ಮಿಲ್‌ಗಳಿಂದ ಅಕ್ಕಿ ಖರೀದಿ ಮಾಡುವಲ್ಲಿ ರೈತರಿಗೆ ಲಾಭವಿಲ್ಲದಿರುವುದು ಮಿಲ್ಲರ್ ರೈತನ ಮನೆ ಬಾಗಿಲಿಗೆ ಬಂದು 400 ರೂ ಗಳಿಗೆ ಕೊಂಡು 550–600 ರೂ.ಗಳಿಗೆ ಮಾರಿಕೊಳ್ಳುವುದು ಕುರಿತೆಲ್ಲ ಹೇಳಿದರು. ಶ್ರೀ ಡಿ.ಬಿ. ಇನಾಂದಾರ್ ಅವರು ಮಾತನಾಡಿ ಲೆವಿಯಲ್ಲಿ ಮೊದಲು ರೈತರಿಂದ ಖರೀದಿ ಮಾಡುವ ಪ್ರದೇಶ; ಬೆಂಬಲಬೆಲೆಗಿಂತ ಕಡಿಮೆ ಬೆಲೆ ಭತ್ತಕ್ಕೆ ಕಂಡು ಬಂದರೆ ಸರ್ಕಾರ ಖರೀದಿ ಮಾಡುತ್ತದೆ, ಎಂದರು. ಶ್ರೀ ಎಂ.ಎಸ್. ಸಿದ್ದರಾಜು ಅವರು ಕೇಂದ್ರ ಸರ್ಕಾರ ನಮ್ಮ ಭತ್ತ ಕೊಳ್ಳಲು ಶಿಫಾರಸ್ಸು ಮಾಡಬೇಕೆಂದು ಹೇಳಿದರು. ಶ್ರೀ ಎಚ್.ಎಸ್. ಶಾಂತವೀರಪ್ಪಗೌಡರು, ಮುಂಗಾರು ಬೆಳೆಯಲ್ಲಿ ಸಣ್ಣ ಭತ್ತಕ್ಕೆ ಬೆಲೆ ಬರದೆ, ಈಗ ದಪ್ಪ ಭತ್ತಕ್ಕೆ ಬೆಲೆ ಇಲ್ಲದೆ ರೈತ ಕಂಗೆಟ್ಟು 450ರೂಗಳಿಗೆ ಮಾರುತ್ತಿರುವಲ್ಲಿ ಸರ್ಕಾರ 550 ರೂ. ಗಳಿಗೆ ಕೊಳ್ಳಲು ಸಿದ್ದ ಎಂದರೆ ರೈತ ಸರ್ಕಾರಕ್ಕೆ ಮಾರುವುದಿಲ್ಲವೇ? ಎಂದು ಕೇಳಿದರು. **ಡಿ.ಎಚ್. ಶಂಕರ ಮೂರ್ತಿ** ಅವರು ಸರ್ಕಾರದ ಘೋಷಿತ ಬೆಲೆಗೆ ರೈತರು ತಮ್ಮ ಭತ್ತ ಮಾರಾಟ ಮಾಡಲು ಖರೀದಿ ಕೇಂದ್ರಗಳನ್ನು ಪ್ರಾರಂಭ ಮಾಡವ ಬಗ್ಗೆ, ಖರೀದಿಸುವ ಪ್ರಮಾಣ ಕುರಿತೆಲ್ಲ ವಿವರ ಬಯಸಿದರು. ಶ್ರೀ ಡಿ.ಬಿ ಇನಾಂದಾರ್ ಅವರು, ಸುಗ್ಗಿ ಕಾಲದಲ್ಲಿ ಸ್ಥಾಪಿಸಿದ 20 ಕೇಂದ್ರಗಳ ಪೈಕಿ 7 ಕೇಂದ್ರಗಳಲ್ಲಿ ಮಾತ್ರ ಭತ್ತ ತಂದು ರೈತರು ಮಾರಿರುವುದು, ಅಂದರೆ ರಾಯಚೂರು ಮಾನ್ವಿ ಸಿಂಧನೂರು, ಗಂಗಾವತಿ, ಶಿಕಾರಿಪುರ, ತೀರ್ಥಹಳ್ಳಿ, ಕುಶಾಲನಗರ ಕೇಂದ್ರಗಳಲ್ಲಿ ಸೇರಿ 11579 ಕ್ವಿಂಟಾಲ್ ಭತ್ತ ಬಂದಿದ್ದು. ಕೊಪ್ಪಳ ಶಿರಗುಪ್ಪ, ಹಾನಗಲ್, ಮದ್ದೂರು ಮಂಡ್ಯ, ಹಾಸನ, ಮೈಸೂರು, ಬಳ್ಳಾರಿ, ಹೊಸಪೇಟೆ, ಮುಂಡಗೋಡ, ಹಳಿಯಾಳ ಇತ್ಯಾದಿ

9. ವಿಧಾನ ಪರಿಷತ್ತಿನ ಅಧಿವೇಶನ, ಸಂಪುಟ 309(3–5) ಭಾಗ II(1.8.2001) ಪು.681–687

ಕಡೆ ಮಾರಲು ಬರಲಿಲ್ಲ. ಹೋದ ವರ್ಷ ಭತ್ತ ಬರದ ಕಡೆ 10.5.2001ಕ್ಕೆ ಕೇಂದ್ರಗಳನ್ನು ಬಂದ್ ಮಾಡಲಾಯಿತು ಎಂದರು. ಡಿ.ಎಚ್.ಶಂಕರ್ ಮೂರ್ತಿಯವರು ರೈತರಿಗೆ ಸರ್ಕಾರ ಭತ್ತ ತೆಗೆದು ಕೊಳ್ಳುತ್ತದೆ ಎಂದು ಗೊತ್ತಾಗಿದ್ದರೆ ಹೊರಗಡೆ ಭತ್ತವನ್ನು ಮಾರಾಟ ಮಾಡುತ್ತಿರಲಿಲ್ಲ ಎಂದುದಕ್ಕೆ ಶ್ರೀ ಎಂ.ಎಸ್. ಸಿದ್ದರಾಜು ಅವರು ದನಿಗೂಡಿಸಿದರು.

ಶ್ರೀ **ಕೆ. ಮಲ್ಲಪ್ಪನವರು,** ಭತ್ತದ ಧಾರಣೆ ಕಡಿಮೆಯಾಗಲು ಲೆವಿಯಲ್ಲಿ ಎಲ್ಲ ನಷ್ಟವನ್ನು ಸೇರಿಸಿಕೊಂಡು ಅದನ್ನು ಕಳೆದು ಭತ್ತವನ್ನು ಕೊಂಡುಕೊಳ್ಳುವ ಕಾರಣವಾಗಿದೆ. ಈ ಲೆವಿ ಪದ್ಧತಿಯಿಂದ ರೈತ ಶೋಷಣೆಗೀಡಾಗುತ್ತಾರೆ. ಲೆವಿ ಫಿಕ್ಸ್ ಮಾಡಿದಷ್ಟು ಕೊಡುವುದು ಎಂದರೆ ಅರ್ಧ ಹಣ ಕೊಡುತ್ತಾರೆ ಅಂದರೆ ಒಂದು ಸಾವಿರ ರೂಗಳಿಗೆ ನಷ್ಟ ಕಳೆದು ಕೊಂಡು 500–600 ರೂ ಕೊಟ್ಟು ಭತ್ತ ಖರೀದಿ ಮಾಡುತ್ತಾರೆ ನೇರವಾಗಿ ರೈತನಿಂದ ಕೊಳ್ಳುವ ಬದಲು ಅಪ್ರತ್ಯಕ್ಷವಾಗಿ ಮಿಲ್ ಮಾಲೀಕರು ಹಾಗೂ ಖರೀದಿದಾರರಿಂದ ಈ ವ್ಯವಸ್ಥೆ ಆಗಿದೆ. ಲೆವಿ ಪಾಯಿಂಟ್ ಅನ್ನು ರದ್ದು ಮಾಡಿದರೆ ಭತ್ತದ ಬೆಲೆ ಹೆಚ್ಚುವ ಸಂದರ್ಭ ಇದೆ. ಅಂತಾಗಿ ಸರ್ಕಾರ ಔಟ್‌ರೇಟ್ ಪರ್ಚೇಸ್ ಮಾಡಬೇಕು ಎಂದು ವಿನಂತಿಸಿದರು.

ಶ್ರೀ ಹೆಚ್. ಹೊನ್ನಮ್ಮನವರು, ಸರ್ಕಾರ ಹೇಳಿರುವಂತೆ ಖರೀದಿ ಕೇಂದ್ರಗಳನ್ನು ತೆರೆಯದೆ ತಪ್ಪು ಮಾಹಿತಿ ನೀಡಿ ರೈತರೊಡನೆ ಚಲ್ಲಾಟವಾಡುತ್ತಿದೆ. ಈ ಕಾರಣ ರೈತರನ್ನು 400 ರೂ. ಗಳಿಗೆ ಭತ್ತವನ್ನು ಮಾರಾಟ ಮಾಡುವ ಸ್ಥಿತಿಗಿಳಿಸಿ ಮಿಲ್ ಮಾಲೀಕರಿಂದ ಲೆವಿ ಮೂಲಕ ಕೊಂಡು ಅವರಿಗೆ ಅನುಕೂಲ ಮಾಡಿಕೊಡಲಾಗುತ್ತದೆ; ರೈತರಿಗೆ ಉಪಯೋಗವಾಗುತ್ತಿಲ್ಲ ಎಂದರು. ಶ್ರೀ ಹೆಚ್,ಎಸ್. ಶಾಂತವೀರಪ್ಪ ಗೌಡರು ಇದೇ ಅಭಿಪ್ರಾಯವನ್ನು ವ್ಯಕ್ತ ಮಾಡಿದರು. ಸಚಿವ ಶ್ರೀ ಡಿ.ಬಿ.ಇನಾಂದಾರ್ ಅವರು ಪ್ರತಿಕ್ರಿಯಿಸಿ ರೈತರಿಗೆ ಬೆಂಬಲ ಬೆಲೆ ಕೊಡುವ ಕಾರ್ಯದಲ್ಲಿ ಸರ್ಕಾರ ಮುಂದಿದೆ. ಬೆಲೆಗಳನ್ನು ಖಾಯಂ ಆಗಿ ಮಾನಿಟರ್ ಮಾಡುತ್ತಿರುವ ಕಡೆ ಸುಗ್ಗಿಯಲ್ಲಿ ಬೆಲೆ ಕಡಿಮೆಯಾದಂಥ ಸಂದರ್ಭದಲ್ಲಿ ರೈತ ಸಂಬಂಧವಾಗಿ ಖರೀದಿ ಕೇಂದ್ರಗಳ ವ್ಯವಸ್ಥೆ ಮಾಡಲಾಗಿದೆ. ನಿಗದಿತ ದಿನಾಂಕಕ್ಕೆ ಭತ್ತ ಬಂದ ನಂತರ ಮತ್ತೆ ಭತ್ತ ಬರಲಿಲ್ಲವಾದ ಕಡೆ ಕೇಂದ್ರಗಳನ್ನು ಬಂದ್ ಮಾಡಲಾಯಿತು. ಮಂಡ್ಯ ಜಿಲ್ಲೆಯಿಂದ ಬಂದ ಲೆವಿ ಓಪನ್ ಮಾಡಲು ಆಗ್ರಹ ಮಾಡಲಾಗಿ ಮೈಸೂರು ಮಂಡ್ಯ ರಾಯಚೂರು ಜಿಲ್ಲೆಗಳಲ್ಲಿ ಲೆವಿ ಸಂಗ್ರಹ ಮಾಡಿ ಎಂದು ಹೇಳಿದ ನಂತರ ಬೆಲೆಗಳು ಜಾಸ್ತಿಯಾಗಿರುವುದು ತಿಳಿದು ಬಂದಿದೆ. ಮಂಡ್ಯದಲ್ಲಿ ಕ್ವಿಂಟಾಲಿಗೆ 400ರಿಂದ500ರೂಗೇರಿದೆ. ಗೌರಿ ಸಣ್ಣ 580ರಿಂದ 600ರಗಳವರೆಗೆ ಬೆಲೆ ಇದೆ ಎಂದೆಲ್ಲ ಮಾಹಿತಿ ನೀಡಿದರು.

## ವಿಷಯ 2: ರಾಜ್ಯದಲ್ಲಿ ವ್ಯವಸಾಯೋತ್ಪನ್ನಗಳ ಬೆಲೆ ಕುಸಿತ

9.3.2001ರ ವಿಧಾನ ಸಭಾ ಕಾರ್ಯಕಲಾಪಗಳಲ್ಲಿಯ ಚರ್ಚೆಯಲ್ಲಿ[10] ಪಾಲ್ಗೊಂಡ ಕೃಷಿ ಸಚಿವ **ಶ್ರೀ.ಟಿ.ಬಿ.ಜಯಚಂದ್ರ** ಅವರು: ಇತ್ತೀಚಿನ ದಿನಗಳಲ್ಲಿ ಕಳೆದ 53 ವರ್ಷಗಳ ಗ್ರೀನ್ ರೆವಲ್ಯೂಷನ್ ಕಾರಣ, ಆಹಾರಧಾನ್ಯಗಳ ಉತ್ಪಾದನೆಯು ಗುರಿ ಮೀರಿ ಸಾಧನೆ ಆಗಿರುವುದು, ಅದರಿಂದ ಹೊಸ ಸಮಸ್ಯೆಗಳು ಎದುರಾಗಿರುವುದು, ರೈತರ ಕಷ್ಟಗಳನ್ನು ಪರಿಹರಿಸಲು ಈ ಹಿನ್ನೆಲೆಯಲ್ಲಿ ಉಭಯ ಸದನಗಳಲ್ಲಿ ಮಾನ್ಯ ಸದಸ್ಯರು ತಮ್ಮ ಚರ್ಚೆಗಳ ಮೂಲಕ ಬೆಳಕು ಚೆಲ್ಲುತ್ತಿರುವುದು, ಕಬ್ಬು ರೇಷ್ಮೆ ಹೊರತಾಗಿ ಉಳಿದ ಬೆಳೆಗಳು ಬೆಂಬಲ ಬೆಲೆಗೂ ಕಡಿಮೆಯಾಗಿ ಸೇಲ್ ಆಗುತ್ತಿರುವುದನ್ನು ಮಂತ್ರಿಗಳು ಹಾಗೂ ಶಾಸಕರು ಮಾರುಕಟ್ಟೆಗಳಿಗೆ ಹೋಗಿ ಪರೀಕ್ಷಿಸಿ ರೈತರ ಕಷ್ಟವನ್ನು ಅರ್ಥವಾಡಿಕೊಂಡಿರುವುದು, ಆಹಾರೋತ್ಪಾದನೆ ಸರ್‌ಪ್ಲಸ್ ಆಗಿರುವುದು buying ಪವರ್ ಕಡಿಮೆ ಆಗಿರುವುದು, ಯೋಜನೆ ಹಾಕಿಕೊಂಡು ಎಂಪ್ಲಾಯ್‌ಮೆಂಟ್ ಆಪರ್ಚುನಿಟಿ ಕ್ರಿಯೇಟ್ ಮಾಡಬೇಕಿರುವುದು, ರೈತರ ಬೆಳೆ ಸಂಗ್ರಹ ಕಾರ್ಯದಲ್ಲಿ, ಹೊಸ ಮಾರ್ಪಾಟುಗಳನ್ನು ಮಾಡಿಕೊಳ್ಳಬೇಕಿರುವುದು, ಶೇ. 75ರಷ್ಟು ನಮ್ಮಲ್ಲಿ ಮಳೆಯಾಶ್ರಿತ ವ್ಯವಸಾಯವಿರುವುದು, ಸರ್‌ಪ್ಲಸ್ ಅನ್ನು ಡಿಸ್‌ಪೋಸ್ ಮಾಡಬೇಕಿರುವ ವಿಧಾನ, ಇದರಿಂದ ಮಾರುಕಟ್ಟೆಯ ಮೇಲೆ ಬೀರುವ ಪರಿಣಾಮ, ಕೇಂದ್ರ ಸರ್ಕಾರ ನಿಗದಿ ಪಡಿಸುವ ಬೆಂಬಲ ಬೆಲೆ ಹೆಚ್ಚು ಕಡಿಮೆ 20–30% ವ್ಯತ್ಯಾಸದಲ್ಲಿ ಈವರೆಗೂ ವ್ಯವಹಾರ ನಡೆದು ಬಂದಿದ್ದರೂ, ಪ್ರೊಡಕ್ಷನ್ ಜಾಸ್ತಿ ಆದರೆ ಅದು ಪೂರ್ಣ ಕುಸಿದು ಬೀಳುವ ಸಾಧ್ಯತೆ, ಅಂಥ ಸಂದರ್ಭದಲ್ಲಿ ನಮ್ಮ ಕೃಷಿ ನೀತಿಯನ್ನು ಹೊಸ ರೀತಿಯಲ್ಲಿ ನೋಡಬೇಕಾಗುವುದು, ವಿಶ್ವವೇ ಮಾರುಕಟ್ಟೆ ಆಗಿರುವಲ್ಲಿ ಬೇರೆ ರಾಷ್ಟ್ರಗಳಿಗೆ ಬೇರೆ ರಾಷ್ಟ್ರ, ರಾಜ್ಯಗಳಿಗೆ ನಮ್ಮ ಉತ್ಪನ್ನವನ್ನು ಕಳುಹಿಸುವ ರೀತಿಯಲ್ಲಿ ಸಜ್ಜುಗೊಳಿಸಬೇಕಿರುವುದು, ಕೊಯಿಲಿನ ನಂತರದ ತಂತ್ರಜ್ಞಾನದ ಬಗ್ಗೆ ನಾವು ಒತ್ತುಕೊಡಬೇಕಿರುವುದು, ವ್ಯಾಲ್ಯು ಅಡಿಷನಲ್ ಜಾಸ್ತಿ ಮಾಡುವುದರ ಬಗ್ಗೆ ನಮ್ಮ ವಿಜ್ಞಾನ ಹಾಗೂ ತಾಂತ್ರಿಕತೆಯನ್ನು ಸಜ್ಜುಗೊಳಿಸುವಲ್ಲಿ ರೈತರತ್ತ ಗಮನ ಹರಿಸುವುದು, ಗ್ರಾಮೀಣ ಪ್ರದೇಶದ ಶೇ.70 ರಷ್ಟು ಜನ ಕೃಷಿ ಅವಲಂಬಿಸಿದ್ದು, ಅವರ ಒಡೆತನ ಕೇವಲ 1 ಹೆಕ್ಟೇರಿಗೆ (ಸುಮಾರು 3–4 ಎಕರೆ) ಬಂದು ನಿಂತಿರುವುದು, ಅಂಥ ಸಣ್ಣ ರೈತರು ಇಂದಿನ ವೈಜ್ಞಾನಿಕತೆ ಅಳವಡಿಸಿಕೊಂಡು

10. ಆ ವಿಧಾನ ಸಭೆಯ ನಡವಳಿಕೆಗಳು., ಸಂಪುಟ 2, (1–3), ಭಾಗ–1 (9.3.2001) ಪು. 752–799

ಬೆಳೆಯ ಸಾಮರ್ಥ್ಯ ತೋರಿದ್ದರೂ, ಸಮಸ್ಯೆಗಳ ನಡುವೆ ಅವರ ಜೀವನ ತೀರ ಕಷ್ಟಗೊಂಡಿರುವುದು, ಇಂಥ ಸಮಯದಲ್ಲಿ ಅವರು ಬೆಳೆದ ಬೆಳೆಗೆ ಕನಿಷ್ಟ.. ಬೆಂಬಲ ಬೆಲೆ ಕೊಟ್ಟು ಕೊಂಡುಕೊಳ್ಳುವ ವ್ಯವಸ್ಥೆ ಸಮರ್ಪಕವಿರಬೇಕಾದುದು, ರೈತರಿಗೆ ಅಸಮರ್ಪಕ ವಿದ್ಯುತ್ತಿನಿಂದ ಆಗುವ ತೊಂದರೆ, ಸಾಲ ನೀಡುವ ಪದ್ಧತಿಯಲ್ಲಿ ಬದಲಾವಣೆ, ಅಧಿಕಾರಿಗಳನ್ನು ಅಂಕೆಯಲ್ಲಿಟ್ಟಿರುವುದು, ಕುರಿತೆಲ್ಲ ಹೇಳಿಕೆ ನೀಡಿದರು. **ಶ್ರೀ ಸಿ.ಬೈರೇಗೌಡರು** ಸಚಿವರ ಹೇಳಿಕೆಯಲ್ಲಿ ಉಪ್ಪು – ಹುಳಿ ಏನೂ ಇಲ್ಲ. it may be taken as read, ಎಂದ ಮಾತಿಗೆ ಶ್ರೀ ಟಿ.ಬಿ.ಜಯಚಂದ್ರ ಅವರು ಮಾತನ್ನು ಮುಂದುವರಿಸಿ, ಉತ್ತಮ ಹವಾಮಾನದ ಕಾರಣ ಬೆಳೆಗಳ ಉತ್ಪಾದನೆ (ಮೆಕ್ಕೆ ಜೋಳ 31 ಲಕ್ಷ ಟನ್, ರಾಗಿ: 17.36 ಲಕ್ಷ ಟನ್; ಹೀಗೆಯೇ ಜೋಳ, ಸಜ್ಜೆ, ಆಲೂಗೆಡ್ಡೆ, ಈರುಳ್ಳಿ ಇತ್ಯಾದಿ) ಹೆಚ್ಚಾಗಿದ್ದು, ಸರ್ವಪಕ್ಷ ನಿಯೋಗವನ್ನು ಒಯ್ದು ಕೇಂದ್ರ ಸರ್ಕಾರಕ್ಕೆ ಮನವರಿಕೆ ಮಾಡಲು ಜನವರಿ 2001ರಲ್ಲಿ ಹೋಗಿದ್ದುದು, ಪಂಜಾಬು, ಹರಿಯಾಣದಲ್ಲಿ ಅಕ್ಕಿ ಉತ್ಪಾದನೆಯ ಹೆಚ್ಚಳದಿಂದಾಗಿ ಅಕ್ಕಿ ಬೆಲೆಯ ಮೇಲೆ ಪರಿಣಾಮ ಬೀರಿರುವುದು, ಬೇರೆ ದೇಶಗಳಿಂದ ಅಕ್ಕಿ ಆಮದಿಗೆ ಕೇಂದ್ರದ ಅನುಮತಿ ಹಾಗು ಕಡಿಮೆ ಶುಲ್ಕದ ಕಾರಣ ಬೆಲೆ ಕುಸಿತವಾಗಿರುವುದು. ಆಲೂಗಡ್ಡೆ ನೆಲಗಡಲೆ, ಸೋಯಾ, ಅವರೆ, ಸೂರ್ಯಕಾಂತಿ, ಮುಸುಕಿನ ಜೋಳ ಸಂಬಂಧದಲ್ಲಿ ಮಾರುಕಟ್ಟೆ ಪ್ರವೇಶ ಮಾಡಿ ಉಳಿದ ರಾಜ್ಯಗಳಿಗಿಂತ ಹೆಚ್ಚು ಖರೀದಿಸಿ ರಾಜ್ಯ ಸರ್ಕಾರ ಶೇ. 40ಕ್ಕಿಂತಲೂ ಹೆಚ್ಚು ಪ್ರಮಾಣದಲ್ಲಿ ಸಂಗ್ರಹಣೆ ಮಾಡಿರುವುದು (1568 ಕೋಟಿ ರೂ. ಮೌಲ್ಯದ 4288.688 ಕ್ವಿಂಟಾಲ್‌ನಷ್ಟು ಧಾನ್ಯ); ಬೆಳೆ ಸಂಸ್ಕರಣಾ ವ್ಯವಸ್ಥೆಯನ್ನು ಅಭಿವೃದ್ಧಿಗೊಳಿಸಿ, ಆಗ್ರೋಕಾನ್‌ಪ್ರಾಡಕ್ಟ್‌ನಂಥ ಸಂಸ್ಥೆಯನ್ನು ಬಲಪಡಿಸುವುದು, ಕೃಷಿ ಅವಲಂಬಿತ ಉದ್ದಿಮೆಗಳನ್ನು ತೃಪ್ತಿಕರವಾಗಿ ಮುನ್ನಡೆಸಬೇಕಿರುವುದು, ಮುಸುಕಿನ ಜೋಳದಿಂದ ಸ್ಟಾರ್ಚ್ ತಯಾರಿಕೆಗೆ ಹಿಂದೇಟು ಆಗಿದ್ದರೂ, ಕಾರ್ನ್‌ಆಯಿಲ್ ತಯಾರಿಸಿ ಪಡಿತರ ವ್ಯವಸ್ಥೆಯಲ್ಲಿ ಬಳಸುವ ಅವಕಾಶದ ಪರಿಶೀಲನೆ, ಎಲ್ಲ ಬೆಳೆಗಳಲ್ಲಿ ಬೆಲೆ ಕುಸಿತವಾಗಿದ್ದರೂ, ***ಹಂಗಾಮಿಗೆ ಪೂರ್ವದಲ್ಲಿ ಖರೀದಿ ಬೆಲೆಯ ನಿರ್ಧಾರ ಮತ್ತು ಬೆಳೆದ ಫಸಲಿನ ಕಡ್ಡಾಯ ಖರೀದಿ ಮಾಡುವಂಥ ವ್ಯವಸ್ಥೆ*** contract farming ನಲ್ಲಿದ್ದು ಅದಕ್ಕೆ ಕಬ್ಬು ಮತ್ತು ತಂಬಾಕು ಬೆಳೆ ಒಳಪಟ್ಟಿರುವ ಕಾರಣ – ಅವುಗಳ ಬೆಲೆ ಕುಸಿತ ಕಂಡುಬಂದಿಲ್ಲದಿರುವುದು, ಈ ಕಾರಣ ಖಾಸಗಿವಲಯದಲ್ಲಿ ಸೌತೆ (ಗೆರ್ಕಿನ್), ಹೀರೆ, ಹಾಗಲ ಬೆಳೆಯಲ್ಲಿ ಈ ವ್ಯವಸ್ಥೆ ಇರುವುದು, ಏಕ ಬೆಳೆ ಪದ್ಧತಿಯನ್ನು ಹೋಗಲಾಡಿಸುವುದು, ರಫ್ತು ಮೇಲಿನ ನಿರ್ಬಂಧನೆಗಳನ್ನು ಕೇಂದ್ರವು ತೆಗೆಯಲು ಕೋರುವುದು, ಕೃಷಿಯು ಸಂವಿಧಾನದ

47 ಮತ್ತು 48 ನೇ ಕಲಮಿನನ್ವಯ ರಾಜ್ಯದ ವಿಷಯವಾಗಿದ್ದರೂ W.T.O. ರಫ್ತು ಮತ್ತು ಆಮದು ನೀತಿಗಳ ಬಗ್ಗೆ ಕೇಂದ್ರವು, ಉತ್ಪಾದಕ ರಾಜ್ಯಗಳ ಅಭಿಪ್ರಾಯ ಕೇಳದೆ ಏಕಪಕ್ಷೀಯವಾಗಿ ಕ್ರಮ ಕೈಗೊಳ್ಳುತ್ತಿರುವಲ್ಲಿ ಮುನ್ನವೆ ರಾಜ್ಯ ಸರ್ಕಾರಗಳೊಡನೆ ಸಮಾಲೋಚಿಸಲು ಒತ್ತಾಯ ಪಡಿಸಬೇಕಿರುವುದು, ಖರೀದಿ ಕಾರ್ಯಕ್ಕೆ ಬೇಕಾಗಿರುವ ಸಿಬ್ಬಂದಿ ಹಾಗೂ ಅಧಿಕಾರಿಗಳಿಗೆ ತರಬೇತಿ ನೀಡಿ ವರ್ಗೀಕರಣ ಕಾರ್ಯಕೈಗೊಳ್ಳುವುದು, ಎಫ್.ಸಿ.ಐ. ಮುಖೇನ ಪ್ರಾರಂಭದಲ್ಲಿ ಖರೀದಿ ಮಾಡಿರುವ ತಿಂಗಳ ಅವಧಿಯಲ್ಲಿ 15 ದಿನಗಳು ಕಳೆದು ಹೋಗಿದ್ದರೂ, ಮಾರುಕಟ್ಟೆಯಲ್ಲಿ ಮೆಕ್ಕೆಜೋಳ, ರಾಗಿ ಹಾಗೂ ಇತರೆ ಫಸಲುಗಳು ಸಾಕಷ್ಟು ಹಾಗೆಯೇ ಉಳಿದಿರುವುದು ಇವುಗಳ ದಾಸ್ತಾನಿಗೆ ಗೋದಾಮಿನ ಸಮಸ್ಯೆ ಇರುವುದು, ಮಾನ್‌ಸೂನ್ ಶವರ್ಸ್ ಆರಂಭವಾದರೆ ಈ ಬೆಳೆ ನೆನೆದು ರೈತರ ಕಷ್ಟ ಉಲ್ಬಣವಾಗುವುದು, ರೈತರಲ್ಲಿ ಉಳಿದಿರುವ ಸಾಕಷ್ಟು ಫಸಲನ್ನು ಬಳಸಿಕೊಳ್ಳಬೇಕಾದ ತಂತ್ರಜ್ಞಾನದ ಕೊರತೆ, ನಾವು ಬೆಳೆದಿರುವ ಕೋರ್ಸ್‌ಗ್ರೈನ್ಸ್‌ನ ಹೆಚ್ಚಿದ ಉತ್ಪಾದನೆಯ ಬಗ್ಗೆ ಕೇಂದ್ರವು ವಿಶೇಷ ಗಮನವನ್ನು ಇತರ ರಾಜ್ಯಗಳಿಗೆ ಪ್ರೊಕ್ಯೂರ್‌ಮೆಂಟ್‌ನಲ್ಲಿ ಕೊಡುತ್ತಿರುವಂತೆ ಗಮನ ಕೊಡಬೇಕಿರುವುದು, ಕಷ್ಟದಲ್ಲಿರುವ ನಮ್ಮ ರೈತರಿಗೆ ಕೇಂದ್ರವು ಸ್ಪಂದಿಸಿ ನೆರವಾಗಬೇಕಿರುವುದು – ಈ ಕುರಿತಲ್ಲ ಹೇಳಿ ತಮ್ಮ ಮಾತನ್ನು ಮುಗಿಸಿದರು.

ವಿರೋಧ ಪಕ್ಷದ ನಾಯಕರಾದ ಶ್ರೀ **ಜಗದೀಶ್ ಶೆಟ್ಟರ್** ಅವರು ಮಾತನಾಡಿ: ನಾನು ಆವರ್ತ ನಿಧಿ ಕುರಿತು ಪ್ರಶ್ನೆ ಎತ್ತಿದಾಗ ಮುಖ್ಯಮಂತ್ರಿಗಳು ಘೋಷಿಸಿದ್ದು 100 ಕೋಟಿ ಎಂದಾದರೂ, 75 ಕೋಟಿ ರೂ.ಗೆ ಸೀಮಿತವಾದದ್ದು, ಅದಕ್ಕೆ ಆದ ಸಂಗ್ರಹ, ಅದರಲ್ಲಿ ಮಾಡಿದ ಖರ್ಚು ಕುರಿತು ಹೇಳಿದ್ದು, ಆವರ್ತನಿಧಿಗೆ ಸರ್ಕಾರ ಬಿಡುಗಡೆ ಮಾಡಿರುವ 23,440 ಲಕ್ಷ ರೂ. ರೈತನ ಬೆಳೆಗಳು ಖರೀದಿಯಾಗದೆ, ಸಂಕಷ್ಟಗೊಂಡಿರುವುದು, ಖರೀದಿ ಮಾಡಲು ಸದಸ್ಯರ ಒತ್ತಾಯ, ಎಕ್ಸೈಸ್ ಲಾಬಿಗೆ 260 ಕೋಟಿ ರೂ.ಗಳ ಬಡ್ಡಿ ಮನ್ನಾ ಮಾಡಲು ಸಿದ್ಧವಿರುವ ಸರ್ಕಾರ, ರೈತ ಹಿತರಕ್ಷಣೆಗಾಗಿ 75 ಕೋಟಿ ರೂ. ಸಂಗ್ರಹ ಮಾಡಲು 6 ತಿಂಗಳಾದರೂ ಸಾಧ್ಯವಾಗದಿರುವುದು, ಕೇಂದ್ರ ಸರ್ಕಾರದವತಿಯಿಂದ ಲೆವಿಭತ್ತಕ್ಕೆ 200 ಕೋಟಿ, ಮೆಕ್ಕೆ ಜೋಳಕ್ಕೆ 130 ಕೋಟಿ, ಕೊಬ್ಬರಿಗೆ 10.33 ಕೋಟಿ ರೂ.ನಂತೆ ಖರೀದಿ ಮಾಡಿರುವುದು, ಕೇಂದ್ರವು 400 ಕೋಟಿ ರೂ.ಗಳನ್ನು ವಿನಿಯೋಗಕ್ಕಿಟ್ಟರೂ ರಾಜ್ಯ ಸರ್ಕಾರ ಖರ್ಚು ಮಾಡಿರುವುದು ಕೇವಲ 14 ಕೋಟಿ ರೂ. ಆಗಿರುವುದು

ಕುರಿತೆಲ್ಲ ಹೇಳಿದರು. **ಶ್ರೀ ಬಿ.ಎಚ್.ಬನ್ನಿಕೋಡ್** ಅವರು ರಾಷ್ಟ್ರದಲ್ಲಿ ರೈತರು ಬೆಳೆದ ಬೆಳೆಗಳ ಬೆಲೆ ಇಳಿದಾಗ ಬೆಂಬಲ ಬೆಲೆಗೆ ಕೊಳ್ಳತಕ್ಕದ್ದು ಮುಖ್ಯವಾಗಿ ಕೇಂದ್ರ ಸರ್ಕಾರದ ಕರ್ತವ್ಯ ಎಂದರು. ಶ್ರೀ ಜಗದೀಶ್ ಶೆಟ್ಟರ್ ಅವರು ಮುಂದುವರಿದು ಕೇಂದ್ರದ ಹಣ ಬಂದಾಗ ರಾಜ್ಯಸರ್ಕಾರ ಉಪಯೋಗಮಾಡಿಕೊಳ್ಳುವ ಪರಿಸ್ಥಿತಿಯಲ್ಲಿರಬೇಕು ಎಂದರು. ಹಿರೇಕೆರೂರಿನಲ್ಲಿ ಮೆಕ್ಕೆ ಜೋಳದ ಖರೀದಿ ಮಂದಗತಿಯಲ್ಲಿ ನಡೆದಿದೆ. ರಾಜ್ಯ ಸರ್ಕಾರ ಏನೂ ಖರೀದಿ ಮಾಡುತ್ತಿಲ್ಲ. ಮೆಕ್ಕೆ ಜೋಳದ ಉತ್ಪಾದನೆ ಹೆಚ್ಚು ಇದೆ ಎಂದು ಕೃಷಿ ಸಚಿವರು ಹೇಳಿರುವುದಕ್ಕೆ ಬದಲಾಗಿ ರೆಕಾರ್ಡ್‌ನಲ್ಲಿ ಕಡಿಮೆ (21 ಲಕ್ಷ ಟನ್ ಎಂಬ ಬದಲು 20 ಲಕ್ಷ) ಸೂಚಿಸಿದೆ ಎಂದರು. ಕೃಷಿ ಸಚಿವ ಶ್ರೀ ಟಿ.ಬಿ.ಜಯಚಂದ್ರ ಅವರು ಪ್ರತಿಕ್ರಿಯಿಸಿ 221 ಲಕ್ಷ ಕ್ವಿಂಟಾಲ್‌ನಲ್ಲಿ ಹತ್ತು ಪರ್ಸೆಂಟ್ ಅಂದರೆ 20 ಲಕ್ಷದಷ್ಟು ಪ್ರೊಕ್ಯೂರ್‌ಮೆಂಟ್ ಆಗಿದೆ ಎಂದರು. ಶ್ರೀ ಜಗದೀಶ್ ಶೆಟ್ಟರ್ ಅವರು ಮತ್ತೆ ಮಾತು ಮುಂದುವರಿಸಿ, ತ್ವರಿತಗತಿಯಲ್ಲಿ ಖರೀದಿ ಆಗುತ್ತಿಲ್ಲ, ನವಲುಗುಂದ, ನರೆಗುಂದ, ಕೊಪ್ಪಳ ಎಲ್ಲ ಕಡೆಯೂ ಈ ಬಗ್ಗೆ ಸಮಸ್ಯೆ ಇದೆ. 75 ಕೋಟಿ ರೂ ಆವರ್ತನಿಧಿಯನ್ನು ಸ್ಥಾಪನೆ ಮಾಡಿಲ್ಲ ರೈತರ ಸಾಲದ ಮೇಲಿನ ಬಡ್ಡಿ ಮನ್ನಾ ಮಾಡಿಲ್ಲ. ಸಣ್ಣ ಅವಧಿಸಾಲಗಳನ್ನು ದೀರ್ಘಾವಧಿಗೆ ಪರಿವರ್ತನೆ ಮಾಡಿಲ್ಲ. ರೈತರ ಮನೆಗೆ ಬೆನ್ನು ಹತ್ತಿ ಅಧಿಕಾರಿಗಳು, ಬ್ಯಾಂಕಿನವರು ಅರೆಸ್ಟ್‌ವಾರಂಟ್ ಜಪ್ತಿವಾರೆಂಟನ್ನು ಸಾಲವಸೂಲಿಗೆ ಕಳುಹಿಸುತ್ತಿದ್ದಾರೆ. ಇದನ್ನು ತಕ್ಷಣ ನಿಲ್ಲಿಸಿ ಅಥವಾ ಅವಧಿ ಮುಂದೂಡಿ, ಬಡ್ಡಿಮನ್ನಾ ಮಾಡುವುದಾಗಬೇಕು. ರೈತರ ಪಂಪು ಸೆಟ್ಟುಗಳಿಗೆ ವಿದ್ಯುಚ್ಛಕ್ತಿಯನ್ನು ಕನಿಷ್ಟ.. 8–10 ತಾಸುಗಳ ಅಬಾಧಿತ ಸರಬರಾಜು ಆಗಬೇಕು. ರೈತರ ಆತ್ಮಹತ್ಯೆ ಪ್ರಕರಣಗಳು ಬೆಂಗಳೂರು ತಾಲೂಕು, ಧಾರವಾಡ ತಾ. ತಳವಾಡ ಗ್ರಾಮದಲ್ಲಿ ನಡೆದು ಪೋಲೀಸ್ ಸ್ಟೇಷನ್‌ನಲ್ಲಿ ದಾಖಲಾಗಿದ್ದರೂ ಆ ರೈತರ ಮನೆಗೆ ಅಧಿಕಾರಿಗಳಾಗಲಿ, ಸಚಿವರಾಗಲಿ ಹೋಗಿಲ್ಲ. ಆದರೂ ಪರಿಹಾರಧನವನ್ನು ನೀಡಿರುವುದಕ್ಕೆ ಧನ್ಯವಾದಗಳು. ಆವರ್ತನಿಧಿಗೆ ರಾಜ್ಯಸರ್ಕಾರವೂ ಹಣ ಹಾಕಿ ಸ್ಥಾಪನೆ ಮಾಡಿ ಕೇಂದ್ರದಿಂದಲೂ ಪಡೆದುಕೊಳ್ಳಲಿ ಎಂದೆಲ್ಲ ಹೇಳಿ ತಮ್ಮ ಮಾತು ಮುಗಿಸಿದರು.

**ಶ್ರೀ ಪಿ.ಜಿ.ಆರ್.ಸಿಂಧ್ಯ** ಅವರು, ರೈತರ ಆತ್ಮಹತ್ಯೆ ಪ್ರಮಾಣವು ದಾಖಲೆಯ ನಮೂದಿಗಿಂತಲೂ ಹೆಚ್ಚಾಗಿ ಕಾಣಬರುತ್ತಿರುವುದು, ಈ ಬಗ್ಗೆ ಮ್ಯಾಜಿಸ್ಟ್ರೇಟರಿಯಲ್ ಎನ್‌ಕ್ವೈರಿಯು ಅಸಿಸ್ಟೆಂಟ್ ಕಮಿಷನರಿಂದ ಮೊದಲ ವಿಚಾರಣೆಯ ನಂತರ

ಆಗಬೇಕಿರುವುದು, ಕಳೆದ ಮೂರುತಿಂಗಳಿಂದ ನಡೆಯುತ್ತಿರುವ ರೈತ ಚಳುವಳಿಯಲ್ಲಿ ರೈತರು ಹಾಗೂ ರೈತಪ್ರತಿನಿಧಿಗಳ ಮೇಲಿನ ಮೊಕದ್ದಮೆಗಳನ್ನು ವಾಪಸ್ ತೆಗೆದುಕೊಳ್ಳುವುದು, ರೈತರಿಗೆ ಕೊಟ್ಟಿರುವ 14 ಕೋಟಿ ರೂ. ಸಾಲದ ಮೇಲಿನ ಬಡ್ಡಿಯನ್ನು ಪೂರ್ಣಮನ್ನಾ ಮಾಡುವುದು ಸಾಲಗಳನ್ನು ದೀರ್ಘಾವಧಿ ಸಾಲಗಳಿಗೆ ಪರಿವರ್ತನೆ, ರೈತರ ಮನೆ ಜಪ್ತಿಗೆ ತಡೆಹಾಕುವುದು, ಅಕ್ಕಿ, ಅಡಿಕೆ, ತೆಂಗು ಕಬ್ಬಿನ ಮೇಲೆ ಹಾಕಿರುವ ಪರ್ಚೇಸ್ ಟ್ಯಾಕ್ಸ್ ತೆಗೆದುಹಾಕುವುದು, ರೈತರಿಗೆ ಕ್ವಾಲಿಟಿ ಪವರ್ ಸಪ್ಲೈ ಮಾಡುವುದು ಕುರಿತೆಲ್ಲ ಹೇಳಿ ಮಾತು ಮುಗಿಸಿದರು.

**ಶ್ರೀ ಸಿ.ಬೈರೇಗೌಡರು** ಮಾತನಾಡುತ್ತ: ಬೆಳೆ ಉತ್ಪನ್ನಗಳು ಹಿಂದಿನ ವರ್ಷಕ್ಕಿಂತ ಈ ವರ್ಷ ಹೆಚ್ಚಲು ಕಾರಣಗಳು, ಹೋದ ವರ್ಷ ಹತ್ತಿ ಬೆಲೆ ಕುಸಿತ, ಹುಳು ಬಿದ್ದದ್ದು ಈ ಕಾರಣ ರೈತರು ಜೋಳ ಬೆಳೆದದ್ದು, ಮುಂದೆ ಕಡಲೆಕಾಯಿ ಬೆಳೆಯ ಬಹುದಾದದ್ದು, ಯಾವುದೇ ಒಂದು ಬೆಳೆಗೆ ಉತ್ತಮ ಬೆಲೆ ಸಿಗುವಲ್ಲಿ ಎಲ್ಲಾ ರೈತರೂ ಅದನ್ನೆ ಬೆಳೆಯುವುದು, ಇಂಥ ಸಂದರ್ಭದಲ್ಲಿ ಮಾರುಕಟ್ಟೆಯಲ್ಲಿ ಯಾವ ಬೆಳೆಗೆ ಹೆಚ್ಚು ಬೆಲೆ ಸಿಗುತ್ತದೆ ಎಂಬ ಬಗ್ಗೆ ರೈತನ ತೀರ್ಮಾನ ತೆಗೆದುಕೊಳ್ಳಲು ಕೃಷಿ ಚಾನಲ್ ಮಾಡುವುದು, ಖಾಸಗಿ ಚಾನಲ್ ಮಾಡುತ್ತಿರುವ 'ಅನ್ನದಾತ' ಕಾರ್ಯಕ್ರಮ, ಬೈಯೋಟೆಕ್ನಾಲಜಿ ಬಗ್ಗೆ ಸರ್ಕಾರ ಸಾಗಿರುವ ಸರಿಯಾದ ಹೆಜ್ಜೆ, ಇಂದಿನ ಸಮಸ್ಯೆ ಎಂದರೆ ಬೆಲೆ ಸಮಸ್ಯೆ ಆಗಿರುವುದು ಕುರಿತೆಲ್ಲ ಹೇಳಿದರು.

**ಶ್ರೀ ಎಸ್.ಎಂ. ಕೃಷ್ಣ** ಅವರು: ಸರ್ಕಾರ 100 ಕೋಟಿ ಆವರ್ತನಿಧಿ ಮಾಡಲು ಸಿದ್ಧವಿರುವುದು, ಆ ಬಗ್ಗೆ ಎ.ಪಿ.ಎಂ.ಸಿಯಿಂದ 32 ಕೋಟಿ ಹಾಗೂ ರಾಜ್ಯ ಸರ್ಕಾರವೇ ನೀಡಿರುವ 25 ಕೋಟಿ ಪಡೆದಿದ್ದು, ಅವಶ್ಯ ಬಿದ್ದರೆ ಅದನ್ನು ಹೆಚ್ಚು ಮಾಡುವುದು ಆತ್ಮಹತ್ಯೆ ಮಾಡಿಕೊಂಡ ರೈತನ ಕುರಿತೆಲ್ಲ ಸದಸ್ಯರಿಂದ ಬಂದ ಸಲಹೆಗಳು, ವಿದ್ಯುಚ್ಛಕ್ತಿ ಗ್ರಿಡ್‌ಗಳನ್ನು ಶಕ್ತಿಭರಿತ ಮಾಡುವ ಬಗ್ಗೆ; ಟ್ರಾನ್ಸ್ ಮಿಷನ್ ಲಾಸ್ ಹಾಗು ಥೆಫ್ಟ್ ಕಡಿಮೆ ಮಾಡುವುದರ ಬಗ್ಗೆ ಪ್ರಧಾನಿಯವರು ಕರೆದಿದ್ದ ಸಭೆಯಲ್ಲಿ ಒಮ್ಮತ ಮೂಡಿಬಂದಿರುವುದು, ರೈತರ ಬೆವರಿಗೆ ಸರಿಯಾದ ಬೆಲೆ ಬಂದು ರೈತರಿಗೆ ಅನುಕೂಲವಾಗಬೇಕಿರುವುದು ಕುರಿತೆಲ್ಲ ಹೇಳಿ ಸದಸ್ಯರ ಸಲಹೆಗಳನ್ನು ಕಾರ್ಯರೂಪಕ್ಕೆ ತರುವ ಬಗ್ಗೆ ತಿಳಿಸಿದರು. ಶ್ರೀ ಸಿ.ಬೈರೇಗೌಡರು ರೈತರಿಗೆ ತುರ್ತಾಗಿ ಅಗತ್ಯವಿರುವ ಆವರ್ತನಿಧಿ, ನಮ್ಮ ಕೃಷಿ ಉತ್ಪನ್ನಗಳನ್ನು ಹೊರದೇಶಗಳಿಗೆ ತಾರತಮ್ಯವಿಲ್ಲದೆ ಕಳುಹಿಸಬೇಕಾದ ಅವಕಾಶ, ಈ ಬಗ್ಗೆ ಕೇಂದ್ರ ಸರ್ಕಾರದ ಕಣ್ಣು ತೆರಸಬೇಕಾದ ನಮ್ಮ ಪ್ರಯತ್ನ ಕುರಿತು ಹೇಳಿದರು.

ಶ್ರೀ ಎಸ್.ಎಂ.ಕೃಷ್ಣ ಅವರು, ರಾಜ್ಯದಲ್ಲಿ ಗೋಡೌನ್‌ಗಳಿಲ್ಲದೆ ಲಕ್ಷಾಂತರ ಟನ್ ಮೆಕ್ಕೆ ಜೋಳವು ಮೈದಾನದಲ್ಲಿರುವುದು, ಮಳೆ ಬರುವ ಸೂಚನೆ ಇರುವುದು; ಬಾಂಗ್ಲಾ ಮತ್ತು ಶ್ರೀಲಂಕಾದೇಶಗಳಿಂದ ಮೆಕ್ಕೆ ಜೋಳ ಕುರಿತು ಎನ್‌ಕ್ವೈರೀಸ್ ಬಂದಿರುವುದು; ಈ ಹಿನ್ನೆಲೆಯಲ್ಲಿ ರೈತರಿಗೆ ಅನುಕೂಲ ಮಾಡಲು ರಫ್ತಿಗೆ ಅವಕಾಶವನ್ನು ನೀಡಲು ಕೇಂದ್ರ ಕಾಮರ್ಸ್ ಸಚಿವ ಶ್ರೀ ಮುರಸೋಳಿಮಾರನ್ ಅವರಲ್ಲಿ ಮನವಿ ಮಾಡಿರುವ ಬಗ್ಗೆ ತಿಳಿಸಿದರು. ಶ್ರೀ ಸಿ. ಬೈರೇಗೌಡರು, ಸ್ಪಷ್ಟವಾದ ನೀತಿ ನಿರೂಪಿಸಿ ಮುಕ್ತವಾಗಿ ಹೊರದೇಶಕ್ಕೆ ನಮ್ಮಿಂದಲೂ ಸಾಗಿಸಲು ಅವಕಾಶವಿರಬೇಕು, ಗೊಬ್ಬರದ ಮೇಲಿನ ಟಾಕ್ಸ್ (ಇರುವ 4 1/2ಯಷ್ಟು) ತೆಗೆದು ಹಾಕಬೇಕು, ಎಂದೆಲ್ಲ ಹೇಳಿದರು. ರೈತರಿಗೆ ತೊಂದರೆಯಾಗುತ್ತಿರುವ ದಳ್ಳಾಳಿ ಅವಾಂತರವನ್ನು ತಪ್ಪಿಸಬೇಕು ಎಂದೂ ನುಡಿದರು.

ಶ್ರೀ **ಬಿ.ಸೋಮಶೇಖರ್** ಅವರು, ಮುಸುಕಿನ ಜೋಳ ಮುಖ್ಯವಾಗಿ ಕೋಳಿ ಪಶು ಆಹಾರವಾಗಿ ಬಳಕೆ, ಹೆಚ್ಚಿಗೆ ಉತ್ಪನ್ನವಾದುದರಲ್ಲಿ ಸೂಕ್ತ ಬಳಕೆ, ಕೂಲಿಗಾಗಿ ಕಾಳು ಯೋಜನೆ, ಕುರಿತು ಹೇಳಿದರು. ಮಾರುಕಟ್ಟೆ ಅಧ್ಯಯನ ಮಾಡಿ ಸರ್ಕಾರಕ್ಕೆ ಹೇಳುವಂಥ ಸಮಿತಿ ಅಗತ್ಯ, ಬಡ್ಡಿ ಮನ್ನಾ, ಬಗೆಗೆಲ್ಲ ಹೇಳಿದರು.

ಶ್ರೀ **ಬಿ.ಎಚ್.ಬನ್ನಿಕೋಡ್** ಅವರು, ರಾಜ್ಯದ ಗೋಡೌನ್‌ಗಳ ಅವ್ಯವಸ್ಥೆ, ಖರೀದಿಯನ್ನು ಕೇಂದ್ರವು ನಿಲ್ಲಿಸಿದರೂ ರಾಜ್ಯ ಸರ್ಕಾರ ಬೆಂಬಲ ಬೆಲೆಯಲ್ಲಿ ರೈತರ ಬೆಳೆಗಳನ್ನು ಖರೀದಿಸುವುದು, ಘೋಷಿಸಿದ ಬೆಂಬಲ ಬೆಲೆಗಿಂತ ರೈತರ ಬೆಳೆಗಳ ಬೆಲೆ ಕುಸಿದಾಗ ಖರೀದಿಸಬೇಕಾದ ಕೇಂದ್ರ ಸರ್ಕಾರದ ಹೊಣೆ, ರಾಜ್ಯ ಸರ್ಕಾರವು ಈ ವಿಚಾರದಲ್ಲಿ ಹಿಂದೆ ಬೀಳದೆ ರೈತನ ಉತ್ಪನ್ನಗಳನ್ನು ಕೊಂಡು ಅವನ ರಕ್ಷಣೆ ಮಾಡಬೇಕು ಎಂದೆಲ್ಲ ಹೇಳಿ ಮಾತು ಮುಗಿಸಿದರು.

ಶ್ರೀ.**ಬಿ.ಆರ್.ಯಾವಗಲ್** ಅವರು, production is not a problem. But price is a problem. ಬೆಲೆ ಕುಸಿತ, ಸಾಲ ಸೋಲ, ಹಾಕಿದ ಬಂಡವಾಳವೂ ನಷ್ಟ; ಈ ಕಾರಣಗಳಿಂದಲೂ ನಡೆಯುತ್ತಿರುವ ರೈತರ ಆತ್ಮಹತ್ಯೆ, ಆದಷ್ಟು ಬೇಗ ಮಳೆ ಆರಂಭವಾಗುವ ಮುನ್ನ ಗೋವಿನ ಜೋಳವನ್ನು ಸ್ಥಳಾಂತರಿಸಿ ಬೇರೆಡೆ ಕಳುಹಿಸುವುದು, ರೈತರ ಬೆಳೆಯನ್ನು ಖರೀದಿಸಿದಷ್ಟೂ ಗ್ರಾಮೀಣ ಪ್ರದೇಶದ ಅರ್ಥವ್ಯವಸ್ಥೆಯಾಗಿ ಉತ್ತಮಗೊಳ್ಳುವುದು, ನಮ್ಮ ದೇಶದಲ್ಲಿಯ ಎಕ್ಸ್‌ಪೋರ್ಟ್ ಮೆಕಾನಿಸಮ್ ಬರಿ 25 ಸಾವಿರ ಟನ್ ಮಾತ್ರ ಆಗಿರುವುದು, ಗೋವಿನ ಜೋಳದ

ಬೆಂಬಲ ಬೆಳೆ 445 ರೂ. ಇದ್ದರೂ ಮಾರುಕಟ್ಟೆಯಲ್ಲಿ 300 ರೂ.ಗೂ ಕೂಡ ತೆಗೆದುಕೊಳ್ಳದಿಯುವುದು, ಕೋಳಿ ಸಾಕಾಣಿಕೆ, ಹೈನುಗಾರಿಕೆ ಇಂಡಸ್ಟ್ರಿ ನಿಂತು ಹೋಗಿರುವುದು, ರೈತರಿಗೆ ಸಿಗದ ಸಾಲ, ಈ ಬಗೆಗೆಲ್ಲ ಹೇಳಿ ರೈತ ಪರವಾದ ಕ್ರಮಗಳನ್ನು ಸಮ್ಮಿಕೊಳ್ಳಬೇಕೆಂದು ಹೇಳಿ ಮಾತು ನಿಲ್ಲಿಸಿದರು.

**ಶ್ರೀ ಜಯಪ್ರಕಾಶ್ ಹೆಗಡೆ** ಅವರು ಮಾತನಾಡುತ್ತ, ಬ್ಯಾಂಕಿನ ಮುಖಾಂತರ ಸಾಲವನ್ನು ರೈತರಿಗೆ 75% ವರೆಗೆ ಕೊಡಿಸಲು ಮಾಡಿದ ಸಲಹೆ, ರೈತರಿಗೆ ಸೇಲ್ಸ್‌ಟ್ಯಾಕ್ಸ್ ಎಕ್ಸ್‌ಂಪ್‌ಶನ್ ಕೊಡುವವ್ಯವಸ್ಥೆ, ಬಡ್ಡಿ ಮನ್ನಾ ಮಾಡುವುದು ಕುರಿತು ಮಾತನಾಡಿದರು. **ಶ್ರೀ ಡಿ.ವಿ.ಸದಾನಂದಗೌಡ,** ಅವರು ಅಡಿಕೆ ಬೆಳೆಗಾರರ ಸಾಲದ ಮನ್ನಾ ಬಗ್ಗೆ ಹಾಗೂ ತಾತ್ಕಾಲಿಕವಾಗಿ ತೆರಿಗೆಗಳ ಸ್ಥಗಿತ, ಕುರಿತು ಹೇಳಿದರು. **ಶ್ರೀ ವಿಶ್ವೇಶ್ವರ ಹೆಗ್ಗಡೆ** ಅವರು ಮಾರ್ಚ್ 30ರ ಒಳಗಾಗಿ ಸೊಸೈಟಿ ಸಾಲ ತೀರಿಸಲಾಗದಿರುವುದು; ರೈತರು ಮಾಲು ಮಾರಬೇಕಾದ ಬಗ್ಗೆ; ಸೊಸೈಟಿ ಸಾಲ ತುಂಬುವ ಬಗ್ಗೆ; ಬಡ್ಡಿಮನ್ನಾ ಅವಧಿ ಸಾಲಗಳನ್ನು ದೀರ್ಘಾವಧಿ ಸಾಲವನ್ನಾಗಿ ಪರಿವರ್ತಿಸುವುದು ಕುರಿತೆಲ್ಲ ಮಾತನಾಡಿದರು. ಶ್ರೀ ಪಿ.ಎಚ್.ಪೂಜಾರ್ ಅವರು ಜೋಳದ ಹೆಚ್ಚು ಬೆಳೆ ಬಂದಾಗ ಅದನ್ನು ಖರೀದಿಸುವಂತಾಗಬೇಕು ಎಂದರು.

**ಶ್ರೀ ಕರಡಿ ಸಂಗಣ್ಣ ಅಮರಪ್ಪ** ಅವರು ಬಡ್ಡಿಮನ್ನಾ, ಮೆಕ್ಕೆಜೋಳದ ಪೂರ್ಣ ಪ್ರಮಾಣದಲ್ಲಿ ಖರೀದಿ, ಖಾಸಗಿ ಸೀಡ್ಸ್ ಕಂಪೆನಿ ಬಗ್ಗೆ ಸರ್ಕಾರದ ನಿಯಂತ್ರಣ, ರೈತರ ಮೇಲಿನ ಮೊಕದ್ದಮೆ ವಾಪಸಾತಿ, ಕುರಿತೆಲ್ಲ ಕೇಳಿದರು. ಕೃಷಿ ಸಚಿವ ಶ್ರೀ ಟಿ.ಬಿ.ಜಯಚಂದ್ರ ಅವರು ಕನಿಷ್ಠ ಬೆಂಬಲ ಬೆಲೆಯಲ್ಲಿ ಕೊಳ್ಳುವಂತಾದಾಗ ಕೇಂದ್ರ ಹಾಗು ರಾಜ್ಯದ ಜಂಟಿ ಹೊಣೆಗಾರಿಕೆ (ಏಜೆಂಟ್ಸ್, ಸಬ್ ಏಜಂಟ್ಸ್‌ರಂತೆ), ಪ್ರೊಕ್ಯೂರ್‌ಮೆಂಟ್ ಅನ್ನು ಫುಡ್ ಸೆಕ್ಯೂರಿಟಿಗಾಗಿ ಮಾಡುವುದು, ಆಂಧ್ರದಂಥ ನೆರೆರಾಜ್ಯಕ್ಕೆ 4 ಸಾವಿರ ಕೋಟಿಗೂ ಹೆಚ್ಚು ಈ ಫುಡ್‌ಸೆಕ್ಯೂರಿಟಿಗೆ ಅನುಕೂಲ ಮಾಡಿರುವಲ್ಲಿ ಕೇಂದ್ರಕ್ಕೆ ರಾಜ್ಯವು ಮಾಡಬೇಕಾದ ಒತ್ತಾಯ, ಆದರೂ ರಾಜ್ಯವು ಸಾಧ್ಯವಾದಷ್ಟೂ ಹಣ ಬಿಡುಗಡೆ ಮಾಡಿಸಿಕೊಂಡಿರುವುದು, ವಿಶೇಷತಃ ಫುಡ್ ಕಾರ್ಪೋರೇಷನ್ ಮೇಲೆ ಈ ದಿಸೆಯಲ್ಲಿ ಉಳಿದ ರಾಜ್ಯದವರೂ ಹೊಣೆ ಹಾಕಿ ಮಾತನಾಡಬೇಕಂಥಾದ್ದು, ರೈತರ ಆತ್ಮಹತ್ಯೆಯಾದಾಗ ಮ್ಯಾಜಿಸ್ಟ್ರಿಯಲ್ ಎನ್‌ಕ್ವೈರಿಗೆ ಸದಸ್ಯರು ಸ್ಪಂದಿಸಿರುವುದು ಕುರಿತೆಲ್ಲ ಹೇಳಿದರು. ಶ್ರೀ ಪಿ.ಜಿ.ಆರ್.ಸಿಂಧ್ಯಾ ಅವರು ರೈತರ ಆತ್ಮಹತ್ಯೆಯ ಸಂದರ್ಭದಲ್ಲಿ ಸೂಕ್ತ ಪ್ರಕರಣಗಳಲ್ಲಿ ಕುಟುಂಬವರ್ಗದವರಿಗೆ 1 ಲಕ್ಷ ರೂ.

ಪರಿಹಾರ ನೀಡುವಲ್ಲಿ ತಡ ಆಗಬಾರದೆಂದರು. ಶ್ರೀ ಜಯಪ್ರಕಾಶ್ ಹೆಗಡೆಯವರು, ಆತ್ಮಹತ್ಯೆಯನ್ನು ರೈತ ಕೃಷಿ ಉದ್ದೇಶದಿಂದ ಸಾಲ ಮಾಡಿ ತೀರಿಸಲಾಗದೆ ಮಾಡಿಕೊಂಡಿದ್ದರೆ ಪರಿಹಾರ ಕೊಡುವುದರಲ್ಲಿ ಅರ್ಥವಿದೆ ಎಂದರು. ಶ್ರೀ ಎಸ್.ಎಂ.ಕೃಷ್ಣ ಅವರು : we will not make suicide attracive. We are not going to provide incentives for committing suicides. ಈ ಬಗ್ಗೆ ಎಲ್ಲ ಸೇರಿ ಸುದೀರ್ಘ ಯೋಚಿಸಿ ಮಾತನಾಡಬೇಕು ಎಂದರು.

ಶ್ರೀ **ಟಿ.ಬಿ.ಜಯಚಂದ್ರ** ಅವರು, ರೈತನು ಬೆಳೆದಂಥ ಟೊಮ್ಯಾಟೋ, ಆಲೂಗಡ್ಡೆ ಇತ್ಯಾದಿ ಕೃಷಿ ಉತ್ಪನ್ನಗಳನ್ನು ಬೀದಿಗೆ ಸುರಿದು ನಷ್ಟ ಮಾಡಿಕೊಂಡುದದಕ್ಕೆ ವಿಪುಲ ಬೆಳೆಯೂ ಕಾರಣವೆ. ಸರ್ಕಾರಕ್ಕೂ ಇಂಥ ಸಂದರ್ಭದಲ್ಲಿ ಇತಿಮಿತಿ ಉಂಟು. ಮಾರ್ಕೆಟ್ ಓರಿಯಂಟೇಶನ್ ಆಗಬೇಕು; ಕೃಷಿ ಚಾನೆಲ್ ಆಗಬೇಕು. ಮಾಧ್ಯಮದವರೂ ಕೃಷಿ ಉತ್ಪನ್ನಗಳ ಬೆಲೆ ಬಗ್ಗೆ ರೈತರಿಗೆ ತಿಳಿಯುವಂತೆ ಪ್ರಸಾರ ಮಾಡುತ್ತಿರುವುದೂ ಅಭಿನಂದನೀಯ. ಕೃಷಿ ಇಲಾಖೆಯಲ್ಲಿ ಮಾರ್ಕೆಟ್ ಸರ್ವೆಲೆನ್ಸ್‌ಗೆ ಒಂದು ಇಂಟೆಲಿಜೆನ್ಸ್ ವಿಂಗ್ ಪ್ರಾರಂಭಿಸುವ ತೀರ್ಮಾನವಿದೆ. ಇಂಪೋರ್ಟ್ ಬಗ್ಗೆ ಸ್ಪಷ್ಟವಾದ ಪಾಲಿಸಿ ಅಗತ್ಯವಿದೆ; ಕ್ವಾಂಟಿಟಿ ರಿಸ್ಟ್ರಿಕ್ಷನ್ ಜಾರಿಯಾಗಬೇಕಿದೆ. ಅದರ ಪರಿಣಾಮದ ಬಗ್ಗೆ ಉಭಯ ಸದನಗಳಲ್ಲಿ ಚರ್ಚೆ ಆಗಬೇಕಿದೆ. ಗೊಬ್ಬರದ ಮೇಲೆ ಆಲ್ ಇಂಡಿಯಾ ಪ್ಯಾಟರ್ನ್‌ನಲ್ಲಿ ನಾವೆಲ್ಲ ಪಾರ್ಟಿ ಆಗಿರುವಲ್ಲಿ ಟ್ಯಾಕ್ಸ್ ಹಾಕಬೇಕಾಗಿ ಬಂತಷ್ಟೆ. ಮಾರ್ಕೆಟ್ ಇಂಟರ್‌ವೆನ್‌ಷನ್ ಮಾಡಿದರೂ, ಛಳ್ಳಾಳಿ ಹಾಗೂ ವರ್ತಕರನ್ನು ಪೂರ್ಣವಾಗಿ ಹೊರಗಿಡುವ ಕೆಲಸವಾಗಿಲ್ಲ. ಈ ಬಗ್ಗೆ ರೈತರೇ ಎಚ್ಚೆತ್ತುಕೊಳ್ಳುವ ಅಗತ್ಯವಿದೆ. ಅವರಿಗೆ ಧೈರ್ಯ ತುಂಬುವ ವ್ಯವಸ್ಥೆ ಮಾಡಬೇಕಿದೆ. ಮೆಕ್ಕೆ ಜೋಳದ ಟೆಕ್ನಾಲಜಿ ಅಧ್ಯಯನ – ನಮ್ಮ ಮೆಕ್ಕೆ ಜೋಳದಗುಣ, ಸಾಮರ್ಥ್ಯ, ಹೊರಗಿನವರಿಂದ ಅದರ ಸೂಕ್ತ ಬಳಕೆ ಆಗಿಲ್ಲ. ಆದರೂ ನಮ್ಮಲ್ಲಿ ಅದೊಂದು. ವಿಶೇಷ ಬೆಳೆ, ಅದರಿಂದೊದಗುವ ಮೈದಾಪೌಡರ್ ಎಕ್ಸ್‌ಪೋರ್ಟ್‌ಗೆ ಪೊಟೆನ್‌ಶಿಯಲ್ ಆಗಿದೆ. ಅದರ ಬೇಡಿಕೆ ಹಾಗು ಸರಬರಾಜಿನ ಬಗ್ಗೆ ಮಾರುಕಟ್ಟೆ ವ್ಯವಸ್ಥೆಗೆ ಉತ್ತೇಜನ ಕೊಡಬೇಕಿದೆ. ಸಾಲದ ಮೇಲಿನ ಬಡ್ಡಿ ಬಗ್ಗೆ ರಿಯಾಯಿತಿ ಕುರಿತು ಚಿಂತನೆ ಮಾಡಿದೆ. ಕೃಷಿ ಉತ್ಪನ್ನಗಳು ಮಲ್ಟಿಪಲ್ ಆಗಿ ಬೆಳೆದಿರುವ ಕಾರಣ, ವ್ಹೋಲ್ಟೇಜ್ ಕೊಡಲು ಕಷ್ಟವಾಗಿದೆ. ರೈತರು ಬೆಳೆದಿರುವ ಒಟ್ಟಾರೆ ಕೃಷಿ ಉತ್ಪನ್ನಗಳನ್ನು ಕೊಳ್ಳುವಲ್ಲಿ ಕಾರ್ಯಾಂಗವನ್ನು ಸಜ್ಜುಗೊಳಿಸುತ್ತೇವೆ, ಎಂದೆಲ್ಲ ನುಡಿದರು. ಶ್ರೀ ಜಗದೀಶ್ ಶೆಟ್ಟರ್ ಅವರು ಖರೀದಿ ಕೇಂದ್ರಗಳಲ್ಲಿ ನಿರಂತರವಾಗಿ ಖರೀದಿಮಾಡುವ ಬಗ್ಗೆ ಸ್ಪಷ್ಟವಾದ ಭರವಸೆಬೇಕು ಎಂದರು.

ಶ್ರೀ **ಮಲ್ಲಿಕಾರ್ಜುನ ಖರ್ಗೆ** ಅವರು, ಕಾನೂನನ್ನು ಕೈಗೆ ತೆಗೆದುಕೊಂಡಿರುವ ಪ್ರಕರಣಗಳನ್ನುಳಿದು ರೈತರ ಮೇಲಿರುವ ಇತರ ಮೊಕದ್ದಮೆಗಳನ್ನು (ಶಾಂತಿಯುತ ಪ್ರತಿಭಟನೆ) ಹಾಗೂ ಅನ್ಯಾಯಬವು ಇದ್ದರೆ ವಾಪಸ್ಸು ಪಡೆಯಲಾಗುವುದು ಎಂದರು. ಶ್ರೀ **ಪಿ.ಜಿ.ಆರ್.ಸಿಂಧ್ಯಾ** ಅವರು ರೈತರ ಸಾಲದ ಮೇಲಿನ ಬಡ್ಡಿ ಮನ್ನಾ ಮಾಡುವ ಬಗ್ಗೆ ಸ್ಪಷ್ಟ ಭರವಸೆಬೇಕು ಎಂದರು. ಶ್ರೀ ಸಿ.ಬೈರೇಗೌಡರು ಬೆಳೆದು ನಿಂತಿರುವ ಬೆಳೆಗಳ ರಕ್ಷಣೆ ಮಾಡಲು ಆಶ್ವಾಸನೆ ಬರಬೇಕು ಎಂದರು. ಆ ಬೆಳೆಗಳ ಕುರಿತು ಮಾಹಿತಿ ತರಿಸಿ ಆ ಭಾಗದಲ್ಲಿ 2 ಗಂಟೆಗಳ ಕಾಲ ವಿದ್ಯುತ್ ಕೊಟ್ಟರೆ ಬೆಳೆ ಉಳಿಯುತ್ತದೆ. ಕೊನೆಯ ಪಕ್ಷ 6 ಗಂಟೆಗಳ ಕಾಲ ಕ್ವಾಲಿಟಿ ವಿದ್ಯುತ್ ಕೊಡುವ ವ್ಯವಸ್ಥೆ ಆಗಬೇಕು ಎಂದಾಗ ಶ್ರೀ ಎಸ್.ಎಂ.ಕೃಷ್ಣ ಅವರು ಆ ಸಲಹೆಯನ್ನು ಸ್ವಾಗತಿಸಿದರು.

ಶ್ರೀ **ಜಗದೀಶ್ ಶೆಟ್ಟರ್** ಅವರು, ಅಬ್ಕಾರಿ ಬಾಬ್ತಿನಲ್ಲಿ ಸರ್ಕಾರ 260 ಕೋಟಿ ರೂ.ಗಳನ್ನು ಧಾರಾಳವಾಗಿ ಮನ್ನಾ ಮಾಡುವ ಸರ್ಕಾರ ರೈತರ ಬಡ್ಡಿ ಮನ್ನಾ ಮಾಡಿ ಎಂದರೆ ಮಾಡುವುದಿಲ್ಲ. ಸಾಲದ ಮರುಪಾವತಿ ಅವಧಿ ಮುಗಿಯುತ್ತಿದ್ದು, ಬ್ಯಾಂಕ್‌ನವರು ರೈತರ ಮನೆ ಜಪ್ತಿಗೆ ಓಡಾಡುವಲ್ಲಿ, ರೈತರು ಆತ್ಮಹತ್ಯೆಗೆಳೆಸಿ ಆ ಪ್ರಕರಣಗಳು ಹೆಚ್ಚುತ್ತಿವೆ. ಈ ಕಾರಣ ಮರುಪಾವತಿ ಅವಧಿ ವಿಸ್ತರಣೆ ಮಾಡಿ ಎಂದರೂ ಸರ್ಕಾರ ಒಪ್ಪುತ್ತಿಲ್ಲ. ರೈತರ ಬಗ್ಗೆ ಸರ್ಕಾರಕ್ಕೆ ಕಾಳಜಿ ಇಲ್ಲ. ಸರ್ಕಾರದ ರೈತ ವಿರೋಧಿನೀತಿಯನ್ನು ಪ್ರತಿಭಟಿಸಿ ಸಭಾತ್ಯಾಗ ಮಾಡುತ್ತಿದ್ದೇವೆ ಎಂದು ಬಿ.ಜೆ.ಪಿ ಸದಸ್ಯರೊಡನೆ ಸಭಾತ್ಯಾಗ ಮಾಡಿದರು. ಶ್ರೀ ಪಿ.ಜಿ.ಆರ್.ಸಿಂಧ್ಯಾ ಅವರು, ರೈತರ ಸಾಲದ ಮೇಲಿನ ಬಡ್ಡಿಯನ್ನು ಕಳೆದ 1 ವರ್ಷದಿಂದ ಮನವಿ ಮಾಡಿದರೂ, ರದ್ದು ಮಾಡಿಲ್ಲ. ನಮ್ಮ ಬೇಡಿಕೆಗೆ ಒಪ್ಪಿಗೆಯನ್ನು ಸರ್ಕಾರ ಕೊಡುತ್ತಿಲ್ಲ ಎಂದು ಪ್ರತಿಭಟನೆ ಮಾಡಿ ಸಭಾತ್ಯಾಗ ಮಾಡುತ್ತೇವೆ ಎಂದರು. ಶ್ರೀ ಸಿ.ಬೈರೇಗೌಡ ಅವರು, ಸರ್ಕಾರದಿಂದ ತಾತ್ವಿಕವಾಗಿಯಾದರೂ, ತತ್ವಕ್ಕೆ ಬದ್ಧ ಎಂದು ಮಾತು ಬಂದಿಲ್ಲ. ಈ ವಿಚಾರದಲ್ಲಿ ತೀವ್ರ ಪ್ರತಿಭಟನೆ ಧರಣಿ ಮಾಡಬೇಕೆಂದು ನಮ್ಮ ಪಕ್ಷದಲ್ಲಿ ತೀರ್ಮಾನ ಆಗಿತ್ತು. ನಾವು ಸದನದಲ್ಲಿ ಇರಬೇಕು, ಪ್ರತಿಭಟನೆ ಬೇಡ ಎಂದರೆ, ಕನಿಷ್ಠ ಪಕ್ಷ, ಅಡಿಕೆ, ಕಬ್ಬು ಬೆಳೆ ಮೇಲಿನ ಪರ್ಚೇಸ್ ಟ್ಯಾಕ್ಸ್ ಅನ್ನಾದರೂ ಕೂಡ ತೆಗೆಯುವಂಥ ನಮ್ಮ ಬೇಡಿಕೆಗೆ ಆಶ್ವಾಸನೆ ಬರದಿದ್ದರೆ ನಾವೇಕೆ ಇಲ್ಲಿ ಕುಳಿತಿರಬೇಕು? ಎಂದರು. ಶ್ರೀ ಎಸ್.ಎಂ.ಕೃಷ್ಣ ಅವರು ರೈತರ ಮೇಲಿನ ಮೊಕದ್ದಮೆ ವಾಪಸಾತಿ, ಮ್ಯಾಜೆಸ್ಟೀರಿಯಲ್ ಎನ್‌ಕ್ವೈರಿಗೆಲ್ಲ ನಾವು ಒಪ್ಪಿದ್ದು, ಉಳಿದ

ಸಲಹೆಗಳನ್ನು ಗಂಭೀರವಾಗಿ ಪರಿಗಣಿಸಿ ಸಾಧ್ಯವಾದಷ್ಟೂ ಇಂಪ್ಲಿಮೆಂಟ್ ಮಾಡಲು ಸಿದ್ಧ ಎಂದು ಶ್ರೀ.ಸಿ.ಬೈರೇಗೌಡರಿಗೆ ಹೇಳಿದರು. ಕೊನೆಗೆ ಜನತಾದಳ (ಯು) ದ ಮಾನ್ಯ ಸದಸ್ಯರು ಸಭಾತ್ಯಾಗ ಮಾಡಿದರು.

ಈ ದಿನದ ಚರ್ಚೆಯಲ್ಲಿ ಸರ್ವಶ್ರೀ ವೆಂಕಟರಮಣಪ್ಪ ಸಚಿವ ಶ್ರೀ ಧರ್ಮಸಿಂಗ್, ಎಂ.ಡಿ.ಲಕ್ಷ್ಮೀನಾರಾಯಣ, ಎಸ್.ಎಸ್.ಪಾಟೀಲ್, ಕಾಗೋಡು ತಿಮ್ಮಪ್ಪ ಅವರುಗಳು ಪಾಲ್ಗೊಂಡಿದ್ದರು.

## ವಿಷಯ 3: ಕೊಬ್ಬರಿ ಬೆಲೆ ಕುಸಿತ

ಶ್ರೀ **ಕೆ.ಎಚ್. ಹನುಮೇಗೌಡರು** 28.3.2001.ರ ವಿಧಾನ ಸಭಾಧಿವೇಶನದಲ್ಲಿ[11] ಮಾತನಾಡುತ್ತ ನಫೆಡ್ 3500 ರೂ. ದರದಲ್ಲಿ ಕೊಬ್ಬರಿ ಕೊಳ್ಳುತ್ತಿದ್ದುದು ಸದ್ಯ ನಿಲ್ಲಿಸಿರುವುದು, ಕೊಬ್ಬರಿ ದರ ಕುಸಿದು, ಕೊಬ್ಬರಿ ಬೆಳೆ ರೈತರು ತೀರ ತೊಂದರೆ ಗೀಡಾಗಿರುವುದು ಕುರಿತು ಕೃಷಿ ಸಚಿವರ ಗಮನಸೆಳೆದರು. ಶ್ರೀ ಎಂ.ಡಿ.ಲಕ್ಷ್ಮೀ ನಾರಾಯಣ ಅವರೂ ನ್ಯಾಫೆಡ್‌ನಲ್ಲಿ 2ನೇ ಮಾರ್ಚ್‌ವರೆಗೆ ತುರುವೇಕೆರೆ, ಅರಸೀಕೆರೆ, ತಿಪಟೂರು ಮಾರುಕಟ್ಟೆಯಲ್ಲಿ ಕೊಬ್ಬರಿ ಕೊಂಡರು; ಆದರೆ ಡಿಸೆಂಬರ್‌ನಲ್ಲಿ ಕೊಂಡ ಕೊಬ್ಬರಿಗೆ ಕೊಟ್ಟಿದ್ದ ಚೆಕ್‌ಗಳಿಗೆ ಹಣ ಬರದೆ ಬೌನ್ಸ್ ಆಗಿವೆ. ನ್ಯಾಫೆಡ್, ಸಹಕಾರ ಸಂಘ ವೇರ್ ಹೌಸ್, ಮತ್ತು ಫೆಡರೇಷನ್‌ಗಳು ಸೇರಿ ಮಾಡಬೇಕಾದ ಕೆಲಸವಾದರೂ ಮಾರಾಟಕ್ಕೆ ವೇರಹೌಸ್‌ಗಳ ಕೊರತೆ ಎನ್ನಲಾಗಿದೆ. 50–60 ಸಾವಿರ ಚೀಲ ಕೊಬ್ಬರಿ ಬಂದು ವಾಪಸ್ ಆಗಿ ರೈತರೆಲ್ಲ ಕಂಗಾಲಾಗಿದ್ದಾರೆ. ಆವರ್ತನಿಧಿಯನ್ನು 200ಕೋಟಿಗೆ ಏರಿಸಲಾಗಿದೆ ಎಂದು ಮುಖ್ಯ ಮಂತ್ರಿಗಳು ಹೇಳಿರುವಲ್ಲಿ ಅದನ್ನು ರಿಲೀಸ್ ಮಾಡಿ ರೈತರನ್ನು ಉಳಿಸಬೇಕು, ವೇರ್‌ಹೌಸ್ ಬಗ್ಗೆ ಸರ್ಕಾರದ ಕ್ರಮವನ್ನು ಹೇಳಬೇಕು. ಎಂದೆಲ್ಲ ನುಡಿದರು.

ಕೃಷಿ ಸಚಿವ ಶ್ರೀ **ಟಿ.ಬಿ.ಜಯಚಂದ್ರ** ಅವರು, ಕೊಬ್ಬರಿ ಕೊಳ್ಳುವಲ್ಲಿ ವಿಳಂಬ, ಮಾರುಕಟ್ಟೆಯಲ್ಲಿ 3500 ರಿಂದ 2700 ರೂ.ಗಳಿಗೆ ಬೆಲೆ ಕುಸಿದಿರುವುದು, ಈ ವರೆಗೆ ನಫೆಡ್ ಬಿಟ್ಟು ಯಾರೂ ಪ್ರೊಕ್ಯೂರ್‌ಮೆಂಟ್ ಮಾಡಿಲ್ಲದೆ, 42, 500 ಕ್ವಿಂಟಾಲ್ ಕೊಬ್ಬರಿಯನ್ನು ನಫೆಡ್ ಪರ್ಚೇಸ್ ಮಾಡಿರುವುದು, 18 ಕೋಟಿ ರೂ.ಗಳ ಬಾಕಿಯಲ್ಲಿ 9 ಕೋಟಿ ರೂ. ಕೊಟ್ಟಿರುವುದು, ಆದರೆ ನಫೆಡ್ ರೀತ್ಯಾ 3

---

11. ವಿಧಾನಸಭೆಯ ನಡವಳಿಕೆಗಳು., ಸಂಪುಟ 4(1–3), ಭಾಗ–1, (28.3.2001) ಪು.634–36

ಕೋಟಿ.ರೂ ಮಾತ್ರ ಬಾಕಿ ಇದ್ದು, ಫೆಡರೇಷನ್‌ನಿಂದ 9ಕೋಟಿ ಬಾಕಿ ಬರಬೇಕಿರುವುದು ಕುರಿತೆಲ್ಲ ಹೇಳಿ, ಈ ಸಂಸ್ಥೆಗಳ ಹಾಗೂ ಶಾಸಕರ ಸಭೆ ಕರೆದು ಹಣ ಬಿಡುಗಡೆ ಬಗ್ಗೆ ಅಂತಿಮಗೊಳಿಸಲಾಗುವುದು ಎಂದರು. ಶ್ರೀ ಕೆ.ಎಚ್.ಹನುಮೇಗೌಡ ಅವರು ಆವರ್ತನಿಧಿಯಿಂದ ಸ್ವಲ್ಪ ಭಾಗ ಹಾಗು ನಫೆಡ್‌ನವರು ಕೊಡಬೇಕಾದ ಭಾಗ ಸೇರಿಸಿಕೊಡಬಹುದೆ? ಎಂದು ಪ್ರಶ್ನಿಸಿದರು. ಶ್ರೀ ಟಿ.ಬಿ.ಜಯಚಂದ್ರ ಅವರು ನಫೆಡ್‌ನವರು ಕೇರಳದಲ್ಲಿ 700 ಕೋಟಿ ರೂ.ಗಳಿಗೂ ಹೆಚ್ಚು ಕೊಬ್ಬರಿ ಕೊಳ್ಳುವ ಕೆಲಸ ಮಾಡಿ ನಮ್ಮಿಂದ ಕೇವಲ 18 ಕೋಟಿ ರೂ.ಗಳಷ್ಟು ಮಾತ್ರ ಕೊಂಡಿದ್ದಾರೆ. ಕೇಂದ್ರ ಸಚಿವರನ್ನು ಭೇಟಿ ಮಾಡಿ ಹಣವನ್ನು ಬೇಗ ಬಿಡುಗಡೆ ಮಾಡಲು ನಫೆಡ್‌ನವರಿಗೆ ಫೋನ್ ಮಾಡಿಸಿದ್ದೇನೆ. ಹಣ ಬಂದಿರುವ ಬಗ್ಗೆ ಪೂರ್ಣ ಖಚಿತವಾಗಬೇಕಿದೆ. ನಫೆಡ್‌ನಿಂದ ಬಂದ ಹಣ ನೋಡಿದ ನಂತರ ಆವರ್ತನಿಧಿಯಿಂದ ಕೊಡಿಸುವ, ಬಿಡುವ ವಿಷಯ ನೋಡಬೇಕಿದೆ. ಕ್ಯಾಬಿನೆಟ್ ಸಬ್‌ಕಮಿಟಿಗೆ ನಫೆಡ್‌ನವರನ್ನು ಕರೆದು ಚರ್ಚಿಸಿ ಅಂತಿಮ ತೀರ್ಮಾನ ತೆಗೆದುಕೊಳ್ಳಲಾಗುವುದು ಎಂದರು. ಶ್ರೀ ಎಂ.ಡಿ.ಲಕ್ಷ್ಮೀನಾರಾಯಣ ಅವರು ಕೊಬ್ಬರಿ ಡ್ರೈ ಆಗಿರುವ ಸಂದರ್ಭದಲ್ಲಿ ಬಿಸಿಲಿಗೆ ತಡೆಯದು; ಎಣ್ಣೆಗರಿದು ಹಾಳಾಗುವ ಪರಿಸ್ಥಿತಿ ಇದೆ. ಧಾರಣೆ ಇಳಿದ ಸಂದರ್ಭದಲ್ಲಿ ಮಾರುಕಟ್ಟೆಗೆ ಬಂದ ರೈತನ ಬೆಳೆಯನ್ನು ಎಪಿಎಂಸಿಯು ಸಂಗ್ರಹ ಮಾಡಲು ಅವಕಾಶ ಮಾಡಿಕೊಡುವ ಬಗ್ಗೆ ಸರ್ಕಾರ ಹೇಳಿದ್ದರೂ ಆ ಕೆಲಸ ಆಗಿಯೇ ಇಲ್ಲ. ನಾಳೆಯಿಂದ ಖರೀದಿಗೆ ಅವಕಾಶ ಮಾಡಿ ಎಂದರು. ಶ್ರೀ ಟಿ.ಬಿ.ಜಯಚಂದ್ರ ಅವರು ಖರೀದಿ ಅಧಿಕೃತವಾಗಿ ನಿಂತಿಲ್ಲ. ಗೋಡೌನ್, ಪ್ರಾಬ್ಲಂ, ಪೇಮೆಂಟ್ ಪ್ರಾಬ್ಲಂ, ಕಾರಣ ಉಂಟಾಗಿರುವ ಪರಿಸ್ಥಿತಿಯನ್ನು ನಿರ್ವಹಿಸಲು ಕ್ಯಾಬಿನೆಟ್ ಸಬ್ ಕಮಿಟಿ ಕರೆದು ಅಂತಿಮ ತೀರ್ಮಾನ ತೆಗೆದುಕೊಳ್ಳಲಾಗುವುದು ಎಂದರು.

**ವಿಷಯ 4: ಅಡಿಕೆ ಮಾರಾಟ ತೆರಿಗೆ ರದ್ದಿಯಾತಿ ಮತ್ತು ಬೆಲೆ ಕುಸಿತ**

2.8.2001ರ ವಿಧಾನ ಪರಿಷತ್ ಅಧಿವೇಶನದಲ್ಲಿ[12] **ಡಾ.ವಿ.ಎಸ್.ಆಚಾರ್ಯ** ಅವರು : ಅಡಿಕೆ ಬೆಲೆ ಕುಸಿತದಿಂದ ಕಂಗಾಲಾಗಿರುವ ರೈತರು, ಕರ್ನಾಟಕ, ಕೇರಳ ರಾಜ್ಯಗಳ ವ್ಯಾಪ್ತಿಯ ಅಡಿಕೆ ಬೆಳೆಗಾರರ ರಕ್ಷಣೆಗಿರುವ ಬೆಲೆಸ್ಥಿರತೆ ಕಾಪಾಡುವ ಕ್ಯಾಂಪ್ಕೋ ಸಂಸ್ಥೆ, ಬಿಹಾರ, ಉತ್ತರ ಪ್ರದೇಶ, ಗುಜರಾತ್ ರಾಜ್ಯಗಳಿಂದ

12. ವಿಧಾನ ಪರಿಷತ್ತಿನ ನಡವಳಿಕೆಗಳು., ಸಂಪುಟ 306 (3–5), ಭಾಗ.–2, (2.8.2001) ಪು. 803–07

ಕಡಿಮೆಯಾಗಿರುವ ಅಡಕೆ ಬೇಡಿಕೆ, ಹೊನ್ನಾವರ ತಾ. ಹೆರವಳ ಗ್ರಾಮದ ಅಡಿಕೆ ಬೆಳೆಗಾರ ದಂಪತಿಗಳಾದ ಈಶ್ವರಭಟ್ಟ ಹಾಗು ಅವರ ಪತ್ನಿ ಆತ್ಮಹತ್ಯೆ ಮಾಡಿಕೊಂಡಿರುವುದು, ಸರ್ಕಾರ ವಿಧಿಸುವ ನಾಲ್ಕೂ ಪರ್ಸೆಂಟ್ ಮಾರಾಟ ತೆರಿಗೆ ರದ್ದುಗೊಳಿಸಲು ಸಂಬಂಧಿಸಿದ ಸಂಘ ಸಂಸ್ಥೆಗಳಿಂದ ಅರ್ಪಿಸಿರುವ ಮನವಿ, ಕ್ಯಾಂಪ್ಕೋದವರು ರೈತರಿಗೆ ಹೆಚ್ಚಿನ ಬೆಲೆ ಕೊಟ್ಟರೆ ಆಗುವ ಅನುಕೂಲ, ಉತ್ತಮ ಮಾರುಕಟ್ಟೆ, ಬೇಡಿಕೆ ಇರುವ ಕಡೆ ತಿಳಿದುಕೊಂಡು ಅಲ್ಲಿಗೆ ಕಳುಹಿಸಲು ಕೊಡಬೇಕಾದ ನೆರವು, ಅಗತ್ಯಬಿದ್ದರೆ ಅಡಿಕೆಗೂ ಬೆಂಬಲಬೆಲೆ ಕೊಟ್ಟು ಖರೀದಿಸುವ ಭರವಸೆಯನ್ನು ಸರ್ಕಾರ ಕೊಡುವುದು ಕುರಿತೆಲ್ಲ ಪ್ರಸ್ತಾಪಿಸಿದರು.

**ಶ್ರೀ ವಿನಯಚಂದ್ರ** ಕೆ.ವಿ. ಅವರು: ಬೆಲೆ ಕಡಿಮೆಯಾದ ಪರಿಣಾಮವಾಗಿ, ಅಡಿಕೆ ಬೆಳೆಗಾರರಿಗೆ ಕೃಷಿ ಕೂಲಿ ಕೆಲಸಗಾರರಿಗೆ ಮಳೆಗಾಲದಲ್ಲಿ ಕೆಲಸವಿಲ್ಲದೆ ದಾರುಣ ಸಂದರ್ಭವಾಗಿರುವುದು, ಕೆಲವು ಸಮಯದ ಮಟ್ಟಿಗಾದರೂ ನಾಲ್ಕು ಪರ್ಸೆಂಟ್ ಮಾರಾಟ ತೆರಿಗೆಯನ್ನು ಮನ್ನಾ ಮಾಡುವುದು, ಸಹಕಾರಿ ಸಂಸ್ಥೆಯ ಮೂಲಕ ಮಾರಾಟ ಮಾಡಲನುಕೂಲಿಸುವುದು ಕುರಿತೆಲ್ಲ ಹೇಳಿದರು. **ಶ್ರೀ.ವಿ.ಎಸ್. ಆಚಾರ್ಯ** ಅವರು ಹಾಲಿ 30 ಪರ್ಸೆಂಟ್ ಮಳೆ ಬಂದಿರುವಲ್ಲಿ, ಅಡಿಕೆಗೆ ಕೊಳೆರೋಗ ತಗುಲಿ, ಔಷಧಿಯನ್ನು ಸಿಂಪಡಿಸಲು ಹಣದ ಚೈತನ್ಯವಿಲ್ಲದಿರುವ ಸ್ಥಿತಿಗೆ ಬಂದಿರುವ ಅಡಿಕೆ ಬೆಳೆಗಾರರ ಬಗ್ಗೆ ಏನಾದರೂ ಪರಿಹಾರ ಕ್ರಮ ಕೈಗೊಳ್ಳಬೇಕು ಎಂದರು.

ತೋಟಗಾರಿಕೆ ಸಚಿವರಾದ **ಶ್ರೀ ಅಲ್ಲಂ ವೀರಭದ್ರಪ್ಪನವರು**; ಅಡಿಕೆ ಬೆಳೆಯು ಕಳೆದ ಹತ್ತು ವರ್ಷಗಳಲ್ಲಿ ಹೆಚ್ಚಾಗುತ್ತ ಬಂದರೂ, ಬೇಡಿಕೆ ಹಾಗೂ ಬೆಲೆ ಕಡಿಮೆಯಾಗಿರಲು ರೈತರಿಗೊದಗಿರುವ ಸಂಕಷ್ಟ, ಕೋಕೋ ಕಂಪೆನಿಯಿಂದ ಇಂಟರ್‌ಕ್ರಾಪ್, ಮಲ್ಟಿಪಲ್‌ಕ್ರಾಪ್ ಎಂದು ಅಡಿಕೆ ಜೊತೆಗೆ ಇನ್ನೊಂದು ಬೆಳೆಯನ್ನು ಗಿಡಗಳ ಮಧ್ಯದಲ್ಲಿ ಬೆಳೆಯಲು ಅವಕಾಶ ಮಾಡಿರುವುದು, ಆರ್ಥಿಕವಾಗಿ ರೈತರಿಗೆ ಅನುಕೂಲವಾಗುವುದು ಬರಗಾಲ ಬಂದಿರುವ ಕಾರಣ ಕಾಮಗಾರಿಗೆ ಹಣ ನೀಡಿರುವುದು, ನಾಲ್ಕು ಪರ್ಸೆಂಟ್ ಟಾಕ್ಸ್ ಬಗ್ಗೆ (ಅಡಿಕೆ ಮೇಲೆ) ಹಿರಿಯ ಸಚಿವರೊಡನೆ ಸಮಾಲೋಚನೆ ನಡೆಸುವ ಬಗೆಗೆಲ್ಲ ಹೇಳಿದರು. ವಿಪಕ್ಷ ನಾಯಕ ಶ್ರೀ ಕೆ.ಎಚ್. ಶ್ರೀನಿವಾಸ್ ಅವರು; *ಇಂಟರ್ ಕ್ರಾಪಿಂಗ್ ಸಣ್ಣ ಪ್ರದೇಶದ ಅಡಿಕೆ* ತೋಟಗಳಲ್ಲಿ ಸಾಧ್ಯವಿನಾ, ಬಹುಪಾಲು ಅಡಿಕೆ ತೋಟಗಳಲ್ಲಿ ಅದು ಅನುಕೂಲವಾಗದಿರುವುದು, ಕ್ಯಾಂಪ್ಕೊ ಸಂಸ್ಥೆಯನ್ನು ಮಾಡಿದರೂ ದೊಡ್ಡ ಅಡಿಕೆ

ಮಂಡಿ ರೀತಿಯಲ್ಲಿ ಕೆಲಸ ಮಾಡಿತೇ ಹೊರತು, ಅಡಿಕೆ ಬೆಳೆಗಾರ ಮತ್ತು ಗ್ರಾಹಕರನ್ನು ಸಮೀಪಕ್ಕೆ ತಂದು,ಮಧ್ಯವರ್ತಿ ಅವಶ್ಯಕತೆ ತಪ್ಪಿಸಿ ಮಾರುಕಟ್ಟೆಯ ಬೆಲೆಯ ಸಿಂಹಪಾಲು ಬೆಳೆಗಾರರಿಗೆ ಸಿಗುವಂತೆ ಪ್ರಯತ್ನ ಮಾಡದೆ ಹೋದುದು, ಅಡಿಕೆ ಬೆಳೆಯುವವರ ಸ್ಥಿತಿ ಹಾಗೆಯೇ ಇರುವುದು, ಹಿಂದೆ ಕೋಕೋ ಬೆಳೆಯನ್ನು ಎಲ್ಲೆಡೆ ಹಾಕಿ ಚಾಕ್ಲೇಟ್ ಫ್ಯಾಕ್ಟರಿ ಮಾಡಿ ನಡೆಸಲಾಗದೆ ಮಲ್ಟಿ ನ್ಯಾಷನಲ್ ಕಂಪನಿಯಂಥವಕ್ಕೆ ಕೊಡುವಂತಾದುದು ಕುರಿತೆಲ್ಲ ಹೇಳಿದರು. **ಶ್ರೀ ಕೆ.ವಿನಯಚಂದ್ರ** ಅವರು ಕ್ಯಾಂಪ್ಕೋವು ಚಾಕ್ಲೇಟ್ ಫ್ಯಾಕ್ಟರಿಯನ್ನು ಕಂಪೆನಿ ಕರಾರು ಮುಗಿದ ಮೇಲೆ ಅಮೂಲ್ ಜೊತೆಗೆ, ದೇಶದ ಅತಿ ದೊಡ್ಡ ಸಹಕಾರಿ ಸಂಸ್ಥೆಯೊಡನೆ ಟೈ ಆಫ್ ಮಾಡಿ, ಚಾಕ್ಲೇಟ್ ಮಾಡಿಕೊಡುವಂಥದ್ದು ಆಗಿದೆ ಎಂದರು. ಆಗ ಶ್ರೀ **ಕೆ.ಎಚ್.ಶ್ರೀನಿವಾಸ್** ಅವರು, ದೊಡ್ಡ ಸಂಸ್ಥೆಯಾಗಲಿ, ಮಲ್ಟಿ ನ್ಯಾಷನಲ್ ಕಂಪೆನಿಯಾಗಲಿ ಒಪ್ಪಂದ ಮಾಡಿಕೊಂಡ ಕೂಡಲೇ ಅವರು ನಮಗೆ ಕೊಡುವಂಥದ್ದು ಕೂಲಿಯೇ ಹೊರತು, ಲಾಭವನ್ನಲ್ಲ. ಬೆಳೆಗಾರರಿಗೇನೂ ಲಾಭದ ಅಂಶ ಸಿಕ್ಕಂತಾಗುವುದಿಲ್ಲ. ಅಡಿಕೆ ಬೆಳೆಗಾರರು ಕಷ್ಟದಲ್ಲಿರುವಾಗ, ತೆರಿಗೆ ಜಾಸ್ತಿ ಮಾಡಿದ್ದರಿಂದ ಸರ್ಕಾರಕ್ಕೆ ಆದಾಯವೇನೂ ಬರದು. ಅಂತಾಗಿ ಈ ತೆರಿಗೆ ತೆಗೆದು ಹಾಕುವಂಥ ಭರವಸೆಯನ್ನು ಸಚಿವರು ತಕ್ಷಣವೇ ಸದನಕ್ಕೆ ಕೊಡಬೇಕೆಂದು ಕೇಳಿದರು. ಆ ಬಗ್ಗೆ ಗಂಭೀರವಾಗಿ ಯೋಚಿಸುವ ಬಗ್ಗೆ ಸಚಿವರು ತಿಳಿಸಿದರು.

## ವಿಷಯ 5: ರೇಷ್ಮೆ ಬೆಲೆ ಕುಸಿತ ಮತ್ತು ರೈತರಿಗೆ ಕಬ್ಬಿನ ಹಣ ಪಾವತಿ ತೊಂದರೆ

25.7.2002ರ ವಿಧಾನ ಸಭಾಧಿವೇಶನದಲ್ಲಿ[13] **ಶ್ರೀ ಎಂ.ಎಸ್.ಆತ್ಮಾನಂದ** ಅವರು ಪ್ರಶ್ನೆಗಳನ್ನಿಡುತ್ತ : ರೇಷ್ಮೆ ಬೆಲೆ ಕುಸಿತದ ಕಾರಣ ರೇಷ್ಮೆ ಕೃಷಿಯನ್ನು ಕೃಷಿಕರು ಕೈಬಿಡುವ ಪರಿಸ್ಥಿತಿ; ಕುಸಿತ ತಡೆಗಟ್ಟಲು ಸರ್ಕಾರ ಆಲೋಚಿಸಿರುವ ಮಾರ್ಗೋಪಾಯ; ರೇಷ್ಮೆಗೆ ಬೆಂಬಲ ಬೆಲೆ ನೀಡಿ ಕೊಂಡಿರುವಂಥದ್ದು, ಕುರಿತೆಲ್ಲ ಕೇಳಿದರು. ಸಚಿವ **ಶ್ರೀ ಹೆಚ್.ಎಂ.ರೇವಣ್ಣ** ನವರು ಉತ್ತರಿಸುತ್ತ; ಹಿಂದಿನ ಸಾಲಿಗಿಂತ ಈ ಬಾರಿ ರೇಷ್ಮೆ ದರ ಕಡಿಮೆಯಾಗಿರುವುದು, ಕೇಂದ್ರಕ್ಕೆ ಮನವಿ ಮಾಡಿ ರೇಷ್ಮೆ ಆಮದನ್ನು ನಿಯಂತ್ರಿಸುವುದು, ಆಮದು ಸುಂಕ ಹೆಚ್ಚಿಸುವುದು, ಮಾರುಕಟ್ಟೆ ಪ್ರವೇಶಿಸಿ ರೇಷ್ಮೆಗೂಡು, ಕಚ್ಚಾ ರೇಷ್ಮೆ ಖರೀದಿಸಲು ಕೇಂದ್ರ ರೇಷ್ಮೆ ಉದ್ಯಮಗಳ

13. ವಿಧಾನ ಸಭಾಧಿವೇಶನ.. ಸಂಪುಟ 6 (3–5), ಭಾಗ – 2 (25.3.2002) ಪು. 1265–1266

ನಿಗಮ ನಿಯಮಿತ ಮತ್ತು ಕರ್ನಾಟಕ ರೇಷ್ಮೆ ಮಾರಾಟ ಮಂಡಳಿಗೆ ಹಣ ಒದಗಿಸುವುದು, ಅರ್ಹ ರಫ್ತುದಾರರಿಗೆ ಮಾತ್ರ ರೇಷ್ಮೆ ಆಮದಿಗೆ ಅವಕಾಶ, ನೇಪಾಳ, ಬಾಂಗ್ಲಾದೇಶದ ಗಡಿಗಳ ಮೂಲಕ ಚೀನಾ ರೇಷ್ಮೆ ಭಾರತಕ್ಕೆ ಕಳ್ಳಸಾಗಾಣಿಕೆ ಆಗುವುದನ್ನು ತಪ್ಪಿಸುವುದು, ಕಸ್ಟಮ್ಸ್ ಇಲಾಖೆಯ ಮೂಲಕ ವಿತರಣೆಯಾಗುತ್ತಿರುವ ರೇಷ್ಮೆಯನ್ನು ಸರ್ಕಾರದ ರೇಷ್ಮೆ ವಿನಿಮಯ ಕೇಂದ್ರ ಅಥವಾ ರೇಷ್ಮೆ ಮಾರಾಟ ಮಂಡಳಿಯ ಮೂಲಕ ವಿತರಿಸುವುದು, ಅನಧಿಕೃತ ವಹಿವಾಟಿನ ನಿಯಂತ್ರಣ, ಮಾರುಕಟ್ಟೆಯನ್ನು ಕೆ.ಎಸ್.ಎಂ.ಡಿ ಮತ್ತು ಕೆ.ಎಸ್.ಐ.ಸಿ ಮುಖಾಂತರ ಪ್ರವೇಶಿಸಿ ಸೂಕ್ತ ಬೆಲೆ ಕೊಡಿಸುವ ಕ್ರಮದ ಪರಿಶೀಲನೆ, ಕಚ್ಚಾ ರೇಷ್ಮೆಗೆ ಬೆಂಬಲ ಬೆಲೆ ನೀಡುವ ಬಗ್ಗೆ ಬಂದಿರುವ ತಜ್ಞರ ಸಮಿತಿಯ ವರದಿಯ ಪರಿಶೀಲನೆ ಮಾಡುತ್ತಿರುವುದು ಕುರಿತೆಲ್ಲ ವಿವರಿಸಿದರು. ಶ್ರೀ **ಎಂ.ಎಸ್.ಆತ್ಮಾನಂದ** ಅವರು: ಪಾಂಡಪುರ ಸಹಕಾರ ಸಕ್ಕರೆ ಕಾರ್ಖಾನೆ ಕಳೆದ ಮೂರು ವರ್ಷಗಳಿಂದ ಅರೆದಿರುವ ಕಬ್ಬಿನ ಪ್ರಮಾಣ, ಗಳಿಸಿರುವ ಲಾಭ ಅಥವಾ ಆಗಿರವ ನಷ್ಟ, ರೈತರಿಗೆ ಕಬ್ಬಿನ ಹಣ ಪಾವತಿ,* ಕಾರ್ಮಿಕರಿಗೆ ನಿಗದಿತ ವೇತನ ಪಾವತಿ ಮಾಡಲಾಗದ ಕಾರ್ಖಾನೆಯ ಸಂಕಷ್ಟ ಸ್ಥಿತಿ ಹಾಗು ಸರ್ಕಾರದ ನೆರವಿನ ಕ್ರಮ ಕುರಿತೆಲ್ಲ ವಿವರ ಕೇಳಿದರು. ಸಹಕಾರ ಸಚಿವ ಶ್ರೀ ಹೆಚ್.ವಿಶ್ವನಾಥ್ ಅವರು ಉತ್ತರಿಸುತ್ತ; ಕಾರ್ಖಾನೆ ಅರೆದಿರುವ ಕಬ್ಬಿನ ಪ್ರಮಾಣ ಸುಮಾರು ಅರ್ಧಕ್ಕರ್ಧ ಇಳಿದು. ನಷ್ಟವನ್ನು 1626.06 ರಿಂದ ರೂ. 2698.94 ಲಕ್ಷದಷ್ಟು ಅನುಭವಿಸಿರುವುದು, ಕಾರ್ಖಾನೆ ಆಧುನೀಕರಣ ಯೋಜನೆ ಮುಗಿದು, ಪುಣೆಯ ಯಂತ್ರೋಪಕರಣ ಸರಬರಾಜುದಾರ ಮೇ॥ ಎನ್.ಎಚ್.ಸಿ ಅವರ ಕರಾರಿನಂತೆ ಪ್ರಾಯೋಗಿಕ ಫರ್‌ಫಾರ್ಮೆನ್ಸ್ ಪಡೆಯಲು ವಿಫಲತೆ, ಕಬ್ಬು ಅರೆಯುವಿಕೆ ಹಾಗು ಸಕ್ಕರೆ ಇಳುವರಿಯ ಗಣನೀಯ ಇಳಿಕೆ ಹಂಗಾಮುಗಳಲ್ಲಿ ಮುಂದುವರಿದ, ಕಾರ್ಖಾನೆಗೆ ನಷ್ಟವಾಗಿರುವುದು, ಈ ನಷ್ಟದಲ್ಲಿ 2984.00 ರೂ ಸವಕಳಿ ನಿಧಿ ತೆಗೆದಿಟ್ಟಿರುವುದು, ಹೆಚ್ಚಿನದರದಲ್ಲಿ 'ಕಬ್ಬಿನ ಬಿಲ್‌ಅನ್ನು ಪಾವತಿಸಲೇಬೇಕಾದ ಅನಿವಾರ್ಯತೆ, ತತ್ಫಲವಾಗಿ ಕಾರ್ಖಾನೆಯು ರೈತರು ಕಾರ್ಮಿಕರಿಗೆ ಹಣ ಪಾವತಿಸಲು ಸರ್ಕಾರಕ್ಕೆ 10 ಕೋಟಿ ರೂ. ಆರ್ಥಿಕ ನೆರವಿಗೆ ಕೋರಿಕೆಯ ಪ್ರಸ್ತಾವನೆ, ಸರ್ಕಾರ 9 ಕೋಟಿ ರೂ. ಮೃದು ಸಾಲ ಮಂಜೂರು ಮಾಡಿ ನೀಡಿರುವುದು, ಕಾರ್ಖಾನೆಯು ಪಡೆಯಲುದ್ದೇಶಿಸಿರುವ ಅಡವಿನ ಸಾಲ 35 ಕೋಟಿ ರೂ. ಇತ್ಯಾದಿ ವಿಷಯಗಳನ್ನು ಮಂಡನೆ ಮಾಡಿದರು.

## ವಿಷಯ 5ಅ: ಅಡಕೆ ಬೆಳೆಗಾರರಿಗೆ ಸರ್ಕಾರದ ನೆರವು

11.7.2003ರ ವಿಧಾನಸಭೆಯ ಕಾರ್ಯಕಲಾಪಗಳಲ್ಲಿ[14] ಪಾಲ್ಗೊಂಡ ಶ್ರೀ **ಅರಗ ಜ್ಞಾನೇಂದ್ರ** ಅವರು : ರಾಜ್ಯದಲ್ಲಿ ಅಡಿಕೆ ಬೆಳೆಯುವ ಹೆಕ್ಟೇರು ಪ್ರದೇಶದ ಪರಿಮಾಣ, ಅಡಿಕೆ ಧಾರಣೆ ಕುಸಿತದ ಕಾರಣ, ಬೆಳೆಗಾರರಿಗೆ ಸರ್ಕಾರ ನೀಡಿರುವ ಸೌಲಭ್ಯ, ಹಾಗು ಬೆಂಬಲ ಬೆಲೆ, ಸರ್ಕಾರ ಮಾಡಿರುವ ಮಾರುಕಟ್ಟೆ ಪ್ರವೇಶ, ಕುರಿತೆಲ್ಲ ಪ್ರಶ್ನಿಸಿದರು. ತೋಟಗಾರಿಕೆ ಸಚಿವರಾದ ಶ್ರೀ **ಎಂ.ಶಿವಣ್ಣನವರು** ಉತ್ತರಿಸುತ್ತ : 1.32 ಲಕ್ಷ ಹೆಕ್ಟೇರ್ ಅಡಿಕೆ ಬೆಳೆ, ಅಡಿಕೆಧಾರಣೆ ಮೇ ತಿಂಗಳಲ್ಲಿ ಚೇತರಿಸಿಕೊಂಡಿರುವುದು, ಉತ್ತರ ಭಾರತದಲ್ಲಿ ಗುಟ್ಕಾ ನಿಷೇಧದ ಕಾರಣ, ಹಾಗು ಹೆಚ್ಚಿದ ಅಡಿಕೆ ಉತ್ಪಾದನೆ ಸೇರಿ, ಧಾರಣೆ ಕುಸಿತವಾಗಿರುವುದು, ಹೊಸ **ಚಾಲಿ** ಅಡಿಕೆಯನ್ನು ಸರ್ಕಾರವು ಬೆಂಬಲ ಬೆಲೆ ನೀಡಿ 19.58 ಕೋಟಿ ರೂ. ಮೌಲ್ಯದಷ್ಟು ಖರೀದಿಸಿರುವುದು, ಅಡಿಕೆ ಬೆಳೆಗಾರರಿಗೆ ಬೇಸಾಯ ಕ್ರಮದ ಬಗ್ಗೆ ತಾಂತ್ರಿಕ ಮಾಹಿತಿ ನೀಡಿಕೆ, ಬೆಳೆಗಾರರ ಆದಾಯ ಹೆಚ್ಚಳಿಕೆಗಾಗಿ, ಕಾಳು ಮೆಣಸು, ವೆನಿಲ್ಲಾ ಕೋಕೋ ಹಾಗು ಇತರ ಬೆಳೆಗಳನ್ನು ಅಂತರ ಬೆಳೆಯಾಗಿ ಬೆಳೆಸಲು ಪ್ರೋತ್ಸಾಹ, ಅಡಿಕೆ ಉತ್ಪನ್ನಗಳ ಪರ್ಯಾಯ ಬಳಕೆಯ ಸಂಶೋಧನೆಗೆ ಹಣಕಾಸಿನ ನೆರವು, ಅಡಿಕೆ ಆಮದು ನಿಯಂತ್ರಣಕ್ಕೆ ಕೇಂದ್ರದ ಮೇಲೆ ಒತ್ತಾಯ, ಆಹಾರ ಕಲಬೆರಕೆ ನಿಯಮಾವಳಿಯು ಅಡಿಕೆ ಬೆಳೆಗೆ ಹಾನಿಯಾಗದಂತೆ ಮಾರ್ಪಾಟಿಗೆ ಶಿಫಾರಸ್ಸು, 2000–2001ನೇ ಸಾಲಿನಲ್ಲಿ 22 ಜಿಲ್ಲೆಗಳಲ್ಲಿ 13230 ಹೆಕ್ಟೇರುಗಳಲ್ಲಿ ಅಡಿಕೆ ಬೆಳೆದಿರುವುದು, ಶಿವಮೊಗ್ಗ ಜಿಲ್ಲೆ (20326 ಹೆ.) ದಕ್ಷಿಣ ಕನ್ನಡದಲ್ಲಿ (25445 ಹೆ.) ಹೆಚ್ಚು ಬೆಳೆದಿರುವುದು ಕುರಿತೆಲ್ಲ ವಿವರಿಸಿದರು.

## ವಿಷಯ 6: ಅಡಿಕೆ ಬೆಳೆಗಾರರ ಸಮಸ್ಯೆ ಸಹಕಾರಿ ಸಾಲದ ಬಡ್ಡಿ ಮನ್ನಾ ಅವಧಿ ವಿಸ್ತರಣೆ

25.3.2003 ವಿಧಾನಸಭಾ ನಡವಳಿಕೆಗಳಲ್ಲಿ,[15] **ಡಿ.ವಿ.ಸದಾನಂಗೌಡ** ಅವರು, ಪಾಲ್ಗೊಂಡು; ಅಡಿಕೆ ಬೆಳೆಗಾರರಿಗೆ ಕಳೆದ ಬಾರಿ ಸರ್ಕಾರ ಬೆಂಬಲಬೆಲೆಗೆ ಖರೀದಿ ಮಾಡಿದ್ದು, ಅದು ತಡವಾಗಿ ಸಿಕ್ಕಿದ ನೆರವು ಆಗಿ, ಮಧ್ಯಮ ಮತ್ತು ಸಣ್ಣವರ್ಗದವರಿಗೆ

---

14. ವಿಧಾನ ಸಭೆಯ ನಡವಳಿಕೆಗಳು., ಸಂಪುಟ 5 (1–5), (11.7.2003), ಪು.145–7

15. ವಿಧಾನಸಭಾ ನಡವಳಿಕೆಗಳು., ಸಂಪುಟ 4(1 ರಿಂದ 3) ಭಾಗ–1, (25.3.2003) ಪು.31–83

ಅಷ್ಟಾಗಿ ಅನುಕೂಲವಾಗದೆ ಹೋದದ್ದು, ಪುನಃ ಆ ಬಗ್ಗೆ ಸರ್ಕಾರದ ಪರಿಶೀಲನೆಯ ವ್ಯವಸ್ಥೆ ಮಾಡಿರುವುದು, ಇಯರ್‌ಎಂಡ್ ಮಾರ್ಚ್ 31 ರೊಳಗೆ ಸರ್ಕಾರ ಘೋಷಿತ ಸೌಲಭ್ಯಗಳು ದೊರಕುವಂತೆ ಮಾಡುವುದು, ಬೆಂಬಲ ಬೆಲೆ ಇಲ್ಲದೆ ಮಾರುಕಟ್ಟೆಯ ಮಧ್ಯಪ್ರವೇಶದಿಂದ ರೈತರಿಗೆ ಅಷ್ಟೇನೂ ಸೌಲಭ್ಯ ಸಿಗದಿರುವುದು, ಮಾರ್ಚ್ 31ರ ಬದಲು ಜೂನ್ 30ರ ವರೆಗೆ ಸಹಕಾರಿ ಸಾಲ ಕಟ್ಟಲು ಅವಧಿ ವಿಸ್ತರಣೆ ಬೆಳೆಗಾರರಿಗೆ ಮಾಡುವುದು, ಬೆಂಬಲ ಬೆಲೆಯು ಬಂದರೆ ಕಿಲೋಗೆ 35–40 ರೂ. ಬದಲು 60 ರೂ. ಸಿಗುವುದು, ಆಗ ಆರ್ಥಿಕ ವ್ಯವಸ್ಥೆ ಆಗಿ ಸಹಕಾರಿ ಸಾಲದ ಮರುಪಾವತಿ ಸಮರ್ಪಕವಾಗುವುದು, ಆತ್ಮಹತ್ಯೆ ಮಾಡಿಕೊಳ್ಳುವ ಅವಶ್ಯಕತೆ ಇಲ್ಲ ಎನ್ನುವಂಥ ಭಾವನೆ ಬೆಳೆಗಾರರಿಗೆ ಬರುವುದು, ಮಧ್ಯಮ ಮತ್ತು ಸಣ್ಣ ಬೆಳೆಗಾರರ ಕೈಗೆ ಫಸಲು ಸಿಕ್ಕಿರುವ ಕಾರಣ ಈಗಲೇ ವರ್ತಕರಿಗೆ ಮಾರ್ರಾಟ ಮಾಡುವ ಸಾಧ್ಯತೆ ಇರುವುದು ಕುರಿತೆಲ್ಲ ಹೇಳಿದರು.

**ಶ್ರೀ ವಿಶ್ವೇಶ್ವರ ಹೆಗಡೆ ಕಾಗೇರಿ** ಅವರು, ಅಡಿಕೆ ಬೆಳೆಗಾರರ ಕ್ಷೇತ್ರಗಳಲ್ಲಿ ಶೇ. 90ಕ್ಕಿಂತ ಹೆಚ್ಚು ಭಾಗ ಸಹಕಾರ ಸಂಘಗಳ ಮೂಲಕವೇ ಅಡಿಕೆ ವ್ಯಾಪಾರ ನಡೆಯುವುದು, ಮಾರ್ಚ್ ಕೊನೆಗೆ ಬಂದಿರುವ ಕಾರಣ ತೆಗೆದುಕೊಂಡ ಸಾಲವನ್ನು ಮರುಪಾವತಿ ಮಾಡಲು ಸಾಧ್ಯವಾಗದಿರುವುದು, ಅದರಲ್ಲಿ ಸಹಕಾರ ಸಂಘಗಳ ಅಳಿವು, ಉಳಿವಿನ ಪ್ರಶ್ನೆ ಇರುವುದು, ಬೆಲೆ ಕುಸಿತದ ಕಾರಣ ಬೆಳೆಗಾರರು ಸಾಲ ತುಂಬಲಾಗದೆ, ಬಡ್ಡಿಯನ್ನು ಕೊಡಲಾಗದ ಕಾರಣ, ಬಡ್ಡಿ ಮನ್ನಾ ಆಗಬೇಕಿರುವುದು, ಅಡಿಕೆ ಬೆಳೆಗಾರರ ಸ್ಥಿತಿಯು ಆತ್ಮಹತ್ಯೆ ಮಾಡಿಕೊಳ್ಳುವಂಥ ಪ್ರಕರಣವಾಗಿರುವುದು, ಈ ಕಾರಣ ಸಾಲಮರುಪಾವತಿ ದಿನವನ್ನು ಜೂನ್ ಕೊನೆಯವರೆಗೆ ವಿಸ್ತರಿಸುವುದು, ಎಂಬ ಬಗೆಗೆಲ್ಲ ನುಡಿದರು. ಮುಂದುವರಿದು ಬಿಳಿ ಅಡಕೆಗೆ ಮೂರು ಹಂತದಲ್ಲಿ ಬೆಂಬಲಬೆಲೆ ಕೊಡಬೇಕಿದೆ, ಕೆಂಪು ಅಡಿಕೆಗೂ ಬೆಂಬಲ ಬೆಲೆ ಕೊಡಬೇಕಿದೆ. ಕೇಂದ್ರಕ್ಕೆ ಪ್ರಸ್ತಾವನೆ ಕಳುಹಿಸಿ ರಾಜ್ಯ ಸರ್ಕಾರ ಒಪ್ಪಿಗೆ ಪಡೆದು ಈ ಕೆಲಸ ಮಾಡಬೇಕು ಎಂದರು. **ಶ್ರೀ ಅರಗ ಜ್ಞಾನೇಂದ್ರ** ಅವರು, ಅಡಿಕೆಯ ಮಾನ ಹಾಗು ಅಡಿಕೆ ಬೆಳೆಯುವವರ ಮಾನವನ್ನು ಉಳಿಸಬೇಕು ಎಂದರು. ಕಳೆದ ಬಾರಿ ಒಳ್ಳೆಯ ಬೆಲೆ ಕನಿಷ್ಠ **ಬಿಳಿ** ಅಡಕೆಗಾದರೂ ಬರುವಂಥ ವ್ಯವಸ್ಥೆ ಆಗಿತ್ತು. ದೆಹಲಿಯಿಂದ ಬೆಂಬಲ ಬೆಲೆಗೆ ಅನುಮತಿ ಬರುವತನಕ ಅಂದರೆ ಜೂನ್ ವರೆಗೆ ಅವಕಾಶವಿರುವಲ್ಲಿ ಸಾಲದ ಬಡ್ಡಿ ಮರುಪಾವತಿ, ಬಡ್ಡಿ ಮನ್ನಾದ ಅವಧಿಯನ್ನು ಅಲ್ಲಿಯ ತನಕ ವಿಸ್ತರಿಸಲು ವಿನಂತಿಸಿದರು. ಸಚಿವ ಶ್ರೀ ಹೆಚ್.ವಿಶ್ವನಾಥ್ ಅವರು

ಮಾತನಾಡಿ ಬೆಳೆಸಾಲವಾಗಿ ರೈತರು ತೆಗೆದುಕೊಂಡಿರುವ 674 ಕೋಟಿ ರೂಗಳಲ್ಲಿ 127 ಕೋಟಿ ರೂ. ಮನ್ನಾ ಮಾಡಿದೆ. ಯಾವುದೇ ತರಹದ ಬೆಳೆಸಾಲಕ್ಕೆ 31.3.2003 ಕಟ್ ಆಫ್ ಡೇಟ್. ಆವರೆಗೆ ವಿಸ್ತಾರ ಮಾಡಿದೆ. ಕೇಂದ್ರ ಶೇ 20 ರಷ್ಟು ನೆರವನ್ನು ಡ್ರೈಕ್ರಾಪ್ಸ್‌ಗೆ ಮಾತ್ರ ನೀಡಿದೆ. ರಾಜ್ಯ ಸರ್ಕಾರವು ರೈತರ ಸಾಲದ ಮೇಲಿನ ಬಡ್ಡಿ ಹೊರೆಗೆ ಕಮಿಟ್ ಆಗಿದೆ. ಅಡಿಕೆಯ ಮೇಲೆ ತೆಗೆದುಕೊಂಡಿರುವ ಒಟ್ಟು ಸಾಲ 32 ಕೋಟಿ ರೂ.ಅನ್ನು ನಾವು ಕೊಟ್ಟಿದ್ದು ಬಹುತೇಕ ವಾಪಸ್ ಬಂದಿದೆ. ಡಿಸಿಸಿ ಬ್ಯಾಂಕ್ ರಿಸಾಲ್ಯುಷನ್ ಮಾಡಿ ಉತ್ತರ ಕನ್ನಡದಲ್ಲಿ ಮಾತ್ರ 3 ಕೋಟಿ ರೂ. ಬಾಕಿ ಇರುವಲ್ಲಿ, ಕಳುಹಿಸಿದರೆ ಅವಧಿ ವಿಸ್ತರಣೆಗೆ ಸಿದ್ಧ ಎಂದರು. ಶ್ರೀ ಡಿ.ವಿ.ಸದಾನಂದ ಗೌಡರು ಉತ್ತರ ಕನ್ನಡದ ಡಿಸಿಸಿ ಬ್ಯಾಂಕ್‌ನಂತೆ ಎಲ್ಲಾ ಡಿಸಿಸಿ ಬ್ಯಾಂಕ್‌ನವರು ವಿಸ್ತರಣೆ ಕೇಳಿದರೆ ಅವಕಾಶವಿರಲಿ ಎಂದರು.

**ಶ್ರೀ ಪಿ.ಜಿ.ಆರ್.ಸಿಂಧ್ಯಾ** ಅವರು ಬರಗಾಲ ಸನ್ನಿವೇಶದಲ್ಲಿ, ಖಾರೀಫ್ ಸೀಸನ್ 1.4.2002 ರಿಂದ 30.9.2002ರ ವರೆಗೆ ನಬಾರ್ಡ್, ಆರ್.ಬಿ.ಐ ನವರು ಡಿಸಿಸಿ ಬ್ಯಾಂಕ್‌ನ ಮೂಲಕ ಅಲ್ಪಾವಧಿ ಸಾಲ ನೀಡಿಕೆಯ ಘೋಷಣೆ ಮಾಡಿದಂತೆ, ಸರ್ಕಾರ ಕೊಟ್ಟ ಕ್ರಾಫ್ ಲೋನ್ ಮೇಲಿನ ಬಡ್ಡಿಯನ್ನು (123 ಕೋಟಿ.ರೂ) ಮನ್ನಾ ಮಾಡಿದೆ. ಅದರಲ್ಲಿ ಕೇಂದ್ರವು 63.50 ಕೋಟಿ ರೂ. ಮಾತ್ರ ಕೊಡುವ ಒಪ್ಪಂದವಾಗಿತ್ತು. ಆಣೇವಾರಿ ಲೆಖ್ಖಾಚಾರ ಹಾಕಿ ಆರು ಆಣೆಗಿಂತ ಕಡಿಮೆ ಇದ್ದರೆ ಮಾತ್ರ ಅನ್ವಯವೆನ್ನುವಲ್ಲಿ ಅಂದರೆ ಚಕ್ರ ಬಡ್ಡಿ ತೆಗೆದುಕೊಳ್ಳಬಾರದೆಂಬ ನೀತಿ ಬರಗಾಲವಿರುವ 156 ತಾಲೂಕುಗಳಲ್ಲಿ 92 ತಾಲೂಕುಗಳಲ್ಲಿ ಮಾತ್ರ ಆಣೇವಾರಿಗೆ ಬರುವಂಥದ್ದಾಗಿದೆ. ರಾಜ್ಯ ಸರ್ಕಾರದ ಮೇಲೆ ಭಾರ ಎಂದರೆ ಕೇವಲ 63.50 ಕೋಟಿ ರೂ ಮಾತ್ರ, ಅದರಲ್ಲಿ 30 ಕೋಟಿ ರೂ.ಗಳಷ್ಟನ್ನಾದರೂ ರಾಜ್ಯ ಸರ್ಕಾರ ಈ ತಿಂಗಳ 29ರೊಳಗೆ ಬಿಡುಗಡೆಮಾಡದಿದ್ದರೆ. ನಬಾರ್ಡ್ ಮುಂದಿನ ಹಣಕಾಸು ವರ್ಷಕ್ಕೆ ನಿಧಿನೆರವು ನೀಡುವುದಿಲ್ಲ. ಇದು ರೈತರಿಗೆ ಸಮಸ್ಯೆಯಾಗುವಲ್ಲಿ ನಮಗೆ ತಳಮಳ ಒದಗುತ್ತದೆ ಎಂದೆಲ್ಲ ನುಡಿದರು. ಶ್ರೀ ಹೆಚ್.ವಿಶ್ವನಾಥ್ ಅವರು, ಡಿಸಿಸಿ ಮತ್ತು ಅಪೆಕ್ಸ್ ಬ್ಯಾಂಕ್‌ಗಳಿಗೆ 31ನೇ ತಾರೀಖಿನೊಳಗೆ ಬಡ್ಡಿ ಹಣ ಅಡ್ಜಸ್ಟ್ ಆಗುವ ರೀತಿಯಲ್ಲಿ ವಿಧಿ-ವಿಧಾನಗಳನ್ನು ಅನುಸರಿಸಿ ಕಾನೂನು ರೀತ್ಯ ಕ್ರಮ ತೆಗೆದುಕೊಳ್ಳಲಾಗುವುದು. ಯಾವುದೇ ಆತಂಕ ಬೇಡ ಎಂದರು. ಸಹಕಾರ ಸಂಘ, ಬ್ಯಾಂಕ್‌ಗಳಿಗೆ ಯಾವುದೇ ರೀತಿಯಲ್ಲಿ ಅನಾಹುತವಾಗದಂತೆ ಸರ್ಕಾರ ನೋಡಿಕೊಳ್ಳುತ್ತದೆ. ಎಂದರು. ಶ್ರೀ ಪಿ.ಜಿ.ಆರ್.ಸಿಂಧ್ಯಾ

ಅವರು : 63 ಕೋಟಿರೂ ಬಡ್ಡಿ ಮನ್ನಾ ಇನ್ನೂ ಆಗಲಿಲ್ಲ; 30 ಕೋಟಿರೂ. ಬಿಡುಗಡೆಗೆ ಸರ್ಕಾರಿ ಆದೇಶವಾಗಿದ್ದರೂ, ಹಣ ಬಿಡುಗಡೆ ಆಗಿಲ್ಲ. 31ನೇ ತಾರೀಖಿನೊಳಗೆ ಇದಾಗದಿದ್ದರೆ ರೈತರ ಭವಿಷ್ಯಕ್ಕೆ ಕಲ್ಲು ಚಪ್ಪಡಿ. ಇದನ್ನು ಪ್ರತಿಭಟಿಸಿ, ಸರ್ಕಾರದ ಧೋರಣೆಯನ್ನು ಸಹ ಖಂಡಿಸತ್ತೇವೆ. ನಾವು ಸಭಾತ್ಯಾಗ ಮಾಡುತ್ತೇವೆ ಎಂದು ಜನತಾದಳದ ಸದಸ್ಯರೊಡನೆ ಸಭಾತ್ಯಾಗ ಮಾಡಿದರು.

ಈ ದಿನದ ಚರ್ಚೆಯಲ್ಲಿ ಸರ್ವಶ್ರೀ ಮಲ್ಲಿಕಾರ್ಜುನ ಖರ್ಗೆ, ಕರಡಿ ಸಂಗಣ್ಣ ಅಮರಪ್ಪ, ಎಸ್.ಎಸ್. ಪಾಟೀಲ್, ಡಿ.ಬಿ.ಚಂದ್ರೇಗೌಡ, ಬಿ.ಎನ್.ಬಚ್ಚೇಗೌಡ, ಜಗದೀಶ್ ಶೆಟ್ಟರ್, ಅವರುಗಳೂ ಪಾಲ್ಗೊಂಡಿದ್ದರು.

## ವಿಷಯ 7: ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಪ್ಲಾಂಟೇಷನ್ ಕ್ರಾಪ್‌ಗಳಿಗೆ ಪರಿಹಾರ ಘೋಷಣೆ

16.7.2003ರ ವಿಧಾನಸಭಾ ಕಾರ್ಯಕಲಾಪಗಳಲ್ಲಿ[16] ಪಾಲ್ಗೊಂಡ **ಶ್ರೀ ಡಿ.ವಿ. ಸದಾನಂದಗೌಡ** ಅವರು : ರಾಜ್ಯ ಸತತವಾಗಿ ಮೂರು ವರ್ಷಗಳ ಕಾಲ ಬರದಿಂದ ತತ್ತರಿಸುತ್ತಿರುವುದು, ಬರ ತಾಲೂಕುಗಳನ್ನು ಘೋಷಿಸಿರುವುದು, ಅಡಿಕೆ, ತೆಂಗು, ಕೋಕೋ ಇತ್ಯಾದಿ ತೋಟಗಾರಿಕೆ ಬೆಳೆಯುವಂಥ ದಕ್ಷಿಣ ಕನ್ನಡ ಜಿಲ್ಲೆಯಲ್ಲೂ ಪರಿಸ್ಥಿತಿ ನೋಡಿ ಬರ ಎಂದು ಘೋಷಿಸಿದ್ದರೆ ಬರುತ್ತಿದ್ದ 15–20 ಕೋಟಿ ರೂ. ಕೂಲಿಕಾಳು ಯೋಜನೆಯಿಂದ ಒದಗುತ್ತಿದ್ದ ಸುಧಾರಣೆ, ಮಳೆ ತಿಂಗಳಕಾಲ ಕೈಕೊಟ್ಟು ತೋಟಗಾರಿಕಾ ಬೆಳೆಗಳಿಗೆ ಸಮರ್ಪಕ ನೀರಿನ ಪೂರೈಕೆ ಆಗದೆ ಹೋದದ್ದು, ವಿದ್ಯುತ್ ಕೊರತೆ, ಇತ್ಯಾದಿಗಳಿಂದಾಗಿ ಆ ಬೆಳೆಗಳ ಮರಗಳು ಒಣಗಿ ಶೇ.40 ರಷ್ಟು ಸತ್ತು ಹೋಗಿರುವುದು, ಆ ಬಗ್ಗೆ ಪರಿಶೀಲನೆಗೆ ಇಟ್ಟ ಬೇಡಿಕೆ ಹಾಗು ಬರೆದ ಪತ್ರಗಳಿಗೆ ಇನ್ನು ಉತ್ತರ ಸಿಕ್ಕಿಲ್ಲದಿರುವುದು, ಹಳದಿರೋಗದಿಂದಾಗಿ ಅಡಿಕೆ ಮರಕ್ಕೆ ಆಗಿರುವ ಹಾನಿ, ಈ ಪ್ಲಾಂಟೇಷನ್ ಬೆಳೆಯ ಮರಗಳು ಸತ್ತರೆ, ಮತ್ತೆ ಪ್ಲಾಂಟೇಷನ್ ಮಾಡಿ ಫಲ ಪಡೆಯಲು ಸುಮಾರು 6–7 ವರ್ಷ ಬೇಕಾಗುವುದು, ಅದಕ್ಕೆ ತಗುಲುವ ವೆಚ್ಚ ಮತ್ತು ಅಗತ್ಯವಿರುವ ಸೌಲಭ್ಯ ಸರ್ಕಾರ ಒದಗಿಸಬೇಕಿರುವುದು, ಕೋಸ್ಟಲ್ ಬೆಲ್ಟ್‌ನಲ್ಲಿ ವಿಪರೀತ ಮಳೆಯ ಕೆಲವೇ ದಿನಗಳಲ್ಲಿ ಬಂದು ತುಂಬಾ ಹಾನಿಯಾಗಿರುವುದು, ಜಿಲ್ಲಾ ಆಡಳಿತದ

22. ವಿಧಾನ ಸಭೆಯ ನಡವಳಿಕೆಗಳು., ಸಂಪುಟ 6(1–4), 28.6.2004), (16.7.2003), ಪು. 46–7

ಅಂಕಿ ಅಂಶ ಪ್ರಕಾರ ಅದರಿಂದ 8.27 ಕೋಟಿ ರೂ. ನಷ್ಟವಾಗಿರುವುದು, ಪ್ರಕೃತಿ ವಿಕೋಪ ಪರಿಹಾರದಲ್ಲಿ ಕೆಲಸಮಾಡಲು ಶಾಸಕರಿಗೆ ಸೇವಾಕಾರ್ಯಗಳಿಗೆ ಹಾಗೂ ಬೆಳೆಗಳಿಗೆ ಪರಿಹಾರ ದೊರಕದಿರುವುದು, ಸದ್ಯದ ಪರಿಸ್ಥಿತಿಯಲ್ಲಿ ಪ್ಲಾಂಟೇಷನ್‌ಗೆ ಬೇಕಾದಂಥ ಮೂಲಭೂತ ಸೌಲಭ್ಯ, ಪರಿಹಾರ ಒದಗಿಸುವುದು, ಈ ಕೆಲಸಗಳಾಗದಿದ್ದರೆ, ದಕ್ಷಿಣ ಕನ್ನಡ ಮತ್ತು ಉಡುಪಿ ಜಿಲ್ಲೆಗಳು ಬರಪೀಡಿತವಾದ ಜಿಲ್ಲೆಗಳಾಗಿ ಮುಂದಿನ ಹಲವಾರು ವರ್ಷಗಳಲ್ಲಿ ಪರಿವರ್ತನೆಯಾಗುವಂಥ ಲಕ್ಷಣಗಳಿರುವುದು, ಈ ಕಾರಣಗಳಿಂದ ರೈತರ ಸಹಾಯಕ್ಕೆ ಬರಬೇಕಾದ ಅಗತ್ಯದ ಕುರಿತೆಲ್ಲ ವಿಷಯ ಮಂಡಿಸಿ ವಿನಂತಿ ಮಾಡಿದರು.

**ವಿಷಯ 8: ರೇಷ್ಮೆ ಧಾರಣೆ ಕುಸಿತದಿಂದ ತೊಂದರೆ.**

28.6.2004ರ ವಿಧಾನಸಭಾಧಿವೇಶನದಲ್ಲಿ[17] **ಶ್ರೀ ಆರ್.ಧ್ರುವನಾರಾಯಣ** ಅವರು ಮಾತನಾಡಿ : ರೇಷ್ಮೆ ಗೂಡಿನ ದರದ ಕುಸಿತದಿಂದಾಗಿ ರಾಜ್ಯದ ರೈತರ ಸಂಕಷ್ಟ, ಏಪ್ರಿಲ್ ಮೇ ತಿಂಗಳಲ್ಲಿ ಸಣ್ಣಗೂಡಿನ ದರ 30–80ರೂ ಇದ್ದದ್ದು ಜೂನ್ ತಿಂಗಳಲ್ಲಿ, ಧಾರಣೆ ಬಹಳ ತಳಮಟ್ಟಕ್ಕೆ ಇಳಿದು ಹೋಗಿರುವುದು, ಸಣ್ಣ ಹಾಗೂ ದೊಡ್ಡ ಗೂಡುಗಳಿಗೆ ಮಿನಿಮಂ ಪ್ರೈಸ್ ಫಿಕ್ಸ್ ಮಾಡಿ, ಬೆಲೆ ಕುಸಿದಾಗ, ಸರ್ಕಾರ ಬೆಂಬಲ ಬೆಲೆ ಕೊಡುವುದು ಕುರಿತೆಲ್ಲ ಹೇಳಿ ಮನವಿ ಇಟ್ಟರು.

ಸಚಿವ **ಶ್ರೀ ಎಂ.ಪಿ.ಪ್ರಕಾಶ್** ಅವರು ಈ ಮಾತುಗಳಿಗೆ ಉತ್ತರಿಸುತ್ತ : ಬೆಂಬಲ ಬೆಲೆ, ವೈಜ್ಞಾನಿಕ ಬೆಲೆಯನ್ನು ಕೊಡುವ ಉದ್ದೇಶದಿಂದಾಗಿ 400 ಕೋಟಿ ರೂ ಅವರ್ತನಿಧಿಯ ಏರ್ಪಾಟು, ಕೊರಿಯ, ಥೈವಾನ್, ಜಪಾನ್‌ನಿಂದ ತೀವ್ರ ಸ್ಪರ್ಧೆ ಎದುರಿಸುತ್ತಿರುವಲ್ಲಿ ಬೈವೋಲ್ಟಿನ್ ತಳಿಯ ಡಂಪಿಂಗ್ ಯಾರ್ಡ್ ಆಗದಂತೆ ನೋಡಿಕೊಂಡು, ಪರಿಹಾರದತ್ತ ಇರಬೇಕಾದ ಗಮನದ ಬಗೆಗೆಲ್ಲ ಹೇಳಿದರು. ಶ್ರೀ **ಆರ್.ಧ್ರುವನಾರಾಯಣ** ಅವರು ಚೈನಾ ಸಿಲ್ಕ್ ಬ್ಯಾನ್ ಮಾಡಿ, ಕಳ್ಳಸಾಗಣೆಕೆ ತಪ್ಪಿಸಿದರೆ ನಮ್ಮ ರೈತರಿಗೆ ಒಳ್ಳೆಯ ಬೆಲೆ ಸಿಗುತ್ತದೆ ಎಂದರು. ಶ್ರೀ ಎಂ.ಪಿ.ಪ್ರಕಾಶ್ ಅವರು ಆ ಬಗ್ಗೆ ಉತ್ತರಿಸುತ್ತ ವಿಶ್ವ ವಾಣಿಜ್ಯ ಒಪ್ಪಂದಕ್ಕೆ (ಡಬ್ಲುಟಿಓ) ಸಹಿ ಹಾಕಿರುವುದರಿಂದ ಯಾವುದೇ ದೇಶದಿಂದ ಬರುವ 750 ಐಟೆಮ್‌ಗಳನ್ನು ಬ್ಯಾನ್ ಮಾಡಲು ಸಾಧ್ಯವಾಗದಿರುವುದು, ಅದಕ್ಕೆ ಬೇಕಾಗಿರುವ ರಕ್ಷಣಾತ್ಮಕ ಕ್ರಮಕ್ಕಾಗಿ ತೆರಿಗೆಯನ್ನು ಹಾಕಬೇಕಾದ ರೀತಿ ಬಗ್ಗೆ ಕೇಂದ್ರ ಮಂತ್ರಿಗಳೊಡನೆ ಸಮಾಲೋಚಿಸಿ ರೈತರ ಪರವಾಗಿ ನಿರ್ಧಾರ ತೆಗೆದುಕೊಳ್ಳುವ ಬಗ್ಗೆ ತಿಳಿಸಿದರು.

23. ವಿಧಾನ ಸಭಾ ನಡವಳಿಕೆಗಳು., ಸಂಪುಟ 5(1–4), 28.6.2004), ಪು. 147–49

ಈ ಸಂದರ್ಭದಲ್ಲಿ ಶ್ರೀ ಬಿ.ಸಿ.ಪಾಟೀಲ್ ಅವರು ಹಿರೇಕೆರೂರಿನಲ್ಲಿ ರೈತರಿಗೆ ಬರಬೇಕಾದ ಬೆಳೆವಿಮೆ ಹಾಗು ತುಂಗಭದ್ರಾ ಮೆಲ್ದಂಡೆಗಾಗಿ ಭೂಮಿಸ್ವಾಧೀನ ಪಡಿಸಿಕೊಂಡ ಹಣವನ್ನು ಸಕ್ಕರೆ ಕಾರ್ಖಾನೆ ಶೇರುವಿಗಾಗಿ ಮುರಿದುಕೊಳ್ಳುವುದರ ಕುರಿತು ಮಾತನಾಡುತ್ತ : 1996–97ನೇ ಇಸವಿಯಿಂದ ಮಾಜಿ ಶಾಸಕರು ಬಸವೇಶ್ವರ ಸಕ್ಕರೆ ಫ್ಯಾಕ್ಟರಿ ಕಟ್ಟುತ್ತೇವೆಂದು ರೈತರಿಂದ ಷೇರು ಹಣವನ್ನು ಸಾಲದ ರೂಪದಲ್ಲಿ ತೆಗೆದುಕೊಂಡು ಫ್ಯಾಕ್ಟರಿ ಕಟ್ಟಡ ಕಟ್ಟಿಲ್ಲದಿರುವುದು; ಜೊತೆಗೆ ಅಪ್ಪರ್ ತುಂಗಾ ಪ್ರಾಜೆಕ್ಟ್ ಆಗಿ ತುಂಗ ಭದ್ರಾ ಬಲದಂಡೆ ಯೋಜನೆಯಲ್ಲಿ ಭೂಮಿಯನ್ನು ಸರ್ಕಾರವು ಅಕ್ವೈರ್ ಮಾಡಿರುವುದು, ಭೂಮಿ ಕಳೆದುಕೊಂಡವರಿಗೆ ಪರಿಹಾರ ಬಂದಿಲ್ಲದಿರುವುದು, ಕೆಲವೆಡೆ ಕೊಟ್ಟಿರುವ ಪರಿವಾರದ ಹಣವನ್ನು, ಬೆಳೆ ವಿಮೆ ಹಣ ಬಂದಿರುವ ಕಡೆಯೂ ಕೂಡ ಸಕ್ಕರೆ ಷೇರನ್ನು ಹೊಂದಿಸಿಕೊಂಡು, ಭೂ ರೈತರಿಗೆ ಅನ್ಯಾಯವಾಗುತ್ತಿರುವುದು, ಭೂಮಿಯೂ ಇಲ್ಲ ಹಣವೂ ಇಲ್ಲ, ಹಣ ಬಂದರೂ ಷೇರಿಗೆ ಜಮೆ,– ಹೀಗಾಗಿ ರೈತರ ಶೋಷಣೆ, ಬದಲು ಷೇರಿಗೆ ಮುರಿದುಕೊಳ್ಳದೆ ನೇರವಾಗಿ ರೈತರಿಗೆ ಪಾವತಿಸುವುದು, ಕುರಿತೆಲ್ಲ ಹೇಳಿದರು. ಇದಕ್ಕೆ ಶ್ರೀ ಎಂ.ಪಿ.ಪ್ರಕಾಶ್ ಅವರು ಸ್ಪಂದಿಸುತ್ತ, ಷೇರಿಗಾಗಿ ಹಣಮುರಿದುಕೊಳ್ಳುವುದು ಕಾನೂನು ಬಾಹಿರ; ಸರ್ಕಾರದ ಗಮನಕ್ಕೆ ತಂದಿರುವುದರಿಂದ ವಸ್ತುಸ್ಥಿತಿ ತಿಳಿದು ಕ್ರಮ ತೆಗೆದುಕೊಳ್ಳುತ್ತೇವೆ ಎಂದರು.

***ಮಂಥನ :*** *ಬೆಳೆಯ ಬೆಲೆ ಕುಸಿತವಾದಾಗ, ಬೆಂಬಲಬೆಲೆ ನಿಗದಿಯಾಗದಿದ್ದರೆ ರೈತರಿಗೆ ಒದಗುವ ಸಮಸ್ಯೆಗಳು, ಆವರ್ತನಿಧಿ ಕ್ರೋಡೀಕರಣ, ರೈತರು ಮಾರಲು ಬೆಳೆಗಳನ್ನು ತಂದು ಬೆಲೆ ಸಿಗದೆ ಸುಟ್ಟು ಪ್ರತಿಭಟಿಸುತ್ತಿರುವುದು, ರಾಜ್ಯದ ವಿವಿಧ ಕಡೆ ಈ ಕುರಿತು ಚಳುವಳಿ ನಡೆದಿರುವುದು, ಎ.ಪಿ.ಎಂ.ಸಿ. ಯಾರ್ಡ್‌ನಲ್ಲಿ ತಂದಿಟ್ಟುಕೊಂಡು ರೈತರಿಗೆ ದ್ರೋಹವೆಸಗಿರುವುದು, ಈ ಕಾರಣ ಬೆಳೆಯನ್ನು ವಾಪಸು ತೆಗೆದುಕೊಂಡು ಹೋಗಿ ಘೋಷಿತ ಬೆಲೆಗಿಂತಲೂ ಕಡಿಮೆ ಬೆಲೆ ಮಾರಿಕೊಂಡು ಎಪಿಎಂಸಿ ಅಧಿಕಾರಿಗಳ ವರ್ತನೆಗೆ ರೋಸಿಹೋಗಿರುವ ರೈತರು, ವಿದ್ಯುತ್ ನೀಡಿಕೆಯ ಅಸಮರ್ಪಕತೆ, ತೆಂಗಿನ ಬೆಳೆನಷ್ಟಕ್ಕೆ ಪರಿಹಾರ ಕೊಡಲಾಗದಿದ್ದರೆ ಸಾಲದ ಮೇಲಿನ ಬಡ್ಡಿಯನ್ನಾದರೂ ಮನ್ನಾ ಮಾಡುವಿಕೆ, ಸಾವಯವ ಕೃಷಿಗೆ ಪರಿಶೀಲನೆ, ರೈತರ ಹತಾಶ ಮಾರಾಟ, ಕೋಲ್ಡ್ ಸ್ಟೋರೇಜ್‌ನ ಸೂಕ್ತ ವ್ಯವಸ್ಥೆ, ವಿದ್ಯುತ್ ಸರಬರಾಜಿನ ವ್ಯತ್ಯಯ, ಜೋಳವನ್ನು ಕೊಳ್ಳುತ್ತಿದ್ದ ಪ್ರಾಚೀನ ಪದ್ಧತಿಗಳು, ಜೋಳವನ್ನು ಕೊಂಡು ದಾಸ್ತಾನು ಮಾಡಿದ ಮೇಲೆ ಎಫ್.ಸಿ.ಐ. ಕೆಲವಾರು*

ಅಧಿಕಾರಿಗಳು ಮತ್ತು ಮಧ್ಯವರ್ತಿಗಳು ಕೂಡಿ ರಸೀತಿಯ ನಮೂದುಗಳಲ್ಲಿ ಮಾಡುವ ಮೋಸ, ಪಂಪ್‌ಸೆಟ್‌ಗೆ ಮೀಟರ್ ಅಳವಡಿಸದೆಯೆ ರೈತರಿಗೆ ಹೆಚ್ಚು ದರ ವಿಧಿಸುವ ಅವೈಜ್ಞಾನಿಕ ಕ್ರಮ, ಬೆಳೆ ಪರಿಹಾರ ನೀಡಲಾಗದಿದ್ದರೆ ಕನಿಷ್ಠ ಸಾಲದ ಮೇಲಿನ ಬಡ್ಡಿ ಹಾಗೂ ಸುಸ್ತಿ ಬಡ್ಡಿಮನ್ನಾ, ಶ್ರೀಮಂತ ರಾಷ್ಟ್ರಗಳು ವರ್ಲ್ಡ್‌ಬ್ಯಾಂಕ್ ಮೂಲಕ ನಮ್ಮ ಮೇಲೆ ಆರ್ಥಿಕ ಗುಲಾಮಗಿರಿ ಹೇರಹೊರಟಿರುವುದು, ವರ್ಲ್ಡ್‌ಬ್ಯಾಂಕುಗಳ ಶರತ್ತಿನ ಕಾರಣ ಆಗುವ ಸಂಭವನೀಯ ಅನಾಹುತ, ಕೋಲ್ಡ್‌ಸ್ಟೋರೇಜ್‌ನ್ನು ಟೊಮೋಟೋಗೆ ಒದಗಿಸುವವರಿಗೆ (ಕಟ್ಟುವವರಿಗೆ) ಸಬ್ಸಿಡಿ ಕೊಡುವುದು, ಟೊಮೋಟೊಗೆ ಸೂಕ್ತ ಬೆಲೆ ಸಿಗಲಿಲ್ಲವೆಂದು ರಸ್ತೆಗೆ ಚೆಲ್ಲಿ ಅದರ ಮೇಲೆ ಟ್ರಾಕ್ಟರ್ ಓಡಿಸಿ ಮಾಡುವ ಪ್ರತಿಭಟನಾ ಪ್ರದರ್ಶನ, ರೈತರ ಬಳಿ ಹಣ ಕಟ್ಟಿಸಿಕೊಂಡು ಕೊಳವೆ ಭಾವಿಗೆ ಹಾಕಿದ ಲೈನ್‌ಗಳಿಗೆ ಸರ್ವಿಸ್ ಕೊಡದೆ ಅಕ್ರಮವೆನ್ನುವುದು, ಪ್ರಾದೇಶಿಕ ಭೂಗುಣ, ಹವಾಮಾನಕ್ಕನುಗುಣವಾಗಿ ನಿಗದಿತ ಬೆಳೆ ಬೆಳೆಯುವ ವೈಜ್ಞಾನಿಕ ಪದ್ಧತಿ ಬಿಟ್ಟು, ಒಬ್ಬರು ಬೆಳೆದು ಲಾಭಗಳಿಸಿಡುವುದನ್ನೆ ನಕಲು ಮಾಡಿ ಎಲ್ಲರೂ ಬೆಳೆಯ ಹೋದರೆ ಆಗುವ ಸಮಸ್ಯೆ, ಆತ್ಮಹತ್ಯೆ ಮಾಡಿಕೊಂಡ ರೈತನ ಕುಟುಂಬಕ್ಕೆ ಕೊಟ್ಟ ಪರಿಹಾರವನ್ನು ನಿಡುವಲ್ಲಿ ಗ್ರಾಮ ಲೆಕ್ಕಿಗರು ಕೊಡುವ ತೊಂದರೆ, ಬಯಸುವ ಲಂಚ, ಭತ್ತದ ಖರೀದಿ ಕೇಂದ್ರ ಆರಂಭ ಮಾಡುವಲ್ಲಿ ಬ್ಯಾನರ್ ಕಟ್ಟಿ ಪ್ರಚಾರ ಮಾಡಿಯೂ, ಖರೀದಿಯನ್ನು ಶುರಮಾಡಿಲ್ಲದಿರುವುದು, ಧಾರವಾಡದಲ್ಲಿ ಒಂದೇ ದಿನದಲ್ಲಿ ಸಂಗ್ರಹವಾದದ್ದು 23 ಸಾವಿರ ಕ್ವಿಂಟಾಲ್ ಮೆಕ್ಕೆಜೋಳವಾಗಿದ್ದು ಆ ರೈತ ಉತ್ಪನ್ನಗಳಿಗೆ ಡ.ಬ್ಲ್ಯು.ಟಿ.ಓ ಮಾದರಿಯಿಂದ ನಿಗದಿಗೊಳಿಸುವ ಧಾನ್ಯದರ ರೈತೋಪಿಯಾಗದಿರವುದು, ಸೂಕ್ಷ್ಮ ಸ್ವಚ್ಛವಾದ ಮೆಕ್ಕೆಜೋಳ, ಕುರಿತು ಆತ್ಮಹತ್ಯೆ ಮಾಡಿಕೊಂಡ ರೈತರ ಕುಟುಂಬಗಳಿಗೆ, ತಿಳುವಳಿಕೆಯ ಕೈಪಿಡಿ ಒದಗಿಸುವುದು, ರೈತರು ಕಬ್ಬು ಒದಗಿಸಿದರೂ ಹಣ ಕೊಡದಿರುವ ಸಕ್ಕರೆ ಕಾರ್ಖಾನೆಗಳು, ಮಿಲ್ ಮಾಲೀಕರು ರೈತರಿಂದ ಲೆವಿಗೆ ಕೊಂಡು, ತಾವು ಮಾರುವಲ್ಲಿ ಹೆಚ್ಚಿನ ಲಾಭ ಪಡೆದುಕೊಳ್ಳುವುದು, ಅಡಿಕೆಗೆ ತಗುಲಿರುವ ಕೊಳೆರೋಗ, ಇಂಟರ್ ಕ್ರಾಪಿಂಗ್‌ನ ಸಾಧ್ಯತೆಗಳು, ಬೆಳೆ ಬೇಸಾಯಗಳಿಗೆ ಉತ್ತೇಜನ, ಪ್ಲಾಂಟೇಷನ್ ಕ್ರಾಪ್‌ಗಳಿಗೆ ಪರಿಹಾರ ಘೋಷಣೆ, ರೈತರಿಂದ ಷೇರು ಹಣಪಡೆದೂ ಸಕ್ಕರೆ ಫ್ಯಾಕ್ಟರಿ ಕಟ್ಟಡವನ್ನು ಮಾತು ಕೊಟ್ಟಿದ್ದಂತೆ ಕಟ್ಟಿಲ್ಲದಿರುವುದು, ಆವರ್ತನಿಧಿಯಿಂದ ಸೂಕ್ತ ಪರಿಹಾರ ಒದಗಬೇಕಿರುವುದು ಗೋಡೌನ್ ಅವ್ಯವಸ್ಥೆ, ಸಾಲದ ಬಡ್ಡಿ ಮನ್ನಾ ಆಗದಿರುವುದು, ಸಾಲದ ಕಾರಣ ಜಪ್ತಿ ವಾರಂಟಿಗಳು ಇತ್ಯಾದಿಗಳೆಲ್ಲ ರೈತರು ಎದುರಿಸುತ್ತಿರುವ ಸಮಸ್ಯೆಗಳ ಭಾಗವೇ ಆಗಿದೆ. ತಮ್ಮ ಬೆವರಿನ ದುಡಿಮೆಯ ಉತ್ಪನ್ನಗಳಿಗೆ

ಬೆಲೆಸಿಗದಿದ್ದಾಗ ರೈತರು ಒಂದಷ್ಟು ದಿನ ಕಾಯ್ದಾರು. ಆದರೆ ಅದು ಸರಣಿಯಾಗಿಯೆ ಮುಂದುವರಿಯುತ್ತಿದ್ದರೆ, ಹತಾಶೆಗೀಡಾದ ರೈತರು ಪ್ರತಿಭಟನೆಯ ವಿವಿಧ ರೂಪಗಳನ್ನು ಪ್ರದರ್ಶಿಸುವುದು ಸಾಮಾನ್ಯ. ಅದು ಬೆಳೆಯನ್ನು ಹತಾಶ ಮಾರಾಟದಲ್ಲಿ ತೀರ ಕಡಿಮೆ ಬೆಲೆಗೆ ಮಾರಿ ಅತೃಪ್ತಿಯ ಸಂತಾಪದ ಸಂಕೇತವಾಗುವುದು; ರಸ್ತೆಯಲ್ಲಿ ಚೆಲ್ಲುವುದಷ್ಟಕ್ಕೇ ನಿಲ್ಲದೆ ಅದರ ಮೇಲೆ ಟ್ರಾಕ್ಟರ್ ಓಡಿಸುವುದೆಂದರೆ ರೈತರೊಳಗಿನ ಸಂಕಟ, ದುಃಖ, ಅಸಹಾಯಕತೆ ತೋರುವ ಪ್ರತಿಭಟನಾ ರೂಪ ಅದಾಗುತ್ತದೆ. ನಂತರ ನಿರಂತರ ಕಷ್ಟದಲ್ಲಿ ಸಾಲತೀರಿಸಬೇಕಾದ ಒತ್ತಡಗಳು. ಈ ನಡುವೆ ಸಿಕ್ಕಿ ಆತ್ಮಹತ್ಯೆಯ ಯೋಚನಾ ಸರಣಿಗೆ ಸಿಗುವ ರೈತರು ಒಂದು ರೀತಿಯಲ್ಲಿ ಕಷ್ಟಸನ್ನಿಗೆ ಒಳಗಾಗುತ್ತಾರೆ. ಅಂದಿನ ಮನೋಸ್ಥಿತಿ ಯಾವ ಪ್ಯಾಕೇಜ್ ಮಾದರಿಯ ನೆರವಿಗೂ ಸ್ಪಂದಿಸದೆ ಹೋಗಿ ಆತ್ಮಹತ್ಯೆಯತ್ತಲೇ ಶರಣಾಗುವುದು ಸಾಮಾನ್ಯ. ಇದು ರೈತಸಮಸ್ಯೆಗಳ ಒಂದು ಆಯಾಮ. ಇನ್ನೊಂದು ಬಗೆ ಮುಂದಿನಂತಿದೆ; ಅದು ತಂಬಾಕು, ನೀರು, ಜಮೀನು, ಭೂಮಿ ಇತ್ಯಾದಿ ಸಮಸ್ಯೆಗಳ ಸಂಬಂಧದ್ದು.

## ವಿಷಯ 9: ಹೊಗೆಸೊಪ್ಪು ಬೆಳೆಗಾರರ ಆತಂಕದ ಪರಿಸ್ಥಿತಿ

28.3.2000ರ ವಿಧಾನ ಸಭಾಧಿವೇಶನದಲ್ಲಿ[18] ಶ್ರೀ **ವಿ.ಪಾಪಣ್ಣ** ಅವರು ಮಾತನಾಡಿ, ಆಂಧ್ರದಲ್ಲಿ ರೈತರು ಹೊಗೆಸೊಪ್ಪು ಮಂಡಳಿಯ ಮೇಲೆ ಈ ವರ್ಷ ಆಂಧ್ರ ಮತ್ತು ಕರ್ನಾಟಕದಲ್ಲಿ ಹೊಗೆಸೊಪ್ಪಿಗೆ ರಜೆ ಘೋಷಿಸಲು ತಂದಿರುವ ಒತ್ತಾಯ; ಹಾಗೂ ಅಂಧ್ರ ಸರ್ಕಾರ ಅದಕ್ಕೆ ಬೆಂಬಲ ನೀಡಲಿರುವುದು; ಕಳೆದ ವರ್ಷದಂತೆ ಹಾಲಿ ವರ್ಷದಲ್ಲಿಯೂ 40 ಮಿಲಿಯನ್ ಹೊಗೆಸೊಪ್ಪು ಬೆಳೆಯಲು ಟಾರ್ಜೆಟ್ ನಿಗದಿ; ಆಂಧ್ರದ ಗುರಿ 100 ಮಿಲಿಯನ್ ಬದಲು 200 ಮಿಲಿಯನ್ ಬೆಳೆದಿಟ್ಟು ಕೊಂಡು ರಜೆ ಘೋಷಣೆಯ ಉಪಾಯ ಮಾಡಿರುವುದು, ಕರ್ನಾಟಕದಲ್ಲಿ ಸ್ಟಾಕ್ ಇಲ್ಲದಿರುವ ಕಾರಣ ಘೋಷಣೆಗೆ ವಿರೋಧದ ಅಗತ್ಯ ಕುರಿತೆಲ್ಲ ಹೇಳಿದರು : ಶ್ರೀ **ಹೆಚ್.ಸಿ.ಬಸವರಾಜು** ಅವರು ವಾಣಿಜ್ಯ ಬೆಳೆಗಾರರ ಚಿಂತಾಜನಕ ಸ್ಥಿತಿ, ಹೊಗೆಸೊಪ್ಪು ನರ್ಸರಿ, ಹಾಗು ನಾಟಿ ಆಗಿದ್ದು, ಬ್ಯಾಂಕ್ ಸಾಲಕ್ಕೆ ಮುನ್ನುಗ್ಗುತ್ತಿರುವುದು, ಆಂಧ್ರದಲ್ಲಿ ಹೆಚ್ಚು ಬೆಳೆದಿರುವ ಉತ್ಪನ್ನಕ್ಕೆ ಸರಿಯಾದ ಬೆಲೆ ಇಲ್ಲದ ಕಾರಣ ಅಲ್ಲಿ ಕ್ರಾಪ್ ಹಾಲಿಡೆ ಘೋಷಿಸುವಂತೆ ಒತ್ತಾಯ ತಂದು, ಕರ್ನಾಟಕವೂ ಕ್ರಾಪ್ ಹಾಲಿಡೆ ತರಬೇಕೆಂದು ಟ್ಯೊಬಾಕೋ ಬೋರ್ಡ್ ಮುಂದೆ

18. ವಿಧಾನಸಭಾಧಿವೇಶನದ ನಡವಳಿಕೆಗಳು, ಸಂಪುಟ 2.ಭಾಗ. II (28.3.2000) ಪು.1338–43

ಪ್ರಸ್ತಾವನೆ ಇಟ್ಟಿರುವುದು; ಸಭೆ ಸೇರಿ ಹಾಗೆ ನಿರ್ಣಯ ತಂದಿರುವುದು; ಕರ್ನಾಟಕ, ಆಂಧ್ರದ ಹೊಗೆಸೊಪ್ಪು ಬೆಳೆಗಳ ನಡುವೆ ಅಗಾಧ ವ್ಯತ್ಯಾಸ ಇರುವುದು; 18423 ಬೆಳೆಗಾರರು 38,222 ಹೆಕ್ಟೇರುಗಳಲ್ಲಿ ಅಧಿಕೃತವಾಗಿ 40 ಮಿಲಿಯನ್ ಅನ್ನು ಫಿಕ್ಸ್ ಮಾಡಿದಂತೆ ಬೆಳೆದಿರುವುದು; ಜೊತೆಗೆ ಅನಧಿಕೃತ ಬೆಳೆ ಸೇರಿಸಿ 51918 ಹೆಕ್ಟೇರ್‌ಗಳಲ್ಲಿ ಸುಮಾರು 45 ಮಿಲಿಯನ್ ಕೆ.ಜಿ. ಉತ್ಪಾದನೆ ಆಗಿರುವುದು; ಅದರಲ್ಲಿ 40 ಮಿಲಿಯನ್ ಕೆ.ಜಿ.ಮಾರಾಟವಾಗಿರುವುದು; ರಾಜ್ಯದ ಹೊಗೆಸೊಪ್ಪು ಬೆಳೆಯಲ್ಲಿ ಶೇ.80ಭಾಗ ರಫ್ತಾಗಿರುವುದು; ಶೇ.20 ಭಾಗ ಮಾತ್ರ ನಮ್ಮ ರಾಜ್ಯದಲ್ಲಿ ಬಳಸುವುದು; ಆಂಧ್ರದ ಶೇಕಡ 80 ಭಾಗ ನಮ್ಮ ದೇಶದಲ್ಲಿ ಬಳಸಿ, ಉಳಿದ ಶೇ. 20 ಭಾಗವನ್ನು ರಫ್ತು ಮಾಡುವುದು; ನಮ್ಮ ರಾಜ್ಯದ 80 ಭಾಗ ಹೊಗೆಸೊಪ್ಪಿಗೆ ಮಾರುಕಟ್ಟೆಯ ಯಾವ ತೊಂದರೆಯೂ ಇಲ್ಲದಿರುವುದು; ಆಂಧ್ರದವರಿಗೆ ತೊಂದರೆ ಎಂದು ಕ್ರಾಪ್ ಹಾಲಿಡೆ ತರುತ್ತ ನಮ್ಮ ಬೆಳೆಗಾರರಿಗೆ ಬರೆ ಹಾಕುವುದು ಸರಿಯಲ್ಲದಿರುವುದು; ಸರ್ಕಾರದ ಕೆಲವು ನಿಯಮಾವಳಿಗಳನ್ನು ಬದಲಾಯಿಸಿ ರೈತರ ಪರವಾಗಿ ಹೊಗೆಸೊಪ್ಪು ಮಂಡಳಿ ಕೆಲಸ ಮಾಡಲನುಕೂಲಿಸುವುದು, ಕುರಿತೆಲ್ಲ ಹೇಳಿ ಮಾತು ಮುಗಿಸಿದರು.

ಕೃಷಿ ಸಚಿವ ಶ್ರೀ **ಟಿ.ಬಿ.ಜಯಚಂದ್ರ** ಅವರು ಉತ್ತರಿಸುತ್ತ : ಸುಮಾರು 136 ಲಕ್ಷ ಮಿಲಿಯನ್ ಕೆ.ಜಿ. ತಂಬಾಕು ಮಾರಲು ಬೇಡಿಕೆ ಇಲ್ಲದ ಸ್ಥಿತಿ ಕಂಡು ರೈತರು, ರೈತ ಮುಖಂಡರು ಹೊಗೆಸೊಪ್ಪು ಬೆಳೆಸದಿರುವಂತೆ ತಂಬಾಕು ಮಂಡಳಿಯ ಮೇಲೆ ಹಾಕಿರುವ ಒತ್ತಾಯ; ಆ ರಾಜ್ಯದ ರೈತರ ನಿಯೋಗಕ್ಕೆ ಕ್ರಾಪ್ ಹಾಲಿಡೆಯನ್ನು ಕರ್ನಾಟಕದ ರೈತರ ಮೇಲೆ ಹೇರುವ ಭರವಸೆ ಕೊಟ್ಟಿರುವುದು; ವಾಸ್ತವವಾಗಿ ಕರ್ನಾಟಕ ಹಾಗು ಆಂಧ್ರದ ಬೆಳೆಗಿರುವ ವ್ಯತ್ಯಾಸ; ಕರ್ನಾಟಕದಲ್ಲಿ ವಾರ್ಷಿಕವಾಗಿ 40–45 ಮಿಲಿಯನ್ ಕೆ.ಜಿ. ಹೊಗೆಸೊಪ್ಪು ಬೆಳೆಯಲು ಮಾಡಿರುವ ನಿಗದಿ, ವಿಶೇಷತಃ ಎ.ಎಂ.ಸಿ ತಳಿ ಒರಿಚನ್ನು ಬೆಳೆದು ಶೇ.70 ರಷ್ಟು ರಫ್ತಿನ ಅವಕಾಶ, ಆಂಧ್ರ ಹಾಗು ಕರ್ನಾಟಕದಲ್ಲಿ ಬೆಳೆವ ತಂಬಾಕಿನ ಜೊತೆ ಬ್ಲೆಂಡ್ ಮಾಡಿದರೆ ಮಾತ್ರ ರಫ್ತಿಗೆ ಇರುವ ಅವಕಾಶ. ಆಂಧ್ರದಲ್ಲಿ ತಂಬಾಕು ಸ್ಟಾಕು ಜಾಸ್ತಿ ಇದ್ದು, ಬೆಲೆ ಮಾತ್ರ ಕಡಿಮೆ ಇರುವ ಕಾರಣ. ಕ್ರಾಪ್ ಹಾಲಿಡೆ ಘೋಷಿಸಬೇಕೆಂದು ಒತ್ತಾಯ ಮಾಡುತ್ತಿರುವುದು, ಕರ್ನಾಟಕ ರಾಜ್ಯದ ರೈತ ಮುಖಂಡರೊಡನೆ ಸಮಾಲೋಚಿಸದೆ ಏಕಾಏಕಿ ತೀರ್ಮಾನ ತೆಗೆದುಕೊಳ್ಳುವುದು ತಪ್ಪು ಎಂದು ಕೇಂದ್ರಕ್ಕೆ ನಮ್ಮ ಸರ್ಕಾರ ಮನವರಿಕೆ ಮಾಡಿರುವುದು, ನಮ್ಮ ರಾಜ್ಯದ ಹೊಗೆಸೊಪ್ಪಿಗೆ

ಬೇಡಿಕೆ ಇರುವ ಕಾರಣ. ರೈತರು ಬೆಳೆತೆಗೆಯಲು ಬಿತ್ತನೆ ಮಾಡಿ ಸಿದ್ಧವಾಗಿದ್ದು, ಮೂಲಭೂತ ಬಂಡವಾಳ ಹಾಕಿರುವುದು, ತಂಬಾಕು ಮಂಡಳಿ ಫಿಕ್ಸ್ ಮಾಡಿರುವ ಟಾರ್ಜೆಟ್ ಮೀರಿ ನಮ್ಮ ರೈತರು ಹೋಗಬಾರದು, ಎಂಬ ಕಿವಿಮಾತು ಹೇಳಿ, ಈ ವರ್ಷ ಆವರೇಜ್ ಪ್ರೈಸ್ 42–43ಕ್ಕೆ ಬಂದಿದ್ದು, ಕೇಂದ್ರದ ಮೇಲೆ ರೈತರ ಪರವಾಗಿ ಎಲ್ಲ ಒತ್ತಾಯ ತರುವ ಕುರಿತೆಲ್ಲ ತಿಳಿಸಿದರು.

## ವಿಷಯ 10: ರಾಜ್ಯದಲ್ಲಿ ವಿ.ಎಫ್.ಸಿ.ಹೊಗೆಸೊಪ್ಪು ಬೆಳೆಗಾರರ ತೊಂದರೆ

ಪಿರಿಯಾಪಟ್ಟಣದ **ಶ್ರೀ ಹೆಚ್.ಸಿ.ಬಸವರಾಜು** ಅವರು; ವಿ.ಎಫ್.ಸಿ ಹೊಗೆಸೊಪ್ಪು ಪ್ರಮುಖ ವಾಣಿಜ್ಯ ಬೆಳೆಯಾಗಿ ರೈತರ ಜೀವನಾಡಿ ಆಗಿದೆ. ಸದರಿ ಬೆಳೆಗಾರರು ಕಷ್ಟದಲ್ಲಿದ್ದಾರೆ. ತಂಬಾಕು ಮಂಡಳಿಯಿಂದಲೂ ಅವರಿಗೆ ಕಷ್ಟ ಪರಿಹಾರವಾಗಿಲ್ಲ. ಆಂಧ್ರದ ರೈತರು ಉಚ್ಚನ್ಯಾಯಾಲಯದಲ್ಲಿ ರಿಟ್ ಹಾಕಿ ಕರ್ನಾಟಕದ ರೈತರ ಮೇಲೆ 2001ನೇ ಸಾಲಿಗೆ ಬೆಳೆ ಬೆಳೆಯುವ ಬಗ್ಗೆ ನಿಯಂತ್ರಣ ತಂದಿದ್ದಾರೆ. ಇದರಿಂದ ನಮ್ಮ ರೈತರು ಕಂಗಾಲಾಗಿ ಆತ್ಮಹತ್ಯೆ ಮಾಡಿಕೊಳ್ಳುವ ಸ್ಥಿತಿಗೆ ಬಂದಿರುವುದನ್ನು ಸಚಿವರು ಗಮನಿಸಬೇಕು, ಎಂದರು.[19] ಮಾನ್ಯ ಕೃಷಿ ಸಚಿವ **ಶ್ರೀ ಟಿ.ಬಿ.ಜಯಚಂದ್ರ** ಅವರು ಈ ಬಗ್ಗೆ ವಿವರ ನೀಡುತ್ತ : ವಿಶಿಷ್ಟಗುಣಮಟ್ಟದ ನಮ್ಮಲ್ಲಿಯ ವಿ.ಎಫ್.ಸಿ. ತಂಬಾಕು ಬೆಳೆಗೆ ಅಂತರಾಷ್ಟ್ರೀಯ ಮಾರುಕಟ್ಟೆಯಲ್ಲಿ ಉತ್ತಮ ಬೇಡಿಕೆ ಇದೆ. 2000–01ನೇ ಸಾಲಿಗೆ ಕೆ.ಜಿ.ಗೆ 38ರೂ ಕನಿಷ್ಠ ಭರವಸೆ ದರದಲ್ಲಿ ತಂಬಾಕನ್ನು ಖರೀದಿಸಲು ತಂಬಾಕು ಮಂಡಳಿ ಪ್ರಕಟಿಸಿದ್ದು 25 ದಶಲಕ್ಷ ಕೆ.ಜಿ. ತಂಬಾಕನ್ನು ನೋಂದಾಯಿತ ಬೆಳೆಗಾರರಿಂದ ಕೊಳ್ಳಲು ಕ್ರಮ ಕೈಗೊಂಡಿದೆ. 28.2.2001ಕ್ಕೆ ಹರಾಜು ಕಾರ್ಯ ಕೊನೆಗೊಂಡಿದ್ದು ಸರಾಸರಿ ದರ ಕೆ.ಜಿ.ಗೆ 56ರೂ.ಇದೆ. ವಿಶೇಷವಾಗಿ ಅತಿಸಣ್ಣ ಮತ್ತು ಸಣ್ಣ ರೈತರಿಗೆ ಆಗಿರುವ ತೊಂದರೆ ತಪ್ಪಿಸಲು ತಂಬಾಕು ಮಂಡಳಿಯಲ್ಲಿ ಉಪಸಮಿತಿಯನ್ನು ರಚಿಸಿ ಆ ಬಗ್ಗೆ ಕ್ರಮ ಕೈಗೊಳ್ಳಲು ಪ್ರಯತ್ನಿಸಲಾಗಿದೆ. 2000–01ನೇ ಸಾಲಿನಲ್ಲಿ ಆಂಧ್ರದಲ್ಲಿ ಹೊಗೆಸೊಪ್ಪು ಬೆಳೆ ರಜೆ ಘೋಷಿಸಲಾಗಿ ಕೆ.ಜಿ.ಗೆ ರೂ.56, ದರವು ಗರಿಷ್ಠತಮವಾಗಿದೆ. ಕೃಷಿ ಇಲಾಖಾ ಅಧಿಕಾರಿಗಳು, ತಂಬಾಕು ಮಂಡಳಿಯ ರಾಜ್ಯ ಪ್ರತಿನಿಧಿಗಳು, ಹೊಗೆಸೊಪ್ಪು ಉತ್ಪಾದನಾ ಸಮಿತಿ (26.2.2001, ಸಭೆ ಹಾಗು ನೋಂದಾವಣೆ ಸಮಿತಿ ಸಭೆ (7.2.2001)ಯಲ್ಲಿ ಬೆಳೆಗಾರರ ಹಿತರಕ್ಷಿಸುವ ಕುರಿತು ಒತ್ತಡ ತಂದಿದ್ದು, ಮಂಡಳಿಯ ತೀರ್ಮಾನವನ್ನು ಕಾಯಲಾಗಿದೆ, ಎಂದರು.

---

19 ವಿಧಾನ ಸಭಾ ನಡವಳಿಕೆಗಳು, ಸಂಪುಟ 1, ಭಾಗ 1, 2.3.2001, ಪು.346.

**ಶ್ರೀ ಹೆಚ್.ಸಿ.ಬಸವರಾಜು** ಅವರು ಮಾಹಿತಿ ನೀಡುತ್ತ : 7 ಸಾವಿರ ಅಧಿಕೃತ 22,900 ಅನಧಿಕೃತ ತಂಬಾಕು ಬೆಳೆಗಾರರು ಇದ್ದು, ಅಧಿಕೃತವಾಗಿ 25 ಸಾವಿರ, ಅನಧಿಕೃತ 18 ಸಾವಿರ ಬ್ಯಾರಲ್ ನಮ್ಮಲ್ಲಿ ಇವೆ. ಹೀಗಿದ್ದೂ ಆಂಧ್ರದ ರೈತರು ಹೈ ಕೋರ್ಟ್‌ನಲ್ಲಿ ದಾವೆ ಹೂಡಲಾಗಿ ನ್ಯಾಯಾಲಯದ ನಿರ್ಣಯ ಹೀಗೆ ಬಂದಿದೆ– 'out of the total area owned by The grower, The Board has registered half of the area. The excess grown in Karnataka is unauthorised crop and it shall not be allowed to be solid'- ಇದನ್ನು ವಿಭಾಗೀಯ ಪೀಠವೂ ಅನುಮೋದಿಸಿದೆ. ನಮ್ಮ ಬೆಳೆಗಾರರ ದೃಷ್ಟಿಯಿಂದ ಇದು ಬಹಳ ಗಂಭೀರ ವಿಷಯ. ಅವರು 2, 3 ಎಕರೆ ಪ್ರದೇಶದಲ್ಲಿ ಬೆಳೆಯಬೇಕಾದ ಹೊಗೆಸೊಪ್ಪನ್ನು ಕೇವಲ 1 ರಿಂದ 1/1–2 ಎಕರೆ ಜಾಗದಲ್ಲಿ ಮಾತ್ರ ಬೆಳೆಯ ಬೇಕಾಗುತ್ತದೆ. ಇದರಿಂದ ಇಡೀ ವಿ.ಎಫ್.ಸಿ ಹೊಗೆಸೊಪ್ಪು ಬೆಳೆಗಾರರು ಆತ್ಮಹತ್ಯೆ ಮಾಡಿಕೊಳ್ಳುವಂಥ ಪರಿಸ್ಥಿತಿ ಇಂದು ನಮ್ಮ ರಾಜ್ಯದಲ್ಲಿ ಉದ್ಭವವಾಗಿದೆ. ಕಳೆದ ಸಾಲಿನಲ್ಲಿ 42 ದಶಲಕ್ಷ ಕೆ.ಜಿಯಷ್ಟು ಹೊಗೆಸೊಪ್ಪು ಉತ್ಪತ್ತಿಯಾಗಿ ಸಾಕಷ್ಟು ಹಣ ನಮ್ಮ ಸರ್ಕಾರಕ್ಕೆ ಬಂದಿದೆ. ಅದಾಗಿ ಹೈಕೋರ್ಟ್‌ನಲ್ಲಿ ದಾವೆ ಹೂಡಿ ರಾಜ್ಯದ ಹೊಗೆಸೊಪ್ಪು ಬೆಳೆಗಾರರಿಗೆ ಪರಿಹಾರ ಬರುವಂತೆ ಮಾಡಬೇಕು. ಇದಾಗದಿದ್ದರೆ ಬಹಳ ಅನಾಹುತಕ್ಕೆ ಕಾರಣವಾಗುತ್ತದೆ ಎಂದರು. ಇದಲ್ಲದೆ ಹೊಗೆಸೊಪ್ಪು ಮಂಡಳಿಯವರು ಕೇಂದ್ರ ಸರ್ಕಾರವನ್ನು ಒತ್ತಾಯಿಸಿ ಸುಪ್ರೀಂ ಕೋರ್ಟ್‌ನಲ್ಲಿ ದಾವೆ ಕ್ರಮಕ್ಕೆ ಮುಂದಾಗಿಲ್ಲ. ಅಂದರೆ ಆ ಮಂಡಳಿ ಬೆಳೆಗಾರರ ಹಿತ ಕಾಪಾಡಲಿಕ್ಕೆ ಅಲ್ಲ ಎಂದು ಸಭೆಯ ಮುಖಾಂತರ ನಾನು ಹೇಳಬೇಕಾಗಿರುತ್ತದೆ. ರೈತರ ಹಿತ ಕಾಪಾಡುವುದು ಸರ್ಕಾರದ ಹೊಣೆ. ದಯಮಾಡಿ ಸುಪ್ರೀಂಕೋರ್ಟ್‌ನಲ್ಲಿ ದಾವೆ ಹೂಡಿ, ಹೈಕೋರ್ಟ್ ಕೊಟ್ಟಿರುವ ಸ್ಟೇ ಅನ್ನು ವೆಕೇಟ್ ಮಾಡಿಸಬೇಕು. ಇಲ್ಲವೆಂದರೆ ನಮ್ಮ ರಾಜ್ಯದಲ್ಲಿ ಒಂದು ಎಕರೆ ಪ್ರದೇಶದಲ್ಲಿ ಕೂಡ ಹೊಗೆಸೊಪ್ಪನ್ನು ಬೆಳೆಯಲಾಗುವುದಿಲ್ಲ. ಅಲ್ಲದೆ ನಮ್ಮಲ್ಲಿಯ ಕರ್ನಾಟಕ ಲ್ಯಾಂಡ್ ರಿಫಾರ್ಮ್ಸ್ ಆಕ್ಟ್ ಪ್ರಕಾರ leasing of land is not Permissible. Whereas in Andrapradesh it is Permissible. ಹೀಗಾಗಿ ಆಂಧ್ರ ಬೆಳೆಗಾರರಿಗೆ ಅನುಕೂಲವಾಗುತ್ತದೆ. 80% of Karnataka farmers are marginal farmers not irrigated farmers. crop rotation is already follwed in karnataka. ನಾಲ್ಕು ತಿಂಗಳ ಬೆಳೆಯಾದ ಹೊಗೆಸೊಪ್ಪು ನರ್ಸರಿಯಿಂದ, ಆಗಸ್ಟ್–ಸೆಪ್ಟೆಂಬರ್‌ನಲ್ಲಿ ಬೆಳೆ ಬರುತ್ತದೆ. ನಮ್ಮ ರೈತರು ಅಕ್ಟೋಬರ್ ತಿಂಗಳಲ್ಲಿ ಸೀರಿಯಲ್ಸ್ ಅನ್ನು ರೋಟೇಷನ್‌ಗೆ ಹಾಕುತ್ತಾರೆ. ವರ್ಷದಲ್ಲಿ ಅವರು ಎರಡು ಬೆಳೆ ಬೆಳೆಯುವಲ್ಲಿ

ಆಂಧ್ರದ ಹೈಕೋರ್ಟ್ ಆದೇಶ ನಮ್ಮ ರಾಜ್ಯಕ್ಕೆ ಅನ್ವಯ ಕ್ರಮವಾಗಲಾರದು ಇದನ್ನು ಸುಪ್ರೀಂ ಕೋರ್ಟ್‌ನಲ್ಲಿ ಎತ್ತಿ ಹಿಡಿದು ರೈತರ ಹಿತ ಕಾಪಾಡಬೇಕು, ಎಂದು ಕೃಷಿ ಸಚಿವರಲ್ಲಿ ವಿನಂತಿಸಿದರು.

ಹುಣಸೂರಿನ **ಶ್ರೀ ವಿ.ಪಾಪಣ್ಣ** ಅವರು ಮಾತನಾಡುತ್ತ : ಕಳೆದ ಸಾಲಿನಲ್ಲಿ ಮಾಡಿದ ಹೊಗೆಸೊಪ್ಪು ಬೆಳೆ ರಜೆ ಘೋಷಣೆ, ಆ ಬಗ್ಗೆ ಕೇಂದ್ರ ಸರ್ಕಾರದ ಬಳಿ ನಿಯೋಗವನ್ನು ಸದಸ್ಯರ ಸೂಚನೆಯಂತೆ, ಕಳುಹಿಸಿ 25 ಮಿಲಿಯನ್‌ಗೆ ಮಾಡಿಕೊಂಡು ಬಂದ ಒಪ್ಪಂದ, ರಾಜ್ಯದಲ್ಲಿನ ಕ್ರಾಪ್ ರೊಟೇಷನ್‌ನ (ರಾಗಿ ಹುರುಳಿ ಹೊಗೆಸೊಪ್ಪು) ವಿವರ ಹಾಗೂ ಬೆಳೆ ಪ್ರದೇಶ ವಿಸ್ತಾರ, ಆಂಧ್ರದ ಹೈಕೋರ್ಟ್ ಆದೇಶ ವಿರುದ್ಧ ಸುಪ್ರೀಂಕೋರ್ಟ್‌ನಲ್ಲಿ ಮೇಲ್ಮನವಿ ಸಲ್ಲಿಕೆ, ಇತ್ಯಾದಿ ಕುರಿತೆಲ್ಲ ಹೇಳಿದರು. ಮುಖ್ಯವಾಗಿ ಬ್ಯಾರೆನ್ ಇಲ್ಲದ, ಜಮಿನು ಇಲ್ಲದವರಿಗೆ ಲೈಸೆನ್ಸ್ ಕೊಟ್ಟಿರುವುದನ್ನು ಸರ್ಕಾರ ಕಳೆಯಬೇಕು. ಆಗ ಪ್ರಾಮಾಣಿಕವಾಗಿ ಹೊಗೆಸೊಪ್ಪು ಬೆಳೆಯುವ ರೈತರಿಗೆ ಅನುಕೂಲವಾಗುತ್ತದೆ ಎಂದರು.

**ಶ್ರೀ ಟಿ.ಬಿ.ಜಯಚಂದ್ರ** ಅವರು : ಆಂಧ್ರದ ರೈತರ ಒತ್ತಾಯದಿಂದ ತಂಬಾಕು ಮಂಡಳಿ ಕ್ರಾಪ್ ಹಾಲಿಡೆ ತಂದ ಹಾಗೆ, ನಮ್ಮಲ್ಲಿ ಅದನ್ನು ವಿಧಿಸಬೇಕೆಂಬ ಮಂಡಳಿಯ ತೀರ್ಮಾನವನ್ನು ನಾವು ಒಪ್ಪಲಿಲ್ಲ. ಬೋರ್ಡ್ ಮೇಲೆ ಕೇಂದ್ರ ಸರ್ಕಾರದ ಮೂಲಕ ಪ್ರಭಾವ ಬೀರಿ 42 ಸಾವಿರ ಮಿಲಿಯನ್ ಕೆ.ಜಿ. ಹೊಗೆಸೊಪ್ಪಿನ (ಆಥರೈಸಡ್) ವಿತರಣೆ ಆಗಿದೆ. ಕೆ.ಜಿಗೆ 56 ರೂ.ವರೆಗೆ ಬೆಲೆಯೂ ದಕ್ಕಿದೆ. ರೈತರ ಹಿತವನ್ನು ಗಮನದಲ್ಲಿಟ್ಟುಕೊಂಡು ಸರ್ಕಾರ ಕೆಲಸ ಮಾಡುತ್ತಿದೆ. ಮಾನ್ಯ ಸದಸ್ಯರಿಗೂ ತಿಳಿದಿರುವಂತೆ ತಂಬಾಕು ಬೆಳೆಯ ಮೇಲೆ ರಾಷ್ಟ್ರವ್ಯಾಪಿ ನಿಷೇಧ ಹಾಕಿದೆ. ಒಂದು ಪಕ್ಷ ನಿಗದಿತ ಕೋಟಾಗಿಂತ ತಂಬಾಕನ್ನು ಜಾಸ್ತಿ ಬೆಳೆದ ಸಂದರ್ಭದಲ್ಲಿ ಬೆಲೆ ಕುಸಿತವಾಗಿ ತೊಂದರೆಯಾಗುವ ಸಂಭವದ ಕಾರಣ ಅನ್-ಆಥರೈಸ್ಡ್ ಬೆಳೆಗಾರರನ್ನು ಬೆಳೆಯನ್ನು, ಹೆಚ್ಚು ಪ್ರಚೋದನೆ ಮಾಡುವುದು ಒಳ್ಳೆಯದಲ್ಲ. ಆ ಮೂಲಕ ತಂಬಾಕು ಮಂಡಲಿ ಜೊತೆ ಸಹಕರಿಸಬೇಕು ಎಂದರು. ಇದಕ್ಕೆ ದನಿಗೂಡಿಸಿದ ಶ್ರೀ ವಿ.ಪಾಪಣ್ಣಅವರು ಅನ್-ಆಥರೈಜ್ಡ್ ಆಗಿ ಬೆಳೆಯುವುದನ್ನು ಕಡಿಮೆ ಮಾಡದೆ ಹೋದರೆ ಪ್ರತಿವರ್ಷ ಅವರೇ ಆಳುವುದು ಖಂಡಿತ. ಈ ದಿಸೆಯಲ್ಲಿ ಸರ್ಕಾರ ಯೋಚಿಸಬೇಕೆಂದರು.

**ಶ್ರೀ ಕೆ. ಶ್ರೀನಿವಾಸಗೌಡರು** : ಮಧ್ಯ ಪ್ರದೇಶದಲ್ಲಿ ಗಾಂಜಾ ಬೆಳೆಯಲು ಲೈಸೆನ್ಸ್ ಕೊಟ್ಟಂತೆ ಕೇಂದ್ರ ಸರ್ಕಾರ ಹೊಗೆಸೊಪ್ಪು ಬೆಳೆಯುವೆಡೆಗಳಲ್ಲಿ ಲೈಸೆನ್ಸ್ ಕೊಡಲಿ. ಒಂದು ಎಕರೆಗೆ ಎರಡೂವರೆ ಲಕ್ಷ ರೂ. ಲಾಭ ಬರುತ್ತದೆ. ಈ ತರಹದ ಬೆಳೆಗಳಿಗೆ ಪ್ರೋತ್ಸಾಹ ನೀಡಿದರೆ ಸ್ವಲ್ಪ ದುಡ್ಡಾದರೂ ಸಿಗುತ್ತದೆ. ಎಂದು ನುಡಿದರು.

ಅರಕಲಗೂಡಿನ **ಶ್ರೀ ವಿ.ಮಂಜು** ಅವರು ಮಾತನಾಡಿ ಬೋರ್ಡ್ ನಮಗೆ ಫಿಕ್ಸ್ ಮಾಡಿದಂತೆ ಬೆಳೆದ ಅಧಿಕೃತ ಹಾಗು ಅನಧಿಕೃತ ಹೊಗೆಸೊಪ್ಪು ಬೆಳೆ ಎಲ್ಲಾ ವ್ಯಾಪಾರವಾಗಿರುವುದೇ, ನಮ್ಮ ಬೆಳೆಗಿರುವ ಬೇಡಿಕೆಯ ಗುರುತಾಗಿದೆ. ಈಗ ಅನಧಿಕೃತವಾಗಿ ಹೆಚ್ಚಿಗೆ ಬೆಳೆದಿರುವುದಕ್ಕೂ(19,450 ಬ್ಯಾರೆನ್) ಪರವಾನಗಿ ಕೊಡಿಸಬೇಕೆಂದು ಮನವಿ ಇಟ್ಟರು. ಇದಕ್ಕೆ 'ಸೇಲ್ಸ್-ಪರ್ಮಿಷನ್' ಎಂದು ಕೊಡಿಸದೆ ಎಲ್ಲರಿಗೂ ದೊರಕುವ ಸವಲತ್ತುಗಳು ನಮ್ಮ ಬೆಳೆಗಾರರಿಗೂ ಒದಗಲಿ. ಬೋರ್ಡಿನಲ್ಲಿ ಇರುವ ಹೆಚ್ಚಿನ ಸದಸ್ಯರು ಆಂಧ್ರದವರಾಗಿದ್ದು, ಪರವಾನಗಿ ಮೀರಿ, ಅಂದರೆ 100 ಮಿಲಿಯನ್ ಹೊಗೆಸೊಪ್ಪಿನಷ್ಟು ಬದಲು 150 ಮಿಲಿಯನ್ ಬೆಳೆದು ಅನುಕೂಲ ಮಾಡಿಕೊಳ್ಳುತ್ತಾರೆ. ಬೋರ್ಡ್‌ನ ಅಂಥ ಮಲತಾಯಿ ಧೋರಣೆಯಿಂದ ನಮ್ಮವರು ಸವಲತ್ತು ವಂಚಿತರಾಗುವುದು ಬೇಡ. ಪರವಾನಗಿ ನಮಗೂ ಒದಗುವಂತೆ ಸರ್ಕಾರ ಮಾಡಲಿ ಎಂಬ ಮನವಿ ಇಟ್ಟರು. **ಶ್ರೀ ವಿ.ಪಾಪಣ್ಣ** ಅವರು, ಸರ್ಕಾರವು (ಕೇಂದ್ರ ಮತ್ತು ರಾಜ್ಯ ಸರ್ಕಾರ) ಸ್ಪಂದಿಸಿರುವ ಬಗೆಗೆ ಅಭಿನಂದನೆ ಸಲ್ಲಿಸುತ್ತ, ಈ ಸಂಬಂಧ ನ್ಯಾಯಾಲಯದಲ್ಲಿ ಸರ್ಕಾರ ನ್ಯಾಯ ಪಡೆಯಬೇಕು ಎಂಬ ಅಭಿಪ್ರಾಯವಿಟ್ಟರು. ಶ್ರೀ ಟಿ.ಬಿ.ಜಯಚಂದ್ರ ಅವರು ಬೆಳೆಯನ್ನು ಕೊಂಡ ಬಗ್ಗೆ ವ್ಯವಸ್ಥೆಯನ್ನೆಲ್ಲ ವಿವರಿಸಿ, ಬೆಳೆಯನ್ನು ನಿಯಂತ್ರಿಸಿಕೊಳ್ಳುವ ಬಗ್ಗೆ ರೈತರಿಗೆ ಹೇಳಿರುವ ಹಿತವಾದ, ಕೋರ್ಟ್‌ನ ಸಂದರ್ಭವಾಗಿ ರೈತರ ಪರವಾಗಿ ರಕ್ಷಣೆ ಒದಗಿಸಲು ಸರ್ಕಾರ ಬದ್ಧ ಎಂದೂ ತಿಳಿಸಿದರು. ಶ್ರೀ ಹೆಚ್.ಸಿ.ಬಸವರಾಜು ಅವರು ಮಾತನಾಡುತ್ತ ಭಾರತ ಸರ್ಕಾರದ ಅಧೀನದಲ್ಲಿ ಬೋರ್ಡ್ ಇರುವುದರಿಂದ ಉಭಯ ರಾಜ್ಯಗಳನ್ನು ಸ್ಯಾಟಿಸ್‌ಫೈ ಮಾಡಬೇಕಾದ ಕಾರಣ ಅದು ಕೋರ್ಟ್‌ಗೆ ಹೋಗದು. ನಮ್ಮ ರೈತರು ಮಾರ್ಚಿ 1 ಆರಂಭವಾಗಿರಲು ನರ್ಸರಿ ಪ್ಲಾಂಟ್ ಹಾಕಲೇಬೇಕು; ಇದಕ್ಕೆ ನೋಂದಣಿ ಕೆಲಸ ಆಗಬೇಕು; ಅದಕ್ಕೆ ಸರ್ವೋಚ್ಚ ನ್ಯಾಯಾಲಯದ ಮಾರ್ಗಸೂಚಿ ಬರಲೇಬೇಕು. ಅಂತಾಗಿ ತಡಮಾಡದೆ ಸರ್ಕಾರ ಆ ನ್ಯಾಯಾಲಯಕ್ಕೆ ಹೋಗಬೇಕೆಂದು ಅರಿಕೆ ಇಟ್ಟರು. ಶ್ರೀ ಟಿ.ಬಿ.ಜಯಚಂದ್ರ ಅವರು ರಾಜ್ಯದ ನಿಲುವನ್ನು ವಿವರಿಸಿ ರೈತರ ಹಿತವನ್ನು ಕಾಪಾಡುವುದರಲ್ಲಿ ಎಲ್ಲಾ ಎಚ್ಚರಿಕೆಯನ್ನು ತೆಗೆದುಕೊಳ್ಳಲಾಗುವುದು, ಎಂದರು. ಈ ನಡುವೆ ಶ್ರೀ ಕೆ.ಶ್ರೀನಿವಾಸಗೌಡ ಅವರು ಮಧ್ಯ ಪ್ರದೇಶದಲ್ಲಿ ಗಾಂಜಾ ಬೆಳೆಯಿಂದ ಪಡೆಯುತ್ತಿರುವ ರಫ್ತು ಲಾಭದಂತೆ ನಮ್ಮ ರಾಜ್ಯದಲ್ಲೂ ಅನ್ವಯಿಸಿಕೊಳ್ಳುವ ಬಗ್ಗೆ ಕೇಳಿದರು.

**ಶ್ರೀ ಟಿ.ಬಿ.ಜಯಚಂದ್ರ ಅವರು** : ಮಧ್ಯ ಪ್ರದೇಶದಲ್ಲಿ ಪರವಾನಗಿಯನ್ನು ಗಾಂಜಾ ಬೆಳೆಗೆ ಕೊಟ್ಟಿರುವ ಬಗ್ಗೆ ಗಮನಿಸುವೆ. ಒಟ್ಟಿನಲ್ಲಿ ರೈತರಿಗೆ ಬೆಲೆಕುಸಿತದ ಸಂದರ್ಭದಲ್ಲಿ ಸಹಾಯವಾಗುವುದಾದರೆ ಹೊಗೆಸೊಪ್ಪು, ಗಾಂಜಾ ಏನೇ ಬೆಳೆಯಲಿ ಅಧಿಕೃತ ಪರವಾನಗಿ ಕೊಡುವಲ್ಲಿ ಸರ್ಕಾರ ಹಿಂದೆ ಬೀಳುವುದಿಲ್ಲ ಎಂದರು. ಶ್ರೀ ವಿ.ಮಂಜು ಅವರು, ರೈತರ ಹಿತ ಕಾಪಾಡಲು ಸುಪ್ರೀಂ ಕೋರ್ಟ್‌ಗೆ ಹೋಗಿ ಆಂಧ್ರದ ಸದಸ್ಯರ ಹೆಚ್ಚಳಬೇಕೆಂದು ಸರ್ಕಾರಕ್ಕೆ ಮನವಿ ಇಟ್ಟರು ಶ್ರೀ ಟಿ.ಬಿ.ಜಯಚಂದ್ರ ಅವರು, ಈ ದಿಸೆಯಲ್ಲಿ ಬೋರ್ಡಿನ ಅಧ್ಯಕ್ಷರು ಹಾಗು ಮಾನ್ಯ ಮುಖ್ಯಮಂತ್ರಿಗಳೊಡನೆ ಚರ್ಚೆಮಾಡಲಾಗಿದೆ. ಬೆಳೆಯನ್ನು ರಕ್ಷಿಸಲು ನಾವು ಕೋರ್ಟಿಗೆ ಹೋಗಲು ಸಿದ್ಧವಿದ್ದು, ಕಾನೂನು ಇಲಾಖೆಯ ಸಲಹೆ ಬಂದ ತಕ್ಷಣ ತೀರ್ಮಾನ ತೆಗೆದುಕೊಳ್ಳಲಾಗುವುದು, ಎಂದರು.

## ವಿಷಯ 11: ಕರ್ನಾಟಕದ ಹೊಗೆಸೊಪ್ಪು ಬೆಳೆಗಾರರ ಕುಂದುಕೊರತೆಗಳು

**ಶ್ರೀ ವಿ.ಪಾಪಣ್ಣ** ಅವರು 26.7.2002 ರ ವಿಧಾನ ಸಭಾಧಿವೇಶನದಲ್ಲಿ[20] ಮಾತನಾಡುತ್ತ : ಕರ್ನಾಟಕದ 35 ಸಾವಿರ ಹೊಗೆಸೊಪ್ಪು ಬೆಳೆಯುವ ಕುಟುಂಬಗಳ ದುಸ್ಥಿತಿ, ಆಂಧ್ರದ ಗುಂಟೂರಿನವರು 25 ಕೋಟಿ ರೂ.ಗಳನ್ನು ದಂಡವೆಂದು ಅವರಿಂದ ಮಾಡಿರುವ ವಸೂಲಿ, ಇದರಿಂದ ಕೇಂದ್ರ ಮತ್ತು ರಾಜ್ಯ ಸರ್ಕಾರಗಳಿಂದ ನಮ್ಮ ರೈತರಿಗಾಗಿರುವ ಅನ್ಯಾಯ, ಆಂಧ್ರದವರು ತಮ್ಮ ರೈತರಿಂದ ಪಡೆದ ದಂಡ ವಸೂಲಿ ಹಣವನ್ನು ವಾಪಸ್ಸು ಕೊಡಲು ಕೇಂದ್ರದ ಮೇಲೆ ಹಾಕಿರುವ ಒತ್ತಡದಂತೆ, ನಮ್ಮ ಸಂಸದರು, ಶಾಸಕರ ರಾಜ್ಯ ಸರ್ಕಾರ ಹಾಕಬೇಕಾದ ಒತ್ತಡ ಕುರಿತು ಹೇಳಿದರು.

**ಶ್ರೀ ಹೆಚ್.ಸಿ.ಬಸವರಾಜು** ಅವರ ಮಾತಿನಲ್ಲಿ : ಬರಗಾಲದ ಜನರ ಬವಣೆ, ಹೊಗೆಸೊಪ್ಪು ಮಂಡಳಿಯ ತಾತ್ಸಾರ ಮನೋಭಾವ, ಕೇಂದ್ರದ ಮಲತಾಯಿ ಧೋರಣೆಯ ಕಾರಣ 40 ಸಾವಿರ ಹೊಗೆಸೊಪ್ಪು ಬೆಳೆಗಾರರು ತತ್ತರಿಸುತ್ತಿರುವುದು, 2001ರಲ್ಲಿ 47 ಸಾವಿರ ಹೆಕ್ಟೇರಿನಲ್ಲಿ ನಮ್ಮ ರೈತ 58 ಮಿಲಿಯನ್ ಕೆ.ಜಿ. ಹೊಗೆಸೊಪ್ಪು ಬೆಳೆದದ್ದು ಪೂರ್ಣ ಮಾರಾಟವಾಗಿರುವಲ್ಲಿ, ಹೊಗೆಸೊಪ್ಪು ಮಂಡಳಿ 48 ಮಿಲಿಯನ್ ಕೆ.ಜಿ.ಮಾತ್ರ ಈ ವರ್ಷ ಬೆಳೆಯಬೇಕೆಂದು ಕೊಟ್ಟಿರುವ ಆದೇಶ, 60 ಸಾವಿರ

---

20. ವಿಧಾನ ಸಭೆಯ ನಡವಳಿಕೆಗಳು; ಸಂಪುಟ 6(1–2) ಭಾಗ I (26.7.2002) ಪು. 1447–1453

ಮಿಲಿಯನ್ ಕೆ.ಜಿ.ಹೊಗೆಸೊಪ್ಪು ಬೆಳೆಯುವ ಅವಕಾಶ ನಮಗಿರುವಲ್ಲಿ ಅಷ್ಟೂ ಬೆಳೆ ಬೆಳೆಯಲು ನಮ್ಮ ಸರ್ಕಾರ ಕೇಂದ್ರದ ಮೇಲೆ ಒತ್ತಡ ಹಾಕಿ ಹೊಗೆಸೊಪ್ಪು ಮಂಡಳಿ ಮಾಡುವ ಅನ್ಯಾಯವನ್ನು ತೋರಿಸವುದು, ರಾಜ್ಯದಲ್ಲಿ 1984 ರಲ್ಲಿ 8 ಪ್ಲಾಟ್‌ಫಾರಂನಲ್ಲಿ ಸುಮಾರು 32 ಮಿಲಿಯನ್ ಕೆ.ಜಿ. ಮಾರಾಟವಾಗುತ್ತಿದ್ದದು, 16 ಮಿಲಿಯನ್ ಕೆ.ಜಿ.ಗೆ 8 ಫ್ಲಾಟ್‌ಫಾರಂ ಕೂಡ ಇದ್ದದ್ದು, ಈಗ ಬೆಳೆದ 58 ಮಿಲಿಯನ್ ಕೆ.ಜಿ.ಗೂ 8ಫ್ಲಾಟ್ ಫಾರಂನಲ್ಲಿಯೆ ಮಾರಾಟವಾಗುತ್ತಿದ್ದು ರೈತರ ಸ್ಥಿತಿ ಚಿಂತಾಜನಕವಾಗಿರುವುದು, ಶ್ರೀ ಪಾಪಣ್ಣ ಅವರ ಪ್ರಶ್ನೆಗೆ 12,730 ಅನಧಿಕೃತ ಬೆಳೆಗಾರರಿದ್ದಾರೆ ಎಂದ ಸರ್ಕಾರ ಲೋಕಸಭೆಯ ನಿಯೋಗ ಬಂದಾಗ 23 ಸಾವಿರ ಎಂದು ಹೇಳಿ, ಅದನ್ನು ರೆಕ್ಟಿಫೈ ಮಾಡಿ, ರೆಗ್ಯುಲರೈಸ್ ಮಾಡಿಕೊಡಲು ಮನವಿ ಸಲ್ಲಿಸಿದ್ದು; ಈ ಬಗ್ಗೆ ಸರಿಯಾದ ಮಾಹಿತಿ ಪಡೆದು ಸರ್ಕಾರ ಕಾಳಜಿ ವಹಿಸಬೇಕಿರುವುದು; ಸುಲಿಗೆಗೋಸ್ಕರ, ಅಧಿಕೃತ, ಅನಧಿಕೃತ ಎಂದು ಮಾಡಿರುವುದು; ಕೇಂದ್ರವು ರೈತನಿಗೆ ಕೆ.ಜಿ.ಗೆ 2ರೂ. ನಂತೆ ಪೆನಾಲ್ಟಿ ಹಾಕಿ, 15% ಸರ್ವೀಸ್ ಛಾರ್ಜ್ ಹಾಕಿರುವಲ್ಲಿ ಒಟ್ಟು 8ರೂ ದಂಡವಾಗಿ ಅನಧಿಕೃತ ರೈತ ಕೊಡುತ್ತಿರುವಲ್ಲಿ ಹೊಗೆಸೊಪ್ಪು ಮಂಡಳಿಗೆ 10 ಕೋಟಿ ರೂ. ಹೋಗಿ ಅದು ಹಗಲು ದರೋಡೆಯೆ ಆಗಿರುವುದು; ಕೆ.ಜಿ.ಹೊಗೆಸೊಪ್ಪು ಬೆಳೆಯಲು 45ರೂ. ಬೇಕಿರುವಲ್ಲಿ, ಸರಾಸರಿ 38ರೂ. ಸಿಕ್ಕಿ ಅದರಲ್ಲಿ 8ರೂ ಸಾಲ ಉಳಿದು ರೈತರು ಆತ್ಮಹತ್ಯೆ ಮಾಡಿಕೊಳ್ಳುವ ಸ್ಥಿತಿ ಬಂದಿರುವುದು; ಹೊಗೆಸೊಪ್ಪು ಮಂಡಳಿಯಲ್ಲಿ ಕರ್ನಾಟಕದವರು ನೂರಕ್ಕೆ ನೂರರಷ್ಟು ಹೊಗೆಸೊಪ್ಪು ಬೆಳೆಯುವವರಿದ್ದರೂ ಆಂಧ್ರದವರೇ ಹೆಚ್ಚಾಗಿದ್ದು ಕರ್ನಾಟಕಕ್ಕೆ ಅನ್ಯಾಯವಾಗಿರುವುದು; ಆಂಧ್ರದ ಹೊಗೆಸೊಪ್ಪು ಮಾರಾಟವಾಗದೆ ಕ್ರಾಪ್ ರಜಾ ಕೊಟ್ಟಿರುವುದು, ನಮ್ಮ ರೈತರ ಮೇಲೆ ಅವರು ಅಷ್ಟು ಬೆಳೆಯಬಾರದಾಗಿತ್ತು ಎಂದು ಹೊಗೆಸೊಪ್ಪು ಮಂಡಳಿಯವರು, ಕೇಸ್ ದಾಖಲಿಸಿರುವುದು; ಹಿಂದೆ 2000–01 ರಲ್ಲಿ ಕ್ರಾಪ್ ಹಾಲಿಡೆಯನ್ನು ಕರ್ನಾಟಕದ ಮೇಲೆ ಹೇರಬೇಕೆಂದಿದ್ದಾಗ ನಿಯೋಗವೊಂದು ಮುಖ್ಯಮಂತ್ರಿಯವರೊಡನೆ (ಸರ್ವಶ್ರೀ ಶಿವಣ್ಣ, ವಿಶ್ವನಾಥ್, ಜಯಚಂದ್ರ, ಮಹದೇವ್) ಹೋಗಿ ಕೇಂದ್ರದ ಮನವೊಲಿಸಿ ಕ್ರಾಪ್ ಹಾಲಿಡೆಯನ್ನು ನಿಷೇಧಿಸಿ, ಬೆಳೆ ಬೆಳೆಯಲು ಅನುಕೂಲಿಸಿದುದು, ಹೀಗೆಯೇ ಇಂದೂ ನಿಯೋಗ ಹೋಗಿ ಅನ್ಯಾಯ ಸರಿ ಪಡಿಸಲು ಸರ್ಕಾರ ಮುಂದೆ ಬರಬೇಕಿರುವುದು, ಈ ಕುರಿತೆಲ್ಲ ಹೇಳಿದರು.

ಶ್ರೀ ಎ.ಮಂಜು ಅವರು : ನಮ್ಮ ಹೊಗೆ ಸೊಪ್ಪಿಗೆ ವಿದೇಶದಲ್ಲಿಯೂ ಇರುವ ಬೇಡಿಕೆ; ಆಂಧ್ರದವರ 1998ರಲ್ಲಿ 149 ಮಿಲಿಯನ್ ಕೆ.ಜಿ. ಹೊಗೆಸೊಪ್ಪು ಬೆಳೆದರೂ ಕ್ರಾಪ್‌ಸೈಜ್- ಫಿಕ್ಸ್ ಮಾಡಿದರೂ ಮಾರಾಟವಾಗದೆ ಟ್ರೇಡರ್ಸ್ ಬಿಟ್ಟು ಹೋದುದು, ಕ್ರಾಪ್‌ಸೈಜ್ ಫಿಕ್ಸ್ ಮಾಡುವಾಗ ನಮ್ಮ ರಾಜ್ಯದ ಕೃಷಿ ಇಲಾಖೆಯ ಕಾರ್ಯದರ್ಶಿಯನ್ನು ಬಿಟ್ಟು ಬೋರ್ಡಿನವರು ಫಿಕ್ಸ್ ಮಾಡುವುದನ್ನು ತಪ್ಪಿಸಿ ನಮ್ಮ ಒಬ್ಬ ಪ್ರತಿನಿಧಿ ಆ ಸಂದರ್ಭದಲ್ಲಿ ಇರಲೇಬೇಕಾದುದು, ಆಂಧ್ರದಲ್ಲಿ 21 ಪ್ಲಾಟ್‌ಫಾರಂಗಳಿದ್ದು 10–12 ಪ್ಲಾಟ್ ಫಾರಂಗಳು ಕೆಲಸವಿಲ್ಲದೆ ನಿಂತಿರುವಲ್ಲಿ ಅವುಗಳ ಪೈಕಿ 8ಪ್ಲಾಟ್‌ಫಾರಂ ಅನ್ನು ಅವಶ್ಯಕವಿರುವ ನಮಗೆ ವರ್ಗಾಯಿಸುವಂತೆ ಕೇಂದ್ರದ ಮೇಲೆ ಒತ್ತಡ ತರುವುದು, ಇವೊತ್ತು ಹೊಗೆಸೊಪ್ಪು ಬೋರ್ಡ್ ನಡೆಯುತ್ತಿರುವುದಕ್ಕೆ ಕರ್ನಾಟಕದ ಎಕ್ಸೆಸ್ ಕ್ರಾಪಿನಿಂದ ತೆಗೆದುಕೊಂಡಿರುವ ಹಣದಿಂದ ಮಾತ್ರ ಆಗಿರುವುದು, ಆಂಧ್ರದ ಹೊಗೆಸೊಪ್ಪು ರೈತರೊಬ್ಬರ ಮೇಲೂ ಕೇಸು ಹಾಕದೆ ಕರ್ನಾಟಕದ 320 ಹೊಗೆಸೊಪ್ಪು ರೈತರ ಮೇಲೆ ಮಂಡಳಿಯ ಕೇಂದ್ರದ ಅನುಮತಿಯನ್ನು ಪಡೆಯದೆ ಕೇಸ್ ಹಾಕಿರುವುದು ಈ ಬಗ್ಗೆ ಸರ್ಕಾರ ಗಮನಿಸಿ ಕೇಸ್ ವಿಥ್‌ಡ್ರಾ ಮಾಡಿಸಬೇಕಾದುದು; ಹೊರಗಡೆ ಕೆ.ಜಿ.ಗೆ 40ರೂ.ನಂತೆ ಕೊಳ್ಳುತ್ತಿರುವಲ್ಲಿ ಅದನ್ನು 29ರೂಗಳಿಗೆ ಕೊಡಿ ಎಂದರೆ ಹೇಗೆ? ಕರ್ನಾಟಕದಲ್ಲಿ ಬೆಳೆದ ಹೊಗೆಸೊಪ್ಪನ್ನು ಸರ್ಕಾರ ನೇರವಾಗಿ ಎಕ್ಸ್‌ಪೋರ್ಟ್‌ಮಾಡಲು ಕೇಂದ್ರ ಸಚಿವರಲ್ಲಿಗೆ ನಿಯೋಗವು ಹೋಗಿ ಮನನ ಮಾಡಿಸಿ ರೈತರಿಗೆ ಸಂಕಷ್ಟ ಕಳೆದು ಅನುಕೂಲಮಾಡುವುದು ಸರ್ಕಾರದ ಹೊಣೆ ಎಂದೆಲ್ಲ ಹೇಳಿದರು.

ಸಚಿವ ಶ್ರೀ ಎಂ.ಶಿವಣ್ಣ ಅವರು, ನಮ್ಮ ರೈತರು ಬೆಳೆಯುವ ವರ್ಜೀನಿಯ ಹೊಗೆಸೊಪ್ಪು 18594 ಅಧಿಕೃತ ಪರವಾನಗಿದಾರರು, 12730 ಅನಧಿಕೃತ ಬೆಳೆಗಾರರು ಬೆಳೆದದ್ದು; ಅಂತರರಾಷ್ಟ್ರೀಯ ಮಟ್ಟದಲ್ಲಿ ಒಳ್ಳೆ ಬೇಡಿಕೆ ಹೊಂದಿ ಆ ಮಾರುಕಟ್ಟೆಯಲ್ಲಿ ನಾವು ಎಷ್ಟು ಬೆಳೆದರೂ ಅದೆಲ್ಲ ಮಾರಾಟವಾಗುತ್ತಿರುವುದು; ಆ ಬೆಳೆಯನ್ನು 60 ಮಿಲಿಯನ್ ಕೆಜಿಗೆ ಹೆಚ್ಚಿಸಬೇಕೆಂದು ಕೇಂದ್ರದ ಮೇಲೆ ಒತ್ತಯ ಹಾಕಿರುವುದು, ಈ ಬಗೆಗೆಲ್ಲ ಪ್ರಧಾನಮಂತ್ರಿಯವರನ್ನು ಭೇಟಿ ಮಾಡಿ ಬೆಳೆಗಾರರ ಸಮಸ್ಯೆ ಬಗೆಹರಿಸುವುದು ಕುರಿತೆಲ್ಲ ನುಡಿದರು. ಈ ದಿನದ ಚರ್ಚೆಯಲ್ಲಿ ಶ್ರೀ ಕೆ.ಶ್ರೀನಿವಾಸಗೌಡ ಅವರೂ ಪಾಲ್ಗೊಂಡಿದ್ದರು.

## ವಿಷಯ 12: ತಂಬಾಕು ಬೆಳೆಗಾರರ ಸಮಸ್ಯೆ

ರಾಜ್ಯದ ತಂಬಾಕು ಬೆಳೆಗಾರರ ಸಮಸ್ಯೆಕುರಿತು 26.3.2003ರ ವಿಧಾನ ಸಭಾಧಿವೇಶನದಲ್ಲಿ[21] ನಡೆದ ಚರ್ಚೆಯಲ್ಲಿ **ಶ್ರೀ ಹೆಚ್. ಸಿ. ಬಸವರಾಜು** ಅವರು ತಂಬಾಕು ಬೆಳೆಗಾರರು ಸಂಕಷ್ಟದಲ್ಲಿರುವ ಕಾರಣ ಆವರತ್ತ ಗಮನ ಹರಿಸಬೇಕಿದೆ ಎಂದರು. **ಶ್ರೀ ಎ. ಮಂಜು** ಅವರು ಮಾತನಾಡಿ ರಾಜ್ಯದಲ್ಲಿ 49ಸಾವಿರ ಜನ ಹೊಗೆಸೊಪ್ಪು ಬೆಳೆಯುವ ರೈತರು ಇದ್ದರೂ ಟೊಬ್ಯಾಕೋ ಬೋರ್ಡಿನವರು 19ಸಾವಿರ ರೈತರಿಗೆ ಮಾತ್ರ ರಿಜಿಸ್ಟರ್ಡ್ ಗ್ರೋಯರ್ಸ್ ಎಂದಿರುವುದು, 20 ಸಾವಿರ ಜನ ರೈತರನ್ನು ಅನ್‌ರಿಜಿಸ್ಟರ್ಡ್ ಗ್ರೋಯರ್ಸ್ ಎಂದು 15 ಪರ್ಸೆಂಟ್ ಹಣವನ್ನು ಟ್ಯೊಬಾಕೋ ಬೋರ್ಡಿನವರು ವಸೂಲು ಮಾಡುತ್ತಿರುವುದರಲ್ಲಿ ನಮ್ಮ ರೈತರಿಗೆ ಸುಮಾರು 11 ಕೋಟಿ ರೂ ಗಳು ನಷ್ಟವಾಗಿರುವುದು, ರಾಜ್ಯಸರ್ಕಾರ ಟ್ಯೊಬಾಕೋ ಬೋರ್ಡಿನವರೊಡನೆ ಸಂಪರ್ಕಿಸಿ ಸೂಕ್ತ ಸಲಹೆ ನೀಡುವುದು ಕುರಿತೆಲ್ಲ ಹೇಳಿ ರೈತರು ರಿಜಿಸ್ಟರ್ಡ್ ಗ್ರೋಯರ್ಸ್ ಎಂದು ಮಾಡಿ ರೈತರ ಸಮಸ್ಯೆಯನ್ನು ಬಗೆಹರಿಸಲು ಕೇಳಿಕೊಂಡರು.

29.3.2003 ರ ವಿಧಾನಸಭಾಧಿವೇಶನದಲ್ಲಿ[22] ಈ ತಂಬಾಕು ಮಂಡಳಿಯ ಬೆಳೆ ಬೆಲೆ ನಿಗದಿಯ ಹೊಣೆ, ಆ ಮಂಡಳಿಯ 8 ಜನ ಸದಸ್ಯರಲ್ಲಿ ಕರ್ನಾಟಕದಿಂದ ಒಬ್ಬರು ಮಾತ್ರವಿರುವುದು, ನಮ್ಮಲ್ಲಿ 68 ಮಿಲಿಯನ್ ಕೆ.ಜಿ ಹೊಗೆಸೊಪ್ಪು ಬೆಳೆಯಲು ಅವಕಾಶವಿದ್ದು, ಬರಗಾಲದಲ್ಲಿಯೇ 70 ಮಿಲಿಯನ್‌ನಷ್ಟು ಬೆಳೆದಿರುವಲ್ಲಿ, ಮುಂದಿನ ವರ್ಷ ಮಳೆ ಚೆನ್ನಾಗಿ ಆದರೆ 100 ಮಿಲಿಯನ್ ಬೆಳೆಯುವ ಶಕ್ತಿ ಇರುವಲ್ಲಿ. ನಮ್ಮ ರೈತರ ಬೆನ್ನು ತಟ್ಟಿ ಆರ್ಥಿಕ ಸ್ಥಿತಿ ಅನುಕೂಲವಾಗಲಿ ಎಂದು ಮಾಡುವುದು ಬಿಟ್ಟು 40 ಮಿಲಿಯನ್ ಕೆ.ಜಿ ಮಾತ್ರ ಬೆಳೆಯಿರಿ ಎಂದು ಹೇಳಲು ಆ ಮಂಡಳಿಗೆ ಅಧಿಕಾರವಿಲ್ಲ; ನಮ್ಮಲ್ಲಿ ಬೆಳೆದಂಥ ಎಲ್ಲಾ ಹೊಗೆಸೊಪ್ಪು ಫಾರಿನ್‌ಗೆ ಎಕ್ಸ್‌ಪೋರ್ಟ್ ಆಗಿರುವಲ್ಲಿ ಮಂಡಳಿಯವರ ಮಾತಿನ ಔಚಿತ್ಯವೇನು? ಈ ಬೆಳೆ ಸಮಿತಿ ಸಭೆಯು ಕರ್ನಾಟಕದಲ್ಲಿ ಆಗದಿದ್ದರೆ ಸಚಿವರಾದ ಶ್ರೀಜಯಚಂದ್ರ ಅವರು ಭಾಗವಹಿಸುವುದಿಲ್ಲ ಎಂದಾಗ ಮುಂದೂಡಿದರು. 2000 ನೇ ಇಸವಿಯಲ್ಲಿ ಬೆಳೆಗೆ ರಜೆ ಕೊಡಬೇಕೆಂದು ಸಮಿತಿಯಲ್ಲಿ ಪ್ರಸ್ತಾಪ ಮಾಡಿದಾಗ ನಮ್ಮ ಸರ್ಕಾರ ದೆಹಲಿಗೆ ನಮ್ಮ ಜೊತೆ ಬಂದು **ಬೆಳೆರಜೆ** ಇದ್ದುದನ್ನು ರದ್ದು ಪಡಿಸಲಾಯಿತು ಬೆಳೆ ಬೆಳೆಯಲು ನಿಗದಿ

---

21. ವಿಧಾನ ಸಭೆಯ ನಡವಳಿಕೆಗಳು; ಸಂಪುಟ 4 (1–3) ಭಾಗ I, 26.3.2003 ಪು.590

22 ವಿಧಾನ ಸಭೆಯ ನಡವಳಿಕೆಗಳು, ಸಂಪುಟ 4, ಭಾಗ II29.3.2003 ಪು. 1550–53

ಮಾಡುವ ಆ ಸಮಿತಿಯ ಅವಧಿ ಮುಗಿದಿದೆ. ಆದರೂ ಮುಂದಿನ ತಿಂಗಳು 5ರಂದು ಚನ್ನೈನಲ್ಲಿ ಸಭೆ ಏರ್ಪಡಿಸಿದೆ. ಅದರಲ್ಲಿ ಸರ್ಕಾರ ಭಾಗವಹಿಸದೆ ರೈತರ ಹಿತವನ್ನು ಈವರೆಗೆ ಕಾಯ್ದಂತೆ ಕಾಯಬೇಕು. ರೈತರು ಗುರುತರ ಸಮಸ್ಯೆ ಎದುರಿಸುತ್ತಿರುವ ಕಾರಣ ರಿಜಿಸ್ಟರ್ಡ್ ಮತ್ತು ಅನ್‌ರಿಜಿಸ್ಟರ್ಡ್ ಬಗೆಯನ್ನು ವಜಾ ಮಾಡಲು ಕ್ರಮ ತೆಗೆದುಕೊಳ್ಳಬೇಕು ಎಂದರು.

ಕೃಷಿ ಸಚಿವ ಶ್ರೀ **ವಿ.ಎಸ್. ಕೌಜಲಗಿ** ಅವರು ಕಳೆದ ಸಲದ ಸಭೆಯಲ್ಲಿ ಮಂಡಳಿಯವರು ಮನವೊಲಿಸಿ ನಮ್ಮ ರೈತರ ಉತ್ತಮವಾದ ವರ್ಜೀನಿಯ ತಂಬಾಕು ರಫ್ತು ಮಾಡುವ ಶಕ್ತಿ ಇದ್ದಕಾರಣ 43 ಮಿಲಿಯನ್ ಕೆ.ಜಿ ಬದಲು 67 ಮಿಲಿಯನ್ ಕೆ.ಜಿ ತಂಬಾಕನ್ನು ಕಳುಹಿಸಿಕೊಟ್ಟೆವು. ತಂಬಾಕು ಮಂಡಳಿಯ ಆಂಧ್ರ ಪ್ರದೇಶದವರ ಕಪಿಮುಷ್ಟಿಯಲ್ಲಿದ್ದು ಕರ್ನಾಟಕದಿಂದ ಇಷ್ಟೊಂದು ತಂಬಾಕು ಹೋದರೆ ತಮ್ಮದು ಮಾರಾಟ ಕಡಿಮೆ ಆಗುತ್ತದೆ ಎಂದು ಹಿಡಿತ ಸಾಧಿಸುವ ಪ್ರಯತ್ನ ಅವರದು. ಅದಕ್ಕಾಗಿ ಸಭೆಯನ್ನು ಗುಂಟೂರಿನಲ್ಲಿ, ನಂತರ ಚೆನ್ನೈನಲ್ಲಿಟ್ಟರು. ಅದನ್ನು ನಾವು ಸರ್ವಥಾ ಒಪ್ಪುವುದಿಲ್ಲ. ಈ ದಿಸೆಯಲ್ಲಿ ಕೇಂದ್ರಕ್ಕೆ ಮನವಿ ಸಲ್ಲಿಸಿದೆ. ನಮ್ಮ ರೈತರ ಬೆಳೆಗೆ ಯೋಗ್ಯ ಬೆಲೆಸಿಗಬೇಕು. ರಿಜಿಸ್ಟರ್ಡ್ ಅನ್ ರಿಜಿಸ್ಟರ್ಡ್ ಭೇದಭಾವ ಇರದೆ ಎಲ್ಲರಿಗೂ ಸಮಾನ ಬೆಲೆ ಸಿಗಬೇಕೆಂದು ನಮ್ಮ ಹೆಚ್ಚಿನ ಹೋರಾಟವಿದ್ದು, ಕೇಂದ್ರಕ್ಕೆ ಈ ಬಗ್ಗೆ ಒಂದು ಡೆಲಿಗೇಷನ್ ಹೋಗಿ ಮನವೊಲಿಸುವ, ಸುಪ್ರೀಂಕೋರ್ಟಿಗೂ ಹೋಗುವ ವಿಷಯವನ್ನು ಪರಿಶೀಲನೆ ಮಾಡುತ್ತೇವೆ, ಎಂದೆಲ್ಲ ಹೇಳಿದರು.

## ವಿಷಯ 13: ಆಲೂರು ತಾಲ್ಲೂಕಿನಲ್ಲಿ ಆನೆ ಹಾವಳಿ; ಬೆಳೆಹಾನಿ

ಇದೇ ವಿಧಾನಸಭಾಧಿವೇಶನದಲ್ಲಿ ಶ್ರೀ **ಬಿ.ಬಿ. ಶಿವಪ್ಪನವರು** ಆಲೂರು ತಾಲ್ಲೂಕಿನ ಆನೆ ಹಾವಳಿಯ ಬಗ್ಗೆ ಸರ್ಕಾರದ ಗಮನ ಸೆಳೆದರು. ಸಚಿವ ಶ್ರೀ **ಡಿ.ಬಿ.ಚಂದ್ರೇಗೌಡರು** ಈ ಬಗ್ಗೆ ಪ್ರತಿಕ್ರಿಯಿಸಿ, ಕೊಡಗು ಅರಣ್ಯ ವಿಭಾಗದ ಶನಿವಾರ ಸಂತೆವಲಯ ವ್ಯಾಪ್ತಿಯ ಅರಣ್ಯ ಪ್ರದೇಶಗಳಿಂದ ಆನೆಗಳು ಹೇಮಾವತಿ ಹಿನ್ನೀರಿನ ಜಾಗವನ್ನು ದಾಟಿ ಬರುತ್ತವೆ. ಇಲ್ಲಿ ದೊಡ್ಡ ಬೆಟ್ಟ ಅರಣ್ಯ ಪ್ರದೇಶ 336.47 ಹೆಕ್ಟೇರು ಇದ್ದು ಸುತ್ತ ಖಾಸಗಿ ಹಿಡುವಳಿ ಪ್ರದೇಶಗಳಿವೆ. 1998–99 ನೇ ಸಾಲಿನಲ್ಲಿ ಕಾಡಾನೆಗಳು. ಖಾಸಗೀ ಜಮೀನುಗಳನ್ನು ಪ್ರವೇಶಿಸದಂತೆ 2.5ಕಿಮೀ ದೂರದಷ್ಟು

ಸೌರ ವಿದ್ಯುತ್‌ಗೆ ತಂತಿ ಬೇಲಿಯನ್ನು ಇಲಾಖಾವತಿಯಿಂದ ನಿರ್ಮಿಸಿದೆ. 2002–03 ನೇ ಸಾಲಿನ ಅತಿ ಕಡಿಮೆ ಮಳೆ, ಬರಗಾಲದ ಛಾಯೆಯ ಕಾರಣ ಕಾಡಾನೆಗಳು ದೊಡ್ಡಬೆಟ್ಟ ಅರಣ್ಯ ಪ್ರದೇಶಕ್ಕ ವಲಸೆ ಬಂದು ಕಾಫಿ ತೋಟ ಹಾಗು ಇತರೆ ತೋಟಗಳಿಗೆ ಆಹಾರ, ನೀರು ಹುಡುಕಿಕೊಂಡು ಹೋಗಿ ಹಾನಿ ಮಾಡಿವೆ. ಅವುಗಳಿಂದ ಆದ ಬೆಳೆ ನಷ್ಟಕ್ಕೆ ಹಾಸನ ಅರಣ್ಯ ವಿಭಾಗದಿಂದ 2.85 ಲಕ್ಷ ರೂ. ಗಳವರೆಗೆ ಪರಿಹಾರನ್ನು ರೈತರಿಗೆ ಪಾವತಿಸಲಾಗಿದೆ. ಈ ಕಾಡಾನೆಗಳನ್ನು ಅರಣ್ಯಕ್ಕೆ ಹಿಮ್ಮೆಟ್ಟಿಸಲು ಕಾವಲುಗಾರರ ಮೂಲಕ ಪಟಾಕಿ ಸಿಡಿಮದ್ದು ಬಳಸಿ ಕ್ರಮ ಜರುಗಿಸಿದೆ. ಹೇಮಾವತಿ ಜಲಾಶಯದ ಹಿನ್ನೀರಿನ ಬಳಿಯ ದೇವಲಾಪುರದ ರೈತ ಸಣ್ಣ ಮೂಗಣ್ಣ ಅವರು ಜಮೀನು ಕೆಲಸದಲ್ಲಿ ತೊಡಗಿದ್ದಾಗ ಆನೆ ಕಂಡು ಹೆದರಿ ಓಡತೊಡಗಿದಾಗ ಅದು ಅವರನ್ನು ತುಳಿದು ಸಾಯಿಸಿದೆ. ಅವನ ಕುಟುಂಬದವರಿಗೆ ಇಲಾಖೆಯ ಅಧಿಕಾರಿಗಳು ಸಾಂತ್ವನ ಹೇಳಿ ಅಂತ್ಯಕ್ರಿಯೆಗೆ ನೆರವು ಕ್ರಮ ಕೈಗೊಂಡಿದೆ ಹೆಂಡತಿಗೆ; 4 ಲಕ್ಷ ರೂ ಪರಿಹಾರ ನೀಡಲು ಕ್ರಮ ಕೈಗೊಂಡಿದೆ. ಸದರಿ ಆನೆಗಳ ಗುಂಪನ್ನು ದೂರದ ಅರಣ್ಯ ಪ್ರದೇಶಕ್ಕೆ ಸ್ಥಳಾಂತರಿಸುವ ಪ್ರಯತ್ನ ಮಾಡಲಾಗುವುದು. ಎಂದರು

ಶ್ರೀ ಬಿ.ಬಿ. ಶಿವಪ್ಪನವರು, ಬೆಳೆ ನಾಶದ ಬಗ್ಗೆ ದರ ಫಿಕ್ಸ್ ಮಾಡುವಲ್ಲಿ, ನಾಶದ ಪ್ರಮಾಣ ಮತ್ತು ಫಿಕ್ಸ್ ಮಾಡುವ ದರಕ್ಕೆ ಸಂಬಂಧವೇ ಇರುವುದಿಲ್ಲ. ಬೆಳೆ ನಾಶದ ಅಂದಾಜುವಿನಲ್ಲಿ ಕೊನೆಯ ಪಕ್ಷ ಅರ್ಧ ಮುಕ್ಕಾಲು ಭಾಗ ರೈತರಿಗೆ ದುಡ್ಡು ಸಿಗಬೇಕು. ಪುನ: ರೈತರು ಆ ಜಾಗದಲ್ಲಿ ಬೆಳೆ ಬೆಳೆಯುವಂತಾಗಬೇಕು. ಬೆಳೆನಾಶಕ್ಕೆ ನಿಗದಿಗೊಳಿಸಿರುವ ಮೊತ್ತವನ್ನು ಸ್ವಲ್ಪ ಹೆಚ್ಚು ಮಾಡಬೇಕು ಎಂದೆಲ್ಲ ಹೇಳಿದಾಗ ಸಚಿವರು ಸಲಹೆಯನ್ನು ಪರಿಶೀಲಿಸಲಾಗುವುದೆಂದರು.

## ವಿಷಯ 14: ತಂಬಾಕು ಬೆಳೆಗಾರರಿಗೆ ಮಾರುಕಟ್ಟೆಯ ಕೊರತೆ

27.3.2004 ವಿಧಾನಸಭಾಧಿವೇಶನದಲ್ಲಿ[23] ಶ್ರೀ ಎ.ಟಿ.ರಾಮಸ್ವಾಮಿ ಅವರು, ವರ್ಜೀನಿಯ ತಂಬಾಕಿಗಿರುವ ಉತ್ತಮ ಬೇಡಿಕೆ, ಅಧಿಕೃತ ಹಾಗು ಅನಧಿಕೃತ ತಂಬಾಕು ಬೆಳೆಗಾರರೆಂದು ಅನವಶ್ಯಕ ವಿಂಗಡನೆಯ ಕಿರುಕುಳ, ತಂಬಾಕು ಹರಾಜು ಮಾರುಕಟ್ಟೆಯಲ್ಲಿ ಸ್ಥಳಾವಕಾಶದ ಕೊರತೆ ಮತ್ತು ಮಾರುಕಟ್ಟೆ ವಿಳಂಬದಿಂದ ರೈತರಿಗೆ ತೊಂದರೆ ಕುರಿತಂತೆ ಸಚಿವರ ಗಮನ ಹರಿಯಬೇಕೆಂದರು.

---

23 ವಿಧಾನಸಭಾ ನಡವಳಿಕೆಗಳು., ಸಂಪುಟ 7 (1ರಿಂದ2), ಭಾಗ.1, (27.3.2004) ಪು.690–701

ಉಪಮುಖ್ಯಮಂತ್ರಿ **ಶ್ರೀ ಸಿದ್ದರಾಮಯ್ಯ** ಅವರು ಉತ್ತರಿಸುತ್ತ, ರಾಜ್ಯದಲ್ಲಿ ಉತ್ಪಾದನೆ ಆಗುವ ಶೇ.80 ಭಾಗದಷ್ಟು ರಫ್ತಾಗುವ ಉತ್ತಮ ಗುಣಮಟ್ಟದ ವರ್ಜಿನಿಯಾ ತಂಬಾಕು ಉತ್ತಮ ವಿದೇಶ ವಿನಿಮಯ ಗಳಿಕೆಗೆ ನೆರವಾಗಿರುವುದು, ಉತ್ತಮ ಹವಾಮಾನ ಮತ್ತು ಮಣ್ಣಿನಲ್ಲಿ ಬೆಳೆಯುತ್ತಿರುವ ಈ ತಂಬಾಕಿನಲ್ಲಿ ನಿಕೋಟಿನ್ ಹಾಗು ಟಾರ್ ಅತ್ಯಂತ ಕಡಿಮೆ ಇದ್ದು ಉತ್ತಮ ಬೇಡಿಕೆಯ ಕಾರಣ, ತಂಬಾಕು ಮಂಡಳಿ ನಿಗದಿ ಪಡಿಸಿರುವ ಪ್ರಮಾಣಕ್ಕಿಂತ ಹೆಚ್ಚಿನ ತಂಬಾಕಿನ ಉತ್ಪಾದನೆ ಮಾಡಿ ಮಾರಾಟವಾಗಿರುವುದು, ಅಂದರೆ 1999ರಲ್ಲಿ ತಂಬಾಕು ಮಂಡಳಿ ನಿಗದಿತ 40 ದಶಲಕ್ಷ ಕೆ.ಜಿ. ಉತ್ಪಾದನೆ ಮೀರಿ 45.30 ಲಕ್ಷ ಕೆ.ಜಿ ಉತ್ಪಾದನೆಯ ಮಾರಾಟದಿಂದ ಹಿಡಿದು 2003ರಲ್ಲಿ 45.39 ದಶಲಕ್ಷ ಕೆ.ಜಿ ನಿಗದಿತ ಉತ್ಪಾದನೆಗೆ ಏರಿ, ಅದನ್ನು ಮೀರಿ 73.01 ದಶಲಕ್ಷ ಕೆ.ಜಿ. ಉತ್ಪಾದನೆ ಮಾಡಿ ಮಾರಿರುವಲ್ಲಿ ರಫ್ತಿಗೆ 8 ದಶಲಕ್ಷ ಕೆ.ಜಿ ತಂಬಾಕಿನ ಕೊರತೆ ಆದದ್ದು, ಈ ಕಾರಣ ಭಾರತೀಯ ತಂಬಾಕು ಸಂಸ್ಥೆ 2004–05 ಸಾಲಿನಲ್ಲಿ 74 ಕೆ.ಜಿ ಉತ್ಪಾದನೆಗೆ ಸಮ್ಮತಿ ಸೂಚಿಸಿರುವುದು, ತಂಬಾಕು ಬೆಳೆಗಾರರ ನೋಂದಾವಣೆ ಹಾಗು ಅನಧಿಕೃತವೆನಿಸಿರುವ ಬ್ಯಾರನ್‌ಗಳನ್ನು ಸಕ್ರಮಗೊಳಿಸದಿದ್ದರೆ ಮಾರಾಟ ಸಮಯದಲ್ಲಿ ಬೆಳೆಗಾರರು, ಹೆಚ್ಚುವರಿ ಶುಲ್ಕವನ್ನು ಪಾವತಿಸಬೇಕಾಗುವುದರಿಂದ ಆಗುವ ಅನ್ಯಾಯ, ತಂಬಾಕು ಮಂಡಳಿಯ ಕಾಯ್ದೆಯಲ್ಲಿ ಈ ಬಗ್ಗೆ ಸಕ್ರಮಕ್ಕೆ ಯಾವ ಪ್ರಸ್ತಾಪವೂ ಇಲ್ಲದ ಕಾರಣ, ಆಂಧ್ರಪ್ರದೇಶದಿಂದ ಖರೀದಿ ನಿರಾಕರಣೆ, ಆದರೆ ಕರ್ನಾಟಕದ ಸಂಬಂಧದಲ್ಲಿ ಈ ಹಿಂದೆ 1991–92 ರಲ್ಲಿ 1978 ಬ್ಯಾರನ್‌ಗಳಿಂದ ಹಿಡಿದು, 1997–98ರವರೆಗೆ ಒಟ್ಟು 10294 ಬ್ಯಾರನ್‌ಗಳನ್ನು ತಂಬಾಕು ಮಂಡಳಿ ಸಕ್ರಮಗೊಳಿಸಿರುವುದು, ತಂಬಾಕು ಬೆಳೆಗಾರರಿಗೆ ತೊಂದರೆಯಾಗಬಾರದೆಂದು ತಂಬಾಕು ಮಂಡಳಿಗೆ ಸೂಕ್ತ ನಿರ್ದೇಶನ ನೀಡುವಂತೆ ಕೇಂದ್ರ ಸರ್ಕಾರವನ್ನು (ವಾಣಿಜ್ಯ ಇಲಾಖೆ) ರಾಜ್ಯ ಸರ್ಕಾರ ಒತ್ತಾಯಪಡಿಸುತ್ತಿರುವುದು ಕುರಿತೆಲ್ಲ ಹೇಳಿದರು.

**ಶ್ರೀ ಎ.ಟಿ.ರಾಮಸ್ವಾಮಿ** ಅವರು, ಕರ್ನಾಟಕದ ತಂಬಾಕಿಗೆ ಬೇಡಿಕೆ ಇದ್ದು ರಫ್ತಾಗುತ್ತಿದ್ದರೂ, ಬೆಳೆಯಲಿಕ್ಕೆ ಅಥವಾ ಕ್ರಾಪ್ ಸೈಜ್‌ಅನ್ನು, ಬೆಳೆಯ ಪ್ರಮಾಣವನ್ನು ನಿಗದಿ ಮಾಡುವಲ್ಲಿ ತಂಬಾಕು ಮಂಡಳಿ ತೋರುತ್ತಿರುವ ವಿಪರೀತ ತಾರತಮ್ಯ, ಹಾಗು 74 ದಶಲಕ್ಷ ಕೆ.ಜಿ.ಉತ್ಪಾದನೆಗೆ ಭಾರತೀಯ ತಂಬಾಕು ಸಂಸ್ಥೆ ಸಮ್ಮತಿ ಸೂಚಿಸಿದ್ದರೂ ಮಂಡಳಿ ಎತ್ತಿರುವ ಕರಾರು; ಅನಧಿಕೃತ ಬೆಳೆಗಾರರು. ಪರ್ಮಿಷನ್ ಸೇಲ್ಸ್ ಕಾರ್ಡ್ ತೆಗೆದುಕೊಳ್ಳಲು ಪ್ರತಿಕಾರ್ಡಿಗೆ 5–10 ಸಾವಿರ ರೂ. ಲಂಚ

ಕೊಡಬೇಕಿರುವುದು, ದುಂಬಾಲು ಬೀಳಬೇಕಿರುವುದು, ಆಂಧ್ರದಲ್ಲಿ ಗುಣಮಟ್ಟದ ತಂಬಾಕು ಉತ್ಪಾದನೆ ಆಗದ ಕಾರಣ ಬೆಳೆಯ ಪ್ರಮಾಣ ಅಲ್ಲಿ 278 ದಶಲಕ್ಷ ಕೆ.ಜಿ.ಯಿಂದ 111 ದಶಲಕ್ಷ ಕೆ.ಜಿ.ಗೆ ಕುಸಿದಿರುವುದು, ಅವರಲ್ಲಿ ಲೈಸೆನ್ಸ್ ಇರುವ ಕಾರಣ ನಮ್ಮ ರೈತರು ಅಲ್ಲಿ ಹೋಗಿ ಬೇಡಿಕೊಂಡು ಲೈಸೆನ್ಸ್‌ಗೆ 20 ಸಾವಿರ ಕೊಟ್ಟು ಕೊಳ್ಳುವಂಥ ದುಸ್ಥಿತಿ, ತಂಬಾಕು ಲಾಭಿಯಲ್ಲಿ ಆಂಧ್ರದ ರೈತರ ಮೇಲಾಟ, ದಬ್ಬಾಳಿಕೆ; ತಂಬಾಕು ಮಂಡಳಿಯು 2002ರಲ್ಲಿ, ಕೆ.ಜಿ ಸ್ಪಾರ್ಥೇನ್ ಔಷಧಿಯನ್ನು ನಮ್ಮ ರಾಜ್ಯದಲ್ಲಿ 507ರೂ.ಗೆ ಮಾರಿದರೆ, ಆಂಧ್ರದಲ್ಲಿ 370ರೂ.ಗಳಿಗೆ ಮಾರಿ ನಮಗೆ ಕಂಪಲ್‌ಸರಿಯಾಗಿ 133ರೂಗಳ ಹೆಚ್ಚುವರಿ ಕೊಡದಿದ್ದರೆ ರಿನ್ಯೂವಲ್ ಮಾಡುವುದಿಲ್ಲ ಎಂಬ ಬೆದರಿಕೆ ಹಾಕಿ ಮಾರಿದುದು; ಅನಧಿಕೃತ ಬೆಳೆಗಾರರಿಗೆ ಹೆಚ್ಚು ಸೆಸ್ ಹಾಕುವುದರಿಂದ ಅವರಿಗೂ ಕೂಡ ಮೊದಲಿಗೆ ಮಾರಾಟಕ್ಕೆ ಅವಕಾಶ ಮಾಡಿಕೊಡುವುದು, ತಂಬಾಕಿನ ಗುಣಮಟ್ಟವು 80–100 ದಶಲಕ್ಷ ಕೆ.ಜಿ. ಹರಾಜು ಮಾರಾಟ ಮಾಡುವ ಸ್ಥಳದಲ್ಲಿ ಅವಧಿ ವಿಸ್ತರಣೆಯಾದರೆ ಹಾಳಾಗುವ ಸಂದರ್ಭವಾಗಿ, ಒಳ್ಳೆಯ ಬೆಲೆ ಸಿಗಲು ಕಷ್ಟಸಾಧ್ಯವಾಗುವ ಕಾರಣ ತಂಬಾಕು ಹರಾಜು ಮಾರುಕಟ್ಟೆಗಳು 40 ಮಿಲಿಯನ್ ಕೆ.ಜಿ. ಮಾರಾಟದ ಇನ್‌ಫ್ರಾಸ್ಟ್ರಕ್ಚರ್ ಮಾಡಿರುವಂತೆ, ನಮ್ಮಲ್ಲಿಯೂ ಮಾಡಲು ಸರ್ಕಾರ ಕ್ರಮ ಕೈಗೊಳ್ಳುವುದು; ಲೈಸೆನ್ಸ್ ರಿನ್ಯೂ ಮಾಡುವಲ್ಲಿ ಆಂಧ್ರದಿಂದ ಬರುವವರಿಂದ ಅನಗತ್ಯ ಕಿರಿಕಿರಿ, ರಿನ್ಯೂವಲ್ ಆಗದೆ ಕ್ರಾಪ್‌ಲೋನ್ ದೊರಕದೆ ನಮ್ಮ ರೈತರಿಗೆ ಗೋಳಾಗುವುದು; ವಾಣಿಜ್ಯ ಕಾರ್ಯದರ್ಶಿ ಶ್ರೀ ಪ್ರದೀಪ್‌ಸೇನ್ ಗುಪ್ತಾ ಅಧ್ಯಕ್ಷತೆಯ ಸಮಿತಿಯ 2002ರ ವರದಿಯಲ್ಲಿರುವ ಕರ್ನಾಟಕ ತಂಬಾಕು ರೈತರ ಸಮಸ್ಯೆ ಕುರಿತಂತೆ ಇರುವ ವರದಿಯನ್ನು ಬಹಿರಂಗಗೊಳಿಸಿ ಅನುಷ್ಠಾನಕ್ಕೆ ಸರ್ಕಾರ ಒತ್ತಾಯಿಸಬೇಕಾಗಿರುವುದು, ನಮ್ಮ ರೈತರ ಹಿತವನ್ನು ಆಂಧ್ರದ ಲಾಬಿಯ ಕೈಗೆ ಕೊಡದೆ ನಿಯೋಗವನ್ನು ಒಯ್ದು ರೈತರ ನ್ಯಾಯಯುತ ಬೇಡಿಕೆ ಈಡೇರಿಸುವುದು, ಎಂದೆಲ್ಲ ನಮ್ಮ ಅವಶ್ಯಕತೆಗಳನ್ನು ವಿವರವಾಗಿ ಮಂಡಿಸಿದರು.

**ಶ್ರೀ ಜಿ.ಟಿ.ದೇವೆಗೌಡ** ಅವರು, 50 ಸಾವಿರಕ್ಕೂ ಹೆಚ್ಚು ರೈತ ಕುಟುಂಬಗಳು 68,380 ಹೆಕ್ಟೇರ್ ಪ್ರದೇಶದಲ್ಲಿ ತಂಬಾಕು ಬೆಳೆದು ಜೀವಿಸುತ್ತಿರುವುದು; ಹೊಗೆಸೊಪ್ಪು ಬೆಳೆಯುವಲ್ಲಿ, ಹದ ಮಾಡುವಲ್ಲಿ 1ಲಕ್ಷ 50 ಸಾವಿರ ರೈತ ಕೂಲಿ ಕಾರ್ಮಿಕರು ತೊಡಗಿರುವುದು, 1975ರಲ್ಲಿ 10 ಮಿಲಿಯನ್ ಕೆ.ಜಿ.ತಂಬಾಕು ಬೆಳೆ ಆರಂಭವಾದದ್ದು 2004ರ ವೇಳೆಗೆ 70 ಮಿಲಿಯನ್ ಕೆ.ಜಿ. ಬೆಳೆಗೆ ಏರಿ, ರಾಷ್ಟ್ರದ ಖಜಾನೆಗೆ 1066 ಕೋಟಿ ರೂ ಸುಂಕ ವಿದೇಶಿ ವಿನಿಮಯ ರೂಪದಲ್ಲಿ ಬರುತ್ತಿರುವಲ್ಲಿ ರೈತರ

ಹಿತಾಸಕ್ತಿ ಕಾಪಾಡಬೇಕಾದುದು; ರಾಜ್ಯದಲ್ಲಿ 68,380 ಹೆಕ್ಟೇರ್ ಬೆಳೆಯ ಪೈಕಿ 33.026 ಹೆಕ್ಟೇರ್ ತಂಬಾಕು ಬೆಳೆಯುವ ರೈತರನ್ನು ಅನಧಿಕೃತ, 35,352 ಹೆಕ್ಟೇರ್ ತಂಬಾಕು ಬೆಳೆಗಾರರನ್ನು ಮಾತ್ರ ಅಧಿಕೃತವೆಂದು ಪರಿಗಣಿಸುವಲ್ಲಿ ಅನಧಿಕೃತರಿಗೆ ಆಗಿರುವ ಅನ್ಯಾಯ; ಅದರಿಂದಾಗಿ 9 ಕೋಟಿ ರೂ ದಂಡವನ್ನು ಅವರು ಕಟ್ಟಿರುವುದು, ತಂಬಾಕು ಮಂಡಳಿಯಿಂದ ಸಿಗಬೇಕಾದ ಕ್ರಿಮಿನಾಶಕ, ಔಷಧ, ರಸಗೊಬ್ಬರ, ಹೊಗೆಸೊಪ್ಪು ಸುಡಲು ಬ್ರಿಕೆಡ್ಸ್ ಇತ್ಯಾದಿ ಸೌಲಭ್ಯಗಳಿಂದ ವಂಚಿತರಾಗಿರುವುದು; ಅಂತಾಗಿ ತಂಬಾಕು ಬೆಳೆಯುವ ಎಲ್ಲ ರೈತರನ್ನು ಅಧಿಕೃತ ಬೆಳೆಗಾರರೆಂದು ಘೋಷಿಸಬೇಕಿರುವುದು; ಮಾರುಕಟ್ಟೆಯು 6.9.2004 ರಿಂದ ಪ್ರಾರಂಭಗೊಳ್ಳುವಕಾರಣ ಕೇಂದ್ರದ ಮೇಲೆ ಒತ್ತಡ ತಂದು ಈ ಘೋಷಣೆ ಮಾಡಿಸಬೇಕಿರುವುದು, ಆಂಧ್ರದ ತಂಬಾಕಿನ ಗುಣಮಟ್ಟ ಹಾಗು ಬೆಳೆಯುವ ರೈತರ ಸಂಖ್ಯೆ ಕಡಿಮೆಯಾಗಿದ್ದರೂ, ಅಲ್ಲಿ ನಾಲ್ಕು ಪ್ರದೇಶಿಕ ವ್ಯವಸ್ಥಾಪಕ ಕಛೇರಿ ಇದ್ದು ಮೈಸೂರಿನಲ್ಲಿ ಒಂದು ಕಛೇರಿ ಮಾತ್ರ ಇರುವುದು, ಹಾಗೂ 9 ಮಾರುಕಟ್ಟೆಗಳು ಮಾತ್ರ ಇರುವುದು; ಇಡೀ ರಾಜ್ಯದಲ್ಲಿ ಶೇ.80 ಭಾಗದಷ್ಟು ಬೆಳೆಯುವ ನಾಲ್ಕು ತಾಲೂಕುಗಳ ಪೈಕಿ ಅತಿ ಹೆಚ್ಚು ಪಿರಿಯಾಪಟ್ಟಣ ತಾ. ಹಾಗು ಹುಣಸೂರಿನಲ್ಲಿ ಬೆಳೆಯುವಲ್ಲಿ, ಹುಣಸೂರಿನಲ್ಲಿ ಕೂಡಲೇ ಮತ್ತೊಂದು ಪ್ರಾದೇಶಿಕ ಕಛೇರಿ ಮತ್ತು ಎರಡು ಮೂರು ಮಾರುಕಟ್ಟೆಗಳನ್ನು ಪ್ರಾರಂಭಮಾಡುವುದು; ಅನಧಿಕೃತ ರೈತರೆಂದು ವಸೂಲು ಮಾಡಿರುವ 9 ಕೋಟಿ ರೂ. ದಂಡವನ್ನು ವಾಪಾಸ್ಸು ಕೊಡಿಸುವುದು; 1066 ಕೋಟಿ ರೂ.ಗಳ ವಿದೇಶಿ ವಿನಿಮಯ, 9 ಕೋಟಿ ರೂ. ಗಳ ವಾಣಿಜ್ಯ ಶುಲ್ಕ ವಸೂಲಿ ಇದ್ದರೂ, ಹೊಗೆಸೊಪ್ಪು ಬೆಳೆಗಾರರಿಗೆ ಸೌಲಭ್ಯ ಒದಗಿಸಿಲ್ಲದಿರುವುದು; ರೈತಸಭಾಂಗಣ, ದನಕರು ಸಭಾಂಗಣವಾಗಲಿ ನಿರ್ಮಿಸಿಲ್ಲದಿರುವುದು; ಈ ಕಾರಣಗಳಿಂದಾಗಿ ಹೊಗೆಸೊಪ್ಪು ಮಾರುಕಟ್ಟೆಗೆ ಬಂದಾಗ ಪ್ರತಿ ವರ್ಷ ರೈತರ ರಕ್ಷಣೆಗೆ ಸರ್ಕಾರ ಮುಂದಾಗಬೇಕೆಂದು ಎಲ್ಲ ಹೇಳಿ ತಮ್ಮ ಮಾತನ್ನು ಮುಕ್ತಾಯಗೊಳಿಸಿದರು.

**ಶ್ರೀ ಹೆಚ್.ಎಸ್.ಮಹದೇವ ಪ್ರಸಾದ್** ಅವರು, ತಂಬಾಕು ಮಂಡಳಿ ನಮ್ಮ ರೈತರ ಬಗ್ಗೆ ತೋರುತ್ತಿರುವ ತಾರತಮ್ಯದ ಬಗ್ಗೆ ಹೇಳುತ್ತ : 73.61 ದಶಲಕ್ಷ ಕೆ.ಜಿ. ತಂಬಾಕನ್ನು ನಾವು ಮಾರಾಟ ಮಾಡಿದ್ದರೂ. 8 ದಶಲಕ್ಷ ಕೆ.ಜಿಯಷ್ಟು ಇನ್ನು ಬೇಕಾಗಿದ್ದರೂ 45.39 ಕೆ.ಜಿಗೆ ನಮ್ಮನ್ನು ರಿಸ್ಟ್ರಿಕ್ಟ್ ಮಾಡುತ್ತಿರುವುದು, ನಮ್ಮ ರೈತರು 10 ಸಾವಿರ ರೂ. ತೆತ್ತು, ಲೈಸೆನ್ಸು ಪಡೆದು ಮಂಡಳಿಗೆ ಕೊಡುವಂಥ

ವ್ಯವಸ್ಥೆ ನಿರ್ಮಿಸಿರುವುದು; ಮಂಡಳಿಯವರ ದೌರ್ಜನ್ಯ, ದಬ್ಬಾಳಿಕೆಯಿಂದ ನಮ್ಮ ರೈತರಿಗೆ ತೊಂದರೆ ಆಗುತ್ತಿರುವುದು; ನಮ್ಮ ಬೆಳೆಗಾರರ ಸಹಿತ ಕೇಂದ್ರ ವಾಣಿಜ್ಯ ಸಚಿವರು ಅಥವಾ ಪ್ರಧಾನಮಂತ್ರಿಗಳನ್ನು ಭೇಟಿ ಮಾಡಿ ಸಮಸ್ಯೆ ಬಗೆಹರಿಸುವಂಥ ಪ್ರಯತ್ನವನ್ನು ಸರ್ಕಾರ ಮಾಡಬೇಕು ಎಂದೆಲ್ಲ ಹೇಳಿ ಒತ್ತಾಯಿಸಿದರು.

ಕೃಷಿ ಸಚಿವ ಶ್ರೀ **ಕೆ.ಶ್ರೀನಿವಾಸಗೌಡ** ಅವರು, ಸದಸ್ಯರ ಮಾತುಗಳನ್ನು ಗಮನದಲ್ಲಿರಿಸಿಕೊಂಡು, ಇಡೀ ಪ್ರಪಂಚದಲ್ಲಿ ನಮ್ಮ ಹೊಗೆಸೊಪ್ಪಿಗೆ ಬೇಡಿಕೆ ಇರುವುದು, ಹೆಗ್ಗಡದೇವನಕೋಟೆಯಿಂದ ಹಾವೇರಿಯವರೆಗೂ ಇರುವಂಥ ಬ್ಲಾಕ್‌ನಲ್ಲಿ ಸುಮಾರು 35 ಕಿ.ಮೀ ಅಗಲದ ಲೈಟ್ ಸಾಯಿಲ್‌ನಲ್ಲಿ ಬೆಳೆದು ಕ್ಯಾನ್ಸರ್ ಎಫೆಕ್ಟ್ (ಕ್ಯಾನ್ಸರ್‌ಕಾರಕವಲ್ಲದಿರುವುದು) ಇಲ್ಲದಿರುವಂಥ ನಿಕೋಟಿನ್ ಕಡಿಮೆ ಇರುವಂತೆ ಹೊಗೆಸೊಪ್ಪು ಆಗಿರುವುದು. ಇಂಥ ಬ್ಲಾಕ್ ಕಾಟನ್ ಸಾಯಿಲ್‌ನಲ್ಲಿ 183 ಮಿಲಿಯನ್ ಟನ್ ಬೆಳೆಯುತ್ತಿದ್ದ ಆಂಧ್ರದವರಿಗೆ ಕಡಿಮೆ ಬೆಳೆ ಬರುತ್ತಿರುವುದು, ಅಂತಾಗಿ ನಮ್ಮಲ್ಲಿ ಹೆಚ್ಚಿಗೆ ಪ್ರೊಡಕ್ಷನ್ ಆಗದ ಹಾಗೆ ಲೈಸೆನ್ಸು ಉಳ್ಳವರು ಮಾತ್ರ ಬೆಳೆಯಬೇಕೆಂದು ಹೇಳುತ್ತಿರುವುದು, ಹೊಗೆಸೊಪ್ಪು ಬೋರ್ಡಿನಲ್ಲಿ ನಮ್ಮವರು ಇಬ್ಬರು ಸದಸ್ಯರು ಮಾತ್ರ ಇರುವುದು, ಕೇಂದ್ರವನ್ನು ಈ ಕಾರಣ ಡಿ-ಲೈಸೆನ್ಸಿಂಗ್ ಮಾಡಬೇಕೆಂದು ಸರ್ಕಾರ ಕೇಳಿರುವುದು ಎಂಬ ಬಗೆಗೆಲ್ಲ ತಿಳಿಸಿದರು.

ಶ್ರೀ **ಎ.ಟಿ.ರಾಮಸ್ವಾಮಿ** ಅವರು, ತಂಬಾಕು ಮಂಡಳಿಯ 21 ಸದಸ್ಯರು ಆಂಧ್ರದವರಿದ್ದು, ನಮ್ಮವರು ಇಬ್ಬರು ಮಾತ್ರ ಇದ್ದು, ನಮ್ಮ ರೈತರಿಗೆ ಸಹಾಯವಾಗುತ್ತಿಲ್ಲ. ಅವರ ರೈತರಿಗೆ ಸ್ವಾರ್ಥೇನ್ ಔಷಧಿಯನ್ನು ಸುಮಾರು ಶೇ 37 ರಷ್ಟು ಕಡಿಮೆ ಬೆಲೆಗೆ ಮಾರಿರುವುದು, ಬ್ಯಾರಲ್‌ಗೆ 1750-1800 ಕೆ.ಜಿ. ನಿಗದಿ ಮಾಡಿ ಸೆಸ್ 1750ರಿಂದ 1800ರೂ ಆಗಿ 4 ಸಾವಿರ ರೂ ಹೆಚ್ಚು ಹೊರೆಯನ್ನು ನಮ್ಮ ರೈತರಿಗೆ ವಿಧಿಸುತ್ತಿರುವುದು ಇವನ್ನೆಲ್ಲ ತಪ್ಪಿಸಲು, ಹರಾಜು ಮಾರುಕಟ್ಟೆಗಳನ್ನು ಹೆಚ್ಚು ಮಾಡಿ, ಹರಾಜು ಮಾಡುವ ಅವಧಿ ವಿಸ್ತರಣೆ ಕಡಿಮೆ ಅವಧಿಯಲ್ಲಿ ಆಗಿ, ಗುಣಮಟ್ಟ ಉಳಿದು ರೈತರಿಗೆ ಸಿಗುವ ಒಳ್ಳೆ ಬೆಲೆ ಸಿಗುವಂತೆ ಮಾಡಬೇಕೆಂದರು. ಇದಕ್ಕೆ ಶ್ರೀ ಕೆ.ಶ್ರೀನಿವಾಸಗೌಡ ಅವರು ದನಿಗೂಡಿಸಿದರು.

## ವಿಷಯ 15: ಖಾನಾಪುರ ತಾ. ಸಕ್ಕರೆ ಕಾರ್ಖಾನೆ ರೈತರಿಗೆ ಕಬ್ಬಿನ ಹಣ ಬಾಕಿ

12.7.2002ರ ವಿಧಾನ ಸಭಾಧಿವೇಶನದಲ್ಲಿ[24] **ಶ್ರೀ ಮಹದೇವಕೌಜಲಗಿ** ಅವರು: ರೈತರು 11 ತಿಂಗಳು ಕಾಲ ಬೆಳೆದ ಕಬ್ಬನ್ನು ಭಾಗ್ಯಲಕ್ಷ್ಮಿ ಸಹಕಾರ ಸಕ್ಕರೆ ಕಾರ್ಖಾನೆಗೆ ಕೊಟ್ಟರೂ ರೂ. 8–14 ಕೋಟಿ ರೂವನ್ನು ಅದು ಬಾಕಿ ಉಳಿಸಿಕೊಂಡಿರುವುದು; ರೈತರು ಎದುರಿಸುತ್ತಿರುವ ಅನೇಕ ಸಮಸ್ಯೆಗಳ ಪರಿಹಾರಕ್ಕಾಗಿ ಜಿಲ್ಲಾಧಿಕಾರಿಗಳ ಕಛೇರಿಗೆ ಮುತ್ತಿಗೆ ಹಾಕಲಿರುವ ಸಂಗತಿ; ರೈತರಿಗೆ ಹಣವನ್ನು, ಸರ್ಕಾರ ಮಧ್ಯಪ್ರವೇಶಿಸಿ ಕೊಡಿಸುವುದು ಕುರಿತೆಲ್ಲ ಹೇಳಿದರು. **ಶ್ರೀ ಎ.ಬಿ.ಪಾಟೀಲ್** ಅವರೂ ಈ ಮಾತುಗಳಿಗೆ ಒತ್ತಾಸೆ ಸೂಚಿಸಿದರು. ಇಡೀ ರಾಜ್ಯದಲ್ಲಿ ಅತ್ಯುತ್ತಮ ಕಬ್ಬುಬೆಳೆಯುವ ಕ್ಷೇತ್ರವಾದ ಖಾನಾಪುರ ತಾ. ರೈತರು ಸಂಕಷ್ಟಕ್ಕೆ ಸರ್ಕಾರ ಸ್ಪಂದಿಸಿರುವ ಬಗ್ಗೆ ವಿವರ ಬಯಸಿದರು.

**ಶ್ರೀ ಕರಡಿ ಸಂಗಣ್ಣ ಅಮರಪ್ಪ** ಅವರು ಕೊಪ್ಪಳ ಜಿಲ್ಲೆ ಗಂಗಾವತಿ ಸಕ್ಕರೆ ಕಾರ್ಖಾನೆಯಲ್ಲಿಯೂ ಪೇಮೆಂಟ್ ಆಗದಿರುವುದು, ಕಾರ್ಖಾನೆಯನ್ನು ಖಾಸಗೀಕರಣ ಮಾಡುವುದು ಅಥವಾ ಮಾರಾಟ ಮಾಡುವ ಬಗ್ಗೆ ಸರ್ಕಾರದ ಸ್ಪಷ್ಟೀಕರಣದ ಅಗತ್ಯವಿರುವುದು, ಸೇಲ್ ಆಗುವ ತನಕ ಸರ್ಕಾರವು ಕಾಯದೆ ರೈತರಿಗೆ ಪೇಟೆಂಟ್ ಮಾಡಬೇಕಿರುವುದು ಕುರಿತೆಲ್ಲ ಹೇಳಿದರು. **ಶ್ರೀ ರಮೇಶ್‌ಕುಮಾರ್ ಪಾಂಡೆ** ಅವರು ಬೀದರ್ ಸಕ್ಕರೆ ಕಾರ್ಖಾನೆಯು ರೈತರಿಗೆ 9 ಕೋಟಿ ಕೊಡಬೇಕಿರುವ ಬಗ್ಗೆ ಸರ್ಕಾರದ ಗಮನ ಸೆಳೆದರು. ಶ್ರೀ **ಕೆ.ಶ್ರೀನಿವಾಸಗೌಡ** ಅವರು, ರಾಜ್ಯದ ಸುಮಾರು 7–8 ಸಕ್ಕರೆ ಕಾರ್ಖಾನೆಗಳಲ್ಲಿ ರೈತರಿಗೆ ಹಣ ಸಂದಾಯವಾಗಿಲ್ಲದಿರುವಲ್ಲಿ ಸರ್ಕಾರ ರೈತರ ಸಂಕಷ್ಟಕ್ಕೆ ಆಗದಿರುವ ಬಗ್ಗೆ ಹೇಳಿದರು. **ಶ್ರೀ ಎಚ್.ಎಸ್.ಮಹದೇವಪ್ರಸಾದ್** ಅವರು ಕೊಳ್ಳೆಗಾಲ ತಾಲೂಕಿನ ಕುಂತೂರು ಶುಗರ್ ಫ್ಯಾಕ್ಟರಿಯಿಂದಲೂ ಕಳೆದ 2 ವರ್ಷಗಳಿಂದ ರೈತರಿಗೆ 6–7 ಕೋಟಿ ರೂ. ಬಾಕಿ ಇರುವ ಬಗ್ಗೆ ಹಾಗೂ ಕಾರ್ಖಾನೆಯಲ್ಲಿರುವ ಸ್ಟಾಕನ್ನು ವಿಲೇವಾರಿ ಮಾಡಿ ರೈತರಿಗೆ ಹಣ ಕೊಡಿಸಲು ಹೇಳಿದರು. ವ್ಯವಸ್ಥೆ ಆಗಿಲ್ಲ, ಎಂದರು. ಆಗ ಕೃಷಿ ಉತ್ಪನ್ನ ಸಚಿವ **ಶ್ರೀ ಜಿ.ರಾಜುಗೌಡ** ಅವರು, ಕಬ್ಬು ಸರಬರಾಜು ಮಾಡಿದವರಿಗೆ ದಾಸ್ತಾನು ಬಿಟ್ಟು ಉಳಿದದ್ದನ್ನು ಹರಾಜು ಮಾಡಲು ತೀರ್ಮಾನವಾಗಿದೆ ಎಂದರು.

---

24. ವಿಧಾನಸಭೆಯ ನಡವಳಿಕೆಗಳು., ಸಂಪುಟ 4(1–5), (12.3.2002), ಪು.796–803

## ವಿಷಯ 16: ಕುಂತೂರು ಮಹದೇಶ್ವರ ಸಕ್ಕರೆ ಕಾರ್ಖಾನೆಯಿಂದ ರೈತರಿಗೆ ಹಣ ಬಾಕಿ

18.7.2002ರ ವಿಧಾನ ಸಭೆಯ ನಡವಳಿಕೆಗಳಲ್ಲಿ,[25] ಶ್ರೀ ಎಚ್.ಎಸ್.ಮಹದೇವಪ್ರಾಸಾದ್ ಅವರು ಪಾಲ್ಗೊಂಡು : ಮಹದೇಶ್ವರ ಸಕ್ಕರೆ ಕಾರ್ಖಾನೆ, ರೈತರಿಗೆ ಕೊಡಬೇಕಾದ 7 ಕೋಟಿ 89 ಲಕ್ಷ ರೂ. ಬಾಕಿಯನ್ನು 2 ವರ್ಷದಿಂದ ಕೊಟ್ಟಿಲ್ಲದಿರುವುದು, ಉಚ್ಚನ್ಯಾಯಾಲಯವು, ಕಾರ್ಖಾನೆಯ ಗೋಡೌನ್‌ನಲ್ಲಿರುವ ಸಕ್ಕರೆಯನ್ನು ಮಾರಿ ರೈತರಿಗೆ ಬಾಕಿ ಪಾವತಿ ಮಾಡುವಂತೆ ರೈತರ ಮನವಿಗೆ ತೀರ್ಪು ನೀಡಿರುವುದು, ಜಿಲ್ಲಾಧಿಕಾರಿಗಳು 17.7.2002ರವರೆಗೂ ಆ ಬಗ್ಗೆ ಏನೂ ಕ್ರಮ ಕೈಗೊಳ್ಳದಿರುವುದು, ಈ ಸಕ್ಕರೆ ಕಾರ್ಖಾನೆಗೆ 3–4 ಕಂಪನಿಯವರು ಮಾಲೀಕರಾಗಿರುವ ಬಗ್ಗೆ ರೈತರು, ಶಾಸಕರು, ಮಂತ್ರಿಗಳಿಗೆ ತಿಳಿಸದಿರುವುದು, ಫ್ಯಾಕ್ಟರಿ ಮಾರಾಟ ಮಾಡಲು (ಹರಾಜು) ಬಾಂಬೆ ಹೈಕೋರ್ಟ್‌ನಿಂದ ತಡೆ ಆಜ್ಞೆ ಬಂದಿರವುದು, ಕಬ್ಬಿನ ಹಣ ಬರದೆ 4 ಸಾವಿರ ರೈತರು ಹೆಚ್ಚು ಬಡ್ಡಿಯ ಸಾಲಮಾಡಿ ಸಂಕಷ್ಟಕ್ಕೀಡಾಗಿರುವುದು, ಕರ್ನಾಟಕ ಹೈಕೋರ್ಟ್ ಅದೇಶ ರೀತ್ಯಾ ಕಾರ್ಖಾನೆಯನ್ನು ಪರಭಾರೆ ಮಾಡಿ ಕ್ರಮ ತೆಗೆದುಕೊಳ್ಳಲು ಆದೇಶ ನೀಡಿದ್ದರೂ, ಸರ್ಕಾರ ವಿಳಂಬ ಮಾಡಿದ ಕಾರಣದ ಹಿನ್ನೆಲೆಯಲ್ಲಿ ಇರುವ ಕೈವಾಡ, ಸರ್ಕಾರವೇ ಈ ಪರಿಸ್ಥಿತಿಯಲ್ಲಿ ಫ್ಯಾಕ್ಟರಿಗೆ ಮುಂಗಡ ಹಣ ಕೊಟ್ಟು ರೈತರಿಗೆ ತಲುಪಲು ವ್ಯವಸ್ಥೆ ಮಾಡುವುದು ಕುರಿತೆಲ್ಲ ಹೇಳಿ ಸರ್ಕಾರದ ಗಮನ ಸೆಳೆದರು.

**ಶ್ರೀ ಎ.ಆರ್ ಕೃಷ್ಣಮೂರ್ತಿ** ಅವರು ಮಾತನಾಡಿ : ಚಾಮರಾಜನಗರ, ಮೈಸೂರು ಜಿಲ್ಲೆಯ ಕಬ್ಬು ಬೆಳೆಗಾರರ ಸಮಸ್ಯೆ, 1970ರಲ್ಲಿ ಆರಂಭವಾಗಿ 2001 ರಲ್ಲಿ ಮುಚ್ಚಿದ ಕಾರ್ಖಾನೆಗೆ ಕಬ್ಬು ಕೊಟ್ಟ ರೈತರ ಸಮಸ್ಯೆಯ ಉಲ್ಬಣ, ಹಣ ಪಾವತಿಸಲು ಬೇಡಿ ವಿಧಾನಸೌಧದ ಮೆಟ್ಟಲಿನವರೆಗೂ ಬಂದು ಮಾಡಿದ ಪ್ರತಿಭಟನೆ, ಆಗ ಮಾನ್ಯ ಮುಖ್ಯಮಂತ್ರಿಗಳು, ಅಪೆಕ್ಸ್ ಬ್ಯಾಂಕ್ ಮುಖಾಂತರ 5 ಕೋಟಿ ರೂ ಪಾವತಿಸಿ, ಸಮಸ್ಯೆಯನ್ನು ತುಸುಮಟ್ಟಿಗಾದರೂ ನೀಗಿಸಿದ್ದು, ಬಾಂಬೆ ಹೈಕೋರ್ಟು ಸಕ್ಕರೆ ದಾಸ್ತಾನು ಮಾರಾಟಕ್ಕೆ ತಡೆ ಆಜ್ಞೆ ಹಾಕಿದ್ದರೂ ಶೇ.40 ರಷ್ಟು ಕಾರ್ಖಾನೆಗಳಿಗೆ ರೈತರ ಸಾಲ ತೀರಿಸುವಂಥ ಅವಕಾಶವಿದ್ದರೂ, ಶೇಕಡ 40 ರಷ್ಟು ಹಣವನ್ನು ರೈತರಿಗೆ ಪಾವತಿಸುವ ಸರ್ಕಾರದ ಆದೇಶವಿದ್ದರೂ, ರೈತರಿಗೆ ಹಣ ಮರು ಪಾವತಿಗೆ

---

25. ವಿಧಾನ ಸಭೆಯ ನಡವಳಿಕೆಗಳು., ಸಂಪುಟ 5 (3.5), ಭಾಗ ii (18.7.2002), ಪು.948–59

ಸರ್ಕಾರ ಕ್ರಮ ಕೈಗೊಳ್ಳದಿರುವುದು ಕುರಿತೆಲ್ಲ ಹೇಳಿ ಕಾರ್ಖಾನೆಯಲ್ಲಿ ಸಕ್ಕರೆ ದಾಸ್ತಾನು 20 ಕೋಟಿ ರೂಪಾಯಿಯಷ್ಟು ಇರುವಲ್ಲಿ ಸರ್ಕಾರ ಇಂಟರ್‌ವೀನ್ ಮಾಡಿ ರೈತರ ಬಾಕಿ ತೀರಿಸುವ ದಿಕ್ಕಿನಲ್ಲಿ ಭಾಗಿಯಾಗಿ ಬೆಳೆಗಾರರ ಸಮಸ್ಯೆಯನ್ನು ನೀಗಿಸಬೇಕೆಂದು ಒತ್ತಾಯ ಮಾಡಿದರು.

**ಶ್ರೀಸಿ.ಗುರುಸ್ವಾಮಿ** ಅವರು, ಮಹದೇಶ್ವರ ಸಕ್ಕರೆ ಕಾರ್ಖಾನೆ ಪ್ರಾಂಭವಾದಾಗಿನಿಂದಲೂ ಹೊಂದಿರುವ ಸಮಸ್ಯೆ, ರೈತರು ಅದಕ್ಕೆ ಕಬ್ಬನ್ನು ಎರಡು ವರ್ಷಗಳ ಹಿಂದೆಯೆ ಸರಬರಾಜು ಮಾಡಿದ್ದು, ಫ್ಯಾಕ್ಟರಿ ಓನರ್ ಸಾಲದ ರೂಪದಲ್ಲಿ ಹಣ ತಂದರೂ ಕರ್ನಾಟಕ, ಮಹಾರಾಷ್ಟ್ರ ಹೈಕೋರ್ಟ್‌ಗಳಲ್ಲಿ ದಾವೆ ಆಗಿ, ಕಾರ್ಖಾನೆ ಹರಾಜಿಗೆ ಸ್ಟೇ ಆಗಿರುವುದು, ರೈತರು ಹಾಗೂ ಫೈನಾನ್ಸ್‌ರ್ ಸಮಸ್ಯೆಗಳ ಪರಿಹಾರಕ್ಕೆ ಸಂಬಂಧಿಸಿದ ಸಚಿವರು ಮಹಾರಾಷ್ಟ್ರಕ್ಕೆ ಹೋಗಿ ಸಂಬಂಧ ಪಟ್ಟವರೊಡನೆ ಸಮಾಲೋಚಿಸಿ ತೀರ್ಮಾನ ತೆಗೆದುಕೊಳ್ಳುವುದು, ಕುರಿತೆಲ್ಲ ನುಡಿದರು. **ಡಾ.ಭಾರ್‌ತಿ ಶಂಕರ್** ಅವರು ಉಭಯ ಸದಸ್ಯರ ಗಮನ ಸೆಳೆಯುವ ಮೇಲ್ಕಂಡ ಸೂಚನೆಗಳಿಗೆ ತಮ್ಮ ಸಹಮತವನ್ನು ವ್ಯಕ್ತಪಡಿಸಿ, ಕುಂತೂರು ಸಕ್ಕರೆ ಕಾರ್ಖಾನೆ ವ್ಯಾಪ್ತಿಗೆ ಬರುವ ಕಬ್ಬು ಬೆಳೆವ ಪ್ರದೇಶವನ್ನು ರಿ–ಅಲೋಕೇಷನ್ ಮಾಡಿ ಬನ್ನಾರಿ ಸಕ್ಕರೆ ಕಾರ್ಖಾನೆಗೆ ವಹಿಸಿಕೊಟ್ಟರೆ ರೈತರ ಸಂಕಷ್ಟ ಪರಿಸ್ಥಿತಿ ಸುಧಾರಿಸುತ್ತದೆ. ಎಂಬ ಸಲಹೆಯನ್ನು ನೀಡಿದರು.

ಸಕ್ಕರೆ ಸಚಿವ **ಶ್ರೀ ಎಂ.ಮಹದೇವ್** ಅವರು ಉತ್ತರಿಸುತ್ತ : ಶ್ರೀ ಮಹದೇಶ್ವರ ಶುಗರ್ ಲಿಮಿಟೆಡ್‌ನವರು ರೈತರಿಗೆ ಪಾವತಿಸಬೇಕಿದ್ದ 12.18 ಕೋಟಿ ರೂ ಪಾವತಿಸಲು ವೈಫಲ್ಯ, ಕಬ್ಬು ಖರೀದಿ ಬಿಲ್ ಮೊತ್ತವನ್ನು ಭೂಕಂದಾಯ ಬಾಕಿ ವಸೂಲಾತಿ ರೀತಿಯಲ್ಲಿ ವಸೂಲು ಮಾಡಲು, ಅಧಿಕಾರಿಗಳಿಗೆ ಸರ್ಕಾರ ಕೊಟ್ಟ ಆದೇಶದಂತೆ ಕಾರ್ಖಾನೆಯ ಚರ, ಸ್ಥಿರಾಸ್ತಿಗಳ ಹರಾಜು ಹಾಕಿ ಬಂದ ಹಣದಲ್ಲಿ ಭಾಗಶಃ ಆದ ಬಾಕಿಯ ಪಾವತಿ, ಹಾಲಿ 5.35 ಕೋಟಿ ರೂ ಮಾತ್ರ ಬಾಕಿ ಉಳಿದಿರುವುದು; ಮುಂಬಯಿ ಕೋರ್ಟಿನಲ್ಲಿ ದೋಬೋ ಫೈನಾನ್ಸ್‌ನವರು ಕಾರ್ಖಾನೆಯಿಂದ ಬರಬೇಕಾದ 3.93 ಕೋಟಿ ರೂ ಬಾಕಿಗಾಗಿ ಹಾಕಿದ ದಾವೆ, ಆಗ ಸಕ್ಕರೆ ದಾಸ್ತಾನು ಮಾರಾಟ ಮಾಡಿ ನ್ಯಾಯಾಲಯದಲ್ಲಿ ಠೇವಣಿ ಇಡಲು ಬಂದ ಆದೇಶ; ರೈತರಿಗೆ ಸಲ್ಲಬೇಕಾದ ಬಾಕಿ ಮೊತ್ತವನ್ನು ಶೇ.15ರ ಬಡ್ಡಿಯೊಂದಿಗೆ

ಪಾವತಿಸಲು ಕಾರ್ಖಾನೆಯ ಉಳಿದ ಸ್ಥಿರ, ಚರಾಸ್ತಿ ಹರಾಜಿಗೆ ತಡೆ ಆಜ್ಞೆ ಬಂದುದು, ಮೂರು ಮ್ಯಾನೇಜ್‌ಮೆಂಟ್‌ವತಿಗೆ ಬಂದ ಕಾರ್ಖಾನೆಯ ಹೊಣೆ ನಿರ್ಧಾರವು ಸಮಸ್ಯೆಯಾಗಿ ರೈತರ ಬಾಕಿ ಪಾವತಿಗೂ ಸಮಸ್ಯೆ ಆಗಿರುವುದು, ಆದರೆ ಸರ್ಕಾರ ಈ ದಿಸೆಯಲ್ಲಿ ಕ್ರಮ ತೆಗೆದುಕೊಳ್ಳುವ ಬಗ್ಗೆ ತಿಳಿಸಿದರು. ಶ್ರೀ ಎ.ಆರ್.ಕೃಷ್ಣಮೂರ್ತಿ ಅವರು, ರೋಬೋ ಬ್ಯಾಂಕ್, ಕಾರ್ಖಾನೆಗೆ ಕೊಟ್ಟಿರುವ ಸಕ್ಕರೆ ಸ್ಟಾಕ್ 20 ಕೋಟಿ ರೂ. ಮೌಲ್ಯದಷ್ಟಿರುವುದು, ಬಾಕಿ ತೀರಿಸುವ ವಿಚಾರವಾಗಿ ಸರ್ಕಾರದ ವಕೀಲರು ವಕಾಲತ್ತು ವಹಿಸದಿದ್ದ ಕಾರಣ, ದಾಸ್ತಾನು ಮಾರಾಟ ಮಾಡುವ ವ್ಯವಸ್ಥೆಯಲ್ಲಿ ನಿರ್ವಹಣೆಯ ದಕ್ಷತೆ ಇಲ್ಲದಿರುವುದು, ಜಿಲ್ಲಾಡಳಿತದ ಮುಖ್ಯರು ಹಾಗು ವಕೀಲರು ಸಮಸ್ಯೆಯನ್ನು ಬಗೆಹರಿಸಿಲ್ಲದಿರುವುದು ಕುರಿತು ಮಾತನಾಡಿದರು. **ಶ್ರೀಎಂ.ಮಹದೇವ್** ಅವರು ಸ್ಟೇ ವೆಕೇಟ್ ಮಾಡಲು ಕ್ರಮ ತೆಗೆದುಕೊಂಡಿರುವುದು ಕುರಿತು ಹೇಳುವಲ್ಲಿ ಕೋರ್ಟಿನ ವ್ಯವಹಾರಗಳನ್ನು ಚಿತ್ರಿಸಿದರು. ಶ್ರೀಎ.ಆರ್.ಕೃಷ್ಣಮೂರ್ತಿ ಅವರು ಕುಂತೂರು ಸಕ್ಕರೆ ಫ್ಯಾಕ್ಟರಿಯಿಂದ ಬನ್ನಾರಿ ಶುಗರ್ ಫ್ಯಾಕ್ಟರಿಗೆ ವರ್ಗಾಯಿಸಿದರೆ ಸೂಕ್ತವೆಂದು ಅಭಿಪ್ರಾಯವಿಟ್ಟರು. ಶ್ರೀ **ಜಿ.ರಾಜುಗೌಡ** ಅವರು, ಮಹಾರಾಷ್ಟ್ರದ ಮುಖ್ಯನ್ಯಾಯಾಲಯದ ತಡೆ ಆಜ್ಞೆ ರೀತ್ಯಾ, ಅಲ್ಲಿರುವ ಚರಸ್ವತ್ತನ್ನು ಹರಾಜು ಹಾಕುವಂತಿಲ್ಲದಿರುವುದು, ಸಂತೇಮಾರನ ಹಳ್ಳಿಯಲ್ಲಿ ಸು.14 ಟನ್ನಿನಷ್ಟಿದ್ದು ಅರೆಯುವವರಿಲ್ಲದಿರುವುದು, ಕುರಿತು ನುಡಿದರು. ಶ್ರೀ ಎಂ. ಮಹದೇವ್ ಅವರು, ಕುಂತೂರು ಷುಗರ್ ಫ್ಯಾಕ್ಟರಿ ನಿಂತುಹೋಗಿ ರೈತರಿಗೆ ಕಬ್ಬಿನ ಬಾಕಿ ಪಾವತಿಯ ದೊಡ್ಡ ಸಮಸ್ಯೆ ಇರುವ ಕಾರಣ, ರೈತರಿಗೆ ನೆರವಾಗಲು, ಕುಂತೂರು ಫ್ಯಾಕ್ಟರಿ, ಚಾಮುಂಡೇಶ್ವರಿ ಶುಗರ್ ಫ್ಯಾಕ್ಟರಿಗಳಿಗೆ ಅಲಾಟ್ ಮಾಡುವ ಬಗ್ಗೆ ಸದಸ್ಯರು ನೀಡಿರುವ ಸೂಕ್ತ ಸಲಹೆಯಂತೆ ಗಂಭೀರ ಪರಿಶೀಲನೆ ಮಾಡಿ ಕ್ರಮ ಕೈಗೊಳ್ಳುವ ಬಗ್ಗೆ ತಿಳಿಸಿದರು.

**ಶ್ರೀ ಹೆಚ್.ಎಸ್.ಮಹದೇವ ಪ್ರಸಾದ್** ಅವರು, ಮಾತನಾಡಿ ಸಕ್ಕರೆ ಕಾರ್ಖಾನೆಗಳಿಗೆ (ಕೆ.ಎಂ.ದೊಡ್ಡಿ ಇತ್ಯಾದಿ) ಟ್ರಾನ್ಸ್‌ಪೋರ್ಟ್ ಛಾರ್ಜ್ ಕಳೆದುಕೊಂಡು ರೈತರು ಕಬ್ಬು ಸರಬರಾಜು ಮಾಡಿರುವುದು, ಅವರಿಗೆ ಏಳು ಕೋಟಿ ರೂ ನಷ್ಟು ಬಾಕಿ ಬರಬೇಕಿರುವುದು, ಕಾರ್ಖಾನೆಯಿಂದ ಬಾಕಿ ಬರಲು ಬ್ಯಾಂಕ್, ಸೇಲ್ಸ್ ಟ್ಯಾಕ್ಸ್, ಟೆಲಿಫೋನ್ಸ್ ಅವರು ಕೋರ್ಟಿಗೆ ಹೋಗಿ ಬಾಕಿ

ಬರಬೇಕೆಂದು ಸ್ಟೇ ತರುವಲ್ಲಿ, ರೈತರಿಗೆ ಕೊಡಬೇಕಾದ ಹಣ ಹಾಗೆಯೇ ಉಳಿದುಕೊಳ್ಳುವುದು, ಕೋರ್ಟ್‌ನಿಂದ ಪ್ರಕರಣ ಇತ್ಯರ್ಥವಾದ ಮೇಲೆ ಬಡ್ಡಿ ಸಮೇತ ಕಾರ್ಖಾನೆ ಮಾಲೀಕರಿಂದ ಹಣ ವಸೂಲಿ ಮಾಡಿಕೊಳ್ಳುವುದು, ಅಲ್ಲಿಯ ತನಕ ರೈತರಿಗೆ ಕಾಯಿಸದೆ ಬಾಕಿ ಹಣ ಕೊಡುವ ವ್ಯವಸ್ಥೆ ಮಾಡುವುದು ಕುರಿತೆಲ್ಲ ಹೇಳಿದರು. ಶ್ರೀ ಎಂ.ಮಹದೇವ್ ಅವರು, ಕೋರ್ಟ್ ಆದೇಶದಂತೆ 60% ನಲ್ಲಿ ಸೇಲ್ಸ್ ಟ್ಯಾಕ್ಸ್, ವಿದ್ಯುತ್ ಇತ್ಯಾದಿಗಳಿಗೆ ಬಿಟ್ಟು ಉಳಿದ 40%ನಲ್ಲಿ ರೈತರಿಗೆ ಹಣ ವಿತರಣೆ ಮಾಡುವುದು, ಬಾಂಬೆ ಕೋರ್ಟ್‌ನಲ್ಲಿ ಸ್ಟೇ ವೆಕೇಟ್ ಮಾಡಿಸಲು ಸರ್ಕಾರಿ ವಕೀಲರನ್ನು ನೇಮಕ ಮಾಡಿರುವುದು, ಕುರಿತೆಲ್ಲ ಹೇಳಿದರು; ರೈತರ ಸಮಸ್ಯೆಯಾದ ಕಾರಣ ಇನ್‌ಟರೀಂ ಆರ್ಡರ್ಸ್ ಕೊಡುತ್ತಾರೆ. ಎಂದರು.

ಶ್ರೀ ಹೆಚ್.ಎಸ್.ಮಹದೇವ ಪ್ರಸಾದ್ ಅವರು ರಾಜ್ಯದ ಹೈಕೋರ್ಟ್, ಚರಾಸ್ಥಿ, ಚಿರಾಸ್ಥಿ, ಹಾಗು ಗೋದಾಮಿನ ಸಕ್ಕರೆ ಮಾರಿ, ರೈತರು ಹಾಗು ಇತರರಿಗೆ ಬಾಕಿ ನೀಡುವಂತೆ ಆದೇಶಿಸಿದ್ದುದನ್ನು ರೋಬೋ ಬ್ಯಾಂಕ್ ಮಹಾರಾಷ್ಟ್ರ ಹೈಕೋರ್ಟ್‌ನಲ್ಲಿ ರಿಟ್ ಹಾಕಿದಾಗ ಕೋರ್ಟಿಗೆ ತೋರಿಸಿದ್ದರೆ ಆ ಹೈಕೋರ್ಟ್ ಬಹುಶಃ ಬೇರೆ ರೀತಿ ಆದೇಶ ನೀಡುತ್ತಿದ್ದ ಸಾಧ್ಯತೆ, ಹರಾಜಿನಲ್ಲಿ ಸುಮಾರು 50 ಕೋಟಿಗೆ ಕಾರ್ಖಾನೆಯನ್ನು ಕೊಳ್ಳಲು ಮುಂದೆ ಬಂದಿರುವ ಜನ, ರೈತರು ಹಾಗು ಬ್ಯಾಂಕ್‌ಗಳಿಗೆ ಬಾಕಿ ಇರುವಾಗ ಆ ಕಾರಣಕ್ಕೆ ಇಡೀ ವ್ಯವಸ್ಥೆಯನ್ನು ನಿಧಾನಗೊಳಿಸುವುದರ ಅಸೂಕ್ತತೆ, ರಾತ್ರಿ ರೈಲಿನಲ್ಲಿ ಬಂದ ರೈತರನ್ನು ಶಾಸಕರ ಭವನ, ವಿಧಾನ ಸೌಧಕ್ಕೆ ಅಹವಾಲಿಗಾಗಿ ಬಂದರು ಬಿಡದೆ ಉಪವಾಸ ಬೀಳುವಂತೆ ಮಾಡಿರುವುದು, 78 ಸಾವಿರ ಕ್ವಿಂಟಾಲ್ ಸಕ್ಕರೆ ಸ್ಟಾಕ್ ಎರಡು ವರ್ಷಗಳಿಂದಲೂ ಗೋದಾಮಿನಲ್ಲಿ ಇಟ್ಟಿರುವಲ್ಲಿ ಅದರ ಗುಣಮಟ್ಟದ ಬಗ್ಗೆ ಗಮನ ಹರಿಸಬೇಕಾದುದು, ಆದಷ್ಟು ಬೇಗ ಈ ಹಿನ್ನೆಲೆಗಳಲ್ಲಿ ರೈತರಿಗೆ ಬಾಕಿ ಕೊಡಿಸುವ ವ್ಯವಸ್ಥೆ ಇತ್ಯಾದಿ ಕುರಿತೆಲ್ಲ ನುಡಿದರು. ಶ್ರೀ ಎಂ. ಮಹದೇವ್ ಅವರು ಉತ್ತರಿಸುತ್ತ ಲೀಗಲ್ ಪ್ರಾಬ್ಲಂ ಕಾರಣ ರೈತರಿಗೆ ಪೇಮೆಂಟ್ ಮಾಡಲು ಕ್ರಮ ಕೈಗೊಳ್ಳಲಾಗದಿದ್ದುದು, 30ನೇ ತಾರೀಖು ಸ್ಟೇ ವೆಕೇಟ್ ಮಾಡಿಸಿದ ಕೂಡಲೆ ಈ ಬಗ್ಗೆ ವ್ಯವಸ್ಥೆ, ತಾತ್ಕಾಲಿಕವಾಗಿಯಾದರೂ ಕುಂತೂರು ಶುಗರ್ ಫ್ಯಾಕ್ಟರಿಗೆ ಬರುವ ಏರಿಯಾವನ್ನು ಬೇರೆಡೆ ಫ್ಯಾಕ್ಟರಿಗಳಿಗೆ ಹಂಚುವ ಪ್ರಯತ್ನ ಕುರಿತೆಲ್ಲ ಹೇಳಿದರು.

## ವಿಷಯ 17: ಮಂಡ್ಯ ಜಿಲ್ಲೆ ಕಬ್ಬು ಬೆಳೆಗಾರರಿಗೆ ತೊಂದರೆ

16.7.2002ರ ವಿಧಾನ ಸಭಾ ನಡವಳಿಕೆಗಳಲ್ಲಿ[26] ಪಾಲ್ಗೊಂಡು **ಶ್ರೀ ಎಂ.ಎಸ್.ಆತ್ಮಾನಂದ** ಅವರು ಮೈಸೂರು ಸಕ್ಕರೆ ಕಾರ್ಖಾನೆಯಿಂದ ಮಂಡ್ಯ ಜಿಲ್ಲೆ ಕಬ್ಬು ಬೆಳೆಗಾರರಿಗೆ ಒದಗಿರುವ ತೊಂದರೆ ಕುರಿತು ಮಾತನಾಡುತ್ತ, ಕಾರ್ಖಾನೆಯು ಜುಲೈ ಮೊದಲನೇ ವಾರದಲ್ಲಿ, ಕಬ್ಬಿನ ದರ ನಿಗದಿ ಮಾಡದ ಕಾರಣ ಆರಂಭವಾಗದಿರುವುದು, ಕೆ.ಆರ್.ಎಸ್ ನೀರು ಬರಿದಾಗಿ ಹಾಲಿ ಬೆಳೆ ಒಣಗಿ ಹೋಗಿರುವುದು, ರೈತರಿಗೆ ಕಾರ್ಖಾನೆಯಿಂದ 5–6 ಕೋಟಿ ರೂ ಹಣ ಬಾಕಿ ಬರಬೇಕಿರುವುದು, ಈ ಕಾರಣ ರೈತರ ಕೃಷಿಸಾಲ ಪಾವತಿ ದಿನವನ್ನು ಮುಂದಕ್ಕೆ ಹಾಕಿ ನೀರಿನ ದರದ ರಿಯಾಯಿತಿಯನ್ನು ಸಂಕಷ್ಟದಲ್ಲಿರುವ ರೈತರಿಗೆ ನೀಡಿ ನೆರವಾಗಬೇಕೆಂದು ಸರ್ಕಾರಕ್ಕೆ ನಿವೇದನೆ ಇಟ್ಟರು. ಸಕ್ಕರೆ ಮಂತ್ರಿಗಳಾದ **ಶ್ರೀ ಎಂ.ಮಹದೇವ್** ಅವರು ಮೈಸೂರು ಸಕ್ಕರೆ ಕಂಪೆನಿ 2002–03 ನೇ ಸಾಲಿನ ಕಬ್ಬು ಅರೆಯುವ ಹಂಗಾಮನ್ನು ಆರಂಭಿಸಲು ಮಾಡಿಕೊಂಡಿರುವ ಸಿದ್ಧತೆ, ಹಾಗು ಆ ಸಾಲಿನ ಕಬ್ಬಿನ ದರವನ್ನು ನಿಗದಿಗೊಳಿಸಲು ರೈತಪ್ರತಿನಿಧಿಗಳೊಡನೆ ಚರ್ಚಿಸಿರುವುದು, ಈ ಬಗ್ಗೆ ಕಂಪನಿ ಅಧ್ಯಕ್ಷರು, ಜಿಲ್ಲಾ ಉಸ್ತುವಾರಿ ಸಚಿವರು, ಜಿಲ್ಲಾ ಚುನಾಯಿತ ಪ್ರತಿನಿಧಿಗಳು, ರೈತಮುಖಂಡರ ನಡುವೆ ಸಭೆ ನಡೆದು, ಕಂಪನಿಯು ಈ ಸಾಲಿನ ಕಬ್ಬು ಅರೆಯುವಿಕೆಯನ್ನು 24.7.2002 ರಿಂದ ಆರಂಭಿಸಿ, ಕಬ್ಬಿನ ದರವನ್ನು ನಿಗದಿ ಮಾಡುವ ಬಗ್ಗೆಯೂ ಕ್ರಮ ಕೈಗೊಳ್ಳುವ ಕುರಿತೆಲ್ಲ ತಿಳಿಸಿದರು.

## ವಿಷಯ 18: ಮಹಾರಾಷ್ಟ್ರ ಸಕ್ಕರೆ ಕಾರ್ಖಾನೆಗಳಿಂದ ಬಿಜಾಪುರ, ಬಾಗಲಕೋಟೆ, ಬೆಳಗಾವಿ ಜಿಲ್ಲೆಯ ಕಬ್ಬಿನ ಅನಧಿಕೃತ ಖರೀದಿ

31.7.2001ರ ವಿಧಾನ ಪರಿಷತ್ತಿನಲ್ಲಿಯ ಚರ್ಚೆಗಳಲ್ಲಿ[27] ಸಕ್ಕರೆ ಸಚಿವ **ಶ್ರೀ ಎ.ಕೃಷ್ಣಪ್ಪ** ಅವರು ಪ್ರತಿಕ್ರಿಯಿಸುತ್ತ : ಕರ್ನಾಟಕದಿಂದ ಮಹಾರಾಷ್ಟ್ರ ಮತ್ತು ಇತರೆ ರಾಜ್ಯಗಳಿಗೆ ಕಬ್ಬು ಅನಧಿಕೃತವಾಗಿ ಹೋಗದಂತೆ ತಡೆಗಟ್ಟಲು ಕಟ್ಟು ನಿಟ್ಟಿನ ಕ್ರಮ ಕೈಗೊಳ್ಳಲು ಜಿಲ್ಲಾಧಿಕಾರಿಗಳಿಗೆ ನೀಡಿರುವ ಸೂಚನೆ, ಆಯಾ

---

26. ವಿಧಾನಸಭಾ ನಡವಳಿಕೆಗಳು., ಸಂಪುಟ.5(1 ರಿಂದ 2) ಭಾಗ-1,(16–7–2002), ಪು.312–13
27. ವಿಧಾನ ಪರಿಷತ್ತಿನ ನಡವಳಿಕೆಗಳು., ಸಂಪುಟ.306 (1–2) ಭಾಗ-1,(31–7–2001), ಪು.430–440

ಕ್ಷೇತ್ರದ ಕಬ್ಬಿನ ಲಭ್ಯ ಪ್ರಮಾಣ, ಸಕ್ಕರೆ ಕಾರ್ಖಾನೆಗಳ ಪ್ರತಿನಿಧಿ ಸಭೆ ಏರ್ಪಾಟು, ಕಾರ್ಖಾನೆಗಳಿಗಿರುವ ತೊಂದರೆಗಳ ಬಗ್ಗೆ ಚರ್ಚೆ, ಸರ್ಕಾರ ಕೈಗೊಂಡಿರುವ ಕ್ರಮ, 2ವರ್ಷಗಳ ಹಿಂದೆ ರಾಜ್ಯದಲ್ಲಿ ಅಧಿಕ ಕಬ್ಬು ಉತ್ಪಾದನೆ ಆದ ಕಾರಣ ಗಡಿಭಾಗದಲ್ಲಿನ ನೆರೆರಾಜ್ಯಗಳ ಕಾರ್ಖಾನೆಗಳಲ್ಲಿ ಅರೆಯಲು ಅವಕಾಶ ನೀಡಿದ್ದು, ಸದ್ಯ ರಾಜ್ಯದಲ್ಲಿಯೇ ಇಂಪ್ರೂವ್ಡ್ ಕೆಪಾಸಿಟಿಯ ಕಾರ್ಖಾನೆಗಳಲ್ಲದೆ ಹೊಸ ಕಾರ್ಖಾನೆಗಳ ಸ್ಥಾಪನೆ ಆದ ವಿಷಯ, ಬದಲಾವಣೆ ಆದ ಪರಿಸ್ಥಿತಿಯಲ್ಲಿ ಟ್ಯಾಕ್ಸ್ ನಿಗದಿ, ಕಾರ್ಖಾನೆಗಳಿಗೆ ಕಚ್ಚಾ ವಸ್ತುಗಳ ಅಲಭ್ಯ ಪರಿಸ್ಥಿತಿಯನ್ನು ತಪ್ಪಿಸಲು ಸರ್ಕಾರದ ಕ್ರಮ ಕುರಿತೆಲ್ಲ ಹೇಳಿದರು.

**ಡಾ. ಎಂ.ಪಿ.ನಾಡಗೌಡರು,** ಮಹಾರಾಷ್ಟ್ರದಲ್ಲಿ ಕಬ್ಬಿನ ಪ್ರಮಾಣ ಕಡಿಮೆಯಾಗಿದೆ. ಅಲ್ಲಿನ ಕಾರ್ಖಾನೆಯವರು ನಮ್ಮ ರಾಜ್ಯಕ್ಕೆ ಬಂದು ಹೆಚ್ಚು ಬೆಲೆ ಕೊಡುತ್ತೇವೆ ಎಂದು ಹೇಳುವ ಪರಿಸ್ಥಿತಿ ಇದೆ. ಅದರಿಂದ ಕಬ್ಬು ಅರೆಯುವ ನಮ್ಮ ಕಾರ್ಖಾನೆಗಳಿಗೆ ಹೊಡೆತ ಬೀಳುತ್ತದೆ. ಸರ್ಕಾರ ಸ್ಟೇಟ್‌ಮೆಂಟ್ ಕೊಡುವ ಮೊದಲು ನಮ್ಮಲ್ಲಿ ಇರುವ ಕಬ್ಬಿನ ಪ್ರಮಾಣ ಹಾಗೂ ಎಷ್ಟು ಅಧಿಕ ಉತ್ಪಾದನೆ ಆಗಬಹುದು? ಕಡಿಮೆ ಉತ್ಪಾದನೆ ಆಗಿದ್ದರೆ, ಎಷ್ಟು? ಹೆಚ್ಚು ಕಬ್ಬು ಬೆಳೆದಿದ್ದರೆ ರೈತರಿಗೆ ಹಾನಿ ಆಗದಂತೆ ನೋಡಿಕೊಳ್ಳುವುದು, ಇತ್ಯಾದಿ ವಿಷಯಗಳ ಬಗ್ಗೆ ಗಮನಿಸಿ ಸ್ಪಷ್ಟಪಡಿಸಬೇಕು ಎಂದರು.

**ಶ್ರೀ ಬಿ.ಜಿ.ಪಾಟೀಲ್** ಅವರು, ಎಲ್ಲಾ ಸಕ್ಕರೆ ಕಾರ್ಖಾನೆಗಳು ಬಾಗಲಕೋಟೆ ಜಿಲ್ಲೆಯಲ್ಲಿದ್ದು, ಬಿಜಾಪುರ ಜಿಲ್ಲೆಯಲ್ಲಿ ಒಂದೇ ಒಂದು ಕಾರ್ಖಾನೆ ಚಿಕ್ಕಗಲಗಲಿಯಲ್ಲಿದೆ. ಸಿಂದಗಿ ತಾಲೂಕಿನ ಬಳಿ ಯಾವ ಕಾರ್ಖಾನೆಯೂ ಇಲ್ಲ. ಇಂಡಿ, ಸಿಂದಗಿ ತಾಲೂಕಿನ ರೈತರ ಕಬ್ಬನ್ನು, ಗಲಗಲಿ, ಮಧೋಳ ಕಾರ್ಖಾನೆಗಳಿಗೆ ಸಾಗಿಸುವುದು ಕಷ್ಟ. ಮಹಾರಾಷ್ಟ್ರ ಗಡಿ ಪ್ರದೇಶಕ್ಕೆ ಇಂಡಿ, ಸಿಂದಗಿ ಬರುವಲ್ಲಿ ಆ ತಾಲೂಕುಗಳ ಕಬ್ಬನ್ನು ಮಾತ್ರ ಅಲ್ಲಿನ ಕಾರ್ಖಾನೆಗಳಿಗೆ ಒಯ್ಯಲು ಅವಕಾಶವಾಗಲಿ. ಸಚಿವ ಶ್ರೀ ಖರ್ಗೆಯವರು ಹೇಳಿರುವಂತೆ ಭೀಮಾಶಂಕರ್ ಸಕ್ಕರೆ ಕಾರ್ಖಾನೆಯಲ್ಲಿ ನಮ್ಮ ರೈತರ ಕಬ್ಬು ಅರೆಯಲು ಸಾಧ್ಯವಾದರೆ, ಅದೇ ಆಗಲಿ ಎಂದರು.

**ಶ್ರೀ ಡಿ.ಎಚ್.ಶಂಕರಮೂರ್ತಿ** ಯವರು, ನಮ್ಮ ರೈತರಿಗೆ, ಮಾರ್ಕೆಟ್ಟಿನ ಪ್ರಿವೇಲಿಂಗ್‌ರೇಟ್‌ಗೆ ಧಕ್ಕೆ ಬಾರದ ಹಾಗೆ ಬೆಲೆ ಕೊಡುತ್ತೇವೆ, ನಮ್ಮ ಕಾರ್ಖಾನೆಗಳಿಗೆ

ಕಬ್ಬನ್ನು ಕೊಡಿ ಎನ್ನುವ ರೀತಿಯಲ್ಲಿ ಸರ್ಕಾರದ ನಿಲುವು ಇರಬೇಕು. ಹೊರತು ನಾವು ಕೊಡುವುದು 800ರೂ. ನೀವು 1 ಸಾವಿರಗಳಿಗೆ ಮಹಾರಾಷ್ಟ್ರದ ಗಡಿ ಸಕ್ಕರೆ ಕಾರ್ಖಾನೆಗೆ ಮಾರುವ ಹಾಗಿಲ್ಲ ಎಂದರೆ ಸರಿಯಲ್ಲ. ನಮ್ಮ ರಾಜ್ಯದ ರೈತರ ಹಿತ ಮತ್ತು ಕಾರ್ಖಾನೆಗಳ ಹಿತ ಕಾಪಾಡಬೇಕು. ಈ ಬಗ್ಗೆ ಸರ್ಕಾರ ಬಹಳ ಗಂಭೀರವಾಗಿ ಯೋಚಿಸಿ, ಸರಿಯಾದ ಉತ್ತರ ನೀಡಬೇಕು ಎಂದರು.

**ಶ್ರೀ ಕೆ.ಮಲ್ಲಪ್ಪ** ಅವರು, ಈಚಿನ ದಿನಗಳಲ್ಲಿ, ಕಬ್ಬನ್ನು 10-11 ತಿಂಗಳಿಗೆ ಕಟಾವು ಮಾಡುವ ಸಂದರ್ಭವಿದ್ದು 20 ತಿಂಗಳಾದರೂ ಕೆಲವರಿಗೆ ಕಟಾವು ಮಾಡಲು ಪರ್ಮಿಟ್ ಕೊಟ್ಟಿಲ್ಲದಿರುವುದು, ಅದರಿಂದ ಎಕರೆಗೆ 10-15 ಟನ್ ಕಬ್ಬು ನಷ್ಟ ಅನುಭವಿಸಿರುವುದು, ಕೆಲವರಿಗೆ ಮುಖನೋಡಿ ಒತ್ತಡ ಬಂದಂತೆ ಪರ್ಮಿಟ್ ಕೊಟ್ಟಿರುವುದು, ಇಂತಾದರೆ ಮುಕ್ತ ಮಾರುಕಟ್ಟೆ ಎಂದು ಏಕೆ ಮಾಡಬೇಕು? ರೈತರು ಬೆಳೆಯನ್ನು ಮುಕ್ತವಾಗಿ ಒಯ್ಯಲು ಆದೇಶವಿರುವಲ್ಲಿ ರೈತ ಶೋಷಣೆಗೆ ಒಳಪಡದಂತೆ ಸರ್ಕಾರ ಗಮನ ಹರಿಸಬೇಕು. ಮಹಾರಾಷ್ಟ್ರದಲ್ಲಿ ಟನ್ ಕಬ್ಬಿಗೆ 1 ಸಾವಿರ ಕೊಡುವಲ್ಲಿ ನಮ್ಮ ರೈತ 200ರೂ. ನಷ್ಟಕ್ಕೆ ಇಲ್ಲಿ ಏಕೆ ಮಾರಬೇಕು? ಈ ಬಗ್ಗೆಯೂ ಸರ್ಕಾರ ಚಿಂತಿಸಬೇಕು ಎಂದೆಲ್ಲ ಹೇಳಿದರು. ಡಾ.ಎಂ.ಪಿ.ನಾಡಗೌಡ ಅವರು, ಪಕ್ಕದ ರಾಜ್ಯದವರು ಕೊಡುವ ಬೆಲೆಗೆ ಕಂಪಾರಿಟೀವ್ ಅದೇ ಬೆಲೆಯನ್ನು ನಾವೂ ರೈತರಿಗೆ ಕೊಡಬೇಕು ನಮ್ಮ ಕಮಾಂಡ್ ಏರಿಯಾದಲ್ಲಿನ ಸಕ್ಕರೆ ಕಾರ್ಖಾನೆ ರಾಜ್ಯದ ಹಾಗು ರೈತರ ಹಿತಕ್ಕಾಗಿ ಇದೆ. ಅಲ್ಲಿ ನಮ್ಮ ಹಣ ಇನ್‌ವೆಸ್ಟ್ ಆಗಿರುತ್ತದೆ. ಎರಡನ್ನೂ ಕಾಪಾಡಬೇಕು ಎಂದರು.

**ಶ್ರೀ ಎಂ.ಸಿ.ನಾಣಯ್ಯ** ಅವರು, ಸರ್ಕಾರದ ಆದೇಶವೆಂಬಂತೆ ಮಂತ್ರಿಗಳಿಂದ ಬಂದ ಹೇಳಿಕೆ ಕಾರಣ, ಗಡಿ ಪ್ರದೇಶದ ಕಬ್ಬು ಬೆಳೆಗಾರರು ಬೆಳೆದ ಕಬ್ಬನ್ನು ಪರರಾಜ್ಯಗಳಿಗೆ ಬೆಲೆ ಹೆಚ್ಚು ಬರುವಂತಿದ್ದರೂ ಇವನ್ನೆಲ್ಲ ರೈತರೇ ಭರಿಸುವಂಥದು, ಕೆಲವು ಕಾರ್ಖಾನೆಗಳು ಕಬ್ಬು ಪಡೆದ ಮೇಲೂ ಬೆಲೆ ಕೊಡದಿರುವುದು, ಗಡಿ ಪ್ರದೇಶದಲ್ಲಿ ನಮ್ಮ ಕಾರ್ಖಾನೆಗಳು ಇಲ್ಲದಿರುವಲ್ಲಿ ರೈತರು ಕಬ್ಬನ್ನು ಎಲ್ಲಿಗೆ ಒಯ್ಯಬೇಕೆಂದು ಗೊಂದಲದಲ್ಲಿರುವುದು, ಮಂತ್ರಿಗಳು ಆದೇಶವನ್ನು ವಿತ್‌ಡ್ರಾ ಮಾಡಿ ರೈತರಿಗೆ ಬೆಲೆ ಸಿಗುವಂಥ ಭಾವನೆ ಬರಲು ಅವಕಾಶವಾಗಲಿ ಎಂದೆಲ್ಲ ಹೇಳಿದರು. ಸಕ್ಕರೆ ಸಚಿವ ಶ್ರೀ ಎ.ಕೃಷ್ಣಪ್ಪ ಅವರು, ಪ್ರತಿಕ್ರಿಯಿಸುತ್ತ, ಕಳೆದಬಾರಿ 34 ರಿಂದ 40 ಲಕ್ಷ ಟನ್ ಕಬ್ಬು ಎಕ್ಸೆಸ್ ಆಗಿ ರೈತರು ಕಂಗಾಲಾಗಿದ್ದುದು, ಇಂದು ಉತ್ಪಾದನೆಯ ಪ್ರಮಾಣ ಕಡಿಮೆ ಆದ ಕಾರಣ ಸರ್ಕಾರದ ಆದೇಶ

ಹಾಗೆ ಬಂದಿರುವುದು, ಬೆಲೆ ವಿಚಾರದಲ್ಲಿ ಒಂದು ಪ್ರಿನ್ಸಿಪಲ್ ಡಿಸಿಶನ್ ಈಗಾಗಲೇ ಮ್ಯಾನೇಜ್‌ಮೆಂಟ್ ಹಾಗು ರೈತರ ನಡುವೆ ಆಗಿರುವುದು, ಕಾರ್ಖಾನೆ ಮಾಲೀಕರು, ಆಡಳಿತ ವರ್ಗ, ರೈತಪ್ರತಿನಿಧಿಗಳು, ಅಧಿಕಾರಿಗಳ ಸಭೆ ಕೂಡಿಸಿ ತೀರ್ಮಾನ ಜಾರಿಗೆ ತರುವ ಪದ್ಧತಿ, ಹೊರಗಡೆ ಮಾರಾಟದಲ್ಲಿ ಜಾಸ್ತಿ ಬೆಲೆಕೊಡುತ್ತಾರೆ ಎಂದು ಹೋದರೆ ಅನ್‌ಹೆಲ್ತಿ ಕಾಂಪಿಟೇಶನ್ ಕ್ರಿಯೇಟ್ ಆಗುವುದು, ತೆರಿಗೆ ವಿಚಾರದಲ್ಲಿ, ಕಾರ್ಖಾನೆಗೆ ಕಬ್ಬು ಸರಬರಾಜು ಮಾಡುವ ವಿಚಾರದಲ್ಲಿ ನಷ್ಟ ಆಗುವ ಸಂಭವ, ಏರಿಯಾನಿಗದಿ ಮಾಡಿರುವಲ್ಲಿ (ಕಚ್ಚಾ ವಸ್ತು ಸರಬರಾಜು) ಅದಕ್ಕೆ ಬದ್ಧರಾಗಿರಬೇಕೆಂದು ಸರ್ಕಾರ ಮಧ್ಯೆ ಪ್ರವೇಶ ಮಾಡಿರುವುದು ಕುರಿತೆಲ್ಲ ಹೇಳಿದರು. **ಶ್ರೀ ಬಸವರಾಜ್ ಬೊಮ್ಮಾಯಿ** ಅವರು, ಕಮ್ಯಾಂಡ್ ಏರಿಯಾ ಒಳಗೆ ಇರುವವರಿಗೆ ಆದೇಶ ಸರಿ. ಆದರೆ ಅದರ ಹೊರಗಿರುವ ರೈತರೇನು ಮಾಡಬೇಕು? ಅದಾಗಿ ಎಲ್ಲಿ ಎಕ್ಸೆಸ್ ಇದೆ ಅಲ್ಲಿ ಸಾಗಿಸಲು ಅರ್ಡೋ ಮಾಡಿ ಎಂದರು. ಶ್ರೀ ಎ.ಕೃಷ್ಣಪ್ಪ ಅವರು, ಏರಿಯಾ ನಿಗದಿ ಮಾಡಿದ್ದರೂ, ಮ್ಯಾನೇಜ್‌ಮೆಂಟ್ ಮತ್ತು ಸರ್ಕಾರದ ನಡುವೆ ಒಪ್ಪಂದವಿಲ್ಲದಿರುವೆಡೆ ಹಾಗೂ ಬೀದರ್ ಮತ್ತು ಬೆಳಗಾವಿ ಜಿಲ್ಲೆಯ ಕಬ್ಬು ಮಿತಿಮೀರಿ ಇರುವುದು ಸರ್ಕಾರದ ಗಮನಕ್ಕೆ ಬಂದು ನೆರವಾಗಿರುವುದು, ಫ್ಯಾಕ್ಟರಿಯ ಅನುಕೂಲ– ಅನಾನುಕೂಲಗಳನ್ನು ವಿಮರ್ಶೆ ಮಾಡಿ ತೀರ್ಮಾನ ತೆಗೆದುಕೊಳ್ಳುವ ಬಗ್ಗೆ ತಿಳಿಸಿದರು. ಶ್ರೀ ವಿ.ಡಿ.ಹೆಗಡೆ ಅವರು, ಉತ್ತರ ಕನ್ನಡ ಜಿಲ್ಲೆಯಲ್ಲಿ ಫ್ಯಾಕ್ಟರಿಗಳನ್ನು ಸದಸ್ಯರಾಗಿಲ್ಲದಿರುವುದು, ಕಮ್ಯಾಂಡ್ ಏರಿಯಾದಲ್ಲಿ ಸದಸ್ಯರಿಲ್ಲದಿರುವುದು, ಪ್ರತಿವರ್ಷ 30–40 ಸಾವಿರ ಟನ್ ಕಬ್ಬು ಗೋವಕ್ಕೆ ಹೋದರೂ ಕಬ್ಬನ್ನು ತೆಗೆದುಕೊಳ್ಳದಿರುವ ಬಗೆಗೆಲ್ಲ ಹೇಳಿದರು. ಶ್ರೀ ಬಸವರಾಜ ಬೊಮ್ಮಾಯಿ ಅವರು, ಬಿಜಾಪುರ, ಕಾರವಾರ, ಬೀದರ್, ಬಾಗಲಕೋಟ ಪ್ರದೇಶಗಳು ಸೇರಿದಂತೆ blanker order ಆಗಿದೆ. ಅದಕ್ಕೆ ಸೂಕ್ತ ತಿದ್ದುಪಡಿ ತರಬೇಕಿದೆ ಎಂದರು. ಶ್ರೀ ಎ.ಕೃಷ್ಣಪ್ಪ ಅವರು. 1999ರಲ್ಲಿ ಇವರ ಜಿಲ್ಲೆಯಲ್ಲಿ ಕಬ್ಬು ಅರೆಯದ ರೈತರಿಗೆ ಕಷ್ಟ ಎಂದು ತಿಳಿದಾಗ ಖುದ್ದು ಹೋಗಿ ಗೋವಾ ಸರ್ಕಾರದೊಡನೆ ಮಾತನಾಡಿ ಕಬ್ಬನ್ನು ರವಾನಿಸಿ ಸಮಸ್ಯೆಗೆ ಪರಿಹಾರ ಕೊಡಲಾಗಿದೆ. ಈಗಲೂ ಈ ರೀತಿ ಸಮಸ್ಯೆಗಳಿದ್ದು ತಿಳಿಸಿದರೆ ಪರಿಹಾರ ಒದಗಿಸಲು ತಯಾರು ಎಂದರು.

2002–2003ನೇ ಸಾಲಿನ ಅನುದಾನ ಬೇಡಿಕೆಗಳ ಮೇಲಿನ ಚರ್ಚೆಯಲ್ಲಿ ಸಕ್ಕರೆ ಕುರಿತಂತೆ ವಿಧಾನಸಭೆಯ 24.7.2002ರ ಅಧಿವೇಶನದಲ್ಲಿ[28] ಮಾತನಾಡಿದ

28. ವಿಧಾನಸಭೆಯ ನಡವಳಿಕೆಗಳು., ಸಂಪುಟ 312(24.7.2002) ಪು.764–779

**ಶ್ರೀ ಉಮೇಶ್ ವಿ.ಕತ್ತಿ** ಅವರು, ರಾಜ್ಯದಲ್ಲಿ 180 ರಿಂದ 200 ಲಕ್ಷ ಟನ್ ಕಬ್ಬು ಉತ್ಪಾದನೆ, ಹಿಂದೆ ಕಬ್ಬು ಬೆಳೆದ ರೈತರಿಗೆ ಸಾಲಕೊಟ್ಟು ತೊಂದರೆ ನಿವಾರಣೆ ಮಾಡಿದ್ದು, ಗ್ಯಾಟ್ ಹಾಗು ಲಿಬರಲೈಸೇಷನ್ ಎಫೆಕ್ಟ್‌ನಿಂದ ಸುಮಾರು ಸಾವಿರ ಕೋಟಿ ರೂ ಗಳಷ್ಟು ಸಕ್ಕರೆ ದಾಸ್ತಾನು ಗೋಡೌನ್‌ಗಳಲ್ಲಿರುವುದು, ದಾಸ್ತಾನಿದ್ದೂ ಕಬ್ಬು ಕೊಂಡು ಕಾರ್ಖಾನೆ ಆರಂಭಿಸಿದರೆ ರೈತರಿಗೆ ಹಣ ಕೊಡಲು ಸಾಧ್ಯವಾಗದ ಬಗ್ಗೆ ಮಾಡಬೇಕಾದ ಸರ್ಕಾರದ ಚಿಂತನೆ, ಬ್ಯಾಂಕುಗಳೂ ಮುಂದೆ ಉತ್ಪಾದನೆ ಆಗುವ ಸಕ್ಕರೆಯ ಮೇಲೆ ಸಾಲಕೊಡಲು ಮುಂದೆ ಬರುವ ಸಂಭವವಿಲ್ಲದಿರುವುದು, ನಬಾರ್ಡ್‌ನವರು ಒಂದು ಕಾರ್ಖಾನೆಗೆ ವರ್ಕಿಂಗ್ ಕ್ಯಾಪಿಟಲ್ ಅನ್ನು ನಿಗದಿ ಮಾಡಿದರೆ ಕಬ್ಬನ್ನು ಕ್ರಾಪ್ ಮಾಡಲೇಬೇಕಾಗುವುದು, ಇವೆಲ್ಲ ರಾಜ್ಯದ ಆರ್ಥಿಕ ದೃಷ್ಟಿಯ ಮೇಲೆ ಪರಿಣಾಮ ಬೀರಬಹುದಾದುದು, ಕಬ್ಬಿನ ಬೆಳೆಯಿಂದ ಅಬ್ಕಾರಿ ಮುಖೇನ 2 ಸಾವಿರ ಕೋಟಿ ರೂ. ಬರುವ ಆದಾಯ ಕಳೆದು ಹೋದರೆ ಸರ್ಕಾರಕ್ಕೆ ಒದಗುವ ಕಷ್ಟ, ಆರ್ಥಿಕ ದಿವಾಳಿಯ ಸಂಭವ, ಕಬ್ಬಿನಿಂದ ಬರುವ ಆದಾಯದಲ್ಲಿ ಶೇ. 50ರಷ್ಟನ್ನು ಸಕ್ಕರೆ ಕಾರ್ಖಾನೆಗೆ ತೆಗೆದಿಟ್ಟರೆ ಸಮಸ್ಯೆಗೆ ಪರಿಹಾರ ದೊರಕುವುದು, ಟನ್ ಕಬ್ಬು ನುರಿಸಿದರೆ 200-800 ರೂ. ಆದಾಯ ಬರುವುದು, ಉತ್ಪಾದಿತ ಸಕ್ಕರೆ ಮೇಲೆ ಬಡ್ಡಿ ರಹಿತ ಸಾಲ ನೀಡುವುದು, ಅದರಿಂದ ರೈತ ಬೀದಿಪಾಲಾಗುವುದನ್ನು ತಪ್ಪಿಸಲು ಕೂಡಿಸುವುದು, ಕಬ್ಬು ನುರಿದಾಗ ಪರ್ಚೆಸ್ ಟ್ಯಾಕ್ಸ್, ಸೆಂಟ್ರಲ್ ಎಕ್ಸೈಸ್, ರಾಜ್ಯದ ಅಬ್ಕಾರಿ ಎಲ್ಲದರ ಮೂಲ ಕಬ್ಬಿನ ಮೊಲಾಸಿಸ್ ಆಗಿದ್ದು, ಇವೆಲ್ಲದರ ಮೂಲ ಕಬ್ಬಿನ ಉತ್ಪಾದನೆಯಾದ ಕಾಕಂಬಿ, ಮತ್ತು ಸಾರಾಯಿಯಿಂದ ಆದಾಯ ಒದಗುವುದು, ರಾಜ್ಯದ 140-180 ಲಕ್ಷ ಟನ್ ಕಬ್ಬಿನ ಉತ್ಪಾದನೆಯಲ್ಲಿ ಶೇ.60 ರಷ್ಟು ಬೆಳಗಾಂ ಜಿಲ್ಲೆಯೊಂದರಿಂದಲೇ ಬರುವುದು, ರೈತರಿಗೆ ಕಾರ್ಖಾನೆಗಳು ಹಳೆಬಾಕಿ ಕೊಟ್ಟಿಲ್ಲದಿರುವಲ್ಲಿ ಹೊಸಬಾಕಿ ಕೊಡುವ ಪ್ರಸಂಗ ಬಂದಂತೆ ಕಬ್ಬು ಹೊಸದಾಗಿ ಅರೆಯುವ ಬಗ್ಗೆ ಸರ್ಕಾರ ಗಂಭೀರ ಚಿಂತನೆ ನಡೆಸಲಿ ಎಂದೆಲ್ಲ ಹೇಳಿ ತಮ್ಮ ಮಾತು ಮುಗಿಸಿದರು.

ಸಕ್ಕರೆ ಖಾತೆ ಸಚಿವ ಶ್ರೀ **ಎಂ.ಮಹದೇವ** ಅವರು, ಆವರ್ತನಿಧಿ ಮಾಡಲು ಇರುವ ಕೇಂದ್ರದ ನಿಯಮಗಳು, ಆ ಬಗ್ಗೆ ರಾಜ್ಯ ಸರ್ಕಾರದ ಪ್ರಯತ್ನ, ಕಬ್ಬು ಬೆಳೆಗಾರರಿಗೆ ಆದ್ಯತೆಯಿಂದ ಬಾಕಿ ಪಾವತಿ ಮಾಡಬೇಕಾದ ಫ್ಯಾಕ್ಟರಿಗಳಿಗೆ ಆದೇಶ ನೀಡುವುದು, ಫ್ಯಾಕ್ಟರಿಗಳಲ್ಲಿರುವ 12 ಲಕ್ಷ ಟನ್ ಸ್ಟಾಕ್ ರಿಲೀಸ್ ಮಾಡಲು ಕೇಂದ್ರ ಕ್ರಮ ಕೈಗೊಂಡರೆ ಕೂಡಲೇ ಬ್ಯಾಂಕು ಪಾವತಿಗೆ ಮೊದಲೇ ರೈತರ ಬಾಕಿ

ಕೊಡಲು ಸರ್ಕಾರ ಕೊಟ್ಟಿರುವ ಆದೇಶ ಕುರಿತೆಲ್ಲ ಹೇಳಿದರು. ಶ್ರೀ **ಉಮೇಶ್ ವಿ.ಕತ್ತಿ** ಅವರು ರೈತರಿಗೆ 109 ಕೋಟಿ ರೂ. ಬಾಕಿ ಕೊಡಬೇಕಿರುವುದು, ಕಾರ್ಖಾನೆಗೆ 2500 ಟನ್ ಕಬ್ಬು ಕ್ರಷಿಂಗ್ ಕೆಪಾಸಿಟಿ ಇದ್ದರೆ ಅದಕ್ಕೆ 75 ಕೋಟಿ ರೂ. ಮಾತ್ರ ಸಾಲ ಕೊಡುವುದು ಎಂಬ ನಬಾರ್ಡ್‌ನ ರಿಸ್ಟ್ರಿಕ್ಷನ್, ಹಂಗಾಮು ಆರಂಭವಾಗಿರುವ ಹಾಗು ಆರಂಭವಾಗಲಿರುವ ರಾಜ್ಯದ ಭಾಗಗಳು, ಸಕ್ಕರೆಯಿಂದ ಸರ್ಕಾರಕ್ಕೆ (ಅಬಕಾರಿ, ಕಾಕಂಬಿ, ಸಕ್ಕರೆ ಪರ್ಚೇಸ್ ಟ್ಯಾಕ್ಸ್ ಇತ್ಯಾದಿಗಳಿಂದ) ಬರುವ ಆದಾಯ, ಕೇಂದ್ರ ಸರ್ಕಾರವು ಈ ವಿಷಯದಲ್ಲಿ ಶೇ 50ರಷ್ಟು ಹೊಣೆಯ ಪಾಲುದಾರನಾಗುವುದು, ಇದೆಲ್ಲ ಆಗದಿದ್ದರೆ ರೈತರು ಬೀದಿಪಾಲು, ಕಾರ್ಖಾನೆ ಬಂದ್ ಆಗುವುದು, ಒಂದು ಸಾವಿರ ಕೋಟಿ ಆವರ್ತ ನಿಧಿಯನ್ನು ನಿರ್ವಹಿಸಲೇ ಬೇಕಾಗುವುದು, ರೈತರ ಆಪತ್ತಿನಲ್ಲಿ ನೆರವಾಗಬೇಕಾದ ಅಗತ್ಯ, ಸಕ್ಕರೆ ರಿಲೀಸ್ ಆದರೂ ಮಾರುಕಟ್ಟೆಯಲ್ಲಿ ಹೋಗದಿರುವುದು, ಪ್ರೀಸ್ಟೈಲ್ ಸಕ್ಕರೆಗೆ 1175 ರೂ ಕೊಟ್ಟರೂ ತೆಗೆದುಕೊಳ್ಳಲಾಗದಿದ್ದವರು, ಲೆವಿಸಕ್ಕರೆಗೆ ಬರೇ 10% ಇಟ್ಟು 1243 ರೂ ಬೆಲೆ ನಿಗದಿ ಮಾಡಿದ್ದರೂ ತೆಗೆದುಕೊಳ್ಳುವವರಿಲ್ಲದಿರುವುದು, ರಾಜಕೀಯ ಬೆರೆಸದೆ ಹಾಸನ ಜಿಲ್ಲೆಯ ಶಾಸಕರನ್ನು ಸಭೆ ಕರೆದು ಚರ್ಚಿಸಿ ರೈತರು ಮತ್ತು ಕಾರ್ಖಾನೆಗಳನ್ನು ಉಳಿಸುವಂಥ ಕಾರ್ಯವಾಗಬೇಕು ಎಂದು ನುಡಿದರು. ಶ್ರೀ ಎಂ. ಮಹದೇವ ಅವರು, ಸರ್ಕಾರದಿಂದ, ಸಕ್ಕರೆ ಘಟಕಗಳ ಆಡಳಿತ ವರ್ಗದೊಡನೆ ಮಾತನಾಡುವ ಬಗ್ಗೆ ಹೇಳಿದರು. ಶ್ರೀ ಹೆಚ್.ಎಸ್.ಮಹದೇವ ಪ್ರಸಾದ್ ಅವರು ಕುಂತೂರು ಸಕ್ಕರೆ ಕಾರ್ಖಾನೆ ವಿಷಯ ಹೇಳುತ್ತ, ಕಾರ್ಮಿಕರಿಗೆ ಆಗಿರುವ ತೊಂದರೆ, ರೈತರು ಫ್ಯಾಕ್ಟರಿ ಮುಂದೆ ಜಮಾವಣೆ ಆಗಿ ಫ್ಯಾಕ್ಟರಿ ಓಪನ್ ಮಾಡಿ ಹಣದ ಬಾಕಿ ಕೊಡಿಸಿ ಎನ್ನುತ್ತಿರುವುದು, ಸೀಮೆಎಣ್ಣೆ ಸುರಿದುಕೊಂಡು ರೈತರು ಆತ್ಮಹತ್ಯೆ ಮಾಡಿಕೊಳ್ಳುವಂಥ ಹಂತಕ್ಕೆ ಹೋಗುವ ಸನ್ನಿವೇಶ, ಯಾವ ಫ್ಯಾಕ್ಟರಿಗೆ ಕಬ್ಬು ಒಯ್ದು ಕೊಡಬೇಕು ಎಂಬ ಬಗ್ಗೆ ನಿಖರ ನಿರ್ದೇಶನ ರೈತರಿಗಿಲ್ಲದಿರುವುದು, ರಿವಾಲ್ವಿಂಗ್ ಫಂಡ್ ಅಥವಾ ಸರ್ಕಾರದವತಿಯಿಂದಲೋ ಬಾಕಿ ಹಣದ ಪಾವತಿ ಮಾಡುವುದು ಕುರಿತೆಲ್ಲ ಹೇಳಿ ಕ್ರಮಕ್ಕೆ ಒತ್ತಾಯಿಸಿದರು. ಸಚಿವ ಶ್ರೀ ಎಂ.ಮಹದೇವ ಅವರು ಗಂಗಾವತಿ ಸಕ್ಕರೆ ಕಾರ್ಖಾನೆ ಮುಷ್ಕರದ ವಿಷಯದಲ್ಲಿ ಪರಿಹಾರಕ್ಕೆ ಚರ್ಚಿಸಲು ಸಭೆ ಏರ್ಪಾಡಿಸುವುದು, ಕುಂತೂರು ಸಕ್ಕರೆ ಕಾರ್ಖಾನೆ ಬಂದ್ ಆಗಿರುವಲ್ಲಿ ಪೇಮೆಂಟ್‌ಗಾಗಿ ಸ್ಟ್ರೈಕ್, ಗಲಾಟೆ ಆಗಿರುವುದು ಹಾಗಾಗಿ ಬಣ್ಣರಿ, ಹಾಗೂ ಚಾಮುಂಡೇಶ್ವರಿ ಸಕ್ಕರೆ ಕಾರ್ಖಾನೆಗಳಿಗೆ ಕಬ್ಬನ್ನು ತಾತ್ಕಾಲಿಕವಾಗಿ ಹಾಕಲು ಸರ್ಕಾರದ ಆದೇಶ ನೀಡಲಿರುವುದು, ಕಾರ್ಖಾನೆ ಸಂಬಂಧ ತಂದಿರುವ

ರೋಬೋ ಬ್ಯಾಂಕ್‌ನ ತಡೆಯಾಜ್ಞೆಯನ್ನು ತೆರವು ಗೊಳಿಸಿ ಬಾಕಿ ಪಾವತಿಗೆ ಕ್ರಮ ತೆಗೆದು ಕೊಳ್ಳುವ ಬಗೆಗೆಲ್ಲ ತಿಳಿಸಿದರು. **ಶ್ರೀ ಎ.ಆರ್.ಕೃಷ್ಣಮೂರ್ತಿ** ಅವರು ಸುಪ್ರೀಂಕೋರ್ಟಿಗೆ ಹೋಗಿ ಈ ಕಾರ್ಖಾನೆ ಬಗ್ಗೆ ಪ್ರಸ್ತಾಪಿಸಬೇಕಿತ್ತು ಎಂದಾಗ, ಸಚಿವರು ರೈತರ ಹಿತದೃಷ್ಟಿಯಿಂದ ಸರ್ಕಾರ ಮಧ್ಯೆ ಪ್ರವೇಶಿಸಿದೆ ಎಂದರು. ನಮ್ಮ ಸರ್ಕಾರಿ ವಕೀಲರು ಕೋರ್ಟ್ ದಾವೆಯಲ್ಲಿ ವಿಫಲರಾಗಿರುವಲ್ಲಿ, ಕೇವಲ ರೋಬೋ ಬ್ಯಾಂಕಿನ ಸಾವವಾದ 3.9 ಕೋಟಿ ರೂ ಗಾಗಿ ಕಾರ್ಖಾನೆ ಹಾಗು ರೈತರ ಹಣ ಪಾವತಿಗೆ ಹೀಗೆ ತೊಂದರೆಯಾಗುವುದು ಸರಿಯಲ್ಲ ಎಂದು ಶ್ರೀ ಎ.ಆರ್.ಕೃಷ್ಣ ಮೂರ್ತಿ ಅವರು ನುಡಿದರು. ಸಚಿವರು ಕೂಡಲೇ ಕಾರ್ಖಾನೆ ಬಗ್ಗೆ ಕ್ರಮ ತೆಗೆದುಕೊಳ್ಳುವ ಬಗ್ಗೆ ತಿಳಿಸಿದರು. ಶ್ರೀ ಎ.ಕರಡಿ ಸಂಗಣ್ಣನವರು ಗಂಗಾವತಿ ಸಕ್ಕರೆ ಕಾರ್ಖಾನೆ ಬಗ್ಗೆ ಪ್ರಸ್ತಾಪಿಸಿದರು.

**ಶ್ರೀ ಸುಭಾಷ್ ಕಲ್ಲೂರು** ಅವರು ಬೀದರ್ ಸಕ್ಕರೆ ಕಾರ್ಖಾನೆ ಬಗ್ಗೆ ಹೇಳುತ್ತ ಜಿಲ್ಲೆಯಲ್ಲಿ ಬೆಳೆಯುವ 20 ಲಕ್ಷ ಟನ್ ಕಬ್ಬು, ಇರುವ ಒಂದೇ ಒಂದು ಬೀದರ್ ಸಹಕಾರಿ ಕಾರ್ಖಾನೆ, ಮ್ಯಾನೇಜ್‌ಮೆಂಟಿನವರು ರೈತರಿಂದ ವಸೂಲು ಮಾಡಿಕೊಂಡಿರುವ ಎಕ್ಸ್‌ಟೆನ್‌ಷನ್ ಡಿಪಾಸಿಟ್, ಅದಕ್ಕೆ ಬಡ್ಡಿ ಕೊಡದಿರುವುದು, ರೈತರಿಗೆ 9 ಕೋಟಿ ರೂ ಅನ್ನು ಕಾರ್ಖಾನೆ ಕೊಡಬೇಕಿರುವುದು, ಇರಿಗೇಷನ್ ಬೋರ್‌ವೆಲ್‌ನಿಂದ ಕಬ್ಬು ಬೆಳೆಯುತ್ತಿರುವುದು. ಬರಗಾಲ ಬಂದಿದ್ದು ರೈತರಿಗೆ, ಆಗ ದನಕರುಗಳಿಗೆ ನೀರು ನೆರವು ಒದಗದಿರುವುದು, ಮಹಾರಾಷ್ಟ್ರಕ್ಕೆ ಕಬ್ಬು ಹಾಕಿರುವ ರೈತರಿಗೆ ನಮ್ಮ ದರ 650 ರೂ ಗಳಿದ್ದರೆ, ಅಲ್ಲಿ ಟನ್‌ಗೆ 800 ರೂ ಸಿಕ್ಕಿರುವುದು, ರೈತರಿಗೆ ಕೊಡತಕ್ಕದ್ದನ್ನು ಕೊಡದಿದ್ದರೆ ಬೀದಿಗೆ ಇಳಿದು ಹೋರಾಟ ಮಾಡುವ ಪರಿಸ್ಥಿತಿಗೆ ಕಾರಣವಾಗುವಂಥದ್ದು, ಅಂತಾಗಿ ರೈತರ ಬಾಕಿ ಪಾವತಿಮಾಡುವುದು ಕುರಿತೆಲ್ಲ ಹೇಳಿದರು.

**ಶ್ರೀ ಎ.ಎಸ್.ಗುರುಸ್ವಾಮಿ** ಅವರು, Indian sugar Journal ನಲ್ಲಿ, ಬಂದಿರುವಂತೆ ನಮ್ಮ ಶುಗರ್ ಬಗ್ಗೆ ಡೆಫನೆಟ್ ಪಾಲಿಸಿ ಕೇಂದ್ರ ಹಾಗು ರಾಜ್ಯಗಳಿಗೂ ಇಲ್ಲದಿರುವುದು, ಸ್ಟೇಟ್ ಹಾಗು ಸೆಂಟ್ರಲ್‌ಗಳಿಗೆ ಸಂಬಂಧಿಸಿದ ವಿಷಯ concurrent list ನಲ್ಲಿ ಬರುವಲ್ಲಿ, ಶುಗರ್ ಆ ಲಿಸ್ಟ್‌ನಲ್ಲಿರುವುದು, ಲಕ್ಷ ಟನ್‌ಗಟ್ಟಲೆ ಸಕ್ಕರೆ ಮಾರಾಟಮಾಡದೆ ಹಾಗೆಯೇ ಬಿದ್ದಿರುವುದು. ಯಾವುದೇ ಫ್ಯಾಕ್ಟರಿಯಲ್ಲಿಯೂ ದುಡ್ಡಿಲ್ಲ, ಸಕ್ಕರೆ ಇದೆ; ಮಾರಾಟಕ್ಕಿಟ್ಟರೆ ಕೊಂಡುಕೊಳ್ಳುವವರಿಲ್ಲ, ಸಮಸ್ಯೆಯ ಮೂಲವನ್ನು ಹುಡುಕಬೇಕಿರುವುದು, ನ್ಯಾಷನಲ್, ಇಂಟರ್‌ನ್ಯಾಷನಲ್

ಮಾರುಕಟ್ಟೆಯಲ್ಲಿಯೂ ಸಕ್ಕರೆಗೆ ಬೆಲೆ ಇಲ್ಲವೆಂದರೆ, ಮಾರ್ಕೆಟಿಂಗ್ ಸಿಸ್ಟಮ್ ಬಗ್ಗೆ ಸರ್ಕಾರಕ್ಕೆ ಕಾಳಜಿಯೆ ಇಲ್ಲದಂತೆ ಕಾಣುವುದು, ಸಂಬಂಧಿಸಿದ ಇಂಡಸ್ಟ್ರೀಸ್, ಎಕ್ಸೈಸ್ ವಿದ್ಯುತ್ ಇಲಾಖೆಗಳಲ್ಲಿ ಹೊಂದಾಣಿಕೆ ಹಾಗೂ, ಸಮನ್ವಯ ಸಾಧಿಸಿದರೆ ಮಾತ್ರ ಸಕ್ಕರೆ ಕಾರ್ಖಾನೆ ಸಮಸ್ಯೆ ಬಗೆಹರಿಯುವುದು, ಸೌತ್ ಅಮೇರಿಕೆಯಲ್ಲಿ ಇಡೀ ಸಕ್ಕರೆ ಕಾರ್ಖಾನೆ ಉತ್ಪನ್ನಗಳನ್ನು ಆಲ್ಕೋಹಾಲಿಗೆ ಪರಿವರ್ತಿಸಿ ವಾಹನಗಳನ್ನು ಓಡಿಸಲು ಬಳಸುವರೇ ವಿನಹ ಸಕ್ಕರೆ ಮಾಡುವುದಿಲ್ಲ ಎಂದೆಲ್ಲ ಉದಾಹರಣೆ ಸಹಿತ ಹೇಳಿದರು.

ಈ ದಿನದ ಚರ್ಚೆಯಲ್ಲಿ ಸರ್ವ ಶ್ರೀ ಪ್ರಕಾಶ್.ಬಿ.ಹುಕ್ಕೇರಿ, ಕೆ.ಆರ್.ಮಹಲಿಂಗಪ್ಪ ಶಿವಾನಂದ, ಎಸ್.ಪಾಟೀಲ್, ಡಿ.ಕೆ.ಶಿವಕುಮಾರ್, ಸಚಿವ ಶ್ರೀ. ಎಂ.ಶಿವಣ್ಣ ವಿಶ್ವೇಶ್ವರ ಹೆಗ್ಗಡೆ ಕಾಗೇರಿ, ಉಪಾಧ್ಯಕ್ಷ ಶ್ರೀ ಮನೋಹರ್ ಹೆಚ್. ತಹಸೀಲ್ದಾರ್ ಅವರುಗಳು ಪಾಲ್ಗೊಂಡಿದ್ದರು.

## ವಿಷಯ 19: ಕೋಲಾರ ಜಿಲ್ಲೆಯ ಮಾವಿನ ಫಸಲಿಗೆ ಮಾರುಕಟ್ಟೆಯ ಕೊರತೆ; ಬೆಳೆಗಾರರ ಕಷ್ಟ ನಷ್ಟ

10.3.2003ರ ವಿಧಾನಪರಿಷತ್ತಿನ ಅಧಿವೇಶನದಲ್ಲಿ[29] ಶ್ರೀ ಕೆ.ವಿ. ಸುಬ್ಬಾರೆಡ್ಡಿ ಅವರು, ಕೋಲಾರ ಜಿಲ್ಲೆಯ ಮಾವು ಬೆಳೆಗಾರರಿಗೆ ಮಾರುಕಟ್ಟೆಯ ಕೊರತೆಯಿಂದಾಗಿ ಒದಗಿರುವ ತೊಂದರೆ ಬಗ್ಗೆ ಸಚಿವರ ಗಮನ ಸೆಳೆದರು. ಆಗ ಸಚಿವ ಶ್ರೀ ಎಂ.ಶಿವಣ್ಣ ನವರು ಪ್ರತಿಕ್ರಿಯಿಸುತ್ತ; 2003ನೇ ಸಾಲಿನಲ್ಲಿ 1.30 ಲಕ್ಷ ಹೆಕ್ಟೇರ್ ನಲ್ಲಿ ಸುಮಾರು 7.5 ಲಕ್ಷ ಟನ್ ಮಾವು ಬೆಳೆ ರಾಜ್ಯದಲ್ಲಿ ಆಗಿದೆ ಎಂದರು. ಕೋಲಾರ ಜಿಲ್ಲೆಯಲ್ಲಿ 38 ಸಾವಿರ ಹೆಕ್ಟೇರ್ ಪ್ರದೇಶದಲ್ಲಿ ಪ್ರಸ್ತುತ ವರ್ಷವು 'ಅನ್ ಇಯರ್' ಆಗಿದ್ದು 10 ಪಟ್ಟು ಹೆಚ್ಚು ಮಾವಿನ ಇಳುವರಿಯನ್ನು (ಸುಮಾರು 3 ಲಕ್ಷ ಟನ್) ನಿರೀಕ್ಷಿಸಲಾಗಿದೆ. ಮಾವಿನ ಏರಿಳಿತವನ್ನು ಹೆಚ್ಚು ಫಲದ ಇಳುವರಿ ವರ್ಷವನ್ನು 'ಅನ್'ಇಯರ್' ಕಡಿಮೆಯಾದ ವರ್ಷವನ್ನು 'ಆಫ್'ಇಯರ್' ಎನ್ನಲಾಗುತ್ತದೆ. ಮಾವು ಸಾಮಾನ್ಯವಾಗಿ ಮೇ–ಜೂನ್ ತಿಂಗಳಿಂದ ಮಾರಾಟಕ್ಕೆ ಬರುತ್ತದೆ. ಕೋಲಾರ ಜಿಲ್ಲೆ ಶ್ರೀನಿವಾಸಪುರ ತಾಲ್ಲೂಕು ಮಾವು ಮಾರುಕಟ್ಟೆ ದಕ್ಷಿಣ ಭಾರತದ ಬೃಹತ್ ಸಗಟು ಮಾವಿನ

29. ವಿಧಾನ ಪರಿಷತ್ತಿನ ನಡವಳಿಕೆಗಳು, ಸಂಪುಟ 318(1–2), ಭಾಗ–I (10.3.2003)

ಮಾರುಕಟ್ಟೆ ಆಗಿದೆ. ಬೆಂಗಳೂರು ಅರಮನೆ ಆವರಣದಲ್ಲಿ ಕೃಷಿ ಮಾರುಕಟ್ಟೆ ಇಲಾಖೆ ವ್ಯವಸ್ಥಿತ ಮಾವಿನ ಬೆಳೆ ಮಾರಾಟ ಮಾಂಡಿ ಹಾಗು ಹಾಪ್‌ಕಾಮ್ಸ್ ವತಿಯಿಂದ ಮಾರಾಟ ವ್ಯವಸ್ಥೆ ಕಲ್ಪಿಸಲಾಗಿದೆ. ಮಾವಿಗಾಗಿಯೇ ಒಂದು ಕೃಷಿ ರಫ್ತು ವಲಯವನ್ನು ಪ್ರಾರಂಭಿಸುವ ವಿಚಾರ ಸರ್ಕಾರದ ಪರಿಶೀಲನೆಯಲ್ಲಿದೆ. ರಾಷ್ಟ್ರೀಯ ಹೈನು ಅಭಿವೃದ್ಧಿ ನಿಗಮವು ವೈಟ್‌ಫೀಲ್ಡ್ ಸಮೀಪದ ಕನ್ನಮಂಗಲ ಗ್ರಾಮದಲ್ಲಿ ಬೃಹತ್ ಮಾರುಕಟ್ಟೆ ಸಂಕೀರ್ಣವನ್ನು ನಿರ್ಮಿಸಲಾಗುತ್ತಿದ್ದು ರೈತರ ಮಾರುಕಟ್ಟೆ ಸಮಸ್ಯೆಗಳು ನೀಗುವ ಅವಕಾಶವಾಗಿದೆ. ಮೇ, ಜೂನ್ ತಿಂಗಳಲ್ಲಿ ಮಾವಿನ ಫಸಲಿನ ಆವಕ ಹೆಚ್ಚಾಗುವ ಕಾರಣ ಬೆಲೆ ಕುಸಿತದ ಸಂಭವವಿರುತ್ತದೆ. ಈ ಬಾರಿ ಹೆಚ್ಚಿನ ಇಳುವರಿ ನಿರೀಕ್ಷೆಯಲ್ಲಿ ಯಲಹಂಕ ರೈತರ ಸಂತೆಯಲ್ಲಿ ವಹಿವಾಟಿಗೆ ಕ್ರಮ ಕೈಗೊಳ್ಳಲಾಗುತ್ತಿದೆ. ರೈತರಿಗೆ ನೇರವಾಗಿ ಬೆಂಗಳೂರಿನಲ್ಲಿ ಮಾರಾಟ ಸೌಲಭ್ಯ ಕಲ್ಪಿಸುವ ಬಗ್ಗೆ ಪರಿಶೀಲನೆ ನಡೆದಿದೆ, ಎಂದೆಲ್ಲ ಹೇಳಿದರು. ಶ್ರೀ **ಕೆ.ವಿ.ಸುಬ್ಬಾರೆಡ್ಡಿ** ಅವರು, ಜಿಲ್ಲೆಯ ಎಲ್ಲ ತಾಲೂಕುಗಳಲ್ಲಿ ಎ.ಪಿ.ಎಂ.ಸಿ. ಇದ್ದರೂ ಯಾರೂ ಅಲ್ಲಿಗೆ ಒಯ್ಯುವುದಿಲ್ಲ. ಮನೆಯ ಹತ್ತಿರವೇ ದಳ್ಳಾಳಿಗಳು ಜೋಪಡಿ ಹಾಕಿಕೊಂಡು ಮಾವಿನಕಾಯಿ ಲಾಟ್‌ಅನ್ನು ನೇರವಾಗಿ ವ್ಯಾಪಾರ ಮಾಡುವಲ್ಲಿ ರೈತರುಗಳಿಗೆ ಬೆಲೆ ಹೇಳದೆ ತಾವೇ ಬೆಲೆಯನ್ನು, ನಿರ್ಧರಿಸಿ, ರೈತರು ಇಲ್ಲದಿರುವಾಗ ಮಧ್ಯರಾತ್ರಿ 12 ಗಂಟೆ ಮೇಲೆ ತೂಕ ಮಾಡುತ್ತಾರೆ. ಎ.ಪಿ.ಎಂ.ಸಿ. ಅಧಿಕಾರಿಗಳು ಜೋಪಡಿಗಳಿಗೇ ಹೋಗಿ ಮುದ್ರೆ ಒತ್ತಿ ಬರುತ್ತಾರೆ. ರೈತರಿಗೆ ದಳ್ಳಾಳಿಗಳು ವರ್ಷಾನುಗಟ್ಟಲೆ ಮಾವಿನಕಾಯಿ ದುಡ್ಡನ್ನು ಕೊಡುವುದಿಲ್ಲ. ಅಲ್ಲದೆ ರೈತರ ಮಾವಿನಕಾಯಿ ಲಾಟ್‌ನಲ್ಲಿ ಕೀಳು ಮಾವಿನಕಾಯಿಗಳೆಂದು ತೆಗೆದು ಹಾಕಿ ಅವನ್ನು ಕ್ವಿಂಟಾಲ್‌ಗೆ 100 ರೂ ನಂತೆ ಕೊಳ್ಳುತ್ತಾರೆ. ಉತ್ತರ ಭಾರತಕ್ಕೆ ಈ ಮಾವಿನ ಕಾಯಿಗಳನ್ನು ಬೆರೆಸಿ ಟನ್‌ಗೆ 5–6 ಸಾವಿರ ರೂಗಳಿಗೆ ಮಾರಿ ರೈತರಿಗೆ ಅನ್ಯಾಯವೆಸಗುತ್ತಾರೆ. ವ್ಯಾಪಾರದ ನಂತರ ಕೊಡಬೇಕಾದ 10 ಪರ್ಸೆಂಟ್‌ಗೆ ರೈತರಿಗೆ ರಸೀತಿಯನ್ನು ಕೊಡುವುದಿಲ್ಲ.

ಬೆಂಗಳೂರಿನಲ್ಲಿ ಮಾರ್ಕೆಟ್ ಯಾರ್ಡ್ ಮಾಡಿದರೂ ಸಣ್ಣಪುಟ್ಟ ರೈತರು ಅಲ್ಲಿಗೆ ತರಲು ಸಾಧ್ಯವಾಗದು. ಸಹಕಾರ ಸಂಘ ಮಾಡುತ್ತೇವೆಂದು ರೈತರಿಂದ, ಒಂದೊಂದು ಸಾವಿರ ರೂ. ಷೇರು ಪಡೆದು ಸಂಗ್ರಹಿತ 11 ಲಕ್ಷ ರೂ.ಗಳನ್ನು ತಿಂದು ಹಾಕಿದರು. ರೈತರಿಗೆ ಆಗುವಂಥ ಇಂಥ ಅನ್ಯಾಯ ತಪ್ಪಿಸಬೇಕೆಂದರು. ಶ್ರೀ **ವಿ.ಆರ್.ಸುದರ್ಶನ್** ಅವರು, ಮಾವಿನ ಪ್ರಮಾಣದ ಹೆಚ್ಚಳದ ಕಾರಣ

ಹಾಪ್‌ಕಾಮ್ಸ್, ಮ್ಯಾಂಗೋ ಪ್ರಾಸೆಸಿಂಗ್ ಯೂನಿಟ್ ಅನ್ನು ಮಾಡುವ ಸರ್ಕಾರದ ಕಾರ್ಯಕ್ರಮವಿದಯೇ? ಎಂದು ಪ್ರಶ್ನಿಸಿದರು. ಶ್ರೀ ಕೆ.ವಿ.ಸುಬ್ಬಾರೆಡ್ಡಿ ಅವರು ಮಾವಿನಕಾಯಿ ಮಾರಾಟದಲ್ಲಿ 20 ಕೆ.ಜಿಗೆ 1 ಕೆ.ಜಿಯನ್ನು ದಳ್ಳಾಳಿಗಳಿಗೆ ಸುಮ್ಮನೆ ಕೊಡಬೇಕಾಗುತ್ತದೆ. ಅದಾಗಿ ಮಾರಾಟ ವ್ಯವಸ್ಥೆಯಲ್ಲಿ ರೈತರ ಮುಂದೆಯೇ ಫಸಲು ಹರಾಜು ಹಾಕಿ, ಸಂಜೆಯೊಳಗಾಗಿ ಹಣ ಕೊಡುವ ವ್ಯವಸ್ಥೆ ಮಾಡಿದರೆ ದಳ್ಳಾಳಿಗಳ ಕಾಟ ತಪ್ಪುತ್ತದೆ ಎಂದರು. ಸಭಾಪತಿಗಳು ಈ ಬಗೆಗೆ ಸರ್ಕಾರದ ನಿಲುವನ್ನು ಬಯಸಿದರು. ಶ್ರೀ **ಎಂ.ಶಿವಣ್ಣ** ಅವರು ಈ ಬಗ್ಗೆ ಎ.ಪಿ.ಎಂ.ಸಿ. ಹಾಗೂ ತೋಟಗಾರಿಕಾ ಇಲಾಖಾ ಅಧಿಕಾರಿಗಳ ಸಭೆ ಕರೆದು ಸಮಸ್ಯೆ ಬಗೆ ಹರಿಸಲಾಗುವುದು ಎಂದರು. ಶ್ರೀ ಕೆ.ವಿ. ಸುಬ್ಬಾರೆಡ್ಡಿ ಅವರು ಮಾವಿನಕಾಯಿ ತೂಗಲು ಸೈಜ್‌ಕಲ್ಲುಗಳನ್ನು ಬಳಸುತ್ತಾರೆ ಎಂದರು.

ಶ್ರೀ **ಕೆ.ವಿನಯಚಂದ್ರ** ಅವರು, ಮಾವಿನ ಹಣ್ಣಿನ ಗ್ರೇಡಿಂಗ್ ಸರಿಯಾಗಿ ಮಾಡದೆ ವಾಟೆ ಎಂದು ಹೇಳಿ ಮೋಸ ಮಾಡುತ್ತಾರೆ. ತಮಿಳುನಾಡು, ಆಂಧ್ರದಲ್ಲಿ ಎ.ಪಿ.ಎಂ.ಸಿ. ಯಾರ್ಡಿಗೆ ಬಸ್ಸುಗಳಲ್ಲಿ ರೈತರು ಒಯ್ಯುವ ಮಾಲಿಗೆ ಚಾರ್ಜ್ ಇರುವುದಿಲ್ಲ. ಹೋಗಿಬರಲು ಟಿಕೇಟ್ ಮಾತ್ರ ಇಟ್ಟುಕೊಂಡಿರುತ್ತಾರೆ. ಇದನ್ನು ನಮ್ಮಲ್ಲೂ ಅನುಸರಿಸಬಹುದು ಎಂಬ ಸಲಹೆಯನ್ನು ಸೂಚಿಸಿದರು.

## ವಿಷಯ 20: ರೈತರು ಬೇಸಾಯಕ್ಕಾಗಿ ಸಹಕಾರ ಬ್ಯಾಂಕುಗಳಿಂದ ಪಡೆದ ಸಾಲಕ್ಕೆ ವಿಧಿಸುವ ಶುಲ್ಕಗಳು

11.7.2003ರ ವಿಧಾನ ಪರಿಷತ್ತಿನ ನಡವಳಿಕೆಗಳಲ್ಲಿ[30] ಪಾಲ್ಗೊಂಡು ಶ್ರೀ **ಕೆ.ಎನ್.ರಾಜಣ್ಣನವರು,** ಸಹಕಾರಿ ಸಂಸ್ಥೆಗಳಲ್ಲಿ ರೈತರು ಆಸ್ತಿ ಅಡವಿಟ್ಟು ವ್ಯವಸಾಯಕ್ಕೆ ಸೌಲಭ್ಯ ಪಡೆಯುವಲ್ಲಿ ಸರ್ಕಾರಕ್ಕೆ ತೆರಬೇಕಾದ ಸ್ಟಾಂಪ್‌ಡ್ಯೂಟಿ, ರಿಜಿಸ್ಟ್ರೇಷನ್ ಛಾರ್ಜ್ ಕೊಟ್ಟು, ವಿನಾಯಿತಿ ರಹಿತ ಸಾಲ ಪಡೆಯುವುದು, ಅದೇ ವಾಣಿಜ್ಯ ಉದ್ದೇಶಗಳ ಸಾಲಕ್ಕೆ 50% ವಿನಾಯಿತಿ ಇರುವುದು, ರೈತರಿಗೆ ಕೆಲವೇ ಸೀಮಿತಸಂಸ್ಥೆ ಗಳಿಂದ ಮಾತ್ರ ವಿನಾಯಿತಿ ಕೊಡಲು ಸರ್ಕಾರಿ ಆದೇಶ 2002ರಂದು ಇದ್ದು ಮತ್ತೇ ಆ ವಿನಾಯಿತಿ 5 ವರ್ಷಗಳಿಗೆ ವಿಸ್ತರಿಸಬೇಕಿರುವುದು, ಸರ್ಕಾರಿ ನೌಕರರಿಗೆ ಮಾರ್ಟಗೇಜ್ ಡೀಡ್, ಅಗ್ರಿಮೆಂಟ್ ಡೀಡ್, ಸರ್ವೆಬಾಂಡ್‌ಗಳಿಗೆ,

30. ವಿಧಾನಪರಿಷತ್ತಿನ ನಡವಳಿಕೆಗಳು., ಸಂಪುಟ 321(1-3), ಭಾಗ-I (11.7.2003) ಪು.417-423

ಸ್ಟ್ಯಾಂಪ್‌ಡ್ಯೂಟಿ ಮತ್ತು ನೋಂದಣಿಯಲ್ಲಿ ಪೂರ್ಣ ವಿನಾಯಿತಿಯನ್ನು 1998ರಲ್ಲಿ ಆದೇಶಿಸಿ Bureaucracy ತಮ್ಮ ಪರ ಅನುಕೂಲಗಳನ್ನು ಪಡೆದುಕೊಂಡಿರುವಂತೆ, ರೈತರ ಯಾವುದೇ ಸಾಲಕ್ಕೆ ಯಾವ ರೀತಿಯ ರಿಯಾಯಿತಿಯನ್ನು ಕೊಟ್ಟಿಲ್ಲದಿರುವುದು, ಹೀಗಾಗಿ ದೊಡ್ಡ, ಸಣ್ಣ ರೈತರಾಗಿರಲಿ ಹರಿಜನ ಗಿರಿಜನರಾಗಿರಲಿ ಯಾವುದೇ ರೀತಿಯ ರೈತರಿಗೆ ಯಾವುದೇ ಬಗೆಯ ಬ್ಯಾಂಕಿನಿಂದ ಸಾಲ ಪಡೆಯುವ ಸಂದರ್ಭದಲ್ಲಿ ಸ್ಟ್ಯಾಂಪ್‌ಡ್ಯೂಟಿಯಲ್ಲಿ ರಿಯಾಯಿತಿ ಕೊಟ್ಟು ನೋಂದಾವಣೆ ಶುಲ್ಕ ನಾಮಿನಲ್ ಆಗಿ 100ರೂ ತೆಗೆದುಕೊಂಡು ರಶೀತಿ ಕೊಡುವುದು, ವಾಣಿಜ್ಯ ಬ್ಯಾಂಕ್, ಅಧಿಕೃತ ಹಣಕಾಸು ಸಂಸ್ಥೆ, ಗ್ರಾಮೀಣ ಬ್ಯಾಂಕ್, ಪ್ರಾಥಮಿಕ ಕೃಷಿ ಅಭಿವೃದ್ಧಿ ಬ್ಯಾಂಕ್‌ಗಳಿಂದ ಕೃಷಿ ಅಭಿವೃದ್ಧಿಗಾಗಿ ಪಡೆದ ಸಾಲಕ್ಕೆ ಸಂಪೂರ್ಣ ವಿನಾಯಿತಿಯನ್ನು ಸರ್ಕಾರ ಮತ್ತೆ ಜಾರಿಗೆ ತರುವುದು, ರೈತಾಪಿ ಜನರು ಕೃಷಿಗಾಗಿ ಯಾವುದೇ ಬ್ಯಾಂಕ್‌ನಿಂದ ಸಾಲ ಪಡೆದಾಗ ಸ್ಟ್ಯಾಂಪ್‌ಡ್ಯೂಟಿ ಹಾಕಬಾರದೆಂಬ ಸರ್ಕಾರಿ ಆದೇಶ ಹೋಗಬೇಕು, ಎಂದೆಲ್ಲ ಹೇಳಿ-ತಮ್ಮ ಮನವಿ ಇಟ್ಟರು.

ಕಂದಾಯ ಸಚಿವ ಶ್ರೀ **ಹೆಚ್.ಸಿ.ಶ್ರೀಕಂಠಯ್ಯ** ಅವರು: ರೈತರು, ವಾಣಿಜ್ಯ ಹಾಗೂ ಇತರ ಬ್ಯಾಂಕು, ಸಂಸ್ಥೆಗಳಿಂದ ಪಡೆಯುವ ಆಸ್ತಿ ಅಡಮಾನ ಸಾಲಕ್ಕೆ ಮುದ್ರಾಂಕ ಶುಲ್ಕ ವಿನಾಯಿತಿ 9.7.2002ರಿಂದ 5 ವರ್ಷಗಳ ಅವಧಿವರೆಗೆ ವಿಸ್ತರಿಸಿದ್ದುದು, 1.4.2003 ರಿಂದ ಶೇ.3 ರಷ್ಟು ಮುದ್ರಾಂಕ ಶುಲ್ಕವಿದ್ದುದನ್ನು ಎಲ್ಲಾ ದಸ್ತಾವೇಜುಗಳಿಗೆ ಶೇ. 05ಕ್ಕೆ ಇಳಿಸಿರುವುದು, ಹಾಗೂ ಈ ಗಣನೀಯ ಕಡಿತದ ಕಾರಣ ಸಾಲಕ್ಕೆ ಅಡಮಾನ ಮಾಡುವ ಸಂದರ್ಭದಲ್ಲಿ ತೆರಬೇಕಾದ ಮುದ್ರಾಂಕ ಮತ್ತು ನೋಂದಣಿ ಶುಲ್ಕ ರಿಯಾಯಿತಿಯನ್ನು, ಹಿಂದಕ್ಕೆ ಪಡೆದಿರುವುದು ಕುರಿತೆಲ್ಲ ಹೇಳಿ ಶೇ. 0.5 ರಂತೆ ಒಂದು ಲಕ್ಷ ರೂಪಾಯಿಗಳ ಸಾಲಕ್ಕೆ 500 ರೂ. ಮಾತ್ರ ಅಡಮಾನ ಪತ್ರಕ್ಕೆ ಹಾಕಿರುವುದು ನಾಮಿನಲ್ ಶುಲ್ಕವೇ ಆಗಿರುವ ಕಾರಣ ಶ್ರೀ **ಕೆ.ಎನ್.ರಾಜಣ್ಣನವರು** ಚರ್ಚಿಸಲು ಬಂದರೆ ಆ ಬಗ್ಗೆ ಪರಿಶೀಲಿಸುವ ಬಗ್ಗೆಯೂ ತಿಳಿಸಿದರು.

ಶ್ರೀ ಕೆ.ಎನ್.ರಾಜಣ್ಣ ಅವರು, ಮಾತನಾಡಿ, ಸಚಿವರು ವಿನಾಯಿತಿ ಕೊಡಲಾಗಿದೆ ಎಂದಿರುವ ಬಗ್ಗೆ ಒಪ್ಪದೆ, ಹಿಂದೆ ರಿಯಾಯಿತಿ ಕೊಟ್ಟಿದ್ದುದನ್ನು ವಾಪಸ್ಸು ಪಡೆದುಕೊಳ್ಳಲಾಗಿದೆ ಎಂದರು. ರೈತರಿಗೆ ಕೊಡಬೇಕಾದ ರಿಯಾಯಿತಿಯ ಬಗ್ಗೆ ಮೊದಲು ಹೇಳಿದ್ದ ಮಾತನ್ನೆ ಶ್ರೀ ರಾಜಣ್ಣನವರು ಪುನರ್‌ಪ್ರತಿಪಾದಿಸುತ್ತ

ರಾಜ್ಯದ ಎಲ್ಲಾ ಭಾಗಗಳ ರೈತರಿಗೆ ರಿಯಾಯಿತಿ ಕೊಟ್ಟರೆ ವರ್ಷಕ್ಕೆ 10 ಕೋಟಿ ರೂ. ಆದರೂ ಕೂಡ, ನಷ್ಟವೆನಿಸುವುದಿಲ್ಲ. ರೈತರ ಸಲುವಾಗಿ ಇದಕ್ಕಿಂತ ಒಳ್ಳೆಯ ಕೆಲಸ ಯಾವುದು ಇದೆ ಎಂದು ಪ್ರಶ್ನಿಸಿದರು. ಶ್ರೀ ಹೆಚ್.ಸಿ.ಶ್ರೀಕಂಠಯ್ಯ ಅವರು ಪ್ರತಿಕ್ರಿಯಿಸುತ್ತ, ಶ್ರೀ ರಾಜಣ್ಣ ಅವರು ಕೇಳಿರುವುದಕ್ಕೆ ನೂರು ರೂ. ವಿನಾಯಿತಿ ಕೊಡಲು ಸಿದ್ಧ; ಆದರೆ ಅವರು ನಾಲ್ಕು ನೂರು ರೂ. ವಿನಾಯಿತಿ ಕೇಳುತ್ತಿದ್ದಾರೆ, ಎಂದುದಕ್ಕೆ ಸಭಾಪತಿಯವರು, ನಿಮ್ಮ ಮನಸ್ಸಿನಲ್ಲಿ ಹಾಗಿದ್ದರೂ ಅಧಿಕಾರಿಗಳ ಮನಸ್ಸಿನಲ್ಲಿ ಏನಿದೆ ಎಂಬ ಬಗ್ಗೆ ಮಾನ್ಯ ಸದಸ್ಯರಿಗೆ ಅನುಮಾನವಿದೆ ಎಂದರು. ಆಗ ಶ್ರೀ ಹೆಚ್.ಸಿ.ಶ್ರೀಕಂಠಯ್ಯ ಅವರು ಅಧಿಕಾರಿಗಳನ್ನು ಕರೆದು ಆ ಬಗ್ಗೆ ತೀರ್ಮಾನ ಮಾಡಲಾಗುವುದು ಎಂದರು.

**ಶ್ರೀ ಬಸವರಾಜ್ ಪಾಟೀಲ್** ಇಟಗಿ ಅವರು, ತಮ್ಮ ಅನುಭವವನ್ನು ಹೇಳುತ್ತ, ತುಂಗಭದ್ರ ಗ್ರಾಮೀಣ ಬ್ಯಾಂಕಿನಲ್ಲಿ ಸಾಲಕ್ಕೆ ಹೋದಾಗ ಎರಡು ಲಕ್ಷ ರೂ ಸಾಲಕ್ಕೆ 10 ಸಾವಿರ ರೂ. ಖರ್ಚಾಗುವ ಸಂದರ್ಭ ನಿರ್ಮಾಣವಾಗಿದೆ. ಮೊದಲು 2 ಸಾವಿರ ಖರ್ಚಾಗುತ್ತಿದ್ದುದು ಈಗ ಶೇಕಡ 5 ರಷ್ಟು ಖರ್ಚಾಗುತ್ತಿದೆ. ರೈತರ ಆತ್ಮಹತ್ಯೆಯೂ ಸಾಕಷ್ಟು ಆಗಿದೆ. ಸರ್ಕಾರ ಪ್ರತಿಯೊಂದನ್ನು ಟ್ಯಾಕ್ಸ್ ರಿಯಾಯಿತಿ ಕೊಟ್ಟರೂ ರೈತರಿಗೆ ಮೊದಲು ಟ್ಯಾಕ್ಸೇಷನ್ ಹಾಕುತ್ತಾರೆ. ಶ್ರೀ ರಾಜಣ್ಣನವರು, ರೈತರು ಯಾವುದೇ ಸಾಲಕ್ಕೆ ಫ್ಲಾಟ್‌ರೇಟ್ ನೂರು ರೂ. ಇಡಿ ಎಂಬ ಸಲಹೆ ಕೊಟ್ಟಿದ್ದಾರೆ. ಮಾನ್ಯ ಸಚಿವರು ಪರಿಶೀಲಿಸಲು ಭರವಸೆಕೊಟ್ಟಿರುವಲ್ಲಿ ಆ ಬಗ್ಗೆ ಬಹಳಷ್ಟು ಗಮನಹರಿಸಬೇಕೆಂದು ಶ್ರೀ ಪಾಟೀಲ್ ಅವರು ಕೇಳಿಕೊಂಡರು. ಅವರ ಮಾತಿನಲ್ಲಿ ಸಾಲದ ಇಂಥ ಸಂದರ್ಭಗಳೂ ರೈತರ ಆತ್ಮಹತ್ಯೆಗೆ ಒಂದು ಕಾರಣವಾಗುತ್ತದೆ ಎಂಬ ಅಭಿಪ್ರಾಯವಿದ್ದಂತಿತ್ತು.

## ವಿಷಯ 21: ರೈತರ ಕೃಷಿ ವಿಷಯಕ ವಿವಿಧ ಸಮಸ್ಯೆಗಳು

28.7.2003ರ ವಿಧಾನ ಸಭಾಧಿವೇಶನದಲ್ಲಿ[31] 2003–04 ಸಾಲಿನ ಮುಂಗಡ ಪತ್ರದ ಮೇಲಿನ ಚರ್ಚೆಯಲ್ಲಿ **ಶ್ರೀ ಚನ್ನಿಗಪ್ಪ** ಅವರು ಮಾತನಾಡುತ್ತ; ಕೃಷಿ ಇಲಾಖೆಗೆ ಬಜೆಟ್‌ನಲ್ಲಿ ಇಟ್ಟಿರುವ ಹಣ ಬಹಳ ಕಡಿಮೆ ನಿಗಮ ಮಂಡಳಿಗೆ ಅಥವಾ ಕೃಷಿ ಇಲಾಖೆಯ ಮೂಲಕ ರೈತರಿಗೆ ಕೊಡುತ್ತಿರುವ ಶೇ. 70 ರಷ್ಟು ಬೀಜ ಕಳಪೆ ದರ್ಜೆಯವಾಗಿರುವುದು, ಗೊಬ್ಬರ ಹಾಗು ಸಬ್ಸಿಡಿ ಕೊಟ್ಟಿಲ್ಲದಿರುವುದು,

31. ವಿಧಾನಸಭೆಯ ನಡವಳಿಕೆಗಳು., ಸಂಪುಟ 7(1–5), (28.7.2003), ಪು.900–910

ರೈತರ ಮಕ್ಕಳಿಗೆ ಅಸಮರ್ಪಕ ವಿದ್ಯಾ ವ್ಯವಸ್ಥೆ, ರೈತರ ಮಕ್ಕಳಿಗೆ ಹಾಲಿ ಪರಿಸ್ಥಿತಿಯಲ್ಲಿ, ಉದ್ಯೋಗ ನೀಡಿಕೆಯ ಅಗತ್ಯ ರೈತರು ಬೆಳೆದ ಬೆಳೆಗೆ ಉತ್ತಮ ಬೆಲೆ ಕೊಡಲು ಸರ್ಕಾರ ಅಳವಡಿಸಬೇಕಾದ ಕಾನೂನು, ಬಳಸುವ ನೇಗಿಲು ಕುಳ ಇತ್ಯಾದಿ ಕೃಷಿ ಉಪಕರಣಗಳಿಗೆ ಸುಲಭ ಬೆಲೆ ನಿಗದಿ, ರೈತ ಬೆಳೆದ ತರಕಾರಿ, ಹಣ್ಣು, ರಾಗಿ, ಭತ್ತ ಇತ್ಯಾದಿ ಯಾವುದೇ ಪದಾರ್ಥಕ್ಕೂ ಸ್ಥಿರ ಬೆಲೆ ಇಲ್ಲದೆ ಆರ್ಥಿಕ ದುರ್ಬಲತೆ ಒದಗಿ ಆತ್ಮಹತ್ಯೆಗೆ ಜೀವನ ಜಿಗುಪ್ಸೆಯಿಂದ ಒಳಗಾಗುತ್ತಿರುವುದು, ಕೃಷಿ ಸಂರಕ್ಷಣಾ ಘಟಕಗಳನ್ನು ತೆರೆಯಲು ಸಬ್ಸಿಡಿ ಕೊಡುವುದು, ಬಡ್ಜೆಟ್ ಭಾಷಣದಲ್ಲಿ ಮಾನ್ಯ ಮುಖ್ಯಮಂತ್ರಿಗಳು ಘೋಷಿಸಿದ ರೈತರ ವಿಮಾ ಮೊತ್ತ ಇನ್ನೂ ಸಿಕ್ಕದಿರುವುದು, ಬರಗಾಲವಿರುವಲ್ಲಿ ಆ ಮೊತ್ತವನ್ನು ಬಿಡುಗಡೆ ಮಾಡಿ ರೈತರ ಆರ್ಥಿಕ ಪರಿಸ್ಥಿತಿ ಸುಧಾರಿಸುವುದು; ನೂರಕ್ಕೆ ನೂರರಷ್ಟು ಹನಿ ನೀರಾವರಿಗೆ ನೆರವು ಕೊಡುವಲ್ಲಿ ಎಲ್ಲಾ ಜಿಲ್ಲೆಗಳಿಗೂ ಅದು ಎಲ್ಲಾ ರೈತರಿಗೂ ಸಿಗುವಂತೆ ಅನುಕೂಲಿಸುವುದು, ಯಾವುದೇ ಹೋಬಳಿಯಲ್ಲಿ ರೈತ ಸೇವಾಕೇಂದ್ರವು ಸಮರ್ಪಕವಾಗಿ ಕೆಲಸ ಮಾಡದಿರುವುದು, ರೈತರ ಜಮೀನಿಗೆ ಅಧಿಕಾರಿಗಳು ಹೋಗಿ ಕೆಲಸದ ಬಗ್ಗೆ ತಿಳುವಳಿಕೆ ಕೊಡುವುದು, ವಿದ್ಯುತ್ ಸರಬರಾಜು ರೈತರಿಗೆ ಸರಿಯಾಗಿ ಇಲ್ಲದಿರುವುದು, ಬೆಳೆದ ಬೆಳೆಗೆ ಬೆಲೆ ಇಲ್ಲದಿರುವುದು, ರೈತರ ತೆಂಗಿನ ತೋಟದ ತೆಂಗಿನ ಮರಗಳಿಗೆ ನುಸಿರೋಗಕ್ಕೆ ಔಷಧಿ ಸಿಂಪರಣೆ, ಇಂಜೆಕ್ಷನ್ ಮಾಡಿದರೂ 90% ನಷ್ಟು ಒಣಗಿ ಹೋಗಿರುವುದು ಕುರಿತೆಲ್ಲ ಹೇಳಿದರು.

ಸಚಿವ ಶ್ರೀ ಎಂ.ಶಿವಣ್ಣನವರು ಪ್ರತಿಕ್ರಿಯಿಸುತ್ತ, ವಿಜ್ಞಾನಿಗಳ ಕೊಟ್ಟಿರುವ, ಸೂಚಿಸಿರುವ ಔಷಧಿಗಳನ್ನು ಮಾತ್ರ ನುಸಿರೋಗದ ತೆಂಗಿನ ಮರಗಳಿಗೆ ಕೊಟ್ಟಿರುವ ಬಗ್ಗೆ ತಿಳಿಸಿದರು. **ಶ್ರೀ ಚನ್ನಿಗಪ್ಪ** ಮತ್ತು **ಶ್ರೀ ಶಿವಾನಂದ ಎಸ್.ಪಾಟೀಲ್** ಅವರು ಹೇಳಿದ ಮಾತುಗಳಿಗೆ, ಮೋನೋಕ್ರೋಟೋಪಾಸ್ ಔಷಧಿಯನ್ನು ಅನೇಕ ವರ್ಷಗಳಿಂದ ಗಿಡಗಳಿಗೆ ಹೊಡೆದಿರುವುದನ್ನು ಹಾಗು ಕಪ್ಪುತಲೆ ಹುಳುಗಳಿಗೆ ಈ ಔಷಧಿಯನ್ನುಳಿದು ಬೇರಾವುದು ಇಲ್ಲವೆಂದು ಸಾಬೀತಾಗಿದೆ ಎಂದು ತಿಳಿಸಿದರು. ಶ್ರೀ ಶಿವಾನಂದ ಎಸ್.ಪಾಟೀಲ್ ಅವರು ಆ ಔಷಧಿ ಬ್ಯಾನ್ ಆಗಿದೆ; ದಾಖಲೆ ನೋಡಿ ಎಂದರು. ಶ್ರೀ ಚನ್ನಿಗಪ್ಪ ಅವರು ನೂರಕ್ಕೆ 70 ರಷ್ಟು ರೈತರು ಆ ತೋಟಗಳಿಂದ ಜೀವನ ಮಾಡುತ್ತಿರುವಲ್ಲಿ ಸರ್ಕಾರ ಅನುಕೂಲ ಮಾಡಿಕೊಡಬೇಕು ಎಂದರು.

**ಶ್ರೀ ಬಿ.ಎನ್. ಬಚ್ಚೇಗೌಡರು;** ಸಚಿವರು, ಇರುವ 8 ಕೋಟಿ ಮರಗಳಿಗೆ ಔಷಧಿ ಕೊಟ್ಟು ನಿಯಂತ್ರಿಸಲು, ಸಾಧ್ಯವಿಲ್ಲ. ಔಷಧಿಯೂ ಫಲಕಾರಿಯಾಗಿಲ್ಲ ಎಂದು ಕೊಟ್ಟ ಉತ್ತರ ಕೇಳಿ, ಲಕ್ಷಾಂತರ ಸಸಿ ತೆಗೆದಿರುವವರಿಗೆ ಪರಿಹಾರ ಕೊಡಿ ಎಂದರು ಅದು ಸಾಧ್ಯವಿಲ್ಲ ಎಂದುದನ್ನೂ ಸಭೆಯ ಗಮನಕ್ಕೆ ತಂದರು. ಮತ್ತು ತಮ್ಮಲ್ಲಿರುವುದು 5 ಎಕರೆ ಅಲ್ಲ 5 ಸಾವಿರ ಮರವಷ್ಟೆ ಎಂದರು.

**ಶ್ರೀ ಸಿ.ಚನ್ನಿಗಪ್ಪ** ಅವರು ಮಾತನಾಡಿ, ಸರ್ಕಾರ ತನ್ನ ಆರ್ಥಿಕ ಪರಿಸ್ಥಿತಿಯನ್ನು ಪರಿಗಣಿಸಿ ತೆಂಗಿನ ಮರ ಕಳಕೊಂಡ ರೈತರಿಗೆ ನೆರವಾದರೆ ಸ್ವಾಗತಾರ್ಹ; ಸರ್ಕಾರ ಕೊಡುವ ಪರಿಹಾರ ರಾಜ್ಯದ ಎಲ್ಲ ತೋಟದ ಬೆಳೆಗಾರರಿಗೆ ಸಿಗಬೇಕು. ಕಾಯಿ ಬಿಡದ ಕಳಪೆ ಸಸಿಗಳ ಬದಲು ತೆಂಗು, ಸಪೋಟ, ಮಾವಿನ ಉತ್ತಮ ಸಸಿಗಳನ್ನು ಹಂಚಬೇಕು. ಎಸ್.ಸಿ.ಎಸ್.ಟಿ. ಜನಾಂಗಕ್ಕೆ ತೋಟಗಾರಿಕೆ ಉಚಿತ ಸಸಿಗಳು, ಗೊಬ್ಬರ, ಬೋರ್‌ವೆಲ್, ಕರೆಂಟ್ ಕೊಡುತ್ತಿರುವುದು ಸ್ವಾಗತಾರ್ಹ. ಆದರೆ ಆ ಜನಾಂಗದ ನಿಜವಾದ ರೈತರಿಗೆ ನೂರು ಪರ್ಸೆಂಟ್ ಸಬ್ಸಿಡಿ ಕೊಡಬೇಕು. ಕಾರಣ ಹಳ್ಳಿಗಾಡಿನಲ್ಲಿ ಅವರು ನೂರಕ್ಕೆ 70% ತೋಟಗಳನ್ನು ಅತ್ಯುತ್ತಮವಾಗಿ ಮಾಡಿದ್ದಾರೆ. ತಾಲೂಕಿಗೆ ಕೊನೆಪಕ್ಷ 200–250 ಬೋರ್‌ವೆಲ್‌ಗಳನ್ನು ಅವರಿಗೆ ಕೊಟ್ಟರೆ, ರಾಜಕೀಯವಾಗಿ ಅಲ್ಲ ಆರ್ಥಿಕವಾಗಿ ಅವರನ್ನು ಮುಂದೆ ತಂದ ಸಾಧನೆ ಸರ್ಕಾರದ್ದಾಗುತ್ತದೆ. ಇನ್ನು ಬರಗಾಲದ ಕಾರಣ ವಿದ್ಯುತ್ ಪಂಪ್‌ಸೆಟ್ಟಿಗೆ ಬಿಲ್‌ಮೇಲೆ ರೈತರ ಬಡ್ಡಿ ಮನ್ನಾ; ವಸೂಲಾತಿ ಮುಂದಕ್ಕೆ ಹಾಕುವುದು ಸೋಲಾರ್‌ನಿಂದ ಇಡುವಲ್ಲಿ ಪಂಪ್‌ಸೆಟ್‌ಗಳಿಗೆ ನೂರಕ್ಕೆ ನೂರರಷ್ಟು ಸಬ್ಸಿಡಿ ಕೊಡುವುದು, ವಿದ್ಯುಚ್ಛಕ್ತಿ ಕಡಿಮೆ ಬಳಕೆ ಆಗುವುದು, ಕುರಿತೆಲ್ಲ ಹೇಳಿದರು.

**ಶ್ರೀ ಡಿ.ವಿ.ಸದಾನಂದ ಗೌಡರು** ರೈತರ ಬೆಳೆಸಾಲದ ಮೇಲಿನ ಬಡ್ಡಿಯನ್ನು ಗಣನೀಯ ಇಳಿಸುವುದು, 50 ಸಾವಿರ ರೂ.ವರೆಗೆ ಶೇ.9 ಕ್ಕಿಂತ ಹೆಚ್ಚು ನಿಗದಿಪಡಿಸದಿರುವುದು 2 ಲಕ್ಷ ರೂಗಳವರೆಗೆ ಅತ್ಯಂತ ಕಡಿಮೆ ಬಡ್ಡಿಯಲ್ಲಿ ರೈತರಿಗೆ ಸಾಲಕೊಡುವುದು ಎಂದು ಪ್ರಧಾನಮಂತ್ರಿಗಳು ಹೇಳಿರುವ ಬಗ್ಗೆ ಗಮನ ಸೆಳೆದರು. **ಶ್ರೀ ಬಿ.ಎನ್.ಬಚ್ಚೇಗೌಡರು,** ಮಾನ್ಯ ಸದಾನಂದಗೌಡರ ಮಾತು ಷೆಡ್ಯೂಲ್ಡ್ ಬ್ಯಾಂಕ್‌ಗೆ ಮಾತ್ರ ಅನ್ವಯವಾಗಿ, ಅದರಲ್ಲಿ ಲೋನ್ ತೆಗೆದುಕೊಂಡಿರುವವರಿಗೆ ಮಾತ್ರ 9 ಪರ್ಸೆಂಟ್ ಬಡ್ಡಿ ಆಗಿರುತ್ತದೆ. ಅದು ಎಲ್ಲರಿಗೂ ಸಿಗುವಂತಾಗಬೇಕು. 2 ಲಕ್ಷ ರೂಗಳ ಮೇಲಿನ ಬಡ್ಡಿ ಪರಿಶೀಲನೆಯಲ್ಲಿದೆಯೇ ವಿನಾ ತೀರ್ಮಾನವಾಗಿಲ್ಲ ಎಂದರು.

ಶ್ರೀ ಅರಗ ಜ್ಞಾನೇಂದ್ರ ಅವರು, ಕಾಸ್ಟ್ ಆಫ್ ಪ್ರೊಡಕ್ಷನ್-ಉತ್ಪಾದನಾವೆಚ್ಚವನ್ನು ತಗ್ಗಿಸಲು ಪ್ರಧಾನಮಂತ್ರಿಗಳ ಕರೆ, ಹಾಗು ಬಡ್ಡಿ ದರ ಕಡಿಮೆಮಾಡಲು 2 ಸಾವಿರ ಕೋಟಿ ರೂ.ಗಳನ್ನು ಕೇಂದ್ರವು ಕೊಡುತ್ತದೆಂದು ಹೇಳಿರುವುದು, ಷೆಡ್ಯೂಲ್ಡ್ ಬ್ಯಾಂಕ್ ಅಲ್ಲದೆ ಪೋಸ್ಟ್ ಆಫೀಸ್‌ಗಳಿಂದಲೂ ರೈತನಿಗೆ ಬೇಕಾಗಿರುವ ಸಾಲ ಕೊಡುವ ಬಗ್ಗೆ ಹೇಳಿರುವ ಕಾರಣ ಆ ಬ್ಯಾಂಕ್‌ಗಳು ಬಡ್ಡಿ ದರವನ್ನು ಕಡಿಮೆ ಮಾಡಿರುವುದು ಕುರಿತೆಲ್ಲ ಹೇಳಿದರು. ಶ್ರೀ ಡಿ.ವಿ. ಸದಾನಂದ ಗೌಡರು, ದಿನಾಂಕ 31.3.2003 ರಂದು ಕರ್ನಾಟಕ ರಾಜ್ಯದ ಸಹಕಾರಿ ಸಂಘಗಳ ನಿಬಂಧಕರು ಎಲ್ಲಾ ರೈತಾಪಿ ಜನಗಳ ಸಹಕಾರಿ ಸಾಲದ ಮೇಲಿನ ಬಡ್ಡಿ ಮನ್ನಾ ಮಾಡಿರುವುದು, ತತ್ಫಲವಾಗಿ ವಿಶೇಷತಃ ದಕ್ಷಿಣ ಕನ್ನಡ, ಉಡುಪಿ, ಕೊಡಗು ಭಾಗದ ಎಲ್ಲಾ ರೈತರು ಸಾಲದ ಅಸಲನ್ನು ಮರುಪಾವತಿ ಮಾಡಿದುದು, ಆದರೆ ಕೇಂದ್ರ ಸಹಕಾರಿ ಬ್ಯಾಂಕ್‌ನಿಂದ ಬಂದ ಸುತ್ತೋಲೆಯೊಂದರ ಕಾರಣ, ರೈತರು ದ.ಕನ್ನಡ ಜಿಲ್ಲೆ ಬರಪೀಡಿತ ಅಲ್ಲ ಎಂದು ಬಡ್ಡಿ ಮನ್ನಾ ಅವರಿಗೆ ಅಲ್ಲಿ ಅನ್ವಯವಾಗದೆ ಮತ್ತೆ ಬಡ್ಡಿಯನ್ನು ಮರುಪಾವತಿ ಮಾಡಬೇಕು, ಎಂದು ರೈತರಿಗೆ ನೋಟೀಸ್ ಜಾರಿ ಮಾಡಲಾರಂಭಿಸಿರುವುದು, ರೈತರು ಅಸಲು ಪಾವತಿ ಮಾಡಿದ್ದೇವೆಂದುಕೊಂಡು ಬ್ಯಾಂಕ್‌ನ ಸದಸ್ಯತ್ವ ರದ್ದು ಮಾಡಿಕೊಂಡಿದ್ದು ಅವರ ಬಳಿ ಬಾಂಡ್ ಇಲ್ಲದ ಕಾರಣ ಬಡ್ಡಿ ವಸೂಲಾತಿ ಸಾಧ್ಯವಾಗದಿರುವುದು ಕುರಿತೆಲ್ಲ ಹೇಳಿ ಈ ಕಾರಣ ಈ ಹಿಂದೆ ಇದ್ದಂಥ ಸುತ್ತೋಲೆ (ಬಡ್ಡಿ ಹಣ ಮನ್ನಾಸಾಲದ ಹಣದ ಮರು ಪಾವತಿ) ಮತ್ತೆ ಮುಂದುವರಿಸಲು ಕೃಷಿ ಆಯುಕ್ತರಿಗೆ ಮಾನ್ಯ ಮುಖ್ಯಮಂತ್ರಿಯವರ ಆದೇಶ ನೀಡಲು ವಿನಂತಿಸಿದರು. ಶ್ರೀ ಸಿ.ಚನ್ನಿಗಪ್ಪ ಅವರು, ಬರಗಾಲದ ಕಾರಣ ರೈತರು ಸಾಲತೀರಿಸಲಾಗದಿರುವುದು, ಯಾವ ರೀತಿಯ ಬೆಳೆಯೂ ಕೈಗೆ ಬರದಿರುವುದು, ರೈತರಿಗಾಗಿಯೇ ಇರುವ ಪಿ.ಎಲ್.ಡಿ. ಬ್ಯಾಂಕ್, 16 ಪರ್ಸೆಂಟ್ ಬಡ್ಡಿ ದರದಲ್ಲಿ ಸಾಲ ಕೊಡುತ್ತಿರುವಲ್ಲಿ ಬಡ್ಡಿ ದರ ಕಡಿಮೆ ಮಾಡಲು ಒತ್ತಾಯಿಸುವುದು, ರೈತರ ಜಮೀನಿನ ಪಹಣಿ ಮತ್ತು ಪಟ್ಟದ ವಿವರಗಳನ್ನು ಒಳ್ಳೆಯ ಕಂಪೂಟರ್‌ಗಳ ಮೂಲಕ ಕೊಡಿಸುವತ್ತ ಸರ್ಕಾರ ಗಮನಹರಿಸುವುದು, ರೈತ ಹಣ ಕಟ್ಟಿದ 24 ಗಂಟೆಯೊಳಗೆ ಅವನಿಗೆ ರೆಕಾರ್ಡ್ಸ್ ಒದಗಿಸಿಕೊಡುವ ವ್ಯವಸ್ಥೆ ಮಾಡುವುದು, ರೈತರ ಮಕ್ಕಳಿಗೆ ಉದ್ಯೋಗಾವಕಾಶ, ತಾಂತ್ರಿಕ ಹಾಗೂ ಮೆಡಿಕಲ್ ಪೋಸ್ಟ್‌ಗಳಲ್ಲಿ ಮೀಸಲಾತಿಗಾಗಿ ಅನುಕೂಲಕರ ಕಾನೂನು ತರುವುದು, ಗ್ರಾಮಪಂಚಾಯಿತಿ, ತಾಲೂಕು, ಹಾಗು ಜಿಲ್ಲಾ ಪಂಚಾಯಿತಿ ಕೊಡುವಂಥ ಅನುದಾನ ಸದುಪಯೋಗವಾಗುವಂತೆ, ಅವುಗಳ ಸದಸ್ಯರಿಗೆ ತಿಳುವಳಿಕೆ ಕೊಡುವ ವ್ಯವಸ್ಥೆ ಮಾಡುವುದು ಕುರಿತೆಲ್ಲ ಸಲಹೆಗಳನ್ನು ಮಂಡಿಸಿದರು.

## ವಿಷಯ 22: ಬೆಳೆ ವಿಮೆ ಹಣ ಪಾವತಿ ಲೋಪ

28.6.2004ರ ವಿಧಾನಸಭಾಧಿವೇಶನದಲ್ಲಿ[32] ಶ್ರೀ **ಸಿ.ಎಂ.ಉದಾಸಿ** ಅವರು ರೈತರ ಸಮಸ್ಯೆಗಳ ಬಗ್ಗೆ ಪ್ರಸ್ತಾಪ ಮಾಡುತ್ತಾ: 2002ರ ಬರ ಪರಿಹಾರದ ಹಣ ಅಂದರೆ 27 ಕೋಟಿ ರೂ. ಗಳಷ್ಟು ಹಿಂಗಾರು ಬೆಳೆ ವಿಮೆ ಪರಿಹಾರದ ಹಣ 2003 ರ ಜೂನ್ 30ರೊಳಗೆ ದೊರಕಬೇಕಾದ್ದುದು ದೊರೆತಿಲ್ಲ. 27 ಕೋಟಿ ರೂ. ಮಂಜೂರಾಗಿದೆ ಎನ್ನಲಾಗಿತ್ತು. ರಾಜ್ಯಸರ್ಕಾರ ತನ್ನ ಪಾಲಿನ ವಂತಿಗೆ ಕಟ್ಟಿಲ್ಲವಾದ ಕಾರಣ ಬೆಳೆ ವಿಮೆ ಪರಿಹಾರ 2002–03ನೇ ಸಾಲಿನದು ಸಿಗುತ್ತಿಲ್ಲ. ಆ ಸಾಲಿನ ಮುಂಗಾರು ಬೆಳೆ ವಿಮೆ ಪರಿಹಾರದಲ್ಲಿ ಸುಮಾರು 8 ಕೋಟಿ ರೂ ಬಾಕಿ ಉಳಿದು ಪರಿಹಾರದ ಹಣ ಪಾವತಿಯಾಗುತ್ತಿಲ್ಲ. 2003–04ನೇ ಸಾಲಿನಲ್ಲಿ ಸುಮಾರು 2 ಲಕ್ಷ ಜನ ರೈತರಿಗೆ ಕರ್ನಾಟಕ ರಾಜ್ಯದಾದ್ಯಂತ 'ಬೆಳೆ ವಿಮೆ'ಯನ್ನು 931 ಕೋಟಿ ರೂ. ಮಾಡಿಸಲಾಗಿದೆ. ಮೂರು ವರ್ಷಗಳ ಸತತ ಬರಗಾಲದ ಕಾರಣ ಬೆಳೆ ವಿಮೆ ಪರಿಹಾರ 450 ಕೋಟಿ ರೂ. ಗಳಿಗಿಂತಲೂ ಹೆಚ್ಚು ದೊರೆಯಬೇಕಾಗಿದೆ. ಸರ್ಕಾರದ ಪಾಲಿನವಂತಿಕೆ ಕಟ್ಟಿಲ್ಲದ ಕಾರಣ ಅದು ದೊರೆತಿಲ್ಲ. ರೈತರು ಬೆಳೆ ವಿಮೆ ಮಾಡಿಸಲು indemnity (ಪರಿಹಾರಭದ್ರತಾ ನಿಧಿ) ಮಾಡಬೇಕಿದ್ದು, ಅದನ್ನು ಶೇ.90 ರಿಂದ 60ಕ್ಕೆ ಇಳಿಸಿದೆ. ವಿಮೆ ಕಂತಿನ ಹಣವನ್ನು ಹೆಚ್ಚಿಸಿದೆ. ವಿಮೆ ಹಣದ ಕಾರಣದಿಂದ, ರಾಜ್ಯದಾದ್ಯಂತ ಹಿಂಗಾರಿ ಬೆಳೆ ವಿಮೆ ಮಾಡಿದಂಥ 11 ಲಕ್ಷ ಜನ ರೈತರಿಗೆ, ಮುಂಗಾರು ಬೆಳೆ ವಿಮೆ ಮಾಡಿದಂಥ 7 ಲಕ್ಷ ಜನ ರೈತರಿಗೆ ಪರಿಹಾರ ಹಣ ಸಿಗುತ್ತಿಲ್ಲ. ಸರ್ಕಾರದ ನಿರ್ಲಕ್ಷ್ಯ ಹೀಗೆಯೇ ಮುಂದುವರಿದರೆ ಉಗ್ರಹೋರಾಟಕ್ಕೆ ದಾರಿ ಆಗುತ್ತದೆ. 2002–03ನೇ ಸಾಲಿನಲ್ಲಿ ಬೆಳೆ ವಿಮೆ ಹಣಕ್ಕಾಗಿ ಹೋರಾಟ ನಡೆದಾಗ ಹಣ ಪಾವತಿಯಾಗದೇ ಪ್ರತಿಭಟನೆ ಹೆಚ್ಚಿ ಅನೇಕರು ಜೈಲಿಗೆ ಹೋಗುವಂಥ ಪರಿಸ್ಥಿತಿ ನಿರ್ಮಾಣವಾಯಿತು. 192 ಜನ ರೈತರು ಈ ಹಣಕ್ಕಾಗಿ ನನ್ನ ಜಿಲ್ಲೆಯಲ್ಲಿ ಹೋರಾಟ ಮಾಡಿ ಜೈಲಿಗೆ ಹೋದರು, ಎಂದರು. ಶ್ರೀ ಎಂ.ಪಿ.ಪ್ರಕಾಶ್ ಸಚಿವರಿಂದ ನಾನು ಉತ್ತರ ಬಯಸುವೆ ಎಂದರು. ಸಚಿವ ಶ್ರೀ **ಎಂ.ಪಿ. ಪ್ರಕಾಶ್** ಅವರು ಪ್ರತಿಕ್ರಿಯಿಸುತ್ತ, ಹಿಂಡಲಗಾ ಜೈಲಿನಲ್ಲಿ ಹೋರಾಟಗಾರರು ಶಿಕ್ಷೆಯನ್ನು ಅನುಭವಿಸಿದುದು ಈ ಹೋರಾಟ ರಾಜಕೀಯವಾಗಿರುವಂಥ ರೈತರ ಹೋರಾಟವಾದ ಕಾರಣ, ಸಂಬಂಧಿಸಿದ ಎಲ್ಲ

32. ವಿಧಾನಸಭೆಯ ನಡವಳಿಕೆಗಳು., ಸಂಪುಟ 5(1–4), (28.6.2004) ಪು. 137–141

ಮೊಕದ್ದಮೆಗಳ ವಾಪಸಾತಿ ಬಗ್ಗೆ ಸರ್ಕಾರದ ಚಿಂತನೆ, ರೈತರಿಗೆ ಕೊಡಬೇಕಾದ ಹಣದಲ್ಲಿ 27 ಕೋಟಿ ರೂ.ಗಳನ್ನು ಶೀಘ್ರವಾಗಿ ಬಿಡುಗಡೆ ಮಾಡುವುದು, 930 ಕೋಟಿ ರೂ.ಗಿಂತ ಹೆಚ್ಚಿಗೆ ಆಗುವುದೇನಿದೆ ಅಂದರೆ ಪ್ರೀಮಿಯಂ ಹೆಚ್ಚಿಸುವುದು ವೈಜ್ಞಾನಿಕ ಅಲ್ಲದ ಕಾರಣ ಕೇಂದ್ರವು ಅಂಥ ಒಂದು ಯೋಜನೆಯನ್ನು ರೂಪಿಸಬೇಕಿರುವುದು; ಮಾನ್ಯ ಎಸ್.ಆರ್. ಬೊಮ್ಮಾಯಿಯವರು ಕೇಂದ್ರ ಸಚಿವರಾಗಿದ್ದಾಗ ಬಿಜಾಪುರದಲ್ಲಿ ಈ ಬಗ್ಗೆ ನಡೆಸಿದ ಈ ಪ್ರಯತ್ನ ಸಮರ್ಪಕವಾಗಿರುವುದು, ವೈಜ್ಞಾನಿಕವೆನಿಸಿರುವುದು; ಮಳೆ ಅವಲಂಬಿಸಿರುವ ರೈತ ಬಹಳ ಕಾಲ ಕಷ್ಟ ಎದುರಿಸಿರುವ ಕಾರಣ, ಸರ್ಕಾರ ಕೊಡಬೇಕಾದ ಬಾಕಿಯನ್ನು ಹಂತ ಹಂತವಾಗಿ ಬಿಡುಗಡೆ ಮಾಡಲಿರುವುದು; ಮಾನ್ಯ ಮುಖ್ಯ ಮಂತ್ರಿಗಳು ಬಂದ ಕೂಡಲೆ ಬೆಳೆ ವಿಮೆ ಸಂಬಂಧ ರೈತ ಮುಖಂಡರು ಸಭೆ ಕರೆಯುವುದು ಕುರಿತೆಲ್ಲ ಹೇಳಿದರು.

ಶ್ರೀ ಸಿ.ಎಂ. ಉದಾಸಿ ಅವರು, 7 ಲಕ್ಷ ಜನ ರೈತರಿಗೆ 730 ಕೋಟಿ ರೂ.ಗಳ ಬೆಳೆ ವಿಮೆ ಮಾಡಿ ಸಾಲ ತೀರಿಸಲು ಡ್ಯೂಡೇಟ್ ಮಾರ್ಚ್ 30 ಆಗಿತ್ತು; 2003–04ನೆ ಸಾಲಿನ ಮುಂಗಾರು ಬೆಳೆ ವಿಮೆಯ ಪರಿಹಾರದ ಹಣ ಆ ದಿನದೊಳಗೆ ಸಿಗಬೇಕಿತ್ತು. ಅದು ಮುಗಿದು ಮೂರು ತಿಂಗಳಾಗಿದೆ. ಪರಿಹಾರ ಸಿಕ್ಕಿಲ್ಲ. ಹಿಂದಿನ ಒಂದು ವರ್ಷದ ಹಿಂಗಾರು ಬೆಳೆ ವಿಮೆ ಪರಿಹಾರವಾದ 11 ಲಕ್ಷ ರೂ. ಬಾಕಿ ಕೊಟ್ಟಿಲ್ಲ. ಬರದಿಂದ ಕಂಗೆಟ್ಟಿರುವ ರೈತರಿಗೆ ತೊಂದರೆ ತಪ್ಪಿಸಲು ಈ ಬಾಕಿಗಳನ್ನು ಎಂದು ಸರ್ಕಾರ ಕೊಡುತ್ತದೆ? ಎಂಬ ಬಗೆಗೆಲ್ಲ ಕೇಳಿದರು. ಶ್ರೀ ಎಂ.ಪಿ. ಪ್ರಕಾಶ್ ಅವರು ಸಂಪನ್ಮೂಲಗಳ ಕೊರತೆ, ಚುನಾವಣೆ ಸಂದರ್ಭವಾಗಿ, ನೀತಿ ಸಂಹಿತೆಯ ಕೆಳಗೆ ಹಣ ಬಿಡುಗಡೆ ಮಾಡಬಾರದೆಂದಿರುವುದು, ವಿಳಂಬಕ್ಕೆ ಕಾರಣವಾಗಿದೆ. ಶೀಘ್ರವೇ ಹಣವನ್ನು ಬಿಡುಗಡೆ ಮಾಡಲಾಗುವುದು ಎಂದರು.

ಈ ಹಿಂದೆ 16.1.2004ರ ವಿಧಾನಸಭಾ ನಡವಳಿಕೆಗಳಲ್ಲಿ (ಸಂ.2, ಭಾಗ.4) ಶ್ರೀ **ರೇವುನಾಯಕ್ ಬೆಳಮಗಿ** ಅವರು, ಕಳೆದ ಸಲ ರೈತರಿಗೆ ಬೆಳೆ ವಿಮೆಗಾಗಿ ಕೊಟ್ಟಿರುವುದರಲ್ಲಿ ಜೇವರ್ಗಿಗೆ 80% ಗುರುಮಿಠ್‌ಕಲ್ ಹಾಗೂ ಯಾದ್‌ಗಿರಿಯಲ್ಲಿ ಅನುಕ್ರಮವಾಗಿ 85 ಮತ್ತು 90 ಪರ್ಸೆಂಟ್ ಬೆಳೆ ವಿಮಾ ಹಣ ಕೊಟ್ಟಿದ್ದಾರೆ. ಅದೇ ಅಳಂದ ಮತ್ತು ಗುಲ್ಬರ್ಗ ತಾ. ರೈತರಿಗೆ ಕೇವಲ 18 ರಿಂದ 20 ಪರ್ಸೆಂಟ್‌ನಷ್ಟು ಬೆಳೆ ವಿಮೆ ಹಣ ಕೊಟ್ಟಿರುವುದು, ತಾರತಮ್ಯಕ್ಕೆಡೆಯಾಗಿದೆ. ಬರಗಾಲದ ಕಾರಣ ದನಗಳು ಕಸಾಯಿ ಖಾನೆಗೆ ಹೋಗುತ್ತಿವೆ. ಕೃಷಿ ಅಧಿಕಾರಿಗಳು ಹೇಳುವ, ಮೇವು

ಕಳುಹಿಸಿದ ಬಗ್ಗೆ ಅಂಕಿ ಅಂಶಗಳು ಮಾತ್ರ ಇವೆ ವಿನಾ ಅವು ಎಲ್ಲಿಗೆ ಹೋದುವು ಎಂಬ ಬಗ್ಗೆ ಗೊತ್ತಿಲ್ಲ. ಹಳ್ಳಿಗೆ ನಾವು ಹೋದರೆ ರೈತರು ಘೇರಾವು ಮಾಡುತ್ತಿದ್ದಾರೆ. ಈ ಕಾರಣ ಪ್ರತಿ ಎರಡುಗ್ರಾಮ ಪಂಚಾಯಿತಿಗೊಂದು ಗೋಶಾಲೆ ಆರಂಭಿಸಿ ರೈತರ ರಕ್ಷಣೆಗೆ ಬರಬೇಕು, ಎಂದೆಲ್ಲ ಬೆಳೆ ವಿಮೆ ವಿಷಯವನ್ನು ಮಾತಾಡುವಾಗ ತಿಳಿಸಿದರು.

## ವಿಷಯ 23: ನೀರಿನ ಸಮಸ್ಯೆ

16.7.2002ರ ವಿಧಾನಸಭಾಧಿವೇಶನದಲ್ಲಿ[33] ಶ್ರೀ ಜಗದೀಶ ಶೆಟ್ಟರ್ (ವಿರೋಧ ಪಕ್ಷದ ನಾಯಕರು) ಅವರು ಮಾತನಾಡುತ್ತ, ತಮಿಳುನಾಡು, ಟ್ರಿಬ್ಯುನಲ್ ಅವಾರ್ಡಿಗೆ ಮರ್ಯಾದೆ ಕೊಡದೆ, ಸುಪ್ರೀಂ ಕೋರ್ಟಿಗೆ ಹೋಗಿ, ಕರ್ನಾಟಕವು ಕಾವೇರಿ ನೀರು ಬಿಡಬೇಕೆಂದು ಒತ್ತಾಯ ಮಾಡುತ್ತಿರುವುದು, ಕಾವೇರಿ ನದಿ ಪ್ರದೇಶದಲ್ಲಿ ಮಳೆ ಸರಿಯಾಗಿ ಆಗದಿರುವ ಕಾರಣ, ಜಲಸಂಪನ್ಮೂಲ ಸಚಿವರು ತಮಿಳುನಾಡಿಗೆ ನೀರು ಬಿಡಲು ಆಗದೆಂದಿರುವುದು, ಪತ್ರಿಕೆಗಳಲ್ಲಿ ಕಬಿನಿ ಜಲಾಶಯದಿಂದ 16 ಸಾವಿರ ಕ್ಯೂಸೆಕ್ಸ್ ನೀರು ಬಿಡುಗಡೆ ಎಂದು ರೈತರಿಗೆ ಭಯಾನಕ ಸುದ್ದಿಯಾಗಿ ಪ್ರಕಟವಾಗಿರುವುದು, ಗರಿಷ್ಠ ಮಟ್ಟ 2884 ಅಡಿ ಇದ್ದು 2281 ಅಡಿ ನೀರು ಸೋಮವಾರದ ವೇಳೆಗೆ ಶೇಖರವಾಗಿ, ತಮಿಳುನಾಡು ಒತ್ತಾಯಕ್ಕೆ ಮಣಿದು ನೀರು ಬಿಟ್ಟಿದ್ದಾರೆ ಎಂಬ ಆಪಾದನೆ ಮಾಡಬೇಕಾದ ಸಂದರ್ಭ ಹಾಗು ರಾಜ್ಯದ ರೈತರ ಹೊಲಗದ್ದೆಗಳಿಗೆ ನಾಲಾಗಳಿಗೆ ನೀರು ಬಿಡುವ ಬದಲು ತಮಿಳುನಾಡಿಗೆ ಬಿಡುವುದು ಸರಿಯಾಗದೆ ಸರ್ಕಾರದ ಸ್ಪಷ್ಟನೆ ಬೇಕಾಗಿರುವುದು, ಕುರಿತೆಲ್ಲ ಹೇಳಿದರು.

ಶ್ರೀ **ಪಿ.ಜಿ.ಆರ್.ಸಿಂಧ್ಯಾ** ಅವರು: ಕಳೆದ ಮೂರು ವರ್ಷಗಳಿಂದ ಕಾವೇರಿ ಜಲಾನಯನ ಪ್ರದೇಶದಿಂದ ತಮಿಳುನಾಡಿಗೆ ಬಿಟ್ಟಿರುವ 150 ಟಿ.ಎಂ.ಸಿ. ನೀರು, ಹಾಗು ಹಾಲಿ ವರ್ಷದಲ್ಲಿ ಹಾಗೆ ಬಿಡತಕ್ಕ ಪರಿಸ್ಥಿತಿ ಇಲ್ಲದಿರುವ ಬಗ್ಗೆ ಭಾರಿ ನೀರಾವರಿ ಸಚಿವರಿಂದ ಮಾಹಿತಿ ಪಡೆದದ್ದು, ಈ ಪರಿಸ್ಥಿತಿ ಕುರಿತು ಸರ್ವಪಕ್ಷಗಳ ನಾಯಕರೊಡನೆ ಸಚಿವರು ಸಮಾಲೋಚಿಸುವ ಬಗ್ಗೆ ಹೇಳಿದರೂ ಆ ಪ್ರಕ್ರಿಯೆ ಆರಂಭವಾಗಿಲ್ಲದಿರುವುದು, 16 ಸಾವಿರ ಕ್ಯೂಸೆಕ್ಸ್ ನೀರನ್ನು ಬಿಟ್ಟಿದ್ದೂ, ಹನಿ

---

33. ವಿಧಾನಸಭೆಯ ನಡವಳಿಕೆಗಳು., ಸಂಪುಟ 5(1ರಿಂದ2), ಭಾಗ–I (16.7.2002) ಪು. 306–309

ನೀರೂ ಬಿಟ್ಟಿಲ್ಲವೆಂದು ತಪ್ಪು ಮಾಹಿತಿಯನ್ನು ಸಚಿವರು ಕೊಟ್ಟಿರುವುದು, ಕಬಿನಿ ಜಲಾಶಯದಿಂದ ಜಲವು, ಹೆಗ್ಗಡದೇವನ ಕೋಟೆ, ನಂಜನಗೂಡು, ಟಿ.ನರಸೀಪುರ, ಕೊಳ್ಳೇಗಾಲ, ಚಾಮರಾಜ ನಗರ ತಾಲೂಕುಗಳಿಗೆ ಹೋಗುವಲ್ಲಿ ಆಗುತ್ತಿರುವ ಅನುಕೂಲ, ಫೆಬ್ರುವರಿಯಿಂದ ಏಪ್ರಿಲ್‌ವರೆಗೆ ಬಲದಂಡೆ ನಾಲಾ ಕಾಲುವೆಯ ರಿಪೇರಿ ಮಾಡಬೇಕಾದ್ದು, ಆಗಿಲ್ಲದಿರುವುದು, ಆ ಕಾಮಗಾರಿ ಕೆಲಸಗಳು ಅಪೂರ್ಣವಾಗಿರುವುದರಿಂದ ನೀರು ಬಿಡುಗಡೆ ಮಾಡಲಾಗದಿರುವುದು, ಕಾವೇರಿ ಟ್ರಿಬ್ಯುನಲ್ ಫೈನಲ್ ಅವಾರ್ಡ್ ಕೊಡಬೇಕಿರುವ ಸನ್ನಿವೇಶದಲ್ಲಿ, ನೀರನ್ನು ಇದೇ ರೀತಿ ಬಿಡುತ್ತಾ ಹೋದರೆ ತೀರ್ಮಾನ ಏನಾಗಬಹುದು ಎಂಬ ಬಗ್ಗೆ ಸರ್ಕಾರ ವಿಚಾರ ಮಾಡಬೇಕಿರುವುದು, ಇಡೀ ಕಬಿನಿ ಜಲಾಶಯದಲ್ಲಿ ಸಿಗುವ 65 ಟಿ.ಎಂ.ಸಿ. ಯಲ್ಲಿ ಹಾಲಿ ಬಳಸಿಕೊಂಡಿರುವ 35 ಟಿ.ಎಂ.ಸಿ. ಅಲ್ಲದೆ ಉಳಿದಿರುವುದನ್ನು ಬಳಸಿಕೊಳ್ಳಬೇಕಿರುವುದು ಕಬಿನಿ ಸೆಕೆಂಡ್ ಸ್ಟೇಜ್‌ಗೆ ಸರ್ವೆ ಮಾಡಿಸಲಿರುವುದು, ಆ ಕೆಲಸವಾಗುವವರೆವಿಗೆ ಕೇರಳದಲ್ಲಿ ಸ್ವಲ್ಪ ಮಳೆಯಾದರೂ ತಕ್ಷಣವೆ ಹರಿದು ಹೋಗುವ ಕಾರಣ ಟ್ರಿಬ್ಯೂನಲ್‌ನವರಿಗೆ ಕಾವೇರಿ ಜಲಾನಯನ ಪ್ರದೇಶದಲ್ಲಿ ನೀರು ಹರಿಯುತ್ತಿದೆ ಎಂಬ ಭಾವನೆ ಬರುವುದು, ಕಬಿನಿ ಜಲಾಶಯದಿಂದ ಬೆಂಗಳೂರಿಗೆ ನೀರು ಬರುವಂತೆ ಕಾಲುವೆಗಳ ಕೆಲಸ ಮುಗಿಯುವ ಕಾಲ ಇತ್ಯಾದಿಗಳನ್ನು ಹೇಳಬೇಕಿರುವುದು, 20ನೇ ತಾರೀಖಿನೊಳಗೆ ನೀರು ಬಿಡದಿದ್ದರೆ ರೈತರು ತಮಗೆ ತೊಂದರೆ ಎಂದು ಸತ್ಯಾಗ್ರಹ ಮಾಡಹೊರಟಿರುವುದು ಈ ಕಾರಣ ನಮಗೆ ಅಗತ್ಯವಿರುವ ನೀರನ್ನು ಉಳಿಸಿಕೊಳ್ಳಬೇಕಿರುವುದು, ಕುರಿತೆಲ್ಲ ಪ್ರಸ್ತಾಪಿಸಿದರು. ಸಚಿವರು ಶ್ರೀ ಡಿ.ಬಿ. ಚಂದ್ರೇಗೌಡರು, ಈ ಬಗ್ಗೆ ನಿಖರ ಮಾಹಿತಿ ಪಡೆದು ಹೇಳಿಕೆ ಕೊಡುವ ಬಗ್ಗೆ ತಿಳಿಸಿದರು.

## ವಿಷಯ 24: ಕಾವೇರಿ ಜಲಾನಯನ ಪ್ರದೇಶದ ರೈತರ ಸಮಸ್ಯೆ

25.3.2003ರ ವಿಧಾನ ಸಭೆಯ ನಡವಳಿಕೆಗಳಲ್ಲಿ[34] ಪಾಲ್ಗೊಂಡು ಶ್ರೀ ಪಿ.ಜಿ.ಆರ್.ಸಿಂಧ್ಯಾ ಅವರು, ಮಂಡ್ಯ ಜಿಲ್ಲೆಯ ರೈತರ ಸಮಸ್ಯೆ ಕುರಿತಂತೆ, ರಾಜ್ಯದ ಹಿರಿಯ ನಾಯಕ ಶ್ರೀ ಜಿ.ಮಾದೇಗೌಡರ ಅಧ್ಯಕ್ಷತೆಯಲ್ಲಿ, ವಿಪಕ್ಷ ನಾಯಕರು, ಹಿರಿಯನಾಯಕ ಶ್ರೀ ಬಿ.ಸೋಮಶೇಖರ್, ಶ್ರೀ ಪುಟ್ಟಣ್ಣಯ್ಯ, ಮತ್ತು ಶ್ರೀ ನಂಜುಂಡ ಸ್ವಾಮಿ ಕೂಡಿ ನಡೆಸಿದ ಸಭೆ, ಮಾನ್ಯ ಮುಖ್ಯಮಂತ್ರಿಯವರು ರೈತರ ಹಿತ ರಕ್ಷಣೆ

34. ವಿಧಾನ ಸಭಾ ನಡವಳಿಕೆಗಳು, ಸಂಪುಟ 4 (1-3) ಭಾಗ-I, (25.3.2003) ಪು. 52-54

ಮಾಡುವ ಭರವಸೆಯನ್ನು ಮಾನ್ಯ ರಾಜ್ಯಪಾಲರ ವಂದನಾ ನಿರ್ಣಯ ಸಂದರ್ಭದಲ್ಲಿ ಕೊಟ್ಟದ್ದು; ಮಂಡ್ಯ ಜಿಲ್ಲೆಯಲ್ಲಿ 2 ಲಕ್ಷ 5 ಎಕರೆ ನೀರಾವರಿ ಪ್ರದೇಶವಿದ್ದು, ಈಗಾಗಲೇ ಕಡಿದು ಹಾಕಿರುವುದು ಬಿಟ್ಟು 2ನೇ ಬೆಳೆಯಾಗಿ 85 ಸಾವಿರ ಎಕರೆ ಕೂಳೆ ಕಬ್ಬು ಬೆಳೆದು ನಿಂತಿರುವುದು, ಮೇ ತಿಂಗಳ ಕೊನೆಯವರೆಗೆ ನಾಲ್ಕು ಕಟಾವು ಮಾಡಲು ತಲಾ 4 ಟಿ.ಎಂ.ಸಿ. ನಂತೆ 16 ಟಿ.ಎಂ.ಸಿ. ನೀರು ಬೇಕಿರುವುದು, ಕೇವಲ 1.5. ಟಿ.ಎಂ.ಸಿ. ನೀರು ಸ್ಟೋರೇಜ್ ಇದ್ದು 320 ಕ್ಯೂಸೆಕ್ಸ್ ಇನ್‌ಪ್ಲೋ ಮಾತ್ರ ಇರುವಲ್ಲಿ ಸುಮಾರು 800 ಕೋಟಿ ರೂ.ನಷ್ಟು ಬೆಳೆ ಹಾನಿ ಆಗುವುದು, ಈ ಹಿನ್ನೆಲೆಯಲ್ಲಿ ಏಪ್ರಿಲ್ 14ನೇ ತಾರೀಖಿನಿಂದ ರೈತರು ಮಂಡ್ಯದಿಂದ ಜಾಥಾ ಹೊರಟು ಮಾನ್ಯ ರಾಜ್ಯಪಾಲರು ಮತ್ತು ಮುಖ್ಯಮಂತ್ರಿಗಳನ್ನು ಭೇಟಿ ಮಾಡಲಿರುವುದು ಕುರಿತೆಲ್ಲ ಹೇಳಿ ಚರ್ಚೆಗೆ ಅವಕಾಶ ಮಾಡಲು ವಿನಂತಿಸಿದರು.

(ವಿಪಕ್ಷನಾಯಕ) **ಶ್ರೀ ಜಗದೀಶ್ ಶೆಟ್ಟರ್** ಅವರು ಮೇಲಿನ ಅಂಶಗಳನ್ನು ಬೆಂಬಲಿಸುತ್ತ, ರೈತರ ರ್‍ಯಾಲಿ ಬರುವ ಬಗ್ಗೆ, ಕಾವೇರಿ ಬೆಲ್ಟ್‌ನಲ್ಲಿ ಕೃತಕ ಬರಗಾಲ ನಿರ್ಮಾಣವಾಗಿ ನೀರು ಬಿಡಲಾಗದಿರುವುದು, ಸರಿಯಾದ ವ್ಯವಸ್ಥೆ ಆಗದಿದ್ದರೆ ರೈತರು ದಂಗೆ ಏಳುವ ಬಗ್ಗೆ ಹಾಗೂ ರೈತರ ಆಕ್ರೋಶ, ಅದಾಗಿ ಮಾಡಬೇಕಾದ ರೈತರ ಹಿತರಕ್ಷಣೆ, ರೈತರು ಬೆಳೆ ಕಳೆದುಕೊಂಡಾಗ ಪರಿಹಾರ ಕೊಡಲು ಸರ್ಕಾರವು ಕಾವೇರಿ ನಿಗಮವನ್ನು ಮಾಡಿದ್ದು, ಸಾಲ ಮನ್ನಾ ಮಾಡುವುದು ಕುರಿತೆಲ್ಲ ಚರ್ಚಿಸ ಬೇಕೆಂದರು.

## ವಿಷಯ 25: ಕಾವೇರಿ ನದಿ ನೀರಿನ ಹಂಚಿಕೆ

**ಶ್ರೀ ವಾಟಾಳ್ ನಾಗರಾಜ್** ಅವರು 14.6.2004ರ ವಿಧಾನ ಸಭೆಯ ನಡವಳಿಕೆಗಳಲ್ಲಿ ಪಾಲ್ಗೊಂಡು[35] ಕಾವೇರಿಯ ಬಗ್ಗೆ ಪ್ರಸ್ತಾಪಿಸಿ ಮಾನ್ಯ ಮುಖ್ಯ ಮಂತ್ರಿಗಳು ತಮಿಳುನಾಡಿಗೆ ನೀರು ಬಿಡುವುದಿಲ್ಲವೆಂದು ಸದನಕ್ಕೆ ಮೊದಲು ತಿಳಿಸಿ ನಂತರ ಹೊರಗೆ ಪ್ರಕಟ ಮಾಡಬೇಕಿತ್ತು ಎಂದರು. **ಶ್ರೀ ಜೆ.ಸಿ.ಮಾಧುಸ್ವಾಮಿ** ಯವರು ಈ ಮಾತಿಗೆ ಒತ್ತಾಸೆ ನೀಡಿದರು. ಶ್ರೀ ವಾಟಾಳ್ ನಾಗರಾಜ್ ಅವರು ಮತ್ತೆ ಮಾತನಾಡುತ್ತ ತಮಿಳುನಾಡಿನಿಂದ ಬಂದ ನಿಯೋಗವು ಕೇಳಿರುವ, ಹೇಳಿರುವ ವಿಷಯವನ್ನೂ ಸದನಕ್ಕೆ ತಿಳಿಸಬೇಕು, ಎಂದರು. ವಿಪಕ್ಷ ನಾಯಕ ಶ್ರೀ **ಬಿ.ಎಸ್.ಯಡಿಯೂರಪ್ಪ** ಅವರು ಸದನದ ಸದಸ್ಯರು ಪ್ರಸ್ತಾಪ ಮಾಡಿರುವ ವಿಷಯ,

35. ವಿಧಾನ ಸಭಾ ನಡವಳಿಕೆಗಳು. ಸಂಪುಟ (1–5), (14.6.2004), ಪು.125–29

ತಮಿಳುನಾಡಿಗೆ ನಿಯೋಗ ಮುಖ್ಯಮಂತ್ರಿಗಳನ್ನು ಭೇಟಿ ಮಾಡಿರುವುದು, ರಾಜ್ಯದ ನಿಲುವು ಸ್ಪಷ್ಟವಾಗಬೇಕಿರುವುದು; ಈ ಕಾರಣ ವಿಪಕ್ಷನಾಯಕನಾಗಿ ನಿಯೋಗವನ್ನು ಭೇಟಿ ಮಾಡಲಾಗದಿದ್ದುದು, ಕೆ.ಆರ್.ಎಸ್.ನಲ್ಲಿ ನೀರಿಲ್ಲದಿದ್ದರೂ, ಕೇಂದ್ರದ ಮೇಲೆ ಒತ್ತಡ ತಂದು ನೀರು ಬಿಡಿಸಿ ಕೊಳ್ಳುವ ಸಂಚು ನಡೆದಿರುವುದು, ಕರ್ನಾಟಕದ ಕಾವೇರಿ ಬೇಸಿನ್‌ನಲ್ಲಿ ಮಳೆ ಇಲ್ಲದೆ, ತಮಿಳುನಾಡಿನಲ್ಲಿ ಮಳೆ ಆಗುತ್ತಿರುವುದು, ಈ ಬಗ್ಗೆ ಸಮಾಲೋಚನೆಗೆ ಪ್ರತಿಪಕ್ಷದವರನ್ನು ವಿಶ್ವಾಸಕ್ಕೆ ತೆಗೆದುಕೊಳ್ಳುವುದು, ನಮ್ಮಲ್ಲಿ ಮೂರು ವರ್ಷದಿಂದ ಬರಗಾಲದಿಂದ ತತ್ತರಿಸಿ, ಜಲಾಶಯದಲ್ಲಿಯೂ ನೀರು ಇಲ್ಲದಿರುವುದು, ತಮಿಳು ನಾಡಿನಲ್ಲಿ ಮಳೆಯಾಗುತ್ತಿರುವ ಸಂದರ್ಭದಲ್ಲಿಯೂ ಯಾವ ಕಾರಣಕ್ಕೂ ಒಂದು ಹನಿ ನೀರು ಬಿಟ್ಟರೂ ನಮ್ಮ ರೈತರಿಗೆ ತೊಂದರೆ ಆಗುವ ಕಾರಣ, ಅದು ಆಗಗೊಡದಂತೆ ನೋಡಿಕೊಳ್ಳುವ ಹೊಣೆ ಮಾನ್ಯ ಮುಖ್ಯಮಂತ್ರಿಗಳ ಮೇಲಿರುವುದು, ಎಂದೆಲ್ಲ ಹೇಳಿ ಒತ್ತಾಯಿಸಿದರು.

ಶ್ರೀ **ಕೆ.ಎಸ್.ಈಶ್ವರಪ್ಪ** ಅವರು, ಮುಖ್ಯಮಂತ್ರಿ ಹಾಗು ಉಪಮುಖ್ಯಮಂತ್ರಿಗಳು, ರೈತರ ಹಿತದೃಷ್ಟಿ ಕಾಪಾಡುತ್ತೇವೆ, ಯಾವುದೇ ಕಾರಣಕ್ಕೂ ನೀರು ಬಿಡುವುದಿಲ್ಲ ಎನ್ನಬೇಕು. ಒಂದು ಕಡೆ ಹೀಗೆ ಘೋಷಿಸಿ, ನಂತರ ಕೇಂದ್ರ ಸರ್ಕಾರದ ನಾಯಕರುಗಳಿಗೆ ಸರೆಂಡರ್ ಆಗಿಬಿಡುವುದು ಸಲ್ಲ, ಎಂದರು.

ಶ್ರೀ **ವಾಟಾಳ್‌ನಾಗರಾಜ್** ಅವರು, ತಮಿಳುನಾಡಿನಲ್ಲಿ ಎಲ್ಲರೂ ಒಂದಾಗಿರುವಂತೆ ಕರ್ನಾಟಕದಲ್ಲಿ ಕಾವೇರಿ ನೀರು ಹಾಗೂ ರಾಜ್ಯದ ರೈತರ ಹಿತ ಕಾಪಾಡುವಲ್ಲಿ ನಾವೆಲ್ಲ ಒಗಟ್ಟಾಗಿದ್ದೇವೆ; ಈ ವಿಷಯದಲ್ಲಿ ಪಕ್ಷ ರಹಿತವಾಗಿ ಒಂದಾಗಿದ್ದೇವೆ; ಈ ಬಗ್ಗೆ ಮಾನ್ಯ ಮುಖ್ಯಮಂತ್ರಿಗಳು ಸದನದಲ್ಲಿ ಹೇಳಿಕೆ ಕೊಡಬೇಕು, ಎಂದರು. ಶ್ರೀ **ಜೆ.ವಿ.ಶ್ರೀರಾಮರೆಡ್ಡಿ** ಅವರು, ಮುಖ್ಯಮಂತ್ರಿಗಳು ಹೇಳಿಕೆ ಕೊಡುವ ಮುನ್ನ ವಿಪಕ್ಷಗಳ ಮುಖಂಡರೊಡನೆ ಚರ್ಚೆ ಮಾಡಿ ಹೇಳಿಕೆ ಕೊಡಲಿ ಎಂದರು. ಶ್ರೀ **ಡಿ.ಟಿ.ಜಯಕುಮಾರ್** ಅವರು ಈ ಬಗ್ಗೆ ಚರ್ಚೆಗೆ ಎಲ್ಲಾ ಶಾಸಕರ ಸಭೆ ಕರೆಯಬೇಕೆಂದರು.

ಮುಖ್ಯಮಂತ್ರಿ ಶ್ರೀ **ಧರ್ಮಸಿಂಗ್** ಅವರು, ಕರ್ನಾಟಕದ ಹಿತರಕ್ಷಣೆಗೆ, ರೈತ ರಕ್ಷಣೆಗೆ ಧಕ್ಕೆ ಒದಗುವುದಕ್ಕೆ ಯಾವ ರೀತಿಯಲ್ಲೂ ರಾಜಿ ಆಗಿಲ್ಲ; ಹನಿ ನೀರು ಕೂಡ ಬಿಡುವ ಮಾತೂ ಸರ್ಕಾರ ಬಳಿ ಇಲ್ಲ. ತಮಿಳುನಾಡಿನ ವಿರೋಧ ಪಕ್ಷದವರು ಬಂದಿದ್ದು; ಅದೊಂದು ಅನೌಪಚಾರಿಕ ಸಭೆಯಾಗಿ, ಹಾರ್ದಿಕವಾಗಿ ತಮ್ಮ ಸಮಸ್ಯೆಗಳನ್ನು ಕುರಿತು ಅವರು ಹೇಳಿದರಷ್ಟೆ ನಮ್ಮಲ್ಲಿಯ ನೀರು ಸಂಗ್ರಹಣೆಯ

ವಾಸ್ತವ ಸಂಗತಿಯನ್ನು ತಿಳಿಸಿ ಫ್ಯಾಕ್ಸ್ ಮಾಡಿ ಪ್ರಧಾನಮಂತ್ರಿಯವರು ಹೆಚ್ಚು ನೀರು ಬಂದಿದೆ ಎಂದು ಹೇಳಿದ ಮಾತಿಗೆ ಉತ್ತರ ಕಳುಹಿಸಲಾಯಿತು. ನಮ್ಮ ಲೋಕಸಭಾ ಸದಸ್ಯರೂ ಪ್ರಧಾನಮಂತ್ರಿಯವರಲ್ಲಿಗೆ ಹೋಗಿ ಸಿಆರ್‌ಎ ಮಿಟಿಂಗ್ ಕರೆಯುವ ಬಗ್ಗೆ ಹಾಗೂ ಬೇರೆ ವಿಚಾರಗಳ ಬಗ್ಗೆಯು ಅಲರ್ಟ್ ಆಗಿ ಪ್ರಸ್ತಾಪ ಮಾಡಿದ್ದಾರೆ. ಶ್ರೀಮತಿ ಜಯಲಲಿತಾ ಅವರು ಡಿ.ಎಮ್‌ಕೆ ಡೆಲಿಗೇಷನ್ ಆಯಿತು; ನಂತರ ಅಫಿಷಿಯಲ್ ಡೆಲಿಗೇಷನ್ ಈ ತಿಂಗಳ 15–16 ನೇ ತಾರೀಖು ಬರುವ ಬಗ್ಗೆ ಪತ್ರ ಬರೆದಿದ್ದಾರೆ. ಆದರೆ ನಾವು ಎಲ್ಲಿಯೂ ಕಮಿಟ್‌ಮಾಡಿಕೊಂಡಿಲ್ಲ ಎಂದರು. ಒಂದು ನೂರು ವರ್ಷಗಳಿಂದ ನಡೆದು ಬಂದಂಥ ಸಮಸ್ಯೆ. ಇದನ್ನೂ ನಾವು ನೀವು ಕೂಡಿ ಸಮಗ್ರವಾಗಿ ವಿಚಾರ ಮಾಡಿ ನಮ್ಮ ನಿಲುವಿನ ಬಗ್ಗೆ ತೀರ್ಮಾನಕ್ಕೆ ಬರೋಣ ಎಂದು ವಿಪಕ್ಷ ನಾಯಕರಿಗೆ ತಿಳಿಸಿದರು. ಶ್ರೀ ವಾಟಾಳ್ ನಾಗರಾಜ್ ಅವರು ತಮಿಳುನಾಡು ರಾಜಕೀಯ ಮಾಡುತ್ತಿರುವಲ್ಲಿ ನಮಗೆ ಎಚ್ಚರಬೇಕು. ಪ್ರಧಾನಮಂತ್ರಿಗಳೂ ನೀರು ಬಿಡಬೇಕು ಎಂದು ನಮಗೆ ಹೇಳಿದ್ದಾರೆ. ಮುಖ್ಯಮಂತ್ರಿಯವರು ಈ ಬಗೆಗೆಲ್ಲ ಗಮನಿಸಿ ಹೇಳಿಕೆ ನೀಡಿರುವುದು ಸಂತೋಷದ ವಿಷಯ. ರಾಜ್ಯದ ಹಿತ ಕಾಪಾಡುವಲ್ಲಿ ಮುಖ್ಯಮಂತ್ರಿಗಳು ಧೈರ್ಯವಾಗಿ ನಿಲ್ಲಬೇಕೆಂಬುದು ನಮ್ಮ ಆಶಯ ಅಷ್ಟೆ ಎಂದರು.

## ವಿಷಯ 26: ತುಂಗಭದ್ರಾ ಜಲಾಶಯದ ನೀರು ಅನ್ಯರಾಜ್ಯದ ಪಾಲಾಗುವುದಕ್ಕೆ ತಡೆ; ಬ್ಯಾರೇಜ್, ಸಮತೋಲನ ಜಲಾಶಯ ನಿರ್ಮಾಣ

18.7.2002ರ ವಿಧಾನ ಸಭಾಧಿವೇಶನದಲ್ಲಿ[36] **ಶ್ರೀ ಎಸ್.ಎಸ್.ಬೋಸ್‌ರಾಜು** ಅವರು, ಮಾತನಾಡುತ್ತಾ : ತುಂಗಭದ್ರಾ ಜಲಾಶಯದ 28 ಟಿ.ಎಂ.ಸಿ. ಅಡಿಯಷ್ಟು ನೀರು ಮಳೆಗಾಲದಲ್ಲಿ ಹೊರಗೆ ಹರಿದು ಬೇರೆ ರಾಜ್ಯದ ಪಾಲಾಗಲು ಬಿಡದೆ ಜಲಾಶಯದ ಕೆಳಭಾಗದಲ್ಲಿ ಬ್ಯಾರೇಜ್, ಸಮತೋಲನ ರಿಸರ್‌ವಾಯರ್ ನಿರ್ಮಿಸಿ ರಕ್ಷಿಸಬೇಕಾದ ಬಗ್ಗೆ ಸಚಿವರ ಗಮನ ಸೆಳೆದರು.

ಜಲಸಂಪನ್ಮೂಲ ಸಚಿವ ಶ್ರೀ **ಹೆಚ್.ಕೆ.ಪಾಟೀಲ್** ಅವರು ಈ ಬಗ್ಗೆ ಉತ್ತರಿಸುತ್ತ: 1954ರಲ್ಲಿ ನಿರ್ಮಿತ ತುಂಗಭದ್ರಾ ಜಲಾಶಯದ ಮೂಲ ಸಂಗ್ರಹಣಾ ಸಾಮರ್ಥ್ಯ 133 ಟಿ.ಎಂ.ಸಿ; 1993ರ ಸರ್ವೆ ಪ್ರಕಾರ ಆ ಸಾಮರ್ಥ್ಯ 111.507

---

36. ವಿಧಾನಸಭಾ ನಡವಳಿಕೆಗಳು., ಸಂಪುಟ 5 (3–5), ಭಾಗ.II, (18.7.2002) ಪುಟ. 969–984

ಟಿ.ಎಂ.ಸಿ. ಗೆ ಇಳಿಯಲು ಶೇಖರಗೊಂಡ ಹೂಳು ಕಾರಣವಾಗಿರುವುದು; ಜಲಾಶಯದ ಅಚ್ಚುಕಟ್ಟಿನಲ್ಲಿ ಸುಮಾರು 18 ಟಿ.ಎಂ.ಸಿ ನೀರು ಸಂಗ್ರಹಣಾ ಸಮತೋಲನಾ ಜಲಾಶಯಗಳನ್ನು, ಜಾಲಿಬೆಂಚಿ, ಮದಿರೆ, ದೇವಲಾಪುರ, ಬೆನ್ನೂರು, ದರೋಜೀ (ಕೆರೆ) ಎತ್ತರಿಸುವುದು ಹಡಿಗಿನಾಳ, ಮೆಟ್ರಿ ಮತ್ತು ಚೀಕಲ ಪರ್ವಿಗಳಲ್ಲಿ ನಿರ್ಮಿಸಲು ಉದ್ದೇಶಿಸಿರುವುದು, ರಾಚೋಲಿ ಬಂದಾ ಅಣೆಕಟ್ಟು ಎತ್ತರಿಸುವ ಪ್ರಸ್ತಾವನೆ ಪರಿಶೀಲನೆಯಲ್ಲಿರುವುದು, ಸರ್ವೇ ಮತ್ತು ತನಿಖಾ ಕಾರ್ಯ ಮುಗಿದಿರುವ ಸಮತೋಲನಾ ಜಲಾಶಯಗಳ ನಿರ್ಮಾಣ ಕಾಮಗಾರಿಯನ್ನು ಕೈಗೊಳ್ಳುವುದು; ಈ ಬಾಲೆನ್ಸಿಂಗ್ ರಿಸರ್ವಾಯರ್‌ಗಳಿಗಾಗಿ ಮಾನ್ಯ ಸದಸ್ಯರ ಒತ್ತಾಯಗಳ, ಸದ್ಯ ಈ ಜಲಾಶಯಗಳ ಸರ್ವೆ ಕೆಲಸ ಆರಂಭಿಸುವವರೆವಿಗೆ ಸಿಂಗಟಾಲೂರು ಏತ ನೀರಾವರಿ ಯೋಜನೆ ಬೇಡ ಎಂದು ಸದಸ್ಯರ ಅಭಿಪ್ರಾಯವಾಗಿದ್ದ ಕಾರಣ, ಸರ್ವೇ ಕೆಲಸವನ್ನೂ ಬೇಗ ಪೂರ್ಣಗೊಳಿಸಿದುದು; ಡಿ.ಪಿ.ಆರ್ ಮಾಡಲು ಕಾರ್ಯಕ್ರಮ ಕೈಗೊಂಡಿರುವುದು; ಆಂಧ್ರಕ್ಕೆ ಕಳೆದ 30 ವರ್ಷಗಳಲ್ಲಿ ಸರಾಸರಿ 102 ಟಿ.ಎಂ.ಸಿ. ನೀರು ಹರಿದು ಹೋಗಿರುವುದು; ಹೂಳು ಸೇರಿದ್ದ ಕಾರಣ ರಿಸರ್ವಾಯರ್ ಕೆಪಾಸಿಟಿ ಕಡಿಮೆಗೊಂಡಿದ್ದುದು, ಅದನ್ನು ಹೆಚ್ಚಿಸಿ 18 ಟಿ.ಎಂ.ಸಿ. ನೀರನ್ನು ಸಂಗ್ರಹಿಸುವ ಯೋಜನೆಗಳನ್ನು ರೂಪಿಸಿರುವ ಬಗ್ಗೆ ತಿಳಿಸಿದರು.

ಶ್ರೀ **ಎನ್.ಎಸ್. ಬೋಸರಾಜು** ಅವರು; ಭದ್ರಾದಿಂದ ನೀರು ತಂದು ಬಿಡಲು ಸರ್ಕಾರ ಎರಡು ಮೂರು ಬಾರಿ ಆರ್ಡ್‌ರ್ ಮಾಡಿದರೂ ರೈತರ ಆತಂಕದ ಕಾರಣ, ಅದು ಸಾಧ್ಯವಾಗದೆ ರಾಯಚೂರು ಪಟ್ಟಣಕ್ಕೂ ಬ್ಯಾಂಕರ್ ಮೂಲಕ ನೀರು ಸರಬರಾಜು ಮಾಡಲಾಗುತ್ತಿದೆ. ಡ್ಯಾಂ ಕೆಳಗಡೆ ಇರುವ ನದಿ ಮುಖಾಂತರ ಈ ಸ್ಕೀಂಗಳಿಗೆ ಸಿಗಬೇಕಾದ ನೀರು ಸಿಗದಾಗಿದೆ. ಕಳೆದ ವರ್ಷ 1622 ಟಿಎಂಸಿ ನೀರು ತುಂಬಿದ್ದ ಜಲಾಶಯ ಇವತ್ತಿನವರೆಗೆ ಇನ್ನೂ 1600 ಟಿ.ಎಂ.ಸಿ. ಕೂಡ ತುಂಬಿಲ್ಲ. ಜಲಾಶಯದ ಕೆಳಗೆ ಬರುವ ರಾಯಚೂರು, ಬಳ್ಳಾರಿ, ಕೊಪ್ಪಳ, ಜಿಲ್ಲೆಗಳಲ್ಲಿ ಸುಮಾರು 10 ಲಕ್ಷ ಎಕರೆ ರೈತರಿಗೆ ಹಾಗು ಜನರಿಗೆ ಆತಂಕ ಇದೆ; ರೈತರ ಪರಿಸ್ಥಿತಿ ತುಂಬಾ ಚಿಂತಾಜನಕವಾಗಿದೆ. ಕಳೆದ 7–8 ವರ್ಷಗಳಲ್ಲಿ ಅನೇಕ ಪ್ರತಿಭಟನೆಗಳು, ಹೋರಾಟಗಳು ನಡೆದರೂ ಸಹ ಇಂದೂ ಬ್ಯಾಲೆನ್ಸಿಂಗ್ ರಿಸರ್ವಾಯರ್ ಅನ್ನು ನಿರ್ಮಿಸಲಿಲ್ಲ. ಸರ್ಕಾರಗಳು ಕೇವಲ ಹೇಳಿಕೆಗಳನ್ನು ಮಾತ್ರ ಕೊಟ್ಟಿವೆ ವಿನಾ ಯಾವುದೂ ಕಾರ್ಯಗತವಾಗಿಲ್ಲ,

ಇಂದು ಮಳೆ ಬಂದಾಗ ಹೆಚ್ಚಾದ 50 ರಿಂದ 100 ಟಿ.ಎಂ.ಸಿ. ಯಷ್ಟು ನೀರು ಕೆಳಗಣ ಆಂಧ್ರ ಪ್ರದೇಶಕ್ಕೆ ಹೋಗುವ ಪರಿಸ್ಥಿತಿ ಇದೆ. ಸದ್ಯ ಜಲಾಶಯದಲ್ಲಿ 28 ಟಿ.ಎಂ.ಸಿ. ಯಷ್ಟು ಹೂಳು ತುಂಬಿದೆ. ಇಂಥ ಪರಿಸ್ಥಿತಿಯಲ್ಲೂ ಈ ಮೂರು ಜಿಲ್ಲೆಗಳಿಂದ ನಾಲ್ಕು ಕೋಟಿ ಚೀಲ, ಎರಡು ಕ್ರಾಪ್‌ಗಳಲ್ಲಿ ಸುಮಾರು 1500 ಕೋಟಿ ರೂ.ನಷ್ಟು ವಾರ್ಷಿಕ ಉತ್ಪಾದನೆಯನ್ನು ರೈತರು ಮಾಡುತ್ತಾರೆ. ಸುಮಾರು 50 ವರ್ಷಗಳ ಪ್ರಾಜೆಕ್ಟ್‌ಗೆ ಸರ್ಕಾರ ಆದ್ಯತೆ ನೀಡಿ, ಬೇಗ, ಬ್ಯಾರೇಜ್ ಹಾಗೂ ಜಲಾಶಯ ನಿರ್ಮಿಸಲು ರೈತರ ಒತ್ತಾಯವಿದೆ. 50 ವರ್ಷಗಳ ಹಿಂದೆ ಆಗಿರುವ ಉಪಕಾಲುವೆಗಳು, ಎಡದಂಡೆ ಕಾಲುವೆಯಲ್ಲಿ ಬರುವ ಕೊಪ್ಪಳ ಮತ್ತು ರಾಯಚೂರು ಜಿಲ್ಲೆಯ ನೂರು ಕಾಲುವೆ, ಉಪಕಾಲುವೆಗಳಲ್ಲಿ ಸಹಜವಾಗಿ ಅಲ್ಲಿನ ಬ್ಲಾಕ್ ಸಾಯಿಲ್‌ನಲ್ಲಿರುವ ಕಾಲುವೆಗಳು ಯಾವ ರೀತಿಯಲ್ಲಿ ಷೇಪ್ ಬದಲಾಯಿಸುತ್ತವೆ ಎಂಬುದು ಗೊತ್ತಾಗುವುದಿಲ್ಲ. ಕಾಲುವೆಗಳ ಅನಷೇಪ್‌ನಿಂದಾಗಿ 25 ಪರ್ಸೆಂಟ್ ನೀರು ವೇಸ್ಟ್ ಆಗಿ ಟೈಲ್ ಎಂಡ್ ಪ್ರದೇಶಕ್ಕೆ ನೀರು ಹೋಗುತ್ತಿಲ್ಲ. ಹೀಗಾಗಿ ತುಂಗಭದ್ರಾ ಎಡದಂತೆ ಕಾಲುವೆ 6 ಲಕ್ಷ 22 ಸಾವಿರ (ಎಕರೆ)ಕ್ಕೆ ನೀರು ಒದಗಿಸತಕ್ಕಂಥದ್ದು, ಇವತ್ತು 144 ಮೈಲಿ ನೀರು ಒದಗಿಸಬೇಕಾಗಿದೆ; 100ನೇ ಮೈಲಿಯಲ್ಲೂ ಕೂಡ ಸರಿಯಾದ ರೀತಿಯಲ್ಲಿ ಗೇಜ್ ಸಿಗುತ್ತಿಲ್ಲ. ಇಂಥ ಸನ್ನಿವೇಶದಲ್ಲಿ ಸರ್ಕಾರ ಕಾಲುವೆಗಳನ್ನು ಇಂಪ್ರೂವ್‌ಮೆಂಟ್ ಮಾಡಬೇಕೆಂದು ಕೇಳಿಕೊಂಡರು. ಶ್ರೀ ಬೋಸ್‌ರಾಜು ಅವರು ಮಾತು ಮುಂದುವರಿಸಿ ಹಿಂದೆ ನೀರಾವರಿ ಸಚಿವರು ಈ ಪ್ರಾಂತ್ಯಕ್ಕೆ ಬಂದಿದ್ದಾಗ್ಯೆ ರೈತರು ಕೇಳಿದಾಗ ವಾಗ್ದಾನವಿತ್ತರೂ ಯಾವುದೇ ಕಾಮಗಾರಿಗಳನ್ನು ಕೈಗೆತ್ತಿಕೊಂಡಿಲ್ಲ. 'ತುಂಗಾಭದ್ರಾ ಡೆವಲಪ್‌ಮೆಂಟ್ ಅಥಾರಿಟಿ' ಎಂದು ಪ್ರಾರಂಭಿಸಿ. ರಾಯಚೂರು, ಕೊಪ್ಪಳ, ಬಳ್ಳಾರಿ ಭಾಗದಲ್ಲಿ ಬರುವಂಥ ಕಾಲುವೆಗಳನ್ನು ಉತ್ತಮ ಗೊಳಿಸಲು ಸರ್ಕಾರ ಹೆಚ್ಚಿನ ಗಮನ ಕೊಡಬೇಕು, ರೈತರಿಗೆ ತೊಂದರೆಯಾಗದ ರೀತಿಯಲ್ಲಿ ಸಚಿವರ ಪ್ರಯತ್ನವಾಗಲಿ ಎಂದು ವಿನಂತಿಸಿದರು.

ಶ್ರೀ **ಎಂ.ಶಂಕರ್‌ರೆಡ್ಡಿ** ಅವರು, ಸಚಿವರು, ತುಂಗಭದ್ರಾ ಜಲಾಶಯದಿಂದ ಕರ್ನಾಟಕದವರು ಹೆಚ್ಚಿನ ಪಾಲು ಬಳಸುತ್ತಿರುವ ಕಾರಣ ಸರ್ಕಾರದ ಜೊತೆ ಮಾತನಾಡಲು ಡೆಲಿಗೇಷನ್ ಹೋಗಬೇಕು ಎಂಬ ನಿರ್ಣಯ ಆಂಧ್ರದ ವಿಧಾನ ಸಭೆಯಲ್ಲಿ ಮೂಡಿರುವುದು, ಗಡಿಯಲ್ಲಿನ ತಮ್ಮ ಕ್ಷೇತ್ರದ ಅನೇಕ ಹಳ್ಳಿಗಳಿಗೆ ಆಂಧ್ರ ಪ್ರದೇಶದ ಕಡೆಯಿಂದ ಒಂದು ಹನಿ ನೀರು ಕೂಡ ಬರದಿರುವುದು,

ಕರ್ನಾಟಕ ಸರ್ಕಾರವು ಕಾಲುವೆಗಳನ್ನು, ನಿರ್ಮಿಸಿ ಕೆಳಭಾಗದಲ್ಲಿರುವ ರೈತರಿಗೆ ಒದಗಿಸುವುದು, ಆಂಧ್ರದ ರೈತರೇ ಕೆಳಭಾಗದ ಕಾಲುವೆಗಳ ಎಲ್ಲಾ ನೀರು ಬಳಸಿಕೊಂಡು ಅನ್ಯಾಯ ಮಾಡತ್ತಿರುವುದು, ಸರ್ವೇ ಕೆಲಸದ ಜೊತೆಗೆ ಜಲಾಶಯ ನಿರ್ಮಾಣವನ್ನು ಶೀಘ್ರವಾಗಿ ಮಾಡುವುದು ಕುರಿತೆಲ್ಲ ಹೇಳಿ ತಮ್ಮ ಮಾತು ಮುಗಿಸಿದರು.

ಶ್ರೀ **ಹಂಪನಗೌಡ ಬಾದರ್ಲಿ** ಅವರು, ತುಂಗಭದ್ರಾ ಜಲಾಶಯ ವ್ಯಾಪ್ತಿಯಲ್ಲಿ 10ಲಕ್ಷ ಎಕರೆಗೂ ಮೇಲ್ಪಟ್ಟು ನೀರಾವರಿ ಪ್ರದೇಶ ಇದ್ದು, ಜಲಾಶಯದಿಂದ 173 ಟಿ.ಎಂ.ಸಿ. ನೀರು ಮಾತ್ರ ಬಳಕೆಗೆ ಒದಗಿ 31 ಟಿ.ಎಂ.ಸಿ. ನೀರನಷ್ಟು ಕೊರತೆ ಬಿದ್ದು ಬೇಸಗೆಯಲ್ಲಿ ನೀರಿನ ತೊಂದರೆಯಿಂದ ರೈತರಿಗೆ ನೂರಾರು ಕೋಟಿ ರೂ ನಷ್ಟವಾಗಿರುವುದು, ರೈತರಿಗೆ ಸಮಸ್ಯೆ ಆಗಿರುವ ಕೊರತೆ ಬಿದ್ದ ನೀರು ಹಾಗೂ ಸಿಲ್ಟ್ ಆಫ್ ನಿಂದ ಆಗಿರುವ 31 ಟಿ.ಎಂ.ಸಿ. ನೀರನ್ನು ಸಂಗ್ರಹಿಸುವ ಬಗ್ಗೆ ಸರ್ಕಾರ ಚಿಂತಿಸಿದೆಯೆ? ಸಿಂಗಟಾಲೂರು ಪ್ರಾಜೆಕ್ಟ್‌ನಿಂದ ನೀರಿನ ಸಂಗ್ರಹಣೆಯಲ್ಲಿಯೂ, ನದಿಯಿಂದ ನೇರವಾಗಿ ಎತ್ತುವಲ್ಲಿ ಬೇಸಿಗೆಯಲ್ಲಿ ಮಾತ್ರ ಕೊರತೆ ಬಿಟ್ಟರೆ, ವ್ಯತ್ಯಾಸವೇನೂ ಆಗುವುದಿಲ್ಲ. 20 ಟಿ.ಎಂ.ಸಿ.ಯಷ್ಟು ನೀರು ಸ್ಟೋರೇಜ್ ಮಾಡಿಕೊಂಡು ನೀರನ್ನು ಉಪಯೋಗ ಮಾಡಿಕೊಂಡರೆ ತಮ್ಮದೇನೂ ತಕರಾರಿಲ್ಲದಿರುವುದು, ತುಂಗಭದ್ರಾ ಮೇಲ್ದಂಡೆ ಯೋಜನೆಯಲ್ಲಿ 12 ಟಿ.ಎಂ.ಸಿ. ನೀರು ಸ್ಟೋರೇಜ್ ಮಾಡುವಲ್ಲಿ, ಆಯಕಟ್ಟಿನ ಜನರಿಗೆ ಬೇಸಿಗೆಯಲ್ಲಿ ಸಿಂಗಟಾಲೂರಿನ ಪ್ರಾಜೆಕ್ಟ್‌ನಿಂದ ತೊಂದರೆ ಆಗುವುದು, ಮಳೆಗಾಲದಲ್ಲಿ ಅಪ್ಪರ್ ಪ್ರಾಜೆಕ್ಟ್‌ನಿಂದ ತೊಂದರೆಯಾಗುವುದು, ಎರಡು ಬೆಳೆ ಬೆಳೆಯುವ ರೈತರು ಒಂದೇ ಬೆಳೆಗೆ ಸೀಮಿತವಾಗುವ ಪರಿಸ್ಥಿತಿಗೆ ಬಂದಿರುವುದು, ತುಂಗಭದ್ರಾ ಜಲಾಶಯದಿಂದ 10 ಲಕ್ಷ ಎಕರೆ ಪ್ರದೇಶದಲ್ಲಿ ವಾರ್ಷಿಕ 800 ರಿಂದ 1000 ಕೋಟಿ ರೂ.ನಷ್ಟು ಆಹಾರ ಧಾನ್ಯ ಉತ್ಪತ್ತಿಯ ಸಂದರ್ಭದಲ್ಲಿ ಮೇಲ್ಭಾಗದ ಎರಡು ಯೋಜನೆಗಳನ್ನು ಕೈಗೆತ್ತಿಕೊಂಡರೆ ತೊಂದರೆಯಾಗುವುದು, ಹೆಚ್ಚುವರಿಯಾದ ನೀರನ್ನು ಆಂಧ್ರದ ಪಾಲಾಗಲು ಬಿಡದೆ, ಹಿಡಿದಿಟ್ಟುಕೊಂಡು ಉಪಯೋಗಿಸಿಕೊಳ್ಳುವಂಥ ಹೊಸ ಯೋಜನೆ ರೂಪಿಸಿಕೊಳ್ಳುವುದು, ನೀರಾವರಿ ತಜ್ಞ ಶ್ರೀ ಕೆ.ಸಿ. ರೆಡ್ಡಿ ವರದಿ ಅನ್ವಯ ತೀವ್ರಗತಿಯಲ್ಲಿ ಕೆಲಸ ಕೈಗೆತ್ತಿಕೊಂಡು ತುಂಗಭದ್ರಾ ರೈತರ ನೀರಿನ ತೊಂದರೆ ನೀಗಿಸುವುದು ಕುರಿತೆಲ್ಲ ಹೇಳಿ ಸಚಿವರ ಉತ್ತರವನ್ನು ಬಯಸಿದರು. ಶ್ರೀ. ಎನ್.ಎಸ್. ಬೋಸರಾಜು ಅವರು, ತುಂಗಭದ್ರಾ ಎಡದಂಡೆ ಕಾಲುವೆಯ ಟೈಲ್-ಎಂಡ್

ಪ್ರದೇಶದ ರೈತರಿಗೆ ಒಂದು ಲಿಂಕ್ ಕೆನಾಲ್ ಮಾಡಬೇಕೆಂದು ಒತ್ತಾಯ ಮಾಡುತ್ತಿರುವುದು, ಸರ್ವೇ ಕೂಡ ಆಗಿರುವುದು, ತುಂಗಭದ್ರಾ ಲೆಫ್ಟ್ ಬ್ಯಾಂಕ್‌ಕೆನಾಲ್‌ಗೆ ಲಿಂಕ್ ಕೊಡುವ ಮೂಲಕ ವಾರ್ಷಿಕ 8–10 ಟಿ.ಎಂ.ಸಿ ನೀರು ಒದಗಿಸದರೆ ಹೂಳು ತುಂಬಿಕೊಂಡಿರುವ ನೀರಿನ ಒಂದು ಕಾಂಪೆನ್‌ಸೇಷನ್ ಆಗುವುದು, ಬಚಾವತ್ ತೀರ್ಪಿನ ಪ್ರಕಾರ ಸ್ಕೀಂ 1 ಬಿ ನಲ್ಲಿ ಹೆಚ್ಚಿನ ನೀರನ್ನು ನಾರಾಯಣಪುರ ಜಲಾಶಯಕ್ಕೆ ಒದಗಿಸುವ ಮೂಲಕ ಸುಮಾರು 600 ಕ್ಯೂಸೆಕ್ಸ್ ನೀರು ಒದಗುವ ಸಾಧ್ಯತೆ, ತುಂಗಭದ್ರಾದಿಂದ ಎನ್‌ಆರ್‌ಬಿಸಿ ಲಿಂಕ್ ಕೆನಾಲ್ ಮಾಡಲು ಸರ್ಕಾರ ಹೆಚ್ಚಿನ ಗಮನ ಹರಿಸುವುದು, ತುಂಗಭದ್ರಾ ಡೆವಲಪ್‌ಮೆಂಟ್ ಅಥಾರಿಟಿ ಬಗ್ಗೆ ಗಮನ ಹರಿಸುವುದು ಕುರಿತೆಲ್ಲ ಹೇಳಿ, ಸಚಿವರು ಗಮನ ಹರಿಸಲು ವಿನಂತಿಸಿದರು.

ಶ್ರೀ ಕರಡಿ ಸಂಗಣ್ಣ ಅಮರಪ್ಪ ಅವರು, ತುಂಗಾಭದ್ರಾ ಪ್ರಾಜೆಕ್ಟ್‌ನಿಂದ ಎಡ ಮತ್ತು ಬಲದಂಡೆ ಕೆನಾಲ್‌ನಿಂದ, ಅಚ್ಚುಕಟ್ಟು ಪ್ರದೇಶಗಳಿಗೆ, ಸಿಂಗಟಾಲೂರು ಮತ್ತು ಅಪ್ಪರ್ ತುಂಗಭದ್ರಾನಿಂದ ರಾಯಚೂರು, ಬಳ್ಳಾರಿ ಜಿಲ್ಲೆಯವರಿಗಿದ್ದ ಆತಂಕವನ್ನು, ಬಾಲೆನ್ಸಿಂಗ್ ರಿಸರ್‌ವಾಯರ್ ಮೂಲಕ 18 ಟಿ.ಎಂ.ಸಿ. ನೀರು ಬಳಸಲವಕಾಶ ಮಾಡಿ ಸರ್ಕಾರ ಕಳೆದಿದೆ. ಆ ಪ್ರಾಜೆಕ್ಟ್‌ನಿಂದ ಕೊಪ್ಪಳ ಮತ್ತು ಹಡಗಲಿ ಕ್ಷೇತ್ರದವರಲ್ಲಿ 32 ಗ್ರಾಮಗಳವರು ಮನೆಮಠ ಆಸ್ತಿ ಕಳೆದುಕೊಂಡು ಏನೂ ಲಾಭ ಪಡೆದಿಲ್ಲ. 102 ಟಿ.ಎಂ.ಸಿ. ನೀರು ಆಂಧ್ರಕ್ಕೆ ಹರಿದು ಹೋಗುತ್ತಿದೆ. ಕೆಳಭಾಗದಲ್ಲಿ 102 ಟಿ.ಎಂ.ಸಿ. ಉಪಯೋಗ ಮಾಡಿಕೊಳ್ಳುತ್ತಿದ್ದಾರೆ. ಉಳಿದ ನೀರನ್ನು ಉಪಯೋಗಿಸಿಕೊಳ್ಳಲು ಸಿಂಗಟಾಲೂರು ಪ್ರಾಜೆಕ್ಟ್ ನಿರ್ಮಾಣಗೊಳ್ಳುತ್ತಿದೆ. ವಿಶೇಷತಃ ಕೊಪ್ಪಳ ಜಿಲ್ಲೆಗೆ ಮಾತ್ರ ಬಹಳ ಕಡಿಮೆ ನೀರಿನ ಲಭ್ಯತೆ ಇದೆ. 'ಬಿ'ಸ್ಕೀಂ ನಲ್ಲಿ ಅದಕ್ಕೆ ಪರಿಹಾರ ಮಾಡಿಕೊಡುವ ಬಗ್ಗೆ ಸಚಿವರು ಹೇಳಿದ್ದಾರೆ. ಆದರೆ 'ಬಿ' ಸ್ಕೀಂಗೆ ಸೆಂಟ್ರಲ್ ವಾಟರ್ ಬೋರ್ಡ್ ಅನುಮತಿ ಕೊಡಬೇಕು, ರಾಜ್ಯದಲ್ಲಿ ಅಲೋಕೇಷನ್ ಮಾಡಬೇಕು. ಸರ್ಕಾರ ಅಂಥ ಸಂದರ್ಭದಲ್ಲಿ ಸಹಾಯ ಮಾಡಬೇಕು. ಆ ಕ್ಷೇತ್ರದಲ್ಲಿರುವ ರೈತರಲ್ಲಿ ನಮ್ಮ ತ್ಯಾಗಕ್ಕೆ ಬೆಲೆ ಇಲ್ಲ, ನೀರಿನ ಲಭ್ಯತೆ ಇಲ್ಲ. ಅರೆ ಖುಷ್ಕಿ ಜಮಿನು ಹೊಂದಿರುವಂಥ ರೈತರಿಗೆ ಅನ್ಯಾಯವಾಗಿದೆ ಎಂಬ ಕೂಗು ಎದ್ದಿದೆ. ರೈತರು ದಂಗೆ ಏಳುವಂಥ ವಾತಾವರಣ ನಿರ್ಮಾಣವಾಗುತ್ತಿದೆ. ಕೊಪ್ಪಳ ಕ್ಷೇತ್ರಕ್ಕೆ ಸಿಂಗಟಾಲೂರು ಪ್ರಾಜೆಕ್ಟ್‌ನಿಂದ ಎಷ್ಟು ನೀರಾವರಿ ಸೌಲಭ್ಯವನ್ನು ಕೊಡುತ್ತದೆ ಎಂಬ ಬಗ್ಗೆ ಸರ್ಕಾರ ಹೇಳಬೇಕು ಎಂದರು.

ಶ್ರೀ ಹಂಪನಗೌಡ ಬಾದರ್ಲಿ ಅವರು, ಸಿಂಗಟಾಲೂರು ಮತ್ತು ಅಪ್ಪರ್ ತುಂಗಾ ಪ್ರಾಜೆಕ್ಟ್ ಮುಗಿಸುವುದರ ಜೊತೆಗೆ ನಮ್ಮ ಹಕ್ಕಿನ ನೀರನ್ನು ಸಂಪೂರ್ಣವಾಗಿ ಉಪಯೋಗ ಮಾಡಿಕೊಳ್ಳಲು ಅವಕಾಶ ಕಲ್ಪಿಸಿಕೊಡಬೇಕು. ಡ್ಯಾಮ್‌ನಲ್ಲಿ ಹೂಳು ತುಂಬಿರುವುದರಿಂದ ಬೇಸಿಗೆಯಲ್ಲಿ ನೀರಿನ ಕೊರತೆ ಆಗುತ್ತದೆ ಎಂಬ ರೈತರ ಆತಂಕದ ಹಿನ್ನೆಲೆಯಲ್ಲಿ ವಿರೋಧವಿತ್ತೇ ವಿನಹ ಈ ಪ್ರಾಜೆಕ್ಟ್ ಬಗ್ಗೆ ಇಲ್ಲ. ನಮ್ಮ ಪಾಲಿನ 102 ಟಿಎಂಸಿ ನೀರು ಬೇಕಷ್ಟೆ ಎಂದರು.

ಶ್ರೀ **ಎಸ್.ಎಸ್.ಪಾಟೀಲರು**, ಹಡಗಲಿ ಮತ್ತು ಮುಂಡರಗಿ ತಾಲೂಕಿಗೆ ತಲಾ 24 ಸಾವಿರ ಎಕರೆ ಜಮೀನಿಗೆ, ಕೊಪ್ಪಳ ಜಿಲ್ಲೆಯ 10 ಸಾವಿರ ಎಕರೆ ಪ್ರದೇಶಕ್ಕೆ ನೀರಾವರಿ ಸೌಲಭ್ಯ ಸಿಂಗಟಾಲೂರು ಯೋಜನೆಯಿಂದ ಒದಗುವುದು, ನನ್ನ ಕ್ಷೇತ್ರದಲ್ಲಿ ಲಿಫ್ಟ್ ಇರಿಗೇಷನ್ ಮಾಡಲು ಹೋದಾಗ ಅರ್ಧ ಟಿಎಂಸಿ ನೀರಿದ್ದು ಹೊಳೆಯಲ್ಲಿ ನೀರುನಿಲ್ಲದ ಕಾರಣ, ಅದಕ್ಕೆ ಅಧಿಕಾರಿಗಳು ಅವಕಾಶ ಕೊಡದ ಕಾರಣ ನಮ್ಮ ನೀರು ಬೇರೆಯವರ ಬಳಕೆಗಾಗುವ ಪರಿಸ್ಥಿತಿ, ಕೊನೆಗೆ ಏನೇನೋ ಪ್ರಯತ್ನಿಸಿ ಒಪ್ಪಿಗೆ ಪಡೆದದ್ದು, ಶ್ರೀ ಹೆಚ್.ಕೆ. ಪಾಟೀಲರು ಪ್ರತಿ ವರ್ಷ ಮೂರು ಟಿಎಂಸಿ ನೀರು ಹರಿದು ಹೋಗುತ್ತಿರುವ ಬಗ್ಗೆ ಬಯಲು ಮಾಡಿದ್ದು, ಹೆಚ್ಚುವರಿ ನೀರನ್ನು ಬಳಸುವುದಕ್ಕೆ ತೊಂದರೆ ಏನು? ಎರಡು ವರ್ಷದಲ್ಲಿ ಯೋಜನೆ ಮುಗಿಯುತ್ತದೆಯೆ? ಎಂಬ ಸಂಶಯ; ರಿಸರ್ವಾಯರ್ ಮಾಡಿ, 25–30 ಸಾವಿರ ಎಕರೆ ಜಮೀನಿಗೆ ನೀರು ಕೊಡಲಿಕ್ಕಾದರೆ, ಬರಗಾಲ ಪ್ರದೇಶವಾಗಿರುವಲ್ಲಿ ಕೊಡುವುದು, ಬರಗಾಲದಿಂದಾಗಿ ಜನರು ಗುಳೆ ಹೋಗಿರುವುದು, ಯೋಜನೆ ಪ್ರಕಾರ ನೀರನ್ನು ಎಷ್ಟು ವರ್ಷದಲ್ಲಿ ಕೊಡುತ್ತೀರಿ? ಎಂದೆಲ್ಲ ಕೇಳಿ, ಮಾತನಾಡಿದರು.

ಸಚಿವ ಶ್ರೀ **ಹೆಚ್.ಕೆ.ಪಾಟೀಲರು**, ಸಿಂಗಟಾಲೂರು ಯೋಜನೆಯ ಕೆಲಸದ ಸಿದ್ಧತೆ ಆಗಿರುವುದು, ಪಕ್ಕದ ಹೊಳೆಯಲ್ಲಿ ಹರಿದು ಹೋಗುತ್ತಿದ್ದ ಫ್ಲೋರೈಡ್‌ನಿಂದ ಕೂಡಿದ್ದ ನೀರನ್ನು ಬಳಸಿ ಜನರು ತತ್ತರಿಸಿ ಹೋಗಿದ್ದರು. ತತ್ಫಲವಾಗಿ 40 ವರ್ಷದವರು 60 ವರ್ಷದವರಂತೆ ಕಾಣುತ್ತಿದ್ದುದು, ಮುಂಡರಗಿ ಕೊಪ್ಪಳ ತಾಲೂಕು ಸ್ಥಳಗಳನ್ನು ದೊಡ್ಡ ಜಲಾಶಯಕ್ಕಾಗಿ ಮುಳುಗಡೆಗಾಗಿ ತ್ಯಾಗ ಮಾಡಿದ ಕಾರಣ 2–3 ಸಾವಿರ ಎಕರೆ ಜಮೀನಿಗೆ ನೀರು ಸಿಕ್ಕಿದುದು, ಆ ದೃಷ್ಟಿಯಿಂದ ಆ ಕ್ಷೇತ್ರದ ಶಾಸಕರ ಸ್ವಾಗತಾರ್ಹ ನಡೆ, ತೀವ್ರವಾಗಿ ಸಿಂಗಟಾಲೂರು ಪ್ರಾಜೆಕ್ಟ್ ಮುಗಿಸುವ ಬಗ್ಗೆ, ತುಂಗಭದ್ರ ಅಚ್ಚುಕಟ್ಟು ಪ್ರದೇಶದ ಜನತೆ, ಪಡೆದುಕೊಳ್ಳುತ್ತಿರುವ ನೀರು, ಯೋಜನೆ ಲಾಭ ಯಾರಿಗೆ ಆಗಿರುವುದೇ ಅವರು ಸರ್ಕಾರ ಅಥವಾ ಯೋಜನೆಗಾಗಿ

ಶಕ್ತಾನುಸಾರ ಹಣ ನೀಡಬೇಕಿರುವುದು ಹಾಗೆ ಬಂದ ಹಣದಿಂದ ಎಲ್ಲಾ ರೈತರಿಗೂ ಅನುಕೂಲಿಸುವಂತೆ ಮಾಡುವ ಸರ್ಕಾರದ ಉದ್ದೇಶ ಮತ್ತು ಚಿಂತನೆ, ತುಂಗಭದ್ರಾ, ಕೃಷ್ಣಾದಲ್ಲಿಯಾಗಲಿ, ಯಾವುದೇ ಯೋಜನೆಯಲ್ಲಿಯಾಗಲಿ ಕರ್ನಾಟಕ ರಾಜ್ಯವು ಒಂದು ಹನಿ ನೀರನ್ನು ಹೆಚ್ಚು ಬಳಸಿಕೊಳ್ಳದೆ ಕಡಿಮೆಯೇ ಬಳಸಿಕೊಂಡಿರುವುದು, ಯೋಜನೆಗಳನ್ನು ಮಾಡುವಾಗ ಅಚ್ಚುಕಟ್ಟು ಪ್ರದೇಶದವರು ತಮಗೆ ನೀರು ಕಡಿಮೆ ಆಗುತ್ತದೆ ಎಂಬ ತಪ್ಪು ಕಲ್ಪನೆ ಮಾಡುವ ಕಾರಣ ಯೋಜನೆಗಳ ಅನುಷ್ಠಾನ ನಿಧಾನವಾಗುವುದು, ಬಚಾವತ್ ಅಯೋಗದ ತೀರ್ಪಿನ ರೀತ್ಯಾ, 733–34 ಟಿ.ಎಂ.ಸಿ. ನೀರು ನಮಗೇನು ಲಭ್ಯವಾಗಿತ್ತು ಅದರಲ್ಲಿ 5 ಟಿ.ಎಂ.ಸಿ. ನೀರನ್ನು ಈಗಾಗಲೇ ಮದ್ರಾಸಿಗೆ ನೀಡಿರುವುದು, ಬೇರೆ ರಾಜ್ಯದ ಪಾಲಿನ ನೀರನ್ನು ನಾವು ಉಪಯೋಗ ಮಾಡಿಕೊಳ್ಳುತ್ತಿದ್ದೇವೆ ಎಂಬ ಮಾತು ಸತ್ಯಕ್ಕೆ ದೂರವಾಗಿರುವುದು, ಕುರಿತೆಲ್ಲ ಹೇಳಿದರು.

ಶ್ರೀ **ಹಂಪನ ಗೌಡ ಬಾದರ್ಲಿ** ಅವರು, ಯೋಜನೆಗಳನ್ನು ರೂಪಿಸುವಂಥ ಸಂದರ್ಭದಲ್ಲಿ ಸ್ಟೋರೇಜ್ ಕ್ಯಾಪಾಸಿಟಿ ಗಮನಿಸಿ ರೂಪಿಸಿದರೆ ಸಮಸ್ಯೆ ಉದ್ಭವವಾಗುವುದಿಲ್ಲ. ಎರಡು ಯೋಜನೆಗಳಿಗೂ ಸ್ಟೋರೇಜ್ ಇಲ್ಲ. ಹರಿಯುವ ನೀರಿಗೆ ಡೈವರ್ಟ್ ಮಾಡಿ ಯೋಜನೆಗಳನ್ನು ರೂಪಿಸಿಕೊಂಡಿರುವ ಕಾರಣ ಸಮಸ್ಯೆಗಳು ಉದ್ಭವವಾಗಿವೆ. ನಮ್ಮಲ್ಲಿ 102 ಟಿಎಂಸಿ ಏನಿದೆ ಅದಕ್ಕೆ ಸ್ಟೋರೇಜ್ ಕೆಪಾಸಿಟಿ ಹೆಚ್ಚು ಮಾಡಬೇಕಿದೆ. ನಮಗೆ 31 ಟಿಎಂಸಿ ಸಿಲ್ಟ್‌ಅಪ್ ಆಗಿದೆ. ಅಷ್ಟು ಟಿಎಂಸಿ ನೀರನ್ನು ಸ್ಟೋರೇಜ್ ಮಾಡಲು ಯೋಜನೆ ರೂಪಿಸಿ ಕಾಲ ನಿಗದಿ ಪಡಿಸಿ ಬಜೆಟ್‌ನಲ್ಲಿ ಸೇರಿಸುವುದಕ್ಕೆ ಪ್ರಯತ್ನ ಮಾಡಿ, ಎಂದರು. ಶ್ರೀ ಹೆಚ್.ಕೆ.ಪಾಟೀಲರು ತೀವ್ರವಾಗಿ ಸರ್ವೆ ಕೆಲಸ ಮಾಡಿದಂತೆ ಯೋಜನೆ ಅನುಷ್ಠಾನದ ಕೆಲಸವನ್ನು ಮಾಡಿ ಅದಕ್ಕಾಗಿ ಹಣಕಾಸು ಕ್ರೋಡೀಕರಣಕ್ಕೆ ಪ್ರಯತ್ನವಿದೆ ಎಂದರು.

ಈ ದಿನದ ಚರ್ಚೆಯಲ್ಲಿ ಶ್ರೀ ಉಮೇಶ್ ವಿ. ಕತ್ತಿ, ಶ್ರೀ ಕಾಗೋಡು ತಿಮ್ಮಪ್ಪ ಶ್ರೀ ಎಂ.ಶಂಕರ ರೆಡ್ಡಿ, ಶ್ರೀ ಪಿ.ಜಿ.ಆರ್ ಸಿಂಧ್ಯ ಅವರೂ ಪಾಲ್ಗೊಂಡಿದ್ದರು.

## ವಿಷಯ 27: ಆಲಮಟ್ಟಿ ಅಣೆಕಟ್ಟೆಯಿಂದ ಆಂಧ್ರಕ್ಕೆ ನೀರು ಬಿಡುಗಡೆ

26.7.2004ರ ವಿಧಾನಸಭಾಧಿವೇಶನದಲ್ಲಿ[13] ಶ್ರೀ **ಬಿ.ಎಸ್.ಯಡಿಯೂರಪ್ಪ** ನವರು, ಶಾಸಕರು ಹಾಗು ಸಂಸದರು ಆಲಮಟ್ಟಿ ಅಣೆಕಟ್ಟೆಗೆ ಭೇಟಿ ನೀಡಿ ವಸ್ತುಸ್ಥಿತಿ ಕಂಡು ಬಂದ ಬಗ್ಗೆ ಹೇಳುತ್ತ: ಆಂಧ್ರಕ್ಕೆ ನಮ್ಮ ಸರ್ಕಾರ ನೀರು ಬಿಡಬಹುದೆಂಬ ಆಲೋಚನೆಯಿಂದ ನೀರು ಬಿಡದಂತೆ ರೈತರು ಮಾಡುತ್ತಿರುವ ಸತ್ಯಾಗ್ರಹ, ನಾರಾಯಣಪುರ ಅಚ್ಚುಕಟ್ಟಿನಲ್ಲಿಯೂ ಆರಂಭವಾಗಿರುವ ರೈತರ ಸತ್ಯಾಗ್ರಹ 50 ಟಿ.ಎಂ.ಸಿ. ನೀರನ್ನು ಆಲಮಟ್ಟಿಯಿಂದ ಬಿಡಲು ಪ್ರಧಾನಿಯವರ ಮೇಲೆ ಆಂಧ್ರವು ಮಾಡಿರುವ ಒತ್ತಡದ ಪ್ರಯತ್ನ, ನಮ್ಮ ಮುಖ್ಯಮಂತ್ರಿಗಳು ನಿರ್ದಿಷ್ಟ ಪ್ರಮಾಣದಲ್ಲಿ ನೀರು ಬಿಡಲು ಬದ್ಧ ಎಂದಿರುವ ಮಾತಿಗೆ ಕೃಷ್ಣಾ ಬೇಸಿನ್‌ನ ರೈತರ ಆಕ್ರೋಶ 'ಎ' ಸ್ಕೀಮ್ ಮುಗಿದು 'ಬಿ' ಸ್ಕೀಮ್‌ನಲ್ಲಿ ಬಚಾವತ್ ಅಯೋಗದ ತೀರ್ಪಿನಂತೆ ನೀರು ಬಿಡಲು ಟ್ರಿಬ್ಯೂನಲ್‌ಗೆ ನಮ್ಮ ಒತ್ತಾಯದಂತೆ ಆಂಧ್ರದ ಒತ್ತಾಯವು ಇರುವುದು, ನಾವು ಸಮರ್ಪಕವಾಗಿ 'ಎ' ಸ್ಕೀಮ್‌ನಲ್ಲಿ ನೀರಾವರಿಗೆ ನೀರನ್ನು ಪೂರ್ಣವಾಗಿ ಅಂದರೆ 734 ಟಿ.ಎಂ.ಸಿ. ನೀರನ್ನು ಬಳಕೆ ಮಾಡಿಕೊಳ್ಳದಿರುವ ಸಂದರ್ಭ ಗಮನಿಸಿ ಅದನ್ನು ಲೆಕ್ಕ ಹಿಡಿದು 'ಬಿ' ಸ್ಕೀಮ್‌ನಲ್ಲಿ ನೀರು ಹಂಚಬೇಕೆಂದು ಟ್ರಿಬ್ಯೂನಲ್ ಮುಂದೆ ಹಾಕಿರುವ ಆಂಧ್ರದ ಅರ್ಜಿ, ಇದರಿಂದ ಎಕ್ಸೆಸ್ ವಾಟರ್ ಇತ್ತು ಕರ್ನಾಟಕ ಬಿಟ್ಟಿದೆ, ಎಂಬಂತೆ ಸಾಕ್ಷ್ಯಾಧಾರವನ್ನು ನಿರೂಪಿಸಲು ಮಾಡಿರುವ ಆಂಧ್ರದ ವ್ಯವಸ್ಥಿತ ಪಿತೂರಿ, ಕೃಷ್ಣಾ ಮೇಲ್ದಂಡೆ ಪ್ರದೇಶದಲ್ಲಿ 4.63 ಲಕ್ಷ ಹೆಕ್ಟೇರ್ ಕಮಾಂಡ್ ಪ್ರದೇಶಕ್ಕೆ 2004-05ನೇ ಸಾಲಿಗೆ 8 ತಿಂಗಳು ನೀರು ಕೊಡುವ ಬಗ್ಗೆ ರಾಜ್ಯ ಸರ್ಕಾರದ ಅಧಿಸೂಚನೆ, ಆದರೆ ಅಲ್ಲಿ ಚಾನೆಲ್, ಸಬ್‌ಚಾನೆಲ್ ತೆಗೆಯುವಂಥ ಪ್ರಯತ್ನವಾಗಿದ್ದರೆ, 6 ಲಕ್ಷ 21 ಸಾವಿರ ಹೆಕ್ಟೇರ್ ಕಮಾಂಡ್ ಏರಿಯಾದಲ್ಲಿ ನಾವು ರೈತರಿಗೆ ನೀರು ಕೊಡಬೇಕಾಗಿದ್ದುದು ಆಗದಿರುವುದು, ಆಲಮಟ್ಟಿ ಅಣೆಕಟ್ಟಿಗೆ 173 ಟಿ.ಎಂ.ಸಿ. ಸಾಮರ್ಥ್ಯವಿದ್ದರೂ ಈಗ ಕೇವಲ 100 ಟಿ.ಎಂ.ಸಿ. ನೀರು ಮಾತ್ರ ಇದ್ದು, ಕಳೆದ ಒಂದೂವರೆ ತಿಂಗಳಿಂದ ರೈತರು ಒಣಗುತ್ತಿರುವ ಬೆಳೆಗೆ ನೀರು ಬಿಡಿ ಎಂದು ಕೇಳುತ್ತಿದ್ದರೂ, ನೀರು ಬಿಡದೆ ಬೆಳೆ ಒಣಗಿ ನಾಶವಾಗುವ ಹಂತ ತಲುಪಿದ್ದುದು, ಮೂರುವರೆ ಲಕ್ಷ ಎಕರೆ ಫಲವತ್ತಾದ ಭೂಮಿ, ಹಾಗೂ ನೂರಾರು ಗ್ರಾಮಗಳ ಮುಳುಗಡೆಗೂ ಒಪ್ಪಿ ಆಲಮಟ್ಟಿ ಅಣೆಕಟ್ಟೆ ಕಟ್ಟಲು ಅವಕಾಶ

37. ವಿಧಾನಸಭೆಯ ನಡವಳಿಕೆಗಳು, ಸಂಪುಟ 7(1-2), ಭಾಗ.I (26.7.2004) ಪು. 84-91, 133-142

ಮಾಡಿಕೊಟ್ಟ ರೈತರಿಗೆ, ಹಾನಿಯಾಗುವಂತೆ ಕೇಂದ್ರದ ಒತ್ತಾಯಕ್ಕೆ ರಾಜ್ಯ ಸರ್ಕಾರ ಮಣಿದು ನೀರು ಬಿಡಲೆಳಸಿರುವುದರಿಂದ ರೈತರಲ್ಲಿ ಉಂಟಾಗಿರುವ ಆಕ್ರೋಶ, ಈ ಹಿನ್ನೆಲೆಯಲ್ಲಿ ಒಂದು ಹನಿ ನೀರನ್ನು ಬಿಡದಿರುವ ಬಗ್ಗೆ ಸರ್ಕಾರ ಸದನದಲ್ಲಿ ಹೇಳಿದರೆ ಬಹುಶಃ ಆ ಭಾಗದ ರೈತರು ಶಾಂತವಾಗಿ ಕೃಷಿಕಾರ್ಯದಲ್ಲಿ ತೊಡಗಲನುಕೂಲವಾಗುವುದು, ತಮಿಳುನಾಡು, ಮಹಾರಾಷ್ಟ್ರದಂತೆ, ಈಗ ಆಂಧ್ರವೂ ಕರ್ನಾಟಕದ ನೀರಿನ ಸಂಬಂಧ ಚೆಲ್ಲಾಟಕ್ಕೆ ತೊಡಗಿರುವುದು, ಒತ್ತಾಯಕ್ಕೆ ಮಣಿದು ಹನಿ ನೀರು ಬಿಟ್ಟರೂ ಬಹುಶಃ ಆಲಮಟ್ಟಿ ಅಣೆಕಟ್ಟೆಯ ಮುಂದೆಯೇ ಹಗಲು ರಾತ್ರಿ ಸತ್ಯಾಗ್ರಹ ಮಾಡುವ ಅನಿವಾರ್ಯತೆ ಒದಗುವುದು, ಬಚಾವತ್ ತೀರ್ಪಿನ ರೀತ್ಯಾ ಒಂದೊಂದು ಹನಿ ನೀರನ್ನು ಉಪಯೋಗ ಮಾಡಿಕೊಳ್ಳಲು ಚಾನೆಲ್ ಹಾಗು ಸಬ್‌ಚಾನಲ್‌ಗಳ ಕೆಲಸ ಆಗಬೇಕಿರುವ ಬಗ್ಗೆ ಸರ್ಕಾರ ಭರವಸೆ ಕೊಡಬೇಕಿರುವುದು, ಹಿಂದೆ ಉಜ್ಜನಿಯಿಂದ ಭೀಮಾನದಿಗೆ ಕುಡಿಯಲು ನೀರು ಬಿಡು ಎಂದು ಮಹಾರಾಷ್ಟ್ರ ಸರ್ಕಾರಕ್ಕೆ ಕೇಳಿಕೊಂಡರೂ ನೀರು ಬಿಡದೆ ಅದು ಅಮಾನವೀಯವಾಗಿ ವರ್ತಿಸಿದ್ದು; ಅದು ಇಂದೂ ಉಜ್ಜನಿಯಿಂದ ಒಪ್ಪಂದ ಪ್ರಕಾರ ಭೀಮಾ ನದಿಗೆ 15 ಟಿ.ಎಂ.ಸಿ ನೀರು ಬಿಡಬೇಕಿರುವುದನ್ನು ಬಿಡದೆ ವಂಚನೆ ಮಾಡುತ್ತಿರುವುದು, ಹೀಗಿದ್ದು ನಮ್ಮ ಸರ್ಕಾರ ಸುಮ್ಮನಿರುವುದು; 2003–04ನೇ ಸಾಲಿನಲ್ಲಿ ನೀರಾವರಿ ಇಲಾಖೆ, ಕೃಷ್ಣಾ ಜಲಭಾಗ್ಯ ನಿಗಮ ಕರ್ನಾಟಕ ನೀರಾವರಿ ನಿಗಮದಿಂದ 3077 ಕೋಟಿ 61 ಲಕ್ಷ ರೂ ಅನುದಾನ ಹಣ ಕೊಟ್ಟಿದ್ದುವು. ಆದರೆ 3130 ಕೋಟಿ 96 ಲಕ್ಷ ರೂ ಖರ್ಚುಮಾಡಿ 1,25000 ಹೆಕ್ಟೇರ್ ಜಮೀನಿಗೆ ಹೊಸದಾಗಿ ಅಚ್ಚುಕಟ್ಟು ಮತ್ತು ಚಾನೆಲ್‌ಗೆ ವ್ಯವಸ್ಥೆ ಮಾಡುವ ಬಗ್ಗೆ ಹೇಳಿ ಕೇವಲ 68214 ಹೆಕ್ಟೇರ್‌ಗೆ ಮಾತ್ರ ನೀರನ್ನು ಸರ್ಕಾರ ಒದಗಿಸಿರುವುದು, ಅಂದರೆ 50% ಅಚೀವ್‌ಮೆಂಟ್ ಮಾತ್ರ ಆಗಿ ಸಂಪೂರ್ಣ ಹಣ ಖರ್ಚಾಗಿರುವುದು, ಈ ಬಗ್ಗೆ ಸಮಗ್ರ ತನಿಖೆಗೆ ಸದನ ಸಮಿತಿ ಮಾಡಿ ಎಂದೆಲ್ಲ ಹೇಳಿ ಮಾತುಗಳನ್ನು ಮುಗಿಸಿದರು.

**ಶ್ರೀ ವಾಟಾಳ್ ನಾಗರಾಜ್** ಅವರು, ಆಲಮಟ್ಟಿ ಪ್ರದೇಶಕ್ಕೆ ಹೋಗಿ ಬಂದು, ಪರಿಸ್ಥಿತಿ ವಿವರಿಸುತ್ತ, ನೀರು ಬಿಡುವ, ಬಿಡುವುದಿಲ್ಲವೆನ್ನುವ ಹೇಳಿಕೆಗಳಲ್ಲಿಯ ಗೊಂದಲ, ನೀರು ಬಿಡಿಸಲು ಆಂಧ್ರದ ಸರ್ವಪಕ್ಷಗಳ ನಿಯೋಗದಿಂದ ಪ್ರಧಾನಿಗಳ ಮೇಲೆ ಬೀರಿರುವ ಒತ್ತಡ, ಆಲಮಟ್ಟಿ ಪ್ರದೇಶದ ರೈತರು ಕಳೆದ ನಾಲ್ಕು ವರ್ಷಗಳಿಂದ

ಬರಗಾಲದ ಕಾರಣ ನೀರು ಸಿಗದೆ ತೊಂದರೆಯಲ್ಲಿರುವುದು, 9 ನಾಲೆಗಳಲ್ಲಿ ಈವರೆಗೆ ಒಂದು ಹನಿ ನೀರನ್ನು ಬಿಟ್ಟಿಲ್ಲದಿರುವುದು, ಸುಮಾರು 4 ಲಕ್ಷ ಹೆಕ್ಟೇರ್ ಪ್ರದೇಶಕ್ಕೆ ನೀರು ಕೊಡಬೇಕಿರುವಲ್ಲಿ ಕರ್ನಾಟಕದಿಂದಲೂ ಸರ್ವಪಕ್ಷ ನಿಯೋಗವು ಪ್ರಧಾನಿಯವರ ಬಳಿ ಹೋಗಿ ತೊಂದರೆಯನ್ನು ಮನವರಿಕೆ ಮಾಡುವುದು, ಆಂಧ್ರದವರು ಹಿಂದೆ ಕುಡಿಯುವ ನೀರಿಗೆ **ತೆಲುಗು ಗಂಗಾ** ಎಂದು ಮಾಡಿಕೊಂಡು, ಅದನ್ನು ನೀರಾವರಿಗೆ ಬಳಸಿಕೊಂಡದ್ದು, ಬಾಗೇಪಲ್ಲಿಗೆ ನೀರು ಬೇಕೆಂದು ಜಲಾಶಯ ಕಟ್ಟಲು ಹೋದಾಗ ಆಂಧ್ರದ ಸಂಸದರು, ಶಾಸಕರು ಕರ್ನಾಟಕದೊಳಗೆ ಬಂದು ಸತ್ಯಾಗ್ರಹ ಮಾಡಿ ತಡೆ ಹಿಡಿದದ್ದು, ಈ ಕಾರಣ ನಮ್ಮ ರೈತರಿಗೆ ಅನ್ಯಾಯವಾಗುವಲ್ಲಿ ಒಂದು ಹನಿ ನೀರನ್ನೂ ಬಿಡದಿರುವುದು ಕುರಿತೆಲ್ಲ ಮಾತನಾಡಿದರು. ಸಭಾಧ್ಯಕ್ಷರು ಮಾನ್ಯ ಮುಖ್ಯಮಂತ್ರಿಗಳು ಸಂಜೆ ನಾಲ್ಕು ಗಂಟೆಗೆ ಬಂದು ಈ ಬಗೆಗೆಲ್ಲ ಉತ್ತರಿಸಲು ವ್ಯವಸ್ಥೆ ಮಾಡುವ ಬಗ್ಗೆ ತಿಳಿಸಿದರು. ಸಚಿವ ಶ್ರೀ ಎಂ.ಪಿ.ಪ್ರಕಾಶ್ ಅವರೂ ಈ ಬಗ್ಗೆ ದನಿಗೂಡಿಸಿದರು.

ಮಾನ್ಯ ಮುಖ್ಯಮಂತ್ರಿ ಶ್ರೀ **ಧರ್ಮಸಿಂಗ್** ಅವರು ಆಲಮಟ್ಟಿ ಮತ್ತು ನಾರಾಯಣ ಜಲಾಶಯಗಳಿಂದ ಆಂಧ್ರಕ್ಕೆ ನೀರು ಬಿಡುವ ಬಗ್ಗೆ ವಿವರಗಳನ್ನು ಮಂಡಿಸುತ್ತ ಆಂಧ್ರದ ಕರಾವಳಿ ಪ್ರದೇಶದ ಕೆಲವು ಭಾಗಗಳಲ್ಲಿ ತೀವ್ರ ನೀರಿನ ಅಭಾವ ಪರಿಹರಿಸಲು 20 ಟಿ.ಎಂ.ಸಿ. ನೀರು ಬಿಡುಗಡೆಗೆ 8.7.2004ರಂದು ಖುದ್ದು ಮಾಡಿರುವ ಮನವಿಯ ಪರಿಶೀಲನೆ, ಕನಿಷ್ಠ 50 ಟಿ.ಎಂ.ಸಿ. ನೀರು ಬಿಡಿಸಲು ಪ್ರಧಾನಿಯವರಲ್ಲಿಗೆ ಆಂಧ್ರದ ಸರ್ವಪಕ್ಷ ನಾಯಕರ ನಿಯೋಗ, ಕೃಷ್ಣಾ ಮೇಲ್ದಂಡೆ ಯೋಜನೆಯಲ್ಲಿ 2004ರ ಮುಂಗಾರಿನಲ್ಲಿ 3.84 ಲಕ್ಷ ಹೆಕ್ಟೇರ್ ಪ್ರದೇಶಕ್ಕೆ ವಿವಿಧ ಕಾಲುವೆಗಳಲ್ಲಿ ಒದಗಿಸಬೇಕಾದ ನೀರು, ಉಭಯ ಜಲಾಶಯಗಳಲ್ಲಿನ ನೀರಿನ ಶೇಖರಣೆ, ಒಳಹರಿವು, ಹೊರಹರಿವುಗಳ ವಿವರ, ಆಂಧ್ರದ ಮಾನ್ಯ ಮುಖ್ಯಮಂತ್ರಿ ಶ್ರೀ ರಾಜಶೇಖರ ರೆಡ್ಡಿಯವರು ಜಲಾಶಯದಿಂದ ನೀರು ಬಿಡಲು ದೂರವಾಣಿ ಮೂಲಕ ಮಾಡಿದ ಮನವಿ, ಪ್ರಧಾನ ಮಂತ್ರಿಗಳೊಡನೆ ಈ ಕುರಿತು ಭೇಟಿ ಮಾಡಿ ಹೇಳಿರುವುದು, ಪ್ರಧಾನಮಂತ್ರಿಯವರು ನೀರು ಬಿಡುವ ಬಗ್ಗೆ ಕರ್ನಾಟಕಕ್ಕೆ ಯಾವ ಆದೇಶವನ್ನೂ ಕೊಟ್ಟಿಲ್ಲದಿರುವುದು, ಶ್ರೀ ಪ್ರಿಯರಂಜನದಾಸ್ ಮುನ್ಷಿಯವರಿಗೆ, ಕಬಿನಿ ಜಲಾಶಯದಿಂದ ತಮಿಳುನಾಡಿಗೆ ಸಾಕಷ್ಟು ನೀರು ಇದ್ದ ಕಾರಣ ಬಿಟ್ಟಿರುವ ಬಗ್ಗೆ ಹೇಳಿದ್ದು, ಆಂಧ್ರದ ಸಂಬಂಧದಲ್ಲಿ ವಿಪಕ್ಷನಾಯಕರು, ಇತರ ಫ್ಲೋರ್ ಲೀಡರ್ಸ್ ಜೊತೆ ಮಾತನಾಡಿ ಹೇಳಬೇಕಾದ

ವಿಷಯವಿದು ಎಂದದ್ದು ನಂತರ ಪ್ರಧಾನ ಮಂತ್ರಿಯವರು ದೂರವಾಣಿಯಲ್ಲಿ ಮಾತನಾಡಿದಾಗ 43 ತಾಲೂಕುಗಳು ಬರದಿಂದ ತತ್ತರಿಸಿರುವಲ್ಲಿ ನೀರು ಒದಗಿಸುವ ಸಮಸ್ಯೆ ಆಗಿರುವ ಬಗ್ಗೆ ಹೇಳಿದ್ದು ಆಗ ಖಡ್ಡಾಯವಾಗಿ ನೀರು ಬಿಡಲೇನೂ ಹೇಳದಿದ್ದುದು, ಇಂದು ಮಾಜಿ ಸಚಿವರು ಶಾಸಕರು ಹನಿ ನೀರು ಬಿಟ್ಟರೂ ಪ್ರತಿಭಟನೆ ಆಗುತ್ತದೆ ಎಂದಿರುವುದು, ನಾಲ್ಕೂವರೆ ವರ್ಷಗಳ ನಂತರ ಇಂದು ಎಲ್ಲಾ ಜಲಾಶಯಗಳು ತುಂಬುತ್ತಿದ್ದು ನೀರು ಬಿಡುವ ಬಗ್ಗೆ ಶಾಸಕರೊಡನೆ ಸಮಾಲೋಚಿಸಿ ಮುಂದಿನ ಕ್ರಮ ಕೈಗೊಳ್ಳುವುದು, ರೈತರ ಹಿತ ಕಾಪಾಡುವ ಕಳಕಳಿ ಇರುವುದು, ಕುರಿತೆಲ್ಲ ಹೇಳಿದರು.

ಶ್ರೀ **ಬಿ.ಎಸ್. ಯಡಿಯೂರಪ್ಪನವರು,** ಸರ್ಕಾರ ಕೊಟ್ಟಿರುವ ಉತ್ತರಕ್ಕೆ ಸ್ಟಿಕ್‌ಆನ್ ಆಗಿ ಒಂದು ಹನಿ ನೀರನ್ನು ಕೂಡ ಬಿಡದಿರುವುದು, ನೀರಾವರಿ ಇಲಾಖೆಯವರಿಂದ ಪಡೆದಿರುವ ಅಂಕಿ ಅಂಶಗಳಲ್ಲಿ ತಪ್ಪು ಮಾಹಿತಿ ಇರುವುದು, 5 ಲಕ್ಷ ಹೆಕ್ಟೇರ್‌ವರೆಗೆ ರೈತರು ಸಿದ್ಧತೆಯನ್ನು ಒಳ್ಳೆ ಮಳೆ ಬಿದ್ದ ಕಾರಣ ಮಾಡಿಕೊಂಡಿರುವಲ್ಲಿ 3.84 ಲಕ್ಷ ಹೆಕ್ಟೇರ್‌ನ ವಿವಿಧ ಪ್ರದೇಶದ ಕಾಲುವೆಗಳಿಗೆ ನೀರು ಒದಗಿಸಬೇಕು ಎಂದಿರುವ ಮಾಹಿತಿ ಸರಿ ಅಲ್ಲದಿರುವುದು, ಆ ಪ್ರದೇಶದಲ್ಲಿ 25–30 ಸಾವಿರ ಪಂಪ್‌ಸೆಟ್‌ಗಳಿರುವುದು, ಆಂಧ್ರ ಪ್ರದೇಶಕ್ಕೆ ನೀರಿನ ಅಗತ್ಯತೆ ಇಲ್ಲದಿದ್ದರೂ ನಮ್ಮಲ್ಲಿ ಬಂದು 20 ಟಿ.ಎಂ.ಸಿ. ನೀರು ಬಿಡಿ ಎಂದರೆ ಪ್ರಧಾನಿಯವರಲ್ಲಿಗೆ ಹೋಗಿ 50 ಟಿ.ಎಂ.ಸಿ. ನೀರು ಬಿಡಿಸಿ ಎಂದು ಹೇಳುವ ನಾಟಕ ಏಕೆ ಬೇಕು? 'ಬಿ' ಸ್ಕೀಂ ಟ್ರಿಬ್ಯುನಲ್‌ನ ಮುಂದೆ, ಅಣೆಕಟ್ಟಿನಿಂದ ಉಪಯೋಗಿಸದಿರುವ ನೀರನ್ನೂ ಹಂಚಿಕೆಗೆ ಒಳಪಡಿಸಬೇಕು ಎಂದು ದಾಖಲಾತಿ ಪುರಾವೆ ಒದಗಿಸುವ ಷಡ್ಯಂತ್ರ ರೂಪಿಸಿರುವುದು, ಕುರಿತೆಲ್ಲ ನುಡಿದರು. ನಂತರ ಆಂಧ್ರ ಪ್ರದೇಶದಲ್ಲಿ 231 ಟಿ.ಎಂ.ಸಿ. ನೀರು ಇದ್ದೂ, 'ಬಿ'ಸ್ಕೀಂ ನೀರು ಹಂಚಿಕೆಗೆ ತರುತ್ತಿರುವ ಒತ್ತಡದ ತಂತ್ರಗಾರಿಕೆ. ಸ್ಪಷ್ಟವಾದ ಅಂಕಿ ಅಂಶಗಳ ಒದಗಣೆ, ಸರ್ಕಾರವು ಕೊಟ್ಟಿರುವ ಅನುದಾನಕ್ಕಿಂತ ಹೆಚ್ಚು ಖರ್ಚುಮಾಡಿರುವುದು, ನೀರಾವರಿಗೆ 50% ಗಿಂತಲೂ ಕಡಿಮೆ ಪ್ರದೇಶವನ್ನು ಒಳಪಡಿಸಿರುವುದು, ಇತ್ಯಾದಿ ವಿಷಯಗಳ ಬಗೆಗೆಲ್ಲ ಮಾತನಾಡಿದರು. ಭೀಮಾನದಿ ನೀರಿನಲ್ಲಿ 15 ಟಿ.ಎಂ.ಸಿ. ಆಲಾಟ್ ಆಗಿರುವಲ್ಲಿ, ಅದನ್ನು ತೆಗೆದುಕೊಳ್ಳದೆ ಹೋಗಿರುವುದು, ಭೀಮಾನದಿ ಇಂದು ಖಾಲಿಯಾಗಿ ಕೆಳಗಡೆಯ ರೈತರು ಬರಗಾಲಕ್ಕೆ ಸಿಕ್ಕಿ ಸಂಕಟಪಡುತ್ತಿರುವುದು, ಆದರೂ ರೈತರು ಆ ಚಾನಲ್‌ನನ್ನು ಕಾಯುವ ಪ್ರಯತ್ನ ಮಾಡುತ್ತಿರುವುದು. ರೈತರು ಚಳುವಳಿ ಮಾಡದಿರುವಂತಾಗಲು ಒಂದು ಹನಿ ನೀರನ್ನೂ ಬಿಡಬಾರದು ಎನ್ನುವ ಒತ್ತಾಯ ಮಾಡುತ್ತ ಸಮಗ್ರ ತನಿಖೆಗೆ ಮನವಿ ಮಾಡಿದರು.

**ಶ್ರೀ ವಾಟಾಳ್ ನಾಗರಾಜ್** ಅವರು, ತಮಿಳುನಾಡಿನವರು ನೀರು ಇಲ್ಲವೆಂದು ಚಿತ್ರಣ ಕೊಡಲು ಡೆಲ್ಲಿಗೆ ಹೋಗುತ್ತಿರುವುದು, ನಾವು ಸುಮ್ಮನಿರುವುದು ಇದು ಸರಿಯಲ್ಲ. ಅಂತಾಗಿ ನಮ್ಮ ರೈತರಿಗೂ ಇರುವ ತೊಂದರೆ ತಪ್ಪಿಸಿ ಎಂದು ಕಳಕಳಿಯ ಮನವಿ ಇಟ್ಟರು. ಶ್ರೀ ಗೋವಿಂದ ಕಾರಜೋಳ ಅವರು 43 ತಾಲ್ಲೂಕಿನ ಬಿತ್ತನೆ ಬೆಳೆಯೆಲ್ಲ ಹಾಳಾಗುತ್ತಿದೆ, ಒಣಗಿ ಹೋಗುತ್ತಿದೆ. ಏನು ಈ ಪ್ರದೇಶದ ಜನ ನೀರನ್ನು ನಂಬಿ ಬಿತ್ತನೆ ಮಾಡಿದ್ದರು, ಅವರಿಗೆ ಕನಿಷ್ಠ ಪರಿಹಾರವಾಗಿ ಗೊಬ್ಬರ, ಬೀಜಕ್ಕೆ ಖರ್ಚುಮಾಡಿರುವುದನ್ನಾದರೂ ಸರ್ಕಾರ ಭರಿಸಲಿ ಎಂದರು. ಮಾನ್ಯ **ಶ್ರೀ ಧರ್ಮಸಿಂಗ್** ಅವರು ಮಾತನಾಡಿ ನೀರು ಬಿಟ್ಟಿಲ್ಲವೆಂದು ನಾವು ಹೇಳಿದರೆ, ಬಿಟ್ಟಿದ್ದಾರೆ ಎಂಬ ಸುದ್ದಿಯಿಂದ ರೈತರು ಆಕ್ರೋಶ ವ್ಯಕ್ತ ಪಡಿಸಿದ್ದಾರೆ. ಪ್ರತಿಭಟನೆ ಮಾಡುವ ಸ್ಥಿತಿಯಲ್ಲಿದ್ದಾರೆ. 15 ಟಿ.ಎಂ.ಸಿ. ವಾಟರ್ ಬಗ್ಗೆ ಭೀಮಾನದಿಗೆ ಎರಡು ಬ್ಯಾರೇಜಸ್ ಮಾಡಿದೆ. ಯಾದಗೀರ್‌ನಲ್ಲಿ ಅದು ಆಗಿದೆ. ಭೀಮಾ ಏತ ನೀರಾವರಿ ಈ ತರಹ ಆಗಿ 15 ಟಿ.ಎಂ.ಸಿ. ನೀರು ಉಜ್ಜನಿಯಿಂದ ಬರುವಲ್ಲಿ ಬಳಸಿಕೊಳ್ಳುವ ವ್ಯವಸ್ಥೆಯನ್ನು ಸರ್ಕಾರ ಮಾಡಿದೆ. ಬಚಾವತ್ ಸಂಬಂಧದ ಸಲಹೆಗಳೂ ಪರಿಶೀಲನೆಯಲ್ಲಿದೆ. ಬಜೆಟ್‌ನಲ್ಲೂ ಇಲಾಖೆ ಬೇಡಿಕೆಯಲ್ಲೂ ಪ್ರಸ್ತಾಪ ಮಾಡಲಾಗುವುದು. ಈ ಅಧಿವೇಶನದ ನಂತರ ನಿಯೋಗದ ಮೂಲಕ ಪ್ರಧಾನಮಂತ್ರಿಗಳ ಬಳಿ ಹೋಗಿ ಸರ್ಕಾರದ ಸಮಸ್ಯೆಗಳನ್ನು ಮುಂದಿಡುತ್ತೇವೆ ಎಂದರು. ಕೃಷ್ಣಾ ಜಲಾನಯನ ಪ್ರದೇಶಕ್ಕೆ ಸಂಬಂಧಿಸಿದಂತೆ ನೀರಾವರಿ ಮಾಡಬೇಕಾದ ಹೆಕ್ಟೇರ್ ಪ್ರಮಾಣ, ಅಲಾಟ್‌ಮೆಂಟ್ ಖರ್ಚು, ಆಗಿರುವ ನೀರಾವರಿ ಪ್ರಮಾಣ ಕುರಿತೆಲ್ಲ ಶ್ರೀ ಬಿ.ಎಸ್.ಯಡಿಯೂರಪ್ಪನವರು ಸಮಗ್ರ ತನಿಖೆ ಮಾಡಿಸಿ ಎಂದಾಗ, ಶ್ರೀ ಧರ್ಮಸಿಂಗ್ ಅವರು ಅದನ್ನೆಲ್ಲ ಮಾಡಿಸಿ ನಂತರ ಹೇಳಿಕೆ ಕೊಡುತ್ತೇನೆ ಎಂದರು.

## ವಿಷಯ 28: ಏತ ನೀರಾವರಿ – ವಿದ್ಯುತ್ ಬಿಲ್ ಸರ್ಕಾರ ಕಟ್ಟದೆ ರೈತರಿಗೆ ತೊಂದರೆ

**ಶ್ರೀ ಅರಗ ಜ್ಞಾನೇಂದ್ರ** ಅವರು 26.7.2002ರ ವಿಧಾನಸಭಾಧಿವೇಶನದಲ್ಲಿ[38] ತೀರ್ಥಹಳ್ಳಿ ಕ್ಷೇತ್ರದಲ್ಲಿ ಆರು ಸಣ್ಣ ಸಣ್ಣ ಏತ ನೀರಾವರಿ (ಯೋಜನೆ)ಗಳನ್ನು ತುಂಗಾ ನದಿಯಿಂದ ಸರ್ಕಾರ ಹಾಕಿದೆ. ಮಲೆನಾಡು ತಾಲೂಕಿನಲ್ಲಿ ಈ ವರ್ಷ ಮಳೆ ಇಲ್ಲದೆ ಬರ ಬಂದಿದ್ದು ನಾಟಿ ಮಾಡದಿರುವಂಥ ಪರಿಸ್ಥಿತಿ ಇದೆ. ಆರು

38. ವಿಧಾನಸಭಾ ನಡವಳಿಕೆಗಳು., ಸಂಪುಟ 6 (1–2), (26.7.2002), ಪು. 1444–46

ಲಿಫ್ಟ್ ಇರಿಗೇಷನ್‌ಗಳನ್ನು ಚಾಲೂ ಮಾಡಿದರೆ ರೈತರಿಗೆ ಅನುಕೂಲವೆಂದರೆ, ಆ ನೀರಾವರಿಗೆ ಕೊಟ್ಟಂಥ ವಿದ್ಯುತ್ ಸಂಪರ್ಕ ಕಡಿದು ಹೋಗಿದೆ ಎಂದರು. ಸರ್ಕಾರ ಈ ಸಂಬಂಧ ವಿದ್ಯುತ್ ಇಲಾಖೆಗೆ ಕಟ್ಟಬೇಕಾದ ಹಣ ಕಟ್ಟದ ಕಾರಣ ಡಿಸ್‌ಕನೆಕ್ಷನ್ ಮಾಡಿದೆ. ನೆಟ್ಟ ಸಸಿ ಮಡಿ ಒಣಗುತ್ತಿದೆ. ನಾಟಿ ಮಾಡಲಾಗುವುದಿಲ್ಲ. ತುಂಗೆಯ ನೀರು ಬಳಸಿ ನಾಟಿ ಮಾಡಲು ವಿದ್ಯುತ್ ಶುಲ್ಕವನ್ನು ತಕ್ಷಣ ಸರ್ಕಾರ ಕಟ್ಟಬೇಕು. ಹಣ ಕೊಟ್ಟಿಲ್ಲವಾಗಿ ಇಲಾಖೆಯೂ ಸುಮ್ಮನಾಗಿದೆ. ಇಂಥ ದುಸ್ಥಿತಿಯಲ್ಲಿ ತಾಲೂಕಿನ ರೈತರು ನರಳುತ್ತಿದ್ದಾರೆ. ಸಣ್ಣ ನೀರಾವರಿ ಇಲಾಖೆವತಿಯಿಂದ ತಕ್ಷಣ ವಿದ್ಯುತ್ ಸಂಪರ್ಕವನ್ನು ಕೊಡಿಸಬೇಕು. ವಿದ್ಯುತ್ ಹಣ ಕಟ್ಟಲಿಕ್ಕೆ ಆಗದಿದ್ದರೆ ಕೆಪಿಟಿಸಿಎಲ್‌ಗೆ ಜವಾಬ್ದಾರಿ ಕೊಟ್ಟು ರೀಕನೆಕ್ಷನ್ ಮಾಡಲು ಸರ್ಕಾರ ಆದೇಶಿಸಬೇಕು, ಎಂದರು.

ಸಚಿವ **ಶ್ರೀ ಮಲ್ಲಿಕಾರ್ಜುನ ಖರ್ಗೆ** ಅವರು, ಸಂಬಂಧಪಟ್ಟ ಚೀಫ್ ಎಂಜಿನಿಯರ್ ಅವರನ್ನು ಕರೆಸಿ ಮಾತನಾಡುವ ಬಗ್ಗೆ, ಇಲಾಖೆಯಲ್ಲಿ ಹಣ ಬಿಡುಗಡೆ ಆಗುವವರಿಗೆ ಬೇರೆ ಪರಿಹಾರ ಕಂಡು ಹಿಡಿಯುವ ಬಗ್ಗೆ ಹೇಳಿದರು. ಶ್ರೀ **ಪಿ.ಜಿ.ಆರ್.ಸಿಂಧ್ಯಾ** ಅವರು ಸಣ್ಣ ನೀರಾವರಿಯಲ್ಲಿ 250 ಕೋಟಿ ರೂ. ಬಾಕಿ ಬಿಲ್ ಕೊಡಬೇಕಿದೆ ಎಂದರು. ಶ್ರೀ ಮಲ್ಲಿಕಾರ್ಜುನ ಖರ್ಗೆ ಅವರು ನಬಾರ್ಡ್ ಕೊಟ್ಟಿದ್ದು ಸೇರಿದಂತೆ 25 ಕೋಟಿ ಬಿಡುಗಡೆ ಮಾಡಿದ್ದಿದೆ; ಈಗ ಎಲೆಕ್ಟ್ರಿಸಿಟಿ ಬಿಲ್ ಬಾಕಿ ತುಂಬಲು ಆರ್ಥಿಕ ಇಲಾಖೆಯನ್ನು ಸಂಪರ್ಕಿಸಿ ಸಹಾಯ ಮಾಡುವಷ್ಟು ಮಾಡುತ್ತೇನೆ ಎಂದರು. **ಶ್ರೀ ಶಿವಾನಂದ ಎಸ್.ಪಾಟೀಲ್** ಅವರು, ಸಣ್ಣ ನೀರಾವರಿ ಇಲಾಖೆಯಲ್ಲಿ ಲ್ಯಾಂಡ್‌ಅಕ್ವಿಜಿಷನ್ ಸಲುವಾಗಿ ಹಣವಿಲ್ಲ. ಪೆಂಡಿಂಗ್ ಇರುವ ಲ್ಯಾಂಡ್ ಅಕ್ವಿಜಿಷನ್‌ನ ಸುಮಾರು 4 ಕೋಟಿ ರೂ ಗ್ರಾಂಟ್ ಅನ್ನು ರಿಲೀಸ್ ಮಾಡಿ ಎಂದರು. ಶ್ರೀ ಮಲ್ಲಿಕಾರ್ಜುನ ಖರ್ಗೆ ಅವರು ಆ ಬಗ್ಗೆ ಪರಿಶೀಲಿಸುವುದಾಗಿ ತಿಳಿಸಿದರು.

## ವಿಷಯ 29: ದಾವಣಗೆರೆ ಜಿಲ್ಲೆ ಉಬ್ರಾಣಿ ಏತ ನೀರಾವರಿ ಯೋಜನೆ ಜಾರಿ

8.1.2004ರ ವಿಧಾನ ಪರಿಷತ್ತಿನ ಅಧಿವೇಶನದಲ್ಲಿ[39] ವಿಪಕ್ಷನಾಯಕ ಶ್ರೀ **ಡಿ.ಎಚ್.ಶಂಕರಮೂರ್ತಿ,** ಉಬ್ರಾಣಿ ಗ್ರಾಮದ ಏತ ನೀರಾವರಿಗೆ ಬಜೆಟ್‌ನಲ್ಲಿ 5 ಕೋಟಿ ರೂ. ನಿಗದಿ ಮಾಡಿದ್ದರೂ, 9 ತಿಂಗಳು ಕಳೆದರೂ ಯೋಜನೆಯ

---

39. ವಿಧಾನ ಪರಿಷತ್ತಿನ ನಡವಳಿಕೆಗಳು., ಸಂಪು.1(1–4), (8.1.2004), ಪು.449–50

ಕೆಲಸ ಆಗಲಿಲ್ಲ. ಈ ಕಾರಣ ತಹಸೀಲ್ದಾರ್ ಕಛೇರಿ ಮುಂದೆ ಧರಣಿ ಸತ್ಯಾಗ್ರಹ ನಡೆಯುತ್ತಿದ್ದು ಎಲ್ಲ ಕ್ಷೇತ್ರದ ಜನರು ಪಾಲ್ಗೊಳ್ಳುತ್ತಿದ್ದಾರೆ. ಜಿಲ್ಲಾಧಿಕಾರಿ, ಎಸ್ಪಿಯವರು ಭೇಟಿ ಮಾಡಿ ಸರೂ ಧರಣಿಯಲ್ಲಿ ಭಾಗವಹಿಸುವವರ ಸಂಖ್ಯೆ ಹೆಚ್ಚುತ್ತಿದೆ. ಕೆಲಸ ಆರಂಭವಾಗುತ್ತದೆ ಎಂದರೆ ಧರಣಿ ಸತ್ಯಾಗ್ರಹ ನಿಲ್ಲುತ್ತದೆ, ಇಲ್ಲವಾದರೆ ಪ್ರಕ್ಷುಬ್ಧ ವಾತಾವರಣ ಹೆಚ್ಚುತ್ತದೆ. ಇದಕ್ಕೆ ಸರ್ಕಾರದ ಉತ್ತರ ಬೇಕು ಎಂದರು.

ಶ್ರೀ **ಹೆಚ್.ಕೆ. ಪಾಟೀಲ್** ಅವರು, ಟಾಟಾ ಕನ್ಸಲ್‌ಟೆನ್ಸಿಯವರು ಸಿದ್ಧ ಮಾಡಿದ 85 ಕೋಟಿ ರೂ.ಗಳ ಯೋಜನೆಯನ್ನು ಸ್ವಲ್ಪ ಬದಲಾಯಿಸಿ ಸ್ಕೀಮ್ ಎ ಮಾದರಿಯಲ್ಲಿ ಸರ್ಕಾರವು ಪರಿಶೀಲಿಸಿ ಆಡಳಿತಾತ್ಮಕ ಮಂಜೂರಾತಿ ನೀಡಿದೆ. ಅದಾಗಿ ವಿರೋಧ ಪಕ್ಷ ನಾಯಕರ ಕಳಕಳಿ ಹಾಗು ಸಾರ್ವಜನಿಕರ ಒತ್ತಡ ಕುರಿತು ಸಮಾಲೋಚನೆ ಮಾಡುವ ಬಗ್ಗೆ ತಿಳಿಸಿದರು. ಶ್ರೀ ಡಿ.ಎಚ್.ಶಂಕರ ಮೂರ್ತಿ ಅವರು ಯೋಜನೆ ಕಾರ್ಯರೂಪದಲ್ಲಿರಲು, ಧರಣಿ–ಸತ್ಯಾಗ್ರಹದ ಅವಶ್ಯಕತೆ ಇಲ್ಲ ಎಂದು ಹೇಳಿದರೆ, ಅದು ಮುಗಿಯುತ್ತದೆ ಎಂದರು. ಶ್ರೀ ಹೆಚ್.ಕೆ.ಪಾಟೀಲ್ ಅವರು, ಆಡಳಿತಾತ್ಮಕ ಮಂಜೂರಾತಿ, ಹಣಕಾಸು ಮಂಜೂರಾತಿ, ಟೆಕ್ನಿಕಲ್ ಕ್ಲಾರಿಫಿಕೇಷನ್ ಎಲ್ಲ ಪ್ರಕ್ರಿಯೆ ಮುಗಿದಿರುವಲ್ಲಿ ಧರಣಿ–ಸತ್ಯಾಗ್ರಹ ಮಾಡುವ ಅವಶ್ಯಕತೆ ಇಲ್ಲ. ರಾಜ್ಯ ಸರ್ಕಾರ ಆದಷ್ಟು ಬೇಗ ಕೆಲಸ ಆರಂಭಿಸುತ್ತದೆ ಎಂದರು.

## ವಿಷಯ 30: ಸಿಂಗಟಾಲೂರು ಏತ ನೀರಾವರಿ ಯೋಜನೆ – ತುಂಗಭದ್ರಾ ಅಣೆಕಟ್ಟು ರೈತರಿಗೆ ನೀರಿನ ಕೊರತೆ

2.8.2004ರ ವಿಧಾನ ಸಭಾಧಿವೇಶನದಲ್ಲಿ[40] ಶ್ರೀ **ಎನ್.ಎಸ್. ಭೋಸರಾಜು** ಅವರು ಸಿಂಗಟಾಲೂರು ನೀರಾವರಿ ಯೋಜನೆ ಮತ್ತು ತುಂಗಭದ್ರ ಅಣೆಕಟ್ಟು ರೈತರಿಗೆ ನೀರಿನ ಕೊರತೆ ಬಗ್ಗೆ ಜಲಸಂಪನ್ಮೂಲ ಸಚಿವರ ಗಮನ ಸೆಳೆದರು. ಅದಕ್ಕೆ ಸಚಿವ **ಶ್ರೀ ಪಿ.ಜಿ.ಆರ್. ಸಿಂಧ್ಯಾ** ಅವರು ಉತ್ತರಿಸುತ್ತ, ಕೊಪ್ಪಳ, ಗದಗ ಜಿಲ್ಲೆಯ ಬರಪೀಡಿತ ಪ್ರದೇಶಕ್ಕೆ ನೀರಾವರಿ ಸೌಲಭ್ಯಕ್ಕಾಗಿ **595 ಕೋಟಿ** ರೂಗಳ ಸಮಗ್ರ ಯೋಜನಾ ವರದಿ, ಆಡಳಿತಾತ್ಮಕ ಅನುಮೋದನೆ, 18.55 ಟಿ.ಎಂ.ಸಿ. ಅಡಿಗಳ ನೀರಿನ ಬಳಕೆ, 1,18000 ಎಕರೆ ನೀರಾವರಿ ಪ್ರದೇಶದಲ್ಲಿ 1 ಲಕ್ಷ 67 ಸಾವಿರ ಎಕರೆ ಬೆಳೆ ಬೆಳೆಯುವುದು, ಈ ಯೋಜನೆಯಿಂದ ತುಂಗಭದ್ರಾ ಯೋಜನಾ

40. ವಿಧಾನಸಭಾ ನಡವಳಿಕೆಗಳು, ಸಂಪುಟ 8, ಭಾಗ–I, (2.8.2004), ಪು.462–73

ಪ್ರದೇಶದ ಮೇಲೆ ಪರಿಣಾಮವಾಗುವ ಆತಂಕವನ್ನು ರೈತರು ವ್ಯಕ್ತಪಡಿಸಿದ ಕಾರಣ ಶ್ರೀ ಕೆ.ಸಿ.ರೆಡ್ಡಿ ಅಧ್ಯಕ್ಷತೆಯ ತಾಂತ್ರಿಕ ಸಲಹಾ ಸಮಿತಿಯ ಅಧ್ಯಯನ ವರದಿಯನ್ನು 2002ರಲ್ಲಿ ಪಡೆದು ಪರಿಶೀಲಿಸಿ ಪರಿಷ್ಕೃತ ಆದೇಶ ನೀಡಿದುದು: (ಮಳೆಗಾಲದ ಸಮಯದಲ್ಲಿ ಮಾತ್ರ ಹೆಚ್ಚುವರಿ ನೀರಿನ ಬಳಕೆ; ಯೋಜನೆಯ ಸಂಗ್ರಹಣ ಸಾಮರ್ಥ್ಯ 26 ಟಿ.ಎಂ.ಸಿ. ಇರುವಂಥದ್ದು; lean ಸೀಸನ್‌ನಲ್ಲಿ 2.6 ಟಿ.ಎಂ.ಸಿ. ಮೀರಿ ನೀರು ಬಳಸದಿರುವುದು; ಕುಡಿಯುವ ಹಾಗು ಅಗತ್ಯತೆಯ ಪೂರೈಕೆಗಾಗಿ ಮಾತ್ರ 2:6 ಟಿ.ಎಂ.ಸಿ. ನೀರು ಇರುವುದು, ಯೋಜನೆಯು ಏಕ ಬೆಳೆಗೆ ಮಾತ್ರ ಸೀಮಿತ; ಯೋಜನೆಗೆ ನಿಗದಿಗೊಳಿಸಲಾದ ಪ್ರಮಾಣದಷ್ಟು ನೀರು ನವೆಂಬರ್‌ನಿಂದ ಮೇತಿಂಗಳವರೆಗೆ ಹರಿಯುವಂತೆ ಮೇಲುಸ್ತುವಾರಿ ಇರುವುದು, ಎಂದೆಲ್ಲ ಆದೇಶದಲ್ಲಿದೆ) ಆವಿಯ ಪ್ರಮಾಣ 0.532 ಟಿ.ಎಂ.ಸಿ. ಸೇರಿಸಿ 15.95 ಟಿ.ಎಂ.ಸಿ. ನೀರು ಬಳಸಿ 1,67,000 ಎಕರೆ ಪ್ರದೇಶಕ್ಕೆ ನೀರಾವರಿ ಸೌಲಭ್ಯವನ್ನು (ಹೂವಿನ ಹಡಗಲಿ, ಮುಂಡರಗಿ, ಗದಗ, ಕೊಪ್ಪಳ) ಕಲ್ಪಿಸುವ ಪ್ರಸ್ತಾವನೆ ಮಾಡಿರುವುದು, ಸಿಂಗಟಾಲೂರು ಅಣೆಕಟ್ಟು ಹಾಗು ತತ್ಸಂಬಂಧೀ ಕಾಮಗಾರಿಗಳನ್ನು ಕರ್ನಾಟಕ ರಾಜ್ಯ ನಿರ್ಮಾಣ ನಿಗಮದ ಮುಖಾಂತರ ಮುಂದುವರಿಸುವ ಆದೇಶದನ್ವಯ ಕ್ರಮಕೈಗೊಳ್ಳುತ್ತಿರುವುದು, ಯೋಜನಾರಂಭದಿಂದ ಈವರೆಗೆ 27.65 ಕೋಟಿ ವೆಚ್ಚವಾಗಿದ್ದು 2004–05 ನೇ ಸಾಲಿನಲ್ಲಿ ಯೋಜನೆಗೆ 18 ಕೋಟಿ ರೂ. ಅನುದಾನ ಒದಗಿಸಿರುವುದು ಕುರಿತೆಲ್ಲ ತಿಳಿಸಿದರು.

ಶ್ರೀ ಎನ್.ಎಸ್.ಭೋಸರಾಜು ಅವರು, ಸಿಂಗಟಾಲೂರು ಏತ ನೀರಾವರಿ ಯೋಜನೆ (ಬಜಾವತ್ ಟ್ರಿಬ್ಯೂನಲ್ ಅನುಸಾರ) ಮಾಡಲು ಪ್ರಸ್ತಾವನೆ ಸರ್ಕಾರದ ಮುಂದೆ ಬಂದಿದೆ. ಸಹಜವಾಗಿ 50 ವರ್ಷದಿಂದ ತುಂಗಭದ್ರ ಡ್ಯಾಂನಿಂದ 10 ಲಕ್ಷ ಎಕರೆ ಜಮಿನುಗಳಿಗೆ ನೀರಾವರಿ ಸೌಲಭ್ಯ ಪಡೆದುಕೊಳ್ಳುತ್ತಿದ್ದವರು ರಾಯಚೂರು, ಕೊಪ್ಪಳ, ಬಳ್ಳಾರಿ ಜಿಲ್ಲೆಯಲ್ಲಿ ಪ್ರತಿಭಟನೆ ಮಾಡಿದರು. ಸರ್ಕಾರ ಕೆ.ಸಿ.ರೆಡ್ಡಿಯವರ ಸಮಿತಿ ನೇಮಿಸಿತು. ವರದಿಯೂ ಬಂದಿದೆ. ಸಿಂಗಟಾಲೂರು ಏತ ನೀರಾವರಿಯ ಬಗ್ಗೆ ಅಲ್ಲಿಯ ರೈತರು ಕೇಳಿದಾಗ ಸಚಿವರ ಆಶ್ವಾಸನೆ ಆಗಿದೆ. ಇದರಿಂದ ಕಳೆದ 4 ವರ್ಷಗಳಿಂದ ಸತತ ಬರಗಾಲದ ಕಾರಣ ಬೇಸಿಗೆ ಬೆಳೆಗೆ ನೀರು ಹರಿಯದೆ ತೊಂದರೆಯಾಗಿರುವಲ್ಲಿ ರಾಯಚೂರು, ಕೊಪ್ಪಳ, ಬಳ್ಳಾರಿ ಜಿಲ್ಲೆಯ ಹಳೇ ಅಚ್ಚುಕಟ್ಟು ಪ್ರದೇಶದ ರೈತರಿಗೆ ಆತಂಕವಾಗಿದೆ. ಬಚಾವತ್ ತೀರ್ಪಿನ ಪ್ರಕಾರ 7 1/2 ಟಿ.ಎಂ.ಸಿ. ನೀರನ್ನು ರಾಜ್ಯವು ಬಳಸಿಕೊಳ್ಳುವಲ್ಲಿ ಯಾರಿಗೂ ಆತಂಕವಿಲ್ಲ.

ಕೆ.ಸಿ.ರೆಡ್ಡಿಯವರ ವರದಿಯಲ್ಲೂ ಆ ಬಗ್ಗೆ ಸಲಹೆ ಸೂಚನೆ ಇದೆ. ಈ ಹಿನ್ನೆಲೆಯಲ್ಲಿ ಮೇಲ್ಲೂಚಿತ ಜಿಲ್ಲೆಗಳ ರೈತರ ಪರಿಸ್ಥಿತಿಯನ್ನು ವರದಿಯಲ್ಲಿ ವಿವರಿಸಿರುವಲ್ಲಿ, ಇರುವಂಥ 10 ಲಕ್ಷ ಎಕರೆ ಪ್ರದೇಶದ ನೀರಾವರಿಗೆ ಏನೂ ತೊಂದರೆಯಾಗದಂತೆ ಬಚಾವತ್ ತೀರ್ಪಿನಲ್ಲಿ ದತ್ತವಾಗಿರುವ ಅವಕಾಶದಷ್ಟು ಮಾತ್ರ ಅನ್ವಯಿಸಿ ಮುಂದುವರಿಯಬೇಕು ಎಂದು ವಿನಂತಿಸಿದರು.

**ಶ್ರೀ ಡಿ.ಆರ್. ಪಾಟೀಲ್** ಅವರು: ಗದಗ, ಕೊಪ್ಪಳ ಜಿಲ್ಲೆಯ ಹೆಚ್ಚಿನ ಜಮೀನನ್ನು ನೀರಾವರಿಗೆ ಅಳವಡಿಸಿಕೊಳ್ಳಲು ಮಾರ್ಪಾಡು ಯೋಜನೆಯಲ್ಲಿ 18.55 ಟಿ.ಎಂ.ಸಿ. ನೀರು ಬಳಕೆ 595 ಕೋಟಿ ರೂ ಯೋಜನೆಗೆ ಮಂಜೂರಾತಿ ಆದ ಮೇಲೆ ರಾಯಚೂರು ಬಳ್ಳಾರಿ ಜಿಲ್ಲೆ ರೈತರ ವಿರೋಧದ ಕಾರಣ, ರೂಪಿಸಿದ ಕೆ.ಸಿ.ರೆಡ್ಡಿ ಸಮಿತಿಯ ವರದಿ ಬಂತು. ಅದರ ರೀತ್ಯಾ 12 ಟಿ.ಎಂ.ಸಿ ನೀರು ಬಳಸಿಕೊಳ್ಳಬೇಕೆಂದಾಯಿತು. ನಂತರ ರೈತರ ಮುಖಂಡರ, ಶಾಸಕರ ಸಭೆಯನ್ನು ಮುಖ್ಯಮಂತ್ರಿಗಳು ಕರೆದು ಸಭಾಭಿಪ್ರಾಯದ ಮೇಲೆ ಶರತ್ತುಗಳಂತೆ ಬಳಸಲು ಅವಕಾಶವೆಂದಾಯಿತು. ಆಂಧ್ರ, ತಮಿಳುನಾಡುನಲ್ಲಿರುವಂಥ ಮಾದರಿಯಲ್ಲಿ ದೊಡ್ಡಬಳ್ಳಾಪುರದ ಶ್ರೀ ನಾರಾಯಣರೆಡ್ಡಿ ಅವರು ಭತ್ತವನ್ನು ಕಡಿಮೆ ನೀರನ್ನು ಬಳಸಿ ಯಾವ ರೀತಿ ಬೆಳೆಯುಬಹುದೆಂಬ ಹೊಸಪ್ರಯೋಗ ಮಾಡಿ ಯಶಸ್ವಿಯಾಗಿರುವುದನ್ನು ಯೂನಿವರ್ಸಿಟಿ ಹಾಗೂ ಕೃಷಿ ಇಲಾಖೆಯವರು ಒಪ್ಪಿಕೊಂಡಿದ್ದಾರೆ. ಅವರನ್ನು ಕರ್ನಾಟಕ ರಾಜ್ಯದಲ್ಲೂ ಉಪಯೋಗ ಮಾಡಿಕೊಳ್ಳಬೇಕು. ಇಂಥ ಬೆಳೆಗಾರಿಕೆಗೆ ನೀರು ಮೂರನೇ ಒಂದು ಭಾಗ ಮಾತ್ರ ಸಾಕು. ಭತ್ತದ ಬೀಜವನ್ನು ನಾಟಿ ಮಾಡುವ ಬದಲು 15 ಸೆಂ.ಮೀ.ಗೆ ಒಂದರಂತೆ ಹೂಳುತ್ತಾ ಹೋಗಬೇಕು. ಇನ್‌ಪುಟ್ ಕಡಿಮೆ, ನೀರು ಕಡಿಮೆ ಬೆಳೆ ದುಪ್ಪಟ್ಟು ಆಗುವಂಥದ್ದು. ಇದನ್ನು ಮೂರರಷ್ಟು ಮಾಡುವ ವಿಶ್ವಾಸ ನಾರಾಯಣ ರೆಡ್ಡಿಯವರದು. ಆದ್ದರಿಂದ ಈ ಉದಾಹರಣೆ ಗಮನಿಸಿ. ನಾವೂ ಅಫೆಕ್ಟೆಡ್ ಪಾರ್ಟಿ ಆಗಿರುವಲ್ಲಿ ಅಂದರೆ, ಗದಗ, ಕೊಪ್ಪಳದವರು, ರಾಯಚೂರು ಬಳ್ಳಾರಿ ಜಿಲ್ಲೆಯವರಿಗೆ ಬರುವಂಥ ನೀರು ಕಡಿಮೆಯಾಗಬೇಕೆನ್ನದೆ, ಅವರಿಗೆ ನೀರು ಸಾಕಾಗಿ ಉಳಿದ ನೀರು ನಮಗೆ ಬರಲಿ ಎಂಬುದಷ್ಟೆ. ಆಗಿ ಇದಕ್ಕೆ ಸಹಕರಿಸಬೇಕು, ಎಂದರು. ಶ್ರೀ ಎನ್.ಎಸ್.ಭೋಸರಾಜು ಅವರು, ನೀರನ್ನು ಹೇಗೆ ಬಳಸಬೇಕೆಂಬುದಕ್ಕೆ ಮಾನ್ಯ ಡಿ.ಆರ್.ಪಾಟೀಲ್ ಕೊಟ್ಟ ಉದಾಹರಣೆ ಗಮನಕ್ಕೆ ಬಂದು ಸರ್ಕಾರದ ದಾಖಲೆಯಲ್ಲಿದೆ. 10 ಲಕ್ಷ ಎಕರೆ ಭೂಮಿಯಲ್ಲಿ ಎರಡು ಲಕ್ಷ ಎಕರೆ ಭೂಮಿಗೆ

ನೀರು ಇಲ್ಲ. 20 ವರ್ಷಗಳಿಂದ ಟೈಲ್ ಎಂಡರ್ಸ್, ಆಗಿ ಅನೇಕ ಬಾರಿ ಹೋರಾಟಗಳು ನಡೆದು ಅಧಿಕಾರಿಗಳು ಬಂದು ರಿಪೋರ್ಟ್ ಮಾಡಿರುವುದಿದೆ. ಸದನ ಸಮಿತಿ ಮಾಡಿ ಅದು ಅಲ್ಲಿಗೆ ಬಂದು ನೋಡಿದರೆ ಸಂತೋಷ. 50 ವರ್ಷಗಳ ಹಳೆಯ ಪ್ರಾಜೆಕ್ಟ್ ಇಟ್ಟುಕೊಂಡು, ರೈತರಿಗೆ ತೊಂದರೆ ಮಾಡಿ, 6 ಕೋಟಿ ಖರ್ಚಿನಲ್ಲಿ ಪ್ರಾಜೆಕ್ಟ್ ಲಿಫ್ಟ್ ಇರಿಗೇಷನ್ ಮಾಡಿ, ಉಭಯ ಪ್ರದೇಶದ ರೈತರಿಗೂ ಸಿಗದಂತೆ ಮಾಡಿ ರೈತರಿಗೆ ತೊಂದರೆ ಆಗಿರುವುದು ತುಂಗಭದ್ರೆಯಲ್ಲಿಂದ 4 ವರ್ಷಗಳಿಂದ ನೀರು ಹರಿಯದಿರುವುದು, 7 ತಿಂಗಳ ಕಾಲ ಆ ನದಿಯಲ್ಲಿ ನೀರಿಲ್ಲದಿರುವುದು, ಇದು ಸರ್ಕಾರದ ಗಮನಕ್ಕೂ ಬಂದಿರುವುದು ಸರ್ಕಾರ ಸಮತೋಲನ ಜಲಾಶಯಗಳನ್ನು ನಿರ್ಮಿಸಿ ನೀರು ಸರಬರಾಜು ಮಾಡುವಂಥ ಪರಿಸ್ಥಿತಿ, ಆಂಧ್ರ ಮತ್ತು ಕರ್ನಾಟಕ ರಾಜ್ಯಗಳ ಜಾಯಿಂಟ್ ಪ್ರಾಜೆಕ್ಟ್ ಆಗಿರುವಲ್ಲಿ, ರಿಸರ್ವಾಯರ್‌ನಿಂದ ಸಿಲ್ಟ್ ತೆಗೆಯುವುದು, ಡ್ಯಾಮ್‌ಗೇಟ್‌ಅನ್ನು ಹೆಚ್ಚು ಮಾಡುವುದು ಇತ್ಯಾದಿ ಪ್ರಯತ್ನಗಳನ್ನು ಮಾಡಿರುವುದು, 10 ಲಕ್ಷ ಎಕರೆ ನೀರು ಇಲ್ಲದಂಥ ಸಂದರ್ಭದಲ್ಲಿ ನೂರಾರು ಕೋಟಿಗಳ ಮತ್ತೊಂದು ಪ್ರಾಜೆಕ್ಟ್ ನ ಅಗತ್ಯವಿದೆಯೇ? ಬಚಾವತ್ ತೀರ್ಪಿನ ರೀತ್ಯಾ 7 1/2 ಟಿ.ಎಂ.ಸಿ. ನೀರು ನಿಗದಿ ಬಿಟ್ಟು, 15, ಟಿ.ಎಂ.ಸಿ. 16 ಟಿ.ಎಂ.ಸಿ. ಎಂದು ಹೋದರೆ, ಕೆಳಗಡೆಯ ರೈತರು ಮತ್ತು ಕೊಪ್ಪಳ, ಬಳ್ಳಾರಿಯ ಕಡೆ ಇರುವ 50 ವರ್ಷಗಳ ಅಚ್ಚುಕಟ್ಟುವಿಗೆ ತೀವ್ರ ತೊಂದರೆ ಆಗುವುದು. ಸಿಂಗಟಾಲೂರು ಪ್ರಾಜೆಕ್ಟ್ ಮಾಡಬೇಕೆಂದರೆ ಅಲ್ಲಿನ ರೈತರನ್ನು ಸಂಪರ್ಕಿಸಿ ಆತ್ಮವಿಶ್ವಾಸ ತುಂಬದಿದ್ದರೆ, ಆ ಮೂಲ ಪ್ರದೇಶಗಳಲ್ಲಿ ಸಾಕಷ್ಟು ವಿರೋಧ ಬರುವ ಪರಿಸ್ಥಿತಿ; ಹೀಗಾಗಿ ಸಿಂಗಟಾಲೂರು ಯೋಜನೆಯನ್ನು ಮುಂದುವರಿಸದೆ ಹಾಲಿ ಪರಿಸ್ಥಿತಿಯ ಸ್ಟೇಟಸ್‌ಕೋ ಮೇಂಟೇನ್ ಮಾಡುವುದು ಸೂಕ್ತ ಎಂಬ ಅಭಿಪ್ರಾಯವಿಟ್ಟರು.

**ಶ್ರೀ ಎಸ್.ಎಸ್.ಪಾಟೀಲ್** ಅವರು, ಹೆಚ್ಚು ನೀರಾವರಿ ಅಂದರೆ ಶೇ.80 ರಷ್ಟು ನೀರಾವರಿ ಆಗುವಂಥ ಕ್ಷೇತ್ರ ಮುಂಡರಗಿ. ಸುಮಾರು 2–3 ಸಾವಿರ ಎಕರೆಯಷ್ಟು ಮಾತ್ರ ಗದಗ್‌ಗೆ ಹೋಗಬಹುದು. ಉಳಿದದ್ದು ಮುಂಡರಗಿ ಕ್ಷೇತ್ರಕ್ಕೆ ಬರುವಂಥ ಯೋಜನೆಯೆ ಆ ನೀರು ನೂರಾರು ವರ್ಷಗಳಿಂದ ಬರಗಾಲ ಪೀಡಿತ ಪ್ರದೇಶವಿರುವ ಮೂರು ತಾಲೂಕುಗಳಲ್ಲಿ ಹರಿಯುತ್ತಿದ್ದು, ಕೊಪ್ಪಳ ಹಳ್ಳಿಗಳು, ಹಡಗಲಿ ಸೇರಿದಂತೆ ಮುಂಡರಗಿ, ಗದಗ್‌ಗೆ ಆಗುವಂಥ ಯೋಜನೆಯಾಗಿದೆ. ಮಾನ್ಯ ಹೆಚ್.ಕೆ.ಪಾಟೀಲ್ ಅವರು ನೀರಾವರಿ ಮಂತ್ರಿಗಳಾದ ಮೇಲೆ 100 ಟಿ.ಎಂ.ಸಿ. ನೀರು ಪ್ರತಿವರ್ಷ ಹೆಚ್ಚಿಗೆ ಹರಿದು ಹೋಗುವಂಥ ಪರಿಸ್ಥಿತಿ ಇದೆ.

ಅದನ್ನು ನಾವು ಉಪಯೋಗ ಮಾಡಿಕೊಳ್ಳಲು ಆಗಿಲ್ಲ. ಬಾಲೆನ್ಸಿಂಗ್ ರಿಸರ್ವಾಯರ್ ಮಾಡಿಕೊಡಿ, ಅಭ್ಯಂತರವಿಲ್ಲ. ಆದರೆ ಅವರು ಮಾಡುವಂಥದ್ದು ಒಂದೇ ಪೀಕ್; ಆ ಟೈಮ್‌ನಲ್ಲಿ ಅಂದರೆ ಹೊಳೆ ತುಂಬಿ ಹರಿಯುವ ಮುಂದೆ ಮಾಡುವಂಥದ್ದು. ಕೆ.ಸಿ.ರೆಡ್ಡಿ ವರದಿ ರೀತ್ಯಾ 12 ಟಿ.ಎಂ.ಸಿ. ನೀರಿನ ಬಳಕೆಗೆ ಅವಕಾಶವಿದೆ. ಅಂತಾಗಿ ಯಾರಿಗೂ ಅನ್ಯಾಯವಾಗದು, ಬಹಳ ತೊಂದರೆಯ ಮೂರು ತಾಲ್ಲೂಕು ಜನರಿಗೆ ಒಳ್ಳೆಯದಾಗುವಂಥದ್ದು. ಇಲ್ಲಿ ಹೆಚ್ಚುವರಿ ನೀರು ಸಮುದ್ರ ಸೇರುತ್ತದೆ. ಈ ಬೇರೆ ಕಡೆ ಹೋಗುವ ನೀರನ್ನು ಉಪಯೋಗಿಸುವಂಥದ್ದು, ಕ್ಷಣ ಆಗುತ್ತಿದೆ. ಕೇವಲ 8-10 ಕೋಟಿ ರೂ. ಬಿಡುಗಡೆ ಮಾಡುವುದರಿಂದ ಇನ್ನೂ 50 ವರ್ಷವಾದರೂ ಇದು ಮುಗಿಯುವುದಿಲ್ಲ. ಈ ಯೋಜನೆಗೆ ಈಗಾಗಲೇ 793 ಕೋಟಿ ರೂ. ಆಗಿದ್ದು ಪ್ರತಿವರ್ಷ 2 ನೂರು ಕೋಟಿ ರೂ. ಬಿಡುಗಡೆ ಮಾಡಿ ಯೋಜನೆ ಮುಗಿಸಬೇಕಾಗುತ್ತದೆ. ರಿಸರ್ವಾಯರ್ ಮಾಡಲು 200-300 ಕೋಟಿ ರೂ. ಅವರಿಗೂ ಬಿಡುಗಡೆ  ಆದರೆ, ಇವೆರಡರಿಂದಲೂ ನಮಗೆ ಸಂತೋಷವೆ. ನಮ್ಮ ರಾಜ್ಯದವರಿಗೆ ಹಾಗೆ ಸುಮ್ಮನೆ ಹರಿದು ಹೋಗುವ ನೀರು ಉಪಯೋಗವಾಗಲಿ. ನಾವು ಬಳಸುವುದೇ 12 ಟಿ.ಎಂ.ಸಿ.; 80 ಟಿ.ಎಂ.ಸಿ. ಹೆಚ್ಚಾಗಿ ಹರಿದು ಹೋಗುತ್ತದೆ. ಅಂತಾಗಿ ರಿಸರ್ವಾಯರ್ ಮಾಡಿ ಅನುಕೂಲವಾಗಲಿ. ಎರಡೂ ಯೋಜನೆಗಳನ್ನು ಪ್ರಾರಂಭ ಮಾಡಬೇಕು. ಅದಕ್ಕೆ ಹಣ ಬಿಡುಗಡೆ ಮಾಡಿ ಅನುಕೂಲಿಸಬೇಕೆಂದು ವಿನಂತಿಸಿದರು.

ಶ್ರೀ ಎ.ಪಾಪರೆಡ್ಡಿ ಅವರು : ರಾಯಚೂರು ತಾಲ್ಲೂಕಿನ 2 ಲಕ್ಷ ಎಕರೆ ಜಮೀನಿಗೆ 10 ವರ್ಷಗಳಿಂದ ನೀರಿಲ್ಲ. ಹೀಗಿರುವಲ್ಲಿ ಮತ್ತೆ ಮೇಲೊಂದು ಅಣೆಕಟ್ಟು ಕಟ್ಟಿ 12 ಟಿ.ಎಂ.ಸಿ. ನೀರು ನಿಲ್ಲಿಸಿದರೆ ರಾಯಚೂರು ತಾಲ್ಲೂಕಿನ ಆ ಜಮೀನಿಗೆ ನೀರು ಬರಲು ಸಾಧ್ಯವಿಲ್ಲ. ತಾಲ್ಲೂಕಿನ ಟೈಲ್ ಎಂಡ್ ಲ್ಯಾಂಡಿಗೆ ಈಗ ನೀರು ಬರುತ್ತಿಲ್ಲವಾಗಿ, ತಜ್ಞರ ಸಮಿತಿಯಿಂದ ವಿಚಾರ ಮಾಡಿ ಅಣೆಕಟ್ಟು ಕಟ್ಟಿ ನೀರು ಕೊಡಬೇಕು. ಅಲ್ಲಿ ಎಲ್ಲಾ ಇನ್‌ಫ್ರಾಸ್ಟ್ರಕ್ಚರ್ ಇದೆ; ಕಾಲುವೆಗಳಿವೆ. ಇಂಥ ಕಡೆ ಕೊಡದೆ 500-600 ಕೋಟಿ ರೂ. ಖರ್ಚು ಮಾಡಿ ಬೇರ ಕಡೆ ಅಣೆಕಟ್ಟು ಕಟ್ಟಿ ನಮಗೆ ಬರುವ ನೀರನ್ನು ಬೇರೆಡೆ ಕೊಟ್ಟರೆ ನಮಗೆ ತೊಂದರೆ. ಈ ಬಗ್ಗೆ ವಿಚಾರ ಮಾಡದೆ ಕೆಲಸಮಾಡಿದರೆ ರೈತ ಸಮುದಾಯ ದಂಗೆಯೇಳಬಹುದು; ಬೀದಿಗಿಳಿದು ಹೋರಾಟ ಮಾಡಬಹುದು. ದಯವಿಟ್ಟು ಈ ಬಗೆಗೆಲ್ಲ ಯೋಚಿಸಿ ಕೆಲಸ ಮಾಡಿಕೊಡಿ ಎಂದರು.

ಸಚಿವ **ಶ್ರೀ ಪಿ.ಜಿ.ಆರ್.ಸಿಂಧ್ಯಾ** ಅವರು : ಮಾನ್ಯ ಸದಸ್ಯರು ಪ್ರಸ್ತಾಪಿಸಿದ ವಿಚಾರಗಳನ್ನು ಗಮನಿಸಿ, ನಮ್ಮ ಸರ್ಕಾರದ ಆದ್ಯತೆ, ಬಚಾವತ್ ಅವಾರ್ಡಿನ ಹಿನ್ನೆಲೆಯಲ್ಲಿ ನೀರಿನ ಸದ್ಬಳಕೆ ಮತ್ತು ನಮ್ಮ ನೀರಿನ ರಕ್ಷಣೆ ಬಗ್ಗೆ ಇದೆ. ಹಿಂದಿನಿಂದ ಅಚ್ಚುಕಟ್ಟಿನಲ್ಲಿ ಬೆಳೆವಣಿಗೆ ಮಾಡಿದ್ದಾರೆ, ಅದು ರಾಯಚೂರು ಟೌನಿನವರೆಗೂ ಬರುತ್ತದೆ. ಟೈಲ್‌ಎಂಡರ್ಸ್‌ಗೆ ನೀರು ಬರದಿರುವುದೆಲ್ಲ ಗಮನದಲ್ಲಿದೆ. ನೀರಾವರಿ ವಿಚಾರದಲ್ಲಿ ಬಾಳೆಕುಂದ್ರಿ ಮತ್ತು ಕೆ.ಸಿ.ರೆಡ್ಡಿ ಬಹು ದೊಡ್ಡ ತಜ್ಞರು. ಕೆ.ಸಿ.ರೆಡ್ಡಿ ಸಮಿತಿ ವರದಿಯೂ ಬಂದಿದೆ. ಎರಡೂ ಕಡೆಯ ರೈತರ ಬಗ್ಗೆ ಮಾನ್ಯ ಎಸ್.ಎಸ್.ಪಾಟೀಲ್, ಡಿ.ಆರ್.ಪಾಟೀಲ್ ವಿಚಾರಮಾಡಿದ್ದಾರೆ. ಇಬ್ಬರಿಗೂ ಸಿಂಗಟಾಲೂರು ಯೋಜನೆಯ ಬಗ್ಗೆ ಒಂದೇ ಒಪೀನಿಯನ್ ಇದೆ. ಅವರಿಬ್ಬರ ಆತಂಕವನ್ನು ಸರ್ಕಾರ ಅರ್ಥಮಾಡಿಕೊಂಡಿದೆ. ಕೆ.ಸಿ.ರೆಡ್ಡಿ ಸಮಿತಿಯ 2003ರ ಸಲಹೆಗಳ ಬಗ್ಗೆ ಅಂದಿನ ಮುಖ್ಯಮಂತ್ರಿಗಳು ಉಭಯ ಪಕ್ಷಗಳ ಮಧ್ಯೆ ಅಮಿಕಬಲ್ ಸೆಟಲ್‌ಮೆಂಟ್ ಆಗುವ ರೀತಿಯಲ್ಲಿ ನಿರ್ಧಾರ ತೆಗೆದುಕೊಂಡಿದ್ದಾರೆ. ಅಂತಾಗಿ ಯೋಜನೆಯನ್ನು ಮುಂದುವರಿಸಿ ಕೆಳಗಣ ಭಾಗದ ರೈತರಿಗೂ ನೀರು ಸಿಗುವಂತೆ ಮಾಡಿ ರಕ್ಷಿಸಲಾಗುವುದು ಎಂದರು. ಶ್ರೀ ಎಸ್.ಎಸ್.ಭೋಸರಾಜು ಅವರು ಕೆ.ಸಿ.ರೆಡ್ಡಿ ಅವರ ವರದಿ ರೀತ್ಯಾ 12.95 ಟಿ.ಎಂ.ಸಿ. ನೀರಿನ ಬಳಕೆಗೆ ಅನುಮತಿ ಎಂದಿದ್ದಾರೆ. ಸರ್ಕಾರದ ಉತ್ತರದಲ್ಲಿ 15.95 ಟಿ.ಎಂ.ಸಿ. ಎಂದಿರುವುದು ವೆರಿಫೈಮಾಡಿ ತಿದ್ದಿಕೊಳ್ಳಬೇಕು; ಬಚಾವತ್ ಟ್ರಿಬ್ಯುನಲ್ ರೀತ್ಯಾ ನಮ್ಮ ಪಾಲಿನ ನೀರು ನಮಗಿರುವಂತೆ, ರಾಯಚೂರು ಕೊಪ್ಪಳ, ಮತ್ತು ಬಳ್ಳಾರಿಯ ಹಳೆ ಅಚ್ಚುಕಟ್ಟಿನವರಿಗೂ ಅವರ ಪಾಲಿನ ಹಕ್ಕಿದೆ. ಆ ತೀರ್ಪಿನಲ್ಲಿ ಓವರ್ ಅಂಡ್ ಅಬೌವ್ 7.5 ಟಿ.ಎಂ.ಸಿ. ಎಂದಿದ್ದರೆ ಅದನ್ನು 18 ಟಿ.ಎಂ.ಸಿ. ಎಂದು ಮಾಡಿಕೊಂಡಿದ್ದಕ್ಕೆ ನಮ್ಮ ಪ್ರತಿಭಟನೆ ಬಂತು. ಆಗ ಅದು 12.95 ಎಂದಾಯಿತು. 18 ಕೋಟಿ ರೂ.ಗೆ ಬಜೆಟ್ ಮಾಡಿರುವಲ್ಲಿ ಸಮತೋಲನ ಜಲಾಶಯ ಹಾಗೂ (ಡೌನ್‌ಸ್ಟ್ರೀಂ) ನದಿ ಕೆಳಗೆ ಬ್ಯಾರೇಜು ಕಟ್ಟಬೇಕು ಎಂದು ಹೇಳಿದರೂ ಅದ್ಯಾವುದೂ ಆಗಿಲ್ಲ. ಆದರೆ ಮತ್ತೆ ಮೇಲೆ ಅಣೆಕಟ್ಟು ಕಟ್ಟಲು ಹೊರಟರೆ ಕೆಳಗಣ 10 ಲಕ್ಷ ಎಕರೆಗೆ ತೊಂದರೆ. ಅಂತಾಗಿ ಕೆ.ಸಿ.ರೆಡ್ಡಿ ಸೂಚಿತ ಕ್ರಮಗಳನ್ನು ಕಾರ್ಯರೂಪಕ್ಕೆ ತಂದು ಸಿಂಗಟಾಲೂರು ಏತ ನೀರಾವರಿಗೆ ಯೋಜನೆಗೆ ಚಾಲನೆ ನೀಡಬೇಕು ಎಂದು ನುಡಿದರು. ಶ್ರೀ ಪಿ.ಜಿ.ಆರ್. ಸಿಂಧ್ಯ ಅವರು ಇದಕ್ಕೆ ಪ್ರತಿಕ್ರಿಯಿಸಿ ಅಂಕಿ ಅಂಶಗಳ ನಮೂದನ್ನು ಸರಿಪಡಿಸುವ ಬಗ್ಗೆ, ರೈತರಿಗೆ ತೊಂದರೆಯಾಗದಿರುವಂತೆ ನೋಡಿಕೊಳ್ಳುವ ಬಗ್ಗೆ ಕೆಲಸ ಮಾಡುತ್ತೇವೆ ಎಂದರು.

## ವಿಷಯ 31: ರಾಜ್ಯದ 14 ಪ್ರಾಯೋಗಿಕ ಸ್ಥಳಗಳಲ್ಲಿ ಮಹಿಕೋ ಕಂಪೆನಿಗೆ ಬಿ.ಟಿ.ಕಾಟನ್ ಬೆಳೆಯಲು, ಅಧ್ಯಯನ ವರದಿ ಸಲ್ಲಿಸಲು ಸರ್ಕಾರಿ ಆದೇಶ ಮತ್ತು ಬಿ.ಟಿ.ಹತ್ತಿ ಸಮಸ್ಯೆಗಳು

28.3.2001ರ ವಿಧಾನ ಪರಿಷತ್ತಿನ ಅಧಿವೇಶನದಲ್ಲಿ[41] **ಶ್ರೀ ಬಸವರಾಜ ಬೊಮ್ಮಾಯಿ** ಅವರು, ಮಹಿಕೋ ಕಂಪೆನಿಗೆ ಬಿ.ಟಿ.ಕಾಟನ್ ಬೆಳೆಗೆ, ಅಧ್ಯಯನಕ್ಕೆ ಅವಕಾಶದ ಆದೇಶ ನೀಡಿರುವ ಬಗ್ಗೆ ಪರ, ವಿರುದ್ಧ ಪತ್ರಿಕಾ ವರದಿಗಳೂ, ಅದರಿಂದ ರೈತರಿಗೆ ಗೊಂದಲವಾಗಿರುವ ಬಗ್ಗೆ ಕೃಷಿ ಸಚಿವರ ಗಮನ ಸೆಳೆದರು.

ಕೃಷಿ ಸಚಿವ ಶ್ರೀ ಟಿ.ಬಿ.ಜಯಚಂದ್ರ ಅವರು, ವಿವರಗಳನ್ನು ನೀಡುತ್ತ: ಮಹಾರಾಷ್ಟ್ರ ಹೈಬ್ರೀಡ್ ಸೀಡ್ಸ್ ಕಂಪೆನೀ (ಮಹಿಕೋ) ಪ್ರಮುಖ ಬೀಜೋತ್ಪಾದನೆ ಮತ್ತು ಮಾರಾಟ ಕಂಪೆನಿಯಾಗಿ 97–98ನೇ ಸಾಲಿನಿಂದಲೇ ಕೇಂದ್ರ ಮತ್ತು ರಾಜ್ಯ ಸರ್ಕಾರದ ಅನುಮತಿಯನ್ನು ಬಿ.ಟಿ.ಹತ್ತಿ ಪ್ರಯೋಗಕ್ಕೆ ಕೇಳುತ್ತ ಬಂದಿರುವುದು, 'ಟ್ರಾನ್ಸ್‌ಜಿಕ್ ಬೆಳೆ'ಗಳ ವಿಷಯ ಕೇಂದ್ರ ಕಾಯ್ದೆಗೆ ಸಂಬಂಧಿಸಿದ್ದು ಅದು ಅನುಮತಿ ನೀಡಿದ್ದುದು; ಕರ್ನಾಟಕ ಕೃಷಿ ಅಯೋಗದ ಅಭಿಪ್ರಾಯ ಪಡೆದು ರಾಜ್ಯ ಸರ್ಕಾರವೂ ಅನುಮತಿ ನೀಡಿರುವುದು, ಸಮಗ್ರ ಪೀಡೆ ಹತೋಟಿಗಾಗಿ ಎಲ್ಲ ಭೂಮಿಗಳಲ್ಲಿ ಸ್ವಾಭಾವಿಕವಾಗಿರುವ Bacillus thuringieneis armigera ಎಂಬ ದಂಡಾಣು ಬಳಸಿ 'ಹೆಲಿಕೋವರ್ಪ' ಎಂಬ ಕಾಯಿಕೊರಕದ ಹತೋಟಿಗಾಗಿ ಬಿ.ಟಿ. ಪ್ರಯೋಗಕ್ಕೆ ಅನುಮತಿಯೇ ವಿನಾ 'ಕುಲಾಂತರ ವಂಶವಾಹಿನಿ' (Terminator gene) ತಂತ್ರಜ್ಞಾನ ಸಂಬಂಧೀ ಪ್ರಯೋಗಗಳಿಗೆ ಅಲ್ಲ ಎಂದು ಅನುಮತಿ ನೀಡದಿರುವುದು, ಟ್ರಾನ್ಸ್‌ಜೆನಿಕ್ ಬೆಳೆಗಳ ಸಂಬಂಧ ವಿಚಾರಗೋಷ್ಠಿ ನಡೆಸಿದುದು, ಕೃಷಿ ವಿಶ್ವವಿದ್ಯಾಲಯದ ಜೈವಿಕ ತಂತ್ರಜ್ಞಾನದ ವಿಜ್ಞಾನಿಗಳು ತಿಳಿಸಿರುವ ಮಾಹಿತಿ; ಕೇಂದ್ರ ಬಯಸಿದ ಸ್ಪಷ್ಟೀಕರಣದ ಅಂಶಗಳು (ಕೃಷಿ ವಿಶ್ವವಿದ್ಯಾಲಯಗಳನ್ನು ಪ್ರಯೋಗಗಳಲ್ಲಿ ತೊಡಗಿಸಬೇಕಿರುವುದು, ಮಾನ್ಸೆಂಟ್ ಹತ್ತಿ ಕಂಪೆನಿ ಬಗ್ಗೆ ವ್ಯಕ್ತವಾಗಿರುವ ವಿರೋಧ, ಬ್ಯಾಕ್ಟೀರಿಯ ಜೀವಿಗಳ ಮೇಲೆ ಆಗುವಂಥ ದೂರಗಾಮಿ ಪರಿಣಾಮಗಳು, ಪ್ರಾಣಿ ಮತ್ತು ಮನುಷ್ಯರ ಮೇಲೆ ಆಗುವಂಥ ವಿಷಪರಿಣಾಮಗಳು), ಹತ್ತಿಯ ಪೀಡೆ ಸಮಸ್ಯೆ ಪರ್ಯಾಯ ಹತ್ತಿ ತಳಿಗಳ ಅಗತ್ಯ ಕುರಿತು 14

---

41. ವಿಧಾನ ಪರಿಷತ್ತಿನ ನಡವಳಿಕೆಗಳು, ಸಂಪುಟ 303 (1 ರಿಂದ 5), 28.3.2001, ಪು. 158–174

ಪ್ರಯೋಗಗಳಿಗೆ ಸರ್ಕಾರದ ಅನುಮತಿ, ಹಾಗು ಕೇಂದ್ರದಂತೆ ಕಂಪೆನಿಗೆ ರಾಜ್ಯವೂ ವಿಧಿಸಿರುವ ನಿಬಂಧನೆ, ರಾಜ್ಯಮಟ್ಟ ಹಾಗೂ ಜಿಲ್ಲಾಮಟ್ಟದ ಉಸ್ತುವಾರಿ ಸಮಿತಿ, ರಚನೆ ಹಾಗೂ ಸದರಿ ಸಮಿತಿಯು ಪ್ರಯೋಗ ತಾಕುಗಳನ್ನು ವೀಕ್ಷಿಸಿರುವುದು, ಹಾಗು ಅದರ ವರದಿ ಸಮೀಕ್ಷೆ, ತಜ್ಞರ ಉಸ್ತುವಾರಿಯ ಕಾರಣ ರೈತರು ಸಂಶಯ ಹಾಗೂ ಗೊಂದಲದಿಂದ ವಿಮುಖರಾಗಿರಬೇಕಾದುದು, ಕುರಿತೆಲ್ಲ ಹೇಳಿದರು. ಶ್ರೀ ಬಸವರಾಜ ಬೊಮ್ಮಾಯಿ ಅವರು ಮತ್ತಷ್ಟು ಸ್ಪಷ್ಟೀಕರಣ ಬಯಸಿ, ಮಹಿಕೋ ಕಂಪೆನಿಯ ತಂತ್ರಜ್ಞಾನದ ಯೋಗ್ಯತೆ ಬಗ್ಗೆ ಇನ್‌ಸೆಕ್ಟ್ ಪ್ರೊಟೆಕ್ಷನ್ ಪರಿಣತಿ ಬಗ್ಗೆ ಪ್ರಮಾಣಗಳು, ಕಂಪೆನಿ ಮಾಡುವ ಕಾರ್ಯಗಳ ಪ್ರೋಟೋ ಕಾಲ್ ಚೆಕ್‌ಲಿಸ್ಟ್ ಮಾಡಿ ಎವಾಲ್ಯುಯೇಷನ್ ಕಮಿಟಿಗೆ ಕಳುಹಿಸಿ, ಟರ್ಮಿನೇಟರ್ ಜೀನ್ ಇಲ್ಲವೆಂಬ ಸರ್ಟಿಫಿಕೇಟ್ ತರುವ ಕುರಿತೆಲ್ಲ ಶರತ್ತು ವಿಧಿಸಿದೆಯೇ?, ಭಾರತದ ಇತರ ರಾಜ್ಯಗಳಲ್ಲಿ ನಡೆಯುತ್ತಿರುವ ಪ್ರಯೋಗಗಳ ಅನುಭವವನ್ನು ಪಡೆದುಕೊಳ್ಳಲಾಗಿದೆಯೆ? ಈ ಸೀಡ್‌ಗಳನ್ನು ತಿನ್ನುವಲ್ಲಿ ಪ್ರಾಣಿಗಳ ಮೇಲೆ ಟಾಕ್ಸಿಕ್ ಎಫೆಕ್ಟ್ ಆಗುತ್ತದೆಯೆ? ಇವುಗಳನ್ನು ತಿಂದ ಎಮ್ಮೆ, ಹಸುಗಳಿಂದ ಉತ್ಪಾದನೆಯಾದ ಹಾಲನ್ನು ಸೇವಿಸುವ ಮನುಷ್ಯರ ಮೇಲೆ ಪರಿಣಾಮವೇನು? ಬಾಲ್‌ವರ್ಮ್ ಹತ್ತಿ ಹುಳ ತಡೆಗಟ್ಟಲು ಪೆಸ್ಟಿಸೈಡ್‌ಗಳಿಂದ ಪ್ರಯೋಜನವಾಗದೆ, ಹತ್ತಿ ಬೆಳೆ ನಾಶ, ಈ ಬಿ.ಟಿ. ಹತ್ತಿ ಬೆಳೆಯ ಕಾರಣ ಪರ ಮತ್ತು ವಿರೋಧ ವಾದಗಳು, ಪರ್ಯಾವರಣದ ಮೇಲೆ ಆಗುವ ಎಕೋಲಾಜಿಕಲ್ ಇಂಪ್ಯಾಕ್ಟ್, ಕೆಟ್ಟು ಹೋಗುವ phyto-sanitary conditions, ಭೂಮಿಯ ಮೇಲೆ ಆಗುವ ಪರಿಣಾಮ, ನಾನ್ ಟ್ರಾನ್ಸ್‌ಜನಿಕ್ ಕಾಟನ್‌ನ ಪರಾಗರೇಣುಗಳ ಪ್ರಸಾರದ ಪರಿಣಾಮ, ಇತ್ಯಾದಿಗಳ ಸಮಸ್ಯೆಗಳ ಬಗ್ಗೆ ಗೊಂದಲದಲ್ಲಿರುವ ರೈತರಿಗೆ ತಿಳಿಸಬೇಕಾದ ಅಗತ್ಯ, ಟ್ರಯಲ್‌ಫೀಲ್ಡ್‌ನಲ್ಲಿ ಕಂಪೆನಿಯವರು ಔಷಧಿ ಸಿಂಪರಣೆ ಬಗ್ಗೆ ರೈತರು ಮಾಡಿರುವ ವರದಿ, ಪತ್ರಕರ್ತರ ವರದಿಯ ರೀತ್ಯಾ ಒಳ್ಳೆಯ ಫಸಲು ಬಂದರೂ ಗಿಡದಲ್ಲಿ 100–150 ಕಾಯಿಯಾದರೂ ಅನೇಕ ಕಾಯಿಗಳು ರೋಗಗ್ರಸ್ತವಾಗಿರುವುದು, ಇದರಿಂದ ನಿಜವಾಗಿ ಕಾಯಿಕೊರಕ ಹಾವಳಿ ತಡೆಗಟ್ಟಲಾಗಿದೆಯೆ? ಎಂಬುದು, ಈ ತರಹದ ಸೀಡ್‌ಗಳ ಒಂದೇ ಮಾಲೀಕತ್ವದಲ್ಲಿ ಬಂದಾಗ ಮುಂದಿನ ವರ್ಷಗಳಲ್ಲಿ ಅವು ಅವನ ಮನಾಪಲಿ ಆಗುವುದು, ಯೂರೋಪ್ ಮತ್ತು ಇತರ ರಾಷ್ಟ್ರಗಳಲ್ಲಿ ಈ ಬೆಳೆ ಬೆಳೆಯುವುದನ್ನು 120 ವಿಜ್ಞಾನಿಗಳ ವರದಿಯನುಸಾರ ನಿಲ್ಲಿಸಿರುವುದು ಅಥವಾ ಬೆಳೆ ಪ್ರಮಾಣ ಕಡಿಮೆ ಮಾಡಿರುವುದು, ನಮ್ಮ ವಿಶ್ವವಿದ್ಯಾನಿಲಯದ ಮೇಲ್ವಿಚಾರಣೆಯಲ್ಲಿ ಟ್ರಯಲ್ಸ್

ಆಗುತ್ತಿದೆಯೇ? ಎಂಬ ಬಗೆಗೆಲ್ಲ ಸ್ಪಷ್ಟೀಕರಣ ಬಯಸಿ, ಬಿ.ಟಿ.ಕಾಟನ್ ಬಗ್ಗೆ ಇರುವ ಸಂಶಯಗಳನ್ನು ನಿರ್ಮೂಲನೆ ಮಾಡುವ ಪ್ರಯತ್ನ ಈ ಸದನದ ಮೂಲಕ ಆಗಬೇಕೆಂದರು.

ಸಚಿವ ಶ್ರೀ **ಟಿ.ಬಿ.ಜಯಚಂದ್ರ** ಅವರು ಪ್ರತಿಕ್ರಿಯಿಸುತ್ತ ಹತ್ತಿ ಗಿಡಕ್ಕೆ ಬರುವ 12-13 ರೋಗಗಳಲ್ಲಿ ಕಾಯಿ ಕೊರಕ ಹೆಲಿಕೋವರ್ಪ ರೋಗ ಬಹಳ ಅನಿಷ್ಟವಾದದ್ದು ಹಾಗೂ ಶೇ 79-85 ರಷ್ಟು ಬೆಳೆ ಹಾನಿ ಮಾಡುವಂಥಾದ್ದು, ಅಮೇರಿಕೆಯಲ್ಲಿ ಈ ರೋಗ ನಿವಾರಣೆಗೆ ಬ್ಯಾಸಿಲಸ್ ತುರಿಂಜಿಎನ್ಸಿಸ್ ಎಂಬ ಜೀವಾಣುವನ್ನು ಹತ್ತಿಗೆ ಹಾಕಿ ನಿಯಂತ್ರಣ ಸಾಧ್ಯ ಎಂಬ ಸಂಶೋಧನೆ ಹೊರತಂದದ್ದು, ನಮ್ಮಲ್ಲಿಯ ಹತ್ತಿ ಉತ್ಪತ್ತಿಯಲ್ಲಿ ಶೇ 60 ರಷ್ಟು ದೇಶೀ ಬಳಕೆಗೆ (domestic consumption) ಉಳಿದ ಶೇ 40 ರಷ್ಟು ರಫ್ತು ಆಗುತ್ತಿರುವುದು, ಆದರೆ ಆ ಬೆಳೆ ಹೀನಾಯವಾಗಿ ಕಡಿಮೆ ಆಗುತ್ತಿರುವುದು ಕಂಡು ಹೊಸ ತಾಂತ್ರಿಕತೆ ಅನ್ವಯಿಸಬೇಕೆಂದು ಕೇಂದ್ರ ಸರ್ಕಾರ ಮಾನ್ಸೆಂಟೊ ಕಂಪೆನಿಗೆ ಟ್ರಯಲ್ಸ್ ಪರ್ಮಿಟ್‌ಗೆ ಅವಕಾಶ ಕೊಟ್ಟಿದ್ದು, ಈ ಬಗ್ಗೆ ಜೈವಿಕ ತಂತ್ರಜ್ಞಾನ, ಮತ್ತು ವಿಜ್ಞಾನ-ತಂತ್ರಜ್ಞಾನ ಇಲಾಖೆಗಳೊಡನೆ ಚರ್ಚಿಸಿ ಕೇಂದ್ರದೊಡನೆ ಸಂಪರ್ಕಿಸಲು ಅದು ಕ್ಲಾರಿಫಿಕೇಷನ್ ಕ್ಲಿಯರ್ ಮಾಡಿರುವುದು ಹಾಗೂ ರಾಜ್ಯವು ಅನುಮತಿ ಕೊಡಬಹುದು ಎಂದು ಹೇಳಿದ ಮೇಲೆ ಕೊಟ್ಟಿರುವುದು, ಮಹಾರಾಷ್ಟ್ರದ ಜಾಲನಾ ಎಂಬ ಕಡೆ ನಡೆದಿರುವ ಫೀಲ್ಡ್ ಟ್ರಯಲ್ ನೋಡಿ ಹಾಗು ಅಲ್ಲಿನ ರೈತರ ಜೊತೆಗೆ ಫೀಲ್ಡ್‌ಗೆ ಹೋಗಿ ಅವರ ಅನುಭವಗಳನ್ನು ತಾವೂ ತಿಳಿದುಕೊಂಡದ್ದು, ನಮ್ಮಲ್ಲಿ ತಡವಾಗಿ ಸೆಪ್ಟೆಂಬರ್, ಅಕ್ಟೋಬರ್‌ನಲ್ಲಿ ಸೋಯಿಂಗ್ ಆಗಿರುವುದು, ಅದನ್ನು ನಮ್ಮ ವಿಶ್ವವಿದ್ಯಾಲಯದವರು ಹೋಗಿ ನೋಡಿ ವರದಿ ಕೊಟ್ಟಿರುವುದು, ಈ ಬಗ್ಗೆ ತೀರ್ಮಾನಿಸಬೇಕಾದಾಗ ಕೇಂದ್ರಕ್ಕೂ ತಿಳಿಸಿರುವುದು, ಕೇಂದ್ರ ಸರ್ಕಾರ ಇಟ್ಟುಕೊಂಡಿರುವ ಪ್ರೊಡಕ್ಟಿವಿಟಿ ಸ್ಟಾಂಡರ್ಡ್, ಮಾನ್ಸೆಂಟೋ (ಮಹಿಕೋ) ಕಂಪೆನಿಗಳು, ಹೆಲ್ತ್‌ಕೇರ್ ಬಗ್ಗೆ ಸಂಶೋಧನೆ ಮಾಡಿರುವುದು, ಬಯೋ ಟೆಕ್ನಾಲಾಜಿಕಲ್ ಆಗಿ ಯಾವ ತೊಂದರೆ ಇಲ್ಲ, ಮೋಸ್ಟ್ ಅಕ್ಸೆಪ್ಟಬಲ್ ಎಂದಿರುವುದು ನಮ್ಮ ರಾಜ್ಯದ ವಾತಾವರಣಕ್ಕೆ ಈ ಹತ್ತಿ ಒಪ್ಪುತ್ತದೆಯೇ ಇಲ್ಲವೇ ಎಂಬುದು ಪರಿಶೀಲನಾ ಹಂತದಲ್ಲಿರುವುದು, ಟೆಸ್ಟ್ ರಿಸಲ್ಟ್ ಬರುವುದನ್ನು ಕೇಂದ್ರ ಸರ್ಕಾರಕ್ಕೆ ವರದಿ ಮಾಡಿ ತೀರ್ಮಾನಕ್ಕೆ ಕಾಯುವುದು, ನಮ್ಮ ರೈತರು ಈ ಬೀಜಗಳನ್ನು ಬೇರೆಡೆಯಿಂದ ಸ್ಮಗಲ್ ಮಾಡಿ ತರದಂತೆ ನೋಡಿಕೊಳ್ಳುವುದು ಕುರಿತೆಲ್ಲ ಹೇಳಿದರು.

**ಶ್ರೀ ಬಸವರಾಜ ಬೊಮ್ಮಾಯಿ** ಅವರು, ಕಮರ್ಷಿಯಲ್‌ಗೆ ಕೊಡುವ ಹಂತದಲ್ಲಿರುವ ಬಿ.ಟಿ.ಹತ್ತಿ ಟರ್ಮಿನೇಟರ್ ಜೀನ್ ಅಲ್ಲವೆಂದರೆ ಆ ಬಗ್ಗೆ ದೃಢೀಕರಿಸಬೇಕೆಂಬ ಶರತ್ತನ್ನು ಹಾಕಿರುವುದೇಕೆ? ರೆಸಿಸ್ಟೆನ್ಸ್ ಕ್ರಿಯೇಟ್ ಮಾಡಲು ಬ್ಯಾಕ್ಟೀರಿಯಾವನ್ನು ಇಂಜೆಕ್ಟ್ ಮಾಡುವುದಾದರೆ ಟರ್ಮಿನೇಟರ್ ಜೀನ್ ಆಗುವುದಿಲ್ಲ. ಜೆನಿಟಿಕಲಿ ಮಾಡಿಫೈಡ್ ಬೇರೆ, ಜೆನಿಟಿಕಲಿ ಇಂಜನಿಯರ್ಡ್ ಬೇರೆ. ಜೀನ್ (ವಂಶವಾಹಿ) ಓರಿಯೆಂಟೇಷನ್ ಅನ್ನು ಇನ್ನೊಂದಕ್ಕೆ ಸೇರಿಸಿ ಟೋಟಲ್ ಓರಿಯೆಂಟೇಷನ್ ಅನ್ನೆ ಬದಲಾವಣೆ ಮಾಡುವುದು ಜೆನಿಟಿಕಲ್ ಮಾಡಿಫೈಡ್ ಎನಿಸುತ್ತದೆ; ಇದ್ದ ಜೀನ್‌ಗಳನ್ನೆ ಬೇರೆ ಕಾಂಬಿನೇಷನ್ ಮಾಡಿ ಅದರೆ ರೆಸಿಸ್ಟೆನ್ಸ್ ಪವರ್ (ನಿರೋಧಕ ಶಕ್ತಿ), ಪ್ರೊಡಕ್ಷನೆ ಪವರ್ (ಉತ್ಪನ್ನ ಶಕ್ತಿ) ಹೆಚ್ಚು ಮಾಡುವುದು ಜೆನಿಟಿಕಲಿ ಇಂಜನಿಯರ್ಡ್ ಎನಿಸುತ್ತದೆ. ಆದರೆ ಸಚಿವರ ಮಾತಿನಲ್ಲಿ ಇದಾವುದೂ ಅಲ್ಲ ಎಂದರೆ ಕೇಂದ್ರವು ಶರತ್ತು ಹಾಕಿರುವುದೇಕೆ? ಭೂಮಿ, ಗಾಳಿ,. ಹಾಗೂ ಇತರ ಬೆಳೆಗಳ ಮೇಲೆ, ಎತ್ತು, ಹಸುಗಳ ಮೇಲೆ, ಜನಬಳಕೆಯ ಮೇಲೆ, ಪರಿಸರ ಸಮತೋಲನದ ಮೇಲೆ ಪರಿಣಾಮ ಬೀರುವ ಸಾಧ್ಯತೆಗಳ ಬಗ್ಗೆ ಕೇಳಿಬರುವಲ್ಲಿ ಬೇರೆ ರಾಜ್ಯಗಳ ಅನುಭವದ ಹಿನ್ನೆಲೆಯಲ್ಲಿ ಸಂಶಯಗಳನ್ನು ನಿವಾರಣೆ ಮಾಡಿಕೊಳ್ಳವುದು, ನಮ್ಮ ರಾಜ್ಯದಲ್ಲೂ ಆಗಿರುವ ಟ್ರಯಲ್ಸ್ ಬಗೆಗಿನ ವರದಿಯ ಕೆಲವು ಅಂಶಗಳನ್ನಾದರೂ ಸದನಕ್ಕೆ ತಿಳಿಸಿ ರೈತರಿಗೆ ಮಾಹಿತಿ ಹೋಗುವಂತೆ ಮಾಡುವುದು ಕುರಿತೆಲ್ಲ ನುಡಿದರು.

ಶ್ರೀ ಟಿ.ಬಿ.ಜಯಚಂದ್ರ ಅವರು ಉತ್ತರಿಸುತ್ತ, ಕೇಂದ್ರ ಮತ್ತು ಬೇರೆ ರಾಜ್ಯಗಳ ನಿಬಂಧನೆಗಳ ಹಿನ್ನೆಲೆಯನ್ನು ಗಮನಿಸಿದಾಗ ಈ ಬೆಳೆ ಸಂಬಂಧ ವಿಶೇಷ ಪರಿಸ್ಥಿತಿ ಇದ್ದು, ಪರ ಮತ್ತು ವಿರೋಧವನ್ನು ಕಂಡು ನಮ್ಮ ನಿಬಂಧನೆಗಳನ್ನು ವಿಧಿಸಿದುದು, ಬೇರೆ ರಾಜ್ಯಗಳಲ್ಲಿ ಜೀನ್ಸ್ ಅನ್ನು ವರ್ಗಾಯಿಸುವ transgenic ಶೋಧನೆ ಇದೆಯೇ ವಿನಹ, ಟರ್ಮಿನೇಟರ್ ಆಗಿಲ್ಲದಿರುವುದು ಕುರಿತು ಹೇಳಿದರು. The terminator technology, terminator gene is totally banned by the Govt. of India. ಇಡೀ ರಾಷ್ಟ್ರದಲ್ಲಿ ಅದರ ಚಾಲನೆ ಇಲ್ಲ ಎಂದು ಕೇಂದ್ರ ಸರ್ಕಾರವು ಸ್ಪಷ್ಟಪಡಿಸಿದೆ ಎಂದರು. ಶ್ರೀ ಬಸವರಾಜ ಬೊಮ್ಮಾಯಿ ಅವರು, ಬಿಟಿ ಹತ್ತಿ ಬೀಜವು ಟರ್ಮಿನೇಟರ್ ಜೀನ್ ಅನ್ನು ಹೊಂದಿಲ್ಲ ಎಂಬ ಬಗ್ಗೆ ರಾಷ್ಟ್ರೀಯ ಪ್ರಯೋಗ ಶಾಲೆಯಿಂದ ಮಾಯ್ಕೊ ಕಂಪೆನಿ ಸರ್ಟಿಫಿಕೇಟ್ ಪಡೆದಿದೆಯೆ? ಎಂದು ಪ್ರಶ್ನಿಸಿದರು. ಶ್ರೀ ಜಯಚಂದ್ರ ಅವರು ತಂತ್ರಜ್ಞಾನ ಮಾನ್ಸೆಂಟೋವಿನದು, ಅನ್ವಯ

ಮಾಯ್ಕೊವಿನದು. ಟೆಕ್ನಾಲಜಿಟ್ರಾನ್ಸ್‌ಫರ್ ಅಧಿಕಾರವೂ ಮಾಯ್ಕೋಗೆ ಇರುವುದರಿಂದ ರಾಜ್ಯ ಸರ್ಕಾರ ಅನುಮತಿಯನ್ನು ಮಹಿಕೋ ಕಂಪೆನಿಗೆ ಮಾತ್ರ ಕೊಡಲಾಗಿದೆ. ಅವರು ಟರ್ಮಿನೇಟರ್ ಜೀನ್‌ನ ಹತ್ತಿ ಅಲ್ಲವೆಂದು ಸರ್ಟಿಫಿಕೇಟ್ ನೀಡಿ, ಕ್ಲಿಯರೆನ್ಸ್ ಕೊಟ್ಟಿರುವುದನ್ನು ಖುದ್ದಾಗಿ ನೋಡಿರುವ ಬಗ್ಗೆ ತಿಳಿಸಿದರು.

**ಶ್ರೀ ವಿ.ಎಸ್.ಆಚಾರ್ಯ** ಅವರು, ಡಬ್ಲುಟಿಓ ಒಪ್ಪಂದವಾಗಿ ಕ್ವಾಂಟಿಟೇಟೀವ್ ರಿಸ್ಟ್ರಿಕ್ಷನ್ ಹೋದನಂತರ ಇಗ ಟ್ಯಾರಿಫ್ ಬ್ಯಾರಿಯರ್ ಮಾತ್ರ ಇದೆ. ಹಾಲಿ ನಾನ್ ಟಾರಿಫ್ ಬ್ಯಾರಿಯರ್ ಅಂದರೆ ಸ್ಯಾನಿಟರಿ ಮತ್ತು ಫೈಟೋ ಸ್ಯಾನಿಟರಿ ಕಂಡಿಷನ್ ಮಾತ್ರ. ಫೈಟೋ ಸ್ಯಾನಿಟರಿಯು, ಕ್ರಿಮಿನಾಶಕ, ಮಿಡತೆನಾಶಕ ಇತ್ಯಾದಿಗಳ ಬಳಕೆಯ ಕಾರಣ cell-chemistry (ಜೀವಕೋಶ ರಸಾಯನ ಶಾಸ್ತ್ರ!)ಗೆ ಸಂಬಂಧಿಸಿದುದಾಗಿದೆ. ಪೆಸ್ಟಿಸೈಡ್ಸ್ ಅಂತು ಪ್ರಮುಖ ಪಾತ್ರ ವಹಿಸುತ್ತದೆ. ಅಂತಾಗಿ ನಮ್ಮ ವಿಶ್ವವಿದ್ಯಾಲಯದಲ್ಲಿ ಈ ವಿದ್ಯಮಾನ – ಸೆಲ್‌ಕೆಮಿಸ್ಟ್ರಿ, ಜೆನಿಟೆಕ್ ಟ್ರಾನ್ಸ್‌ಫರ್– ಕುರಿತೆಲ್ಲ ಪರೀಕ್ಷೆ ಆಗಬೇಕು. ಹತ್ತಿ ಬೀಜದಲ್ಲಿ ಹುಟ್ಟುವಾಗಲೇ ಅರಿಶಿನ, ಹಸಿರು ಬಣ್ಣದ ಹತ್ತಿ ಬಂತೆಂದರೆ ಆ ಬೀಜದಲ್ಲಿ ಏನು ಫೈಟೋ–ಕೆಮಿಸ್ಟ್ರಿ ಬದಲಾವಣೆ ಆಗಿದೆ, ಅದನ್ನು ತಿಂದ ಪಶು, ಪಕ್ಷಿ ಮತ್ತು ಪ್ರಾಣಿಗಳ ಮೇಲೆ ಆಗುವ ಪರಿಣಾಮದ ಬಗ್ಗೆ ಪ್ರಯೋಗದಿಂದ ತಿಳಿಯಬೇಕು. ಈ ಮಾಹಿತಿಯ ಅಗತ್ಯವಿದೆ ಎಂದರು.

**ಶ್ರೀ ಎಂ.ಪಿ.ಪ್ರಕಾಶ್** ಅವರು ಮಾತನಾಡುತ್ತ : 'ಕುಲಾಂತರಿ ವಂಶವಾಹಿನಿ' ಎನ್ನುವಲ್ಲಿ ಭಿನ್ನಾಭಿಪ್ರಾಯವಿದೆ. ಟರ್ಮಿನೇಟರ್ ಜೀನ್ ಅಲ್ಲ ಎಂಬುದರ ಬಗ್ಗೆ, ಮಾನ್ಸೆಂಟೋ ಬಗ್ಗೆ ಪ್ರತಿಭಟನೆ ಆಗಿದೆ. ಡಬ್ಲುಟಿಓ ಒಪ್ಪಂದದ ನಂತರ ಡಂಕೆಲ್ ಪ್ರಸ್ತಾವನೆ ಪೇಟೆಂಟ್ ಕಾಯಿದೆ ಕೆಳಗೆ ಮಾನ್ಸೆಂಟೊದವರಿಗೆ ಪೇಟೆಂಟ್ ಇದೆ. ಅಂತಾಗಿ ಕುಲಾಂತರ ವಂಶವಾಹಿನಿ ಅಲ್ಲದಿದ್ದರೂ ಪುನಃ ಉತ್ಪಾದನೆ ಸಾಧ್ಯವಿಲ್ಲ. 'ಕುಲಾಂತರ ವಂಶ' ಎಂದು ಪ್ರಸ್ತಾವ ಆಗಿರುವ ಕಾರಣ ಕೃಷಿ ವಿಶ್ವವಿದ್ಯಾಲಯದ ಪ್ರಯೋಗದಲ್ಲಿ ಅದು ಸೇರಿಲ್ಲ. ವಿಚಾರ ಸಂಕಿರಣ ಏರ್ಪಡಿಸಿ ವರದಿ ಕೊಡಲು ಹೇಳಲಾಗಿದೆ. ಈ ಕಾರಣವೆ ಕರ್ನಾಟಕ ಮತ್ತು ಮಹಾರಾಷ್ಟ್ರದಲ್ಲಿರುವ ದೊಡ್ಡ ಕಂಪೆನಿ ಆದ ಮಹಿಕೋ ಕಂಪೆನಿ ಮೇಲೆ ವಿಶ್ವಾಸ ಇಡಬೇಕಾಗುತ್ತದೆ. ಅದು ಲಾಭದ ಬಗ್ಗೆ ಯೋಚಿಸುತ್ತದೆಯೇ ವಿನಾ ತಂತ್ರಜ್ಞಾನಕ್ಕೆ ಸಂಬಂಧಿಸಿದ ಹಾಗೆ ಕೆಲಸ ಮಾಡುವುದಿಲ್ಲ. 'ಕುಲಾಂತರಿ ವಂಶವಾಹಿನಿ' ಎನ್ನತ್ತಾ ಇದ್ದರೆ ಬಗ್ಗೆ ಅನುಮಾನ ಇರುವುದರಿಂದ ಪ್ರಯೋಗವನ್ನು ಕೃಷಿ ವಿಶ್ವವಿದ್ಯಾಲಯದ ಮೂಲಕವೇ

ಮಾಡಿಸುವುದು ಬಹಳ ಮುಖ್ಯ. ಅದು ಅಲ್ಲ ಎಂದರೂ ಪೇಟೆಂಟ್ ಮಾನ್ಸೆಂಟೋ ಕೈಲಿರುವುದರಿಂದ ಜಗತ್ತಿನ ಎಲ್ಲಾ ಕೃಷಿಕರನ್ನು ತಮ್ಮ ಹತೋಟಿಯಲ್ಲಿಟ್ಟುಕೊಳ್ಳುವ ಪ್ರಯತ್ನ ಅವರದು. ಅದು ಬಹಳ ಅಪಾಯಕರ ಸಂಗತಿ. ಹತ್ತಿಕಾಯಿಯಲ್ಲಿ ಕೊರೆಯುವ ಹುಳು ಇರುವ ಕಾರಣ ನಮ್ಮಲ್ಲಿ ಹತ್ತಿ ಬೆಳೆಯುವುದನ್ನು ಕೈಬಿಟ್ಟು, ದೇಶೀಯ ತಂತ್ರ ಜ್ಞಾನದ ಜೈದಾರ ಮತ್ತು ಹತ್ತಿಯ ಹೈಲಾಂಡ್ ನಂತರ ಪ್ರಗತಿಗೆ ರೈತರು ಮಾರುಹೋಗಿರುವುದು ಆಗಿದೆ. ಅದರಲ್ಲಿ ಎಕರೆಗೆ 2 ಅಥವಾ 3 ಕ್ವಿಂಟಾಲ್ ಮೀರಿ ಹತ್ತಿಯನ್ನು ಬಿಡಿಸಲು ಸಾಧ್ಯವಿಲ್ಲ. ಈ ಕಾರಣ ಉಪಯೋಗವಾದರೂ ಕಾಯಿಲೆಗಳು ಬರದಂತೆ ನೋಡಿಕೊಂಡು ಹೋಗುತ್ತದೆ. ಈ ವಿಷಯದಲ್ಲಿ ಅಂತಿಮಸತ್ಯಕ್ಕಾಗಿ, ಕಂಪೆನಿಯಿಂದ ಮಾಡಿಸುವ ಬಗ್ಗೆ ಒಂದು ನಿಷ್ಠುರ ನಿಲುವು ತಳೆದು ನಮ್ಮ ಕೃಷಿ ವಿಶ್ವವಿದ್ಯಾಲಯ ಹಾಗೂ ಕೃಷಿ ಇಲಾಖೆಗೆ ಇದರ ಹೊಣೆ ಹೊರಿಸಲು ವಿನಂತಿಸಿದರು.

ಶ್ರೀ **ಬಸವರಾಜ್** ಅವರು, ಫೈಟೋ ಸ್ಯಾನಿಟರಿ ಎಫೆಕ್ಟ್, ಮಣ್ಣು ಮಿಡತೆ, ದನಕರು, ಹಾಗೂ ಹಸುಗಳ ಹಾಲು ಸೇವಿಸಿದ ಮಾನವನ ಮೇಲೆ ಬೀರುವ ಪರಿಣಾಮದ ಬಗ್ಗೆ ಸ್ಪಷ್ಟೀಕರಣಬೇಕು, ಬೀಜಗಳ ಮೇಲೆ ಟೆಸ್ಟ್ ಮಾಡಿದ್ದರ ವರದಿ ಬೇಕು ಆ ಬಗ್ಗೆ ಉತ್ತರವಿಲ್ಲ ಎಂದು ಮತ್ತೆ ಕೇಳಿದರು. ಶ್ರೀ ಟಿ.ಬಿ.ಜಯಚಂದ್ರ ಅವರು ಉತ್ತರ ನೀಡುತ್ತ, ಡಬ್ಲುಟಿಓ ನಿಯಮ ರೀತ್ಯಾ, ಆಯಾ ದೇಶದಲ್ಲಿ ಬೀಜಗಳನ್ನು ಬಳಸುವುದಾಗಲಿ, ದೇಶದಿಂದ ಹೊರಗೆ ರಫ್ತು ಮಾಡಬೇಕಾದರಾಗಲಿ ಫೈಟೋ ಸ್ಯಾನಿಟರಿ ಪರೀಕ್ಷೆ ಆಗಬೇಕಾದುದು ಕಡ್ಡಾಯ. ನಮಗೆ ಬಂದಿರುವ ಟ್ರಯಲ್ಸ್ ಬೀಜಗಳು ಫೈಟೋ ಸ್ಯಾನಿಟರಿ ಟೆಸ್ಟ್ ಮೂಲಕ ಕ್ಲಿಯರ್ ಆಗಿ ಬಂದಿವೆ. ನಾವಿನ್ನು ಟ್ರಯಲ್ ಸ್ಟೇಜ್‌ನಲ್ಲಿದ್ದು, ಅದನ್ನು ಪೂರ್ಣಗೊಳಿಸಿದ ನಂತರವೆ ಕಮರ್ಷಿಯಲ್ ಪ್ರೊಕ್ಯೂರ್‌ಮೆಂಟ್‌ಗೆ ಕೊಡುವ ಸಂದರ್ಭದಲ್ಲಿ ಎಲ್ಲಾ ಶರತ್ತುಗಳನ್ನು ಅಳವಡಿಸಿಕೊಂಡು ಸಾಗುತ್ತೇವೆ; ಯಾವುದೇ ರೀತಿಯ ಪರಿಣಾಮವನ್ನು ಯಾವುದೇ ಪ್ರಾಣಿಗಳ ಮೇಲೆ ಅದು ಬೀರದು ಎಂದು ಬಯೋಟೆಕ್ನಾಲಜಿ ಇಲಾಖೆಯ ನಿರ್ದೇಶಕರು ತಿಳಿಸಿದ್ದಾರೆ ಂದರು. ಶ್ರೀ ಬಸವರಾಜ್ ಬೊಮ್ಮಾಯಿ ಆ ನಿರ್ದೇಶಕರ ಫೈಟೋ ಸ್ಯಾನಿಟರಿ ಕುರಿತ ವರದಿಯ ಬಗ್ಗೆ ಸರ್ಟಿಫಿಕೇಟ್ ಇದೆಯಾ? ನಾಲ್ಕೂ ರಾಷ್ಟ್ರೀಯ ಪ್ರಯೋಗಾಲಯಗಳು ಆ ಬಗ್ಗೆ (ಸಸ್ಯ ಮತ್ತು ಪ್ರಾಣಿಗಳ ಮೇಲೆ) ಸರ್ಟಿಫೈ ಮಾಡಿವೆಯಾ? ಎಂದೆಲ್ಲ ಕೇಳಿದರು. ಶ್ರೀ ಟಿ.ಬಿ.ಜಯಚಂದ್ರ ಅವರು ಉತ್ತರಿಸುತ್ತ: ನಮ್ಮ ಎರಡೂ ವಿಶ್ವವಿದ್ಯಾಲಯದವರಿಗೆ ಫೀಲ್ಡ್ ಟ್ರಯಲ್ ನೋಡಿ

ಫಲಿತಾಂಶವನ್ನು ಕೊಡಲು ಹೇಳಿರುವುದಾಗಿ ತಿಳಿಸಿದರು. ಮಾನ್ಸೆಂಟೋ ಕಂಪೆನಿಯಲ್ಲಿ ಬಿ.ಟಿ.ಜೀನ್ಸ್ ಕಂಡುಹಿಡಿದವರು ಮೈಸೂರಿನವರು. ಅಂತಾಗಿ ಕ್ರೆಡಿಟ್ ಕನ್ನಡಿಗರಿಗೆ ಹೋಗುತ್ತದೆ. ಹೀಗೆಯೇ ನಮ್ಮ ರಾಜ್ಯದವರಾದ ಶ್ರೀ ಕೆ.ಗಂಗಾ, ವರಲಕ್ಷ್ಮಿ ಹತ್ತಿ ಬಿಡುಗಡೆ ಮಾಡುವುದಕ್ಕೆ ಇದ್ದ ಟೀಮ್‌ನಲ್ಲಿ ಕೆಲಸ ಮಾಡಿದ ಕಾಟನ್‌ಸೀಡ್ ಎಕ್ಸ್‌ಪರ್ಟ್, ಹಾಗು ವೈಸ್ ಛಾನ್ಸ್‌ಲರ್ ಎನ್.ಎ.ಪಾಟೀಲ್ ಮುಂತಾದ ವಿಜ್ಞಾನಿಗಳು ನಮಗೆ ಸಲಹೆಗಳನ್ನು ನೀಡಿದ್ದಾರೆ. ಖಾಸಗಿ ಕಂಪೆನಿಯವರು ನಮಗೆ ಓವರ್ ರೈಡ್ ಮಾಡಿ ಅದನ್ನು ಎಕ್ಸ್‌ಪ್ಲಾಯಿಟ್ ಮಾಡಬಾರದು ಎಂಬ ಕಾರಣಕ್ಕಾಗಿ ಅದೇ ಮಾನ್ಸೆಂಟೋದಿಂದ ಆ ಜೀನ್ ಅನ್ನು ತೆಗೆದುಕೊಂಡು ಅನೇಕ ವಿಶ್ವವಿದ್ಯಾನಿಲಯಗಳಲ್ಲಿ ಆ ಜೀನ್ ಅಪ್ಲಿಕೇಶನ್ ಅನ್ನು ಪ್ಯಾರಲಲ್ ಆಗಿ ಪ್ರಯೋಗಕ್ಕೀಡು ಮಾಡುತ್ತಿದ್ದೇವೆ. ರಾಯಚೂರಿನಲ್ಲಿ ಕಾಟನ್ ಬಗ್ಗೆ ಮಾಡಿದ ಫೀಲ್ಡ್ ಟ್ರಯಲ್ಸ್ ಉತ್ತಮವಾಗಿವೆ. ಇಲ್ಲಿ ಬಿ.ಟಿ.ಕಾಟನ್ ಅಲ್ಲದೆ ಸಮಗ್ರ ಕೀಟ ನಿರ್ವಹಣೆ ಮಾಡಿ ಸಂಪೂರ್ಣವಾಗಿ ರೋಗ ತಡೆಯಲು ಸಾಧ್ಯವಾಗುತ್ತದೆ. 15;20;22 ಸಾಲಿನವರೆಗೆ ಸ್ಪ್ರೇಯಿಂಗ್ ಆಗುತ್ತದೆ. ಸಂಪೂರ್ಣವಾಗಿ ಮಹಿಕೋದವರನ್ನೇ ನಂಬಿ ಕೂರದೆ ನಮ್ಮಲ್ಲೂ ಟ್ರಯಲ್ಸ್ ಆಗುತ್ತಿದೆ. ಫಲಿತಾಂಶಕ್ಕೆ ಕಾಯಬೇಕಿದೆ. ಅಮೇರಿಕಾದಲ್ಲಿ ಈ ತಂತ್ರಜ್ಞಾನ ತಂದು ಫೀಲ್ಡ್‌ಡೌನ್ ಆದಾಗ, ದೇಶದಲ್ಲಿ ಇದು ಬೇಡ ಎಂದಾಗ, ಎಲ್ಲವೂ ಸ್ಮಗಲ್ ಆಗಿ ಅನಾಹುತ ಆದದ್ದುಂಟು. ಹೀಗಾಗಬಾರದು ಎನ್ನುವ ಕಾರಣ ಇಲ್ಲಿ ಎಲ್ಲವನ್ನು ಗಮನಿಸಿ ನಿಗಾವಹಿಸಲಾಗಿದೆ; ಶರತ್ತುಗಳನ್ನು ಹಾಕಲಾಗಿದೆ. ಶರತ್ತನ್ನು ಪೂರೈಸದ ಹೊರತು ನಮ್ಮ ರಾಜ್ಯದ ಒಪ್ಪಿಗೆ ದೊರೆಯುವುದಿಲ್ಲ, ಎಂದೆಲ್ಲ ಹೇಳಿ ಮಾತು ಮುಗಿಸಿದರು.

*ಮಂಥನ: ಮಣ್ಣಿನೊಡನೆ, ಮಣ್ಣಿನ ಬೆಳೆಯೊಡನೆ ಸಾವಯವವಾಗಿ ಬದುಕಿ ಬಂದಿರುವ ನಮ್ಮ ರೈತ ಎದುರಿಸುವ ಸಮಸ್ಯೆಗಳು, ಬೆಳೆ, ಮಳೆ, ಬೆಲೆ, ಮಾರುಕಟ್ಟೆ, ನೀರಾವರಿ, ಹಾಗು ವರ್ತಮಾನದ ಮೂಲಭೂತ ಸೌಕರ್ಯಗಳ ಕೊರತೆ ಇತ್ಯಾದಿಗಳ ಸುತ್ತವೇ ಹೆಣೆದುಕೊಂಡಿರುವುದು ಹೆಚ್ಚು. ಜಾಗತೀಕರಣದ ಕಾಲದಲ್ಲಿ ಆ ಸಮಸ್ಯೆಗಳ ಆಯಾಮ ವಿಸ್ತರಿಸಿಕೊಂಡಿದೆ. ಆ ಕುರಿತ ಉಭಯ ಸದನಗಳ ಚರ್ಚೆಗಳಲ್ಲಿ ಅನುಭವಗಳಲ್ಲಿ ಕ್ಷೇತ್ರದರ್ಶನಗಳಲ್ಲಿ ಕಂಡುಕೊಂಡ ರೀತಿ ನಮಗೆ ಸಮಸ್ಯೆಗಳ ಮುಖಗಳನ್ನು ತೆರೆದು ತೋರುತ್ತದೆ. ಅದಕ್ಕಾಗಿ ಶಾಸಕರು ಸೂಚಿಸುವ ಪರಿಹಾರ, ಕೈಗೊಳ್ಳುವ ಕಾರ್ಯಕ್ರಮಗಳೂ ಗಮನಾರ್ಹವಾಗಿವೆ. ಆದರೆ ಆ ಪರಿಹಾರಗಳು ರೈತರ ಬಾಳನ್ನು ಹಸನುಗೊಳಿಸುತ್ತವೆಯೇ ಎಂಬುದು ಸದ್ಯದ ಚಿಂತನ.*

*ಈಗಾಗಲೇ ಎ.ಪಿ.ಎಂ.ಸಿ. ಯಾರ್ಡ್‌ನಲ್ಲಿ ರೈತರಿಗೆ ದಳ್ಳಾಳಿಗಳು, ಅಧಿಕಾರಿಗಳಿಂದ ಒದಗುವ ಸಂಕಷ್ಟಗಳು, ವಿದ್ಯುತ್ ಸರಬರಾಜಿನ ಅಸಮರ್ಪಕತೆ, ತೆಂಗಿನ ಬೆಳೆ ನಷ್ಟಕ್ಕೆ ಸಿಗದ ಪರಿಹಾರ, ಸಾಲದ ಮೇಲಿನ ಬಡ್ಡಿ ಮನ್ನಾ, ಕೋಲ್ಡ್ ಸ್ಟೋರೇಜ್‌ಗಳ ಅಸಮರ್ಪಕ ವ್ಯವಸ್ಥೆ, ವಿದ್ಯುತ್ ಸರಬರಾಜಿನ ಕೊರತೆಗಳು, ಗ್ರಾಮಲೆಕ್ಕಿಗರಿಂದ ಕಿರುಕುಳ, ರೈತರ ಉತ್ಪನ್ನಗಳಿಗೆ ಸೂಕ್ತ ಬೆಲೆ ನಿಗದಿಯಾಗದಿರುವುದು, ಕಬ್ಬು ಕೊಟ್ಟ ರೈತರಿಗೆ ಕಾರ್ಖಾನೆಗಳು ಹಣ ಕೊಡಲು ಸತಾಯಿಸುವುದು. ಗೋಡೌನ್ ಅವ್ಯವಸ್ಥೆ, ಬಿ.ಟಿ. ಹತ್ತಿ ಬಳಕೆಗೆ ಎಚ್ಚರ ಸರ್ಕಾರ ಘೋಷಿಸುವ ಪ್ಯಾಕೇಜುಗಳು ರೈತರಿಗೆ ಸೂಕ್ತವಾಗಿ ತಲುಪದಿರುವುದು, ಹಾಗೂ ಸಮಸ್ಯೆಗಳ ಸುಳಿಗೆ ಸಿಕ್ಕಿ ಆತ್ಮಹತ್ಯೆಗೆ ಶರಣಾಗುವ ರೈತನ ಬಗ್ಗೆ ಹೇಳಲಾಗಿದೆ. ಸಮಸ್ಯೆಗಳು ತೋರಿಕೊಳ್ಳುವ ನೆಲೆಗಳು ವೈವಿಧ್ಯಮಯವಾಗಿವೆ.*

## ವಿಷಯ 32: ರೈತರ ಸಮಸ್ಯೆಯ ಬಿಡಿ ಬಿಡಿ ಪ್ರಕಾರಗಳು

**ತಂಬಾಕು – ಮಾವು:** ಇವಲ್ಲದೆ ಹೊಗೆಸೊಪ್ಪು ಬೆಳೆಗಾರರಿಗೆ ಆತಂಕ ಸೃಷ್ಟಿಸಿರುವ ಆಂಧ್ರದ ಸದಸ್ಯರೇ ಹೆಚ್ಚಾಗಿರುವ ತಂಬಾಕು ಮಂಡಳಿ, ತನ್ನ ಮುಖ ನೇರಕ್ಕೆ, ತಮ್ಮ ರೈತಾಪಿ ವರ್ಗಕ್ಕೆ ಮಾತ್ರ ನಿಯಮಾವಳಿಗಳನ್ನು ಅನುಕೂಲಕರವಾಗಿ ಪರಿವರ್ತಿಸಿಕೊಂಡಿರುವುದು ಕಾಣಬರುತ್ತದೆ. ತಂಬಾಕು ಬೆಳೆಯನ್ನು ಹೆಚ್ಚು ಬೆಳೆಯಬಾರದೆಂದು ಕರ್ನಾಟಕಕ್ಕೆ ಕ್ರಾಪ್ ಹಾಲಿಡೆ ಘೋಷಿಸುವುದು, ನಮ್ಮ ರೈತರಿಗೆ ಸರಿಯಾಗಿ ಬೆಲೆ ಗಿಟ್ಟದೆ ಆತ್ಮಹತ್ಯೆಗೆ ಶರಣಾಗುವುದು, ಕೇಂದ್ರ ಸರ್ಕಾರವು ಆಂಧ್ರದ ತಂಬಾಕು ಮಂಡಳಿಗೆ ರಿಯಾಯಿತಿ ತೋರಿಸುವುದು, ನಮ್ಮಲ್ಲಿಯ ಉತ್ತಮ ತಳಿಯಾದ ವರ್ಜೀನಿಯ ಹೊಗೆಸೊಪ್ಪಿಗೆ ಬಾರಿ ಬೇಡಿಕೆ ಇದ್ದು, ವಿದೇಶ ವಿನಿಮಯ ತಂದು ಕೊಡುತ್ತಿರುವುದು, ಅಧಿಕೃತ ಬೆಳೆಗಾರರು ಅನಧಿಕೃತ ಬೆಳೆಗಾರರೆಂದು ವಿಂಗಡಿಸಿ, ಅನಧಿಕೃತ ಬೆಳೆಗಾರರನ್ನು ದಂಡ ವಸೂಲಿ ಎಂದು ಶೋಷಿಸುವುದು, ಮಾರುಕಟ್ಟೆಯ ಕೊರತೆಯೂ ಆಗಿರುವುದು ತಂಬಾಕು ಬ್ಯಾರನ್‌ಗಳನ್ನು ಸಕ್ರಮಗೊಳಿಸುವುದು ಕುರಿತೆಲ್ಲ ಚರ್ಚೆಗಳ ವಿವರಗಳನ್ನು ನೀಡಲಾಗಿದೆ. ಮಾವಿನ ಕಾಯಿಯ ಮಾರಾಟ ಸಂದರ್ಭದಲ್ಲಿ ದಳ್ಳಾಳಿಗಳು ಮನೆಯ ಹತ್ತಿರವೇ ಜೋಪಡಿ ಹಾಕಿಕೊಂಡು ಮಾವಿನಕಾಯಿ ಲಾಟ್ ಅನ್ನು ನೇರವಾಗಿ ವ್ಯಾಪಾರ ಮಾಡಿ ರೈತರಿಗೆ ತಿಳಿಸದೆ ಮೋಸ ಮಾಡುವುದನ್ನು ಎತ್ತಿ ಹೇಳಲಾಗಿದೆ.

**ಸಕ್ಕರೆ ಕಾರ್ಖಾನೆ** : ಸಕ್ಕರೆ ಕಾರ್ಖಾನೆಗೆ ಕಬ್ಬು ಕೊಟ್ಟರೂ, ರೈತರ ಬಾಕಿ ಹಣವನ್ನು ಕಾರ್ಖಾನೆಗಳು ಕೊಡದೆ ಸತಾಯಿಸುವುದು, ಕಾರ್ಖಾನೆ ತನ್ನ ಅಸಾಮರ್ಥ್ಯದಿಂದ ನಿಂತಾಗ, ಕಾರ್ಖಾನೆಗೆ ಅಲಾಟ್ ಆದ ರೈತರ ಏರಿಯಾಗಳನ್ನು ವಿಂಗಡಿಸಿ ದೂರದ ಫ್ಯಾಕ್ಟರಿಗಳಿಗೆ (ಒಯ್ಯುವಲ್ಲಿ ಒದಗುವ ತೊಂದರೆಗಳು, ಮಹಾರಾಷ್ಟ್ರದ ಗಡಿಯ ಕಬ್ಬಿನ ಕಾರ್ಖಾನೆಗಳಲ್ಲಿ ನಮ್ಮ ರೈತರಿಗೆ ಕಬ್ಬಿಗೆ ದೊರಕುವ ಹೆಚ್ಚಿನ ದರದ ಪರಿಣಾಮ ಅಲ್ಲಿನ ಕಾರ್ಖಾನೆಗಳಿಂದ ಅನಧಿಕೃತವಾಗಿ ಕರ್ನಾಟಕದ ಕಬ್ಬನ್ನು ಖರೀದಿಸುವುದೂ ಇದೆ) ಹೋಗುವಂತಾದುದು ತೊಂದರೆದಾಯಕ ಎಂದು ರೈತರಿಗೆ ಅನಿಸಿದ್ದು ಸಹಜ. ಜೊತೆಗೆ ಕಬ್ಬಿನ ಕಾರ್ಖಾನೆಗಳಿಂದ ಬರಬೇಕಾದ ಹಣದ ನಿರೀಕ್ಷೆಯಲ್ಲಿಯೇ, ಇದ್ದು ಸಾಲ ತೀರಿಸಲಾಗದೆ ಆತ್ಮಹತ್ಯೆಗೂ ಶರಣಾಗಿರುವುದೂ ಕಾಣಬರುತ್ತದೆ. ಬೆಳೆ ವಿಮೆ ಹಣವೂ ಬರದೆ ಹೋರಾಟ ಮಾಡಿ, ರೈತರು ಜೈಲಿಗೂ ಹೋದದ್ದುಂಟು. ಬರದಿಂದ ಕಂಗೆಟ್ಟಿದ್ದ ರೈತರಿಗೆ ಹಿಂಗಾರು ಬೆಳೆ ವಿಮೆ, ಮುಂಗಾರು ಬೆಳೆ ವಿಮೆ ಹಣವೂ ಸಿಗದೆ ತೊಂದರೆ ಅನುಭವಿಸಿರುವುದೂ ತಿಳಿಯುತ್ತದೆ. ಬೆಳೆ ವಿಮೆಯ ಶೇಕಡ ಹಣವನ್ನು ತಾರತಮ್ಯ ಮಾಡಿ ವಿವಿಧ ಭಾಗಗಳಲ್ಲಿ ಹಂಚಿರುವುದನ್ನು ಉದಾ. ಸಹಿತ ಶಾಸಕರು ಸದನದ ಮುಂದಿಟ್ಟು ಅದನ್ನೆಲ್ಲ ಸರಿಪಡಿಸಿ ಎಂದು ಒತ್ತಾಯಿಸಿದ್ದಾರೆ. ರೈತರು ಕೃಷಿ ಸಾಲವನ್ನು ಸಹಕಾರ ಬ್ಯಾಂಕುಗಳಿಂದ ಪಡೆದ ಸಾಲಗಳ ಮೇಲೆ ವಿಧಿಸುವ ಶುಲ್ಕದ ಮೊತ್ತ ರೈತರಿಗೆ ತ್ರಾಸದಾಯಕ ಅಂತಾಗಿ ಶುಲ್ಕ ವಿನಾಯಿತಿ ಇರಬೇಕೆಂದೂ ಹೇಳಿದ್ದಾರೆ.

**ಸಾಲದ ಸಂಗತಿಗಳು:** 8.1.07ರ ಪತ್ರಿಕಾ ವರದಿಯಲ್ಲಿ ಅಪ್ಪಾರಾವ್ ಸೌದಿ ಅವರು ಸಾಲಮನ್ನಾ ಘೋಷಣೆ ಆಗಿರುವಲ್ಲಿ ಸಹಕಾರ ಸಕ್ಕರೆ ಕಾರ್ಖಾನೆಗಳು ಸಹಕಾರ ಬ್ಯಾಂಕುಗಳು ರೈತನಿಗೆ ಸಾಲಕ್ಕೆ ತಕಾರಾರು ಮಾಡಿ ಆರ್ಥಿಕ ಸಂಕಷ್ಟದ ನೆಪಗಳನ್ನಿಟ್ಟಿರುವ ಬೀದರ್‌ನ ಉದಾಹರಣೆಯನ್ನು ತಿಳಿಸಿದ್ದಾರೆ. ಅಂದರೆ ಅವು ರೈತರಿಗೆ ಸಾಲ ಕೊಡಲು ಹಿಂದೇಟು ಹಾಕುತ್ತಿವೆ. ಕಂತಿನ ಲೆಖ್ಖಾಚಾರದ ಮೇಲೆ ಸಕ್ಕರೆ ಕಾರ್ಖಾನೆಗಳು ರೈತರ ಬಾಕಿ ಪಾವತಿಸುವ ವಿಚಾರವನ್ನು ಮುಂದುಮಾಡಿವೆ. ಸಾಲಮನ್ನಾದ 'ಘೋಷಣೆಯ' ಜೊತೆಗೆ ಅನುದಾನದ ಧಾರೆ ಈ ಕಾರ್ಖಾನೆಗಳಿಗೆ ಹರಿಯಬೇಕೆಂದು ಅವುಗಳ ಅತಿ ನಿರೀಕ್ಷೆಯಾಗಿದೆ. ಅಂದಮೇಲೆ 'ಸಹಕಾರ'ದ ಅರ್ಥ ಇಲ್ಲಿ ವಿಲಕ್ಷಣವಾಗುತ್ತಿದೆ. ಸರ್ಕಾರ ಈ ಕಾರ್ಖಾನೆ ಹಾಗು ಬ್ಯಾಂಕುಗಳಿಗೆ ಸೂಕ್ತ ನಿರ್ದೇಶನ, ಎಚ್ಚರಿಕೆ ಕೊಡದಿದ್ದರೆ, ರೈತರ ಶೋಷಣೆ ಮುಂದುವರಿದು, ರೈತರ ಸರಣಿ ಆತ್ಮಹತ್ಯೆ ಮತ್ತೆ ಮುಂದುವರಿಯಲು ಅವಕಾಶವಾಗುವಂತಿದೆ.

ಇಲ್ಲಿ ಘೋಷಣೆಗೆ ಮೊದಲು ಸಾಕಷ್ಟು ಚಿಂತನೆ, ಘೋಷಣೆಯ ಪರಿಣಾಮದ ಬಗ್ಗೆ ನಡೆದಿತ್ತೆ? ಎಂಬ ಅನುಮಾನ ಏಳುತ್ತದೆ. ಆದರೆ ಪರಿಣಾಮವನ್ನು ಎದುರಿಸುವ, ಪರಿಹಾರಕ್ಕೆ ಮುಂದಾಗುವ ಆತ್ಮವಿಶ್ವಾಸ, ರಾಜಕೀಯ ಇಚ್ಛಾಶಕ್ತಿಯೆ ಇದಕ್ಕೆ ಮದ್ದು ಆಗುತ್ತದೆ.

ಸಣ್ಣ ರೈತರು, ತಮಗೆ ಅಗತ್ಯವಿರುವಷ್ಟು ಸಾಲ, (ಬ್ಯಾಂಕ್‌ನಿಂದ ಎಕರೆಗೆ ಗರಿಷ್ಠ ಸಾಲ 25 ಸಾವಿರ ರೂ. ಮಾತ್ರ ದೊರೆಯುವ ಕಾರಣ) ದೊರೆಯದ ಕಾರಣ ಬ್ಯಾಂಕಿನ ಬದಲು ಖಾಸಗಿ ಸಾಲಗಾರರ ಬಳಿ ಹೋಗಿ ಸಿಕ್ಕಿಕೊಳ್ಳುತ್ತಾರೆ. ದೊಡ್ಡ ದೊಡ್ಡ ಜಮೀನುಗಳ ರೈತರು ಬ್ಯಾಂಕು ಸಹಕಾರ ಸಂಘಗಳಿಂದ ಸುಲಭವಾಗಿ ಸಾಲ ಪಡೆದು ವ್ಯವಸಾಯೇತರ ಉದ್ದೇಶಗಳಿಗೆ ಉಪಯೋಗಿಸಿಕೊಳ್ಳುತ್ತಾರೆ. ಸಾಲಮನ್ನಾದಿಂದ ಗರಿಷ್ಠ ಲಾಭ ಇಂಥವರಿಗೆ ಆಗುವುದು, ಎಂಬುದು ಲೋಕೇಶ್ ಕಾಯರ್ಗ ಅವರ ವಾದ.

ಸಾಲಮನ್ನಾ ಅಂದಾಕ್ಷಣ, ರೈತರು ಮರುಪಾವತಿ ಮಾಡಬೇಕಿಲ್ಲ ಎಂಬ ಭಾವನೆ ರೈತರಲ್ಲಿ ಸಹಜವಾಗಿ ಮೂಡಿಬಿಡುತ್ತದೆ. ಇದು ಬ್ಯಾಂಕು ಹಾಗು ಸಹಕಾರಿ ಸಂಸ್ಥೆಗಳಿಗೆ ಆರ್ಥಿಕ ಹಿನ್ನಡೆ ತರುತ್ತದೆ ಎಂಬುದು ಆ ಸಂಸ್ಥೆಗಳ ಮಾತು. ಸರ್ಕಾರವೇ ಇಂಥ ಪ್ರೇರಣೆಯನ್ನು ರೈತರಿಗೆ ನೀಡಿದರೆ, ಬ್ಯಾಂಕಿಗೂ ಕಷ್ಟವಾಗುತ್ತದೆ ಎಂಬ ಆರೋಪ ಮಾಡುತ್ತವೆ. ಆದರೆ ಷೇರು ದಳ್ಳಾಳಿಗಳಿಗೆ, ಉದ್ಯಮಿಗಳಿಗೆ ಕೋಟ್ಯಾನುಕೋಟಿ ನೆರವನ್ನೋ, ಸಾಲಮನ್ನಾವನ್ನೋ ಮಾಡುವಾಗ, ರೈತರ ಸಮಸ್ಯೆ ಅವರ ಮನಸ್ಸಿಗೇ ತಾಗುವುದಿಲ್ಲ. ಇನ್ನು ಪ್ಯಾಕೇಜ್‌ಗಳನ್ನು ಘೋಷಿಸಿದರು, ರೈತರ ಅಗತ್ಯಗಳನ್ನು ಪೂರೈಸದಿದ್ದರೆ, ಘೋಷಿಸಿದಷ್ಟು ಪರಿಹಾರ ಕೈಗೆ ತಲುಪದಿದ್ದರೆ ರೈತರಿಗೆ ಅಸಹಾಯಕತೆಯೊಂದೇ ಸಂದರ್ಭವೂ ಆಗುತ್ತದೆ. ಇಲ್ಲಿ ಸರ್ಕಾರ ಅಷ್ಟೇ ಅಲ್ಲ ಅದರ ನೀತಿಯನ್ನು ಅನುಷ್ಠಾನ ಗೊಳಿಸಬೇಕಾದ ಅಧಿಕಾರಿ ಆಡಳಿತ ವರ್ಗವೂ ಈ ಬಗೆಗೆಲ್ಲ ಮುಂದಾಲೋಚಿಸಿ ಪ್ರಾಮಾಣಿಕವಾಗಿ ಕಾರ್ಯನಿರತರಾಗ ಬೇಕಾಗುತ್ತದೆ.

**ನೀರು ಹಂಚಿಕೆ** : ಕಾವೇರಿ ನೀರಿನ ಹಂಚಿಕೆಯ ವಿವಿಧ ಆಯಾಮಗಳು? ತುಂಗಭದ್ರಾ ಜಲಾಶಯದ ನೀರು ಅನ್ಯ ರಾಜ್ಯಕ್ಕೆ ಪಾಲಾಗುವ ಬದಲು ಸಮತೋಲನ ಜಲಾಶಯ ಬ್ಯಾರೇಜ್ ನಿರ್ಮಿಸಿ ರಕ್ಷಿಸುವ ಪ್ರಯತ್ನಗಳು ಕಾಣಬರುತ್ತವೆ. ಆಲಮಟ್ಟಿಯಿಂದ ನೀರು ಬಿಡುವಲ್ಲಿನ ಸಮಸ್ಯೆಗಳೂ ಇದ್ದು, ಅದು ರೈತರ

ಸತ್ಯಾಗ್ರಹಕ್ಕೂ ಎಡೆಮಾಡಿದ್ದಿದೆ. ಆದರೆ ಸಿಂಗಟಾಲೂರು ಏತ ನೀರಾವರಿ ಯೋಜನೆಯ ಸಂಬಂಧದಲ್ಲಿ: ಹಡಗಲಿ, ಮುಂಡರಗಿ ಗದಗ್ ಕಡೆಯ ರೈತರೊಂದು ಭಾಗ; ರಾಯಚೂರು ಕೊಪ್ಪಳ, ಬಳ್ಳಾರಿ ರೈತರೊಂದು ಭಾಗ–ಈ ಉಭಯ ಕ್ಷೇತ್ರಗಳ ರೈತರಿಗೆ ತೊಂದರೆಯಾಗದಂತೆ ಅವರಲ್ಲಿ ಸೌಹಾರ್ದಯುತವಾಗಿ ಸಮಸ್ಯೆ ಬಗೆಹರಿಸಲು, ಕೆ.ಸಿ.ರೆಡ್ಡಿ ಸಮಿತಿ ವರದಿ ಸೂಚಿತ ಕ್ರಮ ಕೈಗೊಳ್ಳಲು ಸರ್ಕಾರದ ಪ್ರಯತ್ನವನ್ನು ಮುಂದಿಡಲಾಯಿತು ಸದನದಲ್ಲಿದ್ದ ಆಯಾ ಕ್ಷೇತ್ರದ ಶಾಸಕರಲ್ಲಿ ಒಮ್ಮೆ ಸಮ್ಮತ ಮಾಡುವಂತೆ, ಅವರ ಸಲಹೆಗಳಿಗೂ ಮಾನ್ಯತೆ ಕೊಟ್ಟು ಕೆಲಸಮಾಡುವ ಬಗ್ಗೆ ಸರ್ಕಾರ ಆಶ್ವಾಸನೆ ಕೊಟ್ಟದ್ದು ರೈತರ ತೊಂದರೆ ನಿವಾರಿಸುವ ನಿಟ್ಟಿನಲ್ಲಿ ಗಮನಾರ್ಹವಾಗಿದೆ.

**ಬಿ.ಟಿ.ಹತ್ತಿ ಮತ್ತು ಜೈವಿಕ ತಂತ್ರಜ್ಞಾನ** : ಬಿ.ಟಿ. ಹತ್ತಿ ಕುರಿತು ತಾಂತ್ರಿಕ ವಿವರಗಳೊಡನೆ ಚರ್ಚೆ ನಡೆದಿದೆ. ಅದರ ಅನ್ವಯ ಕ್ರಮದ ಕುರಿತಾಗಿ ಪರ ವಿರೋಧ ವಾದಗಳ ಪರಿಶೀಲನೆಯೂ ನಡೆದಿದೆ. ಬಿ.ಟಿ.ಹತ್ತಿಯ ಫೀಲ್ಡ್ ಟ್ರಯಲ್ಸ್ ಬಗ್ಗೆ ಸರ್ಕಾರ, ಮಹಿಕೋ ಕಂಪೆನಿಯ ಫಲಿತಾಂಶಕ್ಕೆ ಜೋತುಬೀಳದೆ ನಮ್ಮ ವಿಶ್ವವಿದ್ಯಾಲಯ ಮೂಲಗಳಲ್ಲಿಯೂ ಪ್ರಯೋಗಗಳನ್ನು ಮಾಡಿ ನಿಗಾವಹಿಸಿದ್ದು ಕಾಣಬರುತ್ತದೆ. ಈ ವಿಷಯದ ಚರ್ಚೆಯಲ್ಲಿ ಶಾಸಕರ ಅಧ್ಯಯನದ ವ್ಯಾಪ್ತಿ ಹಾಗೂ ಆಳ ಸ್ಪಷ್ಟವಾಗಿ ನಿದರ್ಶನಗೊಂಡಿದೆ. ಹೀಗೆಲ್ಲ ಆದರೂ ಬೇರೆ ಆಯಾಮಗಳಿಂದಲೂ ರೈತರ ಸಮಸ್ಯೆಗಳನ್ನು ನೋಡಬೇಕಾಗುತ್ತದೆ. ಜನರ ಪ್ರತಿಕ್ರಿಯೆಗಳು, ಸುದ್ದಿ ಮಾಧ್ಯಮಗಳಲ್ಲಿ ಬಿತ್ತರವಾಗುವ ಬಗೆಗಳನ್ನು ಗಮನಿಸಿದರೆ ತೌಲನಿಕ ಚಿತ್ರವೂ ದೊರಕುತ್ತದೆ.

ಬಿ.ಟಿ. ಹತ್ತಿ ಒಟ್ಟಿನಲ್ಲಿ ವಿವಾದದ ಬೆಳೆ ಎನಿಸಿದೆ. ಕೆಲ ವರ್ಷಗಳ ಹಿಂದೆ ಹಾವೇರಿ ಜಿಲ್ಲೆಯ ರೈತರು ಬಿ.ಟಿ. ತಳಿಯಾದ 'ಚಮತ್ಕಾರ' ಹತ್ತಿ ಬೆಳೆದು ಕೈಸುಟ್ಟುಕೊಂಡರು. ಪರಿಹಾರಕ್ಕಾಗಿ ಅಲೆದಲೆದು ಅಲ್ಪ ಪರಿಹಾರ ಪಡೆದು ಕೊಂಡಿದ್ದರು. ಆದರೂ ವಿದೇಶಿ ಕಂಪೆನಿ ಮಾನ್ಸೆಂಟೊ ಕಂಪೆನಿ ಪ್ರಭಾವದಿಂದ ದೂರವಾಗಿಲ್ಲ. ಕರ್ನಾಟಕ ರಾಜ್ಯ ರೈತ ಸಂಘ ಮತ್ತು ಹಸಿರು ಸೇನೆ ಸೇರಿ ಕುಲಾಂತರಿ ತಂತ್ರಜ್ಞಾನದ ಮಾನ್ಸೆಂಟೋ ಕಂಪೆನಿಯ, ಹುರುಳನ್ನು ತೋರಿ ವಿರೋಧಿಸುವ ಪ್ರಯತ್ನವಾಗಿ ರಾಜ್ಯಮಟ್ಟದ ಅಧ್ಯಯನ ಶಿಬಿರವನ್ನು ರೂಪಿಸಿದ್ದುವು. ಕೃಷಿ ವಿಶ್ವವಿದ್ಯಾಲಯಗಳು ಬಿ.ಟಿ. ತಂತ್ರಜ್ಞಾನದ ಆಹಾರ ಬೆಳೆಗಳ ಸಂಶೋಧನೆಯನ್ನು ಕೈಬಿಡಲು ಒತ್ತಾಯಿಸುವ ನಿರ್ಧಾರ ಮಾಡಿದುವು. ಕಾರಣ ಮಾನ್ಸೆಂಟೋ ಕಂಪೆನಿ ಬಿಟಿ ಬದನೆಯ ಕ್ಷೇತ್ರ ಪ್ರಯೋಗಕ್ಕೆ ಪರವಾನಗಿ ಪಡೆದಿದೆ. ನಮ್ಮ ರೈತರ ಹೊಲಗಳೇ ಆ ತಳಿಗಳಿಗೆ ಸುಲಭ ತುತ್ತು. ಈ ಬಗ್ಗೆ ಸರ್ಕಾರ ಪರವಾನಗಿ ನೀಡಲೆತ್ನಿಸುವುದು

ರೈತರ ಹಾಗೂ ಪರಿಸರ ಸಂಘಟನೆಗಳಿಗೆ ಸಮ್ಮತವಾಗಿಲ್ಲ ಕೃಷಿತಜ್ಞರ ವಿಚಾರ ಸಂಕಿರಣವೊಂದರಲ್ಲಿ ಮಂಡಿಸಿದ ಅಧ್ಯಯನದ ವರದಿಗಳು ಕುಲಾಂತರಿ ತಂತ್ರಜ್ಞಾನದ ದುಷ್ಪರಿಣಾಮಗಳನ್ನು ಹೇಳಿವೆ. ಮಧ್ಯ ಪ್ರದೇಶದ ಬಿಟ ಹತ್ತಿ ಮಿಲ್ಲಿನ ಕೆಲಸಗಾರರಿಗೆ ಚರ್ಮದ ಕೆರೆತ, ಮುಖದ ಊತ, ಆರೋಗ್ಯದ ಏರುಪೇರು; ಫಿಲಿಪೈನ್ಸ್‌ನಲ್ಲಿ ಜಿಎಮ್ ಆಹಾರ ತಿಂದ ಪ್ರಾಣಿಗಳ .ಬೆಳವಣಿಗೆ ಕುಂಠಿತವಾದದ್ದು ಇತ್ಯಾದಿ ಸಂಗತಿಗಳು ನಮ್ಮ ರೈತರಿಗೆ ತಲುಪದೆ ಗುಟ್ಟಿನ ಲೋಕದಲ್ಲೇ ಉಳಿದಿವೆ. ಯೂರೋಪಿನ ಪ್ರಬಲಗ್ರಾಹಕ ಸಂಘಟನೆಗಳ ಕಾರಣ ಯುರೋಪಿಯನ್ ಒಕ್ಕೂಟವು ಜಿಎಮ್ ಬೆಳೆಗಳನ್ನು (ಕುಲಾಂತರಿ ತಂತ್ರಜ್ಞಾನರೂಪಿತ) ನಿಷೇಧಿಸುವಂತಾಗಿವೆ. ಪಶ್ಚಿಮ ಆಫ್ರಿಕ, ಜಾಂಬಿಯ, ಚೀನಾ ಇತ್ಯಾದಿ ದೇಶಗಳು ಜಿ.ಎಂ. (ಕುಲಾಂತರಿ ತಂತ್ರಜ್ಞಾನ ರೂಪಿತ ತಳಿ) ಆಹಾರೋತ್ಪನ್ನಗಳ ವಿರುದ್ಧ ಎದ್ದು ನಿಂತಿವೆ. ನಮ್ಮ ಕೃಷಿ ವಿಜ್ಞಾನಿಗಳು, ರೈತರೊಂದಿಗೆ ಸಂವಾದ, ಚರ್ಚೆ ಅವರ ಬೇಕುಬೇಡಗಳನ್ನರಿತು ಹೆಜ್ಜೆ ಮುಂದಿಡಬೇಕು ಎಂಬ ವಿಚಾರಗಳೂ[42] ಪ್ರಕಟವಾಗಿವೆ. ಈ ಸಂದರ್ಭದಲ್ಲಿ ಸರ್ವಋತು ಬೆಳೆಯಾದ ಬದನೆಗೆ ಬೀಳುವ ಹುಳುಗಳನ್ನು ಜೈವಿಕ ತಂತ್ರಜ್ಞಾನದ ಮೂಲಕ ನಿಯಂತ್ರಿಸಿ, ಉತ್ತಮ ಬದನೆ ತಳಿ ಪಡೆಯುವ ಸಂಶೋಧನಾ ಪ್ರಯತ್ನ ಬಾಂಗ್ಲ, ಫಿಲಿಫೈನ್ಸ್ ಹಾಗೂ ಭಾರತದಲ್ಲಿ ನಡೆದಿದೆ. ಆದರೆ ಈ ಬೆಳೆಯ ಪರಿಣಾಮದಿಂದ ಪಂಜಾಬಿನ ಕೃಷಿಯೋಗ್ಯ ಭೂಮಿಯ ಮಣ್ಣಿನ ಫಲವತ್ತತೆ ಕುಸಿದಿರುವುದು, ಆಲೂಗೆಡ್ಡೆ, ಬಾಸುಮತಿ ಬೆಳೆಗಳ ಇಳುವರಿ ಕಡಿಮೆಯಾಗಿರುವುದು, ಈ ಹತ್ತಿ ಬೆಳೆದ ಪ್ರದೇಶದ ಸುತ್ತ 50 ಕಿ.ಮೀ. ವರೆಗಿನ ಭೂಮಿ ಬರಡಾಗಿರುವುದು, ಆಂಧ್ರದಲ್ಲಿ ಹೀಗೆ ಫಲವತ್ತತೆ ಕಳೆದುಕೊಂಡ ಭೂಮಿಯ ರೈತರು ಆತ್ಮಹತ್ಯೆಗೊಂಡಿರುವುದು, ಈ ತಂತ್ರಜ್ಞಾನ ಬಳಸಿ ಬೆಳೆದ ಉತ್ಪನ್ನಗಳ ಸೇವನೆಯಿಂದ ಹೃದಯರೋಗ, ಪಾರ್ಶ್ವವಾಯು ಅಲರ್ಜಿ ಇತ್ಯಾದಿಗಳು ಉಂಟಾಗಿರುವ ಉದಾಹರಣೆಗಳು ಅಮೇರಿಕದಲ್ಲಿಯೆ ದಾಖಲಾಗಿದೆ. ದೇಶ–ವಿದೇಶಗಳಲ್ಲಿ ಇವುಗಳ ಪರ–ವಿರೋಧ ಅಭಿಪ್ರಾಯಗಳು ವ್ಯಕ್ತವಾಗುತ್ತಿವೆ.[43] ನವೆಂಬರ್ 2006ರಲ್ಲಿ ಧಾರವಾಡದ ಕೃಷಿ ವಿಶ್ವವಿದ್ಯಾಲಯದಲ್ಲಿ ರೈತ ನಾಯಕರು ಹಾಗು ಕುಲಾಂತರಿ ಗುಣವನ್ನು ದೇಶಿ ಬದನೆಗೆ ಅಳವಡಿಸುವ ವಿಜ್ಞಾನಿಗಳ ಮುಖಾಮುಖಿ ನಡೆದದ್ದು ಗಮನಾರ್ಹ. ಕೊಯಮತ್ತೂರಿನ ಪ್ರಾತ್ಯಕ್ಷಿಕ ಕ್ಷೇತ್ರದಲ್ಲಿ ಪ್ರಯೋಗಾರ್ಥ ಬೆಳೆದ ಮಹಿಕೋದ ಜಿಇ (ಜೆನಿಟಿಕಲಿ ಎಂಜನಿಯರ್ಡ್) ಭತ್ತದ ಬೆಳೆಯನ್ನು ಸ್ಥಳೀಯರೇ ನಾಶ ಮಾಡಿದ ಸಂಗತಿ ವರದಿಗೊಂಡಿದೆ.

---

42. ಸ್ವರ್ಣಾಭಟ್, ಕನ್ನಡಪ್ರಭದ ಲೇಖನ, 6.11.2006, ಬೆಂಗಳೂರು.

43. ಶುಭಾ ಕಾಡಬಾಳ ಅವರ ಲೇಖನ

ಟೆಕ್ಸಾಸ್ ವಿಶ್ವವಿದ್ಯಾಲಯದ ಸಸ್ಯಗಳ ಜೀನ್ ವಿಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ವಿಭಾಗದ ಭಾರತೀಯ ಸಂಜಾತ ಕೃಷಿ ವಿಜ್ಞಾನಿ ಕೀರ್ತಿ ರಾಥೋಡ್ ಅವರು, ಹತ್ತಿ ಜಾನುವಾರುಗಳು ಮಾತ್ರ ಅರಗಿಸಿಕೊಳ್ಳುವ 'ಗಾಸ್ಸಿಪಾಲ್' ಎಂಬ ವಿಷವಸ್ತು ಹತ್ತಿ ಬೀಜದಲ್ಲಿ ಅಲ್ಲದೆ ಇಡೀ ಗಿಡದ ಎಲ್ಲ ಅಂಗಾಂಶಗಳಲ್ಲಿ ಸೇರಿಕೊಂಡಿದೆ. ಈ 'ಗಾಸ್ಸಿಪಾಲ್' ಅನ್ನು ಹತ್ತಿ ಬೀಜಗಳು ಉತ್ಪಾದಿಸದಂತೆ ಮಾಡುವುದು; ಅಂದರೆ ಹತ್ತಿ ಬೀಜಗಳಲ್ಲಿ ಮಾತ್ರ ಗಾಸ್ಸಿಪಾಲ್ ಉತ್ಪತ್ತಿಗೆ ನೆರವಾಗುವ 'ಕಣ್ವ'ವು ವೃದ್ಧಿಯಾಗದಂತೆ ಜೀನ್ ಚಿಕಿತ್ಸೆ ('ಜೀನ್' ಅನ್ನು ತಟಸ್ಥ ಮಾಡುವ ಮತ್ತೊಂದು ಜೀನ್ ಸ್ಥಾಪಿಸುವುದು) ಮಾಡಿ ಯಶಸ್ವಿಯಾಗಿದ್ದಾರೆ. ಹೀಗಾಗಿ ಭಾರತದ ಬಡ ಹತ್ತಿ ರೈತರನ್ನು ತೀರಾ ನಿಕಟವಾಗಿ ಕಂಡಿದ್ದ ಕೃಷಿ ವಿಜ್ಞಾನಿ ರಾಥೋಡ್ ಬೀದಿಗೆರಚುತ್ತಿದ್ದ ಹತ್ತಿ ಬೀಜವನ್ನು ಪುಷ್ಟಿದಾಯಕ ಮಾನವ ಆಹಾರವಾಗಿ ಪರಿವರ್ತಿಸುವ ಮಾರ್ಗ ಅರಸಲಾರಂಭಿಸಿದರು. ಈ ಬಗ್ಗೆ ಕಾಲಿಫೋರ್ನಿಯ ವಿಶ್ವವಿದ್ಯಾಲಯದ ಪ್ರಾಧ್ಯಾಪಕ ಅಭಯ ದಾಂಡೇಕರ್ ಕೂಡ ಕುಲಾಂತರಿ ಜೀನ್‌ಗಳ ಬಗ್ಗೆ ವಿಶೇಷ ಸಂಶೋಧನೆ ನಡೆಸಿದ್ದಾರೆ. ತಿನ್ನ ಬಲ್ಲ ಬೀಜಗಳ ಬೆಳವಣಿಗೆಯಲ್ಲಿ ಅನ್ಯಮೂಲದಿಂದ ಬಂದ 'ಜೀನ್' ಬೀರುವ ಪರಿಣಾಮದ ತಿಳಿಯಲೆತ್ನಿಸಿದ್ದಾರೆ. ಈ ಈರ್ವರ ಸಂಶೋಧನೆಯಿಂದ ಸಾಮಾನ್ಯ ರೈತರಿಗೂ ಈ ಹೊಸ ಹತ್ತಿ ತಳಿ ಕೈಗೆಟುಕುವಂತಾಗುತ್ತದೆ ಎಂಬ ನಿರೀಕ್ಷೆ ಅವರದಾಗಿದೆ. ಹೊಲಗಳಲ್ಲಿ ಬಹಳ ಪ್ರಮಾಣದಲ್ಲಿ ಹತ್ತಿ ಬೆಳೆವಾಗ ಕುಲಾಂತರಿ ತಳಿಗಳು ಹೊಸ ವೈರಸ್ ಬಾಧೆಗೂ ತುತ್ತಾಗುವ ಸಾಧ್ಯತೆಯನ್ನು ಹೇಳುತ್ತಾರೆ. ಆದರೆ ರಾಥೋಡ್ ಯಾವ ವೈರಸ್‌ಗೂ ಹಾನಿಗೊಳ್ಳದಂಥ ಹತ್ತಿಗಿಡಗಳನ್ನು ಪಡೆಯುವ ಸಂಶೋಧನೆ ಫಲಿತವಾದರೆ ಹತ್ತಿ ಬೆಳೆವವನು ಉದ್ಧಾರವಾದಾನು ಎಂಬ ಅಭಿಪ್ರಾಯ[44] ವ್ಯಕ್ತವಾಗಿದೆ. ಅಂದರೆ ಮನುಷ್ಯನೂ ತನ್ನ ಆಹಾರವಾಗಿ ಯಾವ ಅಪಾಯವೂ ಇಲ್ಲದೆ ಹತ್ತಿ ಬೀಜವನ್ನು ತಿನ್ನಲು ಯೋಗ್ಯವಾಗಿ ಮಾಡುವ ಪ್ರಯತ್ನವಿದಾಗಿದೆ. ಇದರಿಂದ ನಮ್ಮ ರೈತನು ನೆಮ್ಮದಿಯಿಂದ ಬಾಳ್ವೆ ಮಾಡಲು ಒಂದು ಆರ್ಥಿಕ, ದೈಹಿಕ ಸದೃಢತೆಯ ಮಾಧ್ಯಮವೊಂದು ದೊರೆತಂತಾಗುತ್ತದೆ.

**ಬೆಂಬಲಬೆಲೆ:** ಇನ್ನು ಬೆಂಬಲ ಬೆಲೆಯಲ್ಲಿ ಮೆಕ್ಕೆಜೋಳವನ್ನು ಮಾರಿದ ಕೊಪ್ಪಳ ಜಿಲ್ಲೆಯ ರೈತರಿಂದ ಕೊಪ್ಪಳ ಖರೀದಿ ಕೇಂದ್ರವು 20,754.65 ಕೆ.ಜಿಯನ್ನು

44. ಹಾಲ್ದೊಡ್ಡೇರಿ ಸುಧೀಂದ್ರ ಅವರ ಲೇಖನ, ಕನ್ನಡಪ್ರಭ, 4.12.2006

ಖರೀದಿಸಿ, 1,20,07511 ರೂ. ಮಾತ್ರ ಕೊಟ್ಟು ಬಾಕಿ ಹಣ ಕೊಟ್ಟಿಲ್ಲ. ಸಾಲ ಮಾಡಿ ಬೆಳೆದ ರೈತರಿಗೆ, ಜನವರಿ 23ರಿಂದ ಖರೀದಿಸಿದ ಬೆಳೆಗೆ ಕೇಂದ್ರವು ಹಣ ನೀಡಿಲ್ಲ. ಮಾರಿದರೂ ಬೆಳೆಯ ಹಣ ಇಲ್ಲದೆ, ಸಾಲಗಾರರ ತಗಾದೆಯಿಂದ ರೈತರು ಬೆಂಬಲ ಬೆಲೆಗೆ ಮಾರಿದ್ದರಿಂದ, ದಲಾಲಿ ಅಂಗಡಿ ಮಾಲೀಕರು ಸಾಲ ಕೊಡಲು ನಿರಾಕರಣೆ, ಶೀಘ್ರದಲ್ಲಿಯೇ ರೈತರಿಗೆ ಹಣ ಪಾವತಿಸುವ ಬಗ್ಗೆ ಖರೀದಿ ಮಾರುಕಟ್ಟೆ ವ್ಯವಸ್ಥಾಪಕರ ಹೇಳಿಕೆ ಹೇಳಿಕೆಯಾಗಿಯೇ ಉಳಿದಿರುವುದು, ಇವೆಲ್ಲ ರೈತರ ಗೋಳನ್ನು ತಣಿಸದೆ ಕಣ್ಣೀರು ಹಾಕುವಂತೆ ಮಾಡಿರುವುದು ಸುದ್ದಿಯಾಗಿದೆ (19.2.2006).

ಕೇಂದ್ರಸರ್ಕಾರ ಘೋಷಿಸಿರುವ ಬೆಂಬಲ ಬೆಲೆಗಿಂತ 30 ರೂ. ಹೆಚ್ಚು ನೀಡಿ ಖರೀದಿಸಲು ರಾಜ್ಯ ಸರ್ಕಾರದ ಆದೇಶದಂತೆ ಖರೀದಿ ಕೇಂದ್ರಗಳನ್ನು ರಾಯಚೂರು ಜಿಲ್ಲೆಯ ಮಾನವಿ, ಸಿಂಧನೂರು ತಾಲೂಕುಗಳಲ್ಲಿ ಪ್ರಾರಂಭಿಸಲಾಯಿತು. ಪ್ರವಾಹ, ಕಾಳು ಕಟ್ಟಿದ ಹಂತದಲ್ಲಿ ಸುರಿದ ಮಳೆ, ಅಕಾಲಿಕ ಮಳೆಯಿಂದ ಹರಡಿದಂಥ ರೋಗ, ಕೀಟಗಳ ಹಾವಳಿಗೆ ಸಿಕ್ಕಿ ಭತ್ತದ ಬೆಳೆ, ಗುಣಮಟ್ಟ ಕಳೆದುಕೊಂಡಿದೆ. ಮಾರುಕಟ್ಟೆಯಲ್ಲಿ ಭತ್ತದ ಬೆಲೆ ಈ ಕಾರಣಕ್ಕಾಗಿಯೂ ಕುಸಿದಿದೆ. ಉತ್ಪಾದನೆಯ ಖರ್ಚೂ ಹುಟ್ಟದೆ ರೈತರ ಗೋಳು ಹೇಳ ತೀರದಾಗಿದೆ. ಪ್ರಕೃತಿ ವಿಕೋಪಕ್ಕೆ ಸಿಕ್ಕಿರುವ ಭತ್ತದ ಗುಣಮಟ್ಟ ಶೇ.50 ಕ್ಕಿಂತಲೂ ಮೀರಿ ಕುಸಿದಿದೆ. ಗುಣಮಟ್ಟ ಶೇ. 14ಕ್ಕಿಂತ ಕಡಿಮೆಯಷ್ಟು ಮಾತ್ರ ಕುಸಿದಿದ್ದರೆ ಖರೀದಿಗೆ ನಿಯಮ ರೀತ್ಯಾ ಸಾಧ್ಯವಾಗುತ್ತದೆ. ರೈತರು ತಾವು ಮಾಡಿದ ಸಾಲ ತೀರಿಸಲು ಕಟಾವು ಮಾಡಿದ ಭತ್ತವನ್ನು ಮಾರಿಕೊಂಡು ನಷ್ಟ ಅನುಭವಿಸಿದ್ದಾರೆ. ಅಲ್ಲದೆ ಭತ್ತ ಮಾರಲು ಹೋಗಿದ್ದ 600 ರೈತರ ಭತ್ತವು ಗ್ರೇಡರ್ಸ್‌ಗಳಿಂದ ತಿರಸ್ಕೃತವಾದುವು. ನಾಲ್ಕಾರು ವರ್ಷಗಳ ಹಿಂದೆ ಪಂಜಾಬಿನಲ್ಲಿ ಕಳಪೆ ಮಟ್ಟದ ಬೆಳೆ ಬಂದು ಬೆಲೆ ಕುಸಿತವಾಯಿತು. ಕೇಂದ್ರ ಸರ್ಕಾರ ಅಂಡರ್ ರಿಲ್ಯಾಕ್ಷೇಶನ್ ಸ್ಕೀಂ (U.R.S) ಅಡಿಯಲ್ಲಿ ನಿರ್ಬಂಧಗಳನ್ನು ಸಡಿಲಿಸಿ ಗುಣಮಟ್ಟದಲ್ಲಿ ಶೇ. 50ಕ್ಕೂ ಅಧಿಕ ಪ್ರಮಾಣದಲ್ಲಿ ಕಡಿಮೆ ಇದ್ದರೂ ರೈತರಿಂದ ಭತ್ತ ಖರೀದಿಸಲಾಗಿತ್ತು. ಹೀಗೆಯೇ ರಾಜ್ಯದ ಸಂಸದರು, ಕೇಂದ್ರದಲ್ಲಿರುವ ನಮ್ಮ ಸಚಿವರು ಈ ಬಗ್ಗೆ ಗಮನ ಹರಿಸಿದರೆ ಮಾತ್ರ ಖರೀದಿ ಸಾಧ್ಯ ಎಂಬ ಅಭಿಪ್ರಾಯ ಜಿ.ಎಸ್.ಕಮತರ ಅವರದು. ಖರೀದಿಕೇಂದ್ರದಲ್ಲಿರುವ ಅಧಿಕಾರಿಗಳ ಮೇಲೆ ರೈತರ ಆಕ್ರೋಶ, ಪ್ರತಿಭಟನೆ ಎದುರಾಗಿದೆ. ರೈತರಿಂದ ಭತ್ತವನ್ನು ಖರೀದಿಸಲು ಈ ಹಿನ್ನೆಲೆಗಳಲ್ಲಿ ಸಾಧ್ಯವಾಗದೆ ಅಧಿಕಾರಿಗಳದು ಇಕ್ಕಟ್ಟಿನ ಪರಿಸ್ಥಿತಿಯಾಗಿತ್ತು. (23.5.2006 ರ ಸುದ್ದಿ)

**ಅಡಕೆ ಮಾರಾಟ** : ಶಿವಮೊಗ್ಗ ಅಡಕೆ ಮಾರುಕಟ್ಟೆಯಲ್ಲಿ ಸರಕು, ಬೆಟ್ಟೆ, ಹಾಗು ಅಪಿ, ಮತ್ತು ಇಡಿ ಅಡಿಕೆ ಧಾರಣೆಗಳು ಏರುತ್ತಿದ್ದರೂ, ಅದಕ್ಕೆ ಪ್ರತಿಸ್ಪರ್ಧಿ ಎನಿಸಿದ ಸಾಗರ ಮಾರುಕಟ್ಟೆಯಲ್ಲಿ ಎಲ್ಲಾ ಮಾದರಿ ಅಡಕೆ ಧಾರಣೆ ಏರಿದರೂ ಚಾಲಿ ಅಡಕೆಗೆ ಮಾತ್ರ ನಿರೀಕ್ಷಿತ ಧಾರಣೆ ಬರಲಿಲ್ಲ. ಗೊರಬಲು ಧಾರಣೆಯಲ್ಲಿ ಏರಿಳಿತ ಕಾಣಲಿಲ್ಲ. ದಕ್ಷಿಣ ಕನ್ನಡದಲ್ಲಿ ಬಿಳಿ ಅಡಕೆಗೆ ಉತ್ತರ ಕನ್ನಡದ ಕೆಂಪಡಕೆಯಷ್ಟು ತೇಜಿ ಕಾಣಲಿಲ್ಲ. ಗುಟ್ಕಾ ಕಂಪೆನಿಗಳು ವಿದೇಶಿ ಅಡಕೆಯನ್ನು ಆಮದುಮಾಡಿಕೊಳ್ಳುತ್ತಿವೆ ಎಂಬ ವದಂತಿಗನುಗುಣವಾಗಿ ಇಂಡೋನೇಷ್ಯಾ, ಮಲೇಷ್ಯಾ ಅಡಕೆಯನ್ನು ಪಾಕಿಸ್ತಾನ ನಿಷೇಧಿಸಿರುವ ಕಾರಣ ಅವು ಭಾರತದ ಮಾರುಕಟ್ಟೆಗೆ ಬಂದು ಬೀಳುವ ಸಾಧ್ಯತೆ ಇದೆ. ಅಂತಾಗಿ ಇಲ್ಲಿಯ ಸದ್ಯದ ಸ್ಥಿರ ಮಾರುಕಟ್ಟೆಯಲ್ಲಿ ಅಡಕೆ ಧಾರಣೆಯ ಕುಸಿತವಾಗಬಹುದು ಎಂಬ ವಿಶ್ಲೇಷಣೆ ಇದೆ. (11.3.06). ಅಡಕೆ ಬೆಳೆಗಾರರಿಗೆ ಇಲ್ಲಿ ಬೆಲೆ ಕುಸಿತದ ಸಮಸ್ಯೆ. ಹಿಂದಿನ ಅಡಕೆ ಬೆಳೆಯ ಇತಿಹಾಸ ಕೆದಕಿದರೆ 1999 ರಲ್ಲಿ ಅಡಕೆಗೆ ಬಹಳ ಧಾರಣೆ ಬಂದಾಗ ಮಲೆನಾಡಿನ ಬೆಳೆಗಾರರ ಬದುಕಿನ ಶೈಲಿಯೆ ಬದಲಾಗಿತ್ತು. 2001–02ರ ಅಡಕೆ ಧಾರಣೆಯಲ್ಲಿ ಏರುಪೇರು ಆಯಿತು. 2003ರಲ್ಲಿ ಅದು ಭಾರಿ ಕುಸಿತ ಕಂಡು ಬೆಳೆಗಾರರ ವೈಭವವೂ ಹಾನಿಗೀಡಾಯಿತು. ಸಣ್ಣ ಬೆಳೆಗಾರ ರೈತರು ಸಾಲದ ಹೊರೆಗೆ ಸಿಕ್ಕರು. ಈ ಕಾರಣವಾಗಿ ವಾಸವೆ ಗ್ರಾಮದ ಚನ್ನಪ್ಪ ಬಸಪ್ಪ ಗೌಡ ಎಂಬುವರು ಅಡಕೆ ಬೆಳೆಗಾರರ ಪೈಕಿ ಆತ್ಮಹತ್ಯೆ ಮಾಡಿಕೊಂಡವರಲ್ಲಿ ಮೊದಲಿಗರು ಎನ್ನಲಾಗಿದೆ. ಅಡಕೆ ಬೆಳೆಗಾರರಿಗೆ ಧಾರಣೆ 12 ಸಾವಿರಕ್ಕೇರಿದಾಗ ತೃಪ್ತಿ ಬರುವಲ್ಲಿ 18 ಸಾವಿರ ಸಿಕ್ಕರೆ ಅವರನ್ನು ಹಿಡಿದು ನಿಲ್ಲಿಸುವುದಕ್ಕೆ ಸಾಧ್ಯವಿಲ್ಲ. ಆದರೆ ಮತ್ತಷ್ಟು ಎಂದು ಕಾದು ಕುಳಿತರೆ ಆತಂಕ ಜೊತೆಗೇ ಇರುತ್ತದೆ. ಇದರ ಅರಿವು ಬೆಳೆಗಾರರಿಗೆ ಆದರೆ ನೆಮ್ಮದಿ ಬದುಕು ಒದಗೀತು. ಇಲ್ಲವೆಂದರೆ ಸಮಸ್ಯೆಯೆ ಜೊತೆಗಾರನಾಗಿ ಬಿಡುತ್ತದೆ. ಕೇಂದ್ರ ಸಚಿವರ ಗುಟ್ಕಾ ನಿಷೇಧದ ಹೇಳಿಕೆ ಬರುವಲ್ಲಿ ಅಡಕೆ ಧಾರಣೆ ತೀವ್ರ ಕುಸಿಯಿತು. ಇದರಿಂದ ಅಡಿಕೆ ಹಾಗೂ ತಂಬಾಕಿನ ಮೇಲೆ ನೇರ ಪ್ರತಿಕೂಲ ಪರಿಣಾಮವಾಗುತ್ತದೆ. 2006ರಲ್ಲಿ ಅಡಕೆ ತೋಟಗಳಿಗೆ ಹಳದಿ ಎಲೆ ರೋಗ ಬಂದು ಅವು ಹಾಳಾದುವು. ಹೀಗೆ ಹಾಳಾದ ತೋಟದ ಅಡಿಕೆ ಬೆಳೆಗಾರ ಕೊಪ್ಪ ತಾ ಮರಿತೊಟ್ಲು ಗ್ರಾಮದವರು; 24 ಲಕ್ಷ ರೂ ಸಾಲದ ಹೊರೆ ಇದ್ದು ಆತ್ಮಹತ್ಯೆ ಮಾಡಿಕೊಂಡಿದ್ದಾರೆ. ಬೆಳೆಗಾರರೂ ಸಚಿವರ ಹೇಳಿಕೆ ವಿರುದ್ಧ ಬೀದಿಗಿಳಿದು ಹೋರಾಟದ ಹಾದಿ ತುಳಿದಿದ್ದಾರೆ. ಈ ಸಂದರ್ಭಗಳನ್ನು ಕಂಡು ತಾಲೂಕು ವ್ಯವಸಾಯೋತ್ಪನ್ನ ಮಾರಾಟ ಸಹಕಾರ ಸಂಘ ಅಡಕೆ ಬೆಳೆಗಾರರಿಗೆ

50 ಸಾವಿರ ರೂ.ವರೆಗೆ ಅಡಮಾನ ಸಾಲ ನೀಡಲು ಮುಂದಾಗಿದೆ. ಇದು ಮಾರುಕಟ್ಟೆ ಮಾಫಿಯಾದ ಕುಟಿಲತಂತ್ರವನ್ನು ಭಗ್ನಗೊಳಿಸುತ್ತದೆ. ಕಾಯಿದೆ ಬದ್ಧ ಮಾರುಕಟ್ಟೆಯಲ್ಲಿಯೇ ಉತ್ಪನ್ನವನ್ನು ಮಾರಾಟ ಮಾಡಿದಲ್ಲಿ ಸರ್ಕಾರಕ್ಕೂ ಲಾಭ. ನಮ್ಮ ಸಂಕಷ್ಟಕ್ಕೆ ಬರುವ ಸರ್ಕಾರದ ನೆರವನ್ನು ಪಡೆಯಲೂ ಅನುಕೂಲವಾಗುತ್ತದೆ. ಬೆಳೆಗಾರರು ತಮ್ಮ ಇತಿಮಿತಿ ಅರಿಯಬೇಕು ಎಂಬುದು ಕೆ.ವಿ.ಮಂಜುನಾಥ್ ಅವರ ಅನಿಸಿಕೆ (25.10.06). ಜೊತೆಗೆ ಕೊಳೆರೋಗ ನಿಯಂತ್ರಿಸಲು ಪರಿಣಾಮಕಾರಿಕ್ರಮದ ಸಂಶೋಧನೆಯೂ ಅಗತ್ಯವಿದೆ.

**ಕಾರ್ಖಾನೆ ಮಾಲಿನ್ಯ :** ಇನ್ನು ಉಕ್ಕಿನ ಕಾರ್ಖಾನೆ ಉಗುಳುವ ತ್ಯಾಜ್ಯದಿಂದ ಕಳ್ಳಂಬಳ್ಳಿ ಹೋಬಳಿ ಜೋಗಿ ಹಳ್ಳಿಯ ಸನ್‌ವೀಕ್ ಕಾರ್ಖಾನೆಯ ಸುತ್ತ ಬೆಳೆದ ಬೆಳೆಗಳು, ಹುಲ್ಲು, ವೀಳ್ಯದೆಲೆ, ಹಾನಿಗೀಡಾಗಿವೆ. ಅನೇಕ ಬಾರಿ ರೈತರು ಪ್ರತಿಭಟಿಸಿ, ಕಾರ್ಖಾನೆಯು ಜಮೀನು ಒತ್ತುವರಿ ಮಾಡಿ ತೊಂದರೆ ಕೊಡುತ್ತಿದೆ ಎಂದು ಅಪಾದಿಸಿರುವುದಿದೆ. (7.3.06). ಅಗತ್ಯ ವಸ್ತುಗಳ ಬೆಲೆ ನಿಯಂತ್ರಣ ಕೇಂದ್ರದಿಂದ ಆಗುತ್ತಿಲ್ಲ. ಕಾರು ಮತ್ತು ಸ್ಕಾಚ್‌ನಂಥ ವಿದೇಶಿ ಮದ್ಯದ ದರ ಇಳಿಸಿರುವ ಸರ್ಕಾರ ಆಹಾರ ಧಾನ್ಯದ ಬೆಲೆ ಇಳಿಸಲು ವಿಫಲವಾಗಿದೆ. ಇದರಿಂದ ಭಾರತೀಯ ರೈತರಿಗೆ ಟನ್‌ಗೋಧಿಗೆ 700 ರೂ. ದೊರೆತರೆ, ವಿದೇಶಿ ರೈತರಿಗೆ 1000 ರೂ. ದೊರೆಯುತ್ತಿದೆ.

**ಈರುಳ್ಳಿ ಖರೀದಿ :** ಈರುಳ್ಳಿ ಖರೀದಿ ಪ್ರಕ್ರಿಯೆಯ ವಿಳಂಬ ಬೇಡ; ದರ ಹೆಚ್ಚಿಸಿ ಗ್ರೇಡ್ ನೀತಿ ಕೈ ಬಿಟ್ಟು ಏಕಗಾತ್ರದ ಆಧಾರದಲ್ಲಿ ಖರೀದಿಸಿ ಎಂಬುದು ರೈತರ ಬೇಡಿಕೆ ಇತ್ತು (8.11.2006) ಬೆಂಬಲ ಬೆಲೆ ನೀಡಿ ಕಳಪೆ ಗುಣಮಟ್ಟದ ಈರುಳ್ಳಿಯು ಎ.ಪಿ.ಎಂ.ಸಿ ಯಾರ್ಡಿಗೆ ಹೇರಳವಾಗಿ ಬರುತ್ತಿರುವಲ್ಲಿ ಉತ್ತಮ ಈರುಳ್ಳಿ ಬೆಲೆ ಕುಸಿತವಾಯಿತು. ಈಗ ದರ್ಜೆವಾರು ಬೆಲೆ ನಿಗದಿಗೊಳಿಸಿದೆ. ಆದರೆ ಬೆಂಬಲ ಬೆಲೆಯ ಮರು ಪರಿಶೀಲನೆ ನಡೆಸಲು ರಾಜ್ಯ ಪಕ್ಷಾತೀತ ರೈತ ಹಿತರಕ್ಷಣಾ ಸಮಿತಿಯು ಕ್ವಿಂಟಾಲ್‌ಗೆ 800ರೂ. ನಂತೆ ನಿಗದಿ ಪಡಿಸಲು ಒತ್ತಾಯಮಾಡಿತು. ಸರ್ಕಾರಕ್ಕೆ ವರದಿ ನೀಡದೆ ಬೆಲೆ ನಿಗದಿ ಸಮಿತಿಯನ್ನು ರದ್ದುಪಡಿಸಿ ಎ.ಪಿ.ಎಂ.ಸಿ ವ್ಯಾಪ್ತಿಗೆ ಬರುವ ಖರೀದಿ ಮಳಿಗೆಗಳನ್ನು ತೆರೆಯಲು ಜಿಲ್ಲಾಧಿಕಾರಿಗಳಿಗೆ ಅಧಿಕಾರ ನೀಡಬೇಕು ಎಂದು ಸಮಿತಿ ಆಗ್ರಹಿಸಿತು. (8.11.06)

ಕೊಡಗಿನಲ್ಲಿ ಕಾಫಿ ತೋಟದ ನಡುವೆ ಕಿತ್ತಲೆಯು ಅಂತರಿಕ ಬೆಳೆಯಾಗಿ ಬೆಳೆದು ರೋಗರಹಿತವಾಗಿತ್ತು. ಮುಂದೆ ಅತಿ ಶೀತದ ಕಾರಣ ಬೇವುರೋಗ ಹಾಗು ಪರಾವಲಂಬಿ ಸಸ್ಯ ಬಂದಳಿಕೆ ಬೆಳೆದು ಆ ಗಿಡಗಳು ನಾಶವಾಗುತ್ತ

ಬಂದುವು. ಇದರ ಪುನಶ್ಚೇತನಕ್ಕಾಗಿ ಪ್ರಗತಿ ಪರ ರೈತರೂ ಬೀಜಗಳನ್ನು ಪರಿಷ್ಕರಿಸುವ ಸಂಶೋಧನೆ ಮಾಡಿ ಬೆಳೆದಿರುವುದುಂಟು. ರೋಗದ ಬಗ್ಗೆ ಮಾಹಿತಿ ನೀಡಲು ಚೆಟ್ನಳ್ಳಿ ಸಂಶೋಧನ ಕೇಂದ್ರದಿಂದ ಮಾಹಿತಿ ಕಾರ್ಯಾಗಾರವನ್ನು ಏರ್ಪಡಿಸಲಾಯಿತು. ಇಂಥ ಪ್ರಯತ್ನ ಸಮಸ್ಯೆ ಬಗೆಹರಿಸುವ ನಿಟ್ಟಿನಲ್ಲಿ ಸಾಗುತ್ತದೆ.

ಹವಾಮಾನ ವೈಪರೀತ್ಯದಿಂದ ಅಂಗಮಾರಿ ರೋಗವು ಆಲೂಗೆಡ್ಡೆಗೆ ತಗುಲಿ, ಸಣ್ಣ ಗಾತ್ರವೂ ಆಗಿ, ಬೆಳೆ ನಾಶವಾಗಿ ರೈತರು ಸಾಲದ ಕೂಪಕ್ಕೆ ಬೀಳದಿರಲು, ಆತ್ಮಹತ್ಯೆ ಯೋಚನೆ ಬರದಿರಲು, ಸರ್ಕಾರವು ನೆರವಿನ ಹಸ್ತ ಚಾಚಬೇಕು. ಎಕರೆಗೆ 35 ಸಾವಿರ ಖರ್ಚು. ರೋಗದಿಂದಾಗಿ ಕ್ವಿಂಟಾಲಿಗೆ 250ರೂ ನಂತೆ ಮಾರಾಟವಾಗಿ ಕೂಲಿ, ಸಾಗಣೆ ವೆಚ್ಚವೂ ಸಿಗುತ್ತಿಲ್ಲ ಎನ್ನುತ್ತಾರೆ ರೈತರು.

**ಕಬ್ಬು:** ಮಹಾರಾಷ್ಟ್ರ ಮತ್ತಿತರ ರಾಜ್ಯಗಳಲ್ಲಿ ಕಬ್ಬಿಗೆ ಉತ್ತಮ ಬೆಲೆ ದೊರೆಯುತ್ತದೆ. ಕರ್ನಾಟಕ ಸಕ್ಕರೆ ಕಾರ್ಖಾನೆಗಳಿಗೇಕೆ ಇದೇಕೆ ಸಾಧ್ಯವಾಗಲ್ಲ? ಎಂಬ ಪ್ರಶ್ನೆ ಇದೆ. ಟನ್ ಕಬ್ಬಿಗೆ ವೈಜ್ಞಾನಿಕ ದರ ನಿಗದಿ ಮಾಡದಿದ್ದರೆ, ಆತ್ಮಹತ್ಯೆಯ ಹಾದಿ ತುಳಿಯುವ ರೈತರು ಹೆಚ್ಚುತ್ತಾರೆ. ಟನ್‌ಕಬ್ಬಿಗೆ 1500 ರೂಗಳ ನಿಗದಿ; ಮೊದಲ ಕಂತಿನಲ್ಲಿ 1300 ರೂ. ಕೊಡುವುದು; ಕಬ್ಬು ಬೆಳೆವ ವೆಚ್ಚಕ್ಕೆ ಶೇ. 15 ರಷ್ಟು ಸೇರಿಸಿದರ ನಿಗದಿಯಾಗಬೇಕು. ಇಲ್ಲವಾದರೆ ಹೋರಾಟದ ಹಾದಿ ಬಿಡುವುದಿಲ್ಲ ಎಂದು ರೈತ ಮುಖಂಡ ರುದ್ರಪ್ಪ ಮೋಕಾಶಿಯವರೊಡನಿದ್ದ ರೈತರ ತಂದ ಹೇಳಿದುದಾಗಿತ್ತು. ಇದು ರಾಜ್ಯದ ಎಲ್ಲ ರೈತರ ಸಮಸ್ಯೆ ಆಗಿದೆ. (27.10.2006). ಸಕ್ಕರೆ ರಫ್ತಿನ ಮೇಲೆ ನಿಷೇಧ ತೆಗೆಯದಿದ್ದರೆ ಕಾರ್ಖಾನೆಗಳು ತೀವ್ರ ನಷ್ಟದ ಸುಳಿಗೆ ಸಿಕ್ಕು, ಕಬ್ಬು ಬೆಳೆಗಾರರಿಗೆ ಹಣ ಪಾವತಿಸಲು ತೊಂದರೆ ಆಗುತ್ತದೆ. ಸಕ್ಕರೆ ಕಾರ್ಖಾನೆಯಲ್ಲಿ ಹೇರಳವಾಗಿ ಉತ್ಪತ್ತಿಗೊಳ್ಳುವ ಎಥೆನಾಲ್ ಹೆಚ್ಚು ಬಳಕೆಯಾಗುವ ವ್ಯವಸ್ಥೆ ಬೇಕು. ಇತರೆ ಉತ್ಪನ್ನಗಳಾದ ಕಾಕಂಬಿ ಹಾಗು ಸ್ಪಿರಿಟ್ ಮಾರಾಟಕ್ಕೆ ಮುಕ್ತ ಅವಕಾಶಬೇಕು. ನಿಯಮಾವಳಿ ತಿದ್ದುಪಡಿಮಾಡಿ ದೇಶದ ಯಾವುದೇ ರಾಜ್ಯಕ್ಕೆ ಈ ಉತ್ಪನ್ನಗಳನ್ನು ಮಾರಲವಕಾಶವಾಗಬೇಕು. ಪ್ರತಿ ಕಾರ್ಖಾನೆಗಳ ನಡುವಿನ ಅಂತರವನ್ನು 25 ಕಿ.ಮೀ.ವರೆಗೆ ಹೆಚ್ಚಿಸಬೇಕು, ಎಂಬ ಸಲಹೆ ಸೂಚನೆಗಳೂ ಸಮಸ್ಯೆಗಳಿಗೆ ಒಂದು ಹಾದಿ ತೋರಬಲ್ಲವು ಎನ್ನುವುದಿದೆ. (22.11.06)

ರೈತನೊಬ್ಬ ಇಡೀ ವರ್ಷ ಕಷ್ಟ ಪಟ್ಟು ಬೆಳೆದ ಕಬ್ಬನ್ನು ಕಾರ್ಖಾನೆಗೆ ಸರಬರಾಜು ಮಾಡಿ ತಿಂಗಳುಗಟ್ಟಲೆ ಕಾಯುವಂಥ ವ್ಯವಸ್ಥೆ ಇದೆ; ಆ ವಿಳಂಬಕ್ಕೆ

ಕಾರಣ, ತಿಳಿಯಬೇಕಿದೆ. ಕಬ್ಬಿಗೆ ಬೆಲೆ ನಿಗದಿ ಮಾಡುವ ಮುನ್ನ ರೈತರು ಮತ್ತು ಪೇಟೆ ತಜ್ಞರನ್ನು ಒಳಗೊಂಡ ಕಬ್ಬು ಬೆಲೆ ದರ ನಿಗದಿ ಸಲಹಾ ಸಮಿತಿ ರಚಿಸಿ ಅದರ ಜೊತೆ ಚರ್ಚಿಸಬೇಕಿದೆ. ರಾಜ್ಯದಲ್ಲಿ 52 ಸಕ್ಕರೆ ಕಾರ್ಖಾನೆಗಳಲ್ಲಿ ಸಹಕಾರಿ ವಲಯದ 11 ಕಾರ್ಖಾನೆಗಳು ಮುಚ್ಚಿದ್ದು ಖಾಸಗಿ ಕಾರ್ಖಾನೆಗಳು ಲಾಭದಲ್ಲಿ ನಡೆಯುತ್ತಿವೆ. ಅರೆಯಲು ಸಾಕಷ್ಟು ಕಬ್ಬು ಬೆಳೆದು ನಿಂತಿದ್ದರೂ ಸಹಕಾರಿ ಕಾರ್ಖಾನೆಗಳು ಬಳಸಿಲ್ಲ. ಅವುಗಳನ್ನು ಪ್ರಾರಂಭಿಸುವ ಇರಾದೆಯಂತು ಇದೆ. ಕಬ್ಬು ಬೆಳೆಗಾರರು ಹನಿ ನೀರಾವರಿ ಪದ್ಧತಿ ಅಳವಡಿಸಿಕೊಂಡರೆ ನೀರಿನ ಸಂರಕ್ಷಣೆ, ಹಾಗೂ ಕಬ್ಬಿನ ಇಳುವರಿಗೆ ಅನುಕೂಲ. ಅಂತಾಗಿ ಸಹಾಯಧನವನ್ನು ಶೇ.50 ರಿಂದ 75ಕ್ಕೆ ಸರ್ಕಾರ ಹೆಚ್ಚಿಸಿದೆ.

ಆಧುನಿಕ ಕೃಷಿ ಪದ್ಧತಿ ಅಳವಡಿಸಿಕೊಳ್ಳಲು ರೈತ ಸಂಘಗಳು ರೈತರಿಗೆ ತಿಳುವಳಿಕೆ ಕೊಡಬೇಕು ಎಂದೆಲ್ಲ ದಕ್ಷಿಣ ರಾಜ್ಯಗಳ ಕಬ್ಬು ಬೆಳೆಗಾರರ ಸಮಾವೇಶದಲ್ಲಿ ಸಚಿವರಾದ ಶ್ರೀ ಜಗದೀಶ್ ಶೆಟ್ಟರ್ ಹಾಗೂ ಶ್ರೀ ಬಂಡೆಪ್ಪ ಕಾಶೇಂಪುರ್ ಅವರು ಹೇಳಿದ್ದು, ಸಮಸ್ಯೆಯ ಮುಖಗಳನ್ನು ತೆರೆದಿಟ್ಟಿದೆ. ಸರಬರಾಜಿನ ದಿನವೇ ಕಬ್ಬಿನ ಹಣ ನೀಡಲು ಕ್ರಮಕೈಗೊಳ್ಳುವ ಬಗ್ಗೆ ಸಚಿವರು ಭರವಸೆ ನೀಡಿರುವುದು ವರದಿಯಾಗಿರುವಲ್ಲಿ (24.5.06) ಬೆಳೆಗಾರರ ಸಂಕಷ್ಟದ ಆಯಾಮವನ್ನು ತೋರಿದೆ ಎನ್ನಬೇಕು. ಅಲ್ಲದೆ ದಾವಣಗೆರೆ ಜಿಲ್ಲೆಯಲ್ಲಿ ಬೆಳೆಸುವ ಕಬ್ಬಿನ ಬೆಳೆಯಲ್ಲಿ ಶೇ. 10 ರಿಂದ 11 ರಷ್ಟು ಸಕ್ಕರೆ ಇದೆ ಎಂದು ರೈತರು ವಾದಿಸಿದರೂ, ಕಾರ್ಖಾನೆಯವರು ಅದನ್ನು ಬಚ್ಚಿಟ್ಟು ಕಡಿಮೆ ಬೆಲೆ ನೀಡುತ್ತಾರೆ ಎಂಬುದು ಬೆಳೆಗಾರರ ಅಳಲು. ಟನ್ ಕಬ್ಬಿಗೆ 1500 ರೂ. ದರ ನಿಗದಿ ಮಾಡಬೇಕೆಂದು ಭಾರತೀಯ ರೈತ ಒಕ್ಕೂಟದ ಭದ್ರಾ ಶಾಖೆಯ ರೈತರು ಸರ್ಕಾರವನ್ನು ಒತ್ತಾಯಿಸಿ 15 ದಿನಗಳ ಗಡುವು ನೀಡಿದ ವಿಷಯವಿದೆ. ಈ ಬಗ್ಗೆ ಕ್ರಮವನ್ನು ತೆಗೆದುಕೊಳ್ಳದಿದ್ದರೆ ಹೋರಾಟದ ಮಾರ್ಗಕ್ಕೆ ಇಳಿಯುವ ಎಚ್ಚರಿಕೆಯನ್ನು ನೀಡಿದ್ದು ವರದಿಗೊಂಡಿದೆ (11.7.06). ರಾಜ್ಯದ ಕಬ್ಬು ಬೆಳೆಗಾರರು ಬೆಲೆ ನಿಗದಿ ಕುರಿತು ಪ್ರತಿ ವರ್ಷ ಸಮಸ್ಯೆಯನ್ನು ಎದುರಿಸುತ್ತಿದ್ದಾರೆ. ಕಳೆದ ವರ್ಷ ಕೊಟ್ಟಂತೆ ಟನ್‌ಗೆ 1200 ರೂ. ದರದಲ್ಲಿ ನೀಡುವಂತೆ ಆ ರೈತರ ಆಗ್ರಹವಾಗಿದೆ. ಖಾಸಗಿ ಸಕ್ಕರೆ ಕಾರ್ಖಾನೆಗಳು 900 ರೂ. ನಿಂದ 1100 ರೂ .ವರೆಗೆ ಮಾತ್ರ ನೀಡಲು ತಯಾರಿವೆ. ರೈತರ ಹಿತ ಕಾಯಲು ಕಬ್ಬಿನ ಬೆಳೆಗೆ ಮೆಟ್ರಿಕ್‌ಟನ್ ಒಂದಕ್ಕೆ 1400 ರೂ. ನಿಗದಿ ಮಾಡಲು ಕೇಂದ್ರ ಸರ್ಕಾರ ಕೂಡಲೇ ಮಧ್ಯ ಪ್ರವೇಶಿಸಿ ಸಮಸ್ಯೆ ಪರಿಹರಿಸಬೇಕೆಂದು

ಸಂಸದರಾದ ಸರ್ವಶ್ರೀ ರಮೇಶ್ ಜಿಗ ಜಿಣಗಿ, ಸುರೇಶ್ ಅಂಗಡಿ ಗದ್ದೀಗೌಡರ್ ಮತ್ತು ಜಿ.ಎಂ.ಸಿದ್ದೇಶ್ವರ ಅವರು ಕೇಂದ್ರ ಕೃಷಿ ಮತ್ತು ಆಹಾರ ಸಚಿವ ಶ್ರೀ ಶರದ್ ಪವಾರ್ ಅವರನ್ನು ಭೇಟಿ ಮಾಡಿ ಮನವಿ ಸಲ್ಲಿಸಿದ್ದುದರ ಸುದ್ದಿ ಪ್ರಕಟವಾಗಿದೆ (14.12.06). ರಾಜ್ಯದ ಸಕ್ಕರೆ ಕಾರ್ಖಾನೆಗಳಿಗೆ ಕೇಂದ್ರದ ವಿಶೇಷ ಪ್ಯಾಕೇಜ್ ಸೌಲಭ್ಯ ದೊರೆಯುತ್ತಿಲ್ಲವಾಗಿ ಆ ಬಗ್ಗೆ ಅಗತ್ಯ ಕ್ರಮಗಳನ್ನು ಜರುಗಿಸಲೂ ಸಂಸದರು ಒತ್ತಾಯ ಮಾಡಿದ್ದೂ ತಿಳಿದುಬಂದಿದೆ.

ಉತ್ತರಕರ್ನಾಟಕದಲ್ಲಿ ಕಬ್ಬು ಬೆಳೆಯುವ ಕ್ಷೇತ್ರ (2.66 ಲಕ್ಷ ಹೆಕ್ಟೇರ್) ಹಾಗೂ ಸಕ್ಕರೆ ಕಾರ್ಖಾನೆಗಳೂ (ಹಾಲಿ 23 ಹಾಗೂ ಸ್ಥಾಪನೆ ಆಗಲಿರುವವು 6) ಹೆಚ್ಚು. ವಿಶೇಷವಾಗಿ ಬೆಳಗಾವಿ, ಬಾಗಲಕೋಟೆ, ವಿಜಾಪುರ ಜಿಲ್ಲೆ ಸಂಬಂಧಿಸಿದ ಮಾಹಿತಿ ಇದು. ಅಂದರೆ ಕೃಷ್ಣಾನದಿ ಪ್ರದೇಶದಲ್ಲಿ ಕಬ್ಬಿನಲ್ಲಿ ಇರುವ ಸಕ್ಕರೆ ಪ್ರಮಾಣ ಬೇರೆಡೆಗಿಂತ ಹೆಚ್ಚಿಗಿದ್ದು ಅದು ಶೇ. 12 ರಷ್ಟು ಇರುವ ಕಾರಣ ಕಾರ್ಖಾನೆಗಳ ಸಂಖ್ಯೆ ಹೆಚ್ಚಲು ಕಾರಣವೆನ್ನಲಾಗಿದೆ. ಕಳೆದ ವರ್ಷ ಟನ್ ಕಬ್ಬಿಗೆ 1200ರೂ ಕೊಟ್ಟ ಕಾರ್ಖಾನೆಗಳು ಸದ್ಯ 900 ರೂ. ಗಳಿಗಿಳಿಸಿವೆ. ಮಧೋಳದ ಸಹಕಾರಿ ಸಕ್ಕರೆ ಕಾರ್ಖಾನೆ ಮಾತ್ರ 1200 ರೂ. ದರವನ್ನೆ ನಿಗದಿಮಾಡಿದೆ. ಬೆಲೆ ವಿಷಯದ ಬಿಕ್ಕಟ್ಟಿನಿಂದಾಗಿ ಕಾರ್ಖಾನೆಗಳ ಕೆಲಸ ನಿಂತು, ಕಟಾವಿಗೆ ಬಂದ ಕಬ್ಬು ಕೂಡ ಒಣಗುತ್ತಿದೆ. ಮುಖ್ಯಮಂತ್ರಿಗಳ ನೇತೃತ್ವದಲ್ಲಿ ಉನ್ನತ ಮಟ್ಟದ ಸಭೆ ನಡೆದರೂ ಫಲ ಕಂಡಿಲ್ಲವೆನ್ನಲಾಗಿದೆ. ಮಾರುಕಟ್ಟೆಯಲ್ಲಿ ಸಕ್ಕರೆ ಬೆಲೆ 1750 ರೂ. ನಿಂದ 1500 ರೂ. ಗಳಿಗೆ ಕುಸಿದಿದೆ.

ಕಬ್ಬು ಬೆಳೆಗಾರರಿಗೆ, ಕಬ್ಬಿನ ಬೀಜ, ನಾಟಿ, ರಸಗೊಬ್ಬರ, ಕೂಲಿ ಇತ್ಯಾದಿಗಳೆಲ್ಲ ಸೇರಿ ಹೆಕ್ಟೇರಿಗೆ 60 ಸಾವಿರ ಖರ್ಚು ಬೀಳುತ್ತದೆ. ಪ್ರತಿಟನ್ ಕಬ್ಬಿನಿಂದ 1.30 ಕ್ವಿಂಟಾಲ್ ಸಕ್ಕರೆ, 40 ಕೆ.ಜಿ. ಕಾಕಂಬಿ, 40 ಕೆ.ಜಿ. ಪ್ರೆಸ್‌ಮಡ್, 2 ಕ್ವಿಂಟಾಲ್ ಗೊಬ್ಬರ, 6 ಕ್ವಿಂಟಾಲ್ ಸಿಪ್ಪೆ ದೊರೆಯುತ್ತದೆ. ಹಾಗು ಇಥೆನಾಲ್ ಉತ್ಪತ್ತಿಯಾಗುತ್ತದೆ. ಒಟ್ಟು ಟನ್ ಕಬ್ಬಿಗೆ 3375 ರೂ. ಆದಾಯ ಬರುತ್ತದೆ. ಕಬ್ಬಿನ ಕಟಾವು, ಸಾರಿಗೆ, ಸಕ್ಕರೆ ಉತ್ಪಾದನೆ ಇತ್ಯಾದಿ ವೆಚ್ಚ ಕಳೆದು ಕನಿಷ್ಠ 1800 ರೂ. ಉಳಿತಾಯವಾಗುತ್ತದೆ. ಹೀಗಾಗಿ ಕಬ್ಬಿಗೆ ವೈಜ್ಞಾನಿಕ ಬೆಲೆಯಾಗಿ, ಟನ್ನಿಗೆ 1200 ರೂ. ಕೊಟ್ಟರೆ ಕಾರ್ಖಾನೆಗೆ ತೊಂದರೆ ಏನೂ ಆಗುವುದಿಲ್ಲ ಎಂಬುದು ಬೆಳೆಗಾರರ ಮಾತು; ಮಾರುಕಟ್ಟೆಯಲ್ಲಿ ಸಕ್ಕರೆ ಬೆಲೆ ಕುಸಿತ ಸರ್ಕಾರದ ಸಹಾಯ ಧನದಲ್ಲಿ ಕಡಿತ, ಹಾಲಿ ಸಕ್ಕರೆ ದಾಸ್ತಾನು ಹಾಗೂ ಸಕ್ಕರೆ ಉತ್ಪಾದನೆ ಅಂತರಾಷ್ಟ್ರೀಯ

ಮಾರುಕಟ್ಟೆಯಲ್ಲಿ ಸಕ್ಕರೆ ಮಾರಾಟದ ಸ್ಥಿತಿಗತಿ, ವಿದೇಶಕ್ಕೆ ರಫ್ತು ಮಾಡುವಲ್ಲಿನ ತೊಂದರೆ, ಕುರಿತು ಹೇಳಿ ಮಹಾರಾಷ್ಟ್ರದ ಸಕ್ಕರೆ ಕಾರ್ಖಾನೆಗಳಿಗೆ ಸರ್ಕಾರ. ಮಾರಾಟ ತೆರಿಗೆ, ಮೊಲಾಶಿಸ್ ತೆರಿಗೆ, ರಸ್ತೆ ಅಭಿವೃದ್ಧಿ ತೆರಿಗೆಯಲ್ಲಿ ರಿಯಾಯಿತಿ ನೀಡಿರುವಂತೆ ನಮ್ಮ ಸರ್ಕಾರವೂ ನೀಡಬೇಕಿರುವುದು, ಇವೆಲ್ಲಕ್ಕೂ ಪರಿಹಾರ ದೊರೆತರೆ ಕಬ್ಬಿನ ರೈತರು ಕೇಳುವ ಹಾಲಿ ದರದಂತೆ ಖರೀದಿಸಲು ಸಾಧ್ಯ ಎಂಬುದು ಕಾರ್ಖಾನೆ ಆಡಳಿತ ಮಂಡಳಿಯ ಮಾತಾಗಿದೆ. ಈರ್ವರ ನಡುವೆ ಸಭೆಗಳಾದರೂ ಸಮಸ್ಯೆ ಬಗೆಹರಿದಿಲ್ಲ. ಖಾಸಗಿ ಕಾರ್ಖಾನೆಗಳು ಲಾಭದಲ್ಲಿ ನಡೆಯುತ್ತಿದ್ದರೆ ಸಹಕಾರಿ ಕಾರ್ಖಾನೆಗಳು ಬಹುತೇಕ ನಷ್ಟದಲ್ಲಿ ನಡೆಯುತ್ತಿವೆ. ಮಹಾರಾಷ್ಟ್ರದಲ್ಲಿ ಕಳೆದ ಬಾರಿಯೆ ಟನ್ ಕಬ್ಬಿಗೆ 1400 ರೂ ಗಿಂತ ಹೆಚ್ಚಿಗೆ ನೀಡಿದ್ದು, ನಮ್ಮ ರಾಜ್ಯದಿಂದ 12.7 ಲಕ್ಷ ಟನ್ ಕಬ್ಬು ರವಾನೆ ಆಗಿತ್ತು. ಈ ಬಾರಿಯೂ ಅಲ್ಲಿ ಟನ್‌ಗೆ 1450 ರೂ. ಕೊಡುತ್ತಿರುವಲ್ಲಿ ನಮ್ಮ ಕಬ್ಬು ಅಲ್ಲಿಗೇ ಹೋಗುತ್ತಿದೆ. ಅದನ್ನು ಜಿಲ್ಲಾಡಳಿತ ನಿರ್ಬಂಧಿಸುತ್ತಿಲ್ಲವೆಂದೂ ಸ್ಪಷ್ಟವಾಗಿ ಹೇಳಲಾಗಿದೆ.[45] ಶ್ರೀ ಮುತ್ತು ನಾಯ್ಕರ ವಿಶ್ಲೇಷಣೆಯೂ ಗಮನಾರ್ಹವಾಗಿದೆ. ಇಲ್ಲಿ ಸಾಮಾಜಿಕ, ಆರ್ಥಿಕ ಆಯಾಮಗಳಲ್ಲದೆ ಇನ್‌ಫ್ರಾಸ್ಟ್ರಕ್ಚರ್‌ಗಳ ಕೊರತೆ ಮತ್ತು ಗಡಿ ಪ್ರೇರಣಾತ್ಮಕ ಅಂಶಗಳ ಛಾಯೆಯೂ ಕಾಣಬರುತ್ತದೆ.

**ತೆಂಗು ಬೆಳೆ :** ಹಾಸನ ಜಿಲ್ಲೆಯ ಅರಸೀಕೆರೆ, ಚನ್ನರಾಯಪಟ್ಟಣ ತಾಲೂಕುಗಳು, ತೆಂಗು ಬೆಳೆಗೆ ಪ್ರಸಿದ್ಧಿ. ತೆಂಗಿನ ಬೆಲೆ ಕುಸಿದು ರೈತರಿಗೆ ಆತಂಕವಾಗಿದೆ. ಮಾರುಕಟ್ಟೆಗೆ ನಿರೀಕ್ಷಿತ ಪ್ರಮಾಣದಲ್ಲೂ ತೆಂಗೂ ಬಂದಿಲ್ಲ. ಬೇಡಿಕೆಯೂ ಕಡಿಮೆ ಇದೆ. ಸಾವಿರ ತೆಂಗಿನಕಾಯಿಗೆ ಸುಮಾರು 7500 ರೂ. ಇದ್ದದ್ದು ಈಗ 2400 ರ ವರೆಗೆ ಇಳಿದಿದೆ. ಆಂಧ್ರ, ಕೇರಳದಲ್ಲಿ ತೆಂಗಿನ ಇಳುವರಿ ಹೆಚ್ಚಿದ್ದು, ಬೇಡಿಕೆ ಇಲ್ಲಿ ಕಡಿಮೆ ಆಗಿದೆ ಎಂಬುದು ವರ್ತಕರವಾದ. ಆದರೆ ವರ್ತಕರೇ ಬೇರೆಡೆಯಿಂದ ತೆಂಗು ಬರುವುದನ್ನು ತಡೆದು, ತಮ್ಮ ಬೆಲೆ ನಿಗದಿಮಾಡಿ ನಮ್ಮನ್ನು ವಂಚಿಸುತ್ತಿದ್ದಾರೆ ಎಂಬುದು ರೈತರ ಮಾತು. ಹಿಂದೆ ಬರಗಾಲದಲ್ಲಿ ನುಸಿರೋಗ ತೆಂಗಿಗೆ ತಗುಲಿ ಕಾಯಿಗೆ 15ರೂ. ವರೆಗೂ ರೇಟು ಏರಿತ್ತು. ಈಗ ನುಸಿ ರೋಗ ಕೊಂಚ ಕುಸಿದು ತೆಂಗು ಕೈಗೆ ಬಂದರು ರೈತರಿಗೆ ಕಷ್ಟ ತಪ್ಪಲಿಲ್ಲ ಎಂದರೆ ನಾವು ರೈತರ ಪರ ಎನ್ನುವುದು ಬಾಯುಪಚಾರವಾದೀತು. ಸರ್ಕಾರ ತೆಂಗು ಮತ್ತು ಕೊಬ್ಬರಿಗೆ ಉತ್ತಮ ಬೆಲೆ ದೊರಕಿಸಿಕೊಡಬೇಕು ಎಂಬ ಪ್ರತಿಕ್ರಿಯೆಗಳು ವ್ಯಕ್ತವಾಗಿವೆ. *(22.7.06)*

45. ಮುತ್ತು ನಾಯ್ಕರ., ಕಬ್ಬಿನ ಸಮರ, (ಕೃಷಿ ವಿಜಯ) ವಿಜಯ ಕರ್ನಾಟಕ, 22.11.2006

ಜಿಲ್ಲಾಧಿಕಾರಿಗಳಿಂದ ವರದಿ ತರಿಸಿಕೊಂಡು, ನಿಗದಿತ ಬೆಂಬಲ ಬೆಲೆ 4900 ರೂ ಸಾಲದೆಂದರೆ 53000 ರೂ ವರೆಗೆ ನಿಗದಿ ಪಡಿಸಲಾಗುವುದು. ಕೊಬ್ಬರಿ ಖರೀದಿಗೆ 2 ರಿಂದ 3 ಕೋಟಿ ರೂ. ಮೀಸಲಿಡಲು ಸರ್ಕಾರ ಸಿದ್ಧವಿದೆ. ಉತ್ತರ ಭಾರತದಲ್ಲಿ ದೀವಳಿಗೆಯ ನಂತರ ಕೊಬ್ಬರಿ ಕೊಳ್ಳುವಿಕೆ ಕಡಿಮೆಯಾಗುವ ಸಂದರ್ಭವಿರುವಲ್ಲಿ, ಬೆಳೆ ಇಳಿಕೆಯ ಸನ್ನಿವೇಶವಾದರೆ, ನ್ಯಾಯಯುತ ಬೆಲೆ ನೀಡಿ ಸರ್ಕಾರವೇ ಕೊಳ್ಳುವ ಬಗ್ಗೆ ಮಾನ್ಯ ಮುಖ್ಯಮಂತ್ರಿ ಶ್ರೀ ಕುಮಾರಸ್ವಾಮಿಯವರು (18.10.06) ಸುದ್ದಿಗೋಷ್ಠಿಯಲ್ಲಿ ತಿಳಿಸಿರುವುದಿದೆ ಕೊಬ್ಬರಿ ರೈತರ ಸಂಕಷ್ಟಗಳಿಗೆ, ಸ್ಪಂದಿಸುವಲ್ಲಿ, ಅವುಗಳಿಗೆ ಪರಿಹಾರ ಕಾರ್ಯಗತವಾದರೆ ಮಾತ್ರ ಸಮಸ್ಯೆಗಳು ತವಿದಾವು. ಈ ಸಂದರ್ಭದ ಕೊಬ್ಬರಿಗೆ ಬೆಲೆ ಕುಸಿತದ ಇತಿಹಾಸವನ್ನು ಗಮನಿಸಬೇಕು.

1995-98 ರ ಅವಧಿಯಲ್ಲಿ ತೆಂಗಿಗೆ ಕಪ್ಪುತಲೆ ಹುಳದ ಬಾಧೆ, 1998-2000ರ ಅವಧಿಯಲ್ಲಿ ಒಣಗುರೋಗ, ಕಾಂಡ ಸೋರಗು ರೋಗ, 2000-2004ರ ಅವಧಿಯಲ್ಲಿ ನುಸಿರೋಗ, ಹಂಗಾಮು ಮಳೆ ಕೊರತೆ, ಅಂತರ್ಜಲ ಕುಸಿತ, ಇಳುವರಿ ನಷ್ಟ, ಎಪಿಎಂಸಿಯಲ್ಲಿ ಧಾರಣೆಗಳ ಏರುಪೇರು 20 ರೂ. ನಿಂದ 200 ರೂ. ವರೆಗೆ, ಮಾರುಕಟ್ಟೆಯಲ್ಲಿ ನ್ಯಾಯ ಸಮ್ಮತದ ಮಾರಾಟದ ಕೊರತೆ, ಏಕರೂಪ ತೆರಿಗೆ ಪದ್ಧತಿಯ ಜಾರಿ ಇಲ್ಲದಿರುವುದು, ಇಲಾಖೆಯ ನ್ಯಾಯಯುತ ಬೆಲೆ ಒದಗಿಸುವಲ್ಲಿ ಅದಕ್ಷತೆ, ವ್ಯಾಪಾರಿಗಳಿಂದ ರೈತನ ಮೇಲೆ ಆಗುತ್ತಿರುವ ಶೋಷಣೆ, ಎಪಿಎಂಸಿಯೂ ಅನಧಿಕೃತ ಮಾರಾಟಕ್ಕೆ ಹಾಕಬೇಕಾದ ಸೂಕ್ತ ಕಡಿವಾಣ, ಕುರಿತೆಲ್ಲ ಗಮನಿಸಬೇಕಾಗುತ್ತದೆ.

ಹಿಂದೆ ನುಸಿ ರೋಗ ಬಂದಾಗ ಕೊಬ್ಬರಿ ಬೆಲೆ ಕ್ವಿಂಟಾಲ್‌ಗೆ 3 ಸಾವಿರಕ್ಕೆ ಕುಸಿದಿತ್ತು. 2006 ನೇ ಸಾಲಿನಲ್ಲಿ ವ್ಯಾಪಾರಿಗಳ ಕುತಂತ್ರದಿಂದ ಬೆಲೆ ಕುಸಿತವಾಯಿತು ಎನ್ನಲಾಗಿದೆ. 2004ದಲ್ಲಿ ಕ್ವಿಂಟಾಲ್‌ಗೆ 8900 ರೂ ವರೆಗೂ ಬೆಲೆ ಬಂದಿತ್ತು. 2006ರ ದೀಪಾವಳಿ ವೇಳೆಗೆ 8000 ರೂ. ವರೆಗೆ ನಿರೀಕ್ಷಿಸಿದ್ದ ಸಣ್ಣ ರೈತರು ಹಾಗೆ ತಮ್ಮ ಬೆಳೆ ಮಾರಿಕೊಂಡು ತುಸು ನೆಮ್ಮದಿ ಕಂಡುಕೊಂಡರು. ದೊಡ್ಡ ರೈತರು (ತಿಪಟೂರು ಮಾರುಕಟ್ಟೆ) ದೊಡ್ಡ ಪ್ರಮಾಣದಲ್ಲಿ ಶೇಖರಿಸಿಕೊಂಡು, ಹೆಚ್ಚಿನ ಬೆಲೆಗೆ ಕಾಯ್ದರು. ಉತ್ತರ ಭಾರತದ ಖರೀದಿದಾರರು ಕಡಿಮೆ ಬೆಲೆಯ ಕೇರಳದ ಕೊಬ್ಬರಿಯನ್ನು ಸಂಗ್ರಹಿಸಿಕೊಂಡು ಬೇಡಿಕೆ ಪೂರೈಸಲು ಸಿದ್ಧವಾದುದು ನಮ್ಮ ರೈತರು ಅರಿಯಲಿಲ್ಲ. ಈ ನಡುವೆ ಬೇಡಿಕೆ ಇಲ್ಲ, ಬೆಲೆ ಕುಸಿತ ಎಂಬ ಸುದ್ದಿ ಹರಡಿಕೊಂಡಂತೆ ಕೊಬ್ಬರಿ ಸಂಗ್ರಹಪಿಟ್ಟಿದ್ದ ರೈತರೂ ಒಮ್ಮೆಲೆ ಮಾರುಕಟ್ಟೆಗೆ

ಧಾವಿಸಿದರು. ಆಗ 5200 ರೂ. ವರೆಗೂ ವ್ಯಾಪಾರವಾಯಿತು. ಹೆಚ್ಚಿನ ಕೊಬ್ಬರಿ ಮಾರುಕಟ್ಟೆಗೆ ಬರಲಾರಂಭಿಸಿದಾಗ (ಸುಮಾರು 35 ಸಾವಿರ ಚೀಲ) ಕೊಬ್ಬರಿ ದರ 4400 ಕ್ಕೆ ಕುಸಿದು ಬೆಳೆಗಾರರಿಗೆ ಆಘಾತವೆನಿಸಿತು. ಮಾರಾಟವೂ ಆಗದೆ, ಹಿಂದಕ್ಕೆ ಒಯ್ಯಲೂ ಆಗದೆ ಗೊಂದಲ ಶುರುವಾಯಿತು. ಕೊಬ್ಬರಿ ತರುವ ನೆಲೆಗಳಿಗೆ ಇದು ತಿಳಿದು ಪ್ರತಿಭಟನೆ ಆರಂಭವಾಯಿತು. ರೈತ ಸಂಘವೂ ಇದರಲ್ಲಿ ಪಾಲ್ಗೊಂಡಿತು. ಸರ್ಕಾರ ಮಧ್ಯೆ ಪ್ರವೇಶಿಸಿ 4900 ರೂ ಬೆಂಬಲ ಬೆಲೆ ನಿಗದಿ ಮಾಡಲು 40 ಸಾವಿರ ಚೀಲದಷ್ಟು ಕೊಬ್ಬರಿ ಖರೀದಿಗೊಂಡಿತು. ಈ ಗೊಂದಲಗಳಲ್ಲಿ ದರ ಕುಸಿತಕ್ಕೆ ಎಪಿಎಂಸಿ ತೆರಿಗೆ ನೀತಿ, ನಂ.2 ದಂಧೆ ಮಾರುಕಟ್ಟೆಯಲ್ಲಿ ನಡೆಯುವಿಕೆಯ ಕಾರಣ ಎಂಬ ಅಭಿಪ್ರಾಯವಿದೆ. ಎಪಿಎಂಸಿ ಮೂಲಕ ರವಾನೆಯಾಗುವ ಕೊಬ್ಬರಿ ಮೇಲೆ ಸರ್ಕಾರ ಶೇ.4 ರಷ್ಟು, ಆರ್.ಎಂ.ಸಿ. ಶೇ.1.5 ರಷ್ಟು ಸೆಸ್, ವಿಧಿಸುವುದು, ಕಮಿಷನ್ ಏಜೆಂಟ್‌ಗೆ ಶೇ.2 ರಷ್ಟು ಹಣ ಹೀಗೆ ಒಟ್ಟು 7.5 ರಷ್ಟು ಹಣ ರವಾನೆದಾರನ ಪಾವತಿ ನೋಂದಣಿಯ ಮಾರಾಟದಲ್ಲಿ . ಆದರೆ, ನೋಂದಣಿ ರಹಿತ ಮಾರಾಟದಲ್ಲಿ ರವಾನೆದಾರನಿಗೆ ಶೇ.4 ರಷ್ಟು ಉಳಿತಾಯವಾಗುವ ಕಾರಣ, ಅವನು ಈ ವಿಧಾನವನ್ನು ಅಧಿಕೃತವಾಗಿರುವ ಕಾರಣ ಅವಲಂಬಿಸುತ್ತಾನೆ. ರೈತನಿಗೂ ಇದು ಅನುಕೂಲ. ದಾಖಲೆ ಇಲ್ಲದೆ ತೆರಿಗೆ ಪಾವತಿಸದೆ ನಡೆಯುವ ವ್ಯವಹಾರವಾದ ನಂ.2 ದಂಧೆಯಿಂದ ರವಾನೆದಾರನಿಗೆ ಲೋಡಿಗೆ ಸುಮಾರು 30 ಸಾವಿರ ಉಳಿತಾಯ. ಹೀಗಾಗಿ ಹೊರಗಿನ ಖರೀದಿದಾರ ಕೇಳಿದ ಧಾರಣೆಗೆ ಮಾರುವ ಕಾರಣ ಕೊಬ್ಬರಿ ಧಾರಣೆ ಕುಸಿಯಲು ಮುಖ್ಯ ಕಾರಣ ಎಂದು ತಿಪಟೂರು ಕೃಷ್ಣ ಅವರ ವಿಶ್ಲೇಷಣೆಯಲ್ಲಿ ಕಂಡುಬರುತ್ತದೆ (25.10.2006). ಅಂತಾಗಿ ವ್ಯಾಪಾರಿಗಳು ಪ್ರಾಮಾಣಿಕ ಲಾಭಾಂಶ ಮೀರಿ ವ್ಯವಹಾರದಲ್ಲಿ ತೊಡಗುವುದು ರೈತರಿಗೆ ಕೆಡುಕು ಎಂದಾಗುತ್ತದೆ. ಆಸೆ ದುರಾಸೆ ಆಗಬಾರದು ಅಷ್ಟೆ.

**ಕೊಬ್ಬರಿ ಮಾರಾಟ :** ಸರ್ಕಾರ ಘೋಷಿಸಿದ ಬೆಂಬಲ ಬೆಲೆಗೆ ಕೊಬ್ಬರಿ ಖರೀದಿ ಆಗಿಲ್ಲ ಎಂದು ರಾಜ್ಯದ ಅನೇಕ ಕಡೆ ಬಂದ್, ರೈಲುತಡೆ, ಬಸ್ ತಡೆ ಆಗಿರುವುದುಂಟು. ಸರ್ಕಾರವು ಬೆಲೆ ತೀವ್ರ ಕುಸಿತವಾದಾಗ (ನವೆಂಬರ್ ಆರಂಭ) ಬೆಂಬಲ ಬೆಲೆಗೆ (4475 ರೂ.) ಖರೀದಿಸಿದ್ದರೆ ರೈತರಿಗೆ ಅನುಕೂಲವಾಗುತ್ತಿತ್ತು. ಅಂದರೆ ತಕ್ಷಣ ಅದು ಕಾರ್ಯಗತವಾಗಿದ್ದಿದ್ದರೆ ಶೇ.50ರಷ್ಟು ಮಾರಾಟ ಮಾಡಿದ್ದ ರೈತರಿಗೆ ಅನುಕೂಲವಾಗುತ್ತಿತ್ತು. ವರ್ತಕರು ಈ ಸಮಯದ ಲಾಭ ಪಡೆದು

ಮುಂಗಡ ನೀಡಿದ್ದ ಹಣ ಕೊಡಿ ಅಥವಾ ಕೊಬ್ಬರಿ ಕೊಡಿ ಎಂದು ದುಂಬಾಲು ಬೀಳಲಾಗಿ ರೈತರ ಪರಿಸ್ಥಿತಿ ಅಸಹಾಯಕವಾಯಿತು. ವರ್ತಕರ ಈ ಒತ್ತಡದ ತಂತ್ರದ ವಿರುದ್ಧ ರೈತ ಸಂಘಟನೆಗಳು ಹೋರಾಟ ಮಾಡಬೇಕಿತ್ತು ಎಂಬುದು ದಂಡಿಗನಹಳ್ಳಿ ರೈತರು ಅಂಬೋಣ. ಈ ದಿಸೆಯಲ್ಲಿ ರೈತರ ನೀಡುವ ಸಲಹೆಗಳಲ್ಲಿ, ವರ್ತಕರು ದಾಸ್ತಾನು ಮಾಡಿರುವ ಕೊಬ್ಬರಿ ಮಾರುಕಟ್ಟೆಗೆ ಬರದಂತೆ, ಅದಕ್ಕೆ ಬೆಂಬಲ ಬೆಲೆ ನೀಡದಂತೆ ಶೇ.10ರಷ್ಟು ರೈತರು ದಾಸ್ತಾನು ಮಾಡಿರುವ ಕೊಬ್ಬರಿಯನ್ನು ನೇರವಾಗಿ ಸರ್ಕಾರವೇ ಖರೀದಿಸುವುದು, ಸೂಕ್ತ ಎಂದಿರುವುದಾಗಿದೆ. ಸರ್ಕಾರ ಮಧ್ಯ ಪ್ರವೇಶ ಮಾಡದಿದ್ದರೆ ರೈತರಿಗೆ ತೀವ್ರ ಅನಾನುಕೂಲವಾಗುತ್ತದೆ. ರೈತ ಸಂಘಟನೆಗಳು ಸೂಕ್ತ ಸಂದರ್ಭದಲ್ಲಿ ಹೋರಾಟ ಮಾಡದಿದ್ದರೆ, ಸರ್ಕಾರದ (ಬೆಂಬಲ ಬೆಲೆ ಖರೀದಿಗೆ 23 ಕೋಟಿ ಕಾಯ್ದಿರಿಸಿದ್ದು) ಹೇಳಿದ ಹೇಳಿಕೆ ಹಾಗೆಯೇ ಉಳಿದು ಬಿಟ್ಟರೆ ಆಗುವ ಪರಿಣಾಮಕ್ಕೆ ಈ ಸಂದರ್ಭ ಒಂದು ಸಾಕ್ಷಿ ಎಂಬ ಅಭಿಪ್ರಾಯ ದಯಾಶಂಕರಮ್ಮೈಲಿ ಅವರದಾಗಿದೆ (23.11.06)

**ಈರುಳ್ಳಿ ಬೆಲೆ :** ಚಿತ್ರದುರ್ಗ ಜಿಲ್ಲೆಯಲ್ಲಿ ಈರುಳ್ಳಿ ಬೆಳೆಗಾರರು ತುಂತುರು ಮಳೆ ಬಿದ್ದಷ್ಟಕ್ಕೆ ಕಷ್ಟಪಟ್ಟು ಬೆಳೆದ ರೈತರಿಗೆ ಸಾಗಾಣಿಕೆ ದರದ ಹೆಚ್ಚಳದಿಂದಾಗಿ ದೂರದ ಮಾರುಕಟ್ಟೆಗೆ ಒಯ್ಯಲು ತೀವ್ರ ಕಷ್ಟ ವೆನಿಸಿದೆ. ಈರುಳ್ಳಿ ಬೆಳೆಯ ಬೆಲೆಯೂ ಕುಸಿದಿದೆ. ದೀಪಾವಳಿ ವೇಳೆಗೆ ಈರುಳ್ಳಿ ಮಾರಿ ಹಬ್ಬ ಮಾಡುವ ಸಂಭ್ರಮಕ್ಕೆ ಈ ಕಷ್ಟ. ಈರುಳ್ಳಿ ಒಂದು ಖಾಲಿ ಚೀಲಕ್ಕೆ 10 ರೂ. ಬೆಂಗಳೂರಿಗೆ ಸಾಗಿಸಲು 18 ರೂ ಒಟ್ಟು 28 ರೂ ಆಗಿ ಈರುಳ್ಳಿ ತುಂಬಿ ಒಯುತ್ತಿದ್ದರು. ಈಗ ಖಾಲಿ ಚೀಲಕ್ಕೆ 12 ರೂ, ಸಾಗಾಣಿಕೆ ವೆಚ್ಚ 32 ರೂ ಅಂದರೆ 44 ರೂ ಆದ್ದದ್ದು ರೈತರಿಗೆ ಬಲವಾದ ಹೊಡೆತ ಬಿದ್ದಂತಾಗಿ, ಜಿಲ್ಲಾಡಳಿತದ ಮುಂದೆ ಪ್ರತಿಭಟಿಸಿ, ಸಾಗಾಣಿಕೆ ದರ ಕಡಿಮೆ ಮಾಡಲು ಮನವಿ ಇಟ್ಟಿದ್ದರು. ಲಾರಿ ಮಾಲೀಕರು ಸಾಗಾಣಿಕೆ ದರ ಹೆಚ್ಚಿಸಿ ಸಂದರ್ಭ ಬಳಸಿಕೊಂಡ ಬಗೆ ಕಂಡು ಜಿಲ್ಲಾಧಿಕಾರಿಗಳು ವೆಚ್ಚವನ್ನು 30 ರೂ ಗಳಿಗೆ ಇಳಿಸಲು ಹೇಳಿದರೂ, ಅದೂ ರೈತರಿಗೆ ದುಬಾರಿ ಎನಿಸುತ್ತದೆ. ಈರುಳ್ಳಿ ಬೆಲೆ ಕ್ವಿಂಟಾಲ್‌ಗೆ 300 ರೂ.ಗೆ ಕುಸಿದಿದೆ. ಇದು ಗೊಬ್ಬರ, ಬೀಜ, ಕೂಲಿ ಖರ್ಚಿಗೆ ಸರಿಹೋಗಿ ಲಾಭಾಂಶದ ಮಾತಿಲ್ಲವಾಗಿದೆ. ಈರುಳ್ಳಿಗೆ ಸೂಕ್ತ ಮಾರುಕಟ್ಟೆ ವ್ಯವಸ್ಥೆ ಇಲ್ಲದೆ ದೂರದ ಬಯಲು ಸೀಮೆಯ ರೈತರಿಗೆ ಸದಾ ನಷ್ಟವೇ ಅವರ ಪಾಲಿಗಾಗಿದೆ. ಮಧ್ಯವರ್ತಿಗಳ ಹಾವಳಿಯಿಂದಾಗಿ ಈರುಳ್ಳಿ ಬೆಲೆ ಕ್ವಿಂಟಾಲ್‌ಗೆ 100 ರೂ.ಗೆ ಕುಸಿದಿದೆ. ರೈತ ಸಂಘಟನೆಗಳು ಬೆಳೆಯುವ ಬೆಳೆ

ಮತ್ತು ಮಾರುಕಟ್ಟೆ ವಿಚಾರದಲ್ಲಿ ತಿಳುವಳಿಕೆ ಮೂಡಿಸುವ ಕೆಲಸ ಮಾಡಬೇಕಿದೆ. ಸದ್ಯ ರೈತರಿಗೆ ಬೆಂಬಲ ಬೆಲೆ ಪ್ರಕಟಿಸಿ 1ನೇ ವರ್ಗದ ಈರುಳ್ಳಿಗೆ ಕ್ವಿಂಟಾಲ್‌ಗೆ 400 ರೂ. 2ನೇ ವರ್ಗಕ್ಕೆ 270 ರೂ. 3ನೇ ವರ್ಗಕ್ಕೆ 100 ರೂ ನಂತೆ ಖರೀದಿಸುವ ಬಗ್ಗೆ ಸರ್ಕಾರದ ನಿರ್ಧಾರ ಪ್ರಕಟಿಸಿದೆ. ಈರುಳ್ಳಿ ಖರೀದಿಗೆ 2 ಕೋಟಿ ರೂ. ಬಿಡುಗಡೆ ಮಾಡಿ ಎಪಿಎಂಸಿ ಮೂಲಕ ಖರೀದಿ ಪ್ರಕ್ರಿಯೆಯನ್ನು ಆರಂಭಿಸಿದೆ. ಹಾವೇರಿ, ಧಾರವಾಡ, ಗದಗ ಇತ್ಯಾದಿ ಈರುಳ್ಳಿ ಬೆಳೆ ಸ್ಥಳಗಳಿಗೆಲ್ಲ ಇದು ಅನ್ವಯ ಎಂದು ಸರ್ಕಾರ ಪ್ರಕಟಿಸಿದೆ (13.10.06)

**ಬೆಲೆ ಕುಸಿತ :** ರಾಜ್ಯದಲ್ಲಿ ಕೆಂಪು ಗುಲಾಬಿ ಈರುಳ್ಳಿ, ಸತಾರ್, ಮಹಾಲಕ್ಷ್ಮಿ, ಮಂಗಳತಳಿಗಳಲ್ಲಿ ಬಂಪ್ಪರ್ ಬೆಳೆ ಬಂದಿರುವ ಕಾರಣ, ಬೆಲೆ ಕುಸಿದಿದೆ. ಕ್ವಿಂಟಾಲ್‌ಗೆ 1000 ರೂ. ವರೆಗೆ ಇದ್ದ ಬೆಲೆ ಒಮ್ಮೆಲೇ ಕುಸಿಯಲು, ಮಾರುಕಟ್ಟೆಗೆ ಬಂದ ಭಾರಿ ಪ್ರಮಾಣದ ಬೆಳೆ ಬಂದ್ದಿದೆ ಎಂಬುದಕ್ಕಿಂತ ಮಧ್ಯವರ್ತಿಗಳೇ ಕಾರಣ ಎಂಬುದು ರೈತರ ಅಂಬೋಣ. ದೇಶದ ಎಲ್ಲ ಪ್ರಮುಖ ಮಾರುಕಟ್ಟೆಯಲ್ಲೂ ವರ್ಷದ ಹವಾಮಾನ ಈರುಳ್ಳಿಗೆ ಪೂರಕವಾಗಿದ್ದ ಕಾರಣ, ಈರುಳ್ಳಿ ಆವಕ ಹೆಚ್ಚಾಗಿದೆ. ತಮಿಳುನಾಡಿನಲ್ಲೂ ರುಚಿಕರ ಸಣ್ಣ ಈರುಳ್ಳಿ ಶೇ.30 ರಷ್ಟು ಹೆಚ್ಚು ಬೆಳೆದ ಕಾರಣ ಕರ್ನಾಟಕಕ್ಕೆ ಅದು ಖರೀದಿಸಲು ಬರದು. ಕರ್ನಾಟಕದಲ್ಲಿ ಸುವ್ಯಸ್ಥಿತ ಮಾರುಕಟ್ಟೆ, ದಾಸ್ತಾನು ಮಳಿಗೆಗಳು ನಿರ್ಮಿತವಾಗದಿರುವ ಕಾರಣ, ಸಂಗ್ರಹದ ಸಮಸ್ಯೆಯೇ ನಮ್ಮ ರೈತರಿಗಿದೆ. ಅಂತಾಗಿ ಸಿಕ್ಕಿದ ಬೆಲೆಗೆ ಮಾರುವ ಅನಿವಾರ್ಯಸ್ಥಿತಿ ಸರ್ಕಾರ ಖರೀದಿಸಿದ ಬೆಂಬಲ ಬೆಲೆಯ ಈರುಳ್ಳಿಯನ್ನು ಹಾಪ್‌ಕಾಮ್ಸ್ ಮತ್ತು ನ್ಯಾಯ ಬೆಲೆ ಅಂಗಡಿಗಳಲ್ಲಿ ಮಾರಲಿಟ್ಟರೂ, ಆ ಬೆಂಬಲ ಬೆಲೆ ಸಾಲದಾಗಿದೆ. ಎಕರೆಯಲ್ಲಿ ಈರುಳ್ಳಿಯ ಸರಾಸರಿ ಇಳುವರಿ 15 ಕ್ವಿಂಟಾಲ್; ತಗುಲುವ ವೆಚ್ಚ ನಾಲ್ಕು ಸಾವಿರ ರೂ. ಗ್ರೇಡ್ 1ನೇ ದರ್ಜೆ ಈರುಳ್ಳಿಗೆ ಬೆಂಬಲ ಬೆಲೆ ಏಳು ಕ್ವಿಂಟಾಲ್‌ವರೆಗೆ ದೊರೆಯುವಲ್ಲಿ ರೈತರಿಗೆ ದೊರೆಯುವುದು ಎಲ್ಲ ಖರ್ಚು ಕಳೆದು ಲಾಭ 4–5 ಸಾವಿರ ರೂ. ಮಾತ್ರ. ಹೀಗಾಗಿ ಬೆಂಬಲ ಬಗ್ಗೆ ಹೆಚ್ಚಿಸಲು ಪ್ರತಿಭಟನೆ ಮುಂದುವರಿದಿದೆ. ಮಧ್ಯವರ್ತಿಗಳ ಸ್ವಾರ್ಥ, ದರ ಕುಸಿತಕ್ಕೆ ಕಾರಣ ಎಂಬುದೂ ಇದೆ. ಕೃಷಿ ಸಮಸ್ಯೆ ನಿರ್ವಹಿಸಲು ಸ್ಥಾಪಿಸಿರುವ 400 ಕೋಟಿ ರೂ.ಗಳ ಆವರ್ತನ ನಿಧಿಯ ಬಳಕೆ ಯಾವುದಕ್ಕೆ ಎಷ್ಟು ವೆಚ್ಚ ಆಗಿದೆ ಎಂಬುದು ಪ್ರಕಟವಾಗಬೇಕು, ಎಂಬ ಅಭಿಪ್ರಾಯ ಗಣೇಶ ಹೆಗಡೆ ಇಟಗಿ ಅವರು ವ್ಯಕ್ತಪಡಿಸಿದ್ದಾರೆ; ಭರವಸೆಯ ಬೆಳೆ ರೈತರಿಗೆ ಕಣ್ಣೀರು ತರಿಸುವಂತಾಗಿದೆ ಎಂದಿದ್ದಾರೆ.(24.10.2006).

ಈ ಹಿಂದೆ ಬೆಂಬಲ ಬೆಲೆಗೆ ಖರೀದಿಯಾದರೂ ಮೆಕ್ಕೆಜೋಳ ಮಾರಿದ ಕೊಪ್ಪಳ ರೈತರಿಗೆ ಕೈಗೆ ಹಣ ಬಾಕಿ ಬರಬೇಕಾದ ಸಂಗತಿ (19.2.06) ಹಾಗೂ ಬೆಂಬಲ ಬೆಲೆಗೂ ಖರೀದಿಯಾಗದ ಭತ್ತ (23.5.2006) ದ ವಿಷಯ ಗಮನಿಸಿದರೆ ಸದ್ಯ ಹಿಂಗಾರು ಹಂಗಾಮಿನ ಭತ್ತ ರಾಗಿ ಮತ್ತು ಮೆಕ್ಕೆಜೋಳಕ್ಕೆ ಸರ್ಕಾರ ಬೆಂಬಲ ಬೆಲೆಯನ್ನು (ಭತ್ತ ಎ.ಗ್ರೇಡ್. ಪ್ರತಿ ಕ್ವಿಂಟಾಲ್‌ಗೆ 580 ರೂ, ಹಾಗು ತಲಾ 40 ರೂ. ಪ್ರೋತ್ಸಾಹ ಧನ; ರಾಗಿ ಮತ್ತು ಮೆಕ್ಕೆ ಜೋಳಕ್ಕೆ ತಲಾ 540 ರೂ) ಘೋಷಿಸಿದೆ. ಖರೀದಿಯ ಹೊಣೆ ಆಹಾರ ಮತ್ತು ನಾಗರಿಕ ಪೂರೈಕೆ ನಿಗಮ, ಉಗ್ರಾಣ ನಿಗಮ, ಹಾಗೂ ರಾಜ್ಯ ಸಹಕಾರ ಮಾರಾಟ ಮಹಾ ಮಂಡಲದ್ದಾಗಿದೆ. ವಿವಿಧ ಜಿಲ್ಲೆಗಳಲ್ಲಿ ಖರೀದಿ ಕೇಂದ್ರಗಳು ಆರಂಭವಾಗಲಿವೆ. ದರ ಕುಸಿತವಾದಾಗ ಮಾರುಕಟ್ಟೆ ಮಧ್ಯ ಪ್ರವೇಶ ಮಾಡಿ ಈ ಬೆಳೆಗಳನ್ನು ಖರೀದಿಸಲು ಅನುಮತಿಯನ್ನೂ ಇವುಗಳಿಗೆ ನೀಡಲಾಗಿದೆ. ಖರೀದಿಗೆ ಕೇಂದ್ರ ಸರ್ಕಾರ ನಿಗದಿ ಪಡಿಸದ ಗುಣಮಟ್ಟವನ್ನು ಅನುಸರಿಸಲಾಗುವುದು ಎಂದೆಲ್ಲ ಪ್ರಕಟಣೆ ಆಗಿದೆ (20.12.06).

**ವಾಣಿಜ್ಯ ಬೆಳೆ :** ವಾಣಿಜ್ಯ ಬೆಳೆಗೆ ಪ್ರೀಮಿಯಂ ಹೆಚ್ಚಿಸಿದ ಕಾರಣ, ವಿಮೆಯ ಮೊತ್ತ ಹೊರೆಯಾಗಿ ರೈತರು ಪತ್ತಿನ ಸಹಕಾರ ಸಂಘಗಳಿಂದ ಸಾಲ ಪಡೆಯಲು ಹಿಂಜರಿಯುತ್ತಿದ್ದಾರೆ. ಶೇ.4 ರಷ್ಟು ಬಡ್ಡಿ ದರದಲ್ಲಿ ಸಾಲ ನೀಡುವಲ್ಲಿ ವಿಮಾ ಮೊತ್ತವನ್ನು ಕಡಿತ ಮಾಡಿಕೊಳ್ಳುವ ಕಾರಣ ಅದು ರೈತರಿಗೆ ಭಾರವೆನಿಸುತ್ತದೆ. ಹತ್ತಿ ಬೆಳೆಯು ಎಕರೆಗೆ 12 ಸಾವಿರ ರೂ. ಸಾಲ ನೀಡುವಲ್ಲಿ 600 ರೂ.ಗಳಿಗೂ ಹೆಚ್ಚು ಕಡಿತವಾಗಿ 11400 ರೂ. ಮಾತ್ರ ಸಾಲದ ಮೊತ್ತವಾಗಿ ದೊರೆಯುತ್ತದೆ. ಸಾಲ ಯೋಜನೆ ರೈತರಿಗೆ ಅನುಕೂಲವಾದರೂ, ವಾಣಿಜ್ಯ ಬೆಳೆಗಳ ವಿಮಾ ಮೊತ್ತ ದುಬಾರಿ. ಅಂತಾಗಿ ಸಹಕಾರಿ ಬ್ಯಾಂಕ್‌ಗಳಲ್ಲಿ ಸಾಲಪಡೆಯಲು ಹಿಂಜರಿದು, ಆರ್‌ಆರ್‌ಬಿ ಗಳು ನಮ್ಮೊಡನೆ ಸ್ಪರ್ಧೆಗಿಳಿದು ರೈತರಿಂದ ಮುಚ್ಚಳಿಕೆ ಬರೆಸಿಕೊಂಡು ವಿಮಾ ಮೊತ್ತ ಇಲ್ಲದೇನೇ ಸಾಲ ನೀಡುತ್ತಿರುವ ಬಗ್ಗೆ ಕರ್ನಾಟಕ ರಾಜ್ಯ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘದ ಅಧ್ಯಕ್ಷ ಕೆ. ಮಹಾಂತಪ್ಪನವರು ಹೇಳುತ್ತಾರೆ. ನಬಾರ್ಡ್ ಸೂಚನೆಯನ್ನು ಪಾಲಿಸಿರುವ ಬಗ್ಗೆ ಆರ್‌ಆರ್‌ಬಿ ಅಧಿಕಾರಿಗಳ ಮಾತಿದೆ. ಮೆಣಸಿನ ಕಾಯಿ ಬೆಳೆಗೆ 16 ಸಾವಿರ ರೂ. ಎಕರೆಗೆ ಸಾಲ ನೀಡುವಲ್ಲಿ ವಿಮಾ ಮೊತ್ತ 1072 ರೂ ಕಡಿತವಾಗುತ್ತದೆ. ಯಶಸ್ವಿನಿ ಯೋಜನೆಯು ರೈತರಿಗೆ ಬಹಳ ಸಹಕಾರಿ ಆದರೂ, ಕುಟುಂಬದ ವ್ಯಕ್ತಿಗೆ ತಲಾ 120 ರೂ ಆಗಿರುವಲ್ಲಿ ಸಾಲ

ಪಡೆಯುವವರಿಗೆ ದುಬಾರಿ ಎನಿಸಿ, ಬೇರೆಡೆ ಸಾಲಕ್ಕೆ ಹೋಗುತ್ತಾರೆ ಎಂಬುದು ಮಹಂತಪ್ಪನವರ ಮಾತು. (ಕ.ಪ್ರ: 14.8.2006). ಅಂದರೆ ಯಾವುದೇ ಯೋಜನೆಯನ್ನು ಎಚ್ಚರಿಕೆಯಿಂದ ಮಾಡಿದ್ದೇವೆಂದರೂ, ಅದು ಅನುಷ್ಠಾನ ಗೊಂಡಾಗ ಸಮಸ್ಯೆಗಳ ಪರಿಚಯುವಾಗುತ್ತದೆ. ಆ ಸಮಸ್ಯೆಗಳನ್ನು ಪರಿಹರಿಸಿಕೊಳ್ಳುವುದು ನಮ್ಮ ಮುಂದೆ ಇರುವ ಸವಾಲು.

**ರೇಷ್ಮೆ ಬೆಳೆ :** ರೇಷ್ಮೆ ಮಂಡಳಿಯಲ್ಲಿ ರೈತ ಪ್ರತಿನಿಧಿಗಳಿಗೆ ಪ್ರಾತಿನಿಧ್ಯವಿಲ್ಲದಿರುವುದು, ರೇಷ್ಮೆ ಕೃಷಿಗೆ ಕೊಡುವ ಸಬ್ಸಿಡಿ ಸಾಲದಿರುವುದು ಅಂತಾಗಿ 50 ಸಾವಿರದಿಂದ 1 ಲಕ್ಷಕ್ಕೆ ಹೆಚ್ಚಿಸಬೇಕಾಗಿರುವುದು, ರೇಷ್ಮೆ ಎಳೆ ಸಂಸ್ಕರಣೆಯ ಮೂಲಭೂತ ಸೌಲಭ್ಯಗಳನ್ನು ಮೇಲ್ದರ್ಜೆಗೆ ಏರಿಸಬೇಕಿರುವುದು, ರೇಷ್ಮೆಗೆ ವಿನ್ಯಾಸ ಕೇಂದ್ರ ಸ್ಥಾಪಿಸಬೇಕಿರುವುದು ಕುರಿತೆಲ್ಲ ಸಂಸದ ಶ್ರೀ **ಬಿ.ಕೆ. ಹರಿಪ್ರಸಾದ್** ಅವರು ರಾಜ್ಯಸಭೆಯಲ್ಲಿ ರೇಷ್ಮೆ ಕೃಷಿ ಸಂಬಂಧದಲ್ಲಿ ಹೇಳಿ ಮನವಿ ಮಾಡಿದ ಬಗ್ಗೆ ತಿಳಿದುಬಂದಿದೆ. ಕರ್ನಾಟಕದ 7 ಜಿಲ್ಲೆಗಳು ಹಿಪ್ಪು ನೇರಳೆ ಕೃಷಿ ಹಾಗೂ ರೇಷ್ಮೆ ಉತ್ಪಾದನೆಯಲ್ಲಿ ತೊಡಗಿರುವ 13 ಸಾವಿರ ಹಳ್ಳಿಗಳ 50 ಲಕ್ಷ ಜನರಿದ್ದಾರೆ. ಚೀನಾ ಜೊತೆಗೆ 1977–78ರಲ್ಲಿ ದ್ವಿಪಕ್ಷೀಯ ವ್ಯಾಪಾರ ಒಪ್ಪಂದಕ್ಕೆ ಸಹಿ ಹಾಕಿದ್ದು ಹಾಗೂ 1991ರ ಉದಾರೀಕರಣ ನೀತಿಯ ಕಾರಣ ನಮ್ಮ ರೇಷ್ಮೆ ಉದ್ಯಮ ತೀರ ಹಾನಿಗೊಂಡಿದೆ. ಅದಕ್ಕೆ ಪುನಶ್ಚೇತನ ಮಾಡಬೇಕಿದೆ. ರೇಷ್ಮೆ ಮಂಡಳಿಯಲ್ಲಿ ರೇಷ್ಮೆ ಬೆಳೆಗಾರರ ಪ್ರಾತಿನಿಧ್ಯವಿಲ್ಲದೆ ಅವರ ಕಷ್ಟಗಳು ಚರ್ಚೆಗೆ ಬರದೆ ಅಧಿಕಾರಿಗಳ ದರ್ಬಾರು ಹೆಚ್ಚಾಗಿದೆ. ಚೀನಾದ ರೇಷ್ಮೆ ಆಮದು ನಿಲ್ಲಿಸಬೇಕು. ನಮ್ಮ ರೇಷ್ಮೆ ನೇಯ್ಗೆ ಯಂತ್ರಗಳ ಆಧುನೀಕರಣ, ಮಾಡಿ ಯಂತ್ರಗಳ ಖರೀದಿಗೆ ಶೇ.40 ರಷ್ಟು ಸಹಾಯ ಧನ ನೀಡಬೇಕೆಂದು ಕೇಂದ್ರ ಸರ್ಕಾರವನ್ನು ಕೋರಿದ್ದು ವರದಿಗೊಂಡಿದೆ (19.8.06). ಇದಲ್ಲದೆ ವಿಶೇಷ ಘಟಕ ಯೋಜನೆಯ ಅಡಿ ರೇಷ್ಮೆ ಬೆಳೆಗಾರರಿಗೆ ನೀಡಬೇಕಾಗಿರುವ ನೆರವನ್ನು ಬಿಡುಗಡೆ ಮಾಡಲು ಸಂಸತ್ ಸದಸ್ಯರಾದ ಸರ್ವಶ್ರೀ ಕೆ.ಬಿ.ಶಾಣಪ್ಪ, ಶ್ರೀಮತಿ ತೇಜಸ್ವಿನಿ ರಮೇಶ್, ಮತ್ತು ಬಸುದೇವ ಆಚಾರ್ಯ ಅವರನ್ನೊಳಗೊಂಡ ನಿಯೋಗ ಕೇಂದ್ರ ಗ್ರಾಮೀಣ ಅಭಿವೃದ್ಧಿ ಸಚಿವ ಶ್ರೀ ರಘುವಂಶ ಪ್ರಸಾದ್ ಸಿಂಗ್ ಅವರನ್ನು ಭೇಟಿ ಮಾಡಿ ರೇಷ್ಮೆ ಬೆಳೆಗಾರರ ಸಮಸ್ಯೆಗಳನ್ನು ಚರ್ಚಿಸಿ, ಮನವಿ ಇಟ್ಟು ಒತ್ತಾಯಿಸಿತು; ಕೇಂದ್ರವು ಪ್ರತಿ ಮೂರು ತಿಂಗಳಿಗೊಮ್ಮೆ ಕೇಂದ್ರ ರೇಷ್ಮೆ ಮಂಡಳಿಗೆ ನೀಡುತ್ತಿದ್ದ 50 ಲಕ್ಷ ರೂ. ಅನುದಾನವನ್ನು ನಿಲ್ಲಿಸಿರುವುದಕ್ಕೆ ಅಸಮಾಧಾನ ವ್ಯಕ್ತಪಡಿಸಿ ಅನುದಾನ ಮುಂದುವರಿಸಲು ಪತ್ರ ಕಳುಹಿಸದಿರುವುದೇ ಕಾರಣ. ರಾಜ್ಯ ಸರ್ಕಾರಗಳೊಡನೆ ಪತ್ರ ವ್ಯವಹಾರ ಮಾಡಿ ಅನುದಾನ ಬಿಡುಗಡೆಗೆ ನೆರವಾಗುವ ಬಗ್ಗೆ ಆಶ್ವಾಸನೆ ನೀಡಿದ್ದೂ ವರದಿಗೊಂಡಿದೆ. (20.8.06).

**ಮೆಣಸಿನಕಾಯಿ ಬೆಲೆ :** ಹಲವು ಕೃಷಿ ಉತ್ಪನ್ನಗಳಿಗೆ ಬೆಂಬಲ ಬೆಲೆ ಘೋಷಿಸಿರುವ ರಾಜ್ಯ ಸರ್ಕಾರ ಮೆಣಸಿನಕಾಯಿ ಬಗ್ಗೆ ಗಮನಿಸಿಲ್ಲ. ಮುಂಗಾರು ಕೈಕೊಟ್ಟ ಮೇಲೆ ಹಿಂಗಾರಿನ ಕ್ಷೀಣ ಮಳೆಯಿಂದ ಅಲ್ಪ ಸ್ವಲ್ಪ ಮೆಣಸಿನಕಾಯಿ ಫಸಲು ಬಂದರೂ ಮಾರುಕಟ್ಟೆಯಲ್ಲಿ ಕೇಳುವವರಿಲ್ಲದಂತಾಗಿದೆ. ಧಾರವಾಡ, ಹಾವೇರಿ, ಗದಗದಲ್ಲಿ ಮೆಣಸಿನಕಾಯಿಯೂ ಪ್ರಮುಖ ಬೆಳೆ, ಬ್ಯಾಡಗಿ, ಕುಂದಗೋಳ, ಅಣ್ಣಿಗೇರಿಯ ಕೆಲವು ರೈತರು, ಮೆಣಸಿನ ಕಾಯಿಯನ್ನು ಮಾತ್ರ ಬೆಳೆಯುತ್ತಾರೆ. ಮೆಣಸಿನಕಾಯಿ ಬೆಲೆ ಕುಸಿತದ ಕಾರಣ ಕಂಗೆಟ್ಟು ಹಾವೇರಿ, ಬ್ಯಾಡಗಿ ಎಪಿಎಂಸಿ ಗಳಲ್ಲಿ ರೈತರು ದಾಂಧಲೆ ನಡೆಸಿದರು. ಸರ್ಕಾರಿ ವಾಹನಗಳಿಗೆ ಬೆಂಕಿ ಹಚ್ಚಿ, ಬೆಳೆದ ಮೆಣಸಿನಕಾಯನ್ನು ರಸ್ತೆಗೆ ಸುರಿದು ಪ್ರತಿಭಟಿಸಿದರೂ ಸರ್ಕಾರದ ಪ್ರತಿಕ್ರಿಯೆ ಇನ್ನೂ ಬಂದಿಲ್ಲ. ಕ್ವಿಂಟಾಲ್ ಮೆಣಸಿನಕಾಯಿ ಬೆಳೆಯಲು ಕನಿಷ್ಠ 8 ಸಾವಿರ ರೂ. ಖರ್ಚು ಬರುತ್ತದೆ. ಮಾರುಕಟ್ಟೆ ದರ, 4 1/2 ಸಾವಿರವಿದೆ. ಅಂತಾಗಿ 8–15 ಸಾವಿರದವರೆಗೆ ಬೆಂಬಲ ಬೆಲೆಗೆ ರೈತರು ಬೇಡಿಕೆ ಸಲ್ಲಿಸಿದ್ದಾರೆ. ಆ ಬೆಳೆ ಬಂದೊಡನೆ, ಸಾಲಗಾರರು, ಬೀಜಗೊಬ್ಬರ ಕ್ರಿಮಿನಾಶಕ ವಿತರಕರು, ಬಾಕಿಗಾಗಿ ಮನೆ ಬಾಗಿಲು ಹತ್ತುತ್ತಾರೆ. ಬೆಲೆ ಕುಸಿತವಾದಾಗ ರೈತರು ಆಸೆಇಟ್ಟು ಸರ್ಕಾರದತ್ತ ಮುಖಮಾಡಲು ಅದಕ್ಕೆ ಸ್ಪಂದಿಸಬೇಕಾಗುತ್ತದೆ. (9.1.2007).

**ಭದ್ರಾ ನಾಲಾ ವಿಷಯ :** ದಾವಣಗೆರೆ ಭದ್ರಾನಾಲೆ ಆಧುನೀಕರಣ ಕಾಮಗಾರಿಗೆಂದು ಸರ್ಕಾರ ಮೊದಲ ಹಂತದಲ್ಲಿ 82 ಕೋಟಿ ರೂ. ನೀಡಿದ್ದರೂ ಕಳಪೆ ಗುಣಮಟ್ಟದ ಸೀಮೆಂಟ್, ಕಬ್ಬಿಣ ಬಳಸಿರುವುದು, ಗುತ್ತಿಗೆದಾರರು ಸ್ಥಳದಲ್ಲಿ ಹಾಜರಿರದೆ ಬೇರೆಯವರಿಂದ ಕೆಲಸ ಮಾಡುತ್ತಿರುವುದು ಕಂಡು ರೈತರು ಬೇಸರಗೊಂಡಿದ್ದಾರೆ. ಕಾಮಗಾರಿ ಡಿಸೆಂಬರ್ 31ಕ್ಕೆ ಪೂರ್ಣಗೊಂಡಿದ್ದು, ರೈತರು ಬಿತ್ತನೆಗಾಗಿ ಮಡಿ ಕಟ್ಟಿಕೊಂಡಿದ್ದು ನಾಲೆಯ ನೀರಿಗಾಗಿ ಕಾಯುತ್ತಿದ್ದಾರೆ. ಭತ್ತಕ್ಕೆ ವೈಜ್ಞಾನಿಕ ಬೆಲೆ ನಿಗದಿಗೂ ಒತ್ತಾಯಿಸಿ ಅವರು ಪ್ರತಿಭಟಿಸುತ್ತಿರುವ ಸುದ್ದಿ ಪ್ರಕಟವಾಗಿದೆ. (8.1.2007). ಬಳಸು ನೀರಿನ ನಾಲಾ ಕಾಮಗಾರಿಯೂ ಸಮಸ್ಯೆಯಾಗಿ ರೈತರನ್ನು ಕಾಡುವುದಕ್ಕೆ ಕಾರಣವಿದೆ. ನಾಲೆ ಕಳಪೆ ಕಾಮಗಾರಿಯಿಂದ ಒಡೆದರೆ, ಬಿರುಕು ಬಿಟ್ಟರೆ ಹರಿಯುವ ನೀರು ಸರಬರಾಜಿಗೆ ತೊಂದರೆ, ಬೆಳೆಗೂ ಹಾನಿ ಎಂಬ ಆತಂಕ ಅವರು. ಇದಕ್ಕೆ ಬಹುಶಃ ಒಂದು ಸಮಾನಾಂತರ ಉದಾಹರಣೆ ಎಂಬಂತೆ ಬೆಳಗಾವಿ ಜಿಲ್ಲೆಯ ಮಾರ್ಕಂಡೇಯ ಜಲಾಶಯ ಈಗ ಸೋರುವಿಕೆಯ ಸಮಸ್ಯೆಗೆ ಒಳಗಾಗಿದೆ. ಭೂಸ್ವಾಧೀನ, ಪರಿಹಾರ ಸೇರಿದಂತೆ ಹಲವು ಸಮಸ್ಯೆಗಳ ಕಾರಣ

ಜಲಾಶಯ ಹಲವು ವರ್ಷಗಳ ಕಾಲ ವಿಳಂಬವಾದರೂ ಕಾಮಗಾರಿ ಬಹುಪಾಲು ಪೂರ್ಣಗೊಂಡಿದೆ. ಜೊತೆಗೆ ಜಲಾಶಯ ಮಳೆಗಾಲಕ್ಕೆ ಮೊದಲೇ ಜಲಾಶಯ ಸೋರುತ್ತಿದೆ. ಇದರಿಂದ ಕೆಳಗಡೆ ಇರುವ ಜಮೀನು ಕೂಡ ಜವಳು ಸಮಸ್ಯೆಗೆ ಸಿಲುಕಿದೆ. ಆ ಹೊಲದ ರೈತರಿಗೆ ತೊಂದರೆ ಎದುರಾಗಿದೆ. ನೀರು ಹೆಚ್ಚಾಗಿರುವ ಕಾರಣ ತಕ್ಷಣ ದುರಸ್ತಿ ಸಾಧ್ಯವಿಲ್ಲವೆನ್ನುವುದು ನೀರಾವರಿ ಇಲಾಖೆ. ಏಪ್ರಿಲ್-ಮೇ ಹೊತ್ತಿಗೆ ದುರಸ್ತಿ ಕೈಗೊಳ್ಳಲಾಗುವುದು ಎಂಬುದು ಅಧಿಕಾರಿಗಳ ಮಾತು.

ರೈತರ ಪ್ರಕಾರ ಕಳಪೆ ಕಾಮಗಾರಿ ಸೋರಿಕೆಗೆ ಕಾರಣವಾಗಿದೆ. ಅವರಿಗೆ ಇದರಿಂದ ಒಂದು ಬೆಳೆ ಹೋದರೂ ನಾಳಿನ ಹೊಟ್ಟೆ ಪಾಡಿನ ಚಿಂತೆ. ಅಂತಾಗಿ ಸೋರುವಿಕೆ ರಿಪೇರಿ, ನಷ್ಟಗೊಂಡ ರೈತರಿಗೆ ಸೂಕ್ತ ಪರಿಹಾರ ವ್ಯವಸ್ಥೆ ಆಗಬೇಕು. ಅದೆಲ್ಲ ರೈತರು ಪ್ರತಿಭಟನೆಗಿಳಿಯುವ ಗಮನ ಕೈಗೊಳ್ಳಬೇಕು ಎಂಬುದು ವಾರ್ತಾ ವಿಶ್ಲೇಷಣೆಯಲ್ಲಿದೆ (9.1.07). ಹೀಗೆಯೇ ರಾಯಚೂರು ಜಿಲ್ಲೆ ದೇವದುರ್ಗ ತಾ.ಗಲಗ ಗ್ರಾಮದ ಬಳಿಯ ನಾರಾಯಣಪುರ ಬಲದಂಡೆ 69 ಕಿ.ಮೀ. ಮುಖ್ಯನಾಲೆ ಕೊಚ್ಚಿ ಹೊಲಗಳಿಗೆ ನೀರು ನುಗ್ಗಿ 60 ಎಕರೆ ಶೇಂಗಾ ಮತ್ತು ಭತ್ತದ ಬೆಳೆ ನಾಶ; ಹೊಲಗಳಲ್ಲಿ ಕಂದಕ ಕೊರಕಲು ನಿರ್ಮಾಣವಾಗಿರುವುದು ಉಸ್ತುವಾರಿ ಅಧಿಕಾರಿಗಳಿಗೆ ನೀರು ಸೋರಿಕೆ ಬಗ್ಗೆ ಗಮನಕ್ಕೆ ತಂದರೂ ಅವರ ನಿರ್ಲಕ್ಷ್ಯವೇ ಈ ದುರಂತಕ್ಕೆ ಕಾರಣ ಎಂದು ರೈತರು ಆರೋಪಿಸಿರುವುದು, ಉಸ್ತುವಾರಿ ಸಚಿವರೂ ಭೇಟಿ ನೀಡಿ ಪರಿಶೀಲಿಸಿ ಅದನ್ನು ಸಮರ್ಥಿಸಿರುವುದೂ ವರದಿಗೊಂಡಿದೆ (1.2.2007)

**ಬೆಳೆಗೆ ಹುಳುವಿನ** ಕಾಟ: ಹಾವೇರಿ ಜಿಲ್ಲೆ ಹಿರೇಕೆರೂರು ತಾಲೂಕಿನ ತಡಕನ ಹಳ್ಳಿ, ಮೂಸೂರು, ಹಳ್ಳೂರು ನಾಗವಂದ ಇತ್ಯಾದಿ 1[illegible] ಗ್ರಾಮಗಳ 10 ಸಾವಿರ ಎಕರೆಗೂ ಮೀರಿದ ಜಮೀನಿನಲ್ಲಿ ಮುಂಗಾರು ಬೆಳೆ ಗೋವಿನ ಜೋಳ ಮಳೆ ಅಭಾವದಿಂದ ನಲುಗಿದೆ. ಹೊಸ ಬೆಳೆಯಾಗಿ ಬೆಳೆದ ತೊಗರಿ ಹಿಂಗಾರು ಬೆಳೆ ಕಡಲೆ ಇವುಗಳಿಗ ಕೀಟಗಳ ಕಾಟ ಬಾಧೆ. ಎಕರೆಗೆ 6 ಸಾವಿರ ರೂ. ಲಾಭ ಕೊಡುವ ಕಡಲೆ, 4 ಸಾವಿರ ಲಾಭ ಕೊಡುವ ತೊಗರಿ ಈಗ ಹುಳುವಿನ ಕಾಟದಿಂದ ರೈತರಿಗೆ ಸಂಕಷ್ಟ, ತತ್ತರ. ಸಂಸ್ಕರಣೆ ಸರಿ ಇಲ್ಲದ ಬೀಜ ವಿತರಣೆ ಇದಕ್ಕೆ ಕಾರಣವೆ? ಎನ್ನುವಂತಾಗಿದೆ. ನೈಸರ್ಗಿಕ ಹಾಗು ಅಣುಜೀವಿ ಗೊಬ್ಬರವನ್ನು, ಕಡಲೆ ಹಾಗೂ ತೊಗರಿಗೆ ಹಾಕಿದ್ದರೂ ಫಲ ಕಂಡಿಲ್ಲ. ಕಡಲೆ ಸಿಡಿಯದಿರಲು ಬೀಜೋಪಚಾರ ಮಾಡಿದ್ದರೂ ಉಪಯೋಗವಾಗಿಲ್ಲ. ಬೆಳೆ ಪರಿಸ್ಥಿತಿ ಹೀಗಿದ್ದರೂ. ಬರಗಾಲ ಪೀಡಿತ ಪ್ರದೇಶವೆಂದು ಸಾರಿದ್ದರೂ ಅಧಿಕಾರಿಗಳು ಇತ್ತ ತಲೆ ಹಾಕಿಲ್ಲ!

ಮಂತ್ರಿಗಳ ವಾಸ್ತವ್ಯವಾದರೂ ಅಧಿಕಾರಿಗಳು ಎಚ್ಚೆತ್ತಿಲ್ಲ. ಹೀಗಾಗಿ ರೈತರ ಕಷ್ಟಕ್ಕೆ ಸ್ಪಂದನೆ ಆಗದಿದ್ದರೆ ಉಗ್ರ ಹೋರಾಟ ಕೈಗೊಳ್ಳುವ ಬಗ್ಗೆ ಉತ್ತರ ಕರ್ನಾಟಕ ರೈತ ಹಿತ ರಕ್ಷಣಾ ವೇದಿಕೆ ಹೇಳಿರುವ ಕುರಿತು ಜಿ.ಎಂ. ಕುಲಕರ್ಣಿ ಗಮನ ಸೆಳೆದಿದ್ದಾರೆ. (30.1.07). ಇದಲ್ಲದೆ ಈ ಬಾರಿ ಅಲ್ಪ ಮಳೆಯಿಂದಾಗಿ ಮೆಣಸಿನಕಾಯಿಗೆ ಮುಟಗಿ ರೋಗ ತಗುಲಿ 4–5 ಕ್ವಿಂಟಾಲ್ ಇಳುವರಿ 2–3 ಕ್ವಿಂಟಾಲ್‌ಗೆ ಕುಸಿದಿದೆ.

**ಕೃಷಿಉತ್ಪನ್ನ ಖೋತಾ :** ಮಳೆ ಅಭಾವದಿಂದಾಗಿ ಉಂಟಾದ ಬರಗಾಲವು, 2006ನೇ ಸಾಲಿನಲ್ಲಿ ರಾಜ್ಯದ ಕೃಷಿ ಉತ್ಪನ್ನ 24 ಲಕ್ಷ ಟನ್ ಕುಸಿಯಲಿದೆ. 66 ಲಕ್ಷ ಹೆಕ್ಟೇರುಗಳಲ್ಲಿ ಬಿತ್ತನೆ ಆದರೂ, ಮಳೆಕೈಕೊಟ್ಟ ಕಾರಣ 27 ಲಕ್ಷ ಹೆಕ್ಟೇರುಗಳ ಬೆಳೆ ಹಾಳಾಯಿತು. ಹಿಂಗಾರು ಹಂಗಾಮಿನ ಅತೃಪ್ತಿಕರ ಪರಿಸ್ಥಿತಿ ಕಾರಣ ಬಿತ್ತನೆಗೊಂಡ 34 ಲಕ್ಷ ಹೆಕ್ಟೇರುಗಳಲ್ಲಿ 6 ಲಕ್ಷ ಹೆಕ್ಟೇರುಗಳ ಬೆಳೆ ಬರಲಿಲ್ಲ. ಹೀಗಾಗಿ ವಿದರ್ಭ ಮಾದರಿ ಯೋಜನೆ (ರೈತ ಆತ್ಮಹತ್ಯೆ ಕಾರಣ) ಬೆಳೆಪ್ರಾತ್ಯಕ್ಷಿಕೆ, ಪ್ರಗತಿಪರ ರೈತರಿಂದ ಸುಧಾರಿತ ಕೃಷಿ ಪದ್ಧತಿಯ ತಿಳುವಳಿಕೆ ನೀಡಿಸುವುದು, ಬೇಸಿಗೆ ಬಿತ್ತನೆ ಬೀಜ ನೀಡಿದೆ ಇತ್ಯಾದಿಗಳನ್ನ ಸಮಸ್ಯೆ ಪರಿಹಾರಕ್ಕೆ ಪ್ರಯತ್ನ ಮಾಡಿರುವ ಬಗ್ಗೆ ಕೃಷಿ ಸಚಿವ ಶ್ರೀ ಬಂಡೆಪ್ಪ ಕಾಶೆಂಪುರ್ ಅವರು ಸುದ್ದಿ ಗೋಷ್ಠಿಯಲ್ಲಿ ಪ್ರಕಟವಾಗಿದೆ. (30.1.07)

**ಕಾಫಿ ಬೆಳೆ ಸಮಸ್ಯೆ :** ಕಾಫಿ ಬೆಳೆ ಅರೇಬಿಕಾ ಚೆರ‍್ರಿ, ರೊಬಸ್ಟಾ ಪಾರ್ಚ್‌ಮೆಂಟ್‌ನ ಮಾರುಕಟ್ಟೆಯ ದರ ಕಳೆದ ವರ್ಷಕ್ಕಿಂತ ಸರಾಸರಿ 1 ಸಾವಿರ ರೂ. ಹೆಚ್ಚಳದಲ್ಲಿದೆ. ಆದರೆ ತೋಟದಲ್ಲಿ ಬೆಳೆ ಇಲ್ಲ. ಬೋರರ್ ಧಾಳಿ ನಿಂತಿಲ್ಲ. ಅಂತಾಗಿ ತೋಟದ ಮಾಲೀಕರು ಗಿಡಗಳನ್ನು ಬುಡಸಮೇತ ಕಿತ್ತು ಹಾಕಿದ್ದಾರೆ. ಕಾಫಿ ಫಸಲು ಈ ವರ್ಷ ಕುಸಿತಗೊಂಡಿದೆ. ಮೂರು ವರ್ಷದ ಹಿಂದೆ ಮಳೆ ಇಲ್ಲದೆ, ಬೆಳೆ ಬರದೆ ಸಾಲ ಮರುಪಾವತಿಗಾಗಿ ಮಾಲೀಕರು ತೋಟಗಳನ್ನು ಮಾರಿದ್ದುಂಟು. ತೋಟಗಳ ನಿರ್ವಹಣೆಗೆ ಹಣ ಇಲ್ಲದೆ ಕೃಷಿ ಮಾಡದೆ ಹುಳಿತದ್ದುಂಟು. ಕೂಲಿಗಾಗಿ ವಲಸೆ ಬರುತ್ತಿದ್ದ ಉತ್ತರ ಕರ್ನಾಟಕದ ಜನರೂ ಅವರಲ್ಲಿ ಉತ್ತಮ ಮಳೆ ಬರಲು ತೋಟಕ್ಕೆ ಬರದೆ ಕಾಫಿ ಕುಯ್ಲು ಚಿಕ್ಕಮಂಗಳೂರು ಕಡೆ ಸಮಸ್ಯೆಯೆ ಆಗಿತ್ತು. ಸಕಾಲಕ್ಕೆ ಕಾಫಿ ಹಣ್ಣುಗಳನ್ನು ಸಂಸ್ಕರಿಸದಿದ್ದರೆ ಗಿಡಗಳಿಂದ ಉದುರಿ ಮಣ್ಣಿಗೆ ಬಿದ್ದು ಉಪಯೋಗಕ್ಕೆ ಬರದು. ಅಲ್ಲದೆ ಪ್ರಾಣಿಗಳಿಂದ ರಕ್ಷಿಸಲೂ ಕಷ್ಟ ಎಂದು ಆರ್. ತಾರಾನಾಥ್ ವರದಿ ಮಾಡಿರುವುದಿದೆ (12.12.06). ಕೂಲಿಗೆ ಪರ್ಯಾಯ ವ್ಯವಸ್ಥೆ ಆಗದಿದ್ದಾಗ ಅದೇ ಒಂದು ಸಮಸ್ಯೆ.

**ಬೆಳೆ ವಿಮೆಗೆ ನೋಂದಾವಣೆ :** ಬೆಳೆ ವಿಮೆಗೆ ನೋಂದಾಯಿಸಲು ಪಹಣಿ, ಗ್ರಾಮಲೆಕ್ಕಾಧಿಕಾರಿಯ ದೃಢೀಕೃತ ಪತ್ರ ವಿಮಾ ಕಂತು ಸೇರಿ ಬಹಳ ಹಣ ಖರ್ಚು ಮಾಡಿಕೊಂಡ ರೈತ ಇಂದು ಆ ಯೋಜನೆಗೆ ನಿರುತ್ಸಾಹ ತೋರುತ್ತಿದ್ದಾನೆ. ಚಿತ್ರದುರ್ಗ ಜಿಲ್ಲೆಗೆ ಸಂಬಂಧಿಸಿದಂತೆ 2004–05ರ ಹಿಂಗಾರು ಹಂಗಾಮಿನಲ್ಲಿ 305 ಜನ 9.87 ಲಕ್ಷ ವಿಮಾ ಕಂತು ಪಾವತಿಸಿ ಬೆಳೆ ವಿಮೆಗೆ ನೋಂದಾಯಿಸಿದ್ದರೂ ವಿಮೆ ಪರಿಹಾರ ಹಣ ದೊರಕಿಲ್ಲ. 2005–06 ನೇಸಾಲಿನಲ್ಲಿ ಸರ್ಕಾರದ ಪ್ರಚಾರದ ಕಾರಣ ಬೆಳೆ ವಿಮೆ ಮಾಡಿಸಿದ ರೈತರ ಸಂಖ್ಯೆ ಹೆಚ್ಚಿತು. ಜಿಲ್ಲೆಯಾದ್ಯಂತ ಮುಂಗಾರು ಹಂಗಾಮಿನಲ್ಲಿ 14,180 ಜನ ರೈತರು 80.56 ಲಕ್ಷ ರೂ. ವಿಮಾಕಂತು ಪಾವತಿಸಿದರು; ಹಿಂಗಾರು ಹಂಗಾಮಿನಲ್ಲಿ 768 ಜನ ರೈತರೂ 1.60 ಲಕ್ಷ ರೂ. ಪಾವತಿ ಮಾಡಿ ಪಾಲಿಸಿದಾರರಾಗಿದ್ದಾರೆ. ವಿಮೆಗೆ ಕಟ್ಟಿದ್ದು ಸರ್ಕಾರದ ಬೊಕ್ಕಸಕ್ಕೆ ಲಾಭವಾಯಿತು. ಆದರೆ ರೈತರಿಗೆ ಮಾತ್ರ ಆದದ್ದು ಖರ್ಚು ಎಂಬುದು ಮಂಜುನಾಥ್‌ಯಳನಾಡು ಅವರ ಪ್ರತಿಕ್ರಿಯೆ. ಬೆಳೆ ವಿಮೆ ಪರಿಹಾರ ನೀಡಲು ನಿಗದಿ ಮಾಡಿರುವ ಮಾನದಂಡಗಳು ಎಂದರೆ : ಮಳೆ ಬಂದು ಸಂಪೂರ್ಣ ಬೆಳೆ ಕೊಚ್ಚಿಕೊಂಡು ಹೋಗಿರಬೇಕು; ಬರದಿಂದ ಬೆಳೆ ಸಂಪೂರ್ಣ ಹಾಳಾಗಿರಬೇಕು ಎಂದೆಲ್ಲ ಇವೆ. ಆದರೆ ಜಿಲ್ಲೆಯಾದ್ಯಂತ ಉತ್ತಮ ಮಳೆ ಬಂದು ಬೆಳೆ ಕೊಚ್ಚಿಕೊಂಡು ಹೋಗುವಷ್ಟು ಆಗಲಿಲ್ಲ. ಬೇಕಾದ ನೀರಿನ ಪ್ರಮಾಣಕ್ಕಿಂತ ಹೆಚ್ಚಿನ ಮಳೆ ಆದ ಕಾರಣ ಶೀತ ಹೆಚ್ಚಿತು. ಶೇಂಗಾ ಮೊಣಕಾಲುದ್ದ ಬೆಳೆದು ಕಾಯಿ ಕಚ್ಚಲಿಲ್ಲ. ದನಕರುಗಳಿಗೆ ಮೇವು ಸಿಕ್ಕಿತು, ರೈತನಿಗೆ ದುಡ್ಡು ಸಿಕ್ಕಲಿಲ್ಲ. ಇಂತಲ್ಲಿ ವಿಮೆ ಪರಿಹಾರ ನೀಡಲು ಕಾನೂನು ಅವಕಾಶ ಕೊಡುವುದಿಲ್ಲ. ಈ ತಾಪತ್ರಯಗಳ ಕಾರಣ ರೈತರು ಈ ಬಾರಿ ಹೆಚ್ಚಿಗೆ ಬೆಳೆ ವಿಮೆಗೆಂದು ಹೋಗಲಿಲ್ಲ ಎಂಬ ಅಭಿಪ್ರಾಯ ವ್ಯಕ್ತವಾಗಿದೆ (31.8.06).

ವೆನಿಲ್ಲಾ ಕೃಷಿ : 1990 ರಲ್ಲಿಯೇ ವೆನಿಲ್ಲಾ ಕೃಷಿ ಚಾಲ್ತಿಗೆ ಬಂತು. ಅಡಕೆ ತೋಟದ ಉಪ ಬೆಳೆ ಆದಾಗಿದೆ. 2000ದ ವೇಳೆಗೆ ಅದು ಮಲೆನಾಡು ಕೃಷಿಕರ ಗಮನ ಸೆಳೆಯಿತು. ಮಡಗಾಸ್ಕರ್, ಜಗತ್ತಿನ ಬೇಡಿಕೆಯ ಶೇ.50 ಕ್ಕೂ ಹೆಚ್ಚು ಪ್ರಮಾಣದಲ್ಲಿ ವೆನಿಲ್ಲಾವನ್ನು ಉತ್ಪಾದಿಸುವ ದೇಶವಾಗಿದೆ. ಮೆಕ್ಸಿಕೋ, ಇಂಡೋನೇಸಿಯ, ಮಲೇಶಿಯ, ಉಗಾಂಡ, ಇತ್ಯಾದಿ 8–9 ದೇಶಗಳಲ್ಲಿ ಅದು ಬೆಳೆಯುತ್ತದೆ. ಸುಮಾರು 2002ರಲ್ಲಿ ಮುಖ್ಯವಾಗಿ ಮಡಗಾಸ್ಕರಿನಲ್ಲಿ ಪ್ರಕೃತಿ ವಿಕೋಪ ಆರ್ಥಿಕ ಅಸ್ಥಿರತೆಯ ಕಾರಣ ಅದರ ಉತ್ಪಾದನೆ ಕುಂಠಿತಗೊಂಡಿತು.

ಆಗ ಭಾರತಕ್ಕೆ ಅನೇಕ ಕಂಪೆನಿಗಳು ಬಂದು ವೆನಿಲ್ಲಾ ಖರೀದಿಗೆ ಮುಗಿಬಿದ್ದವು. ಅಡಕೆ ತೋಟದಲ್ಲಿಯ ಈ ಬೆಳ್ಳಿ ಬೆಳೆಗೆ ಚಿನ್ನದಂಥ ಬೆಲೆ ಸಿಕ್ಕಿತು. 1ನೇ ದರ್ಜೆ ವೆನಿಲ್ಲಾ ಹಸಿ ಬೀನ್ಸ್‌ನ್ನು ಕೆ.ಜಿ.ಗೆ 4 ಸಾವಿರ ರೂ. ಒಣ ಬೀನ್ಸ್‌ಗೆ 22 ಸಾವಿರ ರೂ. ಕೊಟ್ಟು ಖರೀದಿಸಿದುವು. ಈ ಬೆಳೆ ಬೆಳೆವ ರೈತರಿಗೆ ಬ್ಯಾಂಕ್ ಮತ್ತು ಸಹಕಾರಿ ಸಂಸ್ಥೆಗಳು ಲಕ್ಷಾಂತರ ಸಾಲ ನೀಡಿ, ಸಹಕಾರಿ ಸಂಸ್ಥೆಗಳು ವೆನಿಲ್ಲಾ ಪಡೆದು ಮಾರಲೂ ಮುಂದಾದುವು. 4–5 ಇಂಚು ಉದ್ದದ ವೆನಿಲ್ಲಾ ಬಳ್ಳಿಯೂ 10–15ರೂ. ಗಳಿಗೆ ಮಾರಾಟವಾಯಿತು. ಆದರೆ ಬೆಳೆಗಾರರು ಹೆಚ್ಚಿ ಸಮೃದ್ಧ ಬೆಳೆ ಬರುವ ವೇಳೆಗೆ ದರ ಕಡಿಮೆಯಾಯಿತು. ವೆನಿಲ್ಲಾ ಬೆಳೆಯುವ ಇತರ ರಾಷ್ಟ್ರಗಳಲ್ಲೂ ಬೆಳೆ ಬಂದು ಉತ್ಪಾದನೆ ಅಧಿಕವಾಯಿತು. ಅಮೇರಿಕ ಮತ್ತು ಯುರೋಪ್ ರಾಷ್ಟ್ರಗಳಲ್ಲಿ ಇದಕ್ಕೆ ಬೇಡಿಕೆ ಹೆಚ್ಚು. ಭಾರತದಲ್ಲಿ ಈಗ ಇಸ್ಕಾನ್ ಕಂಪೆನಿ ಮಾತ್ರ ವೆನಿಲ್ಲಾ ಖರೀದಿ ಮಾಡುತ್ತಿದೆ. ದರ ತೀರ ಕಡಿಮೆ ಆಗಿದೆ. 2001–02ರಲ್ಲಿ 797 ಹೆಕ್ಟೇರ್‌ನಲ್ಲಿ 2.85 ಕೋಟಿ ರೂ. ಮೌಲ್ಯದ 176 ಟನ್ ವೆನಿಲ್ಲಾ ಬೆಳೆ ಆದದ್ದು 2004ರಲ್ಲಿ 48.50 ಟನ್, 2005ರಲ್ಲಿ 160 ಟನ್, 2006 ರಲ್ಲಿ 406 ಟನ್ ಬೆಳೆ ಆಯಿತು. ಈಗ ವೆನಿಲ್ಲಾ ಹಸಿ ಬೀನ್ಸ್ ದರ ಕೆ.ಜಿಗೆ 75ರೂ. ಆಗಿದೆ. ಮೊದಲು ಈ ಬೆಳೆಯ ಮೇಲೆ ಕಳ್ಳ ಕಾಕರ ಕಣ್ಣು ಬಿದ್ದಿತ್ತು. ಇಂದು ಅದರ ಬೆಲೆ ಮುರುಟಿರುವ ಕಾರಣ ರೈತರು ರಸ್ತೆಯ ಮೇಲೆ ಸುರಿದು ಪ್ರತಿಭಟನೆ ತೋರುತ್ತಿದ್ದಾರೆ. ವೆನಿಲ್ಲಾ ಮೇಲೆ ಹೂಡಿದ ಹಣ ಹದಗೆಟ್ಟಿತು. ಈ ಬೆಳೆಗೆ ಸಾಕಷ್ಟು ಗೊಬ್ಬರ ಹಾಕಬೇಕಲ್ಲದೆ ಕೊಳೆರೋಗ, ಕೀಟಬಾಧೆ ನಿವಾರಣೆಗಾಗುವ ವೆಚ್ಚ ಅಧಿಕ, ನಿರ್ವಹಣಾ ವೆಚ್ಚಕ್ಕೂ ಹುಟ್ಟುವಳಿ ಆಗದ ಪರಿಸ್ಥಿತಿ ಒದಗಿದೆ. ಶಿರಸಿಯ ತೋಟಗಾರ್ಸ್ ಸೇಲ್ಸ್ ಸೊಸೈಟಿಯೂ ವೆನಿಲ್ಲಾವನ್ನು ಖರೀದಿಸಿ 40 ಲಕ್ಷ ರೂ. ಹಾನಿ ಮಾಡಿಕೊಂಡಿದೆ. ಸರ್ಕಾರ ವೆನಿಲ್ಲಾಕ್ಕೂ ಬೆಂಬಲ ಬೆಲೆ ನೀಡಿ ರೈತರನ್ನು ರಕ್ಷಿಸಬೇಕು ಎನ್ನುವ ಸೊಸೈಟಿಯ ಅಧ್ಯಕ್ಷ ಶಾಂತಾರಾಮ ಹೆಗಡೆ ಶೀಗೇಹಳ್ಳಿ ಅವರ ಮಾತನ್ನೂ[46] ಗಂಭೀರವಾಗಿ ಪರಿಗಣಿಸಬೇಕಿದೆ. ಇಲ್ಲಿ ಗಮನಿಸಬೇಕಾದ ಇನ್ನೊಂದು ಮುಖ್ಯ ಅಂಶವೆಂದರೆ ಕೆ.ಜಿ.ಗೆ 4 ಸಾವಿರ; ಒಣಬೀನ್ಸ್ ಕೆ.ಜಿಗೆ 22 ಸಾವಿರ ಎಂದಿದ್ದು, ಕೆ.ಜಿಗೆ 75 ರೂ.ಗೆ ಇಳಿಯಿತು ಎಂದರೆ ಇದೊಂದು ರೀತಿ ತಾರಾಮಾರ ವ್ಯವಹಾರದಂತಾಗಿತ್ತು. ಈ ಬಗ್ಗೆ ಕೃಷಿ ಇಲಾಖೆಯಾಗಲಿ, ಸರ್ಕಾರಕ್ಕೆ ಇಲ್ಲದ ಈ ಬೆಳೆಯ ಸಾಧಕ ಭಾಧಕಗಳನ್ನು, ಭಾರತದಲ್ಲಿಯ ಬೇಡಿಕೆಯನ್ನು, ರಾಜ್ಯದ ಬೇಡಿಕೆಯನ್ನು

46. ಎಚ್.ಕೆ.ನಟರಾಜ್, 'ವೆನಿಲ್ಲಾ ಈಗ ಬಿನಿಲ್ಲಾ', (ಕೃಷಿ ವಿಜಯ) ವಿಜಯ ಕರ್ನಾಟಕ 22.11.2006

ಗಮನದಲ್ಲಿಟ್ಟುಕೊಂಡು ಸಾಕಷ್ಟು ಕಾಲ ಪ್ರಯೋಗ ಕ್ಷೇತ್ರದಲ್ಲಿ ಸಂಶೋಧನೆ ಮಾಡಿ ತಿಳುವಳಿಕೆಯನ್ನು ರೈತರಿಗೂ ಕೊಡಬೇಕಿತ್ತು. ಅಡಕೆ ತೋಟದಲ್ಲಿ ಅಡಿಕೆ ದರ ಚೇತರಿಕೆಯಾದ ಕಾರಣ ಆಸರೆಯಾಗಿ ಬೆಳೆದ ಈ ಬೆಳೆಯ ಧಾರಣೆ ಕುಸಿತ ಮೇಲ್ನೋಟಕ್ಕೆ ಪರಿಣಾಮ ಬೀರಿಲ್ಲವೆನ್ನುವುದಿದೆ. ಆದರೆ ಬ್ಯಾಂಕ್ ಸಾಲದ ತೀರುವೆ ಈ ಬೆಳೆಯ ಮೇಲೆಯೆ ನಿಂತಿದ್ದರೆ, ಬೆಳೆಗಾರರ ಗತಿ ಅಧೋಗತಿಯಾಗುತ್ತಿತ್ತು. ಬೃಹದಾಕಾರದ ಸಮಸ್ಯೆ ಆಗುತ್ತಿತ್ತು. ಸದ್ಯಕ್ಕೆ ಇದರ ಪ್ರಚಾರ ಕಾಣುತ್ತಲೂ ಇಲ್ಲ.

**ಹಸಿರುಮನೆ ಪರಿಣಾಮ** : ಹಸಿರುಮನೆಯ ಪರಿಣಾಮದಿಂದ ಭೂಮಿ ಬಿಸಿಯೇರುತ್ತಿದೆ. ಇದರಿಂದಾಗಿ ಮಳೆ, ಬೇಸಗೆ, ಛಳಿ ಮುಂತಾದ ವಿದ್ಯಮಾನದಲ್ಲಿ ಬದಲಾವಣೆ ಆಗಿದೆಯೆ? ಎಂಬ ಪ್ರಶ್ನೆಯೂ ಇದೆ. ಹಸಿರು ಮನೆಯ ಪರಿಣಾಮ ಹೆಚ್ಚಿದರೆ, ಮಳೆಯ ಪ್ರಮಾಣ ಹೆಚ್ಚುವ ಸೂಚನೆ ಬಗ್ಗೆ ಅಧ್ಯಯನ ನಡೆಯಿತು. 1951 ರಿಂದ 2000ರ ಅವಧಿಯಲ್ಲಿ ಅದನ್ನು ಗಮನಿಸಿದ ಗೋಸ್ವಾಮಿ ತಂಡವು 1950 ರಿಂದ 1980 ರ ಅವಧಿಯಲ್ಲಿ ಮಳೆಯ ಸರಾಸರಿಯಲ್ಲಿ ಗಣನೀಯ ಬದಲಾವಣೆಗಳಿಲ್ಲ ಎಂದಿದೆ. ಆದರೆ 1980 ರಿಂದ ಈಚೆಗೆ ಅತಿವೃಷ್ಟಿ ಹೆಚ್ಚಿದೆ; ಸಾಮಾನ್ಯ ಮಳೆ ಬೀಳುವ ದಿನಗಳ ಸಂಖ್ಯೆ ಕಡಿಮೆಯಾಗುತ್ತಿದೆ. ಒಟ್ಟಾರೆ ಮಳೆಯ ಶೇ. 6.4ರಷ್ಟು ಅತಿವೃಷ್ಟಿಯಿಂದಾಗುತ್ತಲಿದೆ. ಹೀಗೆ ವಿಪರೀತ ಮಳೆಯ ವಿದ್ಯಮಾನದಿಂದಾಗಿ ಆಯಾ ಪ್ರದೇಶದ ಆರ್ಥಿಕ, ಸಾಮಾಜಿಕ ವ್ಯವಸ್ಥೆಯ ಮೇಲೂ ವಿಪರೀತ ಪರಿಣಾಮ ಆಗಬಹುದು ಎನ್ನಲಾಗಿದೆ. ಕೃಷಿಯ ಮೇಲೆ ಇವೆಲ್ಲದರಿಂದ ಗುರುತರ ಪರಿಣಾಮವಾಗಲಿದೆ. ಮುಂಗಾರಿನಲ್ಲಿ ಬೇಸಾಯಕ್ಕಿಳಿಯುವ ರೈತರಿಗೆ ಮುಂದೆ ಮಳೆ ಇಲ್ಲದೆಯೋ ಅಥವಾ ಬಿರು ಮಳೆ ಬಂದೋ ಬೇಸಾಯಕ್ಕೆ ಹಾನಿ ಒದಗಬಹುದು. ಅತಿ ಮಳೆಯ ವಿದ್ಯಮಾನಗಳು ಹೆಚ್ಚುತ್ತ ಹೋಗುವ ಸೂಚನೆಗಳು ಅಧ್ಯಯನದಲ್ಲಿ ಸ್ಪಷ್ಟಗೋಚರವಾಗಿವೆ. ಅಂಥ ಪರಿಣಾಮವನ್ನು ಸಮಸ್ಯೆಯನ್ನು ಎದುರಿಸಲು ಸರ್ವರೂ ಸಿದ್ಧವಾಗಬೇಕು.[47]

ಇನ್ನು ಹಸಿರು ಮನೆಯ ಪರಿಣಾಮಕ್ಕೆ ಕಾರಣವಾಗಿರುವುದು ಇಂಗಾಲಾಮ್ಲದ ವಿಪರೀತ ಚಲನೆ, ಗಾಳಿಗೆ ವಿಪುಲ ಸೇರ್ಪಡೆಯೆಂದಾಗಿದೆ. ಪ್ರಗತಿ ಬೇಕು ಆದರೆ ವಾಯುಮಾಲಿನ್ಯಕ್ಕೆ ಕಾರಣವಾದ ವಾಹನಗಳು ಉಗುಳುವ ಇಂಗಾಲಾಮ್ಲವನ್ನು ನಿಯಂತ್ರಿಸಬೇಕು. ವಿವರ ಹೀಗಿದೆ: ಭೂಮಿಯನ್ನು ತಲುಪುವ ಸೂರ್ಯಶಕ್ತಿಯು

47. ರೇವತಿ., ಹಸಿರುಮನೆ: ಅತಿವೃಷ್ಟಿ ಹೆಚ್ಚುತ್ತಿವೆಯೇ? **ಕನ್ನಡ ಪ್ರಭ**, 13.12.2006

(ಶಾಖ) ಸೂರ್ಯಕಿರಣಗಳ ಮೂಲಕ ಬರುವಲ್ಲಿ ವಾತಾವರಣವು ಅದಕ್ಕೆ ಪಾರದರ್ಶಕವಾಗಿ ಸ್ವಾಗತಿಸುತ್ತದೆ. ಅದೇ ಭೂಮಿಯಿಂದ ಪುನರ್‌ಚಿಮ್ಮಿತವಾಗುವ ಶಕ್ತಿ ಚೈತನ್ಯವು ಇನ್‌ಫ್ರರೆಡ್ ರೇಡಿಯೇಷನ್ ಅಂದರೆ ವಿಕಿರಣ ಶಾಖಶಕ್ತಿಯೆ ಆಗಿರುತ್ತದೆ. ವಾತಾವರಣದ ಕೆಳ ಪದರಗಳಲ್ಲಿಯೇ ಈ ನೀಳ ತರಂಗಮಾನಗಳು ಹೀರಲ್ಪಡುತ್ತವೆ. ಅವು ಭೂಮಿಯ ಮೇಲ್ಮೈಯ ಶಾಖವನ್ನು ಹಿಡಿದಿಟ್ಟುಕೊಳ್ಳುತ್ತವೆ. ಈ ವಿದ್ಯಮಾನವನ್ನು ಗ್ರೀನ್ ಹೌಸ್ ಎಫೆಕ್ಟ್ ಅರ್ಥಾತ್ 'ಹಸಿರುಮನೆ ಪರಿಣಾಮ' ಎನ್ನುತ್ತಾರೆ. ಅಂದರೆ ಹಸಿರು ಗಾಜಿನ ಮನೆಯೂ ಸೂರ್ಯನ ಕಿರಣಗಳನ್ನು ಹೊರಸೂಸುವಲ್ಲಿ ಶಾಖವನ್ನು ಒಳಗೆ ಹಿಡಿದಿಟ್ಟು ಕೊಳ್ಳುತ್ತದೆ. (ಹೆಚ್ಚು ಕಡಿಮೆ ಇದನ್ನು ಅರ್ಥೈಸುವುದೆಂದರೆ, ಇನ್‌ಫ್ರರೆಡ್ ರೇಡಿಯೇಷನ್‌ಗೆ (ವರ್ಣಪಟಲದ ಅಗೋಚರ ರಕ್ತವರ್ಣಾತೀತ ವಿಕಿರಣಕ್ಕೆ) ಗಾಳಿಗಿಂತ ಗಾಜು ಹೆಚ್ಚು ಪಾರದರ್ಶಕವಾಗಿರುತ್ತದೆ. ಈ ಗಾಜು ಗಾಳಿಯ ಚಲನೆಯನ್ನು ತಡೆಯುವ ಕಾರಣ ಹಸಿರು ಮನೆಗಳು ಶಾಖವಾಗಿ/ಬಿಸಿಯಾಗಿ ಇರುತ್ತವೆ, ಎಂದಾಗಿದೆ). ವಾತಾವರಣದಲ್ಲಿ ಇಂಗಾಲಾಮ್ಲದ ಪ್ರಮಾಣವು ಹೆಚ್ಚಿದಷ್ಟೂ ಅದು ಭೂಮಿ ವಾತಾವರಣದ ಶಾಖ/ ಉಷ್ಣತೆಯನ್ನು ಹೆಚ್ಚಿಸುತ್ತದೆ (global warming) – ಅದೊಂದು ರೀತಿ ಗ್ಲೋಬಲ್ warning ಕೂಡ ಹೌದು. ಇದರಿಂದ ಮಸಕಾಗುವ ಸೂರ್ಯನ ವಿಕಿರಣದಂತೆ ಗ್ಲೋಬಲ್ Dimming ಗೆ ಕೂಡ ಕಾರಣವಾಗಲೂಬಹುದು.) ಈ ರೀತಿಯ ಬಿಸಿಯಾಗುವಿಕೆಯು, ಉರಲು ಉರಿಯುವಿಕೆ, ಸಿಮೆಂಟ್ ತಯಾರಿಕೆ, ಕಾಡು ಕಡಿದು ಸುಡುವಿಕೆ, (ವಾಹನ ಇಂಧನ ಉರಿಯುವಿಕೆಯ ಹೆಚ್ಚಳವೂ ಸೇರಿದಂತೆ) ಇತ್ಯಾದಿಗಳ ಕಾರಣ ಆಗುತ್ತದೆ. ವಾರ್ಷಿಕವಾಗಿ 8.5 ಬಿಲಿಯನ್ ಟನ್‌ನಷ್ಟು ಇಂಗಾಲಾಮ್ಲವನ್ನು ಇವುಗಳು ವಿಸರ್ಜಿಸುವುದರಿಂದ, ವಾತಾವರಣದ ಮಟ್ಟದ ದರವನ್ನು ಪ್ರತಿವರ್ಷ ಶೇ.0.4 ರಷ್ಟು ಹೆಚ್ಚಿಸುತ್ತದೆ. 200 ವರ್ಷಗಳ ಹಿಂದೆ ಔದ್ಯೋಗಿಕ ಕ್ರಾಂತಿ (ಇಂಡಸ್ಟ್ರಿಯಲ್ ರೆವಲ್ಯೂಷನ್)ಯ ಆರಂಭದಲ್ಲಿ ವಾತಾವರಣದಲ್ಲಿ ಇಂಗಾಲಾಮ್ಲವು ಒಂದು ಮಿಲಿಯನ್‌ಗೆ 280 ರಷ್ಟು (parts per million : ppm) ಇದ್ದುದು ಇಂದು 355 ಪಿಪಿಎಮ್ (355ppm) ಗೆ ಏರಿದೆ. ಈಗಿನ ಪ್ರವೃತ್ತಿಗಳೇ ಮುಂದುವರಿದಿದೆ 2075ರ ವೇಳೆಗೆ ಇಂಗಾಲಾಮ್ಲದ ಪ್ರಮಾಣವು ದುಪ್ಪಟ್ಟು ಆಗುತ್ತದೆ. ಕಂಪ್ಯೂಟರ್ ಮಾಡೆಲ್‌ಗಳು ಸೂಚಿಸುವಂತೆ ವಾತಾವರಣದ ಶಾಖವು 1.5 ಡಿಗ್ರಿ ಸೆಲ್ಸಿಯಸ್ ನಿಂದ 4.5 ಡಿಗ್ರಿ ಸೆಲ್ಸಿಯಸ್

ಹೆಚ್ಚುತ್ತದೆ. ಕಳೆದ 10 ಸಾವಿರ ವರ್ಷಗಳಿಂದ ಈಗಿನವರೆಗೆ ಉತ್ತರ ಅಮೇರಿಕೆಯಲ್ಲಿ ಏರಿದ ಶಾಖ ಸುಮಾರು 5 ಡಿಗ್ರಿ ಸೆಲ್ಸಿಯಸ್ ಎಂದಿದೆ. ಇಂಗಾಲಾಮ್ಲದ ಜೊತೆಗೆ ಮೀಥೇನ್, ನೈಟ್ರಸ್ ಆಕ್ಸೈಡ್, ಇತ್ಯಾದಿಗಳೂ ಭೂವಾತಾರಣದ ಶಾಖವನ್ನು ಹೆಚ್ಚಿಸುತ್ತವೆ. ಮೀಥೇನ್ ಪ್ರಾಣಿಗಳ ಕರುಳು ಬ್ಯಾಕ್ಟೀರಿಯಗಳಿಂದ, ಗದ್ದೆ ಭತ್ತಗಳ ಕೊಳೆಸುವಿಕೆಯಿಂದ, ಕಲ್ಲಿದ್ದಲು ಗಣಿಗಾರಿಕೆ ಇತ್ಯಾದಿಗಳಿಂದ ಬಿಡುಗಡೆಯಾಗುತ್ತದೆ. ಇವೆಲ್ಲ 'ಹಸಿರು ಮನೆಯ' ಅನಿಲಗಳೇ ಆಗಿವೆ.

ಹಸಿರು ಮನೆ ಅನಿಲಗಳಾಗಿ ನೈಸರ್ಗಿಕವಾಗಿ ಅನಿಲ ಎನಿಸಿದೆ ಪ್ರಧಾನವಾಗಿ 54% ಇಂಗಾಲಾಮ್ಲ 21%, ಸಿಎಫ್, ಮೀಥೇನ್ 12%, ಓಜೋನ್ 7%, ನೈಟ್ರಸ್‌ಆಕ್ಸೈಡ್ 6.9% ಇರುವಲ್ಲಿ ಅದನ್ನು ಮೀರಿ ಬಿಡುಗಡೆ ಮಾಡುವಲ್ಲಿ ಅತ್ಯಂತ ಹೆಚ್ಚಿನ ಪಾತ್ರವು ಅಭಿವೃದ್ಧಿಸಿದ್ಧಿ ರಾಷ್ಟ್ರಗಳಾದ ಅಮೇರಿಕ, ಸೋವಿಯತ್ ರಷ್ಯಾ, ಯುರೋಪ್, ಹಾಗು ಜಪಾನ್‌ಗಳದಾಗಿದ್ದು ಭೂಮಿ ಬಿಸಿಯಾಗುವಿಕೆಗೆ ಮೂರನೆ ಎರಡರಷ್ಟು ಪಾಲನ್ನು ನೀಡಿವೆ. ಉತ್ತರ ಅಮೇರಿಕವು ಜಗತ್ತಿನ ಇಂಗಾಲಾಮ್ಲದ ಉತ್ಪನ್ನದಲ್ಲಿ ಸುಮಾರು ಮೂರನೇ ಒಂದರಷ್ಟು ಅದರದೇ ಕಾಣಿಕೆ ಆಗಿದೆ. ಇವೆಲ್ಲದರ ಪರಿಣಾಮವೆಂದರೆ ಜಗತ್ತಿನ ಆಹಾರ ಸರಬರಾಜು ಅಸ್ತವ್ಯಸ್ತಗೊಳ್ಳುವ ಸಂಭವ, ಪರಿಸರ ಪ್ರತಿಕೂಲಗಳು, ಧಾನ್ಯ ಬೆಳೆವ ಪ್ರದೇಶಗಳ ಒಣಗುವಿಕೆ, ಸಮುದ್ರ ಮಟ್ಟಗಳ ಏರುಪೇರು, ಭೀಕರ ಸುಂಟರಗಾಳಿ ಇತ್ಯಾದಿಗಳಾಗಿವೆ.[48] ಕೃಷಿಯ ಮೇಲೆ ಇದರ ಪರಿಣಾಮವನ್ನು ಅಧ್ಯಯನ ಮಾಡಬೇಕು. ಕಾರಣ ಮಂಜುಗಡ್ಡೆ ಕರಗುವಿಕೆ, ಸಾಗರದಲ್ಲಿ ಉಬ್ಬರ, ಅತಿವೃಷ್ಟಿ ಪುನರಾವರ್ತನೆ, ಹಿಮನದಿ ಬತ್ತುವುದು ಇವೆಲ್ಲ ಆಗುವಲ್ಲಿ ಕೃಷಿ ಕಂಗೆಡುತ್ತದೆ. ಅದಾಗಿ ಜೀವನ ಶೈಲಿಯನ್ನೂ ಬದಲಾಯಿಸಿಕೊಳ್ಳಬೇಕು. ಹಸಿರುಮನೆ ಪರಿಣಾಮದ ಕಾರಣ ಭೂಮಂಡಲ ಶಾಖ ಗೊಳ್ಳುತ್ತಿರುವಲ್ಲಿ, ಅಮೇರಿಕೆಯ 13 ರಾಜ್ಯಗಳು; ಸಂಸ್ಥೆಗಳು. ಅಲ್ಲಿನ ಸರ್ವೋಚ್ಚನ್ಯಾಯಲದಲ್ಲಿ ದಾವೆ ಹಾಕಿದ್ದು ನ್ಯಾಯಾಲಯ ಕೈಗೆತ್ತಿಕೊಂಡದ್ದು ಐತಿಹಾಸಿಕ.

---

48. i. william p. cunningham, Environmental Science (4th Edn), USA, pp.366-67
ii. CSS vol. issue 4, 'the sources of Green Gases.' and Their shares,' oct-Dec 2006, p.2

**ಹವಾಮಾನ ಬದಲಾವಣೆ ಜಾಗತಿಕ ತಾಪಮಾನ:** ಅಭಿವೃದ್ಧಿ ಸಿದ್ಧಿ ದೇಶಗಳು ವಿಶ್ವ ವ್ಯಾಪಾರ ಸಂಘಟನೆಯ ಹೆಸರಿನಲ್ಲಿ ತಮ್ಮ ಹಿತಾಸಕ್ತಿಯನ್ನು ಮಾತ್ರ ಕಾಪಾಡಿಕೊಳ್ಳುವ ಉಪಾಯಗಳನ್ನು ಸೃಜಿಸಿಕೊಳ್ಳುತ್ತಲೇ ಹೋಗಿವೆ. ಹೀಗೆಯೇ ಜಾಗತಿಕ ತಾಪಮಾನದ ವಿಷಯದಲ್ಲಿಯೂ ಅವುಗಳ ಇಬ್ಬಂದಿತನವನ್ನು ಕಾಣಬಹುದಾಗಿದೆ. 2009ರ ಡಿಸೆಂಬರ್ 7 ರಿಂದ 18ರ ವರೆಗೆ ಕೋಪನ್‌ಹೇಗನ್‌ನಲ್ಲಿ 193 ದೇಶಗಳ ಪ್ರತಿನಿಧಿಗಳು, ಪರಿಸರ ವಿಜ್ಞಾನಿಗಳ ನಡುವೆ ಅಂತರಾಷ್ಟ್ರೀಯ ಮಟ್ಟದ ಸಮಾಲೋಚನೆ ನಡೆದಿದೆ. ಏರುತ್ತಿರುವ ತಾಪಮಾನದ ಪರಿಣಾಮವಾಗಿ ಹಿಮಗಡ್ಡೆಗಳ ಶೇಕಡ 21 ರಷ್ಟು ಕರಗಿ ಹೋಗಿರುವುದು ಕಾಣಬಂದಿದೆ. ಇದು ಮುಂದುವರಿದರೆ 2040ರ ವೇಳೆಗೆ ಕುಡಿಯುವ ನೀರಿನ ಮೂಲವಾದ ಹಿಮಗಡ್ಡೆಗಳು ಕರಗಿ ಹೋಗುತ್ತವೆ. ಗಂಗೋತ್ರಿಯ ಹಿಮಗಡ್ಡೆ ಕರಗುವ ಬಿಂದು ಪ್ರತಿವರ್ಷ ಹಿಂದೆ ಸರಿಯುತ್ತಿರುವುದು ಅಧ್ಯಯನಗಳಿಂದ ತಿಳಿದು ಬಂದಿರುವ ಬಗ್ಗೆ ಶ್ರೀಮತಿ ಸುಮಂಗಲಾ ಎಸ್. ಮಮ್ಮಿಗಟ್ಟಿ ಗಮನ ಸೆಳೆಯುತ್ತಾರೆ. ಇದಕ್ಕೆಲ್ಲ ಅಮೆರಿಕೆಯ ಕೊಡುಗೆ ಅಪಾರವಾಗಿದೆ ಎನ್ನಲಾಗಿದೆ. ಕೈಗಾರಿಕೀಕರಣ, ವಾಣಿಜ್ಯೀಕರಣ ವಿಪರೀತವಾಗಿ ಇಂಗಾಲದ ಹೆಜ್ಜೆ ಗುರುಗಳು ದಟ್ಟವಾಗುತ್ತಿವೆ. ಅಂದರೆ ಇಂಗಾಲವನ್ನು ಬಳಸಿ ವಾತಾವರಣಕ್ಕೆ ಇಂಗಾಲಾಮ್ಲ ಬಿಡುವ ಪ್ರಮಾಣ ಅಮೆರಿಕದ್ದೇ ಹೆಚ್ಚು. ಅದಾಗಿ ಅದರ ಇಂಗಾಲ ಹೆಜ್ಜೆ ಗುರುತು ಉಳಿದೆಲ್ಲ ದೇಶಗಳಿಗಿಂತ ಹೆಚ್ಚಾಗಿ ಕಾಣಿಸಿಕೊಂಡು ತಾಪಮಾನ ಏರಿಕೆಗೆ ಕಾರಣವಾಗಿದೆ. ಅದು ಇಂಗಾಲಾಮ್ಲವನ್ನು ಹೊರಹಾಕುತ್ತಿದೆ. ಹಾಕಬೇಕಾದ ಮಿತಿಯನ್ನು ದಾಟಿದೆ. ಹೀಗಾಗಿ ತನ್ನ ಮಿತಿಯುನ್ನು ಹೆಚ್ಚಿಸಿಕೊಳ್ಳಲು ಕಡಿಮೆ ಪ್ರವಾಣದಲ್ಲಿ ಇಂಗಾಲಾಮ್ಲವನ್ನು ಹೊರಹಾಕುತ್ತಿರುವ ದೇಶದ ಮಿತಿಯನ್ನು ಬಳಸಿಕೊಳ್ಳಲೆತ್ನಿಸುತ್ತಿದೆ ಅಂತಾಗಿ ಅಭಿವೃದ್ಧಿ ಸಾಧಕ (ಅಭಿವೃದ್ಧಿ ಶೀಲ) ರಾಷ್ಟ್ರಗಳು ತಮ್ಮ ಅಭಿವೃದ್ಧಿಯ ವೇಗಕ್ಕೆ ಒಡ್ಡು ಕಟ್ಟಿಕೊಳ್ಳಬೇಕೆಂದು, ಅಭಿವೃದ್ಧಿ ಸಿದ್ಧಿ ರಾಷ್ಟ್ರಗಳು ಒತ್ತಡ ಹಾಕುತ್ತಿವೆ. ಅಂದರೆ ಇತರ ರಾಷ್ಟ್ರಗಳ ಅನುಕೂಲಗಳಿಗೆ ಕಡಿವಾಣ ಹಾಕಿ ಸವಾರಿ ಮಾಡುವ ಹುನ್ನಾರ ಅಮೇರಿಕ ಇತ್ಯಾದಿ ರಾಷ್ಟ್ರಗಳಿದ್ದಾಗಿದೆ. ಇದಕ್ಕೆ ಭಾರವೂ ಸೇರಿದಂತೆ ಅಭಿವೃದ್ಧಿ ಸಾಧಕ ರಾಷ್ಟ್ರಗಳು, ವಿರೋಧವನ್ನು ವ್ಯಕ್ತಪಡಿಸಿವೆ. ಹಾಗು ಅಭಿವೃದ್ಧಿ ಸಿದ್ಧಿ ರಾಷ್ಟ್ರಗಳು ಪರಿಸರ ಸ್ನೇಹಿ ತತ್ರಜ್ಞಾನಗಳನ್ನೂ, ಅಭಿವೃದ್ಧಿ ಶೀಲರಾಷ್ಟ್ರಗಳಿಗೆ ನೀಡಿ ನೆರವಾಗಬೇಕು. ಚೀನಾ, ಅಮೆರಿಕಾವು ಇಂಗಾಲದ ಬಳಕೆಗೆ ಹಾಕಿರುವ ಕಡಿವಾಣಕ್ಕೆ ಸಮಯ ಮಿತಿ ಬೇಕು ಎಂದು ವಾದಿಸಿವೆ. ಭಾರತವು ಜಾಗತಿಕ ತಾಪಮಾನ ಏರಿಕೆ ತಡೆಗೆ ಹಲವಾರು ಯೋಜನೆಗಳನ್ನು ಹಾಕಿಕೊಂಡಿದೆ

(7.12.2009 ಪ.ವಾರ್ತೆ) ಈ ಬಗ್ಗೆ ಕೋಪನ್‌ಹೇಗ್ ಸಮಾಲೋಚನೆಯಲ್ಲಿ ಉಕ್ಕುವ ತೀರ್ಮಾನ ಜಾಗತೀಕರಣದ ಲೋಪಗಳನ್ನು ಸರಿಪಡಿಸುವ ದಿಕ್ಕಿನಲ್ಲಿ ಇರಬೇಕಾಗಿದೆ. ಓಜೋನ್ ಪದರಕ್ಕೆ ಹಾನಿಯಾಗದಂತೆ ಭೂಮಿಯ ವಾತಾವರಣದಲ್ಲಿ ಸಾರಜನಕ (78%) ಆಮ್ಲಜನಕ (21%) ಉಳಿದ ಶೇ.1 ರಷ್ಟರಲ್ಲಿ ಇಂಗಾಲಾಮ್ಲ, ಮಿಥೇನ್, ಓಜೋನ್ ಹಬೆಯಿದೆ. ಆಮ್ಲಜನಕ ಸಾರಜನಕ ಬಿಟ್ಟರೆ, ಇಂಗಾಲಾಮ್ಲ, ಮಿಥೇನ್‌ಗಳೇ ಹಸಿರು ಮನೆ ಅನಿಲಗಳು. ಈ ಹಸಿರು ಮನೆ ಅನಿಲಗಳ ಪ್ರಮಾಣ ಏರದಂತೆ, ಓಜೋನ್ ಪದರಕ್ಕೆ ಹಾನಿಯಾಗದಂತೆ ಮಾಡಲು ಚಿಂತನೆಗಳು ಕೋಪನ್‌ಹೇಗನ್‌ನಲ್ಲಿ ನಡೆದುವು. ಜಾಗತಿಕ ತಾಪಮಾನವು ಸಾರಜನಕ ಚಕ್ರವನ್ನೂ ಅಸ್ತವ್ಯಸ್ತಗೊಳಿಸುತ್ತದೆ. ಹೀಗಾಗಿ ಸಸ್ಯಗಳಿಗೆ ಬೇಕಾದ ಸಾರಜನಕವು, ಹಾಳಾಗುತ್ತ ಬಂದರೆ. ಅದಕ್ಕೆ ಹೊಣೆಯಾರದು? ಈ ದಿಕ್ಕಿನಲ್ಲಿಯೂ ನಮ್ಮ ಗಮನ ಹರಿಯಬೇಕು. ಅಪಾಯಗಳನ್ನು ತಪಿಸುವತ್ತ ಕಾರ್ಯೋನ್ಮುಖರಾಗಬೇಕು. ಜಾಗತಿಕ ತಾಪಮಾನ ಏರಿಕೆಯಿಂದ ಸಮುದ್ರಮಟ್ಟದ ಮೇಲೆ ಪರಿಣಾಮ ಹಾಗೂ ಅದರಿಂದ ಒದಗುವ ಅಪಾಯ ಇತ್ಯಾದಿಗಳನ್ನು ಚಿಂತಿಸಿ ಕೂಪನ್‌ಹೇಗ್‌ನ ಕ್ಯೂಟೋ ಶಿಷ್ಟಾಚಾರಕ್ಕೆ ತಿದ್ದುಪಡಿ ತರಬೇಕೆನ್ನುವ ಐರೋಪ್ಯ ರಾಷ್ಟ್ರಗಳ ಪ್ರಯತ್ನವನ್ನು ವಿರೋಧಿಸಿ ಲಕ್ಷಾಂತರ ಪರಿಸರವಾದಿಗಳು ಪ್ರತಿಭಟನೆ ನಡೆಸಿದ್ದಾರೆ. ಭಾರತದ ಪರಿಸರವಾದಿಗಳೂ ಇದರಲ್ಲಿ ತೀವ್ರವಾಗಿ ಪಾಲ್ಗೊಂಡಿದ್ದಾರೆ. ಕಾರಣ ಅಭಿವೃದ್ಧಿ ಶೀಲ ರಾಷ್ಟ್ರಗಳ ಮೇಲೆ ಮಾತ್ರ ಹೆಚ್ಚಿನ ಬಾಧ್ಯತೆ ಹೇರುವ ಹುನ್ನಾರ ಇಲ್ಲಿ ಅಡಗಿರುವುದಾಗಿದೆ. ಈ ಬಗ್ಗೆ ಐರೋಪ್ಯ ರಾಷ್ಟ್ರಗಳಿಗೂ ಹೆಚ್ಚಿನ ಬಾಧ್ಯತೆ ಇರುವಂತೆ ಕಠಿಣ ನಿಲುವು ಜಾಗತಿಕ ತಾಪಮಾನ ಏರಿಕೆಯ ನಿಯಂತ್ರಣ ಸಂಬಂಧವಾಗಿ ಇರಬೇಕು ಎಂಬುದು ಪರಿಸರವಾದಿಗಳ ನಿಲುವು ನ್ಯಾಯವಾಗಿದೆ. ಈ ನಿಟ್ಟಿನಲ್ಲಿ ಭಾರತ, ಪಾಕ್, ಚೀನಾ, ಬಾಂಗ್ಲಾ ಸೇರಿದಂತೆ ಏಷ್ಯಾದ 20 ದೇಶಗಳ ಮಾಗ್ಸಸೆ ಪ್ರಶಸ್ತಿ ಪುರಸ್ಕೃತರು (ಪರಿಸರ ವಾದಿಗಳು) ಕೋಪನ್‌ಹೇಗ್ ಸಮಾವೇಶದಲ್ಲಿ ಪಾಲ್ಗೊಳ್ಳುವ ಎಲ್ಲಾ ದೇಶದ ಮುಖ್ಯಸ್ಥರಿಗೆ ಹವಾಮಾನ ಬದಲಾವಣೆಗೆ ಸಂಬಂಧ ವಿಶೇಷ ಮನವಿ ಪತ್ರ ಸಲ್ಲಿಸುವ ಬಗ್ಗೆ ತಿಳಿಸಿರುವುದು ಒಳ್ಳೆಯ ಬೆಳವಣಿಗೆ ಮಾಲಿನ್ಯ ತಡಿತದ ಗುರಿ ನಿಗದಿ ಆಗಿದೆ. ಪರಿಸರ ಮಾಲಿನ್ಯದಲ್ಲಿ ಶ್ರೀಮಂತ ದೇಶಗಳ ಪಾಲು ಹೆಚ್ಚಿದ್ದು, ಹವಾಮಾನ ಬದಲಾವಣೆಗಳು ಅದು ಮುಖ್ಯ ಕಾರಣವಾಗಿದೆ. ಇದನ್ನು ತಡೆಗಟ್ಟುವ ಹೊಣೆಯನ್ನು ಅಭಿವೃದ್ಧಿ ಸಿದ್ಧಿ ದೇಶಗಳು ಹೊರಬೇಕೆಂದು ಈ ಪರಿಸರ ತಜ್ಞರು ವಾದಿಸಿದ್ದಾರೆ. ಕ್ರಿ.ಶ. 2025ರ ವೇಳೆಗೆ ಭಾರತ ಶೇ.20 ರಿಂದ 25 ರಷ್ಟು ಮಾಲಿನ್ಯ ಕಡಿತಕ್ಕೆ ವಚನ ನೀಡಿ ಸ್ವಯಂ ನಿಯಂತ್ರಣಕ್ಕೆ ಮುಂದಾಗಿದೆ. ಚೀನಾಕೂಡ ಇದೇ ರೀತಿ

ಕಾರ್ಯೋನ್ಮುಖವಾಗಿದೆ. ಇದರಿಂದ ಅಮೇರಿಕದ ಅಧ್ಯಕ್ಷ ಬರಾಕ್ ಒಬಾಮಾ ಪ್ರೇರಣೆಗೊಂಡಿದ್ದು ಡಿಸೆಂಬರ್ 18ರ ಸಮಾವೇಶದಲ್ಲಿ ಪಾಲ್ಗೊಳ್ಳುವ ನಿರೇಕ್ಷೆಯೂ ಇದೆ. ಸಚಿವ ರಮೇಶ್ ಅವರು ಭಾರತೀಯ ನಿಯೋಗವಾಗಿ ಸಮಾವೇಶದಲ್ಲಿ ಪಾಲ್ಗೊಳ್ಳಲು ನಿರಾಕರಿಸಿದ್ದ ತಜ್ಞರ ಮನವೊಲಿಸಿ ಪಾಲ್ಗೊಳುವಂತೆ ಮಾಡಿದ್ದರು. ಆದರೆ ಇಂಗಾಲ ಬಿಡುಗಡೆ ಕಡಿತದ ಬಗ್ಗೆ ಅಭಿವೃದ್ಧಿ ಸಿದ್ಧಿ ಮತ್ತು ಅಭಿವೃದ್ಧಿ ಸಾಧಕ ರಾಷ್ಟ್ರಗಳ ನಡುವೆ ಒಮ್ಮತ ಮಾಡಲಿಲ್ಲ. ಕಾರಣ ಅಭಿವೃದ್ಧಿ ಸಿದ್ಧಿ ರಾಷ್ಟ್ರಗಳು ಕ್ಯೂಟೋ ಶಿಷ್ಟಾಚಾರ ಸಂಬಂಧವಾಗಿ ಮಾಡಿದ ಟೀಕೆ. ಹೀಗಾಗಿ ಸಚಿವ ಜೈರಾಂ ರಮೇಶ್ ನೇತೃತ್ವದ ಭಾರತೀಯ ನಿಯೋಗ, ಚೀನಾ, ಬ್ರೆಜಿಲ್ ಮತ್ತು ದಕ್ಷಿಣ ಆಫ್ರಿಕಾ ರಾಷ್ಟ್ರಗಳ ಪ್ರತಿನಿಧಿಗಳು ಚರ್ಚೆಯಿಂದ 14.12.2009 ರಂದು ಹೊರ ನಡೆದುವು. ಇಂಗಾಲ ಹೊರಸೂಸುವ ಕುರಿತ ಯಾವುದೇ ಕಟ್ಟಳೆಗೆ ಭಾರತ ಒಳಪಡುವ ಬಗ್ಗೆ, ತಾಪತಗ್ಗಿಸುವ ಭಾರತದ ಆಂತರಿಕ ಕ್ರಮಗಳ ಮೇಲ್ವಿಚಾರಣೆ ಅಂತಾರಾಷ್ಟ್ರೀಯ ಪರಾಮರ್ಶೆ, ಹಾಗೂ ಅದಕ್ಕೆ ನಿಗದಿಪಡಿಸುವ ಗರಿಷ್ಠ ಅವಧಿ ಮಿತಿಗೆ, ಭಾರತ ಸಮ್ಮತಿಸುವುದಿಲ್ಲ ಎಂದು ಭಾರತವು ಸ್ಪಷ್ಟವಾಗಿ ಹೇಳಿದೆ. ಶ್ರೀಮಂತ ರಾಷ್ಟ್ರಗಳ ಸ್ವಾರ್ಥ್ಯಕ ದೃಷ್ಟಿಯ ಟೀಕೆಗಳಿಗೆ ಭಾರತವು ಕೊಟ್ಟ ದಿಟ್ಟ ಉತ್ತರವಿದಾಗಿದೆ. ಈ ಸಮಾವೇಶ ನಡೆಯುತ್ತಿರುವ ಸಂದರ್ಭದಲ್ಲಿಯೇ ಜೈವಿಕ ವೈವಿಧ್ಯತೆಯ ವಿಶ್ವ ಸಂಸ್ಥೆಯ ಒಪ್ಪಂದದ, ವರದಿಯೊಂದು ಪ್ರಕಟವಾಗಿ ಗಾಬರಿ ಹುಟ್ಟಿಸುವಂತಿದೆ. 2050 ರ ವೇಳೆಗೆ ಮಹಾಸಾಗರಗಳೆಲ್ಲವೂ ಆಮ್ಲಮಯವಾಗುತ್ತವೆ. ವಾತಾವರಣದ ಇಂಗಾಲಾಮ್ಲವನ್ನು, ಸಮುದ್ರಗಳು ಹೀರಿಕೊಳ್ಳುವ ಪ್ರಮಾಣ ಆ ಹೊತ್ತಿಗೆ ಶೇ. 150 ರಷ್ಟು ಹೆಚ್ಚಾಗಬಹುದು. ಇದು ಕಳೆದ 2 ಕೋಟಿ ವರ್ಷದಲ್ಲಿಯೆ ಅತಿ ಹೆಚ್ಚಿನ ಪ್ರಮಾಣದ್ದಾಗಿದೆ. ಹೀಗಾದರೆ, ಜಲ, ನೆಲ, ಗಾಳಿ ಮತ್ತು ಜೀವಿಗಳ ಸಂಬಂಧದ ಬದುಕು ಏನಾದೀತು? ಇದಕ್ಕೆಲ್ಲ ಕಾರಣರಾದವರಿಗೆ ಜೀವಿಗಳ ಸುಖದ ಹಕ್ಕನ್ನು ಹಾಳುಗಡೆಹುವುದಕ್ಕೆ ರಹದಾರಿ ಯಾರು ಕೊಟ್ಟರು? ಜಗದ ಜನ ಈ ಬಗ್ಗೆ ಎಚ್ಚೆತ್ತು ಪ್ರತಿರೋಧಿಸಬೇಕು. ಕೋಪನ್‌ಹೇಗನ್ ತಾಪಶೃಂಗ ಸಭೆಯಲ್ಲಿ 15.12.2009ನೇ ಮಂಗಳವಾರದಂದು, ಕ್ಯೂಟೋ ಶಿಷ್ಟಾಚಾರದ 2010ರ ಅವಧಿಯ ಬದ್ಧತೆಯ ಅನ್ವಯದಲ್ಲಿ ಅಭಿವೃದ್ಧಿ ಸಿದ್ಧಿ ರಾಷ್ಟ್ರಗಳೂ ಇಂಗಾಲ ವಿಸರ್ಜನೆ ತಡೆಯುವ ಕಾರ್ಯದಲ್ಲಿ ಕಾನೂನು ಬದ್ಧತೆಗೆ ಒಳಗಾಗಬೇಕು. ಎದು ಭಾರತ ಒತ್ತಾಯ ಹಾಕಿದೆ. ಜವಾಬ್ದಾರಿಯಿಂದ ಅವು ನುಣುಚಿಕೊಳ್ಳುತ್ತಿವೆ. ಎದು ಹೇಳಿ ಭಾರತ, ಚೀನಾ, ದಕ್ಷಿಣ ಆಫ್ರಿಕ, ಬ್ರೇಜಿಲ್ ಕೂಟದ ಬೇಸಿಕ್ ರಾಷ್ಟ್ರಿಗಳು ಅಭಿಪ್ರಾಯವಿಟ್ಟು ಸೋಮವಾರ ಸಭೆಯಿಂದ ಹೊರಬಂದಿದ್ದುವಷ್ಟೆ ಆದರೆ ಡೆನ್ಮಾರ್ಕ್

ರಾಷ್ಟವು ಈ ಬಗ್ಗೆ ಭರವಸೆ ನೀಡಿದ ಕಾರಣ ಮಾತುಕತೆ ಮುಂದುವರಿದಿದೆ. ಶಿಷ್ಟಾಚಾರದ ಬದ್ಧತೆಯನ್ನು ಪಾಲಿಸಲು ಅಮೇರಿಕ ಮತ್ತು ಅಭಿವೃದ್ಧಿ ಸಾಧಕ ರಾಷ್ಟ್ರಗಳು ಹೆಚ್ಚಿನ ಹೊಣೆ ಹೊರಬೇಕು ಎಂಬುದು ಐರೋಪ್ಯ ಒಕ್ಕೂಟ ಹಾಗೂ ಆಸ್ಟ್ರೇಲಿಯಾ ಇತ್ಯಾದಿ ಮೈತ್ರಿಕೂಟ ರಾಷ್ಟ್ರಗಳ ವಾದವಾಗಿದೆ.

ಹಿಮಾಲಯದ ಮೇಲೆ ಹೆಚ್ಚು ಇಂಗಾಲ ಶೇಖರಣೆಯಾಗುತ್ತಿರುವಲ್ಲಿ ಹಿಮಗಡ್ಡೆಗಳು ಕರಗುತ್ತಿವೆ. ಟಿಬೆಟ್ ಪ್ರದೇಶದಲ್ಲಿ ಪ್ರತಿ ದಶಕಕ್ಕೆ 0.3 ಡಿಗ್ರಿ ಸೆಲ್ಸಿಯಸ್ ನಂತೆ ಕಳೆದ 30 ವರ್ಷಗಳಲ್ಲಿ ಉಷ್ಣಾಂಶ ಹೆಚ್ಚುತ್ತಿದೆ (16.12.09 ಪ.ವಾರ್ತೆ) ಇದು ನಮಗೆ ಎಚ್ಚರಗೊಳ್ಳಬೇಕಾದ ಭವಿಷ್ಯದ ಮಾರ್ಗಕ್ಕೆ ಸನ್ನೆ ಮಾಡಿದೆ, ಎನ್ನಬೇಕು. ಈಚಿನ ವರದಿಯ ಪ್ರಕಾರ (17.12.20090, ಭಾರತವಲ್ಲದೆ ಜಿ22 ರಾಷ್ಟ್ರಗಳು, ಶೃಂಗ ಅಂಗೀಕರಿಸಲಿರುವ ತಾಪ ಕರಡು ಬಗ್ಗೆ ತೀರ ಅಸಮ್ಮತಿ ವ್ಯಕ್ತಪಡಿಸಿವೆ. ಅಮೆರಿಕ ಕೂಡ ಇಂಗಾಲ ಮಾಲಿನ್ಯ ಕಡಿತ ಮಾಡುವಲ್ಲಿ ತನ್ನ ಹೊಣೆಯನ್ನು ಹೆಚ್ಚಿಸಲು ನಿರಾಕರಿಸಿದೆ.

ಈ ದಿಸೆಯಲ್ಲಿ ಒಮ್ಮತ ಇನ್ನು ಮೂಡಿಲ್ಲವಾದ ಕಾರಣ, ವಿಶ್ವಸಂಸ್ಥೆಯ ಹವಾಮಾನ ಬದಲಾವಣೆ ಶೃಂಗಸಭೆಯ ಅಧ್ಯಕ್ಷ ಕೂನಿ ಹೆಡ್‌ಗಾರ್ಡ್ ರಾಜೀನಾಮೆ ನೀಡಿದರು. ಡೆನ್‌ಮಾರ್ಕ್ ಪ್ರಧಾನಿ ಲಾರ್ಸ್ ಲೊಳ್ ರಾಸ್ಮುಸನ್ ಅಂತಿಮ ಸುತ್ತಿನ ಮಾತುಕತೆಗಳು ಮುಗಿಯುವ ತನಕ ಅಧಯಕ್ಷ ಸ್ಥಾನವನ್ನು ವಹಿಸಿದರು. ಶೃಂಗ ವಿಫಲವಾದರೆ, ಅದನ್ನು ನಿರ್ವಹಿಸುತ್ತುರುವ ಡೆನ್ಮಾರ್ಕ್ ಮತ್ತು ಅಭಿವೃದ್ಧಿ ಸಿದ್ಧಿ ರಾಷ್ಟ್ರಗಳು ಕ್ಯೂಟೋ ಶಿಷ್ಟಾಚಾರ ಅನ್ವಯ ಬದ್ಧತೆಗೆ ಒಳಪಡದಿರುವುದೇ ಕಾರಣವಾಗಲಿದೆ ಹಾಗೂ ಅದಕ್ಕೆ ಅವರೇ ಹೊಣೆ ಎಂದು ಭಾರತದ ಪರಿಸರ ಸಚಿವ ಜೈರಾಮ್ ರಮೇಶ್ ಅವರ ಅಭಿಪ್ರಾಯವಾಗಿತ್ತು. ಭಾರತ ಇಂಗಾಲ ಮಾಲಿನ್ಯ ಕಡಿತಕ್ಕೆ ಸಿದ್ಧವಿದ್ದು ಆ ಬಗ್ಗೆ ಹೆಚ್ಚಿನ ಕ್ರಮಕೈಗೊಳ್ಳಲು ಬದ್ಧ ಎಂದು 192 ದೇಶಗಳಿಗೆ ಮನವರಿಕೆ ಮಾಡಿಕೊಟ್ಟಿತು. ಪ್ರಧಾನಿ ಮನಮೋಹನ್ ಸಿಂಗ್ ಅವರು, ತಾಪ ತಗ್ಗಿಸುವ ದಿಸೆಯಲ್ಲಿ ಜಗತ್ತು ರಚನಾತ್ಮಕ ಹಾದಿಯಲ್ಲಿ ಸಾಗಬೇಕು. ಅಭಿವೃರ್ದಧಿ ಸಿದ್ಧಿ ರಾಷ್ಟ್ರಗಳು ನಿಧಿ ನೆರವು ನೀಡಿ, ತಂತ್ರಜ್ಞಾನ ಹಂಚಿಕೊಳ್ಳಬೇಕು ಎಂದು ನುಡಿದರು (17.12.2009) ಇದಲ್ಲದೆ ಅಮೆರಿಕ ನೂರು ಶತಕೋಟಿ ಡಾಲರ್ ನೆರವಿನ ಬದಲು ಇನ್ನೂರು ಶತಕೋಟಿ ಡಾಲರ್‌ಗಳಿಗೆ ಹೆಚ್ಚಿಸಿ ಅಭಿವೃದ್ಧಿ ಸಾಧಕ ಹಾಗೂ ಬಡರಾಷ್ಟ್ರಗಳಿಗೆ ತಾಪಮಾನ ತಗ್ಗಿಸಲು ನೀಡಿದರೆ ಮಾತ್ರ ಒಪ್ಪಂದಕ್ಕೆ ಸಹಿಹಾಕುವುದಾಗಿ ಭಾರತ ತಿಳಿಸಿತು. ಈ ಸಂಬಂಧ ರೂಪಿಸಲಾಗುವ

ಒಪ್ಪಂದದ ಕರಡು ರಚನೆಯಲ್ಲಿ ಈ ರಾಷ್ಟ್ರಗಳನ್ನು ಪರಿಗಣಿಸದಿರುವುದು, ಮಾಹಿತಿ ನೀಡದಿರುವುದು ಸರಿಯಲ್ಲ ಎಂದು ಭಾರತ ತೀವ್ರವಾಗಿ ಆಕ್ಷೇಪಿಸಿತು.

ಈ ಹಿಂದೆ 6.2.1994 ರಲ್ಲಿ ವಿಶ್ವ ಪರಿಸರ ಕಾಂಗ್ರೆಸ್‌ನ ಛಾನ್ಸಲರ್ ಪ್ರೊ॥ಪಿ.ಆರ್. ತ್ರಿವೇದಿ ಅವರು ಅಂತರಾಷ್ಟ್ರೀಯ ವಿಜ್ಞಾನ ಕಾರ್ಯಾಗಾರ ನಡೆದ ಸಂದರ್ಭದಲ್ಲಿ ಹೇಳಿ ಎಚ್ಚರಿಸಿದ ಮಾತು: ಧ್ರುವಗಳಲ್ಲಿನ ತಾಪಮಾನ ಹತ್ತು ಡಿಗ್ರಿ ಸೆಲ್ಸಿಯಸ್‌ನಷ್ಟು ಏರಿದರೆ ವಿಶ್ವದ ಅನೇಕ ಪ್ರಮುಖ ನಗರಗಳು ನೀರಿನಲ್ಲಿ ಮುಳುಗುತ್ತವೆ. ತಾಪಮಾನ ಹೀಗೆ ಹೆಚ್ಚಿದಲ್ಲಿ ಸಾಗರದ ಮಟ್ಟದಲ್ಲಿ ಐದು ಮೀಟರುಗಳೆಷ್ಟು ಏರಿಕೆಯಾಗುತ್ತದೆ. ಋತುಮಾನ ಬದಲಾವಣೆ ಆಗುತ್ತದೆ. ಅದೊಂದು ಬೇರೆಯ ವಿಶ್ವವೆನಿಸಬಹುದು. ಬದಲಾದ ತಾಪಮಾನವು ಗಾಳಿ ಬೀಸುವ ವಿಧಾನ, ಸ್ಥಳ, ತೇವಾಂಶ ಮತ್ತು ಮಳೆ ಬೀಳುವ ರೀತಿಯನ್ನು ಬದಲಾಯಿಸುತ್ತದೆ. ಈ ಹವಾಗುಣದ ಮಾರ್ಪಾಟು ಆರ್ಥಿಕ ಹಾಗೂ ರಾಜಕೀಯ ಗೊಂದಲಕ್ಕೆ ಎಡೆಕೊಡುತ್ತದೆ. ಹೆಚ್ಚಿದ ಮಳೆ ಕೆನಡಾದಲ್ಲಿ ಗೋಧಿ ಉತ್ಪಾದನೆಗೆ, ಮಂಗೋಲಿಯದಲ್ಲಿ ಹುಲ್ಲುಗಾವಲಿನ ವಿಸ್ತರಣೆಗೆ ಅವಕಾಶ ನೀಡುತ್ತದೆ. ಭಾರತದ ಮುಂಗಾರಿನಲ್ಲಿ ಏರುಪೇರು, ಪಶ್ಚಿಮ ಏಷ್ಯಾದಲ್ಲಿ ವಿನಾಶಕಾರಿ ಕುಸಿತ ಉಂಟುಮಾಡುತ್ತದೆ. ಮಳೆ ಕಡಿಮೆ ಆಗಿ ಬೆಳೆ ವಿಫಲವಾಗುತ್ತದೆ. ಅಮೆರಿಕದ ಆಹಾರ ಉತ್ಪಾದನೆ ಕುಂಠಿತಗೊಂಡು ಅದರ ಕಣಜ ತುಂಬುವುದು ಕಷ್ಟವಾಗುತ್ತದೆ. ಅಗತ್ಯ ಸಂಪನ್ಮೂಲಗಳು ಕಡಿಮೆ ಆಗುತ್ತ ಹೋದಂತೆ ಬೇಡಿಕೆ ಹೆಚ್ಚುತ್ತ ಹೋಗುತ್ತದೆ. ವಿಶ್ವದ ಜನಸಂಖ್ಯೆ ಹೆಚ್ಚುವಲ್ಲಿ ಆದ್ಯತೆಗಳನ್ನು ನಿರ್ಧರಿಸಲು ವಿಶ್ವವ್ಯಾಪಿ ತಂತ್ರಗಳನ್ನು ರೂಪುಗೊಳಿಸಬೇಕು. ವಾತಾವರಣದಲ್ಲಿ ಸಾಂಸ್ಕೃತಿಕ ಪ್ರಭಾವಗಳು ಮಹತ್ವದ ಪಾತ್ರವನ್ನು ವಹಿಸಲಾರಂಭಿಸುತ್ತವೆ ಎಂಬುದನ್ನು ಗಮನಿಸಬೇಕು (ಕ.ಪ್ರ: 7.2.1994) ತ್ರಿವೇದಿಯವರ ಮಾತಿನಂತೆ ತಾಪಮಾನ ವೈಪರೀತ್ಯಕ್ಕೆ ನಾವು ಕಾರಣರಾಗುತ್ತ ಹೋದರೆ ಸಂಪನ್ಮೂಲಗಳ ಪ್ರಕ್ರಿಯೆ ವಿಲೋಮಾನುಪಾತವಾಗಿ ನೇರಾನುಪಾತದ ಪ್ರಗತಿಗೆ ಎರವಾಗುತ್ತದೆ ಎಂದು ಆಗಲೇ ಎಚ್ಚರಿಸಿದೆ ಇಂದು ಕೋಪನ್‌ಹೇಗನ್ ಹವಾಮಾನ ಶೃಂಗದ ಮಾತುಕತೆಗಳಿಗೆ ಈ ಅಂಶಗಳು ಎಂಥ ಸೂಕ್ತ ಮಾದರಿಯನ್ನು ನಿರ್ದೇಶಿಸಬಲ್ಲುದು ಎಂದೆನಿಸುತ್ತದೆ. ಆದರೆ ಇದರ ವ್ಯಂಗ್ಯ ವ್ಯಾಖ್ಯಾನದ, ಮಾದರಿಗಳಾಗಿ ಶ್ರೀಮಂತ ರಾಷ್ಟ್ರಗಳ ನಡೆ ಕಾಣಬರುತ್ತಿರುವುದು ವಿಪರ್ಯಾಸ. ಅಭಿವೃದ್ಧಿ ಸಾಧಕ ರಾಷ್ಟ್ರಗಳನ್ನು ಗೀರಿ ಅಭಿವೃದ್ಧಿ ಸಿದ್ಧಿ ರಾಷ್ಟ್ರಗಳು ಸೂರು ಕಟ್ಟಿಕೊಳ್ಳುವ ಹುನ್ನಾರವಂತು ನಡೆದೇ ಇದೆ. ಅದಕ್ಕೆ ಅವಕಾಶವಾಗಬಾರದು. ಸಾರ್ವಜನಿಕರ ಹಿತ ಮುಖ್ಯವಾಗಬೇಕು.

ಅತಿಥೇಯ ರಾಷ್ಟ್ರ ಡೆನ್ಮಾರ್ಕ್ ರಾಜಕೀಯ ಒಡಂಬಡಿಕೆಗೆ ಪಟ್ಟು ಹಿಡಿದಾಗ, ಭಾರತವು ಈ ಒಡಂಬಡಿಕೆ ಶ್ರೀಮಂತ ರಾಷ್ಟ್ರಗಳ ಪರವಿದೆ ಎಂದು ವಾದಿಸಿತು. ಅಂತಾಗಿ ಚೀನಾ, ಬ್ರೆಜಿಲ್, ಜಿ–77 ದೇಶಗಳೂ ಈ ಒಡಂಬಡಿಕೆ ಸಾಕಷ್ಟು ಪಾರದರ್ಶಕವಾಗಿಲ್ಲ ಎಂದು ಅದನ್ನು ಸಮ್ಮತಿಸಲಿಲ್ಲ. ಮಾತುಕತೆ ಮುರಿದು ಬೀಳುವ ಹಂತಕ್ಕೆ ಬಂದಾಗ ಅಮೆರಿಕವು, ಹಸಿರು ಅನಿಲ ಕಡಿತದ ಗುರಿಯನ್ನು ಅಂತಾರಾಷ್ಟ್ರೀಯ ಪರಾಮರ್ಶೆಗೊಳಪಡಿಸುವುದು; ಹವಾಮಾನ ವೈಪರೀತ್ಯ ತಡೆ ಉಪಕ್ರಮದಲ್ಲಿ ಅಭಿವೃದ್ಧಿ ಸಾಧಕ ದೇಶಗಳು ಪಾರದಶಕತೆ ಕಾಪಾಡಿಕೊಳ್ಳುವುದು; ಪರಿಸರ ಸಂರಕ್ಷಣೆಗೆ ಒಡದೇಶಗಳು ಮಾಡುವ ತ್ಯಾಗಕ್ಕೂ ಶ್ರೀಮಂತ ದೇಶಗಳು ತಕ್ಕ ಪ್ರತಿಫಲ ನೀಡಬೇಕು. ಅದಕ್ಕಾಗಿ ಐದು ಲಕ್ಷ ಕೋಟಿ ರೂ. ಪರಿಹಾರ ನಿಧಿ ಸ್ಥಾಪನೆ ಎಂಬ ಅಂಶಗಳಿಗೆ ಒತ್ತಾಸೆ ನೀಡಿತು. ಅಂತಾಗಿ ಮಾತುಕತೆಗೆ ಮತ್ತೆ ಚಾಲನೆ ದೊರೆಯಿತೇನೋ ಸರಿ. ಈ ಶೃಂಗ ವಿಫಲವಾದರೆ ಶ್ರೀಮಂತ ದೇಶಗಳೇ ಹೊಣೆ ಎಂಬುದು ಭಾರತದ ಪ್ರತಿಪಾದನೆ ಆಗಿತ್ತು. ಸ್ವಚ್ಛ ಪರಿಸರವೆನ್ನುವುದು ನಮ್ಮೆಲ್ಲರ ಹೊಣೆ. ಹಾಗೆಂದು ಅಭಿವೃದ್ಧಿ ಸಾಧಕ ದೇಶಗಳಲ್ಲಿ ಒಡತನವನ್ನು ಚಿರಸ್ಥಾಯಿಗೊಳಿಸುವುದಾಗಲಿ, ಬಡತನ ನಿವಾರಣಾ ಪ್ರಯತ್ನವನ್ನು ಒತ್ತೆ ಇಡುವುದಾಗಲಿ ಆಗಬಾರದು. ಶ್ರೀಮಂತ ರಾಷ್ಟ್ರಗಳೂ ಈ ದಿಸೆಯಲ್ಲಿ ಸಹಕರಿಸಬೇಕು ಎಂಬುದು ಪ್ರಧಾನಿ ಮನಮೋಹನ್‌ಸಿಂಗ್ ಅವರು ಸ್ಪಷ್ಟಪಡಿಸಿದ ವಿಷಯವಾಗಿತ್ತು.

ಪ್ರಧಾನಿ ಮನಮೋಹನ್‌ಸಿಂಗ್ ಅವರು ಕೋಪನ್‌ಹೇಗನ್‌ನಲ್ಲಿ ಕರೆ ನೀಡುತ್ತ, ಕ್ಯೂಟೋ ಒಪ್ಪಂದ 2010 ರಲ್ಲಿ ಮುಕ್ತಾಯವಾಗುತ್ತದೆ. ಇದರ ಸ್ಥಾನದಲ್ಲಿ ದುರ್ಬಲ ಒಪ್ಪಂದ ಅನುಷ್ಠಾನಕ್ಕೆ ಬರಬಾರದು. ಬಂದರೆ ಅಂತಾರಾಷ್ಟ್ರೀಯ ಸಾರ್ವಜನಿಕ ಅಭಿಪ್ರಾಯಕ್ಕೆ ವಿರುದ್ಧವೆನಿಸುತ್ತದೆ. ಒಪ್ಪಂದ ಪೂರ್ಣಗೊಳಿಸಲು 2010ರಲ್ಲಿ ಸಂಧಾನ ಮಾತುಕತೆಗಳನ್ನು ಮುಂದುವರಿಸಬೇಕು. ಸದ್ಯ ಶೃಂಗ ಸಭೆಯ ಫಲಶ್ರುತಿ ಹೇಗೆ ಇರಬಹುದು. ಭಾರತವಂತು 2020ರ ವೇಳೆಗೆ ಮಾಲಿನ್ಯದ ಪ್ರಮಾಣವನ್ನು ಮತ್ತಷ್ಟು ಕಡಿತ ಮಾಡಲು ಅನುಕೂಲವಾಗುತ್ತದೆ. ಹವಾಮಾನದ ಬದಲಾವಣೆಗೆ ನೈಜವಾದ ಒಮ್ಮತ ಹಾಹಗೂ ಜಾಗತಿಕ ಪ್ರಕ್ರಿಯೆಗಾಗಿ ಸಂಧಾನ ಮುಂದುವರಿಯಬೇಕು. ಒಪ್ಪಂದಕ್ಕೆ ಹೊಣೆಯಾದ ದೇಶಗಳು ಮಾಲಿನ್ಯ ಕಡಿತಕ್ಕೆ ಬದ್ಧತೆ ತೋರಬೇಕು. ಎಂದೆಲ್ಲ ನುಡಿದರು.

ಈ ಸಂದರ್ಭದಲ್ಲಿ ಖ್ಯಾತ ವಿಜ್ಞಾನಿ ಎಂ.ಎಸ್. ಸ್ವಾಮಿನಾಥನ್ ಅವರು: ಹವಾಮಾನ ಬದಲಾವಣೆಗೆಯಿಂದ ಆಹಾರ ಭದ್ರತೆಗೆ ಕೇಡು. ಶೃಂಗ ಸಭೆಯ

ಫಲಶ್ರುತಿಯ ಆಧಾರದ ಮೇಲೆ ಕ್ರಮಕೈಗೊಳ್ಳುವುದಕ್ಕಿಂತ, ಭಾರತ ಪ್ರಬಲವಾದ ಆಂತರಿಕ ಕ್ರಮಗಳನ್ನು ಕೈಗೊಳ್ಳಬೇಕು. ಜಗತ್ತಿನ ಹಸಿವಿನ ತಾಣಗಳಾದ ದಕ್ಷಿಣ ಏಷ್ಯಾ, ಆಫ್ರಿಕಾದ ಸಹರಾ ಪ್ರದೇಶ, ನಮ್ಮ ಕರಾವಳಿ ಹಸಿವಿನ ತಾಣಗಳಾದ ದಕ್ಷಿಣ ಏಷ್ಯಾ, ಆಫ್ರಿಕಾದ ಸಹರಾ ಪ್ರದೇಶ, ನಮ್ಮ ಕರಾವಳಿ ದೇಶಗಳು ಶೃಂಗಸಭೆ ವಿಫಲವಾದರೆ ತೀವ್ರ ಪ್ರತಿಕೂಲ ಪರಿಣಾಮವನ್ನು ಎದುರಿಸಬೇಕಾಗುತ್ತದೆ, ಎಂದಿದ್ದಾರೆ. (19.12.09)

ವಿಶ್ವಸಂಸ್ಥೆ ಯೋಜಿಸಿದ ಈ ಕೋಪನ್‌ಹೇಗನ್ ಸಮಾವೇಶದಲ್ಲಿ 12 ದಿನಗಳ ಕಾಲ ಚರ್ಚೆ, ಮಾತುಕತೆಗಳು ನಡೆದುವು. ಅಮೆರಿಕದ ಅಧ್ಯಕ್ಷ ಬರಾಕ್ ಒಬಾಮ ಅವರು ಬೇಸಿಕ್ ದೇಶಗಳ ಪ್ರತಿನಿಧಿಗಳಾದ ಭಾರತದ ಪ್ರಧಾನಿ ಮನಮೋಹನ್‌ಸಿಂಗ್ ಚೀನಾದ ಪ್ರಧಾನಿ ವೆನ್ ಜಿಯಾಬಾವೊ, ಬ್ರೆಜಿಲ್ ನ ಅಧ್ಯಕ್ಷ ಲೂಯಿಸ್ ಇನಾಸಿಯೊ ಡಿಸಿಲ್ವ, ದಕ್ಷಿಣ ಆಫ್ರಿಕದ ಜಾಕೋಬ್ ಜುಮಾ ಅವರುಗಳ ಇಚ್ಛೆಯಂತೆ ಈ ನಾಲ್ಕು ಮುಖಂಡರೊಡನೆ ಒಟ್ಟಾಗಿಯೆ ಕೂತು. ಸಿದ್ಧಪಡಿಸಿಲಾದ ಕರಡು ಒಪ್ಪಂದ ಬೆಂಬಲಪಡೆಯಬೇಕಾಯಿತು. ಆಂತರಿಕ ಕಾನೂನು ಬದ್ಧತೆ ಇರದ ಮಾಲಿನ್ಯ ತ್ಯಾಜ್ಯ ನಿಯಂತ್ರಣ ಕುರಿತಂತೆ ಅಮೆರಿಕ ಕಾನೂನು ಬದ್ಧತೆ ಇರದ ಮಾಲಿನ್ಯ ತ್ಯಾಜ್ಯ ನಿಯಂತ್ರಣ ಕುರಿತಂತೆ ಅಮೆರಿಕ ಮುಂದಿಟ್ಟ ಪರಿಹಾರ ಸೂತ್ರಕ್ಕೆ ಬೇಸಿಕ್ ದೇಶಗಳು ಒಪ್ಪಿಗೆ ಸೂಚಿಸಿದರೂ ಜಿ-22 ರಾಷ್ಟ್ರಗಳು ಅದನ್ನು ಸಂಪೂರ್ಣವಾಗಿ ವಿರೋಧಿಸಿದುವು. ಈ ಬೇಸಿಕ್ ಅಮೆರಿಕ ಒಪ್ಪಂದದಲ್ಲಿ ತಾಪಮಾನ ಏರಿಕೆಯನ್ನು ಎರಡು ಡಿಗ್ರಿ ಸೆಲ್ಸಿಯಸ್‌ಗೆ ಮಿತಿಗೊಳಿಸುವುದು. ಅಂದರೆ ಕನಿಷ್ಠ ಅಷ್ಟು ಪ್ರಮಾಣ ಕಡಿತಗೊಳಿಸುವುದು; 2010 ಫೆಬ್ರವರಿ ಒಳಗೆ ಕೈಗಾರಿಕಾ ರಾಷ್ಟ್ರಗಳು ತಮ್ಮ ಮಾಲಿನ್ಯ ಕಡಿತದ ಗುರಿಯನ್ನು ನಿಗದಿಗೊಳಿಸಿಕೊಳ್ಳಬೇಕು. ಹಾಗೆಯೇ ಅಭಿವೃದ್ಧಿ ಸಾಧಕ ರಾಷ್ಟ್ರಗಳೂ ಅನುಸರಿಸಬೇಕು. ಮಾಲಿನ್ಯ ಕಡಿತ, ಮೇಲ್ವಿಚಾರಣೆ ಪರಿಶೀಲನೆ ವರದಿ ಇತ್ಯಾದಿಗಳ ಪರಾಮರ್ಶೆಗಳನ್ನು ದೇಶೀಯ ಸಂಸ್ಥೆಗಳಿಂದ ಮಾಡಿಸುವುದು; ರಾಷ್ಟ್ರೀಯ ಸಾರ್ವಭೌಮತ್ವಕ್ಕೆ ಎರವಾಗದಂತೆ ಅಂತಾರಾಷ್ಟ್ರೀಯ ಸಲಹೆ, ವಿಶ್ಲೇಷಣೆಗಳಿಗೆ ಅವಕಾಶವಿರುವುದು. ಅಭಿವೃದ್ಧಿ ಸಾಧಕ ದೇಶಗಳಿಗೆ ನೂರು ಶತಕೋಟಿ ಡಾಲರ್‌ಗಳ ದೀರ್ಘಾವಧಿ ನಿಧಿ --ವತ್ತು ಶತಕೋಟಿ ಡಾಲರ್‌ನಷ್ಟು ಅಲ್ಪಾವಧಿ ನಿಧಿ ಬಡ ಹಾಗೂ ತೀರ ತೊಂದರೆಯಲ್ಲಿರುವ ದೇಶಗಳಿಗೆ ನೆರವಾಗಿ ನೀಡುವುದು ಇತ್ಯಾದಿ ಅಂಶಗಳು ಒಪ್ಪಂದದಲ್ಲಿದ್ದವು. ಆದರೆ ಇದು ಕಾನೂನು ಬದ್ಧವಲ್ಲದ ಒಪ್ಪಂದವಾಗಿತ್ತು.

ಈ ಒಪ್ಪಂದ ಜಾರಿಗೊಂಡಿದೆ ಎಂಬುದು ವಿಶ್ವಸಂಸ್ಥೆ ಮಹಾಕಾರ್ಯದರ್ಶಿ ಬಾನ್‌ಕಿಮೂನ್ ಅವರ ಮಾತಾಗಿತ್ತು. ಹವಾಮಾನ ಬದಲಾವಣೆಯ ಸವಾಲು ಎದುರಿಸುವ ನಿಟ್ಟಿನಲ್ಲಿ ಈ ಒಪ್ಪಂದ ಮೊದಲ ಹೆಜ್ಜೆ ಏನೋ ಸರಿ. ಆದರೆ ಇದು ಬಲ ಹೀನ ಒಪ್ಪಂದ ಎಂದು ತುವಾಲು, ಸೂಡಾನ್ ರಾಷ್ಟ್ರಗಳ ಅಭಿಪ್ರಾಯವಾಗಿತ್ತು. ಶೃಂಗ ಸಭೆಯಲ್ಲಿ ಪಾಲ್ಗೊಂಡ ಎಲ್ಲ 192 ರಾಷ್ಟ್ರಗಳೊಡನೆ ಈ ಒಪ್ಪಂದ ಕುರಿತು ಚರ್ಚೆ ಆಗಲಿಲ್ಲ ಎಂದು ವೆನಿಜುಯೆಲ್ಲಾ ಮತ್ತು ಬೊಲಿವಿಯಾ ರಾಷ್ಟ್ರಗಳಲ್ಲಿ ಅಸಮಾಧಾನವಾಗಿತ್ತು. ಈ ಒಪ್ಪಂದದಲ್ಲಿ ಆಯಾ ದೇಶಗಳು ಕೈಗೊಳ್ಳುವ ಕ್ರಮಗಳ ಬಗ್ಗೆ ಕಾನೂನು ಬದ್ಧತೆ ಇಲ್ಲ; ಹಾಗಾಗಿ ಒಪ್ಪಲು ಸಾಧ್ಯವಿಲ್ಲ ಎಂಬುದು ಕೋಸ್ಟರಿಕಾ ಪ್ರತಿನಿಧಿಯ ಟೀಕೆ ಆಗಿತ್ತು. ಒಟ್ಟಾರೆ ಒಬಾಮ ಮಧ್ಯಸ್ಥಿಕೆಯ ನಂತರ ಭಾರತ ಸೇರಿದಂತೆ ಐದು ದೇಶಗಳು 'ಕೋಪನ್ ಹೇಗನ್ ಒಪ್ಪಂದ'ದ ಕಡರನ್ನು ಅವಸರದಲ್ಲಿಯೇ ಮಂಡಸಿದಾಗ ಸಭಾಂಗಣದಲ್ಲಿದ್ದವರು ಚಪ್ಪಾಳೆ ತಟ್ಟಿ ಸ್ವಾಗತಿಸಿದ್ದಂತು ಆಗಿತ್ತು. ಈ ಶೃಂಗ ಸಭೆಯು ಸಂಪೂರ್ಣ ಯಶಸ್ಸು ಗಳಿಸಿತೆನ್ನುವಂತೆಯೂ ಇರಲಿಲ್ಲ. ಕರಡನ್ನು ತಾತ್ಕಾಲಕ್ಕೆ ಅನೇಕ ರಾಷ್ಟ್ರಗಳು ಒಪ್ಪಿದಂಥ ಶಾಸ್ತ್ರವಂತು ಆಗಿತ್ತೆನಿಸುತ್ತದೆ. ಅಮೆರಿಕ ಎಂದಿನಂತೆ ಶೃಂಗ ಸಭೆಯ ನಂತರ ಭಾರತ ಮತ್ತು ಚೀನಾಗಳು ತಾಪಮಾನ ಏರಿಕೆಯನ್ನು ನಿಯಂತ್ರಿಸದಿದ್ದಲ್ಲಿ ನಾವು ಪ್ರಶ್ನಿಸಬಹುದು. ಎಂಬ ಮಾತಿಗೆ ಜಗತ್ತಿನಲ್ಲಿ ಅತ್ಯಧಿಕ ಹಸಿರು ಮನೆ ಅನಿಲಗಳನ್ನೂ ಬಿಡಗಡೆ ಮಾಡುತ್ತಿರುವ ಅತ್ಯಧಿಕ ತಾಪಮಾನ ಏರಿಕೆಗೆ ಕಾರಣವಾಗಿರುವ ದರ ಮುಖಕ್ಕೇರಾಚುವಂಥ ಎದುರು ನುಡಿಯನ್ನು ಅಭಿವೃದ್ಧಿ ಸಾಧಕ ರಾಷ್ಟ್ರಗಳು ಹೇಳಬೇಕಿದೆ.

ಇನ್ನು ಹಸಿರು ಮನೆ ಅನಿಲ ಪ್ರಮಾಣ ಏರುತ್ತಿರುವುದಕ್ಕೆ ಮಾನವನೆ ಅತಿಯಾದ ನೈಸರ್ಗಿಕ ಸಂಪತ್ತಿನ ಬಳಕೆ. ಪೆಟ್ರೋಲ್, ನೈಸರ್ಗಿಕ ಅನಿಲ ಮತ್ತು ಕಲ್ಲಿದ್ದಲು ಬಳಕೆಯಿಂದ ಹೊರಸೂಸುವ ಇಂಗಾಲಾಮ್ಲ, ಮಿಥೇನ್ ಕಾರಣವಾಗಿವೆ; ಕಳೆದ 20 ವರ್ಷಗಳಲ್ಲಿ ಇಂಗಾಲಾಮ್ಲ ಪ್ರಮಾಣ ಅಧಿಕವಾಗಿ ಜಾಗತಿಕ ತಾಪಮಾನ ಏರಲು, ಮಾನವ ಉರಿಸಿದ ಶೇ 75 (75%) ಇಂಧನ, ಶೇ. 25 ರಷ್ಟು ಅರಣ್ಯನಾಶ, ಭೂ ಬಳಕೆಯಲ್ಲಾದ ಬದಲಾವಣೆಯ ಕಾರಣವಾಗಿದೆ. ಹವಾಮಾನ ಬದಲಾವಣೆಗೆ ವಾತಾವರಣದಲ್ಲಿರುವ ಏರ್‌ಸೋಲ್‌ಗಳು ಅಂದರೆ ಸಣ್ಣಕಣಗಳು, ಧೂಳು, ಮಾಲಿನ್ಯ, ಜ್ವಾಲಾಮುಖಿ ಇತ್ಯಾದಿಗಳು ಕಾರಣಗಳಾಗಿವೆ. ಇವು ಅಧಿಕವಾದರೆ ಶಾಖವನ್ನು ಹಿಡಿದಿಟ್ಟುಕೊಂಡು ಭೂಮಿಯ ಮೇಲ್ಮೈಯ ವಾತಾವರಣದ ತಾಪಮಾನವನ್ನು

ಹೆಚ್ಚಿಸುತ್ತವೆ. ಇದರಿಂದ ನೈಸರ್ಗಿಕ ವಿಕೋಪಗಳು ಉಂಟಾಗುತ್ತವೆ. ಅಪಾಯಕಾರಿ ಇನ್‌ಫ್ರಾರೆಡ್ ವಿಕಿರಣಗಳು ಓಜೋನ್ ಪದರವು ಹರಿದುಹೋಗಿ, ಭೂಮಿಯನ್ನು ಪ್ರವೇಶಿಸುತ್ತವೆ. ವಾತಾವರಣದಲ್ಲಿ ನೀರಿನ ಹಬೆಯ ಅಂಶ ಹೆಚ್ಚುಗೊಳ್ಳುತ್ತದೆ. ಈ ತಪಮಾನ ಏರುತ್ತ ಹೋದರೆ ಈ ಶತಮಾನದ ಅಂತ್ಯದೊಳಗೆ ಸಾಗರದ ಮಂಜುಗಡ್ಡೆ ಕರಗಿ ನೀರಾಗಬಹುದು. ವಿಪರೀತ ಸೆಕೆ ಬಿಸಿಗಾಳಿ, ಆಲಿಕಲ್ಲು, ಮಳೆ, ಮಂಜು ಹೆಚ್ಚುವುದು, ಚಂಡ ಮಾರುತದ ಸಂಭಾವ್ಯತೆ, ನೀರಿನ ಮೂಲ ಬತ್ತಬಹುದು; ಶೇ 20–30 ರಷ್ಟು ಜೀವ ವೈವಿಧ್ಯ ನಶ; ಆಫ್ರಿಕಾದ ಜನತೆಗೆ ನೀರಿನ ಹಾಹಾಕಾರದ; ಕೃಷಿ ಉತ್ಪನ್ನ ಶೇ.50 ರಷ್ಟು ಕುಂಠಿತ; ಆಹಾರಾಭಾವದಿಂದ ಬಡದೇಶದಲ್ಲಿ ರಾಜಕೀಯ ಸಂಘರ್ಷ ಒದಗಬಹುದು. ಈ ಹಿನ್ನೆಲೆಯಲ್ಲಿ ಕೋಪನ್‌ಹೇಗನ್ ಶೃಂಗದ ಕರಡು ಒಪ್ಪಂದವು ಕಾನೂನು ಬದ್ಧವಾಗದಿದ್ದರೂ ಮಹತ್ವ ಪಡೆಯುತ್ತದೆ. ಶ್ರೀಮತಿ ಸುಧಾ ಹೆಗಡೆ ಅವರ ಅನುಮಾನವಂತು ಕ್ಯೋಟು ಹಾದಿಯನ್ನು ಕೋಪನ್ ಹೇಗನ್ ತುಳಿದೀತೆ? ಎಂಬುದಾಗಿತ್ತು. ಅಂತು ಅಮೆರಿಕ–ಬೇಸಿಕ್ ರಾಷ್ಟ್ರಗಳ ಒಪ್ಪಂದವು ಕೆಲಮಟ್ಟಿನ ಆಸೆಯನ್ನು ಮೂಡಿಸಿತು ಎಂದು ಸದ್ಯಕ್ಕೆ ಹೇಳಬಹುದಾದ ಮಾತು.

Global Warning- ಜಾಗತಿಕ ತಾಪಮಾನದ ವಿವೇಚನೆಯ ಸಂದರ್ಭದಲ್ಲಿ ನ್ಯೂದಿಲ್ಲಿಯ ಸೆಂಟರ್ ಫಾರ್ ಸೈನ್ಸ್ ಅಂಡ್ ಎನ್‌ವಿರೋನ್‌ಮೆಂಟ್ ಸಂಸ್ಥೆಯು 2005 ರಲ್ಲಿಯೂ ಮಂಡಿಸಿರುವ ವಿಷಯದಲ್ಲಿ ಎತ್ತಿರುವ ಪ್ರಶ್ನೆ ಸಮಂಜಸವೆನಿಸುತ್ತದೆ:

India and China today account for more than one third of the world's population. The question to be asked is whether we are consuming one third of the world's resources or contributing one-third of the muck and dirt in the atmosphere or te oceans. If not the surely these countries should be laided for keeping the world in balance because of their parsimonious consumption despite the western rape and pillage of the world's resources '(Anil Agarwal, Sunita Narayan)

ವಾಷಿಂಗ್‌ಟನ್‌ನಲ್ಲಿಯ ಖಾಸಗಿ ಸಂಶೋಧನೆ ಸಂಸ್ಥೆ World Resources Institute (WRI) ಅದಕ್ಕೆ ಜಾಗತಿಕ ತಾಪಮಾನದ ಹೆಚ್ಚಳಕ್ಕೆ ಅಭಿವೃದ್ಧಿ ಸಾಧಕ ರಾಷ್ಟ್ರಗಳತ್ತವೆ ಬೆರಳೆತ್ತಿ ತೋರಿಸುವ ಚಟವಿದೆ. ಭತ್ತದ ಗದ್ದೆ ಹಾಗೂ

ಜಾನುವಾರುಗಳಿಂದ ಅರಣ್ಯ ಕಡಿತ ಮತ್ತು ಮೀಥೇನ್ ಉತ್ಪಾದನೆ ಹಾಗೂ ಇಂಗ್ಲಾಲಾಮ್ಲದ ಹೆಚ್ಚಳಕ್ಕೆ ಕಾರಣವಾಗಿ ಪ್ರಮಾಣ ಮತ್ತು ಕಲ್ಲಿದ್ದಲು ಇಂಧನಗಳಿಂದ ಉತ್ಪತ್ತಿಯಾಗುವ ಇಂಗಾಲಾಮ್ಲ ಪ್ರಮಾಣಕ್ಕಿಂತ ಅಧಿಕ ಎಂದು ಅಭಿವೃದ್ಧಿ ಸಾಧಕ ರಾಷ್ಟ್ರಗಳ ಮೇಲೆ ಗೂಬೆ ಕೂರಿಸುತ್ತದೆ. since developing countries are more responsible for the heavy productios, the heavy emphasis on deforestation and methane generation tends to overplay their contributin while underplaying that of developed countries, the methane issues raises further questions of justice and morality. can we really equate the carbondioxide contributions of gas guzzling automobiles in Europe and North America or for that matter anywhere in the third world with the methane emissions of draught cattle and rice fields of subsistence farmers in west Bengal or Thailand? Do these people not have a right to live? But no effort has been made in WRI's report to separte out the 'survival emissions' of the rich. just what kind of polities or morality is this which masquerades in the name of 'one worldsm' and high minded internationalism (Anil Agarwal, Sunita Narayan)

ಇಂಥ ವಿವೇಚನಾತ್ಮಕ ಪ್ರಶ್ನೆಗಳ ಹಿನ್ನೆಲೆಯಲ್ಲಿ ಜಾಗತಿಕ ಹವಾಮಾನ. ತಾಪಮಾನ ನಿರ್ವಹಣೆಯ ಮಾತನಾಡುವವರು. ತಮ್ಮ ಮನೆಯ ಅಂಗಳದಲ್ಲಿಯೂ ಏನು ಮಾಡಬೇಕೆಂದು ಯೋಚಿಸಬೇಕು. ಈ ದಿಸೆಯಲ್ಲಿ ಭಾರತವು ತನ್ನ ಅಸ್ಥಿತೆಯನ್ನು ಉಳಿಸಿಕೊಂಡು ಜಗತ್ತಿಗೆ ತನ್ನ ಪಾತ್ರವನ್ನು ತಿಳಿಸಬೇಕು. ಕೋಪನ್‌ಹೇಗನ್‌ನಲ್ಲಿ ಈ ದೃಷ್ಟಿಯಿಂದ ಭಾರತದ ನಡೆ ಸ್ವಾಗತಾರ್ಹ ನಡೆಯು ಆಗಿತ್ತು.

**ಬರಗಾಲದ ಮಾರಾಟಗಳು** : ಬರಗಾಲದ ಕಾರಣ ಕೆರೆ ಕಟ್ಟೆಗಳು ಬರಿದಾಗಿವೆ. ಮುಂಗಾರು, ಹಿಂಗಾರು ವೈಫಲ್ಯದ ಕಾರಣ ಅಂತರ್ಜಲದ ಮಟ್ಟ ಕುಸಿದಿದೆ. ಕೊಳವೆ ಭಾವಿಗಳಲ್ಲೂ ನೀರಿಲ್ಲ. ಫಸಲಿನ ನಿರೀಕ್ಷೆಯಲ್ಲಿ ಸಾಲ ಮಾಡಿದ ರೈತರು ಫಸಲು ಬರದೆ ಕಂಗಾಲಾಗಿ ಸಾವಿಗೆ ಶರಣಾಗುತ್ತಿದ್ದಾರೆ. ಬರಪೀಡಿತ ತಾಲೂಕುಗಳಿಗೆ ಪರಿಹಾರ ಇನ್ನೂ ಒದಗಿಲ್ಲ. ರೈತರ ಪ್ರಮುಖ ಬೆಳೆಗಳಾದ ರಾಗಿ, ಕೊಬ್ಬರಿ. ಕಬ್ಬು, ಈರುಳ್ಳಿ ಇತ್ಯಾದಿಗಳಿಗೆ ಬೆಂಬಲ ಬೆಲೆ ಅನುಷ್ಠಾನ

ಗೊಂಡಿಲ್ಲ. ಬರಪೀಡಿತ ಪ್ರದೇಶಗಳಿಗೆ ಜಲಸಂಪನ್ಮೂಲ ಸೌಲಭ್ಯ ಕಲ್ಪಿಸಿ ರೈತಾಪಿ ವರ್ಗಕ್ಕೆ ರಕ್ಷಣೆ ನೀಡಬೇಕೆಂದೂ, ಪತ್ರಿಕೆಯಲ್ಲಿ ರೈತಾಭಿಪ್ರಾಯಗಳೂ ಪ್ರಕಟವಾಗಿವೆ (14.12.06). ಮೆಣಸಿನಕಾಯಿ ದರ ಕುಸಿತಕ್ಕೆ ಒಳಗಾಗಿರುವ ಕಾರಣ ಕ್ವಿಂಟಾಲ್‌ಗೆ 8 ಸಾವಿರ ರೂ.ಗಳ ಬೆಂಬಲ ಬೆಲೆ ನೀಡಬೇಕೆಂದು ವಿಧಾನಪರಿಷತ್ ವಿಪಕ್ಷ ನಾಯಕ ಶ್ರೀ **ಎಚ್.ಕೆ.ಪಾಟೀಲ್** ಸರ್ಕಾರವನ್ನು ಒತ್ತಾಯಿಸಿದ್ದಾರೆ. ಬೆಳೆಗಾರರು ಸಂಕಷ್ಟಕ್ಕೆ ಈಡಾಗಿರುವ ಕಾರಣ ಸರ್ಕಾರ ಮಾರುಕಟ್ಟೆ ಮಧ್ಯಪ್ರವೇಶ ಮಾಡಬೇಕು ಎಂದಿದ್ದಾರೆ. ಉತ್ತರ ಕರ್ನಾಟಕದ ಗದಗ, ಧಾರವಾಡ, ಹಾವೇರಿ, ಬಾಗಲಕೋಟೆ, ಬೆಳಗಾವಿ, ಕೊಪ್ಪಳದಲ್ಲಿ ವ್ಯಾಪಕ ಬೆಳೆ ಮೆಣಸಿನಕಾಯಿ ಆಗಿದ್ದು ದರ ಕುಸಿತದಿಂದಾಗಿ ರೈತರು ಶೋಷಣೆಗೆ ಒಳಗಾಗಿದ್ದಾರೆ, ಎಂಬುದು ಅವರ ದೂರು. ಕಡ್ಡಿ ತಳಿಯ ಮೆಣಸಿನ ಕಾಯಿ ದರ ಕಳೆದ ವರ್ಷ ಸೆಪ್ಟೆಂಬರ್‌ನಲ್ಲಿ ಕ್ವಿಂಟಾಲ್‌ಗೆ 5789 ರೂ. ಇದ್ದದ್ದು ಡಿಸೆಂಬರ್ ಕೊನೆಯ ವೇಳೆಗೆ 3889 ರೂ.ಗಳಿಗೆ, ಡಬ್ಬ ತಳಿಯ ಮೆಣಸಿನಕಾಯಿ ಕಿಂಟಾಲ್‌ಗೆ 6709 ರೂ. ಇದ್ದದ್ದು 2909 ರೂ. ಗೆ, ಗುಂಟೂರು ಮೆಣಸಿನಕಾಯಿ ದರ 5189 ರೂ. ನಿಂದ 3349 ರೂ. ಗಳಿಗೆ ಕುಸಿದುವು. ಮೆಣಸಿನಕಾಯಿ ಮಾರಾಟ ಮತ್ತು ಸಂಸ್ಕರಣೆಗೂ ಪ್ರತ್ಯೇಕ ಮಂಡಳಿ ಆರಂಭಿಸಬೇಕು ಎಂದು ಪತ್ರಿಕಾಗೋಷ್ಠಿಯಲ್ಲಿ ಸರ್ಕಾರವನ್ನು ಶ್ರೀ ಪಾಟೀಲ್ ಒತ್ತಾಯಿಸಿದ್ದಾರೆ (10.1.07). ಇದು ಬೆಳೆಗಳ ಬೆಲೆ ಕುಸಿತದ ಸಮಸ್ಯೆ, ಇಂದಿಗೂ ಮುಂದುವರೆದಿರುವ ಸಂಗತಿಯಾದರೂ ಆಯಾ ವರ್ತಮಾನದ ವಿವಿಧ ಪರಿಸ್ಥಿತಿಗಳನ್ನು ಅವಲಂಬಿಸುವುದೂ ಗಮನಕ್ಕೆ ಬರುತ್ತದೆ. ಅದು ಹವಾಮಾನ, ಬೇಡಿಕೆ, ಬೆಳೆಯ ಪ್ರಮಾಣ ಮಾರುಕಟ್ಟೆಯ ತಂತ್ರಗಳು ಮುಂತಾದ ಸಂಗತಿಗಳೊಡನೆ ತಳಕು ಹಾಕಿಕೊಂಡಿರುತ್ತದೆ.

**ಬೆಳೆ ಮಾರಾಟದ ಪರಂಪರೆ :** ಸ್ವಾತಂತ್ರ್ಯಪೂರ್ವದ ಕೃಷಿ ಉತ್ಪನ್ನಗಳ ಮಾರಾಟ ಪ್ರಾದೇಶಿಕ ಪದ್ಧತಿಯದಾಗಿತ್ತು. ರೈತರಿಗೆ ಅದೊಂದು ಪರಂಪರಾಗತ ರಾಜಪದ್ಧತಿ ಹಾಗೂ ಬ್ರಿಟಿಷ್ ಆದೇಶಪರವಾಗಿದ್ದುದಾಗಿತ್ತು. 1926 ರಲ್ಲಿ ಬ್ರಿಟಿಷ್ ಸರ್ಕಾರ ರಾಯಲ್ ಕೃಷಿ ಆಯೋಗವನ್ನು ನೇಮಿಸಿತು. ಅದು ಕೃಷಿ ಉತ್ಪನ್ನ ಮಾರಾಟ ವ್ಯವಸ್ಥೆಯಲ್ಲಿ ರೈತರಿಗೆ ಆಗುತ್ತಿದ್ದ ಶೋಷಣೆ ಕುರಿತು ಸಮಗ್ರ ಅಧ್ಯಯನ ನಡೆಸಿತು. ರೈತರ ಪ್ರಾತಿನಿಧ್ಯವಿರುವ ಮಾರುಕಟ್ಟೆಗಳನ್ನು ಸ್ಥಾಪಿಸುವಂತೆ ಶಿಫಾರಸು ಮಾಡಿತು. ಅದರಂತೆ ಕಾಯಿದೆಗಳು ರೂಪುಗೊಂಡು ರಾಜ್ಯದ ವಿವಿಧ ಭಾಗಗಳಲ್ಲಿ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗಳು ಜನ್ಮ ತಳೆದುವು. ಕರ್ನಾಟಕ

ಏಕೀಕರಣೋತ್ತರದಲ್ಲಿ ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ ಕಾಯಿದೆ 1966ರಲ್ಲಿ ಜಾರಿಗೆ ಬಂದು 1968ರಿಂದ ಅದರಡಿಯಲ್ಲಿ ಮಾರುಕಟ್ಟೆಗಳು ಕಾರ್ಯ ನಿರತವಾಗಿವೆ. ಹೀಗೆ ಉದಯವಾದ ಎ.ಪಿ.ಎಂ.ಸಿ ಗಳಿಂದಲೂ ರೈತರ ಶೋಷಣೆ ಪೂರ್ಣವಾಗಿ ನಿಲ್ಲಿಸಲಾಗಿಲ್ಲ. ಕೃಷಿ ಮಾರಾಟ ವ್ಯವಸ್ಥೆಯಲ್ಲಿರ ಬೇಕಾದ 'ವರ್ಗೀಕರಣ ಪದ್ಧತಿ'ಯ ತರಬೇತಿಯನ್ನು ಸಿಬ್ಬಂದಿಗಳು ಪಡೆದಿದ್ದರೂ ಯಾವ ಮಾರುಕಟ್ಟೆಯಲ್ಲಿಯೂ ಅದು ಜಾರಿಯಾಗದಿರುವುದು ಕಾಣುತ್ತದೆ. 'ಟೆಂಡರ್ ಪದ್ಧತಿ' ಕೆಲವೆಡೆ ಮಾತ್ರ ಚಾಲ್ತಿಯಲ್ಲಿದೆ. 'ತೂಕದ ಪದ್ಧತಿ' ಯ ರೀತ್ಯಾ ಲೈಸೆನ್ಸ್ ಪಡೆದವರು ಎ.ಪಿ.ಎಂ.ಸಿ ಯಲ್ಲಿ ಇದ್ದೂ ತೂಕವು ಬಹುತೇಕ ಮಾರುಕಟ್ಟೆಗಳಲ್ಲಿ ಅವರಿಂದ ನಡೆಯುತ್ತಿಲ್ಲ. ಎಷ್ಟೋ ಮಾರುಕಟ್ಟೆಗಳಲ್ಲಿ **ಬಿಳಿ ಚೀಟಿ** ವ್ಯವಹಾರವೇ ಚಾಲ್ತಿಯಲ್ಲಿದೆ. ಎಪಿಎಂಸಿ ಯಲ್ಲಿ ಮಾರುಕಟ್ಟೆ ಶುಲ್ಕವಸೂಲಿಯಲ್ಲಿ ಮುಖ್ಯವಾಗಿ ರೈತರ ಕುರಿತ ಕಾಳಜಿ ನಗಣ್ಯವಾಗಿದೆ. ಕಾಯಿದೆ ಕಲಂ 8ನ್ನು ಉಲ್ಲಂಘಿಸಿ ವ್ಯಾಪಾರ ನಡೆದರೂ ಅಧಿಕಾರಿಗಳು ಸರಿಯಾಗಿ ಗಮನಿಸುತ್ತಿಲ್ಲ. ವ್ಯಾಪಾರಿಗಳಿಂದ ರೈತರ ಶೋಷಣೆ ಆಗುತ್ತಿದೆ. ಉತ್ತಿ–ಬಿತ್ತಿ ಬೆಳೆದ ರೈತನ ಶ್ರಮ ಸಾವಿಗೆ ಶರಣೆನ್ನುವಂತಿದೆ. ಬಹುರಾಷ್ಟ್ರೀಯ ಕಂಪೆನಿಗಳು ಆವರಿಸುವ ಮುನ್ನ ನಮಗೆಲ್ಲ ಎಚ್ಚರಬೇಕು, ಸ್ಪರ್ಧಾ ಜಗತ್ತನ್ನು ಎದುರಿಸುವ ಛಲಬೇಕು. ನಮ್ಮ ರೈತರನ್ನು ರಕ್ಷಿಸುವ ಹೊಣೆ ನಮ್ಮೆಲ್ಲದರದಾಗಬೇಕು, ಬಹುರಾಷ್ಟ್ರೀಯ ಕಂಪೆನಿಗಳು ಈ ಕೆಲಸ ಮಾಡುವ ಬಗ್ಗೆ ನಂಬಿಕೆ ಎಲ್ಲಿದೆ? ಎಂಬ ಅಭಿಪ್ರಾಯವಿಟ್ಟು ಹಗರಿಬೊಮ್ಮನಹಳ್ಳಿ ರಾಜೇಂದ್ರಕುಮಾರ್ ಬಿರಾದರ್ ಸಮಸ್ಯೆಯ ಪೂರ್ವಾಪರವನ್ನು ವಿವೇಚಿಸಿದ್ದಾರೆ. (11.1.07) ಆದರೆ ಸರ್ಕಾರ ಪ್ರಯತ್ನ ಮಾಡಿಲ್ಲವೆನ್ನುವಂತಿಲ್ಲ. ಅನುಷ್ಠಾನಕ್ಕೆ ಇಳಿಯುವವರಲ್ಲಿ ಹಾಗೂ ಜನತೆಯಲ್ಲಿ, ರೈತ ಸಂಘಟನೆಗಳಲ್ಲಿ 'follow up' ಅಂದರೆ, ಚಾಲನಾಶೀಲತೆ ಸಾಗುತ್ತಲೇ ಇದ್ದಾಗ ಈ ಸಮಸ್ಯೆಗಳಿಗೆ ಒಂದು ಹಾದಿ ದೊರಕಬಹುದು. ಅಂತೇ ಅನುಭವದ ತೆಕ್ಕೆಯಲ್ಲಿ ಪರಿಹಾರ ಅರಳಿಕೊಂಡು ಹೋಗಬೇಕು.

ಇನ್ನೊಂದೆಡೆ ವಿಜಾಪುರ ಜಿಲ್ಲೆಯಲ್ಲಿ ಜೋಳದ ಬೆಳೆಯಂತೆ ಕಬ್ಬನ್ನು ಸಾಮಾನ್ಯ ಬೆಳೆಯಾಗಿ ನೀರಾವರಿ ಸೌಲಭ್ಯದ ಕಾರಣ ಬೆಳೆದು ಭಾರಿ ಪ್ರಮಾಣದ ಕಬ್ಬು ಕಟಾವಿಗೆ ಬಂದಿದೆ. ಇರುವ ಎರಡು ಕಾರ್ಖಾನೆಗಳಲ್ಲಿ ಇಡೀ ಜಿಲ್ಲೆಯ ಕಬ್ಬನ್ನು ನುರಿಸಲು ಸಾಧ್ಯವಾಗದು. ಈ ನಡುವೆ ಖಾಸಗಿ ಸ್ವಾಮ್ಯದ ಶಿವಕುಮಾರ ಸಕ್ಕರೆ ಕಾರ್ಖಾನೆ ಆಡಳಿತ ಮಂಡಳಿಯಲ್ಲಿ ಭಿನ್ನಭಿಪ್ರಾಯವಿದೆ; ಕಬ್ಬು ನುರಿಸುವ

ಕಾರ್ಯಕ್ಕೆ ಅಡಚಣೆ. ಇಂಡಿ ತಾ. ಮರಗೂರಿನ ಭೀಮಾಶಂಕರ ಕಾರ್ಖಾನೆ ಹಣದ ಕೊರತೆಯಿಂದಾಗಿ ನಿರ್ಮಾಣ ಪೂರ್ಣಗೊಂಡಿಲ್ಲ. ಮತ್ತಷ್ಟು ಸಕ್ಕರೆ ಕಾರ್ಖಾನೆಗಳ ನಿರ್ಮಾಣಕ್ಕೆ ನಿರ್ಧಾರವಾಗಿದ್ದರೂ ಕಾರ್ಯೋನ್ಮುಖವಾಗಿಲ್ಲ. ರೈತರು ಹೆಚ್ಚಿನ ದರ ನಿಗದಿಗೆ ಹೋರಾಟ ಮಾಡಿದರು. ಅಂತಾಗಿ ಸಕ್ಕರೆ ಕಾರ್ಖಾನೆಗಳು ಕಬ್ಬು ಅರೆಯಲು ಹಿಂದೇಟು ಹಾಕಿವೆ. ಸರ್ಕಾರ ರೈತರ ನೆರವಿಗೆ ಬಾರದಿದ್ದರೆ, ಅವರ ಪರಿಸ್ಥಿತಿ ಕೆಡುತ್ತದೆ ಎಂಬುದು ಬಿಜಾಪುರದ ಸುದ್ದಿ (11.1.07). ರೈತರ ಸಂಕಷ್ಟ ಹೀಗೆ ನಾನಾ ರೀತಿಯಲ್ಲಿ ಸಮಸ್ಯಾತ್ಮಕವಾಗಿ ವ್ಯಕ್ತವಾಗುವಲ್ಲಿ ಎಲ್ಲವೂ ಸರ್ಕಾರದ ಹೊಣೆ ಎಂದು ಕುಳಿತರೆ ಸಂಸ್ಥೆಯು ಸಹಕಾರ ತೋರದಿದ್ದರೆ ಸಾಮಾಜಿಕ ಜವಾಬ್ದಾರಿ ಹೊತ್ತಂತೆ ಆಗುವುದಿಲ್ಲ.

**ಕೃಷಿ ಕೆಲಸಕ್ಕೆ ಜನ ಕೊರತೆ :** ಕೆಲಸ ಕಾದಿದ್ದರೂ, ಜನರ ಬರವಿದೆ; ಅರ್ಥಾತ್ ಕೃಷಿ ಕಾರ್ಮಿಕರ ಬರವಿದೆ ಎನ್ನುವಂತಾಗಿದೆ. ಈಗ ಬಡತನದ ರೇಖೆಯ ಕೆಳಗಿರುವರು ಯಾರು? ಎಂಬ ಪ್ರಶ್ನೆ ಎತ್ತಿರುವ ಖ್ಯಾತಲೇಖಕ ಶ್ರೀ ಪೂರ್ಣ ಚಂದ್ರ ತೇಜಸ್ವಿ ಅವರ ಪ್ರಶ್ನೆಗೆ ಶ್ರೀ ಲಕ್ಷ್ಮಣ ಕೊಡಸೆ ಅವರು ಸಮಸ್ಯೆಗಳ ನೆಲೆಗಳನ್ನು ಸಮರ್ಥವಾಗಿ ಕೆದಕಿದ್ದಾರೆ (17.12.2006; ಪ್ರಜಾವಾಣಿ)– ಅಡಿಕೆ ಕೊಯ್ಲು, ಬತ್ತದ ಕೊಯ್ಲು ಇವಕ್ಕೆ ಮಲೆನಾಡಿನಲ್ಲಿ ಕೂಲಿ ಜನಬೇಕು. ಅಂದರೆ ಕೃಷಿ ಕಾರ್ಮಿಕರು ಬೇಕು. ಇದಕ್ಕೆ ಅವರು ಸಿಗುತ್ತಿಲ್ಲ ಅಥವಾ ಬರುತ್ತಿಲ್ಲ. ಬಡತನದ ರೇಖೆಗಿಂತ ಕೆಳಗಿನವರಿಗೆ ಸರ್ಕಾರ ಗುರುತಿಸಿ ಹಸಿರು ಕಾರ್ಡು ಹಂಚಿದ ಫಲ ಎಂದರೆ ಬಡತನ ನಿವಾರಣೆ ಆಯ್ತು ಎಂದು ಅರ್ಥವೆ? ಎಂಬ ಪ್ರಶ್ನೆ ಇದೆ. ಮೂರು ಹೆಕ್ಟೇರ್‌ಗಿಂತ ಕಡಿಮೆ ಭೂಮಿ ಇದ್ದು, ಫೋನು, ವಾಹನ, ಲಕ್ಷ ಮೀರಿ ಸಾಲ, 3 ಎಕರೆ ಮೀರಿ ನೀರಾವರಿ, ಸಾವಿರಕ್ಕಿಂತ ಹೆಚ್ಚು ಮಾಸಿಕ ವೇತನ, ಆದಾಯ ತೆರಿಗೆ ಪಾವತಿ, ಎಪಿಎಂಸಿ ನೋಂದಣಿ ವರ್ತಕತನ, 7.5 ಎಕರೆ ಮೀರಿ ಒಣಭೂಮಿ, 12.–15 ಸಾವಿರಕ್ಕೂ ಮೀರಿದ ವಾರ್ಷಿಕ 'ಆದಾಯ' ಇತ್ಯಾದಿಗಳನ್ನು ಸಾಮಾನ್ಯವಾಗಿ ಹೊಂದದೆ ಇರುವವರು ಬಡತನ ರೇಖೆಗಿಂತ ಕೆಳಗಿನ (ಬಿಲೋ ಪಾವರ್ಟಿ ಲೈನ್ : ಬಿಪಿಎಲ್) ವ್ಯಾಪ್ತಿಗೆ ಬರುತ್ತಾರೆ.

ಮಲೆನಾಡಿನ ಹಳ್ಳಿಗಳಲ್ಲಿ ಯುವಕರು ಕೃಷಿಗೆ ಮುಂದಾಗುತ್ತಿಲ್ಲ. ಹಿಂದೆ ಬರುತ್ತಿದ್ದ ಬಯಲುಸೀಮೆಯ ಜನವೂ ಬರುತ್ತಿಲ್ಲ. ಬೇಯಿಸಿ ಒಣಗಿಸಿದ ಅಡಿಕೆಯ ಸಂಸ್ಕರಣಕ್ಕೆ ಯಂತ್ರಕ್ಕೆ ಆತುಕೊಳ್ಳುವ ಪರಿಸ್ಥಿತಿ ಇಲ್ಲ; ಹಿರಿಯ ರೈತ ನಾಯಕ ಕಡಿದಾಳು ಶಾಮಣ್ಣ ಅಡಿಕೆ ಸುಲಿತಕ್ಕೆ ಜನರಿಲ್ಲದೆ ಸಿಕ್ಕವರನ್ನೆ ಓಲೈಸಿ ಕೆಲಸ

ಮಾಡಿಸಿಕೊಳ್ಳಬೇಕಿದೆ ಎನ್ನುತ್ತಾರೆ. ಹಳ್ಳಿಗಳಲ್ಲಿ ಖಾಯಂ ಇದ್ದ ಕೃಷಿ ಕಾರ್ಮಿಕರು ಹಂಚಿ ಹೋಗಿ ಬತ್ತದ ಕುಯ್ಲು ಕೆಲಸಕ್ಕೂ ಪರದಾಟವಾಗಿದೆ. ಸಣ್ಣ ಹಿಡುವಳಿದಾರರೇನೋ ಕೊಯ್ಲು, ಬಿತ್ತನೆ ತಾವೇ ಮಾಡಿಕೊಳ್ಳುವ ರೂಢಿ ಮಾಡಿಕೊಂಡಿದ್ದಾರೆ. ಆದರೆ 5–6 ಎಕರೆ ಗದ್ದೆ, 2 ಎಕರೆ ತೋಟವಿದ್ದವರು, ಕೇಳಿದಷ್ಟು ಕೊಟ್ಟು, ಮಾಡಿದಷ್ಟು ಕೆಲಸಕ್ಕೆ ಒಪ್ಪಿ, ಮುಂಗಡ ಹಣ ಕೊಟ್ಟು ಕೆಲಸ ಮಾಡಿಸಿಕೊಳ್ಳುವುದಾಗಿದೆ. ಹಿಂದಿನಂತೆ ಹೊತ್ತು ಮೂಡುವ ಮೊದಲೇ ಕೆಲಸದ ಆರಂಭವಿಲ್ಲದೆ, ಬೆಳಗ್ಗೆ 9 ರಿಂದ ಆರಂಭಿಸಿ ಸಂಜೆ 5ರವರೆಗಷ್ಟೆ ಕೆಲಸ. ಸಂಜೆಯ ಕುಡಿತಕ್ಕೂ ಮುಂಗಡ ದುಡ್ಡು ಕೊಡಬೇಕು. ಮಳೆ ಆಶ್ರಿತ ಬೇಸಾಯ, ಮಲೆನಾಡಿನಲ್ಲಿ ಹೆಚ್ಚು. ಬತ್ತದ ನಾಟಿ, ಕುಯ್ಲು ಸಂದರ್ಭದಲ್ಲಿ ಪರಸ್ಪರ ನೆರವಾಗಿ ಕೆಲಸ ಮುಗಿಸುವ ಸಹಕಾರ ಪದ್ಧತಿ ಕೆಲವೆಡೆ ಇದೆ. (ಕೊಡಗಿನಲ್ಲಿ ಪರಸ್ಪರ ನೆರವಾಗುವ ಮುಯ್ಯಾಳು ಪದ್ಧತಿ ಗದ್ದೆ ಕೆಲಸಗಳಲ್ಲೆಲ್ಲ ಹಿಂದಿನಿಂದ ಬಂದಂತೆ ಈಗಲೂ ಇದೆ)

ಮಲೆನಾಡಿನ ಗದ್ದೆ ತೋಟದ ಕೆಲಸಗಾರರು, ಸರ್ಕಾರ ನಿಗದಿ ಮಾಡಿದ ಕನಿಷ್ಠ ಕೂಲಿಗೆ ಬರುವುದಿಲ್ಲ. ದಿನಕ್ಕೆ ಇನ್ನೂರಕ್ಕಿಂತಲೂ ಹೆಚ್ಚು ಕೊಟ್ಟರೆ ಮಾತ್ರ ಅವರು ಲಭ್ಯ. ಅಡಿಕೆ ಕೊನೆ ಇಳಿಸುವವರ ಸಂಖ್ಯೆ ದಿನ ದಿನಕ್ಕೆ ಕಡಿಮೆ ಆಗುತ್ತಿದೆ. ದುಡಿಮೆಯ ಬದುಕು ತಮ್ಮ ಕಾಲಕ್ಕೆ ಸಾಕು ಎಂಬ ಇಂದಿನ ಅನೇಕ ರೈತರ ಮನೋಧರ್ಮದ ಕಾರಣ, ರೈತರ ಮಕ್ಕಳು ಶ್ರಮಸಹಿಷ್ಣುಗಳಾಗುತ್ತಿಲ್ಲ. ನಗರಕ್ಕೆ ಹೋಗಿ ಕೆಲಸ ಸಿಗದೆ ಹಿಂದಿರುಗಿ ಬಂದ ಅಂಥವರು ಕೃಷಿ ಕಾರ್ಮಿಕರನ್ನೆ ಹೆಚ್ಚು ಅವಲಂಬಿಸುವ ಕಾರಣ, ಕೃಷಿ ಕೂಲಿಹೆಚ್ಚಿದೆ. ಇನ್ನು ಉತ್ತರ ಕರ್ನಾಟಕದಂಥ ಬಯಲು ಸೀಮೆಯ ಜನ ದೊಡ್ಡ ನಗರಗಳಿಗೆ ವಲಸೆ ಹೋಗಿ ನಗರಾಕರ್ಷಣೆಗೆ ಬಿದ್ದು ಕೊಳೆಗೇರಿವಾಸಿಗಳಾಗಿದ್ದಾರೆ. ಕಬ್ಬು, ಕೆಂಪು ಮೆಣಸಿನಕಾಯಿ ತೊಗರಿ ಜೋಳ ಕಡಲೆ ಗೋದಿ ಕೃಷಿಗೆ ಜನ ಸಿಗುವುದಿಲ್ಲವೆಂಬುದು ಅಲ್ಲಿನ ರೈತರ ಸಮಸ್ಯೆ ಆಗಿದೆ. ಒಳ್ಳೆ ರೇಟು ಸಿಗುವ ಗುತ್ತಿಗೆ ಕೆಲಸಕ್ಕೆ ನಿಲ್ಲುವ ಕೃಷಿ ಕಾರ್ಮಿಕರು ದಿನಗೂಲಿ ಕೆಲಸಕ್ಕೆ ಸಿಗುವುದು ಕಷ್ಟವಾಗಿದೆ. ದುಡಿಮೆ ಇಲ್ಲದ ಜೀವನ ಶೈಲಿಗೆ ಒಗ್ಗಿಕೊಂಡ, ಶ್ರೀಮಂತರೂ ಅಲ್ಲದ, ಹಳ್ಳಿಗಾಡಿನ ಅನೇಕ ಜನರೂ ಇಂದು ಮಧುಮೇಹ, ಹೃದ್ರೋಗಗಳಿಗೂ ಸಿಲುಕಿ ರಕ್ತದೊತ್ತಡ, ಬೊಜ್ಜು, ಕ್ಯಾನ್ಸರ್ ಪೀಡಿತರಾಗುತ್ತಿದ್ದಾರೆ. ಬ್ಯಾಂಕು, ಸೊಸೈಟಿ ಸಾಲ, ಸುಸ್ತಿ ಬಡ್ಡಿ ಅವರ ದೈನಂದಿನ ಸಂಗಾತಿಗಳಾಗಿವೆ. ರೈತರು ಕೈಯಾರೆ ತಂದುಕೊಂಡ ಅಪಾಯವಿದು. ಇದಕ್ಕೆಲ್ಲ ವಿದಾಯಬೇಕು. ರೈತರಿಗೆ ಅರಿವು ಮೂಡಿಸುವಂಥ ಪ್ರಯತ್ನಗಳು ಬೇಕು. ಪ್ರಗತಿಯ

ಆಸೆ ನಗರಕ್ಕೆ ಸೀಮಿತವಾಗಬಾರದು. ಕೃಷಿಯ ವಿಧಾನಗಳ ಹೊಸ ಆವಿಷ್ಕಾರಗಳ ಅಳವಡಿಕೆ, ಕೃಷಿ ಬದುಕಿಗೆ ತೋರಬೇಕಾದ ಮೌಲ್ಯ, ಶ್ರಮ ಗೌರವಗಳನ್ನು ಕಟ್ಟಿಕೊಡದೆ ಹೋದರೆ ಅದು ಸಾಮಾಜಿಕ ದುರಂತ. ಇದನ್ನು ಜನತೆ ಹಾಗೂ ಸರ್ಕಾರ ಗಮನಿಸಬೇಕು. ದುಡಿಮೆಯ ಕೃಷಿಕರೂ ಆತ್ಮವಿಶ್ವಾಸದ ದಾಷ್ಟೀಕವನ್ನು ತಮ್ಮ ತಮ್ಮ ವೃತ್ತಿಗಳಲ್ಲಿ ತೋರಬೇಕು. ಆಗ ಅಸಿಯಾಗಲಿ, ಕೃಷಿಯಾಗಲಿ, 'ಕಾಯಕಮೌಲ್ಯ' ಪಡೆಯುತ್ತದೆ. ಅಲ್ಲದೆ ಬಿ.ಇ, ಬಿ.ಎಸ್ಸಿ ಓದಿದವರೂ ತೋಟಗಳಲ್ಲಿ ಹಣ್ಣುಗಳನ್ನು ಬೆಳೆಯುತ್ತಿರುವುದು, ಬಿ.ಎಸ್ಸಿ (ಎಜಿ) ಮಾಡಿರುವವರೂ ತೋಟ, ಹೊಲ, ಗದ್ದೆಗೆ ಇಳಿದು ಕೃಷಿ ಮಾಡಿ, ಪ್ರಯೋಗಗಳನ್ನು ಮಾಡಿ ಹೊಸ ಆವಿಷ್ಕಾರಗಳನ್ನು ತಮ್ಮ ಗ್ರಾಮಗಳಲ್ಲಿ ನೆಲೆಸಿ ಮಾಡಿರುವುದೂ ವಾರ್ತೆಗಳಿಂದ ತಿಳಿದು ಬರುತ್ತದೆ. ಆದರೆ ಇದು ವ್ಯಾಪಕವಾದಾಗ, ಬಹುಜನ ಕ್ರಿಯೆಯಾದಾಗ ಭಾರತೀಯ ಕೃಷಿ ತನ್ನ ಮೌಲಿಕ ಸ್ಥಾನವನ್ನು ಉಳಿಸಿಕೊಂಡೀತು ಎನ್ನಬೇಕು.

**ದಾಸ್ತಾನು ಸೌಲಭ್ಯ ಮತ್ತು ಸ್ವಚ್ಛತೆ ನಿರ್ವಹಣೆ :** ಸ್ಥಳಾಭಾವದ ಕಾರಣವನ್ನು ಮುಂದಿಟ್ಟು ಹುಬ್ಬಳ್ಳಿಯ ಬೆಂಬಲ ಬೆಲೆಯ ಖರೀದಿ ಕೇಂದ್ರವನ್ನು ತಾತ್ಕಾಲಿಕವಾಗಿ ನವೆಂಬರ್‌ನಲ್ಲಿ ಮುಚ್ಚಲಾಗಿತ್ತು. ಎಪಿಎಂಸಿ, ಆವರಣದಲ್ಲಿ ರೈತರು ಅಪಾರ ಪ್ರಮಾಣದಲ್ಲಿ ಈರುಳ್ಳಿ ದಾಸ್ತಾನು ಇಟ್ಟಿದ್ದರು. ನವೆಂಬರ್ 24ನೇ ತಾ. ಶುಕ್ರವಾರ, 27ನೇ ತಾ. ಸೋಮವಾರ ರಾತ್ರಿ ಭಾರಿ ಮಳೆ ಸುರಿಯಿತು. ಆವರಣದಲ್ಲಿಟ್ಟಿದ್ದ ಈರುಳ್ಳಿ ಮೊಳಕೆ ಒಡೆದು ಮೂಟೆಯಿಂದ ಹೊರಗೆ ಅವು ಚಾಚಿಕೊಂಡವು. ಆವರಣದಲ್ಲಿದ್ದ ಸುಮಾರು 2 ಲಕ್ಷ ಮೆಟ್ರಿಕ್ ಟನ್ ಈರುಳ್ಳಿ ಗತಿ ಹೀಗೆಯೇ ಆಗಿ, ಕೊಳೆತುಹೋಯಿತು. ಎಪಿಎಂಸಿಗೆ ತಂದಿಟ್ಟ ರೈತರ ಬದುಕು ಹೀಗೆ ಬೀದಿಪಾಲು. ಈರುಳ್ಳಿ ಬೆಲೆ ಕುಸಿದಾಗ ರೈತರು ಹೋರಾಟ ಮಾಡಿದಾಗ ಸರ್ಕಾರ ಅಣ್ಣಿಗೇರಿ, ಮೊರಬದಲ್ಲಿ ಖರೀದಿ ಕೇಂದ್ರ ತೆರೆದು 9.25 ಲಕ್ಷ ಮೆಟ್ರಿಕ್ ಟನ್ ಖರೀದಿಸಿತು. ಖರೀದಿಸಿದ ಮೂಟೆಗಳನ್ನು ದಾಸ್ತಾನು ಮಾಡಬೇಕಾದ ಸಮಸ್ಯೆ ಆಯಿತು. ಮಾರುಕಟ್ಟೆಗೆ ಬಂದಿಲ್ಲದಿರುವ ಈರುಳ್ಳಿ ಮತ್ತೂ 5 ಲಕ್ಷ ಟನ್ ಇದೆ ಎನ್ನಲಾಗಿತ್ತು. ಈ ದಾಸ್ತಾನು ಸಮಸ್ಯೆ ಈರುಳ್ಳಿ ಮತ್ತು ಆಲೂಗೆಡ್ಡೆಗೆ ಕಳೆದ 10 ವರ್ಷಗಳಿಂದ ಇದ್ದು ಶಾಶ್ವತ ಪರಿಹಾರ ಒದಗಿಲ್ಲ. ಶೈತ್ಯಾಗಾರದ ಕೊರತೆಯಿಂದಾಗಿ ಈ ಸಮಸ್ಯೆ ಬೆಳೆದು ಬಂದಿದೆ. ಹುಬ್ಬಳ್ಳಿ ಎಪಿಎಂಸಿ ಯಲ್ಲಿ ಬೃಹತ್ ಶೈತ್ಯಾಗಾರವನ್ನು ಸ್ಥಾಪಿಸುವ ಬಗ್ಗೆ ಹಿಂದಿನ ಸರ್ಕಾರ ಘೋಷಿಸಿತ್ತು. ಆದರೆ ಅದು ಇನ್ನೂ ಕಾರ್ಯಗತವಾಗದೇ ರೈತರ ಕಣ್ಣೀರು ಹರಿಯುತ್ತಲೇ ಇದೆ ಎಂಬ ಅಭಿಪ್ರಾಯ ಶ್ರೀ ಮಲ್ಲಿಕಾರ್ಜುನ

ಸಿದ್ದಣ್ಣನವರ ಅವರದು (29.11.06). ಇದರಿಂದ ದಾಸ್ತಾನು ಸೌಕರ್ಯ, ಶೈತ್ಯಾಗಾರ ಸೌಕರ್ಯವಿಲ್ಲದೆ ಮೂಲಭೂತ ಅಗತ್ಯಗಳನ್ನು ಒದಗಿಸದಿದ್ದರೆ ರೈತರು ಶ್ರಮವಹಿಸಿ ಬೆಳೆದ ಬೆಳೆಯನ್ನು ಸೂಕ್ತವಾಗಿ ಬಳಕೆಗೆ ಬಿಡುವುದೇ ಬೃಹತ್ ಸಮಸ್ಯೆಯಾಗಿ ಕಾಡುತ್ತದೆ. ಹೀಗೆಯೇ ಎಕರೆಗೆ 35–40 ಸಾವಿರ ಖರ್ಚು ತಗಲುವ ಆಲೂಗೆಡ್ಡೆ 20–25 ಸಾವಿರ ಎಕರೆ ಪ್ರದೇಶದಲ್ಲಿ ಕೋಲಾರದ ರೈತರು ಬೆಳೆದರೂ ಅಂಗಮಾರಿ ರೋಗವು ಆ ಬೆಳೆಯನ್ನು ನಾಶಮಾಡಿದೆ. ಈ ಬಗ್ಗೆ ರೈತರಿಗೆ ತಾಂತ್ರಿಕ ನೆರವನ್ನು ಸರ್ಕಾರ ನೀಡಿ ಬೆಳೆ ರಕ್ಷಿಸಬೇಕಾಗಿತ್ತು ಎಂಬ ರೈತ ನಾಯಕರ ಆರೋಪವು ವರದಿ ಗೊಂಡಿದೆ (2.1.2007). ಅಷ್ಟೇ ಅಲ್ಲ ಶೇ. 10 ಕಮಿಷನ್ ಕೊಡುವ ರೈತರಿಗೆ ಎಪಿಎಂಸಿ ಮಾರುಕಟ್ಟೆಯಲ್ಲಿ ಸ್ವಚ್ಛತೆ ಕಾಪಾಡದೆ, ರಾತ್ರಿ ರೈತರಿಗೆ ಮಲಗಲೂ ಸೂಕ್ತ ಸೌಲಭ್ಯವಿಲ್ಲದೆ, ಕೊಳೆತು ನಾರುವಂಥ ಪ್ರದೇಶದ ಸೊಳ್ಳೆಗಳ ಕಾಟದಿಂದ ದುಸ್ಥಿತಿ ಒದಗಿರುವುದನ್ನು, ಸರ್ಕಾರ ಹಾಗು ಮಂಡಿ ಮಾಲಿಕರು ಲಕ್ಷಿಸದೆ ಸಾಗಿರುವ ಬಗ್ಗೆ ರೈತರ ಆರೋಪವು ಯಶವಂತಪುರದ ಮಾರುಕಟ್ಟೆಯ ಮೇಲಿದೆ.(14.1.07)

***ಮಂಥನ:*** *ರೈತ ಸಮಸ್ಯೆಯ ಆಯಾಮಗಳು ಹೀಗೆ ರೈತರ ಬಾಳುವೆಯಲ್ಲಿ ಕಾಣಿಸಿಕೊಳ್ಳುವ ಬಗೆಗಳಾಗಿ ವಿವಿಧ ತೆರನಾಗಿವೆ. ರೈತರು ಬಳಸುವ ಕೃಷಿ ಪರಿಕರಗಳಿಂದ ಹಿಡಿದು ಬೆಳೆದ ಬೆಳೆಯನ್ನು ಮಾರಿ ಜೀವನ ನಿರ್ವಹಣೆಗೆ ಅನುವು ಮಾಡಿಕೊಳ್ಳುತ್ತಾರೆ. ಇಲ್ಲಿ ದೇಶೀಯವಿರಬಹುದು. ಜಾಗತಿಕ ತಾಪಮಾನಕ್ಕೆ ಕಾರಣರಾದ ವಿದೇಶಿಯ ವಾದ ಅಭಿವೃದ್ಧಿ ಸಿದ್ಧಿ ರಾಷ್ಟ್ರಗಳಿರಬಹುದು; ಕುಲಾಂತರಿ ತಂತ್ರಜ್ಞಾನದ ಗುತ್ತಿಗೆ ಹಿಡಿದ ವಿದೇಶಿ ಕಂಪನಿಗಳಿರಬಹುದು. ಉತ್ಪನ್ನಗಳ ಮಾರಾಟ, ಸಾಲ, ಕಾರ್ಖಾನೆ ಹಣ ಬಾಕಿ, ಬೆಳೆಗೆ ಬೀಳುವ ಕೀಟಹಾವಳಿ ರೋಗಗಳು, ಬೆಲೆಕುಸಿತ, ನೀರಿನ ವಿಷಯ ಬೆಳೆ ವಿಮೆ, ಹೊಸಬೆಳೆ (ವೆನಿಲ್ಲಾ ಕೃಷಿ) ಬರಗಾಲ ಹಸಿರುಮನೆ ಅನಿಲ, ಕೃಷಿ ಕೂಲಿಗಳ ಅಭಾವ, ದಾಸ್ತಾನು ಸೌಲಭ್ಯ ಕೊರತೆ ಇತ್ಯಾದಿ ಸಂದರ್ಭಗಳು ರೈತನಿಗೆ ಪ್ರತಿ ಹಂತದಲ್ಲಿಯೂ ಒದಗುವ ಸಂಕಷ್ಟಗಳು, ಎಷ್ಟೇ ದೃಢ ಮನಸ್ಸಿದ್ದರೂ, ಆತಂಕಗಳು ಅವನ ವಿಶ್ವಾಸವನ್ನು ಹಾರಿಸುವ ಸಂಗತಿಗಳಿಗೆ ಕಾರಣವಾಗುತ್ತವೆ. ಇಂದಿನ ಸೂಕ್ಷ್ಮ ಮನಸ್ಸಿನ ಪ್ರೇರಣೆಗಳೂ ಅವನಿಗೂ ಒದಗಿ, ತನ್ನ ಜೀವವನ್ನೆ ಒತ್ತೆ ಇಡುವಂಥ ಸ್ಥಿತಿಗೆ ಸಾಗಿದ್ದಾನೆ. ಇಲ್ಲಿಯೇ ಸಮಾಜ, ಸರ್ಕಾರ ಅವನ ಜೀವನಕ್ಕೆ ಇಂಬುಗೊಡಬೇಕು; ದಿಕ್ಕು ತೋರಿಸಬೇಕು.*

# ಕರ್ನಾಟಕ ರೈತ ಚಳುವಳಿಗಳು–ಸತ್ಯಾಗ್ರಹಗಳು

## ಸರ್ವಸಂಪುಟ ಅಧ್ಯಾಯ ವಿಷಯ ಸೂಚಿ ಮತ್ತು ಚಳುವಳಿ ಸೂಚಿ

## ಸಂಪುಟ ೧ : ಪ್ರಾಚೀನ ಮತ್ತು ಕರ್ನಾಟಕ ಏಕೀಕರಣ ಪೂರ್ವ ರೈತ ಚಳುವಳಿಗಳು

## ಅಧ್ಯಾಯ ೧ : ಚಾರಿತ್ರಿಕ–ಸಾಂಸ್ಕೃತಿಕ ಹಿನ್ನೋಟ

## ಅಧ್ಯಾಯ ೨ : ಸ್ವಾತಂತ್ರ್ಯಪೂರ್ವಕಾಲದ ರಾಜ್ಯ ರೈತ ಚಳುವಳಿಗಳು-ಸತ್ಯಾಗ್ರಹಗಳು

**ಅಧ್ಯಾಯ ೩ : ಸ್ವಾತಂತ್ರ್ಯೋತ್ತರ ಕಾಲದ ರಾಜ್ಯ ರೈತ ಚಳುವಳಿಗಳು**

## ಸಂಪುಟ: ೨

## ಏಕೀಕರಣೋತ್ತರ–ಸಹಸ್ರಮಾನಪೂರ್ವ ರೈತ ಚಳುವಳಿಗಳು

### ಅಧ್ಯಾಯ ೪ : ಕರ್ನಾಟಕ ಏಕೀಕರಣೋತ್ತರ ರೈತ ಚಳುವಳಿಗಳು

## ಅಧ್ಯಾಯ ೫ : ಸಹಸ್ರಮಾನ ಸಂದರ್ಭದ ರೈತ ಚಳುವಳಿಗಳು ಮತ್ತು ಅನ್ವಯಿಕ ವಿಷಯಗಳು

### ಹನಿ ಹನಿ ಚಳುವಳಿಗಳು:

## ಸಂಪುಟ: ೩

## ಸಹಸ್ರಮಾನಪೂರಕ ವಿವಿಧ ರೈತ ಚಳುವಳಿಗಳು

### ಅಧ್ಯಾಯ ೬ : ಸಹಸ್ರಮಾನಪೂರಕ ವಿವಿಧ ರೈತ ಚಳುವಳಿಯ ಸಂಬಂಧ ವಿಷಯಗಳು

## ಅಧ್ಯಾಯ ೮ : ಬೆಳೆಧಾರಣೆ ಕುಸಿತಗಳು (೧೯೯೭–೨೦೦೧)

# ಸಂಪುಟ: ೪

# ರೈತ ಚಳವಳಿಯ ಆಧುನಿಕ ಮಜಲುಗಳು ಮತ್ತು ರೈತರ ಸಮಸ್ಯೆಗಳು

## ಅಧ್ಯಾಯ ೧೦ : ವಿಶ್ವವ್ಯಾಪಾರ ಸಂಘಟನೆ : ಪೂರಕ ವಿಷಯಗಳು



## ಅಧ್ಯಾಯ ೧೧ : ಕುಲಾಂತರಿ ಬೆಳೆಗಳು (ಬಿಟಿ ತಳಿಗಳು)



## ಅಧ್ಯಾಯ ೧೨ : ನೀರಾ ಚಳವಳಿ

## ಅಧ್ಯಾಯ ೧೪ : ರೈತರ ಜಲ ಹಾಗೂ ಆರ್ಥಿಕ ಸಮಸ್ಯೆಗಳು



## ಅಧ್ಯಾಯ ೧೫ : ಬೆಳೆ ಹಾನಿ ಸಮಸ್ಯೆಗಳು

**ಅಧ್ಯಾಯ ೧೬: ಬೆಳೆಯ ಬೆಲೆ ಕುಸಿತದ ಸಮಸ್ಯೆಗಳು**

# ಕರ್ನಾಟಕ ರೈತ ಚಳವಳಿ–ಸತ್ಯಾಗ್ರಹಗಳು

## ಸಂಪುಟ – ೫

## ಕಾವೇರಿ: ಜಲವಿವಾದ–ಐತೀರ್ಪು–ಚಳವಳಿಗಳು

# ಕರ್ನಾಟಕ ರೈತ ಚಳವಳಿ–ಸತ್ಯಾಗ್ರಹಗಳು

## ಸಂಪುಟ–೬

## ರೈತ ಪ್ರತಿಭಟನೆಯ ಆಧುನಿಕ ಮಾದರಿಗಳು; ಸಾಂತ್ವನ ಪ್ರಕ್ರಿಯೆಗಳು

## ಸಂಪುಟ : 4

# ರೈತ ಚಳವಳಿಯ ಆಧುನಿಕ ಮಜಲುಗಳು ಮತ್ತು ರೈತರ ಸಮಸ್ಯೆಗಳು

## ಶಬ್ದ ಮತ್ತು ಶಬ್ದ ಸಮುಚ್ಚಯ ಸೂಚಿ

(ದ)



(ನ)



(ಪ)



(ಫ)



(ಬ)

(ಭ)



(ಮ)



(ರ)

(ಲ)



(ವ)



(ಶ)



(ಸ)



(ಹ)

# ಪ್ರತಿಭಾವಂತ ಸಂಸದೀಯ ಪಟು ಪುಸ್ತಕ ಮಾಲಿಕೆ

## ಪ್ರಕಟಗೊಂಡ ಪುಸ್ತಕಗಳು

| ಕ್ರ.ಸಂ. | ಪುಸ್ತಕದ ಹೆಸರು | ಲೇಖಕರ ಹೆಸರು | ದರ |
|---|---|---|---|
| 1. | ಕೆ. ಹನುಮಂತಯ್ಯ | ಪ್ರೊ॥ ಎನ್.ಬಿ. ಪಂಗಣ್ಣಾಯ್ಯ ಹಾಗೂ ಇತರರು | 20–00 |
| 2. | ಎಸ್. ನಿಜಲಿಂಗಪ್ಪ | ಡಾ॥ ಸಂದೀಪ್ ಶಾಸ್ತ್ರಿ | 15–00 |
| 3. | ಶಾಂತವೇರಿ ಗೋಪಾಲಗೌಡ | ಪ್ರೊ॥ ಎನ್.ಬಿ. ಪಂಗಣ್ಣಾಯ್ಯ | 15–00 |
| 4. | ವೈಕುಂಠ ಬಾಳಿಗಾ | ಡಾ॥ ಪಿ. ಜೀವನ್ ಕುಮಾರ್ | 20–00 |
| 5. | ವೀರೇಂದ್ರ ಪಾಟೀಲ್ | ಡಾ॥ ಎಸ್.ಹೆಚ್. ಕವಂಟೆ ಹಾಗೂ ಇತರರು | 20–00 |
| 6. | ಕಡಿದಾಳ್ ಮಂಜಪ್ಪ | ಡಾ॥ ಎಸ್.ಹೆಚ್. ಕವಂಟೆ ಹಾಗೂ ಇತರರು | 15–00 |
| 7. | ಜಿ.ವಿ. ಹಳ್ಳಿಕೇರಿ | ಡಾ. ಆರ್.ಎಂ.ಎಲ್. ಪಾಟೀಲ್ | 15–00 |
| 8. | ಕೆ.ಎಸ್. ನಾಗರತ್ನಮ್ಮ | ಪ್ರೊ॥ ಎಸ್.ಬಿ. ಪಂಗಣ್ಣಾಯ್ಯ ಹಾಗೂ ಇತರರು | 15–00 |
| 9. | ಡಿ. ದೇವರಾಜ ಅರಸು | ಜೆ.ಎಸ್. ಸದಾನಂದ | 15–00 |
| 10. | ಕೆ.ಟಿ. ಭಾಷ್ಯಂ | ಡಾ. ವಿಘ್ನೇಶ್ ಎನ್. ಭಟ್ | 15–00 |
| 11. | ಕೆ. ಪುಟ್ಟಸ್ವಾಮಿ | ಜಿ. ದಕ್ಷಿಣಾ ಮೂರ್ತಿ | 15–00 |
| 12. | ಟಿ. ಸಿದ್ದಲಿಂಗಯ್ಯ | ಜಿ. ದಕ್ಷಿಣಾ ಮೂರ್ತಿ | 20–00 |
| 13. | ಜಗಳೂರು ಇಮಾಂ | ಜಿ.ಎಸ್. ಸದಾನಂದ | 15–00 |

| | | | |
|---|---|---|---|
| 14. | ಕೆ.ಸಿ. ರೆಡ್ಡಿ | ಡಾ. ಸಂಧ್ಯಾರೆಡ್ಡಿ | 20–00 |
| 15. | ಬಿ.ವಿ. ಕಕ್ಕಿಲ್ಲಾಯ | ಎಂ.ಕೆ. ಭಂಡಿ | 20–00 |
| 16. | ಹೆಚ್.ಎಂ. ಚೆನ್ನಬಸಪ್ಪ | ಪ್ರೊ॥ ಬಿ.ಎನ್. ಚಂದ್ರಯ್ಯ | 20–00 |
| 17. | ಬಿ. ರಾಚಯ್ಯ | ನಂಜಯ್ಯ ಹೊಂಗನೂರ್ | 20–00 |
| 18. | ಎಂ. ನಾಗಪ್ಪ | ಡಾ. ಎಂ.ಎಸ್. ಪಾಟೀಲ್ | 15–00 |
| 19. | ಜೆ.ಬಿ. ಮಲ್ಲಾರಾಧ್ಯ | ಡಾ. ಹೆಚ್.ಎಂ.ಪಂಚಾಕ್ಷರಯ್ಯ | 15–00 |
| 20. | ಗಂಗಾಧರ್ ನಮೋಶಿ | ಡಾ. ಕವಂಟೆ ಹಾಗೂ ಇತರರು | 15–00 |
| 21. | ಬಿ.ಡಿ. ಜತ್ತಿ | ಕೃಷ್ಣ ಕೊಲ್ಹಾರ ಕುಲಕರ್ಣಿ | 15–00 |
| 22. | ಆರ್. ಗುಂಡೂರಾವ್ | ಈಶ್ವರ ದೈತೋಟ | 20–00 |
| 23. | ಕೆ.ಎಚ್. ಪಾಟೀಲ್ | ಎಂ.ಕೆ. ಭಂಡಿ | 15–00 |
| 24. | ಅಜೀಜ್ ಸೇಠ್ | ಹೆಚ್.ಕೆ. ಬಾಲಸೂರಿ | 15–00 |
| 25. | ಸಿ.ಎಂ. ಆರ್ಮುಗಂ | ಹೆಚ್.ಕೆ. ಬಾಲಸೂರಿ | 15–00 |
| 26. | ಜೆ.ಹೆಚ್. ಪಟೇಲ್ | ಶೇಷಚಂದ್ರಿಕ | 30–00 |
| 27. | ಬಿ.ಎಲ್. ಸುಬ್ಬಮ್ಮ | ಡಾ. ಡಿ.ಎಸ್. ಜಯಪ್ಪಗೌಡ | 15–00 |
| 28. | ಟಿ.ಆರ್. ಶಾಮಣ್ಣ | ಎಲ್.ಎನ್. ಮುಕುಂದರಾಜ್ | 20–00 |
| 29. | ಎಸ್.ಡಿ. ಗಾಂವಕರ್ | ಮೋಹನ್ ವೆರ್ಣೇಕರ್ | 20–00 |
| 30. | ಎಂ.ಪಿ.ಎಲ್. ಶಾಸ್ತ್ರಿ | ಹಾರೋಗದ್ದೆ ಉಷಾ ರಮೇಶ್ ನಾಯಕ್ | 20–00 |
| 31. | ಎಸ್. ಶಿವಪ್ಪ | ಕೂಡ್ಲಿಗೆರೆ ಮಲ್ಲಿಕಾರ್ಜುನ | 30–00 |
| 32. | ಕಾಗೋಡು ಚಳವಳಿ | ಕೂಡ್ಲಿಗೆರೆ ಮಲ್ಲಿಕಾರ್ಜುನ | 15–00 |
| 33. | ಕೆ.ವಿ. ಶಂಕರಗೌಡ | ಜಗದೀಶ ಕೊಪ್ಪ | 20–00 |
| 34. | ಟಿ.ಎನ್. ನರಸಿಂಹಮೂರ್ತಿ | ಕೆ.ಜೆ. ಸುರೇಶ್ | 25–00 |
| 35. | ಎಸ್.ಆರ್. ಕಂಠಿ | ಮನು ಬಳಿಗಾರ್ | 30–00 |

| | | | |
|---|---|---|---|
| 36. | ಎಸ್.ಸಿ. ಮಲ್ಲಯ್ಯ | ಡಾ. ಟಿ.ಸಿ. ಪೂರ್ಣಿಮ | 20–00 |
| 37. | ಅಬ್ದುಲ್ ನಜೀರ್‌ಸಾಬ್ | ಮನು ಬಳಿಗಾರ್ | 30–00 |
| 38. | ಪಿ.ಎಂ. ನಾಡಗೌಡ | ಗಂಗಾಧರಯ್ಯ ಹಿರೇಮಠ | 30–00 |
| 39. | ಕೆ. ಪಟ್ಟಾಭಿರಾಮನ್ | ಸಂಜಯ್ ದೊರೆ | 20–00 |
| 40. | ಎಂ.ಎಸ್.ಕೃಷ್ಣನ್ | ಹೆಚ್.ಕೆ. ಬಾಲಸೂರಿ | 20–00 |
| 41. | ಎಂ.ವಿ. ಕೃಷ್ಣಪ್ಪ | ಜೆ.ಜಿ. ನಾಗರಾಜ್ | 15–00 |
| 42. | ಕೆ.ಎಚ್. ರಂಗನಾಥ್ | ಎಲ್.ಎನ್. ಮುಕುಂದರಾಜ್ | 20–00 |
| 43. | ರಾಮಕೃಷ್ಣ ಹೆಗಡೆ | ಶೂದ್ರ ಶ್ರೀನಿವಾಸ್ | 20–00 |
| 44. | ಸಿ. ಬೈರೇಗೌಡ | ಪ್ರಹ್ಲಾದರಾವ್ | 20–00 |
| 45. | ಎಸ್.ಎಂ. ಯಾಹ್ಯಾ | ಬಿ.ಎಂ. ಹನೀಫ್ | 20–00 |
| 46. | ಬಾಪುಗೌಡ ದರ್ಶನಾಪುರ | ಗಂಗಾಧರಯ್ಯ ಹಿರೇಮಠ | 20–00 |
| 47. | ಡಾ॥ ಎಚ್. ನರಸಿಂಹಯ್ಯ | ಪ್ರೊ॥ ಗಂಗಾಧರ ಮೂರ್ತಿ | 20–00 |
| 48. | ಕರ್ನಾಟಕ ಏಕೀಕರಣ ಮತ್ತು ನಾಮಕರಣ | ಡಾ. ಸಿ.ಆರ್. ಗೋವಿಂದರಾಜ್ | 15–00 |
| 49. | ಕರ್ನಾಟಕ ರೈತ ಚಳುವಳಿ–ಸತ್ಯಾಗ್ರಹಗಳು ಸಂಪುಟ–1 | ಡಾ. ಎಂ.ಜಿ. ನಾಗರಾಜ್ | 15–00 |
| 50. | ಕರ್ನಾಟಕ ರೈತ ಚಳುವಳಿ–ಸತ್ಯಾಗ್ರಹಗಳು ಸಂಪುಟ–2 | ಡಾ. ಎಂ.ಜಿ. ನಾಗರಾಜ್ | 25–00 |
| 51. | ಕರ್ನಾಟಕ ರೈತ ಚಳುವಳಿ–ಸತ್ಯಾಗ್ರಹಗಳು ಸಂಪುಟ–3 | ಡಾ. ಎಂ.ಜಿ. ನಾಗರಾಜ್ | 25–00 |
| 52. | ಬಿ.ಎಂ. ಹೊರಕೇರಿ | ಡಾ. ಎಂ.ಎಸ್. ಪಾಟೀಲ | 20–00 |
| 53. | ಕೆ. ಕೆಂಚಪ್ಪ | ಚಂದ್ರಶೇಖರ ತಾಳ್ಯ | 20–00 |

| | | | |
|---|---|---|---|
| 54. | ಕೇಶವರಾವ ನಿಟ್ಟೂರಕರ್ | ಡಾ. ಜಿ.ಬಿ. ವಿಸಾಜಿ | 20–00 |
| 55. | ಸರದಾರ ಶರಣಗೌಡ ಇನಾಂದಾರ | ಡಾ. ಬಿ.ವ್ಹಿ. ಮಲ್ಲಾಪುರ | 20–00 |
| 56. | ಬಸವರಾಜೇಶ್ವರಿ | ಪ್ರಹ್ಲಾದ ಬೆಟಗೇರಿ | 20–00 |
| 57. | ಕೊಲೂರು ಮಲ್ಲಪ್ಪ | ಗಂಗಾಧರಯ್ಯ ಹಿರೇಮಠ, ಡಾ. ದೇ.ಮಾ. ಪಾಟೀಲ | 20–00 |
| 58. | ದೇವೇಂದ್ರಪ್ಪ ಘಾಳಪ್ಪ ಜಮಾದಾರ | ಡಾ. ನಾಗಬಾಯಿ ಬಿ.ಬುಳ್ಳಾ | 20–00 |
| 59. | ಮೊಹಮ್ಮದ್ ಅಲಿ | ಪ್ರೊ|| ಶಿವರಾಜ ಪಾಟೀಲ | 20–00 |
| 60. | ಬಿ. ಶ್ಯಾಮಸುಂದರ್ | ಗಂಧರ್ವ ಸೇನಾ | 20–00 |
| 61. | ಶಂಕರಶೆಟ್ಟಿ ಪಾಟೀಲ | ಡಾ. ಮಲ್ಲಿಕಾರ್ಜುನ ಶಿವಪ್ಪ ಲಠ್ಠೆ | 20–00 |
| 62. | ಸದಾಶಿವ.ಎಸ್.ಶೆಟ್ಟರ್ | ನಾರಾಯಣ ಘಳಗಿ | 20–00 |
| 63. | ಅಂದಾನಪ್ಪ ದೊಡ್ಡಮೇಟಿ | ಪ್ರೊ. ಸಿ.ವಿ. ಕೆರಿಮನಿ | 25–00 |
| 64. | ಎಸ್.ವೈ. ಪಾಟೀಲ | ಡಾ. ಎಂ.ಎಸ್. ಪಾಟೀಲ್ | 20–00 |
| 65. | ವೈ. ರಾಮಚಂದ್ರ | ಪ್ರೊ. ಚಿಕ್ಕಣ್ಣ | 20–00 |
| 66. | ಕೆ.ಪಿ. ರೇವಣ್ಣಸಿದ್ದಪ್ಪ | ಸಿದ್ದಗಂಗಯ್ಯ ಕಂಬಾಳ್ | 20–00 |
| 67. | ವೈ.ಕೆ. ರಾಮಯ್ಯ | ಡಾ. ಹಿ.ಚಿ. ಬೋರಲಿಂಗಯ್ಯ | 20–00 |
| 68. | ಸೋಲೂರು ಸಿದ್ದಪ್ಪ | ಸಿದ್ದಗಂಗಯ್ಯ ಕಂಬಾಳ್ | 20–00 |
| 69. | ಎಂ.ವೈ. ಘೋರ್ಪಡೆ | ಮಹಾಬಲೇಶ್ವರ ಕಾತ್ರಹಳ್ಳಿ | 20–00 |
| 70. | ಎಂ.ಪಿ. ಪಾಟೀಲ್ | ಡಾ. ಗುರುಪಾದ ಮರಿಗುದ್ದಿ | 20–00 |
| 71. | ಎಚ್.ವಿ. ಕೌಜಲಗಿ | ಡಾ. ಡಿ.ಎಸ್. ಜಯಪ್ಪಗೌಡ | 20–00 |
| 72. | ಡಾ|| ಎಂ.ಆರ್. ತಂಗಾ | ಎಸ್. ಸುರೇಶ್ ಕುಮಾರ್ | 25–00 |
| 73. | ಕೆ.ಎನ್. ನಾಗೇಗೌಡ | ಪ್ರೊ. ಹೆಚ್.ಎಸ್. ಮುದ್ದೇಗೌಡ | 20–00 |
| 74. | ಎ.ಆರ್. ಪಂಚಗಾವಿ | ಪ್ರೊ. ಚಂದ್ರಶೇಖರ ಅಕ್ಕಿ | 20–00 |

# ಭಾಷಾಂತರ ಪುಸ್ತಕಗಳು

| ಕ್ರ.ಸಂ. | ಪುಸ್ತಕದ ಹೆಸರು | ಲೇಖಕರ ಹೆಸರು | ದರ |
|---|---|---|---|
| 1. | ಡಾ॥ ಬಿ.ಆರ್. ಅಂಬೇಡ್ಕರ್ | ಭಾಷಾಂತರ ನಿರ್ದೇಶನಾಲಯ | 20–00 |
| 2. | ಡಾ॥ ರಾಂ ಮನೋಹರ ಲೋಹಿಯಾ | ಭಾಷಾಂತರ ನಿರ್ದೇಶನಾಲಯ | 15–00 |
| 3. | ವಿ.ಕೆ. ಕೃಷ್ಣಮೆನನ್ | ರಾಜ್ಯ ಭಾಷಾ ಆಯೋಗದ ಅಧ್ಯಕ್ಷರು | 20–00 |
| 4. | ಡಾ॥ ಶ್ಯಾಂಪ್ರಸಾದ್ ಮುಖರ್ಜಿ | ಭಾಷಾಂತರ ನಿರ್ದೇಶನಾಲಯ | 20–00 |
| 5. | ಶೇಕ್ ಮಹಮದ್ ಅಬ್ದುಲ್ಲಾ | ಭಾಷಾಂತರ ನಿರ್ದೇಶನಾಲಯ | 15–00 |
| 6. | ಡಾ॥ ರಾಜೇಂದ್ರ ಪ್ರಸಾದ್ | ಆರ್.ಕೆ. ಹುಡುಗಿ | 20–00 |
| 7. | ಭೂಪೇಶ್ ಗುಪ್ತ | ಆರ್.ಕೆ. ಹುಡುಗಿ | 20–00 |
| 8. | ಅನಂತಶಯನಂ ಅಯ್ಯಂಗಾರ್ | ಭಾಷಾಂತರ ನಿರ್ದೇಶನಾಲಯ | 15–00 |
| 9. | ರಾಜಕುಮಾರಿ ಅಮೃತ್‌ಕೌರ್ | ಕೆ.ಹೆಚ್. ಸಾವಿತ್ರಿ | 20–00 |
| 10. | ಡಾ॥ ಚಿಂತಾಮನ್ ಡಿ. ದೇಶಮುಖ್ | ಬೇಲೂರು ಸುದರ್ಶನ್ | 20–00 |
| 11. | ಪನಂಪಿಲ್ಲಿ ಗೋವಿಂದ ಮೆನನ್ | ಭಾಷಾಂತರ ನಿರ್ದೇಶನಾಲಯ | 15–00 |
| 12. | ಜೈ ಸುಖಲಾಲ್ ಹಾಥಿ | ಎಸ್. ಸುಮಿತ್ರ | 15–00 |
| 13. | ಎಸ್.ಎಂ. ಜೋಷಿ | ಕೆ.ಹೆಚ್. ಸಾವಿತ್ರಿ | 15–00 |
| 14. | ಡಾ॥ ಲಂಕಾ ಸುಂದರಂ | ಜವರಯ್ಯ | 15–00 |

ಸರ್ಕಾರಿ ಮುದ್ರಣಾಲಯ, ಕೆಂಗೇರಿ, ಬೆಂಗಳೂರು–59.

# ಲೇಖಕರ ಪರಿಚಯ



ವಿಶ್ರಾಂತ ಪ್ರಾಚಾರ್ಯ ಡಾ.ಎಂ.ಜಿ.ನಾಗರಾಜ್ ಅವರದು ಬಹುಮುಖ ಪ್ರತಿಭೆ. ಸಾಹಿತ್ಯ, ಶಾಸನ, ಇತಿಹಾಸ, ಸಂಶೋಧನೆ, ಜಾನಪದ, ವಚನ, ಕವನ, ಕಥಾ ಕ್ಷೇತ್ರಗಳಲ್ಲಿ ಅವರ ಪ್ರತಿಭೆ ಅರಳಿಬಂದಿದೆ. 10.8.1930 ರಂದು ಜನಿಸಿದ ಅವರು ಸ್ನಾತಕೋತ್ತರ ವಿದ್ಯಾರ್ಥಿಗಳಿಗೆ ಬೋಧನೆ ಮಾಡಿದ್ದಾರೆ. ಶಾಲಾ ಕಾಲೇಜು ಅಧ್ಯಾಪಕರಿಗೆ ಮಾರ್ಗದರ್ಶಕರೂ ಆಗಿದ್ದಾರೆ. ಗ್ರಾಮೀಣ ರೈತರ ನಡುವೆಯೂ ಬಾಳಿ ಬಂದಿದ್ದಾರೆ. ಅವರ ಕೃತಿ ಸಾರಸ್ವತವಾಗಿ ಕೊಡಗಿನ ಸುಗ್ಗಿಕಟ್ಟೆಗಳು, ದಲಿತ ಕೆಂಬಟ್ಟಿಗಳ ಸಂಸ್ಕೃತಿ, ಸಾಂಸ್ಕೃತಿಕ ಜಾನಪದ ನೆಲೆಗಳು, ಬಸವಣ್ಣ, ಮಹಾನ್ ನಟ ಮಹಮದ್ ಪೀರ್, ಶಿವಸಂಸ್ಕೃತಿಯ ವಿಕಸನ ನೆಲೆಗಳು, ವಚನ ಧ್ವನಿ, ಸಂಶೋಧನ ತೆನೆಗಳು ಇತ್ಯಾದಿ 40 ಕೃತಿಗಳು ಪ್ರಕಟವಾಗಿವೆ. ವಿವಿಧ ವಿದ್ವತ್ ಪತ್ರಿಕೆಗಳ (ಮಾಸಿಕ, ತ್ರೈಮಾಸಿಕ) ಹಾಗೂ ಸ್ಮರಣ ಸಂಪುಟಗಳ ಸಂಪಾದಕರಾಗಿ ಸೇವೆ ಸಲ್ಲಿಸಿದ್ದಾರೆ. ಮಾಮಿಡಿ, ಕನ್ನಡ ಸಾಹಿತ್ಯ ಪರಿಷತ್ ಪತ್ರಿಕೆ ಇತಿಹಾಸ ದರ್ಶನ, ಇತ್ಯಾದಿ ನಿಯತಕಾಲಿಕೆಗಳ ಸಂಪಾದಕರಾಗಿ ಕಾರ್ಯನಿರ್ವಹಿಸಿದ್ದಾರೆ. ಕನ್ನಡ ಸಾಹಿತ್ಯ ಪರಿಷತ್ತು, ಕರ್ನಾಟಕ ಇತಿಹಾಸ ಅಕಾಡೆಮಿ ಗೌರವ ಕಾರ್ಯದರ್ಶಿಯಾಗಿ ದುಡಿದಿದ್ದಾರೆ. ಕಾಶಿ, ಮಂತ್ರಾಲಯ ಶ್ರೀಮದ್ರಂಭಾಪುರಿ ಹಾಗೂ ಸುತ್ತೂರು ಪೀಠಗಳಿಂದ, ಇತಿಹಾಸ ಅಕಾಡೆಮಿ ಮತ್ತು ಕನ್ನಡ ಸಂಘ ಸಂಸ್ಥೆಗಳಿಂದ ಸಾಹಿತ್ಯ, ಶಾಸನ, ಸಂಶೋಧನ ಪ್ರಶಸ್ತಿ ಪುರಸ್ಕಾರಗಳೊಡನೆ ಸನ್ಮಾನಿತರಾಗಿದ್ದಾರೆ. ತಾಲೂಕು ಮತ್ತು ಕೊಡಗು ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್, ಪುರಾತತ್ವ, ಇತಿಹಾಸ ಅಕಾಡೆಮಿಯ ವಾರ್ಷಿಕ ಸಮ್ಮೇಳನದ ಸರ್ವಾಧ್ಯಕ್ಷರಾಗಿ ಗೌರವ ಭಾಜನರಾಗಿದ್ದಾರೆ. ಸುಮಾರು, 150 ಸಂಶೋಧನ ಲೇಖನಗಳನ್ನು ರೈತಚಳವಳಿ ಲೇಖನಗಳೂ ಸೇರಿದಂತೆ ಪ್ರಕಟಿಸಿದ್ದಾರೆ.

ಎಂ.ಜಿ. ನಾಗರಾಜ್ ಅವರು ಅಭಿಜಾತ ಪರಂಪರೆ, ಆಧುನಿಕ ಪರಂಪರೆಯ ನಡುವೆ ಸಾಮರಸ್ಯ ಬೆಸೆಯುವ ವಿಶಾಲ ಮನೋಭಾವದವರು. ಈ ಸಮ್ಮಿಳನದಲ್ಲಿ ಬೆಳೆದ ಅವರು ರೈತ ಚಳವಳಿಯ ಆಯಾಮಗಳನ್ನು ಪ್ರಾಚೀನ ಹಾಗೂ ಆಧುನಿಕ ಹಿನ್ನೆಲೆಯಲ್ಲಿ ವಿವೇಚಿಸಿದ್ದಾರೆ. ತುತ್ತಿನ ಕಾಳನ್ನು ಬೆಳೆಯುವವರ ಕುರಿತಾದ ಅವರ ಈ ಕೃತಿ ಸಂಪುಟಗಳು ನಮ್ಮ ಸಮಾಜದ ಎಲ್ಲ ವರ್ಗದ ಅರಿವಿಗೆ ಒಂದು ವಿಶಿಷ್ಟ ಕೊಡುಗೆ.

ಪ್ರಸ್ತುತ ಸಂಪುಟಗಳು ನಾಡಿನ ಒಕ್ಕಲು ಮಕ್ಕಳ ಹೋರಾಟ ಮತ್ತು ಅಸ್ತಿತ್ವದ ಆಯಾಮಗಳನ್ನು ಕುರಿತ ಚಾರಿತ್ರಿಕ ಶಾಸ್ತ್ರೀಯ ಗ್ರಂಥಸಂಪುಟಗಳಾಗಿವೆ. ಹೋರಾಟದ ಅಂತಸ್ಸತ್ವ, ಕೃಷಿ ಕಾಯಕದ ಹೂರಣದಲ್ಲಿದೆ. ಒಕ್ಕಲುತನದ ಮೊದಲ ಮಾತೃಕೆ ಮಹಿಳೆಯೆ. ಸಿಂಧೂ ಸಂಸ್ಕೃತಿಯಲ್ಲಿಯೂ ಪಲ್ಲವಿಸಿದ್ದು ಅರಳಿದ್ದು ರೈತರ ಕೃಷಿ. ಒಕ್ಕಲುತನಕ್ಕೇ ಆಕ್ರಮಣ ನಡೆದಾಗ ಚಳವಳಿ ಹಾಗೂ ಸತ್ಯಾಗ್ರಹಗಳ ಅಂದಿನ ಸ್ವರೂಪದ ಕುರಿತು ವಿವರಣಾತ್ಮಕ, ವಿಶ್ಲೇಷಣಾತ್ಮಕ  ದಾಖಲೆಯಾಗಿ ಈ ಸಂಪುಟಗಳು ಮೂಡಿ ಬಂದಿವೆ. ಅದು ಶ್ರೀಹರ್ಷನ ಕಾಲದ್ದೂ ಸೇರಿ ದಾಖಲಾಗಿದೆ. ಕರ್ನಾಟಕದ ಸಂದರ್ಭದಲ್ಲಿ ಹೇಳುವುದಾದರೆ ಕನ್ನಡದ ಮೊದಲ ಶಾಸನ ಹಲ್ಮಿಡಿ ಶಾಸನ (ಕ್ರಿ.ಶ.435) ಮತ್ತು ಕ್ರಿ.ಶ. 690ರ ಬಾದಾಮಿ ಚಾಲುಕ್ಯರ ಕಾಲದ ಶಿಕಾರಿಪುರ ಶಾಸನಗಳಲ್ಲಿ ಬೇಸಾಯದ ಅಂಶಗಳನ್ನು ಹಾಳು ಮಾಡಿದರೆ ಪಾಪ ಬಂದೀತು ಎಂದಿರುವ ನೈತಿಕ ಎಚ್ಚರಿಕೆಯಲ್ಲಿಯೆ ಪ್ರತಿಭಟನೆಯ ಸಂಕೇತವನ್ನು ಈ ಸಂಪುಟಗಳು ಗ್ರಹಿಸಿವೆ. 12ನೆಯ ಶತಮಾನದ ಶಿವಶರಣ ಒಕ್ಕಲಿಗ ಮುದ್ದಯ್ಯ ನಡೆಸುವ ಕರನಿರಾಕರಣ ಸತ್ಯಾಗ್ರಹ, 8ನೆಯ ಶತಮಾನದ ಮಾವಳಿ ವೀರಗಲ್ ಶಾಸನದಲ್ಲಿ ನೇಗಿಲು ಮತ್ತು ಮಾಪನ ಶಿಲ್ಪ ಸಂಕೇತವಿದ್ದು, ಅಧಿಕಾರಿಯ ದುಂಡಾವೃತ್ತಿ ವಿರುದ್ಧ ಗ್ರಾಮೀಣ ಒಕ್ಕಲು ಮಕ್ಕಳ ಪ್ರತಿಭಟನೆ, ಇವೆಲ್ಲಾ ಗಮನಿಸಬೇಕಾದ ಪ್ರಾಚೀನ ರೈತ ಚಳುವಳಿ ಸತ್ಯಾಗ್ರಹಗಳ ಮಾದರಿಗಳಾಗಿವೆ.

ಮೊಗಲರ ಕಾಲದಲ್ಲಿ ನಡೆದ ಮೌನ ರೈತ ಹೋರಾಟಕ್ಕೆ ನೈತಿಕ ಜಯ ಒದಗಿ ತಕಾವಿ ಸಾಲವು ಮೊಟ್ಟಮೊದಲು ಒದಗಿದ ಬಗ್ಗೆ ಮಾಹಿತಿ ತುಂಬ ಗಮನಾರ್ಹವಾಗಿದೆ. ಹೀಗೆಯೇ ಸತ್ನಾಮಿಸ್ ಮತ್ತು ಸಿಖ್ ರೈತ ಬಂಡಾಯ, ಜಾಟ್ ಹೋರಾಟ, ಸಂತಾಲರ, ಫಕೀರರ ದಂಗೆ ಮಾಪಿಳ್ಳೆ ದಂಗೆ ತೆಲಂಗಾಣ ರೈತ ಹೋರಾಟ, ಟೆನೆನ್ಸಿ ಚಳುವಳಿ, ದೋಂಢಿಯಾವಾಘ ಚಳವಳಿ, ಕಿತ್ತೂರು ದೇಶಗತಿ ಹೋರಾಟ, 17ನೇ ಶತಮಾನದ ಜಂಗಮ ಕೃಷಿ ಚಳುವಳಿ, ನಕ್ಸಲ್‌ಬಾರಿ ಚಳುವಳಿ, ಇವೆಲ್ಲಾ ಈ ದೇಶದ ಒಕ್ಕಲು ಮಕ್ಕಳ ಚಳುವಳಿಗಳಾಗಿವೆ. ವಿಶೇಷತಃ ಕಾವೇರಿ ಮತ್ತು ಐತೀರ್ಪು ಸಂಬಂಧದ ಚಳುವಳಿಗಳ ಕುರಿತಾದ ವಿಪುಲ ಮಾಹಿತಿ ಮತ್ತು ವಿಶ್ಲೇಷಣೆ ಬಹಳ ಸಮರ್ಥವಾಗಿ ಮೂಲಚೂಲವಾಗಿ ಇಲ್ಲಿ ಅನಾವರಣಗೊಂಡಿವೆ. ಈ ರೈತ ಚಳವಳಿಯ ಸಂಪುಟಗಳಲ್ಲಿ ಇವೆಲ್ಲ ದಾಖಲಾಗುತ್ತ ಪುಸ್ತಕದ ವೈಶಿಷ್ಟ್ಯವನ್ನು ಹೆಚ್ಚಿಸಿ ಆಸಕ್ತಿಯನ್ನೂ ಅರಳಿಸುತ್ತವೆ.

ನಮ್ಮ ಒಕ್ಕಲು ಮಕ್ಕಳ ಚಳವಳಿಯನ್ನು ಕುರಿತು ನಾಡಿನ ಹೆಸರಾಂತ ವಿದ್ವಾಂಸ ಇತಿಹಾಸತಜ್ಞ, ಸಂಶೋಧಕ, ಸಾಹಿತಿ ಡಾ. ಎಂ.ಜಿ. ನಾಗರಾಜ್ ಅತ್ಯಂತ ಶ್ರದ್ಧೆ ನಿಷ್ಠೆ ಮತ್ತು ಪರಿಶ್ರಮದಿಂದ ವಿವಿಧ ಆಕರಗಳನ್ನು ಬಳಸಿ ಸಂಶೋಧನ ಸಂಪುಟಗಳೂ ಆಗುವಂತೆ ರಚಿಸಿದ್ದಾರೆ. ರೈತರ ಬಗ್ಗೆ ತಿಳಿಯಲು ಈ ಸಂಪುಟಗಳು ಬಹು ಆಕರ ಗ್ರಂಥಗಳಾಗಿವೆ. ಅಲ್ಲದೆ ನಮ್ಮ ರಾಜ್ಯದಲ್ಲಿ ಪ್ರಜಾ ತಾಂತ್ರಿಕ ವ್ಯವಸ್ಥೆ ರೂಪುಗೊಂಡಾಗಿನಿಂದ ಬಹುತೇಕ ರೈತ ಕುಟುಂಬಗಳಿಂದಲೇ ಬೆಳೆದುಬಂದ ಶಾಸನ ಸಭೆಯ ಸದಸ್ಯರ ಗಹನ ಚಿಂತನೆಗಳು ಇಲ್ಲಿವೆ; ಹಾಗೂ ಶಾಸಕರ ರೈತರ ಪರ ಕಳಕಳಿ, ಕಾಳಜಿಗಳು ಈ ಸಂಪುಟಗಳಲ್ಲಿ ಒಟ್ಟುಗೂಡಿವೆ. ಸಹಸ್ರಮಾನದ ಸೂಕ್ತ ಸಂಪುಟಗಳಾಗಿ ಮೂಡಿಬಂದಿವೆ.

